ಬಾಹುಬಲಿಪಂಡಿತ ವಿರಚಿತ

# ಧರ್ಮನಾಥ ಪುರಾಣಂ

ಸಂಪಾದಕ

ಎನ್. ಬಸವಾರಾಧ್ಯ



ಕನ್ನಡ ಅಧ್ಯಯನ ಸಂಸ್ಥೆ
ಮೈಸೂರು ವಿಶ್ವವಿದ್ಯಾನಿಲಯ
1975

ಕನ್ನಡ ಅಧ್ಯಯನ ಸಂಸ್ಥೆ ಪ್ರಕಟಣೆ–೨೪೮
ಪ್ರಾಚ್ಯಕಾವ್ಯ ಮಾಲೆ–೩೯

ಪ್ರಧಾನ ಸಂಪಾದಕ

**ಡಾ. ಹಾ. ಮಾ. ನಾಯಕ**

ವಿಭಾಗ ಸಂಪಾದಕ

**ಎನ್. ಬಸವಾರಾಧ್ಯ**

ಬಾಹುಬಲಿಪಂಡಿತ ವಿರಚಿತ

# ಧರ್ಮನಾಥ ಪುರಾಣಂ

ಬಾಹುಬಲಿಪಂಡಿತ ವಿರಚಿತ

# ಧರ್ಮನಾಥ ಪುರಾಣಂ

ಸಂಪಾದಕ

ಎನ್. ಬಸವಾರಾಧ್ಯ



ಕನ್ನಡ ಅಧ್ಯಯನ ಸಂಸ್ಥೆ
ಮೈಸೂರು ವಿಶ್ವವಿದ್ಯಾನಿಲಯ
1975

# ಮುನ್ನುಡಿ

ಕನ್ನಡ ಅಧ್ಯಯನಕ್ಕೆ ಸಂಬಂಧಪಟ್ಟ ಚಟುವಟಿಕೆಗಳೆಲ್ಲವನ್ನೂ ಕೇಂದ್ರೀಕರಿಸುವ ದೃಷ್ಟಿಯಿಂದ ೧೯೬೬ರ ಕೊನೆಯಲ್ಲಿ ಪ್ರಾಚ್ಯ ಸಂಶೋಧನಾಲಯದ ಕನ್ನಡ ವಿಭಾಗವನ್ನು ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ವಿಲೀನಗೊಳಿಸಲಾಯಿತು. ಅಂದಿನಿಂದ ಈ ವಿಭಾಗವನ್ನು ಅಧ್ಯಯನ ಸಂಸ್ಥೆಯ 'ಸಂಪಾದನ ವಿಭಾಗ'ವೆಂದು ಹೆಸರಿಸಲಾಯಿತು. ಕ್ರಿ.ಶ. ೧೩೪೨ರಲ್ಲಿ ಪ್ರತಿಮಾಡಲಾಗಿರುವ ಹಾಗೂ ಅತ್ಯಂತ ಪ್ರಾಚೀನ ಉಪಲಬ್ಧ ಹಸ್ತಪ್ರತಿಯಾಗಿರುವ ರನ್ನನ 'ಗದಾಯುದ್ಧ'ದ ಹಸ್ತಪ್ರತಿಯಿಂದ ಹಿಡಿದು ೧೮೫೦ರಲ್ಲಿ ಪ್ರತಿಮಾಡಲಾಗಿರುವ 'ಪ್ರಭಾವತಿ ಪರಿಣಯ'ದ ಹಸ್ತಪ್ರತಿಯವರೆಗೆ ಇಂದು ೫೦೦೦ಕ್ಕೂ ಹೆಚ್ಚು ಹಸ್ತಪ್ರತಿಗಳನ್ನು ಹೊಂದಿರುವ 'ಸಂಪಾದನ ವಿಭಾಗ' ಅಧ್ಯಯನ ಸಂಸ್ಥೆಯ ಒಂದು ಪ್ರಧಾನ ಅಂಗವಾಗಿದೆ. ಕನ್ನಡ ಭಾಷಾ ಸಾಹಿತ್ಯಗಳಿಗೆ ಸಂಬಂಧಿಸಿದ ಅಧ್ಯಯನವನ್ನು ಕೈಗೊಳ್ಳುವವರಿಗೆ ಸಂಶೋಧಕರಿಗೆ ಸ್ನಾತಕ ಮತ್ತು ಸ್ನಾತಕೋತ್ತರ ಕನ್ನಡ ವಿದ್ಯಾರ್ಥಿಗಳಿಗೆ ಇದು ಆಕರ ಗ್ರಂಥಗಳ ತವರಾಗಿದೆ ಪ್ರೇರಣೆಯ ಸ್ರೋತವಾಗಿದೆ.

ಮುದ್ರಣ ಸೌಲಭ್ಯ ಈಗ್ಗೆ ಕೆಲವು ಶತಮಾನಗಳಿಂದೀಚೆಗೆ, ಮಾನವ ಜನಾಂಗಕ್ಕೆ ದೊರೆತಿರುವ ವರ. ಈ ಸೌಲಭ್ಯವಿಲ್ಲದಿದ್ದ ಕಾಲದಲ್ಲಿ ಓಲೆಗರಿ ಅಥವಾ ತಾಡಪತ್ರದ ಮೇಲೆ ಕಂಠದಿಂದ ಕೊರೆದು, ಅನನ್ಯಶ್ರದ್ಧೆಯಿಂದ ಆ ಸಾಹಿತ್ಯವನ್ನು ಅಭ್ಯಸಿಸಿ, ಅದನ್ನು ಕಾಯ್ದುಕೊಂಡು ಬಂದ ಹಿರಿಯರಿಂದ ಅಂದಿನ ಅಪೂರ್ವ ಸಾಹಿತ್ಯ ನಮ್ಮ ಸಂಪತ್ತಾಗಿ ಉಳಿದಿದೆ. ತಮಗೆ ಪ್ರಿಯವೆನಿಸಿದ ಸಾಹಿತ್ಯ ಕೃತಿಗಳನ್ನು ಪ್ರತಿಮಾಡಿಸಿ ಇಟ್ಟುಕೊಳ್ಳುತ್ತಿದ್ದುದು ಆ ಕಾಲದ ಒಂದು ಬಗೆಯ ಹವ್ಯಾಸವೇ ಆಗಿತ್ತು. ಈ ಕಾರಣದಿಂದಾಗಿಯೇ ಓಲೆಗರಿಯ ಒಂದು ಸಂಪುಟದಲ್ಲಿಯೇ ಅನೇಕ ಗ್ರಂಥಗಳನ್ನು, ಗ್ರಂಥಭಾಗಗಳನ್ನು ಪ್ರತಿಲಿಪೀಕರಿಸಿರುವುದನ್ನು ಕಾಣುತ್ತೇವೆ. ಹಸ್ತಪ್ರತಿಗಳ ಅನೇಕ ಪ್ರತಿಗಳನ್ನು ಸಿದ್ಧಪಡಿಸಿ ಹಂಚುವುದನ್ನು ಪುಣ್ಯಕಾರ್ಯವೆಂದು ಬಗೆದು, ಆ ರೀತಿ ಮಾಡುತ್ತಿದ್ದುದಕ್ಕೂ ಉದಾಹರಣೆಗಳಿವೆ. ಪ್ರತಿಲಿಪೀಕರಣ ಹಲವರಿಗೆ ಜೀವನೋಪಾಯದ ಸಾಧನವಾಗಿಯೂ ಇತ್ತು. ಹಸ್ತಪ್ರತಿಗಳನ್ನು ಸುಂದರ, ಸಂದರ್ಭೋಚಿತ ಚಿತ್ರಗಳಿಂದ ಅಲಂಕರಿಸುವ ವಾಡಿಕೆಯೂ ಇತ್ತು. ಇವು ನಮ್ಮ ಜನಗಳ ಸಾಹಿತ್ಯ-ಶಾಸ್ತ್ರ-ಕಲಾಭಿರುಚಿಯ ಪ್ರತೀಕವಾಗಿವೆ.

ಸಂಸ್ಕೃತಿ, ಇತಿಹಾಸ, ಭಾಷಾಚರಿತ್ರೆ–ಇವುಗಳ ಸಮಗ್ರ ಅರಿವಿಗೆ ಶಾಸ್ತ್ರೀಯವಾಗಿ ಸಂಪಾದಿಸಿದ ಸಾಹಿತ್ಯ ಅತ್ಯಾವಶ್ಯಕ. ಅಷ್ಟೇ ಅಲ್ಲ, ಕೋಶ ಅಥವಾ ನಿಘಂಟುಗಳ ರಚನೆಗೆ, ಅವುಗಳ ಮೂಲಘಟಕಗಳಾದ ಶಬ್ದಗಳ ಅರ್ಥನಿರ್ಧಾರಕ್ಕೆ ಶಾಸ್ತ್ರೀಯವಾಗಿ ಸಂಪಾದಿಸಿದ ಸಾಹಿತ್ಯ ಕೃತಿಗಳು ಅನಿವಾರ್ಯವಾಗುತ್ತವೆ. ಸಾಂಸ್ಕೃತಿಕ ಮತ್ತು

ಐತಿಹಾಸಿಕ ಪುನರ್ರಚನೆಗೆ ಅಗತ್ಯವಾಗಿ ಬೇಕಾಗಿರುವ ಅನೇಕ ಗ್ರಂಥಗಳು ಇಂದಿಗೂ ಅನುಪಲಬ್ಧವಾಗಿವೆ. ಶಾಸನಗಳಲ್ಲಿ ಅನ್ಯಕವಿಗಳ ಕೃತಿಗಳಲ್ಲಿ ಉಕ್ತವಾಗಿರುವುದರಿಂದ ಮಾತ್ರ ಹಲವು ಕವಿಗಳ ಮತ್ತು ಗ್ರಂಥಗಳ ಹೆಸರುಗಳು ತಿಳಿದುಬರುತ್ತವೆ. 'ಕಾವ್ಯ ಪ್ರಯೋಗ ಪರಿಣತಮತಿ'ಗಳಾಗಿದ್ದ ಕನ್ನಡ ಜನತೆಯ ಬಳಿ ಒಂದು ಕಾಲದಲ್ಲಿ ಇವೆಲ್ಲ ಲಭ್ಯವಾಗಿದ್ದಿರಬೇಕು. ನಾಡಿನ ಹಲವೆಡೆಗಳಲ್ಲಿ ಓಲೆಗರಿಯ ಸಾಹಿತ್ಯ ಅನೇಕ ಶತ ಮಾನಗಳ ವರೆಗೆ ತನ್ನ ವೈಭವವನ್ನು ಮೆರೆದಿತ್ತು. ಕಾವ್ಯಪಾರಾಯಣ ಸಾಂಸ್ಕೃತಿಕ ಜೀವನದ ಅಂಗವಾಗಿ ಪರಿಣಮಿಸಿತ್ತು. ಕಾಲಕ್ರಮದಲ್ಲಿ ದೇಶ ಕಾಲ ಪರಿಸರಗಳ ಪ್ರಭಾವ ದಿಂದ, ಜನತೆಯ ಅಜ್ಞಾನ, ಅಶ್ರದ್ಧೆ ಮತ್ತು ಔದಾಸೀನ್ಯಗಳ ಫಲವಾಗಿ ಅವು ಮೂಲೆ ಗುಂಪಾಗುತ್ತ ಬಂದು ಕೀಟಗಳಿಗೆ ಆಹಾರವಾಗತೊಡಗಿದವು. ಅವುಗಳನ್ನು ಸಂರಕ್ಷಿಸ ಲಾರದೆ ನದಿಯ ಪಾಲೋ, ಬೆಂಕಿಯ ಪಾಲೋ ಮಾಡುತ್ತಿದ್ದ ಉದಾಹರಣೆಗಳೂ ಅಸಂಖ್ಯವಾಗಿವೆ. ಮತ್ತೆ ಕೆಲವೆಡೆಗಳಲ್ಲಿ ನವರಾತ್ರಿಯಂದು ಬೆಳಕುಕಂಡು ಪೂಜಾರ್ಹ ವಾಗಿ, ಹಾಲುಂಡು ಮತ್ತೆ ಕತ್ತಲ ಕೋಣೆಯ ಮೂಲೆ ಸೇರಬೇಕಾದ ದುಃಸ್ಥಿತಿ ಒದಗಿ ಹಲವಾರು ಅಮೂಲ್ಯ ಪ್ರತಿಗಳು ತ್ರುಟಿತವಾಗಿ ಹೋಗಿವೆ. ಇಂಥ ಮೌಢ್ಯವನ್ನು ದೂರ ಮಾಡಿ, ಹಸ್ತಪ್ರತಿಗಳನ್ನು ಹೊರಗೆಳೆದು, ಅವುಗಳನ್ನು ಕೊಂಡು ಇಲ್ಲವೆ ಎರವಲಾಗಿ ಪಡೆದು ಪರಿಷ್ಕರಿಸಿ, ಸಂಪಾದಿಸುವ ಹೊಣೆಯನ್ನು ಈ ಸಂಸ್ಥೆಯ ಸಂಪಾದನ ವಿಭಾಗ ಹೊತ್ತಿದೆ.

ಅನುಪಲಬ್ಧವಾಗಿರುವ ಸಾಹಿತ್ಯರಾಶಿಯನ್ನು ಹೊರತರಲು, ಉಪಲಬ್ಧ ಸಾಹಿತ್ಯಕ್ಕೆ ಪರಿಹಾರನೀಡಲು ಹಸ್ತಪ್ರತಿಗಳ ಸಂಗ್ರಹಕಾರ್ಯ ಸತತವಾಗಿ ನಡೆಯಬೇಕಾಗಿದೆ. ಸಾಹಿತ್ಯಿಕ ಚಟುವಟಿಕೆಯ ಕೇಂದ್ರಗಳಾಗಿದ್ದ ಎಡೆಗಳಲ್ಲಿ, ಕವಿಗಳ ಕೀರ್ತಿ ಹರಡಿದ್ದ ಪ್ರದೇಶಗಳಲ್ಲಿ ಜ್ಞಾನಗಂಗೆಯನ್ನು ಮನೆಮನೆಯ ಬಾಗಿಲಿಗೆ ಕೊಂಡೊಯ್ದ ಶಿವಶರಣರು ಮತ್ತು ದಾಸರುಗಳು ಸಂಚರಿಸುತ್ತಿದ್ದ ಸ್ಥಳಗಳಲ್ಲಿ ಅವರ ನೆನಪಿಗಾಗಿ ಮಠಗಳು, ಸ್ಮಾರಕ ಗಳು ನಿರ್ಮಿತವಾಗಿರುವ ಕಡೆಗಳಲ್ಲಿ, ಅನುಯಾಯಿಗಳ ಮತ್ತು ಭಕ್ತರ ಮನೆಗಳಲ್ಲಿ, ಸಾಹಿತ್ಯೋಪಾಸಕರ ಬಳಿಯಲ್ಲಿ ಹೇಗೋ ಎಂತೋ ಸಂಗ್ರಹಿತವಾಗಿರುವ ಹಸ್ತಪ್ರತಿಗಳನ್ನು ಸಂಗ್ರಹಿಸಿ ರಕ್ಷಿಸಬೇಕಾಗಿದೆ. ಈ ಸಂಸ್ಥೆಯ ಹಸ್ತಪ್ರತಿಯ ಭಂಡಾರವನ್ನು ಈ ದೃಷ್ಟಿ ಯಿಂದ ಬೆಳಸಿಕೊಂಡು ಬರುವತ್ತ ಆದ್ಯಗಮನ ಕೊಡಲಾಗಿದೆ.

ಸಂಗ್ರಹಿಸಿದ ಪ್ರತಿಗಳನ್ನು ಎಚ್ಚರಿಕೆಯಿಂದ ಕಾಪಾಡಿಕೊಂಡು ಬರುವುದೂ ಅತ್ಯಂತ ಮುಖ್ಯವಾದ ಹೊಣೆ. ಕೀಟಗಳ ಹಾವಳಿಗೆ ಸಿಕ್ಕಿ ಪ್ರತಿಗಳು ಶಿಥಿಲವಾಗದಂತೆ ನೋಡಿ ಕೊಳ್ಳುವ ದೃಷ್ಟಿಯಿಂದ ಸಾಧ್ಯವಾದಷ್ಟು ಸಲ ಅವುಗಳನ್ನು ಸ್ವಚ್ಛಗೊಳಿಸುವುದು, ಕೀಟ ನಿರೋಧಕ ತೈಲ ಲೇಪನಮಾಡುವುದು, ವಾಯುನಿಯಂತ್ರಿತ ಕೋಠಡಿಯಲ್ಲಿಟ್ಟು ಪ್ರಧೂ ಮನ ಉಪಚಾರ ನೀಡುವುದು (Fumigation treatment) ತೀರ ತ್ರುಟಿತ ವಾದ ಹಸ್ತಪ್ರತಿಗಳನ್ನು ಮೈಕ್ರೊಫಿಲಂಗಳಲ್ಲಿ ಶಾಶ್ವತಗೊಳಿಸುವುದು ಅಗತ್ಯವಾಗುತ್ತದೆ. ಈ ರೀತಿ ಹಸ್ತಪ್ರತಿಗಳನ್ನು ಕಾಪಾಡಿಕೊಂಡು ಬರುವುದು ವ್ಯಕ್ತಿಗಳಿಗೆ ಶ್ರಮಸಾಧ್ಯ ಹಾಗೂ

ಆರ್ಥಿಕವಾಗಿ ಸುಲಭಸಾಧ್ಯವಲ್ಲದ ಕಾರ್ಯ. ಕನ್ನಡ ಅಧ್ಯಯನ ಸಂಸ್ಥೆ ಹಸ್ತಪ್ರತಿಗಳ ಸಂರಕ್ಷಣೆಗೆ ಅಗತ್ಯವಾದ ಮೇಲ್ಕಂಡ ಎಲ್ಲಾ ಕ್ರಮಗಳನ್ನೂ ಕೈಗೊಂಡಿದೆ.

ಗ್ರಂಥಸಂಪಾದನೆ ಶ್ರಮಸಾಧ್ಯವಾದ ಕಾರ್ಯ. ವಿದ್ವತ್ತು, ವ್ಯುತ್ಪತ್ತಿ, ಪ್ರತಿಭೆ ಮೇಳವಿಸಿರುವ ಸಮರ್ಥರು ಕೈಗೊಳ್ಳಬೇಕಾದ ಕಾರ್ಯ. ಈ ಕಾರ್ಯದಲ್ಲಿ ಹಲವಾರು ಭಾಷೆಗಳ, ಶಾಸ್ತ್ರಗಳ ಪರಿಚಯವೂ ಅಗತ್ಯವಾಗುತ್ತದೆ. ಹಸ್ತಪ್ರತಿಗಳೂ ಕಾಲ ದೇಶ ಮತ್ತು ಪರಿಸರಗಳ ಪ್ರಭಾವಕ್ಕೆ ಒಳಗಾಗಿರುತ್ತವೆ. ಸಾಹಿತ್ಯಾಭ್ಯಾಸಿಗಳು ಹಸ್ತಪ್ರತಿಗಳ ಮೇಲೆ ಟಿಪ್ಪಣಿಗಳನ್ನು, ತಮ್ಮ ಅನಿಸಿಕೆಗಳನ್ನು ಬರೆದುಬಿಡುತ್ತಿದ್ದುದೂ ಉಂಟು. ಕಾಲ ಕ್ರಮದಲ್ಲಿ ಅವು ಮೂಲದ ಅಂಗವೋ ಎಂಬಂತೆ ಸೇರಿಬಿಡುತ್ತಿದ್ದುದೂ ಸಹಜವೆ. ಪ್ರತಿಭಾವಂತರೂ, ವ್ಯುತ್ಪನ್ನಮತಿಗಳೂ, ಕಾವ್ಯರಚನಾ ಸಮರ್ಥರೂ, ಮೂಲವನ್ನು ಕೆಲವುವೇಳೆ ಉತ್ತಮಪಡಿಸಿ, ಕೆಲವುವೇಳೆ ಕೆಡಿಸಿ, ಅರ್ಥಸೌಲಭ್ಯಕ್ಕಾಗಿ ಅರ್ಥವಾಗುವಂತಹ ಪಾಠಾಂತರಗಳನ್ನು ಕಲ್ಪಿಸಿ, ಅಲ್ಲಲ್ಲಿ ಮೂಲಧಾಟಿಗೆ ಭಂಗಬರದಂತೆ ತಮ್ಮ ಸ್ವಂತ ರಚನೆಗಳನ್ನು ಪ್ರಕ್ಷೇಪಿಸಿಬಿಟ್ಟಿರುವುದೂ ಉಂಟು. ಇಂತಹ ಪ್ರಕ್ಷೇಪಗಳು ಕೆಲವೊಮ್ಮೆ ಸನ್ನಿವೇಶದ ಪ್ರಭಾವವನ್ನು ಹೆಚ್ಚಿಸಿರುವುದೂ ಉಂಟು; (ಒಂದು ವೇಳೆ ವಾಸ್ತವವಾಗಿ, ಹಾಗಾಗದಿದ್ದರೂ ಪ್ರಕ್ಷೇಪಕನು ಹಾಗೆ ಭಾವಿಸಿಕೊಂಡದ್ದೂ ತನ್ನ ಚಪಲವನ್ನು ತೀರಿಸಿಕೊಂಡದ್ದೂ ಸತ್ಯ) ಒಟ್ಟಿನಲ್ಲಿ ಅನಾವಶ್ಯಕ ವಿಸ್ತರಣಕ್ಕೆ ಕಾರಣವಾಗಿ ಕೃತಿಯ ಗಾತ್ರದ ಹೆಚ್ಚಳಕ್ಕೆ ಮಾತ್ರ ನೆರವಾಗಿರುವುದೂ ಉಂಟು. ಲಿಪಿಕಾರರೂ ಅನೇಕ ವೇಳೆ ತಮಗೆ ಸರಿದೋರಿದಂತೆ ಅಥವಾ ಸೂಕ್ತಕಂಡಂತೆ ಶಬ್ದರೂಪಗಳನ್ನು ಬದಲಾಯಿಸಿ ಅಥವಾ ಬೇರೆ ಶಬ್ದವನ್ನು ತಂದು ಗಿಡಿದು, ತಿಳಿದೋ ತಿಳಿಯದೆಯೋ ಮೂಲಕ್ಕೆ ತಿದ್ದುಪಡಿಗಳನ್ನು ತಂದುಬಿಡುತ್ತಿದ್ದುದುಂಟು. ಇಂತಹ ಅನೇಕ ಕಾರಣಗಳಿಂದಾಗಿ ಒಂದೇ ಕೃತಿಯ ಹಲವು ಪ್ರತಿಗಳಲ್ಲಿ ಪಾಠವ್ಯತ್ಯಾಸಗಳು ಕಂಡುಬರುತ್ತವೆ. ಒಂದೊಂದೇ ಪ್ರತಿಗಳು ದೊರಕಿದ್ದು ಅದೂ ತ್ರುಟಿತವಾಗಿರುವಂತಹ ಸಂದರ್ಭಗಳಲ್ಲಿ ಮೂಲಪ್ರತಿಯ ಪಾಠವನ್ನು ಪುನರ್ರಚಿಸಬೇಕಾಗುತ್ತದೆ. ಇದು ನಿಜಕ್ಕೂ ಪ್ರತಿಭೆಯ ಕೆಲಸವಾಗುತ್ತವೆ. ಇಂತಹ ಸಂದರ್ಭಗಳಲ್ಲಿ ಸಂಪಾದಕನ ಪರೀಕ್ಷೆಯೇ ನಡೆದು ಹೋಗುತ್ತದೆ. ವಿದ್ವತ್ತಿನ ಹಿನ್ನೆಲೆಯಲ್ಲಿ ತಾಳ್ಮೆ, ಶ್ರಮಸಹಿಷ್ಣುತೆ ಇಲ್ಲವಾದರೆ ಈ ಕ್ಷೇತ್ರದಲ್ಲಿ ಯಶಸ್ಸು ಪಡೆಯುವುದು ಸಾಧ್ಯವಾಗುವುದಿಲ್ಲ. ಗ್ರಂಥಸಂಪಾದನೆ ಇಂದು ವಿಶಿಷ್ಟ ಶಾಸ್ತ್ರವಾಗಿಯೇ ಬೆಳೆದಿದೆ.

‘ಸಂಪಾದನ ವಿಭಾಗ’ ಹಲವಾರು ಸಾಹಿತ್ಯ ಮತ್ತು ಶಾಸ್ತ್ರಗ್ರಂಥಗಳನ್ನು ವೈಜ್ಞಾನಿಕವಾಗಿ ಸಂಪಾದಿಸಿ, ಪಾಠಗಳನ್ನು ನಿರ್ಧರಿಸಿ, ಪಾಠಾಂತರಗಳನ್ನು ಒದಗಿಸಿ, ವಿಸ್ತಾರವಾದ ಪೀಠಿಕೆಗಳನ್ನು ಬರೆದು, ಕವಿಯ ಕಾಲ, ದೇಶ, ಕೃತಿಗಳ ವಿಚಾರವನ್ನು ಚರ್ಚಿಸಿ, ಅವುಗಳ ಸಾಹಿತ್ಯಿಕ ಮೌಲ್ಯವನ್ನು ಪರಿಶೀಲಿಸಿ, ಅಗತ್ಯವಾದಲ್ಲಿ ಟಿಪ್ಪಣಿ ವ್ಯಾಖ್ಯಾನಗಳನ್ನು ನೀಡಿ ಕೆಲವು ಸಂದರ್ಭಗಳಲ್ಲಿ ಗದ್ಯಾನುವಾದಗಳನ್ನು ಕೊಟ್ಟು ಅರ್ಥ ಕೋಶವನ್ನು ಒದಗಿಸಿ ಬೆಳಕಿಗೆ ತರುತ್ತಿದೆ. ಪ್ರಾಚ್ಯವಿದ್ಯಾ ಸಂಶೋಧನಾಲಯದ ಅಂಗ

ವಾಗಿದ್ದಾಗ ಹೊರತಂದಿರುವ ೪೦ ಗ್ರಂಥಗಳ ಜೊತೆಗೆ ಅಧ್ಯಯನ ಸಂಸ್ಥೆಯಲ್ಲಿ ಸೇರ್ಪಡೆಯಾದ ಮೇಲೆ 'ಪ್ರಾಚ್ಯಕಾವ್ಯ ಮಾಲೆ'ಯ ಹೆಸರಿನಲ್ಲಿ ಈಗಾಗಲೇ ೩೮ ಗ್ರಂಥಗಳನ್ನು ಹೊರತರಲಾಗಿದೆ. ಬೆಳಕು ಕಾಣಲು ಹಾತೊರೆಯುತ್ತಿರುವ ಗ್ರಂಥಗಳನ್ನು ವ್ಯವಸ್ಥಿತ ರೀತಿಯಲ್ಲಿ ಹೊರತರಲು ಸಂಸ್ಥೆ ಸತತವಾಗಿ ಶ್ರಮಿಸುತ್ತಿದೆ. ಇದುವರೆಗೆ ಸಂಪಾದನ ವಿಭಾಗದ ಸಂಶೋಧನ ಸಹಾಯಕರು ಸಿದ್ಧಪಡಿಸಿದ ಕೃತಿಗಳನ್ನು ಮಾತ್ರ ಪ್ರಕಟಿಸಲಾಗುತ್ತಿತ್ತು. ಈಗ ಈ ವಿಭಾಗದಲ್ಲಿ ಸಂಗ್ರಹಿತವಾಗಿರುವ ಹಸ್ತಪ್ರತಿಗಳನ್ನು ಉಪಯೋಗಿಸಿಕೊಂಡು ಹೊರಗಿನವರೂ ಸಂಪಾದಿಸಬಹುದಾದ ಗ್ರಂಥಗಳನ್ನೂ ಪ್ರಕಟಿಸಲು ಯೋಜಿಸಲಾಗಿದೆ. ಇದರಿಂದ ಪ್ರಕಟನೆಯ ಕೆಲಸ ತ್ವರಿತಗೊಳ್ಳುತ್ತದೆ. ಹಸ್ತಪ್ರತಿಗಳಲ್ಲೇ ಉಳಿದು ಸಾಮಾನ್ಯರ ಕೈಗೆಟುಕದ ಗ್ರಂಥಗಳನ್ನು ಸರ್ವರ ಸ್ವತ್ತಾಗಿಸುವ ಉದ್ದೇಶವೂ ತೀವ್ರಗೊಳ್ಳುತ್ತದೆ.

ಸಂಪಾದನ ವಿಭಾಗ ಸಂಕಲಿತ ಗ್ರಂಥಗಳನ್ನು ಹೊರತರುವಲ್ಲಿಯೂ ನಮಗೆ ನೆರವಾಗುತ್ತಿದೆ. ಎರಡು ಸಾವಿರ ವರ್ಷಗಳ ಸುದೀರ್ಘ ಪರಂಪರೆಯುಳ್ಳ ಕನ್ನಡ ಸಾಹಿತ್ಯದ ಸಿಂಹಾವಲೋಕನ ಮಾಡಿಸುವಂತಹ ಪ್ರಾತಿನಿಧಿಕ ಸಂಕಲನ ಗ್ರಂಥಗಳನ್ನು ಸಿದ್ಧಪಡಿಸಲಾಗುತ್ತಿದೆ. ವಿಶ್ವವಿದ್ಯಾನಿಲಯದ ವಿವಿಧ ಪರೀಕ್ಷೆಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ರಚಿಸಲಾಗುತ್ತಿರುವ ಈ ಗ್ರಂಥಗಳು ಆಯಾ ವಿದ್ಯಾರ್ಥಿಗಳಿಗೆ ಮಾತ್ರವಲ್ಲದೆ ಕನ್ನಡ ಸಾಹಿತ್ಯದ ಪರಿಚಯವನ್ನು ಬಯಸುವವರಿಗೂ ಉಪಯುಕ್ತವಾಗುತ್ತವೆ. ಇಂಥ ಸಂಕಲಗಳನ್ನು ಸಿದ್ಧಪಡಿಸುವುದೂ ಸಂಪಾದನ ವಿಭಾಗದ ಒಂದು ಪ್ರಮುಖ ಹೊಣೆಯಾಗಿದೆ.

ಈಗ ಪ್ರಕಟವಾಗುತ್ತಿರುವ 'ಧರ್ಮನಾಥ ಪುರಾಣ' ಅಧ್ಯಯನ ಸಂಸ್ಥೆಯ ಪ್ರಾಚ್ಯಕಾವ್ಯಮಾಲೆಯ ೩೯ನೆಯ ಪ್ರಕಟಣೆಯಾಗಿದೆ. ಈ ಕೃತಿಯನ್ನು ಕನ್ನಡ ಅಧ್ಯಯನ ಸಂಸ್ಥೆಯ ಸಂಪಾದನ ವಿಭಾಗದ ಉಪನಿರ್ದೇಶಕರಾದ ಶ್ರೀ ಎಸ್. ಬಸವಾರಾಧ್ಯ ಅವರು ಶಾಸ್ತ್ರೀಯವಾಗಿ ಸಂಪಾದಿಸಿ ಕೊಟ್ಟಿದ್ದಾರೆ, ಅವರಿಗೆ ನಮ್ಮ ವಂದನೆಗಳು.

ಈ ಗ್ರಂಥದ ಸಂಪಾದನ ಕಾರ್ಯಕ್ಕೆ ಅನುಕೂಲಿಸುವಂತೆ ತಮ್ಮಲ್ಲಿದ್ದ ಹಸ್ತಪ್ರತಿಗಳನ್ನು ಉಪಯೋಗಿಸಲು ಕೊಟ್ಟಿರುವ ಮಹನೀಯರಿಗೆ ವಂದನೆಗಳು.

ಕನ್ನಡ ಅಧ್ಯಯನ ಸಂಸ್ಥೆ
ಮಾನಸಗಂಗೋತ್ರಿ, ಮೈಸೂರು-೬

**ಹಾ. ಮಾ. ನಾಯಕ**
ಪ್ರಧಾನ ಸಂಪಾದಕ

# ವಿಷಯಾನುಕ್ರಮಣಿಕೆ

ಅನುಬಂಧಗಳು

# ಪ್ರಸ್ತಾವನೆ

## I ಕವಿ-ಕಾಲ-ಕಾವ್ಯ

ಹದಿನಾಲ್ಕನೆಯ ಶತಮಾನದ ಮಧ್ಯಭಾಗದಲ್ಲಿ ತಲೆದೋರಿದ ಚಂಪೂಕವಿಗಳಲ್ಲಿ ಬಾಹುಬಲಿಪಂಡಿತ ಮುಖ್ಯನಷ್ಟೇ ಅಲ್ಲ, ಕೇಂದ್ರಬಿಂದುವೂ ಎನಿಸಿದ್ದಾನೆ. ಈ ಶತಮಾನದಲ್ಲಿ ಬಂದ ಮಧುರ ಕವಿ ಇದೇ ವಿಷಯವನ್ನು ಕುರಿತು ಒಂದು ಚಂಪೂಕಾವ್ಯವನ್ನು ಬರೆದಿದ್ದಾನೆ. ಕ್ರಿ.ಶ. ೧೩೮೫ರಲ್ಲಿ ಇದ್ದಿರಬಹುದಾದ ಈತನ ಧರ್ಮನಾಥ ಪುರಾಣ ನಮಗೆ ಸಮಗ್ರವಾಗಿ ಸಿಕ್ಕಿಲ್ಲ.

ಬಾಹುಬಲಿ ಪಂಡಿತನ ಕಾಲ ಕ್ರಿ.ಶ. ೧೩೫೨. ಧರ್ಮನಾಥ ಪುರಾಣವನ್ನು:

ಸ್ವಸ್ತಿಶ್ರೀ ಶಕವತ್ಸರಂ ಸಲೆ ಚತುಸ್ಸಪ್ತದ್ವಯ್ಯೈಕಾಂಕವಿ
ನ್ಯಸ್ತಂ ನಂದನವರ್ಷದಲ್ಲಿ ಮಧುಮಾಸ ಶ್ವೇತಪಕ್ಷಾಷ್ಟಮಿಾ
ವಿಸ್ತಾರೀಕೃತ ಸೋಮವಾರದೊಳಿದಂ ಸಂಪೂರ್ಣಮಂ ಮಾಡಿದಂ
ಪ್ರಸ್ತುತ್ಯಂ ಪ್ರತಿಭಾಪರಂ ಭುಜಬಲಿ ಪ್ರಖ್ಯಾತಯೋಗೀಶ್ವರಂ (೧೬–೪೩)

೧೨೭೪ ನಂದನ ಸಂವತ್ಸರ ಎಂದರೆ ಕ್ರಿ.ಶ. ೧೩೫೨ರಲ್ಲಿ ರಚಿಸಿದಂತೆ ಹೇಳಿಕೊಂಡಿದ್ದಾನೆ. ಈ ಬಾಹುಬಲಿಪಂಡಿತನನ್ನು ತರುವಾಯ ಬಂದ ಯಾವೊಬ್ಬ ಕವಿಯೂ ಸ್ಮರಿಸಿದಂತೆ ಕಂಡುಬರುವುದಿಲ್ಲ. ಇಷ್ಟೇಕೆ ಈತನ ಕಿರಿಯ ಸಮಕಾಲೀನನಾಗಿದ್ದಿರಬಹುದಾದ ಮಧುರನೂ ಈತನನ್ನು ಸ್ತುತಿಸದಿರುವುದು ನಿಜಕ್ಕೂ ಆಶ್ಚರ್ಯಕರ ಸಂಗತಿಯಾಗಿದೆ. ಕನ್ನಡಸಾಹಿತ್ಯದಲ್ಲಿ ಧರ್ಮನಾಥ ತೀರ್ಥಂಕರನ ಬಗೆಗೆ ಸ್ವತಂತ್ರಕೃತಿಗಳನ್ನು ರಚಿಸಿದವರಲ್ಲಿ ಬಾಹುಬಲಿ ಪಂಡಿತನೇ ಮೊದಲಿಗನೆನ್ನಬಹುದು. ಆತನ ಇತಿವೃತ್ತಗಳೇನೂ ನಮಗೆ ತಿಳಿದುಬಂದಿಲ್ಲ. ಆತನ ಕಾವ್ಯಗಳಲ್ಲಿಯೂ ಈ ಬಗೆಗೆ ಯಾವ ಮಾಹಿತಿಯೂ ದೊರಕುವುದಿಲ್ಲ.

ಬಾಹುಬಲಿಪಂಡಿತ ಧರ್ಮನಾಥಪುರಾಣವನ್ನು ಕನ್ನಡದಲ್ಲಿಯೂ ಗುಮ್ಮಟನಾಥ ಚರಿತೆಯನ್ನು ಸಂಸ್ಕೃತದಲ್ಲಿಯೂ ಬರೆದಿದ್ದಾನೆ. ಧರ್ಮನಾಥಪುರಾಣದ ಪ್ರತಿ ಆಶ್ವಾಸದ ಕೊನೆಯಲ್ಲಿಯೂ "ಇದು ಸಕಳಭುವನಜನ ವಿನೂಯಮಾನಾನೂನ ಮಹಿಮಾಮಾನನೀಯ ಪರಮಜಿನಸಮಯ ಕಮಳಿನೀಕಳಹಂಸಾಯಮಾನ ಶ್ರೀಮನ್ನಯಕೀರ್ತಿದೇವ ಪ್ರಸಾದಸಂಪಾದಪಾದನಿಧಾನ ದೀಪವರ್ತಿಯುಭಯಭಾಷಾಕವಿಚಕ್ರವರ್ತಿ ಬಾಹುಬಲಿಪಂಡಿತದೇವ ಪರಿನಿರ್ಮಿತಮಪ್ಪ ಧರ್ಮನಾಥಪುರಾಣದೊಳ್" ಎಂಬ ಗದ್ಯಭಾಗವಿದೆ. ಅಲ್ಲದೆ ಪ್ರಥಮಾಶ್ವಾಸದಲ್ಲಿ ಬರುವ:

ಮೊದಲೊಳ್ ಸಂಸ್ಕೃತಭಾಷೆಯಿಂ ಬುಧಜನಂ ಕೊಂಡಾಡುತಿರ್ಪಂತೆ ನಂ
ಮುದದಿಂ ಗುಮ್ಮಟನಾಥ ಸತ್ಕೃತಿಯೆಂಬೀ ಕಾವ್ಯಮಂ ಪೇಳ್ದು ಮಾ
ಣದೆ ಕರ್ಣಾಟಕದಿಂದೆ ಮತ್ತೆ ರಚಿಸಿ ಶ್ರೀಧರ್ಮನಾಥಪ್ರಬಂ
ಧದ ನೇರ್ಪಂ ತಳೆದಂ ಸಮಂತುಭಯಭಾಷಾಕಾವ್ಯಕರ್ತೃತ್ವಮಂ (೧-೪೮)

ಎಂಬ ಪದ್ಯದಿಂದಲೂ ಈತನು ಮೇಲಿನ ಎರಡೂ ಕೃತಿಗಳನ್ನು ಬರೆದಿರುವನೆಂಬುದು ಸ್ವಯಂ ವೇದ್ಯವಾಗುತ್ತದೆ. ಈತನಿಗೆ 'ಉಭಯಭಾಷಾ ಕವಿಚಕ್ರವರ್ತಿ' ಎಂಬ ಬಿರುದಿದ್ದಂತೆ ಮೇಲಿನ ಗದ್ಯಭಾಗದಿಂದಲೂ ಮುಂದಿನ:

ನಯವಿದರೆಲ್ಲರುಂ ಪೊಗಳೆ ಜಾಣ್ನುಡಿ ಮಿಕ್ಕಿರೆ ಕಾವ್ಯಮಂ ಗುಣೋ
ದಯಪರಮಾಗೆ ಮಾಡಿ ನಯಕೀರ್ತಿಯತೀಶ್ವರರಗ್ರಶಿಷ್ಯನಿಂ
ತಯಮಯನಪ್ಪ ಬಾಹುಬಲಿಪಂಡಿತದೇವನಭಿಷ್ಟುತಂ ಮಹೋ
ಭಯಕವಿಚಕ್ರವರ್ತಿ ಪೆಸರಿಂದೆಸೆದಂ ಜಗದೊಳ್ ನಿರಂತರಂ (೧-೪೯)

ಈ ಪದ್ಯದಿಂದಲೂ ತಿಳಿದುಬರುತ್ತದೆ.

ಧರ್ಮನಾಥಪುರಾಣ ಒಂದು ಚಂಪೂಕಾವ್ಯ. ಇದರಲ್ಲಿ ೧೬ ಆಶ್ವಾಸಗಳಿವೆ. ಹದಿನೈದನೆಯ ತೀರ್ಥಂಕರನಾದ ಧರ್ಮನಾಥನ ಚರಿತ್ರೆಯನ್ನು ಇದರಲ್ಲಿ ಹೇಳಿದೆ. ಪ್ರಥಮಾಶ್ವಾಸದಲ್ಲಿ ಕವಿ ಸಿದ್ಧರನ್ನೂ ಜೈನತತ್ತ್ವೋಪದೇಶಕರನ್ನೂ ಸರ್ವಸಾಧುಗಳನ್ನೂ ಶಾರದೆಯನ್ನೂ ಪದ್ಮಾವತಿ ಯಕ್ಷಿಯರನ್ನೂ ಸ್ತುತಿಸಿದ್ದಾನೆ. ಅರಿಷ್ಟಸೇನ, ಗೌತಮ ಗಣಧರ ಯತಿ, ಪುಷ್ಪದಂತ, ಗೃಧ್ರಪಿಂಛಾಚಾರ್ಯ, ಸಮಂತಭದ್ರಮುನಿ, ಪೂಜ್ಯಪಾದಮುನಿ, ಅಕಳಂಕವ್ರತಿ, ಕೊಂಡಕುಂದಯತಿಪತಿ, ವಿಶಾಲಕೀರ್ತಿಮುನಿ, ಪಾರ್ಶ್ವದೇವ, ಜಿನ ಧರ್ಮೋದ್ಧಾರಕ ಚಾರುಕೀರ್ತಿಪಂಡಿತ, ಧರ್ಮಭೂಷಣ ಭಟ್ಟಾರಕ, ಲಕ್ಷ್ಮೀಸೇನ ಭಟ್ಟಾರಕ, ಮೇಘಚಂದ್ರ, ನಯಕೀರ್ತಿದೇವ—ಇವರೇ ಮೊದಲಾದ ಆಚಾರ್ಯರನ್ನು ಭಕ್ತಿ ಪೂರ್ವಕವಾಗಿ ವಂದಿಸಿದ್ದಾನೆ. ಗಜಾಂಕುಶ, ನಾಗವರ್ಮ, ಹಂಪ, ನೇಮಿ, ಜನ್ನಿಗ, ರನ್ನ, ಅಗ್ಗಳ—ಇವರೇ ಮೊದಲಾದವರನ್ನು ಸ್ಮರಿಸಿದ್ದಾನೆ. ಇದಾದಮೇಲೆ ದುರ್ಜನ ನಿಂದೆ, ಕೃತಿಪ್ರಶಂಸೆ, ಕೃತಿಪತಿಪ್ರಶಂಸೆಗಳನ್ನು ಮಾಡಿದ್ದಾನೆ; ಅಲ್ಲದೆ ಆತ್ಮಪ್ರಶಂಸೆಯನ್ನೂ ಮಾಡಿಕೊಂಡಿದ್ದಾನೆ. ಆ ಬಳಿಕ ಕಥೆಯನ್ನು ನೇರವಾಗಿ ಪ್ರಾರಂಭಿಸಿದ್ದಾನೆ.

ಜಂಬೂದ್ವೀಪದ ದಕ್ಷಿಣದಿಶಾಭಾಗದಲ್ಲಿ ಭರತಕ್ಷೇತ್ರವು ರಾರಾಜಿಸುತ್ತಿತ್ತು. ಅದರಲ್ಲಿ ಉತ್ತರ ಕೌಶಲದೇಶ ವಿರಾಜಮಾನವಾಗಿತ್ತು, ಸಕಲ ಸಂಪದ್ಭರಿತವಾಗಿತ್ತು. ಇಕ್ಷ್ವಾಕುವಂಶದ ಮಹಾಸೇನಮಹಾರಾಜ ಅದರ ರಾಜನಾಗಿದ್ದನು. ಮನುಜ ಮನೋಜನಾದ ಆ ಮಹಾಸೇನ ಮಹಾರಾಜನ ಮನೋವಲ್ಲಭೆ ಸುವ್ರತಾದೇವಿ. ಆ ರಾಜದಂಪತಿಗಳು ಸಮಸ್ತ ಭೋಗಭಾಗ್ಯಗಳನ್ನು ಅನುಭವಿಸುತ್ತಿದ್ದರೂ ಅವರಿಗೆ ಮಕ್ಕಳಿರಲಿಲ್ಲ. ಇದರಿಂದ ಚಿಂತಾಕ್ರಾಂತನಾದ ರಾಜ:

ಎನಿತೆನಿತುಂ ಸ್ವಬಾಂಧವ ಸಹಸ್ರಮದುಳ್ಳೊಡಮೇನು ಪುತ್ರನಂ
ತೆನಿತೆನಿತುಂ ಸ್ವಗೋತ್ರಜಜನಂಗಳುಮುಳ್ಳೊಡಮೇನು ಪುತ್ರಸಂ
ಜನಿ ತನಗಿಲ್ಲಮೆಂದು ನನನಾವನೊ ದುಃಖಮನೆಯ್ದನಂಬರಂ
ವಿನುತಹಿಮಾಂಶುವಿಲ್ಲಮೊಡೆ ತಾರೆಗಳುಳ್ಳೊಡಮೆಂತು ರಂಜಿಕುಂ (೩–೫)

ಕುಲದೀಪನೆನಿಪ ತನಯಂ
ನಿಳಯದೊಳುಜ್ಜ್ವಳಿಸಿ ಬೆಳಗದಿರ್ದೊಡೆ ಧಾತ್ರೀ
ತಳದೊಳದು ಮೇಱಿಯದೆಂತೆನೆ
ವಿಳಸಿತ ತನುದಿಂದಂ ಪುದಿದ ಮನೆಯಂತೆ ಪಲಂ (೩–೬)

ಈ ರೀತಿ ತರ್ಕಿಸುವನು. ಇದಕ್ಕೆ ಏನುಮಾಡಬೇಕೆಂದು ಆಲೋಚಿಸಿ 'ಧರ್ಮದೊದವಿಂ ಸಾಧ್ಯಂ ದಲೀಕಾರ್ಯಂ' ಎಂದು ನಿಶ್ಚಯಿಸುವನು. ಆ ವೇಳೆಗೆ ಸರಿಯಾಗಿ ವನಪಾಲಕನು ಬಂದು ಪ್ರಜೀತರೆಂಬಾಚಾರ್ಯವರ್ಯರು ಐನೂರುಜನ ಚಾರಣಋಷಿಗಳೊಡನೆ ಪುರದ ಬಹಿರುದ್ಯಾನದಲ್ಲಿ ಬೀಡುಬಿಟ್ಟಿರುವ ಸಂಗತಿಯನ್ನು ತಿಳಿಸುವನು. ಅದನ್ನು ಕೇಳಿದ ರಾಜ ಸಂತುಷ್ಟಚಿತ್ತನಾಗಿ ಪತ್ನೀಸಮೇತ ಋಷಿಗಳ ದರ್ಶನಕ್ಕೆ ಹೊರಟನು. ಅವರನ್ನು ಕಂಡಕೂಡಲೆ ದಂಪತಿಗಳಿಬ್ಬರೂ ಭಕ್ತಿಯಿಂದ ಪ್ರಣಾಮವನ್ನು ಮಾಡಿದರು. ಆಮೇಲೆ ರಾಜನು 'ಪಂಚಮುಷ್ಟಿ ಪರಿನಿಷ್ಠಿತಾಂಗಮುಷ್ಟಿಯಾಗಿ' ವಂದನೆಯನ್ನು ಮಾಡಿ ದೀನನಾಗಿ ನೆಲದ ಮೇಲೆ ಮಲಗಿಕೊಂಡನು. ರಾಜನನ್ನು ನೋಡಿದ ಋಷಿಗಳು ಆಶೀರ್ವದಿಸಿ ಆತನ ದುಗುಡಕ್ಕೆ ಕಾರಣವನ್ನು ಕೇಳಿದರು. ಅದಕ್ಕೆ ರಾಜ 'ಎನ್ನೀ ಪ್ರಾಣಪ್ರಿಯೆಯಪ್ಪ ಕುಲಸ್ತ್ರೀಗೆ ಕಾಲದೊಳಾದೊಡಂ ಪುತ್ರಲಾಭವಾಗದಿರ್ದುದು ರಾಜ್ಯಭಾರಧಾರಣ ಧೌರೇಯನಪ್ಪ ಕುಮಾರನನೊರ್ವನನಾದೊಡಂ ಕಾಣದ ಕಾರಣಮಾಗಳೀ ಚತುಸ್ಸಮುದ್ರಾಂಕಿತಮಾದ ಮೇದಿನೀಮಂಡಳಮೆನ್ನಯ ಬಾಹುದಂಡಕ್ಕೆ ಕೇವಳಂ ಭಾರಮಾಗಿ ತೋಱುತ್ತುಮಿರ್ದಪುದದಱಿಂದಾನತಿಕ್ಲೇಶಮಂ ತಾಳ್ದಿದೆಂ' ಎಂದು ವಿಜ್ಞಾಪಿಸಿಕೊಂಡನು. ಅದನ್ನು ಕೇಳಿದ ಆ ಋಷಿಗಳು :

ತ್ರಿಜಗದ್ಗುರುವೆನಿಸುವ ಧ
ರ್ಮಜಿನಾಧೀಶಂಗೆ ತಂದೆಯಾದಪೆಯೆಂದೊಡೆ
ನಿಜಪುಣ್ಯದೇಳ್ಗೆ ಲೋಕದೊ
ಳಜಸಿಸಿದುದು ಪಿರಿದುಮದ್ಭುತತ್ವದ ಪೆಂಪಂ (೩–೬೩)

ಎಂದು ಹೇಳಲು ಆ ದಂಪತಿಗಳು ಅಪರಿಮಿತ ಪರಮಾನುರಾಗರಸಪೂರಿತರಾಗಿ ಮುನಿಗಳಿಗೆ ನಮಸ್ಕರಿಸಿ ಆ ಜಿನನ ಪೂರ್ವವೃತ್ತಾಂತವನ್ನು ನಿರೂಪಿಸಬೇಕೆಂದು ಪ್ರಾರ್ಥಿಸಿಕೊಂಡರು. ತರುವಾಯ ಆ ಮುನಿಗಳು 'ಜಿನನ ಚರಿತ್ರವೊಂದು ಕಥೆಯುಂ ನೆಱೆಪೇಳ್ದಪೆ

ಕೇಳ್ವೊಡಂ ದಶರಥನ ದುರಿತಂಗಳಿಂದ್ದು ಪರಿದೋಡುಗುಂ' ಎಂದು ಭವಾಂತರ ಪ್ರಪಂಚವನ್ನು ನಿರೂಪಿಸುವುದಕ್ಕೆ ತೊಡಗಿದನು.

ಧಾತಕೀಷಂಡದ ಜಂಬೂದ್ವೀಪದಲ್ಲಿ ಮೇರುಗಿರಿಯ ಪೂರ್ವಪ್ರದೇಶದಲ್ಲಿ ಚಾರುಜಿನ ಧರ್ಮಗೇಹ ವಿರಾಜಿಸುತ್ತಿತ್ತು. ಆ ಪೂರ್ವವಿದೇಹದ ಮಧ್ಯದಲ್ಲಿ ಸೀತಾನದಿ ಹರಿಯುತ್ತಿತ್ತು. ಆ ನದಿಯ ತೀರದಲ್ಲಿ ವತ್ಸವೆಂಬ ದೇಶವಿತ್ತು. ಆ ದೇಶವನ್ನು ಭಾನುರಾಜನು ಆಳುತ್ತಿದ್ದನು. ಆತನ ಚಿತ್ತವಲ್ಲಭೆ ಮನೋಹರಿ. ಭಾನುರಾಜ ಮತ್ತು ಮನೋಹರಿಯರು ಕಾಮರತಿಯರಂತೆ ಸುಖವನ್ನು ಅನುಭವಿಸುತ್ತಿದ್ದರು. ಹೀಗಿರುವಲ್ಲಿ ಮನೋಹರಿ ಗರ್ಭವತಿಯಾದಳು. ಕಾಲಕ್ರಮದಲ್ಲಿ ಗಂಡುಮಗುವನ್ನು ಹಡೆದಳು. ಆ ಮಗುವಿಗೆ ದಶರಥನೆಂಬ ಹೆಸರಿಟ್ಟರು. ಕ್ರಮೇಣ ಆ ಬಾಲಕ ಪಾಡ್ಯದ ಚಂದ್ರನಂತೆ ಬೆಳೆದು, ಸಮಸ್ತ ಶಸ್ತ್ರ ಶಾಸ್ತ್ರ ವಿದ್ಯಾವಿಶಾರದನಾದನು. ಆಗ ಭಾನುರಾಜ ರಾಜ್ಯಭಾರವನ್ನು ಆತನಿಗೆ ವಹಿಸಿ ಮನುಧರಭಟ್ಟಾರಕರ ಸಮಕ್ಷದಲ್ಲಿ ಜಿನದೀಕ್ಷಾಪ್ರಾಪ್ತನಾಗಿ 'ನಿಸರ್ಗದುರ್ಗಮಪವರ್ಗಮಂ' ಸಾಧಿಸಿದನು. ಇತ್ತ ದಶರಥಮಹಾರಾಜ ದುಷ್ಟಶಿಕ್ಷಣ ಶಿಷ್ಟಪರಿಪಾಲನದಿಂದ ರಾಜ್ಯಭಾರವನ್ನು ಮಾಡುತ್ತಿದ್ದನು. ಆತನ ಕೀರ್ತಿಯನ್ನು ಕವಿ ಈ ರೀತಿ ವರ್ಣಿಸಿದ್ದಾನೆ:

ಪಾಪಕ್ಕಂಜುವನಾತಂ
ಪಾಪಂ ತಾನಂಜಿಯಾತನಂ ಬಿಟ್ಟೋಡಿ
ತ್ತೀ ಪರಿಯಿಂ ದಶದಿಕ್ಕುಗ
ಳಾಪೊತ್ತುಂ ನಗುವುದವನ ಕೀರ್ತಿಯ ನೆವದಿಂ (೪–೪೫)

ಅಷ್ಟೇ ಅಲ್ಲ, ಆ ಮಹಾರಾಜನ ಗುಣಗಳನ್ನು ಕವಿ:

ಜಿನಪದಭಕ್ತ ದಾನಗುಣಯುಕ್ತ ದಯಾಮಯ ಧರ್ಮಸಕ್ತ ಸು
ತ್ಸಸಿತ ಚರಿತ್ರ ಕಾಮಸಮಗಾತ್ರ ವಿಶೇಷಿತ ಪುಣ್ಯಪಾತ್ರನೀ
ವಿನಯನಿಧಾನ ಶತ್ರುಕೃತಮಾನ ಸುಶೀಲ ವಿರಾಜಮಾನನೆಂ
ದೆನಿಪನಾದಪಂ ದಶರಥಕ್ಷಿತಿಪಂ ವಿಲಸತ್ಕಳಾಧಿಪಂ (೪–೪೬)

ಈ ರೀತಿ ವರ್ಣಿಸಿದ್ದಾನೆ. ಆ ಮಹಾರಾಜನಿಗೆ ದಯಾವತಿದೇವಿ ಎಂಬ ಹೆಂಡತಿ ಇದ್ದಳು. ಆ ದಂಪತಿಗಳಿಗೆ ಅತಿರಥನೆಂಬ ಕುಮಾರನಾದನು. ಹೀಗಿರಲು ಒಮ್ಮೆ ದಶರಥನು ಒಡ್ಡೋಲಗದಲ್ಲಿದ್ದಾಗ ಚಾರಣಪರಮೇಷ್ಠಿಗಳು ಆಕಾಶಪ್ರದೇಶದಿಂದ ಇಳಾತಳಕ್ಕೆ ಅವತರಿಸುತ್ತಿದ್ದುದನ್ನು ಕಂಡನು. ಅರಮನೆಗೆ ಆ ಋಷಿಗಳು ಬಂದಕೂಡಲೆ ಅವರನ್ನು ಸಂತೋಷದಿಂದ ಇದಿರುಗೊಂಡು ನಮಸ್ಕರಿಸಿ ಪರಿಪರಿಯಾಗಿ ಉಪಚರಿಸಿದನು. ಆ ರಾಜನ ದಾನಧರ್ಮಬುದ್ಧಿಯಿಂದ ಸಂಪ್ರೀತನಾದ ಮುನಿ 'ನಿತ್ಯಸುಖಭೋಗ ಭಾಗಿಯಾಗು' ಎಂದು ಆಶೀರ್ವದಿಸಿ ಹೊರಟುಹೋದನು.

ದಶರಥ ಮಹಾರಾಜನು ಒಮ್ಮೆ ಅಮೃತಶಿಲಾನಿರ್ಮಿತವಾದ ಸೌಧಶಿಖರಾಗ್ರದಲ್ಲಿ ಓಲಗವನ್ನು ನಡೆಸುತ್ತಿದ್ದನು. ಎಲ್ಲೆಲ್ಲೂ ಹಾಲುಚೆಲ್ಲಿದಂತೆ ಬೆಳುದಿಂಗಳಿತ್ತು. ಆ ಸಮಯದಲ್ಲಿ ಕಳಾಪರಿಪೂರ್ಣನಾಗಿದ್ದ ಚಂದ್ರಬಿಂಬವನ್ನು ರಾಹು ಹಿಡಿಯಿತು. ಜಗತ್ತನ್ನೆಲ್ಲ ಕತ್ತಲೆ ಆವರಿಸಿತು. ತನ್ನ ಕಣ್ಣೆದುರಿಗೇ ನಡೆದ ಈ ಪ್ರಸಂಗವನ್ನು ಕಂಡ ರಾಜ ಸಿರಿಯ ಅಸ್ಥಿರತೆಯನ್ನೂ ಸಂಸಾರದ ನಿಸ್ಸಾರತೆಯನ್ನೂ ಮನದಲ್ಲಿ ಬಗೆದು :

ಸ್ಥಿರವಲ್ಲದ ಸಿರಿ ಸಾರ್ದೊಡೆ
ಸಿರಿದುಂ ದಾನವನೆ ಮಾಡುವಂ ಕಡುಜಾಣಂ
ನೆರಪಿ ಬೈತಿಟ್ಟು ಮೆಲ್ಲನೆ
ಪರಿಭೋಗಿಸೆನೆಂದು ಬಗೆವನಂ ಕಡುಮೂರ್ಖಂ (೫-೨೯)

ಈ ರೀತಿ ನಿರ್ಧರಿಸಿ ಸಾಂಸಾರಿಕ ಸುಖಕ್ಕೆ ಕೊಕ್ಕರಿಸುವನು. ದುಶ್ಚರಣ ತಪಶ್ಚರಣ ಪರಿಗ್ರಹವನ್ನು ಮಾಡುವುದಾಗಿ ನಿಶ್ಚಯಿಸುವನು. ಮಾರನೆಯ ದಿನ ಒಡ್ಡೋಲಗವನ್ನು ಸೇರಿಸಿ ತನ್ನ ಕುಮಾರನನ್ನು ಬರಮಾಡಿಕೊಂಡು ಜೈನದೀಕ್ಷೆಯನ್ನು ಕೈಕೊಂಡು ತಪಸ್ಸಿಗೆ ಹೊರಡುವ ತನ್ನ ನಿರ್ಧಾರವನ್ನು ತಿಳಿಸುವನು. ಮಂತ್ರಿಗಳೂ ರಾಜಕುಮಾರನೂ ದಶರಥನ ನಿರ್ಧಾರವನ್ನು ಬದಲಿಸುವಂತೆ ಬಗೆಬಗೆಯಾಗಿ ಪ್ರಾರ್ಥಿಸಿಕೊಂಡರು. ಅವರೆ ಅದಾವುದಕ್ಕೂ ಓಗೊಡದ ಮಹಾರಾಜನು ಮಗನಿಗೆ ಸಾಮ್ರಾಜ್ಯಪಟ್ಟವನ್ನು ಕಟ್ಟಿ :

ಕೈವಲ್ಯಕ್ಕೆಱಗುವ ಮನ
ಮೋವದೆ ಸಂಸಾರ ಪದವಿಗೇನೆಱಗುವುದೇ
ಪೂವಿಂಗೆಱಗುವ ಮಧುಪಂ
ಭಾವಿಸೆ ಮರ್ದಿಸಿತ ಕರ್ದಮಕ್ಕೆಱಗುವುದೇ (೫-೭೩)

ಎಂದು ನಿಶ್ಚಯಿಸಿ ಬಂಧುಬಾಂಧವರನ್ನು ಸಂತೈಸಿ, ಪುತ್ರನನ್ನು ಒಡಂಬಡಿಸಿ ತಪಸ್ಸಿಗೆ ಹೊರಟುಹೋದನು. ದಾರಿಯಲ್ಲಿ ವಿಮಳವಾಹನ ಭಟ್ಟಾರಕರನ್ನು ಕಂಡು ಅವರ ಆಶೀರ್ವಾದವನ್ನು ಪಡೆದು ಮುಂದೆ ಹೋದನು. ಆತನು ನಿಷ್ಠೆಯಿಂದ ತ್ರಿಕಾಲವೂ ತಪಸ್ಸನ್ನು ಮಾಡಿ ಬಾಹ್ಯಾಭ್ಯಂತರ ಪರಿಗ್ರಹಗಳನ್ನು ತೊರೆದು ಸಂನ್ಯಸನ ವಿಧಾನದಿಂದ ಒಂದು ತಿಂಗಳು ಪರ್ಯಂತರವಿದ್ದನು. ಆಮೇಲೆ ಸಮಾಧಿವಿಧಿ ದೊರಕೊಂಡು ಸರ್ವಾರ್ಥಸಿದ್ಧಿ ವಿಮಾನವನ್ನು ಸೇರಿದನು. ಅಲ್ಲಿಂದ ಅಹಮಿಂದ್ರನೆಂಬ ದೇವನಾಗಿ ಹುಟ್ಟಿ ಅವಧಿಜ್ಞಾನವನ್ನು ಪಡೆದನು. ಸರ್ವಾವಧಿಬೋಧಸಂಪನ್ನನಾದ ಆತನು ಮೂವತ್ತುಮೂರು ಸಾಗರೋಪಮಕಾಲವಾದಮೇಲೆ ಚರಮದೇಹಧಾರಣೆಗಾಗಿ ಧರಣೀತಳಕ್ಕೆ ಅವತರಿಸುವನು. ಮಹಾಸೇನಮಹಾರಾಜ ಮತ್ತು ಸುವ್ರತಾಮಹಾದೇವಿಯರಿಗೆ ಹದಿನೈದನೆಯ ತೀರ್ಥಂಕರನಾಗಿ ಧರ್ಮನಾಥನು ಮಗನಾಗಿ ಹುಟ್ಟುವನು ಎಂದು ಆ ಪ್ರಚೇತ

ರಿಂದಾಚಾರ್ಯರು ಹೇಳಿದರು. ಧರ್ಮನಾಥನ ಪೂರ್ವಭವಾವಳಿಯನ್ನು ಅವರಿಂದ ಕೇಳಿ ಮುನೀಶ್ವರನನ್ನು ಕೊಂಡಾಡಿದನು. ತರುವಾಯ ಮಹಾಸೇನಮಹಾರಾಜ ಮತ್ತು ಸುವ್ರತಾಮಹಾದೇವಿಯರು ಸಂತೋಷದಿಂದ ನಿಜರಾಜಧಾನಿಗೆ ಹಿಂತಿರುಗಿದರು. ದೇವೇಂದ್ರನು ಧರ್ಮನಾಥನ ಗರ್ಭಾವತರಣಕಲ್ಯಾಣನಿಮಿತ್ತವಾಗಿ ರತ್ನವೃಷ್ಟಿಯನ್ನು ಕರೆಯುವಂತೆ ಕುಬೇರನಿಗೆ ಆಜ್ಞೆ ಮಾಡಿದನು. ಅಲ್ಲದೆ ದೇವಸ್ತ್ರೀಯರನ್ನು ಕರೆಸಿ 'ನೀವು ಹೋಗಿ ಆ ಜಿನಜನನಿಗೆ ಪರಿಚರ್ಯವನ್ನು ಮಾಡುತ್ತಿರಿ' ಎಂದು ಕಳಿಸಿಕೊಟ್ಟನು. ಅದರಂತೆ ಆ ದೇವಸ್ತ್ರೀಯರು ಮಹಾಸೇನ ಮಹಾರಾಜನ ಅರಮನೆಗೆ ಬಂದು ಆತನನ್ನು ಆಶೀರ್ವದಿಸಿದರು. ಅವರನ್ನು ಕಂಡ ರಾಜನು ಅವರ ಇತಿವೃತ್ತವನ್ನು ಬೆಸಗೊಳ್ಳಲು ಆ ದೇವಸ್ತ್ರೀಯರಲ್ಲಿ ಮುಖ್ಯಳಾದವಳು :

ಭಾವಿ ಜಿನಜನನಿಯುಪ್ಪಾ
ದೇವಿಗೆ ಶುಶ್ರೂಷೆಯಂ ಮಹಾದರದಿಂದಂ
ನೀವೆಯ್ದೆ ಮಾಡಿಯೆಂದಾ
ದೇವೇಂದ್ರಂ ಬೆಸಸೆ ಬಂದೆವಿಲ್ಲಿಗೆ ನೃಪತೀ (೬–೩೯)

ಎಂದು ಹೇಳಿದಳು. ಅದನ್ನು ಕೇಳಿದ ಮಹಾರಾಜ ಸಂತೋಷಭರಿತನಾಗಿ ದೇವಸ್ತ್ರೀಯರನ್ನೆಲ್ಲ ಸತ್ಕರಿಸಿದನು. ಆ ದೇವಸ್ತ್ರೀಯರು ಜಿನಜನನಿಯಾದ ಸುವ್ರತಾಮಹಾದೇವಿಯನ್ನು ನಾನಾ ರೀತಿಯಲ್ಲಿ ಉಪಚರಿಸುತ್ತಿದ್ದರು. ಹೀಗಿರುವಲ್ಲಿ ಒಂದುದಿನ ರಾತ್ರಿ ಸುವ್ರತಾಮಹಾದೇವಿ ಮಂಗಳ ಕಾರಣಂಗಳಾದ ಷೋಡಶಭಾವನಾದಿ ಸ್ವಪ್ನಗಳನ್ನು ಕಂಡಳು. ಬೆಳಗಾದ ಮೇಲೆ ತಾನು ಕಂಡ ಸ್ವಪ್ನಗಳ ಸಂಗತಿಯನ್ನು ಪತಿಗೆ ಹೇಳಿದಳು. ಅದನ್ನು ಕೇಳಿದ ರಾಜ ಮುಂದಾಗಲಿರುವ ಪುತ್ರೋತ್ಪನ್ನ ಸಂಗತಿಯನ್ನು ಅರಿತು ಅಪರಿಮಿತ ಆನಂದವನ್ನು ಹೊಂದಿದನು. ಇತ್ತ ಸರ್ವಾರ್ಥಸಿದ್ಧಿ ಎಂಬ ವಿಮಾನದಲ್ಲಿ ಹುಟ್ಟಿದ್ದ ದಶರಥನ ಚರನಾದ ಅಹಮಿಂದ್ರನೆಂಬ ದೇವ ತನ್ನ ಅವಸಾನಕಾಲ ಪ್ರಾಪ್ತವಾದುದನ್ನು ಅರಿತು ದಿವ್ಯಶರೀರ ಭಾರವನ್ನು ಬಿಟ್ಟು ಸರ್ವಾರ್ಥಸಿದ್ಧಿಯಿಂದ ಹೊರಬಂದು ಸುವ್ರತಾಮಹಾದೇವಿಯ ಗರ್ಭದಲ್ಲಿ ನೆಲಸಿದನು. ಇದನ್ನು ತಿಳಿದ ದೇವೇಂದ್ರನೇ ಮೊದಲಾದ ದೇವತೆಗಳಿಗೆ ಆಸನಕಂಪವಾಯಿತು. ಆಗ ಚತುರ್ನಿಕಾಯ ದೇವತೆಗಳೆಲ್ಲ ಬಂದು ಪಂಚಾಶ್ಚರ್ಯ ಪುರಸ್ಸರವಾಗಿ ಗರ್ಭಾವತರಣಕಲ್ಯಾಣ ವಿಧಾನವನ್ನು ಮಾಡಿದರು.

ಗರ್ಭವತಿಯಾದ ಸುವ್ರತಾಮಹಾದೇವಿ ಅಪೂರ್ವವಾದ ಶೋಭೆಯಿಂದ ರಾರಾಜಿಸುತ್ತಿದ್ದಳು. ನವಮಾಸಗಳು ತುಂಬಲು ಒಂದು ಶುಭಮುಹೂರ್ತದಲ್ಲಿ ಆಕೆ ಪುತ್ರನನ್ನು ಹಡೆದಳು. ಆಗ ಪಂಚಾಶ್ಚರ್ಯಗಳಾದುವು; ದೇವತೆಗಳು ಪುಷ್ಪವೃಷ್ಟಿಯನ್ನು ಕರೆದರು. ಭವನಾಮರಲೋಕದಿಂದ ವ್ಯಂತರಲೋಕದಿಂದ ಜ್ಯೋತಿರ್ಲೋಕದಿಂದ ಕಲ್ಪವಾಸಿ ದೇವರ್ಕಳೆಲ್ಲ ಜಿನನ ಜನ್ಮೋತ್ಸವದಲ್ಲಿ ಭಾಗಿಗಳಾಗಲು ಅಲ್ಲಿಗೆ ಬಂದರು.

ಆಗ ದೇವೇಂದ್ರ ಶಚೀದೇವಿಗೆ ಧರ್ಮಜಿನೇಶನನ್ನು ಎತ್ತಿಕೊಂಡು ಬರುವಂತೆ ಹೇಳಿಕಳಿಸಿದನು. ಅದರಂತೆ ಆಕೆ ಅಲ್ಲಿಗೆ ಹೋಗಿ ಜಿನಜನನಿಗೆ ಪ್ರದಕ್ಷಿಣ ನಮಸ್ಕಾರವನ್ನು ಮಾಡಿ ಅಲ್ಲಿದ್ದ ವನಿತೆಯರಿಗೆಲ್ಲ ನಿದ್ರೆಯನ್ನು ಬರಿಸಿ ಮಾಯಾರ್ಭಕನನ್ನು ಅಲ್ಲಿರಿಸಿ ಜಿನಾರ್ಭಕನನ್ನು ಎತ್ತಿಕೊಂಡು ಹೋದಳು. ಆ ಶಿಶುವನ್ನು ದೇವೇಂದ್ರನ ಕೈಗೆ ಕೊಟ್ಟಳು. ದೇವೇಂದ್ರನು ಜಿನಜನ್ಮಾಭಿಷೇಕ ಕಲ್ಯಾಣ ಯಾತ್ರಾನಿಮಿತ್ತವಾಗಿ ಐರಾವತವನ್ನು ತರಿಸಿ ಅದರ ಮೇಲೆ ಜಿನಾರ್ಭಕನನ್ನು ಕುಳ್ಳಿರಿಸಿ ಮೇರುಪರ್ವತಕ್ಕೆ ಕೊಂಡೊಯ್ದನು. ಅಲ್ಲಿ ಪಾವನಮೋಕ್ಷಸ್ಥಾನವೆಂಬಂತೆ ವಿಶಾಲವಾಗಿದ್ದ ಪಾಂಡುಕಶಿಲೆಯ ನಡುವೆ ಜಿನನ ಅಭಿಷೇಕ ಮಂಟಪ ರಂಜಿಸುತ್ತಿತ್ತು. ಅಲ್ಲಿದ್ದ ದೇವತೆಗಳು ದೇವೇಂದ್ರನ ಆಣತಿಯಂತೆ ಸುವರ್ಣಘಟಗಳಿಂದ ಕ್ಷೀರಸಮುದ್ರದ ಜಲವನ್ನು ತಂದು ಜಿನನಿಗೆ ಅಭಿಷೇಕವನ್ನು ಮಾಡಿದರು. ಆಮೇಲೆ ಜಿನಶಿಶುವನ್ನು ರತ್ನಪುರಕ್ಕೆ ಕರೆತಂದು ಆತನ ಪುಣ್ಯಶಕ್ತಿಯನ್ನು ಹೊಗಳಿ:

ಈತಂ ಮಾಡಿದಪಂ ವಿನಿರ್ಮಳ ಮಹಾಧರ್ಮಪ್ರಭಾವಾಂಗಮಂ
ಧಾತ್ರೀಮಂಡಳದಲ್ಲಿ ಮೇಲೆನಿಸಿಪಿನಂ ಧರ್ಮಕ್ಕಮಿನ್ನುಂ ನಮಂ
ಶ್ರೀತಂ ತಾನಧಿನಾಥನೆಂದು ಶಿಶುಗಂ ಶ್ರೀಧರ್ಮನಾಥಂ ದಲೆಂ
ಬೀತಂ ನಾಮಮನಿಟ್ಟು ಘೋಷಿಸಿದನಾ ದೇವೇಂದ್ರನಾನಂದದಿಂ (೯–೩೬)

ಧರ್ಮನಾಥನೆಂದು ನಾಮಕರಣಮಾಡಿದರು. ದೇವೇಂದ್ರನೇ ಮೊದಲಾದವರೆಲ್ಲ ಸ್ವಸ್ಥಾನಗಳಿಗೆ ಹಿಂತಿರುಗಿದರು. ಇತ್ತ ಧರ್ಮನಾಥನು ಬಾಲಲೀಲೆಗಳನ್ನು ಕಳೆದು ಯೌವನಕ್ಕೆ ಕಾಲಿಟ್ಟನು. ಪ್ರಾಪ್ತವಯಸ್ಕನಾದ ಧರ್ಮನಾಥನಿಗೆ ಮಹಾಸೇನಮಹಾರಾಜ ಯುವರಾಜಪಟ್ಟವನ್ನು ಕಟ್ಟಿದನು.

ಒಂದುದಿನ ಧರ್ಮನಾಥ ಒಡ್ಡೋಲಗದಲ್ಲಿದ್ದಾಗ ಕುಂಡಿನಪುರದಿಂದ ಬಂದ ಒಬ್ಬ ದೂತನು ಆ ದೇಶದ ರಾಜಪುತ್ರಿಯಾದ ಶೃಂಗಾರವತೀದೇವಿಯ ಸ್ವಯಂವರದ ವಿಷಯವನ್ನು ತಿಳಿಸಿದನು. ಮಹಾಸೇನಮಹಾರಾಜ ಧರ್ಮನಾಥನನ್ನು ಆ ಸ್ವಯಂವರಕ್ಕೆ ಕಳಿಸಿಕೊಟ್ಟನು. ಸಪರಿವಾರ ಸಮೇತನಾಗಿ ಹೊರಟ ಧರ್ಮನಾಥ ಕುಂಡಿನಪುರವನ್ನು ಸಮೀಪಿಸುತ್ತಲೇ ಆ ದೇಶದ ರಾಜನಾದ ಪ್ರತಾಪರಾಜನಿಗೆ ತನ್ನ ಆಗಮನವನ್ನು ತಿಳಿಸಿದನು. ಪ್ರತಾಪರಾಜನು ಧರ್ಮನಾಥನಿಗೆ ವಿಶಿಷ್ಟವಾದ ಬಿಡಾರವನ್ನು ಏರ್ಪಡಿಸಿಕೊಟ್ಟನು. ಭವ್ಯವಾದ ಸ್ವಯಂವರಮಂಟಪದಲ್ಲಿ ರಾಜಾಧಿರಾಜರು ಮಂಡಿಸಿದ್ದರು. ಧರ್ಮನಾಥನು ಮಣಿಮಯಸಿಂಹಾಸನದಲ್ಲಿ ವಿರಾಜಮಾನನಾಗಿದ್ದನು. ಸ್ವಯಂವರಮಂಟಪದಲ್ಲಿ ನೆರೆದಿದ್ದ ರಾಜಕುಮಾರರೆಲ್ಲ ರಾಜಕುಮಾರಿಯನ್ನು ನೋಡಿ:

ಮನಸಿಜನ ಮಂತ್ರದೇವತೆ
ಯೆನೆ ಮದನನ ವೀರಲಕ್ಷ್ಮಿಯಂತಿರೆ ರತಿನಾ
ಥನ ಮೋಹನ ಶಕ್ತಿಯವೋಲ್
ಜನಮಂ ಮೋಹಿಸುತುಮಿರ್ದಳಚ್ಚರಿಯಿಂದಂ (೧೧-೬೯)

ಎಯ್ದೆ ಮೂಲೋಕಮಂ ಕೆ
ಯ್ಗಯ್ದಾಕೆಯ ರೂಪಿದೊಂದೆ ಸಾಲದೆ ಗೆಲಲಿ
ನ್ನಯ್ದು ಬಾಣಂಗಳಂ ಪಿಡಿ
ದಯ್ದುವ ಸಂಕ್ಲೇಶಮೇವುದೆಂಬಂ ಮದನಂ (೧೧-೭೦)

ಈ ರೀತಿ ಅಭಿಪ್ರಾಯಪಟ್ಟರು. ಪ್ರತಿಯೊಬ್ಬರೂ ಆಕೆಯನ್ನು ಗೆಲ್ಲಬೇಕೆಂದು :

ಒರ್ವಂ ಪಶ್ಯದ ಚೂರ್ಣಮಂ ತಳಿದನೊರ್ವಂ ಧ್ಯಾನಿಸುತ್ತಿರ್ದನೊ
ಳ್ದೊರ್ವಂ ಮಂತ್ರಮನೋದಿದಂ ತಿಳಕಮಂ ಮತ್ತೊರ್ವನಿಟ್ಟಂ ಸಮಂ
ತುರ್ವಿಂದಾ ಸತಿಯಂ ವಶೀಕರಿಸಲೆಂದಿಂತಪ್ಪುಪಾಯಂಗಳಂ
ಸರ್ವರ್ ಮಾಡುತುಮಿರ್ದರುತ್ಸುಕತೆಯಿಂ ಗೆಲ್ವಂತಿರೊರ್ವೊರ್ವರಂ (೧೧-೧೦೦)

ಈ ವಿಧಾನಗಳನ್ನು ಅನುಸರಿಸಿದರಂತೆ. ಸಭೆಯಲ್ಲಿದ್ದ ರಾಜಕುಮಾರರನ್ನೆಲ್ಲ ನೋಡಿಕೊಂಡು ಧರ್ಮನಾಥನಲ್ಲಿಗೆ ಬಂದಾಗ ರಾಜಕುಮಾರಿಯ ನೋಟ ಅಲ್ಲೇ ಕೀಲಿಸಿತು. ಕಾಲುಗಳು ಮುಂದಕ್ಕೆ ಚಲಿಸದಂತಾದುವು. ಸ್ವಯಂವರಮಾಲೆಯನ್ನು ಧರ್ಮನಾಥನ ಕೊರಳಿಗೆ ಹಾಕಿದಳು. ಪ್ರತಾಪರಾಜ ಧಾರಾಪೂರ್ವಕವಾಗಿ ತನ್ನ ಮಗಳನ್ನು ಧರ್ಮನಾಥನಿಗೆ ಪಾಣಿಗ್ರಹಣ ಮಾಡಿಕೊಟ್ಟನು.

ವಿವಾಹಮಹೋತ್ಸವದನಂತರ ಧರ್ಮನಾಥನೂ ಶೃಂಗಾರವತಿಮಹಾದೇವಿಯೂ 'ನವಪ್ರಣಯಪ್ರಸ್ತುತ ವಿನೋದಕೇಳಿಗಳಿಂದ' ಕಾಲವನ್ನು ಕಳೆಯುತ್ತಿರಲು ಒಂದುದಿನ ಮಹಾಸೇನಮಹಾರಾಜನಿಂದ ಕರೆ ಬಂದಿತು. 'ಬರ್ಪುದು ತಡೆಯದೆ ಬೇಗಂ' ಎಂದು ಬರೆದಿದ್ದ ಪತ್ರದ ಒಕ್ಕಣೆಯನ್ನು ಓದಿಕೊಂಡು ಪ್ರಯಾಣಕ್ಕೆ ಸಿದ್ಧನಾದನು. ಪ್ರತಾಪ ಮಹಾರಾಜ ಮಗಳು ಅಳಿಯನಿಗೆ ಬೇಕಾದ ಉಡುಗೊರೆಗಳನ್ನು ಕೊಟ್ಟು ಮಗಳಿಗೆ ತಕ್ಕ ಬುದ್ಧಿವಾದವನ್ನು ಹೇಳಿ ಕಳಿಸಿಕೊಟ್ಟನು. ರಾಜಧಾನಿಯನ್ನು ತಲಪುತ್ತಲೇ ಧರ್ಮನಾಥನ ತಂದೆ ತಾಯಿಗಳೂ ಪುರಜನರೂ ಅತ್ಯಂತಸಂಭ್ರಮದಿಂದ ನೂತನ ದಂಪತಿಗಳನ್ನು ಎದುರುಗೊಂಡರು. ಆ ದಂಪತಿಗಳು ಸಂತೋಷದಿಂದ ಕಾಲವನ್ನು ಕಳೆಯುತ್ತಿದ್ದರು.

ಹೀಗಿರಲು ಒಂದುದಿನ ಮಹಾಸೇನ ಮಹಾರಾಜನು ಸಭೆಯಲ್ಲಿದ್ದಾಗ ಕರಗುತ್ತಿದ್ದ ಕಾಮನಬಿಲ್ಲನ್ನು ಕಂಡನು. ಅದನ್ನು ನೋಡುತ್ತಿದ್ದಂತೆಯೇ ಆತನಿಗೆ ಸಂಸಾರದ

ಎಂದು ಹೇಳಿದನು. ಅದಕ್ಕೆ ಆಕೆ ಒಡಂಬಡಲು 'ವನವಿಹರಣ ಕೇಳೀವಿನೋದ ಯಾತ್ರಾ ನಿಮಿತ್ತ'ವಾಗಿ ಆನಂದಭೇರಿಯನ್ನು ಹೊಡೆಸಿ ದಂಪತಿಗಳು ಪಟ್ಟದಾನೆಯನ್ನು ಏರಿ ಸಪರಿವಾರ ಸಮೇತರಾಗಿ ಪ್ರಯಾಣವನ್ನು ಮಾಡಿದರು. ವನದಲ್ಲಿ ಅಸಂಖ್ಯಾತ ಸ್ತ್ರೀಯರು ಜಲಕೇಳಿಯನ್ನಾಡುತ್ತಿದ್ದುದನ್ನು ಕಂಡ ಧರ್ಮನಾಥ ಮತ್ತು ಶೃಂಗಾರವತಿದೇವಿಯರು ಈ ವನಜಲಕೇಳೀ ವಿನೋದಗಳನ್ನು ಮುಗಿಸಿ ರಾಜಧಾನಿಗೆ ಹಿಂತಿರುಗಿದರು.

ಧರ್ಮನಾಥನು ರಾತ್ರಿವಿಹಾರಕೇಳಿಗೆ ನಾಲ್ಕುಜನ ಮುಖ್ಯನಾಯಕರನ್ನು ಕೂಡಿಕೊಂಡು ಹೋಗಿ ಸೂಳೆಗೇರಿಯಲ್ಲೆಲ್ಲ ಸುತ್ತಾಡಿಕೊಂಡು ಅರಮನೆಗೆ ಹಿಂತಿರುಗುವನು. ಆಮೇಲೆ ಧರ್ಮನಾಥ ಶೃಂಗಾರವತಿದೇವಿಯರು ಇಷ್ಟವಿಷಯಭೋಗೋಪಭೋಗಗಳನ್ನು ಅನುಭವಿಸುತ್ತ ಅನ್ಯೋನ್ಯಾಸಕ್ತಚಿತ್ತರಾಗಿ ಅನೇಕ ದಿನಗಳನ್ನು ನಿಮಿಷಮಾತ್ರಗಳಾಗಿ ಕಳೆಯುತ್ತಿದ್ದರು.

ಧರ್ಮನಾಥ ಮಹಾರಾಜನು ನ್ಯಾಯದಿಂದಲೂ ಧರ್ಮದಿಂದಲೂ 'ಅರವಿಂದಂ ಜಲದಲ್ಲಿ ಪುಟ್ಟಿ ಜಲಮಂ ತಾಂ ಮುಟ್ಟದಿರ್ಪಂದದಿಂ ರಾಜ್ಯರಕ್ಷಣಂಗೆಯ್ಯುತ್ತುಂ' ಇದ್ದನು. ಹೀಗಿರುವಲ್ಲಿ ಒಮ್ಮೆ ಆತನು ಸಭೆಯಲ್ಲಿದ್ದಾಗ ಪ್ರಳಯಕಾಲದ ಮಹಾಗ್ನಿಯೋ ಎಂಬಂತೆ ಒಂದು ಉಲ್ಕಾಪಾತವಾಯಿತು. ಸಭಾಸದರು ಅದರ ಕಾರಣವನ್ನು ಕೇಳಿದರು. ಅದಕ್ಕೆ ಧರ್ಮನಾಥ :

ಒರ್ವಂ ಜ್ಯೋತಿಷ್ಕದೇವಂ ವಿಮಳಚರಿತನೊಬಂ ಸುರಾಧೀಶನಾಜ್ಞಾ
ಪೂರ್ವಂ ಬಂದಂಬರಸ್ಥಾನದೊಳಿರುತುಮಮಂ ನೋಡಿ ಕಂಡಿಲ್ಲಿ ನಮ್ಮಂ
ಸರ್ವೇಶಂ ಬೇಸಱಿಂ ಸಂಸೃತಿ ವಿಷಯಸುಖಕ್ಕಿನ್ನುಮೆಂದೆಮ್ಮ ಚಿತ್ತ
ಕ್ಕುರ್ವೀವೈರಾಗ್ಯಮಂ ಪುಟ್ಟಿಸುವ ಬಗೆಯಿಂದಿಂತುಟಂ ತೋಱಿಪೋದಂ

(೧೬-೩೨)

ಎಂದು ಹೇಳಿದನು. ಅಶಾಶ್ವತವಾದ ಈ ಮಾನವಜನ್ಮವನ್ನು ನಂಬದೆ ಶಾಶ್ವತವಾದ ಮೋಕ್ಷವನ್ನು ಸಾಧಿಸುವುದು ಶ್ರೇಯಸ್ಕರ. ಅದಕ್ಕಾಗಿ ಉಗ್ರತಪವನ್ನು ಮಾಡುವುದಾಗಿ :

ಕರೆಯ ಮರದಂತೆ ಬೀಳ್ವುದು
ಶರೀರಮಿದು ಮಂಜಿನಂತೆ ಪರೆವುದು ಭೋಗಂ
ಸುರಚಾಪದಂತೆ ಕಿಡುವುದು
ಸಿರಿ ಚಿರಮಾಗಿರ್ಪುದಾವುದೊ ಮನುಜಗಗಂ (೧೬-೩೬)

ಈ ರೀತಿ ನಿರ್ಧರಿಸಿದನು. ಧರ್ಮನಾಥ ವೈರಾಗ್ಯವರ್ಣನಾದುದನ್ನು ಆತ್ತ ಅಮರ್ತ್ಯ ಯೋಗಿಪತಿಗಳು ಬ್ರಹ್ಮಕಲ್ಪಾಗ್ರದಿಂದ ಬಂದು ನಾನಾರೀತಿಯಾಗಿ ಹೊಗಳಿದರು. ದೇವೇಂದ್ರನು ಚತುರ್ನಿಕಾಯ ದೇವರ್ಕಳೊಡನೆ ಬಂದು ಆ ಪರಮನನ್ನು ಪರಿನಿಷ್ಕ್ರ ಮಣಾಭಿಷೇಕ ಮಂಟಪಕ್ಕೆ ಕರೆತಂದು ಗಂಗಾಸಿಂಧುತೀರ್ಥಗಳಿಂದ ಅಭಿಷೇಕ ಮಾಡಿದನು.

ಧರ್ಮನಾಥ ತನ್ನ ಮಗನಿಗೆ ಪಟ್ಟವನ್ನು ಕಟ್ಟಿ ಪುರಜನರನ್ನೂ ತಾಯಿಯನ್ನೂ ಸಂತೈಸಿ ಚಂದ್ರಪ್ರಭವೆಂಬ ಪಲ್ಲಕ್ಕಿಯನ್ನು ಏರಿ ದೀಕ್ಷಾಮಂಟಪಕ್ಕೆ ಬಂದನು. ಅಲ್ಲಿ ಇಂದುಕಾಂತ ಶಿಲಾಪಟ್ಟಕದ ಮೇಲೆ ಪೂರ್ವಾಭಿಮುಖನಾಗಿ ಕುಳಿತುಕೊಂಡನು. ತಾನು ಧರಿಸಿದ್ದ ಆಭರಣಗಳನ್ನೆಲ್ಲ ವಿಸರ್ಜಿಸಿ ಕುಂತಳವನ್ನು ಪರಿದು ಈಡಾಡಿದನು. ಹೀಗೆ ಬಾಹ್ಯಾಭ್ಯಂತರ ಪರಿಗ್ರಹಗಳನ್ನು ಕಳೆದು ಮೋಕ್ಷಗಾಮಿಯಾದ ಧರ್ಮನಾಥನನ್ನು ಸಕಲದಿವಿಜ ದನುಜ ಮನುಜರೆಲ್ಲ ಜಯಕಾರ ಮಾಡಿ ಸ್ತುತಿಸಿದರು. ಆಗ ಧರ್ಮನಾಥ :

ಶ್ರೀಯಂ ಪರಿಹರಿಸಿ ತಪಃ
ಶ್ರೀಯಂ ಮಾಘಾರ್ಜುನತ್ರಯೋದಶಿಯಪರಾ
ಹ್ಣಾಯತ್ತ್ರ ಪುಷ್ಯತಾರೆಯೊ
ಳೋಯುವರದಿಂ ತಾಳ್ದನಖಿಳಜನವಿನುತಪದಂ (೧೬–೨೦)

ಈ ರೀತಿ ಮೋಕ್ಷವನ್ನು ಪಡೆದನು. ಆಮೇಲೆ ಪಾರಣೆಯ ನಿಮಿತ್ತವಾಗಿ ಪಾಟಲೀಪುತ್ರಕ್ಕೆ ಬಂದನು. ಆ ಊರಿನ ರಾಜ ಆತನನ್ನು ನಾನಾ ರೀತಿ ಪೂಜಿಸಿ ಸತ್ಕರಿಸಿ ಬಗೆಬಗೆಯ ಭಕ್ಷ್ಯಭೋಜನಗಳಿಂದ ಪಾರಣೆಯನ್ನು ಮಾಡಿಸಿದನು. ಆಗ ಪಂಚಾಶ್ಚರ್ಯಗಳಾದುವು. ಆದಾದಮೇಲೆ ಧರ್ಮನಾಥ ಪುಣ್ಯಾರಣ್ಯವನ್ನು ಹೊಕ್ಕು 'ನಿರ್ಮಳ ಪ್ರಾಶುಕ ಪ್ರದೇಶ ಪ್ರಸಿದ್ಧ ಶುದ್ಧಸ್ಫಟಿಕಶಿಲಾತಳಾಗ್ರದೊಳ್ ಯೋಗನಿರೋಧಂಗೆಯ್ದು ಕಾಯೋತ್ಸರ್ಗ ಪ್ರತಿಮಾನುಯೋಗ ಯೋಗನಿಯೋಗದೊಳ್' ಇದ್ದನು. ಕ್ರಮೇಣ ತಪಸ್ಸಿನಿಂದ ದೇಹವನ್ನು ಕ್ಷೀಣಿಸಿದನು. ಬುದ್ಧಿರಿದ್ಧಿ ಕ್ರಿಯಾರಿದ್ಧಿ ವಿಕ್ರಿಯಾರ್ಧಿ ತಪೋರಿದ್ಧಿ ಬಲರಿದ್ಧಿ ರಸರಿದ್ಧಿ ಕ್ಷೀಣರಿದ್ಧಿಯನ್ನು ಅನುಭವಿಸಿದನು. ಚತುಃಕಷಾಯಗಳನ್ನು ದರ್ಶನಮೋಹನೀಯತ್ರಯಗಳನ್ನು ಹದಿನಾರು ಪ್ರಕೃತಿಗಳನ್ನು ಕಳೆದೊಡನೆಯೇ :

ಉದಯಿಸಿದುದು ಕೇವಳಬೋ
ಧದ ವಿಭವಂ ಮಾಘಮಾಸ ಪೌರ್ಣಮಿಯಪರಾ
ಹ್ಣದೊಳದುವೆ ಪುಣ್ಯನಕ್ಷ
ತ್ರದ ಸಿರಿ ಶುಭಲಗ್ನದಲ್ಲಿ ಗುರುವಾರದೊಳಂ (೧೬–೧೩೮)

ಹೀಗೆ ಕೇವಳಜ್ಞಾನ ಉಂಟಾಯಿತು. ದೇವೇಂದ್ರನು ಕುಬೇರನನ್ನು ಕರೆಯಿಸಿ ಸಮವಸರಣಮಂಟಪವನ್ನು ವಿರಚಿಸಿದನು. ಧರ್ಮನಾಥನು ಸಮವಸರಣಮಂಟಪವನ್ನು ಅಲಂಕರಿಸಿದನು. ಆಗ ದೇವೇಂದ್ರನೇ ಮೊದಲಾದ ಅಸಂಖ್ಯಾತ ದೇವತೆಗಳು ಅಲ್ಲಿ ಸೇರಿ ಧರ್ಮನಾಥನನ್ನು ಪೂಜಿಸಿ ಸ್ತುತಿಸಿದರು. ಧರ್ಮನಾಥ ಅಲ್ಲಿ ನೆರೆದಿದ್ದವರಿಗೆಲ್ಲ ಆಸ್ರವತತ್ತ್ವದ ರೀತಿಯನ್ನು ಬೋಧಿಸಿದನು. ಆಮೇಲೆ ಸಮವಸರಣ ಮಂಟಪದಲ್ಲಿ ವಿಹರಿಸುತ್ತ ಆರ್ಯಾಖಂಡವನ್ನೆಲ್ಲ ಸಂಚರಿಸಿ ತನ್ನ ನಿರ್ವಾಣಸ್ಥಾನಕ್ಕೆ ಆಗಮಿಸಿದನು.

ಪಾತ್ರಮುಂಬಡೆದು ವಿಂಶತಿಯುತಿಪ್ರಪಂಚದೊಳ್ ನೆಱೆದು ಮಧ್ಯಮ ಧೈವತ ಷಡ್ಜ ಪಂಚಮ ನಿಷಾದ ಋಷಭ ಗಾಂಧಾರಗಳೆಂಬ ಸಪ್ತ ಸ್ವರಸಂಯೋಗಸಂಜಾತ ದೇಶೀಯ ರಾಗಂಗಳಂ ಸ್ವರಭಾಷಾವಿದರಿಂದಪ್ಪುದ ಮತ್ತೆ ಪೆಱವು ರಾಗಂಗಳಂ ವಲಿ ಹಸಣೆ ತಾಯಂಗಳಿಂದಾಳಾಪನಂಗೆಯ್ದು (೯–೧೭)

* * * *

ಜಗಃಝೇಂ ಝೇಂ ಝಂ ಮೃಣಂ ಝಂ ಝಾಮೃಣ ಮೃಣಮಣಂ ಝಂಮೃಣಂ
ಝಂ ಮೃಣಂಣಂ
ತಗಿತತ್ಥೋ ಥಗ್ಗಿಣತ್ಥೋ ಥಗಿಣ ಗಿಣಗಿಣಂ ಥಗ್ಗಿಣಂ ಥಗ್ಗಿಣತ್ಥೋ
ಧಿಗಿ ಧಿಂ ಧಿಂ ಧಿಂ ಧಿಮಿಕಿಟ್ಟಂ ಧಿಮಿಧಿಮಿಧಿಮಿಕುಂ ಧಿಂಧಿಮಿಕಿಟ್ಟಂ ಧಿಮಿಕ್ಕಿಂ
ಪೊಗೆಸಲ್ಕಂ ನಾಟ್ಯರಂಗಸ್ಥಳಿಯೊಳಮರಿಯರ್ ಬಾಜಿಸುತ್ತಿರ್ದರಾದಂ (೯–೭)

(೨) ಮದ್ಯಪಾನಕ್ಕೆ:

ಸಿರಿಸಿಂಬಿ ತಂಪುಗಂ ಬ
ಬ್ಬರಿ ಗಂಗಾಸಾಗರಂ ಸುರಾಳಂ ಸೋಮಂ
ವರವಾಣಿ ಮಾಳವೋದರಿ
ಮರವಟ್ಟಿಗೆಯೆಂಬ ಕೆಲವು ಪೆಸರಿನ ಕಳ್ಳಂ (೧೦–೧೨೬)

(೩) ಮಲ್ಲಯುದ್ಧಕ್ಕೆ:

ಬಿಸಿನೆತ್ತರ್ ಪೊಱಸೂಸುವಂತೊಡನೆ ಮೂಗುಂ ಬಾಯುಮಂ ಮುಚ್ಚಿ ಪ
ಟ್ಟಿಸದಿಂದಂ ಪ್ರತಿಮಲ್ಲನಂ ಕೆಡಹುವೆಂ ಸಂಸ್ಥಾನದೊಳ್ ಬಲ್ಪಿದೋ
ಱಸಲಾನಾಳ್ದುದೆ ಕತ್ತರಂ ಕರಡಂ ಸೀವಟ್ಟಣಂ ಘೊಕ್ಕರಂ
ಪಸರಂ ಸಂದಣಿವಟ್ಟಿ ಪೊಟ್ಟು ಮುಹಡಂ ಚೌವಟ್ಟಿ ಪಿಟ್ಟಾಳಸಂ (೧೬–೧೯)

(೪) ಅಶ್ವಶಾಸ್ತ್ರಕ್ಕೆ:

ಬೀರದೊಳಾನೆ ಬಲ್ಪುವಡೆದು ಪ್ರತಿದಂತಿಯ ದಂತಮೂಲಮಂ
ಬೇರೊಡಗೀಳ್ವ ಸಾಹಸದೊಳಾನೆ ಕದರ್ಥಿತ ವೈರಿಸೈನ್ಯಸಂ
ಹಾರದೊಳಾನೆ ಮತ್ತೆನಗೆ ಮಾರ್ಮಲೆವಾನೆಗಳಿಲ್ಲಮೆಂದು ಸಂ
ಚಾರಿಸುತಂತಿರಾನೆ ಭಂಕೆಯ್ಯುಸೆ ತೂಗುತುಮಿರ್ದುದಾಕ್ಷಣಂ (೧೬–೨೦)

ಇವೇ ಮೊದಲಾದುವು ಬಾಹುಬಲಿ ಪಂಡಿತನಿಗೆ ಇರುವ ಕೆಲವಾರು ವಿಷಯಗಳ ಪರಿಣತಿಯನ್ನು ಸಾರುತ್ತಿವೆ. ಕೆಲವನ್ನು ಮಾತ್ರ ಮೇಲೆ ಉದಾಹರಿಸಲಾಗಿದೆ.

ಚಂಪೂಕಾವ್ಯಗಳ ಕೊನೆಗಾಲದಲ್ಲಿ ಕಂಡುಬರುವ ಬಾಹುಬಲಿಪಂಡಿತ ಛಂದೋ ನಿಯಮದಲ್ಲಿ ಸ್ವಚ್ಛಂದಪ್ರವೃತ್ತಿಯನ್ನು ಅನುಸರಿಸಿರುವುದು ಈ ಕಾವ್ಯದ ಉದ್ದಕ್ಕೂ ಕಂಡುಬರುತ್ತದೆ. ಕಂದಪದ್ಯದ ೪+೪ ಮಾತ್ರಾಗಣಗಳಿಗೆ ಬದಲಾಗಿ ೩+೫, ೫+೩ ಮಾತ್ರಾಗಣಗಳನ್ನು ಬಳಸಿರುವುದಕ್ಕೆ ಬಹಳಷ್ಟು ನಿದರ್ಶನಗಳಿವೆ. ಉದಾಹರಣೆಗಾಗಿ ಕೆಲವು ಪದ್ಯಗಳನ್ನು ನೋಡಬಹುದು:

ಕೇಶಪಾಶಂಗಳಂ ಧರ
ಣೀಶಂ ಪಱಿದಿಕ್ಕಿದಂ ಮುನೀಶ್ವರಚರಣಾ
ಭಾಸದೊಳೆ ಮೋಹಸೀಯ ಕು
ಪಾಶಂಗಳನೆಯ್ದೆ ಪಱಿದು ಬೀಸಾಡುವವೊಲ್ (೫–೭೮)

ಗಮನ ಸಂಸೂಚಿಭೇರೀ
ಸಮಿತಿಗಳೊರ್ಮೊದಲೆ ಮೊಳಗೆ ದೆಸೆಯೆಲ್ಲಂ ಶ
ಬ್ದಮಯಮಾಗಿರ್ದುದದೈ
ತಮನಾಶ್ರಯಿಸಿದತ್ತದತ್ತದೆಂಬೀ ತೆಱದಿಂ (೯–೨೩)

ಹೀಗೆಯೇ ೧-೨೫, ೧-೧೭೫, ೬-೪೩, ೮-೮೨, ೧೧-೭೦, ೧೬-೧೨೦ ಇವೇ ಮೊದ ಲಾದ ಪದ್ಯಗಳಲ್ಲಿ ಮೇಲಿನ ಕ್ರಮವನ್ನೇ ಅನುಸರಿಸಲಾಗಿದೆ. ಚಂಪೂಕಾವ್ಯಗಳಲ್ಲಿ ಸರ್ವೇ ಸಾಮಾನ್ಯವಾಗಿ ಎಲ್ಲೂ ಪ್ರಾಸೋಲ್ಲಂಘನೆಯ ಪ್ರಸಂಗಗಳು ಕಂಡುಬರುವುದಿಲ್ಲ. ಅದಕ್ಕೆ ಬಾಹುಬಲಿಪಂಡಿತನ ಧರ್ಮನಾಥಪುರಾಣ ಒಂದು ಅಪವಾದದಂತಿದೆ. ಉದಾಹರಣೆ ಗಾಗಿ ಈ ಕೆಲವು ಪದ್ಯಗಳನ್ನು ನೋಡಬಹುದು :

ಪಾಂಡುಕವನವನಜವನಾ
ಡಂಬರದಿಂ ಬಂದ ಮಂದಮರುತಂ ಕಾಮವಿ
ಡಂಬನಮಂಡಿತನಂತಿರ
ಖಂಡಂ ನೆಱೆಬೀಸಿದತ್ತು ಮಂದರಗತಿಯಿಂ (೮–೧೯)

ಅಡಸಿರ್ದ ಕೊಂಬುಗೋಲಂ
ಬುಗುಳೆಡೆಯೊಳ್ಕೂಡೆ ನಿಲಿಸಿ ತೆತ್ತಿಸಿ ಸುತ್ತಂ
ಮಡಗಿಟ್ಟರ್ ಸತ್ತಿಗೆಗಳ
ಗಡಣಮನನೆಯ್ದೆ ಚಂದ್ರಮಂಡಳಿಗಳವೊಲ್ (೧೪–೬೩)

ಪುಲಿಗಳ್ ಪುಲ್ಲೆಗಳೊಂದುಗೂಡಿ ಕರಿಗಳ್ ಸಿಂಹಂಗಳೊಂದಾಗಿ ಮುಂ
ಗುಱಿಗಳ್ ಪಾವುಗಳುಂ ಕಱಂ ಬೆರಸಿ ಕೋಣಂಗಳ್ ತುರಂಗಂಗಳಾ
ನಳಿಗಳ್ ಸಂಗತಿವೆತ್ತು ಜಾತಿಜನಿತಪ್ರದ್ವೇಷಮಂ ಬಿಟ್ಟು ತ
ಮ್ಮೊಲವಿಂದಿರ್ದುವು ತತ್ತಪಸ್ವಿಯ ಸಮೀಪಸ್ಥಾನದೊಳ್ ಸಂತತಮುಂ (೧೬-೯೯)

ಬಾಹುಬಲಿಪಂಡಿತ ಪ್ರಾಚೀನ ಸಂಪ್ರದಾಯದ ಮಾರ್ಗದಲ್ಲೇ ನಡೆದಿದ್ದರೂ ಹಲವಾರು ಸಂದರ್ಭಗಳಲ್ಲಿ ತನ್ನ ಸ್ವಂತಿಕೆಯನ್ನೂ ಪ್ರತಿಭೆಯನ್ನೂ ಮೆರೆದಿದ್ದಾನೆ. ಈತನ ವರ್ಣನೆಗಳು ಸ್ವಾರಸ್ಯಕರವಷ್ಟೇ ಅಲ್ಲ ನಾವೀನ್ಯದಿಂದಲೂ ಕೂಡಿವೆ. ಅದಕ್ಕೆ ಮುಂದಿನ ಕೆಲವು ನಿದರ್ಶನಗಳನ್ನು ನೋಡಬಹುದಾಗಿದೆ.

೧. ಜಿನಜನನಿಯಾದ ಸುವ್ರತಾಮಹಾದೇವಿಯನ್ನು ಕವಿ ಈ ರೀತಿ ವರ್ಣಿಸಿದ್ದಾನೆ.

ಚಿತ್ತಭವಂ ತನ್ನಾಜ್ಞೆಯ
ನೊತ್ತಮಿಸಲ್ಬಾರದೆಂದು ಮುದ್ರೆಯನಿಟ್ಟಂ
ತುತ್ತಮೆಯಾ ಮೂಗಿನೊಳ್ ಮಿಗೆ
ಮುತ್ತಿನ ಮೂಕುತಿಯನಿಕ್ಕಿದಳ್ ಕಡುನಲವಿಂ (೬-೭೫)

ವರ ಕಸ್ತೂರೀತಿಲಕಮ
ನರಸಿಯು ಕಡುಚೆಲ್ವ ನೊಸಲೊಳಿಟ್ಟಳ್ ಸುರಸಾಂ
ದರಿಯೊರ್ವಳ್ ನಗೆಮೊಗಮೆಂ
ಬುರುಚಂದ್ರಮನಲ್ಲಿ ಮೆಱೆವ ಕಱೆಯೆಂಬಿನೆಗಂ (೬-೭೮)

೨. ಜಿನಶಿಶುವನ್ನು ದೇವೇಂದ್ರನ ಆಜ್ಞೆಯಂತೆ ಶಚೀದೇವಿ ಎತ್ತಿಕೊಂಡು ಹೋದಾಗ ಕವಿ ಕೊಡುವ ಚಿತ್ರಗಳು ಇವು:

ಕ್ಷೀರೋದಲಹರಿಯಿಂದಂ
ತಾರೇಶನನೊಯ್ವ ಗಗನಲಕ್ಷ್ಮಿಯ ತೆಱದಿಂ
ದಾ ರಮ್ಯತಳ್ಪತಳದಿಂ
ದಾ ರಮಣಿ ಜಿನೇಶಶಿಶುವನೊಯ್ದಳ್ ನಲವಿಂ (೭-೮೩)

ಚಿಂತಿತ ಫಲಪ್ರದಾಯಕ
ಚಿಂತಾಮಣಿಯಂ ಸುಪುಣ್ಯದೇವತೆ ತಂದೀ
ವಂತೆ ಜಿನಶಿಶುವನಿತ್ತಳ್
ಸಂತಸದಿಂ ದೇವಿ ಸುರಪಕರತಳಪುಟದೊಳ್ (೭-೮೫)

೩. ಶೃಂಗಾರವತಿದೇವಿಯ ಸೌಂದರ್ಯವನ್ನೂ ಅವಳು ಸ್ವಯಂವರಮಂಟಪ ವನ್ನು ರೀತಿಯಿಂದ ಪ್ರವೇಶಿಸಿದ ಸನ್ನಿವೇಶವನ್ನೂ ಕವಿ ಸ್ವಾರಸ್ಯಕರವಾಗಿ ವರ್ಣಿಸಿದ್ದಾನೆ:

ಎಲ್ಲಿಯದೀ ಸ್ತ್ರೀರತ್ನಮಿ
ದೆಲ್ಲಿಯನೀ ಚರಮದೇಹಧಾರಿಕುಮಾರಂ
ದುರ್ಲಭಮಿ ಸಂಬಂಧಂ
ತಲ್ಲಜಪುಣ್ಯಂಗೆ ಲೋಕದಲ್ಲಿರದುಂಟೇ (೧೦-೧೨)

ಉರ್ಬಿದ ಗರ್ವದಿಂದೆ ಮದನಂ ಗೊಲಿಗೇಱಿಸಿ ಕರ್ಬುವಿಲ್ಲುಮಂ
ಕೊರ್ಬಿದ ಪೂವಿನಂಬುಗಳನಲ್ಲಿ ತೊಡರ್ಚಿ ವಿಶೇಷ ಶೌರ್ಯದಿಂ
ಬೊಬ್ಬಿಱಿದಾರ್ದು ಮುಂದೆ ನಡೆಯಲ್ ಮುದದಿಂದಮೆ ಬಂದು ಪೊಕ್ಕಳಾ
ಸರ್ವನುತ ಸ್ವಯಂವರದ ಚಿತ್ರಿತ ಗೋಪುರದಂತರಾಳಮಂ (೧೧-೭೬)

ಆ ರಾಜಕುಮಾರಿಯನ್ನು ಕಂಡ ರಾಜಕುಮಾರರಿಗಾದ ಮನ್ಮಥಬಾಧೆ ಇದು:

ತನುಮಂ ಜೇಡಿ ಸದಂತರಂಗದೊಳೆ ನೋವಂ ಮಾಳ್ಪ ವೈಚಿತ್ರ್ಯಮೋ
ಹನಬಾಣಂ ಪಿಡಿವಾಗಳೊಂದು ತುಡುವಾಗಳ್ ಮೂಱು ಪೋಪಾಗಳೊ
ಯ್ಯನೆ ಸಾಹಸ್ರಕಮೆಯ್ದೆ ತಾಗುವೆಡೆಯೊಳ್ ಲಕ್ಷಂ ವ್ಯಥಾಪಾದನಾ
ನನದೊಳ್ ಕೋಟಿ ದಲಾಗಿ ಭೂಪಸುತರಂ ತೊಟ್ಟೆಚ್ಚನಾ ಮನ್ಮಥಂ (೧೧-೯೭)

೪. ಪ್ರತಾಪರಾಜನು ತನ್ನ ಮಗಳಾದ ಶೃಂಗಾರವತಿದೇವಿಯನ್ನು ಗಂಡನ ಮನೆಗೆ ಕಳಿಸುವಾಗ ಆಕೆಗೆ ಹೇಳುವ ಬುದ್ಧಿವಾದವು ಕಣ್ವರು ಶಕುಂತಲೆಗೆ ಹೇಳಿದ ಬುದ್ಧಿ ವಾದವನ್ನು ನೆನಪಿಗೆ ತರುವಂತಿದೆ:

ಮಕ್ಕಳ ಮಾಳ್ಕೆಯಿಂದಿರದೆ ನಿನ್ನಯ ಗಂಡನ ಚಿತ್ತವೃತ್ತಿಗಂ
ತಕ್ಕವೊಲಂಜಿ ಬೆಚ್ಚಿ ಬೆಸಕೆಯ್ವುದು ಮಾವನುಮತ್ತೆಯುಂ ಪೊಗ
ಳ್ದಕ್ಕುಮೆನಲ್ಕೆ ವರ್ತಿಸುವುದುತ್ತಮೆ ನಿನ್ನೊಡವಂದರೆಲ್ಲರಂ
ಮಿಕ್ಕೊಲವಿಂದೆ ಮನ್ನಿಸುವುದೇಳಿಸದಿರ್ಪುದು ಭಾವನೈದಿರಂ (೧೨-೯)

ಬುದ್ಧಿವತಿಯಾಗಿ ನಡೆವುದು
ಸದ್ಧರ್ಮಮನೆಯ್ದೆ ಮಾಳ್ಪುದೆಮ್ಮಯ ಚಿತ್ತ
ಕ್ಕುದ್ಧುರ ಸಂತೋಷಮನಿ
ತ್ತುದ್ಧರಿಪುದು ನಿನ್ನ ಕುಲದ ಪೆಂಪಂ ಮಗಳೇ (೧೨-೧೦)

೫. ಮಹಾಸೇನಮಹಾರಾಜ ವೈರಾಗ್ಯವನ್ನು ತಾಳಿದ ಸಂದರ್ಭದಲ್ಲಿ ಬರುವ:

ಧನಮುಂ ಜವ್ವನಮುಂ ಸುಖಾನುಭವಮುಂ ಸಂಪತ್ತಿಯುಂ ಮೂರ್ತಿಯುಂ
ಮನುಜರ್ಗೆಯ್ದುವು ನೋಡೆ ನೋಡೆ ಕಿಡುಗಿಂತಿಂತೆಂದು ತೋರ್ಪಂದದಿಂ
ಘನದೇವೇಂದ್ರ ಶರಾಸನಂ ನೃಪತಿ ನೋಡಲ್ ನೋಡಲಾ ವ್ಯೋಮದ
ಲ್ಲಿನಿತುಂ ನಿಲ್ಲದೆ ಪಾಱಿಪೋಗಿ ಬಯಲಾಗಿರ್ದತ್ತು ನಿಶ್ಶೋಭಕಂ (೧೨-೬೧)

ಪರಿಕಿಸೆ ರಾಜ್ಯಲಕ್ಷ್ಮಿ ಕಡುಕಷ್ಟೆ ಸಹೋದರರಲ್ಲಿ ಮಿತ್ರರೊಳ್
ಬೆರಸಿದ ತಂದೆಮಕ್ಕಳೊಳಗಿಕ್ಕಿ ಪರಸ್ಪರವೈರಭಾವಮಂ
ನೆರೆಯುಸಿಯುಂ ವಿನಾಶದೊಳಮೆಲ್ಲಿಯು ನಿಲ್ಲದೆ ಸುತ್ತುತಿರ್ಪಳಾ
ಮರುಳಿಗೆ ಕೂರ್ಪ ಭೂಮಿಪರನೆಗ್ಗರೊಳಗ್ಗಳನಾಗದಿರ್ಪನೇ (೧೨-೬೯)

ಸಿರಿ ಸುರಚಾಪದಂತೆ ಕರಿಗಳ್ ಮುಗಿಲೊಡ್ಡುಗಳಂತೆ ವಾಜಿಗಳ್
ನೆರವಿಯ ಮಂಜಿನಂತೆ ಮಿಗೆಪಾಱುವ ಪಕ್ಕಿಗಳಂತೆ ಬಂಟರುಂ
ಬೆರಸಿದ ನಂಟರುಂ ಮಹಿಮೆಯುಂ ಕಡುಗಾಳಿಯವೊಲ್ ವಿಚಾರಿಸ
ಲ್ಕುರುತರರಾಜ್ಯಸಂಪದಮಿದಭ್ರದವೊಲ್ ಬಯಲಾಗಿ ತೋಱುಗುಂ (೧೨-೭೦)

ಈ ಮೇಲಿನ ಪದ್ಯಗಳಿಗೆ ಸದೃಶವಾದ ಪದ್ಯಗಳು ಪಂಪ, ರನ್ನ, ನಾಗಚಂದ್ರ, ನಯಸೇನ, ಜನ್ನ ಇವರೇ ಮೊದಲಾದವರ ಕಾವ್ಯಗಳಲ್ಲಿ ಕಂಡುಬರುತ್ತವೆ. ಬಾಹುಬಲಿಪಂಡಿತ ಪ್ರಾಚೀನಕಾವ್ಯಗಳನ್ನು ಮಿಗಿಲಾಗಿ ವ್ಯಾಸಂಗ ಮಾಡಿದ್ದನೆಂಬುದಕ್ಕೆ ಇವು ಜೀವಂತ ನಿದರ್ಶನಗಳೆನಿಸಿವೆ.

ಬಾಹುಬಲಿಪಂಡಿತನಿಗೆ ಅಪಾರವಾದ ಲೋಕಾನುಭವವು ಇದ್ದುದಕ್ಕೆ ಈತನು ತನ್ನ ಕಾವ್ಯದಲ್ಲಿ ಬಳಸಿರುವ ಸೂಕ್ತಿಗಳೂ ಗಾದೆಗಳೂ ನುಡಿಗಟ್ಟುಗಳೂ ನಿದರ್ಶನವಾಗಿವೆ. ಮದ್ಯಪಾನ ಪ್ರಕರಣದಲ್ಲಿ ಕವಿ ಕಂಡ ಒಂದು ನೈಜ ಚಿತ್ರ ಇಂತಿದೆ:

ಚಟ್ಟಳೆಯಲ್ಲಿ ತೀವಿದ ಸುರಾರಸಮಂ ಕುಡಿಯುತ್ತುಮಿರ್ದ ನೇ
ರ್ಪಟ್ಟನಿಯಳ್ಗೆ ನೀಡಿ ಪಿಪಿಪಿಪ್ರಿಯ ಪಿಪ್ರಿಯಬೇಡವೇಡಿದಂ
ಬಿಟ್ಟುಮಮೋಹದಿಂ ಬಬಬಬಾಯೊಳೆ ಮುಕ್ಕುಳಿಸಿರ್ದ ಮದ್ಯಮಂ
ಕೊಟ್ಟೆನಗಾಗಿನಾ ತಣಿವನೆಂಬ ತೊದಲ್ನುಡಿಯಿಂದಮೊಪ್ಪಿದಳ್ (೧೦-೧೩೩)

......ನರ್ತಿಸುತ್ತುಂ ತಾರೆಲ್ಪ್ಯೆಯ ಹಾಡುತ್ತುಂ (೧೦-೧೪೦ ವ)

ತಾರೆಲ್ಪ್ಯೆಯ ಹಾಡು ಎಂಬ ಸೂಕ್ತಿ ಅಂದಿನಿಂದ ಇಂದಿನವರೆಗೂ ಜೀವಂತವಾಗಿ ಉಳಿದು ಕೊಂಡು ಬಂದು ಇಂದು 'ತಾರಸ್ಮಯ್ಯ' ಎಂದು ಪ್ರಚಲಿತವಾಗಿದೆ. ಹಾಗೆಯೇ "ಕೂಡಿ

ದಿಙ್ಮುಖಂಗಳ್ ಕಲಿಪ್ರಸಾದಮೆ ಕೊಂಡಪ್ಪ ಶಾಸನೊಂದೆಂದಾಡುವ ಗಾದೆ" (೧೩-೧೯) "ಕೇಡುಗಾಲಂ ಬಂದುದಕ್ಕುಂ" (೧೩-೨೩); "ವಿನಾಶಕಾಲೇ ವಿಪರೀತಬುದ್ಧಿ" (೧೩-೨೩ ವ) ಇವೇ ಮೊದಲಾದ ನುಡಿಗಟ್ಟುಗಳನ್ನು ಬಳಸಿದ್ದಾನೆ.

ಕನ್ನಡ ಸಾಹಿತ್ಯದಲ್ಲಿ ಧರ್ಮತೀರ್ಥಂಕರರನ್ನು ಕುರಿತು ಸ್ವತಂತ್ರ ಕೃತಿರಚನೆ ಮಾಡಿದವರಲ್ಲಿ ಬಾಹುಬಲಿಪಂಡಿತನೇ ಮೊದಲಿಗನೆಂದು ಈ ಹಿಂದೆಯೇ ತಿಳಿಸಿದೆ. ಈತನ ತರುವಾಯ ಬಂದ ಕ್ರಿ. ಶ. ೧೩೮೫ರಲ್ಲಿ ಇದ್ದಿರಬಹುದಾದ ಮಧುರಕವಿ ಧರ್ಮನಾಥ ಪುರಾಣವನ್ನು ಬರೆದಿದ್ದಾನೆ. ಈತನೂ ತನ್ನ ಕಾವ್ಯಕ್ಕೆ ಮೂಲ ಯಾವುದೆಂಬುದನ್ನು ಹೇಳಿಕೊಂಡಿಲ್ಲ. ಆದರೆ ಮಧುರಕವಿಯ ಕಾವ್ಯವನ್ನು ಪರಿಶೀಲಿಸಿದವರಿಗೆ ಕಥಾಸರಣಿಯಲ್ಲಿ ವರ್ಣನಾಭಾಗಗಳಲ್ಲಿ ಬಾಹುಬಲಿಪಂಡಿತನಿಂದ ಪ್ರಭಾವಿತನಾಗಿರುವುದು ವ್ಯಕ್ತವಾಗುತ್ತದೆ. ಇದನ್ನು ಮುಂದಿನ ಒಂದೆರಡು ನಿದರ್ಶನಗಳಿಂದ ಸ್ಪಷ್ಟಪಡಿಸಬಹುದು.

ಮಹಾಸೇನ ಮಹಾರಾಜ ಮತ್ತು ಸುವ್ರತಾಮಹಾದೇವಿಯರ ಪುತ್ರದೋಹಳದ ವರ್ಣನಾಭಾಗದಲ್ಲಿ ಬಾಹುಬಲಿಪಂಡಿತನ ಧರ್ಮನಾಥ ಪುರಾಣದಲ್ಲಿ ಬರುವ:

........ಎನ್ನೀ ಪ್ರಾಣಪ್ರೀತೆಯಪ್ಪ ಕುಲಸ್ತ್ರೀಗೆ ಕಾಲದೊಳಾದೊಡಂ ಪುತ್ರಲಾಭಮಾಗದಿರ್ದುದು ರಾಜ್ಯಭಾರಧಾರಣಧೌರೇಯನಪ್ಪ ಕುಮಾರನನೊರ್ವನನಾದೊಡಂ ಕಾಣದ ಕಾರಣಮೀಗಳೀ ಚತುಸ್ಸಮುದ್ರಾಂಕಿತಮಾದ ಮೇದಿನೀಮಂಡಳಮೆನ್ನಯ ಬಾಹುದಂಡಕ್ಕೆ ಕೇವಳಂ ಭಾರಮಾಗಿ ತೋಱುತ್ತುಮಿರ್ದಪುದದಱಿಂದಾನತಿಕ್ಲೇಶಮಂ ತಾಳ್ದಿದೆಂ (೩-೫೫ ವ)

ಈ ಭಾಗವನ್ನು ಮಧುರನ ಧರ್ಮನಾಥ ಪುರಾಣದ ಮುಂದಿನ ಪದ್ಯದೊಂದಿಗೆ ಹೋಲಿಸಬಹುದು.

ಈ ಮತ್ಪ್ರಾಣಸಮಾನೆಯಾದ ಸತಿಯೊಳ್ ಸಂತಾನಮಿಲ್ಲೆಂದಟಿ
ಲ್ದೀಮಾತೊರ್ವನೆ ಚಿಂತಿಸೆಂ ಸುಖದೆ ನಾನಿರ್ಪಂದದಿಂದಾವನೀ
ಭೂಮೀಭಾರಮನಾಂಪನೆಂದನಿದು ಶೇಷಾಹೀಶ್ವರಂ ದಿಗ್ಗಜ
ಸ್ತೋಮಂ ಕೂರ್ಮವರಂ ಕುಲಾಚಲಕುಲಂ ಚಿಂತಿಪ್ಪುವಿನ್ನಾವಗಂ (೪-೯೯)

ಸುವ್ರತಾಮಹಾದೇವಿಯನ್ನು ವರ್ಣಿಸುವ ಬಾಹುಬಲಿಪಂಡಿತನ :

ದುರಿತ ವಿಷಾಪಹಾರಂ ಭಾ
ಸುರಕಾಂತಿ ಸಮೇತಮಖಿಳಜನಸಂಸ್ತುತ್ಯಂ
ವರಮೀ ಸ್ತ್ರೀರತ್ನಂ ತಾಂ
ಧರಣೀತ್ರಯ ಪೂಜ್ಯಮೆಂದು ಬಗೆ ನೀಂ ಮನದೊಳ್ (೩-೬೫)

ಎಂಬ ಪದ್ಯವನ್ನು ಮಧುರನ:

ಇದು ಭುವನತ್ರಯಭೂಷಣ
ಮಿದು ಪಾಪವಿಶಾಪಹಾರಿ ಕುಲದೀಪಕಮಿಂ
ತಿದು ಸುಕೃತ ನಿನಗೆ ಕೆಯ್ವಾ
ರ್ದುದು ಸುವ್ರತೆವೆಸರೊಳೆಸೆವ ಕಾಂತಾರತ್ನಂ (೪-೧೧೩)

ಈ ಪದ್ಯದೊಂದಿಗೆ ಹೋಲಿಸಬಹುದು.

ಇದೇ ರೀತಿ ಹಲವಾರು ವರ್ಣನಾಭಾಗಗಳಲ್ಲಿ ಈ ಇಬ್ಬರು ಕವಿಗಳಿಗಿರುವ ಸಾಮ್ಯವನ್ನು ಗುರುತಿಸಬಹುದಾಗಿದೆ. ದಶರಥಮಹಾರಾಜ ಜಿನದೀಕ್ಷೆಕೈಗೊಳ್ಳುವಾಗ ಮಾಡುವ ಜಿನಸ್ತುತಿ ಬಾಹುಬಲಿಪಂಡಿತನಲ್ಲಿ ಕೃತಿಯ ಕೊನೆಯ ಭಾಗದಲ್ಲಿ ವೃತ್ತಗಳಲ್ಲಿ ಬಂದಿದ್ದರೆ ಮಧುರನಲ್ಲಿ ಕಾವ್ಯದ ಮೊದಲಿಗೇ ಕಂದಪದ್ಯಗಳಲ್ಲಿ ಬಂದಿವೆ. ಬಾಹುಬಲಿ ಪಂಡಿತನಲ್ಲಿ ಬರುವ ಮೇರುಗಿರಿ ಭರತಕ್ಷೇತ್ರಗಳ ವರ್ಣನೆ ಮಧುರನಲ್ಲಿ ಕಂಡುಬರುವುದಿಲ್ಲ. ಈ ಕೆಲವು ಸೂಕ್ಷ್ಮವ್ಯತ್ಯಾಸಗಳನ್ನು ಬಿಟ್ಟರೆ ವಿಷಯಾನುಕ್ರಮಣಿಕೆಯಲ್ಲಿ ವರ್ಣನಾಪ್ರಸಂಗಗಳಲ್ಲಿ ಇವರಿಬ್ಬರಲ್ಲಿಯೂ ಸಂಪೂರ್ಣ ಸಾಮ್ಯ ಕಂಡುಬರುತ್ತದೆ. ಒಟ್ಟಿನಲ್ಲಿ ಮಧುರ ಬಾಹುಬಲಿಪಂಡಿತನಿಂದ ಪ್ರಭಾವಿತನಾಗಿದ್ದಾನೆಂಬುದು ನಿರ್ವಿವಾದ.

ಬಾಹುಬಲಿಪಂಡಿತ ತನ್ನ ಕಾವ್ಯದ ಕಡೆಯಲ್ಲಿ ಕೃತಿಯ ಬಗ್ಗೆಯೂ ತನ್ನ ಪಾಂಡಿತ್ಯದ ಬಗ್ಗೆಯೂ ಹೇಳಿಕೊಂಡಿರುವ:

ನವರಸ ಸನ್ನಿಭಮಂ ಸುಜನಸೇವ್ಯಮನಾಮುದಿತ ಪ್ರಭವ್ಯಮಂ
ಕವಿಜನಭಾವ್ಯಮಂ ಪರಮಧರ್ಮಜಿನೇಶ್ವರ ಚಾರುಕಾವ್ಯಮಂ
ತನೆಯುವ ಭಕ್ತಿಯಿಂ ನೆಱೆಯೆಮಾಡಿ ಸಮುಜ್ವಳ ಕೀರ್ತಿಯಂ ಸಮಂ
ತವನಿಯೊಳೆಯ್ದೆ ಬಾಹುಬಲಿ ಪಂಡಿತದೇವನಿದಂ ನಿಮಿರ್ಚಿದಂ (೧೬-೪೧೯)

ಈ ಕಲಿಕಾಲದಲ್ಲಿ ಬುಧಸಂತತಿ ಮೆಚ್ಚೆ ಪೊಗಳ್ವಿನಂ ರಸೋ
ದ್ರೇಕದೊಳೊಂದಿ ಧರ್ಮಜಿನನಾಥ ಪುರಾಣಮನೊಲ್ದು ಪೇಳ್ವ ಶ
ಕ್ತ್ಯೈಕನಿವಾಸ ಬಾಹುಬಲಿಪಂಡಿತ ದೇವನವೋಲ್ ಸುವಿದ್ಯೆಗಂ
ಲೋಕದೊಳಾವನೊ( ನೆಱೆಯೆ ನೋಂತವನುನ್ನತ ಪುಣ್ಯದೇಳ್ಗೆಗಂ (೧೬-೪೨೦)

ಈ ಮಾತುಗಳು ಯಥಾರ್ಥವೆಂಬುದು ಈ ಕಾವ್ಯವನ್ನು ಪರಿಶೀಲಿಸಿದವರಿಗೆ ಮನದಟ್ಟಾಗುತ್ತದೆ. ಬಾಹುಬಲಿಪಂಡಿತನಿಗೆ ಅಪಾರವಾದ ಧರ್ಮಶ್ರದ್ಧೆ ಇತ್ತು. ಧರ್ಮತೀರ್ಥಂಕರನ ಪುಣ್ಯಚರಿತ್ರೆಯನ್ನು ಚಿತ್ರಿಸುತ್ತಿರುವೆನೆಂಬ ಅರಿವು ಆತನಿಗೆ ಕ್ಷಣಕ್ಷಣ

ದಲ್ಲೂ ಗೋಚರಿಸುತ್ತಿತ್ತು. ಅಲ್ಲದೆ ಈ ಕಾವ್ಯರಚನೆಯಿಂದ ತನಗೆ ಇಹಪರಗಳೆರಡರಲ್ಲೂ ಸದ್ಗತಿ ಪ್ರಾಪ್ತವಾಗುವುದೆಂಬ ದೃಢನಂಬಿಕೆಯೂ ಆತನಲ್ಲಿತ್ತು. ಅದಕ್ಕೆ ನಿದರ್ಶನವಾಗಿ:

ವರರತ್ನತ್ರಯದಿಂ ವಿರಾಜಿಸುವ ಗಂಭೀರಂ ದಲಾಗಿರ್ದ ಪೀ
ವರನಾದುತ್ತಮ ಧರ್ಮನಾಥ ಚರಿತಾಂಭೋರಾಶಿಯಂ ಭಕ್ತಿ ಭಾ
ಸುರ ಬುದ್ಧಿಸ್ಥಿತಿಯೆಂಬ ಪೆಲ್ವಹಡಗಿಂದಂ ದಾಂಟಿಪೋದಂ ಸಮು
ದ್ಧುರಸಾಂಯಾತ್ರಿಕನೆಂಬಿನಂ ಭುಜಬಳಿಪ್ರಖ್ಯಾತಯೋಗೀಶ್ವರಂ (೧೬-೪೨೧)

ಅಸಹಾಯನಾಗಿ ಮಾಡಿದ
ನಸದೃಶಮೆನಿಪೀ ಪ್ರಬಂಧಮಂ ಭುಜಬಳಿಮುನಿ
ಯುಸಹಾಯನಾಗಿ ನಿಶ್ರೇ
ಯಸಮಂ ಜಿನನೆಂತುಮಾಡದಂ ನಿಜಮನಮಂ (೧೬ ೪೨೩)

ಈ ಕೃತಿಯೊಳ್ ಜಿನಾಗಮರಹಸ್ಯಮನೆಯ್ದುಸಿರ್ದಲ್ಲಿ ಕೇಳಸ
ಸ್ತೋಕಸುಶಾಸ್ತ್ರವಿದ್ಗುರುಗಳಂ ಪರತತ್ತ್ವವಿಭೇದಸಂಸ್ಥಿತ
ಪ್ರಾಕಟದಲ್ಲಿ ಪ್ರಜ್ಞಜನಮಂ ಬೆಸಗೊಳ್ಳದ ಬಲ್ಪಿನೇಳ್ಗೆಗಿಂ
ತಾಕರಮಾಗಿ ಬಾಹುಬಲಿದೇವನದೇನಸಹಾಯನಲ್ಲನೇ (೧೬-೪೨೪)

ಈ ಪದ್ಯಗಳನ್ನು ನೋಡಬಹುದು. ತನ್ನ ಕಾವ್ಯವನ್ನು ಸಂಪೂರ್ಣವಾಗಿ ಓದಿ ಒರೆದು ಪರೀಕ್ಷಿಸಿ ನೋಡಬೇಕೆಂದು ವಿದ್ವಜ್ಜನವನ್ನು ಪ್ರಾರ್ಥಿಸಿಕೊಂಡಿದ್ದಾನೆ.

ಬಲ್ಲವರೆಲ್ಲರುಂ ನೆರೆದು ಮಾನಸಮೆಂಬೊರೆಗಲ್ಲ ಮೇಲೆ ಕೇ
ಳಲ್ಲದ ಮಾಳ್ಕೆಯಿಂದೊರೆದುನೋಡಿ ಪರೀಕ್ಷಿಸಿ ತಿದ್ದಿ ಕೊಟ್ಟ ಕುಂ
ದಿಲ್ಲದ ಮೌಕ್ತಿಕಸ್ಥಿತಿಯಿನೊಪ್ಪುವ ಕಾವ್ಯಸುವರ್ಣಮಾವಗಂ
ಪ್ರೋಲ್ಲಸಿತಾತಿ ಚಿತ್ರರಚನಂ ಶ್ರವಣಕ್ಕೆರಡಕ್ಕೆ ಭೂಷಣಂ (೧೬-೪೨೮)

ಧರ್ಮಪ್ರದವೂ ಮುಕ್ತಿಪ್ರದವೂ ವಿಮಲಪ್ರದವೂ ಆದ ಧರ್ಮತೀರ್ಥಂಕರನ ಚರಿತೆ ಲೋಕದಲ್ಲಿ ಆಚಂದ್ರಾರ್ಕತಾರಾಂಬರವಾಗಿ ನಿಲ್ಲಲಿ ಎಂದು ಕವಿ ಈ ರೀತಿ ಪ್ರಾರ್ಥಿಸಿ:

ವಿಪ್ರಕಪ್ರೌಢಪದಂಗಳಿಂ ಮಿಱದು ಚಿತ್ರಾರ್ಥಂಗಳಿಂದೊಂದಿ ಮು
ತ್ತುಪಮಾತೀತ ನವೀನಭಾವರಸದಿಂ ಚೆಲ್ವಾಗಿ ವಿದ್ಯಾಪ್ರಭಾ
ವಪರಂ ಬಾಹುಬಲಿವ್ರತೀಶನೊಲವಿಂದಂ ಪೇಳ್ದ ಸದ್ಧರ್ಮನಾ
ಥಪುರಾಣಂ ನೆಲೆಗೊಂಡು ನಿಲ್ಕೆ ಜಗದೊಳ್ ಚಂದ್ರಾರ್ಕತಾರಂಬರಂ (೧೬-೪೩೦)

ತನ್ನ ಕಾವ್ಯಕ್ಕೆ ಮಂಗಳವನ್ನು ಹಾಡಿದ್ದಾನೆ.

ಬಾಹುಬಲಿಪಂಡಿತ ತನ್ನ ಕಾವ್ಯಕ್ಕೆ ಯಾವ ಕೃತಿಯನ್ನು ಆಧರಿಸಿದ್ದಾನೆಂಬುದನ್ನು ಹೇಳಿಕೊಂಡಿಲ್ಲ. ಆದರೆ ಪ್ರಾಕೃತ ಅಥವಾ ಸಂಸ್ಕೃತದಲ್ಲಿನ ಯಾವುದಾದರೂ ಒಂದು ಕಾವ್ಯವನ್ನು ಈತನು ಅನುಸರಿಸಿರಬೇಕೆಂದು ಊಹಿಸಬಹುದಾಗಿದೆ. ಈ ಪುರಾಣದಲ್ಲಿ ಬರುವ ಹಲವಾರು ಪ್ರಕರಣಗಳನ್ನು ಕವಿಯೇ ಸೃಷ್ಟಿಸಿಕೊಂಡಿರಲೂಬಹುದು. ಇದು ಹೇಗಾದರೂ ಇರಲಿ. ಈವರೆಗೆ ಅಪ್ರಕಟಿತವಾಗಿದ್ದ ಈ ಪುರಾಣದ ಪ್ರಕಟಣೆಯಿಂದ ಧರ್ಮನಾಥನನ್ನು ಕುರಿತು ಒಂದು ತೌಲನಿಕ ಅಧ್ಯಯನ ನಡೆಸಲು ಅವಕಾಶವಾದಂತಾಗಿದೆ.

ಧರ್ಮನಾಥಪುರಾಣ ಒಂದು ಧಾರ್ಮಿಕ ಗ್ರಂಥ. ಇದರಲ್ಲಿ ಜೈನಧರ್ಮದ ಪ್ರಕ್ರಿಯೆಗಳು ಸಾಕಷ್ಟು ಬಂದಿದ್ದರೂ ಕವಿ ತನ್ನ ಸಮಯೋಚಿತ ಪ್ರಜ್ಞೆಯಿಂದ ಅನುಪಮ ವರ್ಣನೆಗಳಿಂದ ಈ ಕಾವ್ಯವನ್ನು ಅತ್ಯಂತ ಸ್ವಾರಸ್ಯಕರವಾದುದನ್ನಾಗಿ ಮಾಡಿದ್ದಾನೆ. ಈತನು ಪ್ರಾಚೀನ ಸಂಪ್ರದಾಯದಲ್ಲೇ ಮುಂದುವರಿದಿದ್ದರೂ ಅಲ್ಲಲ್ಲಿ ಈ ಸಂಪ್ರದಾಯದ ಕಟ್ಟುಗಳನ್ನು ಕತ್ತರಿಸಿಕೊಂಡು ಸ್ವತಂತ್ರನಾಗಿ ವರ್ತಿಸಿದ್ದಾನೆ. ಗಣಪ್ರಾಸ ನಿಯಮಗಳನ್ನು ದಿಟ್ಟತನದಿಂದ ಉಲ್ಲಂಘಿಸಿ ತನ್ನ ಕ್ರಾಂತಿಕಾರಕ ಪ್ರವೃತ್ತಿಯನ್ನು ಮೆರೆದಿದ್ದಾನೆ. ಈತನಿಗೆ ಕನ್ನಡ ಸಂಸ್ಕೃತಗಳೆರಡರಲ್ಲೂ ಅದ್ವಿತೀಯವಾದ ಪಾಂಡಿತ್ಯವಿರುವುದು ಈ ಕಾವ್ಯವನ್ನು ಪರಿಶೀಲಿಸಿದವರಿಗೆ ಮೇಲುನೋಟಕ್ಕೇ ವ್ಯಕ್ತಪಡುತ್ತದೆ. ಧರ್ಮಶ್ರದ್ಧೆಯುಳ್ಳ ಸಹೃದಯರಿಗೆ ಈ ಕಾವ್ಯ ಮೆಚ್ಚಾಗುವುದರಲ್ಲಿ ಸಂದೇಹವಿಲ್ಲವೆನ್ನಬಹುದು.

## III ಗ್ರಂಥ ಸಂಪಾದನೆ

ಧರ್ಮನಾಥಪುರಾಣವನ್ನು ನಾಲ್ಕು ಹಸ್ತಪ್ರತಿಗಳ ನೆರವಿನಿಂದ ಸಂಪಾದಿಸಲಾಗಿದೆ. ಇವುಗಳಲ್ಲಿ ಎರಡು ಓಲೆಯ ಪ್ರತಿಗಳು; ಒಂದು ಕಾಗದದ ಪ್ರತಿ; ಮತ್ತೊಂದು ಅಸಮಗ್ರ ಮುದ್ರಿತ ಪ್ರತಿ.

೧. 'ಕ' ಪ್ರತಿ: ಕನ್ನಡ ಅಧ್ಯಯನ ಸಂಸ್ಥೆಯ ಕೆ.ಎ. ೨೯೬ನೆಯ ನಂಬರಿನ ಕಾಗದದ ಪ್ರತಿ. ಈ ಕಾವ್ಯದ ಮುದ್ರಣಪ್ರತಿಯನ್ನು ಇದರಿಂದ ಪ್ರತಿಮಾಡಲಾಗಿದೆ. ಈ ಪ್ರತಿಯನ್ನು "ಮೂಡಬಿದ್ರೆ ಶ್ರೀ ಲೋಕನಾಥ ಶಾಸ್ತ್ರಿಗಳಿಂದ ಬಂದ ಪುಸ್ತಕದಿಂದ ಪ್ರತಿ ಮಾಡಲಾಗಿದೆ" ಎಂದಿದೆ. ಈ ಪ್ರತಿ ಚೆನ್ನಾಗಿದೆ. ಶುದ್ಧವಾಗಿದೆ. ಇದರಲ್ಲಿ ೭೨೦ ಪುಟಗಳಿವೆ. ಇದು ೧೩ ಅಂಗುಲ ಉದ್ದ ೮ ಅಂಗುಲ ಅಗಲವೂ ಇದೆ. ಪ್ರತಿ ಪುಟದಲ್ಲಿ ಸರಾಸರಿ ೨೦ ಸಾಲುಗಳೂ ಪ್ರತಿಸಾಲಿನಲ್ಲಿ ೨೦ ಅಕ್ಷರಗಳೂ ಇವೆ. ಇದರಲ್ಲಿ ಶಕಟರೇಫವನ್ನು ಬಳಸಲಾಗಿದೆ. ಈ ಪ್ರತಿಯ ಕೊನೆಯಲ್ಲಿ "ಸ್ವಸ್ತಿಶ್ರೀಮತ್ ಶಕವರ್ಷ ೧೩೪೭ನೆಯ [illegible] ಸಂವತ್ಸರದ ಜ್ಯೇಷ್ಠ ಬಹುಳ ಪಂಚಮಿ ಶನಿವಾರದಂದು ಸ್ವಸ್ತಿ ಯಮನವರತ ಭಕ್ತಿಭರ ನತ ಸುರಾಸುರ [illegible] ಕಿರೀಟಕೋಟಿಘಟಿತಾನೇಕ ರತ್ನರತ್ನಪ್ರಭಾಪಾಟಲಿತ [illegible] ಭಗವದರ್ಹತ್ [illegible] ಕಂಜನಂದನ [illegible] ರಾಗಸುಧಾ ಸಿಂಧು [illegible] ಶ್ರೀಮಹಾಸಾಮಂತರುಂ ನಿತ್ಯಂ ಕಾವ್ಯನೇಕಗುಣಗಣಾಭರಣ

ಭೂಷಿತರುಂ ಅಖಂಡಿತಕುಸುಮಕೋದಂಡಮಂಡಿತ ಪ್ರಚಂಡದೋರ್ದಂಡಹರಿಹರಹಿರಣ್ಯ ಗರ್ಭದುರಭಿಮಾನಮಾನೋನ್ಮೂಲನ ಗರ್ವಪರ್ವತಚೂರ್ಣೀಕರಣಕುಲಿಶಾಯಮಾನ ನಿಜಗಾತ್ರರುಂ ಅತಿಬಹುಲವಿಘ್ನಾತ್ಮಘನಾಘನಸಂಘಾತಪಟಲಪ್ರಭೇದನಪ್ರಚಂಡಪ್ರಭರುಂ ತ್ರಿದಂಡತ್ರಿಶಲ್ಯತ್ರಿಗಾರವದೂರರುಂ ಪಂಚಾಚಾರ ಚಾರಿತ್ರಾಭರಣಾಲಂಕೃತರುಂ ಜಿನಾಗಮಾನುಕೂಲ ತಪೋಮಾರ್ಗನಿರತರುಂ ಜಿನಸಮಯವಾರ್ಧಿವರ್ಧನಸುಧಾಕರರುಂ ಜಿನಾಗಮಸಿದ್ಧಿಸಿಧಾನ ದೀಪವರ್ತಿಗಳುಂ ಸಕಲ ಮಹೀಪಾಲ ಸೌಂದರ ಸರ್ವಜಾತೀಯ ರತ್ನಗಣಮಯೂ...........ಪ್ರತ್ಯಗ್ರಚಾರುಚರಣಾರವಿಂದದ್ವಂದ್ವರುಂ ಯಮನಿಯಮ ಸ್ವಾಧ್ಯಾಯಧ್ಯಾನಮೌನಾನುಷ್ಠಾನಜಪತಪಸಮಾಧಿಶೀಲಗುಣಸಂಪನ್ನರುಂ ದಶಗಣಾಗ್ರಗಣ್ಯರುಂ ಕಲಿಕಾಲಗಣಧರರುಮಪ್ಪ ಶ್ರೀಮಲ್ಲಲಿತಕೀರ್ತಿ ಮಲಧಾರಿದೇವರ ಪ್ರಿಯ ಗುಡ್ಡ ಆಹಾರ ಅಭಯಭೈಷಜ್ಯ ಶಾಸ್ತ್ರದಾನದತ್ತಾವಧಾನನುಂ ಜಿನಗಂಧೋದಕಪವಿತ್ರೀಕೃತೋತ್ತಮಾಂಗನುಂ ಜಿನಮುನಿಪದಾಂಭೋಜಾತಭೃಂಗನುಮಪ್ಪ ಭಂಡಾರಿದೇವರುಶೆಟ್ಟಿ ತನಗೆ ಕೇವಲಜ್ಞಾನಸಂಪ್ರಾಪ್ತಿನಿಮಿತ್ತವಾಗಿ ಕಾರಕಳದ ಶಾಂತಿನಾಥಸ್ವಾಮಿಗಳ ಬಸ್ತಿಗೆ ಬರಸಿಕೊಟ್ಟ ಧರ್ಮನಾಥ ಪುರಾಣಕ್ಕೆ ಮಂಗಳ ಮಹಾ” ಎಂದಿದೆ.

೨. **‘ಗ’ ಪ್ರತಿ.** ಇದು ಕನ್ನಡ ಅಧ್ಯಯನ ಸಂಸ್ಥೆಯ ಎನ್. ೧೫೪ರ ಮೈಕ್ರೊಫಿಲಂ ಪ್ರತಿ. ಇದನ್ನು ಮೂಡಬಿದರೆಯ ಜೈನಧರ್ಮಶಾಲೆಯಲ್ಲಿನ ಓಲೆಯ ಪ್ರತಿಯಿಂದ ಮೈಕ್ರೊಫಿಲಂ ಮಾಡಲಾಗಿದೆ. ಇದರಲ್ಲಿ ೧೯೬ ಓಲೆಗಳಿವೆ. ಇದು ೩೮.೫×೫.೫ ಸೆಂ.ಮಿ. ಉದ್ದಗಲ ಉಳ್ಳದ್ದಾಗಿದೆ. ಪ್ರತಿಪತ್ರದಲ್ಲಿ ೮ ಪಂಕ್ತಿಗಳೂ ಪ್ರತಿಪಂಕ್ತಿಯಲ್ಲಿ ೮೪ ಅಕ್ಷರಗಳೂ ಇವೆ. ಪ್ರತಿ ಸಮಗ್ರವಾಗಿದೆ, ಶುದ್ಧವಾಗಿದೆ. ಇದರಲ್ಲಿ ಶಕಟರೇಫವನ್ನು ಬಳಸಲಾಗಿದೆ. ಪ್ರತಿಯ ಕೊನೆಯಲ್ಲಿ “ಸ್ವಸ್ತಿ ಶ್ರೀಮತ್ ಶಕವರ್ಷ....ನೆಯ ಶುಭಕೃತು ಸಂವತ್ಸರದ ಪುಷ್ಯಬಹುಳ ದಶಮಿಯು ಚಂದ್ರವಾರ ಮಹಾನಕ್ಷತ್ರ ಉತ್ತರಾಷಾಢ ನಿತ್ಯನಕ್ಷತ್ರ ಸ್ವಾತಿ ಧೃತಿಯೋಗ ಅಮೃತ ಘಳಿಗೆಯಲ್ಲಿ ಸ್ವಸ್ತಿಯನವರತಭಕ್ತಿಭರಾನತಾಖಂಡಲಾನರ್ಘ್ಯ ಮಕುಟತಟಘಟಿತಾನೇಕಪ್ರಭಾಪಾಟಲಿತ ನಿಜಚರಣಸರಸಿರುಹ ಭಗವದರ್ಹತ್ಪರಮೇಶ್ವರವದನಕಂಜಸಂಜಾತ ಪರಮಾಗಮ ಸುಧಾಸಿಂಧುಗಳೆನಿಸಿದ ವಿಜಯಣ್ಣಗಳು ಜೀಯ್ಯನವರ ಶ್ರೀಪಾದ ಪದ್ಮಂಗಳಲ್ಲಿ ಓದಿ ಜಿನಾಗಮಾನುಕೂಲರುಂ ಜಿನಸಮಯವಾರ್ಧಿವರ್ಧನಸುಧಾಕರರುಂ ಜಿನಾಗಮಸಿದ್ಧಿ ಸಿಧಾನದೀಪವರ್ತಿಗಳುಂ ಎನಿಸಿದ ಗುಮ್ಮಟ ಉಪಾಧ್ಯಾಯರು ಅವರ ತನುಜ ಯಮನಿಯಮ ಸ್ವಾಧ್ಯಾಯ ಧ್ಯಾನಮೌನಾನುಷ್ಠಾನ ಸಮಾಧಿಶೀಲ ಗುಣಸಂಪನ್ನರುಂ ಪರಸಮಯಖಂಡನ ಸ್ವಸಮಯಸ್ಥಾಪನಾಚಾರರುಂ ಅರಿರಾಯರಗಂಡರ ದಾವಣಿ ಶ್ರೀ ಭರತೇಂದ್ರನ ಪರಮಗುರುವೆನಿಸಿದ ಆದಿಉಪಾಧ್ಯಾಯರ ಮಗ ಆಹಾರ ಅಭಯ ಭೈಷಜ್ಯ ಶಾಸ್ತ್ರದಾನ ದತ್ತಾವಧಾನನುಂ ಜಿನಗಂಧೋಧಕ ಪವಿತ್ರೀಕೃತೋತ್ತಮಾಂಗನುಂ ಮುನಿಪಾದಾಂಭೋಜಾತಭೃಂಗನುಮಪ್ಪ ಪದ್ಮನಾಭನು ಪದಿನೆಂಟುದೋಷಂಗಳಘಾತಿ

ಚತುಷ್ಟ ನಿರ್ಮೂಲವಾಗಿ ಗೆಲ್ದ ಶ್ರೀ ಚಂದ್ರನಾಥನ ಸಮ್ಮುಖದಲ್ಲಿ ಸೇನಾಗಣಾಗ್ರ ಗಣ್ಯರುಂ ನಿಶ್ಶಂಕಾದ್ಯನೇಕಗುಣಗಣಾಭರಣಭೂಷಿತರುಂ ಅಖಂಡಿತಕುಸುಮ ಕೋದಂಡಮಂಡಿತ ಪ್ರಚಂಡದೋರ್ದಂಡ ಹರಿಹರ ಹಿರಣ್ಯಗರ್ಭ ದುರಭಿಮಾನ ಮನೋ ನ್ಮೂಲನಗರ್ವಪರ್ವತಚೂರ್ಣೀಕರಣಕುಲಿಶಾಯಮಾನನಿಜಗಾತ್ರರುಂ ಅತಿಬಹಲ ಮಿಥ್ಯಾತ್ವ ಘನಾಘನ ಸಂಘಾತ ಪಟಲಪ್ರಭೇದನ ಪ್ರಚಂಡಪ್ರಭರುಂ ತ್ರಿಶಲ್ಯ ತ್ರಿಗಾರವ ದೂರರುಂ ಪಂಚಾಚಾರ ಚರಿತ್ರಾಭರಣಾಲಂಕೃತರುಗಳುಮಪ್ಪ ಶ್ರೀಮದಸಂತಣ್ಣಗಳು ಜೀಯ್ಯನವರ ದಿವ್ಯಶ್ರೀಪಾದಪದ್ಮಂಗಳಲ್ಲಿ ಹೊದ್ದಿಕೊಂಡು ಓದುವ ಕಮಲನಾಭನು ಬರೆದ ಧರ್ಮನಾಥಸ್ವಾಮಿಯ ಪುರಾಣದಲ್ಲಿ ಬರೆದವನಿಗೂ ಬರೆಸಿದ ಲಕ್ಷ್ಮಿಸೇನದೇವರಿಗೂ ಓದುವ ಕೇಳುವ ಜನಂಗಳಿಗೂ ಆರೋಗ್ಯಮಸ್ತು ಇಷ್ಟಸಂಸಿದ್ಧಿರಸ್ತು ಅನಿಷ್ಟ ನಿರಶನ ಮಸ್ತು ಭದ್ರಂ ಶುಭಂ ಮಂಗಲಂ ಮಂಗಳ ಮಹಾಶ್ರೀಶ್ರೀಶ್ರೀ" ಎಂದಿದೆ.

**೩. 'ಚ' ಪ್ರತಿ:** ಕನ್ನಡ ಅಧ್ಯಯನ ಸಂಸ್ಥೆಯ ಎಸ್. ೧೦೦೮ರ ಮೈಕ್ರೊ ಫಿಲಂ ಪ್ರತಿ. ಇದರಲ್ಲಿ ೨೩೨ ಪತ್ರಗಳಿವೆ. ಇದರ ಕಾಲ ಶಾಲಿವಾಹನಶಕ ೧೩೪೨ ಎಂದು ಹೇಳಿದೆ. ಇದನ್ನು ಮೂಡಬಿದರೆಯ ವೀರವಾಣಿ ಸಿದ್ಧಾಂತ ಭವನದಲ್ಲಿರುವ ಓಲೆ ಪ್ರತಿಯಿಂದ ಮೈಕ್ರೊಫಿಲಂ ಮಾಡಲಾಗಿದೆ. ಇದು ೬೭×೪.೫ ಸೆಂ.ಮೀ. ಉದ್ದಗಲ ಉಳ್ಳದ್ದಾಗಿದೆ. ಇದರ ಪ್ರತಿಓಲೆಯಲ್ಲಿ ೭ ಪಂಕ್ತಿಗಳೂ ಪ್ರತಿಪಂಕ್ತಿಯಲ್ಲಿ ೮೧ ಅಕ್ಷರಗಳೂ ಇವೆ. ಪ್ರತಿ ಸಮಗ್ರವಾಗಿದೆ. ಇದರಲ್ಲಿ ಶಕಟರೇಫವನ್ನು ಬಳಸಲಾಗಿದೆ. ಈ ಪ್ರತಿಯನ್ನು ಕಾರ್ಕಳದ ಭಟ್ಟಾರಕರಾಗಿದ್ದ ಲಲಿತಕೀರ್ತಿಯವರ ಶಿಷ್ಯ ದೇವರಶೆಟ್ಟಿ ಬರೆದು ಶಾಂತಿನಾಥ ಮಂದಿರಕ್ಕೆ ದಾನವಾಗಿ ಕೊಟ್ಟಂತೆ ಹೇಳಿದೆ.

**೪. 'ಜ' ಪ್ರತಿ:** ಶ್ರೀ ಎಂ. ಸಿ. ಪದ್ಮನಾಭಶರ್ಮ ಅವರು ಜಿನವಾಣಿಯಲ್ಲಿ ಪ್ರಕಟಿಸಿದ ಅಸಮಗ್ರ ಪ್ರತಿ. ಇದರಲ್ಲಿ ೮ ಆಶ್ವಾಸಗಳಿವೆ. ಬೆಂಗಳೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಕೇಂದ್ರದ ಹಸ್ತಪ್ರತಿ ವಿಭಾಗದ ಮುಖ್ಯಸ್ಥರಾದ ಶ್ರೀ ಎಸ್. ಶಿವಣ್ಣ ನವರು ಈ ಕಾವ್ಯದ ಸಂಪಾದನ ಕಾರ್ಯಕ್ಕಾಗಿ ಕಳಿಸಿಕೊಟ್ಟ ಪ್ರತಿ ಇದು. ಇದರಲ್ಲಿ ಎಲ್ಲೋ ಒಂದೆರಡೆಡೆ ಪಾಠಾಂತರಗಳನ್ನು ಕೊಟ್ಟಿದೆ. ಱಳ ಮತ್ತು ಶಕಟರೇಫವನ್ನು ಬಳಸಲಾಗಿದೆ.

ಮೇಲಿನ ನಾಲ್ಕು ಪ್ರತಿಗಳಲ್ಲಿ 'ಕ' ಪ್ರತಿ ಶುದ್ಧವಾದುದು, ಸಮಗ್ರವಾದುದು. ಆದರೂ ಸಹ ಕೆಲವೆಡೆ ಗ್ರಂಥಪಾತವಾಗಿದೆ. ಅಂಥ ಕಡೆಗಳಲ್ಲಿ ಇನ್ನುಳಿದ ಪ್ರತಿಗಳಿಂದ ಅದನ್ನು ತುಂಬಲಾಗಿದೆ. ಈ ಕಾವ್ಯದ ಪಾಠಾಂತರಗಳನ್ನು ನಿರ್ಧರಿಸುವಲ್ಲಿ ಯಾವುದೇ ಒಂದು ಪ್ರತಿಯನ್ನು ನಿರಂತರವಾಗಿ ಅನುಸರಿಸಿಲ್ಲ. ಆದರೆ 'ಕ' ಪ್ರತಿಯ ಪಾಠಾಂತರ ಗಳನ್ನು ವಿಶೇಷವಾಗಿ ಅನುಸರಿಸಲಾಗಿದೆ. ಸಂದರ್ಭೋಚಿತವಾಗಿ ಇತರ ಪ್ರತಿಗಳ ಪಾಠ ಗಳನ್ನೂ ಕೊಡಲಾಗಿದೆ. ಒಟ್ಟಿನಲ್ಲಿ ಕವಿಯ ಮೂಲಪಾಠ ಏನಿದ್ದಿರಬಹುದು ಎಂಬ ಬಗ್ಗೆ

ಆಲೋಚನೆ ಮಾಡಿ ವಿಚಾರಮಾಡಿ ಆ ಪಾಠಗಳನ್ನೇ ಇಲ್ಲಿ ಉಳಿಸಿಕೊಳ್ಳಲು ಯತ್ನಿಸಲಾಗಿದೆ.

ಧರ್ಮನಾಥಪುರಾಣದಲ್ಲಿ ನಾವು ಱೞವನ್ನು ಬಳಸಿಲ್ಲ. ಏಕೆಂದರೆ ಈ ಕವಿ ಪ್ರಾಸ ಸ್ಥಾನಗಳಲ್ಲಿ ನಿಯತವಾಗಿ ಱೞವನ್ನು ಉಪಯೋಗಿಸಿಲ್ಲ. ಜೊತೆಗೆ ಈ ಕಾಲಕ್ಕಾಗಲೇ ಱೞ ಕಣ್ಮರೆಯಾಗುತ್ತಾ ಬಂದಿತ್ತೆಂದು ಭಾವಿಸಬಹುದಾಗಿದೆ.

ಈ ಕಾವ್ಯದ ಮುದ್ರಿತ ಪ್ರತಿಯನ್ನು ಸಿದ್ಧಪಡಿಸುವಲ್ಲಿ ಕರಡಚ್ಚುಗಳನ್ನು ತಿದ್ದುವಲ್ಲಿ ಶಬ್ದಾರ್ಥಕೋಶ ವಿಶಿಷ್ಟಪದಕೋಶಗಳನ್ನು ತಯಾರಿಸುವಲ್ಲಿ ಸಂಪಾದನ ವಿಭಾಗದ ಸಹಾಯಕರೂ, ಸಂಶೋಧನ ವಿದ್ಯಾರ್ಥಿನಿಯಾದ ಶ್ರೀಮತಿ ರು. ನಾ. ವಿಜಯಲಕ್ಷ್ಮಿ, ಎಂ.ಎ. ಅವರೂ ನೆರವು ನೀಡಿದ್ದಾರೆ. ಇವರೆಲ್ಲರಿಗೂ ನನ್ನ ಕೃತಜ್ಞತೆಗಳು. ಈ ಗ್ರಂಥದ ಸಂಪಾದನೆಗೆ ಹಸ್ತಪ್ರತಿಗಳನ್ನು ಒದಗಿಸಿದ ಮೂಡಬಿದರೆಯ ಶ್ರೀ ದಿಗಂಬರ ಜೈನ ಧರ್ಮಶಾಲೆಯ ಧರ್ಮಾಧಿಕಾರಿಗಳಿಗೂ ಶ್ರೀ ವೀರವಾಣಿ ಸಿದ್ಧಾಂತ ಭವನದ ಶ್ರೀ ಬಿ. ದೇವಕುಮಾರ್ ಜೈನ್ ಅವರಿಗೂ ಅಚ್ಚಿನ ಪ್ರತಿಯನ್ನು ಒದಗಿಸಿಕೊಟ್ಟ ಶ್ರೀ ಎಸ್. ಶಿವಣ್ಣನವರಿಗೂ ನಾವು ಋಣಿಯಾಗಿದ್ದೇವೆ.

ಈವರೆಗೆ ಅಪ್ರಕಟಿತವಾಗಿದ್ದ ಈ ಧಾರ್ಮಿಕಕೃತಿಯನ್ನು ಕನ್ನಡಿಗರು ಆದರದಿಂದ ಬರಮಾಡಿಕೊಳ್ಳುವರೆಂದು ಭಾವಿಸಲಾಗಿದೆ.

ಮೈಸೂರು
೧೫-೧೦-೧೯೭೫

**ಎಸ್. ಬಸವಾರಾಧ್ಯ**

# ಪ್ರಥಮಾಶ್ವಾಸಂ

ಸ್ರಗ್ಧರೆ

ಶ್ರೀಮದ್ದೇವೇಂದ್ರವೃಂದಸ್ಫುರದುರುಮಕುಟಶ್ರೇಣಿಮಾಣಿಕ್ಯರೋಚಿ
ಸ್ತೋಮಾಂಭೋಧೌತಪಾದಂ ನಿರವಧಿಸುಖದೃಗ್ಬೋಧವೀರ್ಯಸ್ವರೂಪಂ
ವಾಮಾಷ್ಟಪ್ರಾತಿಹಾರ್ಯಪ್ರಕಟಿತಪರಮಾರ್ಹಂತ್ಯಲಕ್ಷ್ಮೀಪ್ರಭಾವೋ
ದ್ದಾಮಂ ಮಾಳ್ಕಿಷ್ಟಸಂಸಿದ್ಧಿಯನೆಮಗನಿಶಂ ಧರ್ಮನಾಥಂ ಜಿ[1]ನೇಂದ್ರಂ[1] ೧

ಉತ್ಪಲಮಾಲೆ

ದಾರುಣಘಾತ್ಯಘಾತಿಕಲುಷಂ ಕಿಡೆ ನೈಜಗುಣಂಗಳೆಂಟುಮಾ
ಕಾರಮನೆಯ್ದೆ ತೋಱಿ ಚರಮಾಂಗವಿತರ್ ಪರಿಪೂ[2]ರ್ಣ[2]ತೃಪ್ತಿಗಾ
ಧಾರರಮೂರ್ತರುದ್ಧತರಚಿನ್ಮಯ[3]ರೀ ಭುವನಾಗ್ರದಲ್ಲಿ ನಿಂ
ದಾ[3] ರಮಣೀಯರೀಗೆಮಗೆ ಸಿದ್ಧರಪಾರಸುಖಾ[4]ಭಿ[4]ವೃದ್ಧಿಯಂ ೨

ಮಹಾಸ್ರಗ್ಧರೆ

ವರಪಂಚಾಚಾರಮಂ ರಕ್ಷಿಸುವ ಪದೆಪು ಲೇಸಪ್ಪಿನಂ ಪತ್ತುಧರ್ಮಂ
ಸ್ಥಿರಮಾಗುತ್ತಿರ್ಪಿನಂ ಪನ್ನೆರಡುತಪಮುಗುರ್ವಪ್ಪಿನಂ ವರ್ತಿಸುತ್ತುಂ
ದುರಘವ್ರಾತಂ ವಿನೇಯಪ್ರತತಿಯನಿನಿಸುಂ ಪೊರ್ದದಂತಾಗಿ ಮಾ[5]ಳ್ಪ
ದ್ಧುರ[5]ಬೋಧಾಚಾರ್ಯವರ್ಯರ್ ಕುಡುಗೆಮಗೆ ನಿಜಾಚಾರಮಂ ಪ್ರೇಮದಿಂದಂ

ಚಂಪಕಮಾಲೆ ೩

ಧರೆಯೊಳಗುಳ್ಳ ಭವ್ಯನಿಪಹಕ್ಕೆ ದಯಾಮಯಮಪ್ಪ ಧರ್ಮಮಂ
ಕರುಣದಿನೂಱಿ ತೋಱಿ ನೆಱೆಪೇಳ್ದು ನಿಯಾಮಿಸುವರ್ ಸುಧರ್ಮದೊಳ್
ಪರಿಣತಜೈನತತ್ತ್ವರುಪದೇಶಕರೆನ್ನಯ ಚಿತ್ತಗೇಹದೊಳ್
ಭರಪಸದಿಂ ಪ್ರಕಾಶಿಸುಗೆ ನಿಚ್ಚಲುಮುತ್ತಮಬೋಧರತ್ನಮಂ ೪

ಹೃದಯದೊಳುಣ್ಮಿ ಪೊಣ್ಮಿ ಕರುಣಾರಸಮಾತತಚಾರುಶೀಲ ಸಂ
ಪದದೊಳನೂನಮಪ್ಪ ಚರಿತಂ ಸಲೆ ಕೆಯ್ಮಿಗೆ ವರ್ತಿಪರ್ ಸದಾ
ಮದನಮದಪ್ರಣಾಶಿಗಳ[6]ಶೇಷ[6]ಜನಸ್ತುತ ಸರ್ವಸಾಧುಗಳ್
ಸದಮಳಕೀರ್ತಿಧಾಮರೆಮಗೀಗೆ ನಿಜೋತ್ತಮ ಸಾಧುವೃತ್ತಿಯಂ ೫

---

1 ನೇಶಂ (ಗ) 2 ರ್ಣರ್ (ಕಗಚ) 3 ನೀ ಭುವನತ್ರಯಾಗ್ರ। ಚರಣ (ಕಗಚ) 4 ಬ್ಧಿ (ಜ) 5 ಳ್ಪರ್। ದುರು (ಕಚ) 6 ಶಿಷ್ಯ (ಕಚ)

ಕಂದ: ಸಕಳಜನ ಸಿದ್ಧ ಸೂರಿ
ಪ್ರಕಟೋಪಾಧ್ಯಾಯ ಸಾಧುಗಳ್ ಜಗದುದ್ಧಾ
ರಕರೆಮಗೆ ಮುಕ್ತಿಸೌಖ್ಯ
ಪ್ರಕರಮನೊಲಿದೀವರಕ್ಕೆ ಕರುಣದಿನೆಂದುಂ ೬

ಮತ್ತೇಭವಿಕ್ರೀಡಿತ

ಜಿನಮಾರ್ಗಂ ಪರಿ[1]ಭಿನ್ನವ[1]ತ್ಕುನಯವರ್ಗಂ ಸರ್ವದೋದ್ಯದ್ದಯಾ
ಸುನಿಸರ್ಗಂ ಗತಸೀಮಪುಣ್ಯಚಯಸರ್ಗಂ [2]ತೀ[2]ರ್ಣಮಿಥ್ಯಾತ್ವಕಾ
ನನದುರ್ಗಂ ಪ್ರವಿರಾಜಮಾನಗುಣಸಂಸರ್ಗಂ ಮಹಾಪಾಪನಾ
ಶನಭರ್ಗಂ ಪರಮಾಪವರ್ಗಸುಖಮುಂ ಭವ್ಯರ್ಗೆ ಮಾಳ್ಕಗ್ಗಳಂ ೭

ಮಹಾಸ್ರಗ್ಧರೆ

ಘನಮಿಥ್ಯಾತ್ವಾಂಧಕಾರಪ್ರತತಿನಿಚಿತಲೋಕತ್ರಯಿಾಗೇಹದೊಳ್ ಪಾ
ವನಬೋಧಾವಾಸನಪ್ಪೀ ಜಿನಪತಿಯ ಲಸದ್ವಾಕ್ಯಮಾಣಿಕ್ಯದೀಪಂ
ವಿನುತಾರ್ಥವ್ರಾತಮಂ ಕಾಣಿಸದೆ ಬೆಳಗದಿರ್ದಂದು ಮೂಢತ್ವಯುಕ್ತಂ
ಜನ[3]ಮಾದ್ಯಂ[3]ತೋದ್ಧಸೌಖ್ಯಾಸ್ಪದ ಶಿವಪಥಮಂ ಕೆನ್ನಮಿಃಸ್ನಿಂತು ಕಾಣ್ಗುಂ ೮

ಮತ್ತೇಭವಿಕ್ರೀಡಿತ

ಭವ[4]ಕಾ[4]ಳಾಹಿ ವಿಷಾಪಹಾರ ಪಟುಮದ್ಯುತ್ಕೃಷ್ಟ ಭವ್ಯಾಳಿಸಂ
ಭವಿರತ್ನತ್ರಯಮೆಂಬಲಂಕರಣಮಂ ತೊಟ್ಟಿರ್ದರಂ ಮುಕ್ತಿಭಾ
ರ್ಗವಿ ರೂಪೇಂದ್ರಿಯಮಿಲ್ಲದಿರ್ದೊಡಮತಿಸ್ನೇಹಾಭಿಸಂಬಂಧದಿಂ
ದವರಂ ಸ್ವೀಕರಿಸಿರ್ಪಳಂತಪೆಮಗಂ ಮಾಳ್ಕಿಷ್ಟಸೌಖ್ಯಂಗಳಂ ೯

ಚಂಪಕಮಾಲೆ

ವಿಮಳತರೋದ್ಧಬೋಧಬಿಸಶಾಲಿನಿ ಪನ್ನೆರಡಂಗವೆಂಬನು
ತ್ತಮದಳರಾಜಿರಾಜಿನಿ ಲಸದ್ಗುಣಭಾಗ್ಭುವನ ಪ್ರವೃದ್ಧಿಸಂ
ಭ್ರಮಪರಿಶೋಭಿನಿರ್ವೃತಿ ಮಧುಪ್ರತಮೋದಿನಿ ತತ್ಸರಸ್ವತೀ
ಕಮಳಿನಿ ತೋರ್ಕೆ ಮುಕ್ತಿಕಮಳಾಮುಖಮಂ ನಮಗೊಲ್ದು ಲೀಲೆಯಿಂ ೧೦

ಕಂದ: ಸದ್ಧರ್ಮವೃತ್ತಿಸಕಳಜ
ನೋದ್ಧರಣಸಮರ್ಥೆ ಮಾನಸೀ ಯಕ್ಷಿಮಹಾ
ವೃದ್ಧಾಜ್ಞೆಕೆ ಮಾಳ್ಕೆ ಕೃಪಾ
ಬುದ್ಧಿಯನಾತ್ಮೀಯಕೃತಿಗೆ ನಿರ್ವಿಘ್ನತೆಯುಂ ೧೧

---

[1] ಖಿನ್ನಕೃ (ಜ) [2] ಕೀ (ಕಚ) [3] ಮಧ್ಯಂ (ಕಚ) [4] ಕೋ (ಕ)

ಜಿನಪದಸರೋಜಮಧುಕರ
ನನುಪಮದುಸ್ಸಹ್ಯದರ್ಪಪ್ರೋಿತಲೋ[1]ಕಂ[1]
ಜಿನಧರ್ಮವಿರೋಧಿವಿನಾ
ಶನಮಂ ಭರದಿಂದೆ ತೋರ್ಕೆ ಕಿನ್ನರ ಯಕ್ಷಂ ೧೨

ಚಂಪಕಮಾಲೆ

ವಿಳಸದರಿಷ್ಟಸೇನಗಣಭೃತ್ಪ್ರಭುಮೆಂಬ ಪಯೋಧರಂ ಸಮು
ಜ್ವಳನಯಮೆಂಬ ಗರ್ಜನಯುತಂ ವರಭವ್ಯಜನಂಗಳೆಂಬ ಸ
ಲ್ಲಲಿತಮಯೂರನರ್ತನನಿಬಂಧನಮುನ್ನತಧರ್ಮಮೆಂಬ ಪೆ
ರ್ಮಳೆಯನನಾರತಂ ಕಱೆದು ನಾಳ್ಪುದು ಲೋಕದ ತಾಪಶಾಂತಿಯಂ ೧೩

ಕಂದ: ಗೌತಮಗಣಧರಯತಿ[3]ಯಂ
ನೂ[2]ತಗುಣವ್ರಾತರತ್ನ[3]ಸರಿದಧಿಪತಿ[3]ಯಂ
ಪೂತನರಕೀರ್ತಿತತಿಯಂ
ಭೂತಳಕೃತನುತಿಯನನುದಿನಂ ವಂದಿಸುವೆಂ ೧೪

ಭೂತಬಲಿ ಪುಷ್ಪದಂತರ
ನಾತತಕಾರುಣ್ಯಜಳಧಿ ಹಿಮಕರನಿಭರಂ
ಸಾತಿಶಯಜ್ಞಾನಿ[4]ಗಳಂ[4]
ಧಾತ್ರೀಜನಮೆಯ್ದೆ ಬಣ್ಣಿಕುಂ ಮನದೊಲವಿಂ ೧೫

[5]ಪರಮಜಿ[5]ನಮತನಭೋಂಗಣ
ಪರಿರಾ[6]ಜಿತತ[6]ರಣಿ ಗೃಧ್ರಪಿಂಛಾಚಾರ್ಯೋ
ದ್ಧುರ ಭವ್ಯಮಧುಕರಾವೃತ
ಚರಣಾಂಭೋಜಾತಯುಗಲಮೀಗೆಮಗೊಳ್ಪಂ ೧೬

ಚಂಪಕಮಾಲೆ

ಅಲಘು[7]ಕಳಾ[7]ಕಳಾಪದ ವಿಶೇಷಮನಾಂತು ಸಮಂತು ಸಂತತಂ
ತೊಲಗಿಸಿ ದುರ್ಮತೋರುತಮಮಂ ಸುದಿಗಂಬರಮಾರ್ಗಮಂ ಸಮು
ಜ್ವಳಿಸಿ ಸುಧಾಂಶುಬಿಂಬಮೆನೆ ತಾಪದ ಶಾಂತಿಯನುಂಟುಮಾಡಿದಂ
ಲಲಿತ ಸಮಂತಭದ್ರಮುನಿಪುಂಗವನೀ ಧರಣೀತಳಾಗ್ರದೊಳ್ ೧೭

---

1 ಜನ (ಕಜ) 2 ಯುಕ್ತ (ಕ) 3 ಶರದಿಃಧಿ (ಕ) 4 ಯುತ (ಕ) 5 [ವರಜೈ] (ಕ) 6 ಜತ್ತ (ಜ) 7 ತರ (ಕ)

ಮನದೊಲವಿಂದೆ ಕೀರ್ತಿಪುದು ಸರ್ವಜಗಜ್ಜನಮೆಯ್ದೆ ಚಾರುಧೀ
ಧನಪತಿ ಪೂಜ್ಯಪಾದಮುನಿರಾಜನನುದ್ಧಸಮಸ್ತತೇಜನಂ
ವಿನತಜನಪ್ರತಾನ ಸುರಭೂಜನನಸ್ತಮನೋಜರಾಜನಂ
ಜಿನಮತಸಿಂಧುರಾಜಪರಿವರ್ಧನಪೂರ್ಣನಿಶಾಧಿರಾಜನಂ ೧೮

ಮಹಾಸ್ರಗ್ಧರೆ

ಪರಮಸ್ಯಾದ್ವಾದ ವಿದ್ಯಾನಿಶಿತಕುಲಿಶದಿಂ ತೀವ್ರಮಿಥ್ಯಾತ್ವಧಾತ್ರೀ
ಧರಮಂ ಮುಂ ನುಚ್ಚುನೂಱಪ್ಪಿನೆಗಮೊಡೆದು ಸಜ್ಜೈನಧರ್ಮಪ್ರಭಾವಂ
ಪಿರಿದುಂ ಭೂಭಾಗದೊಳ್ ಮೇಲೆನಿಸಿ ಸೊಗಯಿಸಲ್ಮಾಡಿ ವಿಖ್ಯಾತಿವೆತ್ತೀ
ಧರೆಗಾಚಾರ್ಯಾಕಳಂಕಪ್ರತಿಯ ಚರಣಮಂ ವಂದಿಪೆಂ ಭಕ್ತಿಯಿಂದಂ ೧೯

ಕಂದ: ಎಸೆವ ಜಿನಧರ್ಮಮಂ ತಾಂ
ವಸುಧೆಯೊಳುದ್ಧರಿಸಿ ಕೀರ್ತಿಯಂ ಪಸರಿಸಿದಂ
ಕುಸುಮಶರಬಾಣಭಂಜನ
ನಸಮಗಣಂ [1]ಕೊಂ[1]ಡಕುಂದಯತಿಪತಿ ಸತತಂ ೨೦

ಉತ್ಪಲಮಾಲೆ

ಮಾರನ ಗರ್ವಮೆಂಬ ವರಪರ್ವತಮಂ [2]ಹು[2]ಡಿಗುಟ್ಟಿ ರಾಜಿತಾ
ಚಾರ ವಿಶೇಷಮೆಂಬ ಕುಲಿಶಾಯುಧದಿಂದೆ ತಪಃಪ್ರಭಾವಮಂ
ಧಾರಿಣಿಯೊಳ್ ಕರಂ ತಳೆದನುತ್ತಮಭೂರಿಗುಣಾ[3]ಳಿ[3]ಶೋಭಿತಂ
ಚಾರುವಿಶಾಲಕೀರ್ತಿಮುನಿಪುಂಗವನಾತ್ತತಧೀನಿಕೇತನಂ ೨೧

ಧೀರರಪಾರಸದ್ಗುಣಮಣಿವ್ರಜವಾರಿಧಿಗಳ್ ಕಷಾಯಸಂ
ಹಾರಿಗಳಾತ್ಮಭಾವಪರ[4]ರಿದ್ಧ[4]ಜಿನೇಶ್ವರ ಧರ್ಮರಾಜಿಗಳ್
ಭೂರಿಚರಿತ್ರ ಬಾಹುಬಲಿದೇವರಭಿಷ್ಟುತ ಪಾರ್ಶ್ವದೇವರುಂ
ಸೂರಿವಿನೂತ[5]ನರ್ ವಿ[5]ಶದ ಕೀರ್ತಿಯನಾಂತೆಸೆದರ್ ನಿರಂತರಂ ೨೨

ಕಂದ: ಪರಮಶ್ರುತ ಮುನಿಗಳ ಸ
ತ್ಕರುಣಾವಾರಿಧಿಯೊಳೆಯ್ದೆ ಮುಳ್ಗಿದ ಜೀವೋ
ತ್ಕರಮತಿಸುಖಿಯಾಗಿರ್ಕುಂ
ಭರದಿಂ ಮುಳ್ಗದೊಡೆ ದುಃಖಿಯಕ್ಕುಂ ಚಿತ್ರಂ ೨೩

---

[1] ಕುಂ (ಕ) [2] ಪು (ಜ) [3] ಭಿ (ಜ) [4] ರುದ್ಧ (ಜ) [5] ವಿದ್ವಿ (ಕ) ವದ್ವಿ (ಚ)

ವೀರಂ ಬಲಾಳರಾಯ ಮ
ಹೀರಮಣನ ಜೀವರಕ್ಷಕಂ [1]ಸ[1]ಕಳಕಳಾ
ಗಾರಂ ಜಿನಧರ್ಮಮನು
ದ್ಧರಿಸಿದಂ ಚಾರುಕೀರ್ತಿ ಪಂಡಿತದೇವಂ ೨೪

ಪಟ್ಟಯತಿ ಧರ್ಮಭೂಷಣ
ಭಟ್ಟಾರಕರಂ ಜಗಜ್ಜನಂ ಸಂತೋಷಂ
ಬಟ್ಟು ಬಣ್ಣಿಸುತಮಿರ್ಕುಂ
ನೆಟ್ಟನೆ ಜಿನಧರ್ಮಭೂಷಣರನುರುಗುಣರಂ ೨೫

ಕೊಂಡಾಡುತ್ತಿರ್ಕುಂ ಭೂ
ಮಂಡಳಮುರುಲಕ್ಷ್ಮೀಸೇನಭಟ್ಟಾರಕರಂ
ಖಂಡಿತಮತ್ಸ್ಯಧ್ವಜಕೋ
ದಂಡರಸುದ್ದಂಡವಾದಿ ಕರಿಹರಿನಿಭರಂ ೨೬

ಉತ್ಪಲಮಾಲೆ

ಜೈನಮತಾಂಬುರಾಶಿಪರಿವರ್ಧನಚಂದ್ರನನಸ್ತ[2]ತಂ[2]ದ್ರನಂ
ಮಾನಿತಸಾರಸರ್ವಗುಣರುಂದ್ರನನುನ್ನತಕೀರ್ತಿಸಾಂದ್ರನಂ
ಪೀನವಿಮೋಹವಾರಣಮೃಗೇಂದ್ರನಸದ್ಘಕೃಪಾನದೀಂದ್ರನಂ
ಭೂನುತಮೇಘಚಂದ್ರನನಶೇಷಜನಂ ನಲವಿಂದೆ ಬಣ್ಣಿಕುಂ ೨೭

ಚಂಪಕಮಾಲೆ

ಯತಿ ನಯಕೀರ್ತಿದೇವನನಪಾಸ್ತಸಮಸ್ತಮನೋವಿಭಾವನಂ
ವಿತತಮಹಾನುಭಾವನನುಪಾತ್ತಜಿನೇಶ್ವರಪಾದಸೇವನಂ
ಜಿತಖಳಕಾಮದೇವನನಶೇಷಜನಸ್ತುತಸಾಧುಭಾವನಂ
ಧೃತಶುಭಭಾವನಂ ಮುದದೆ ವಂದಿಸುವೆಂ ಗುರುಭಕ್ತಿಪೂರ್ವಕಂ ೨೮

ಉತ್ಪಲಮಾಲೆ

ಮುನ್ನಿನ ಕಾಲದೊಳ್ ನೆಗಳ್ದ ಭೂಪರನೀಗಳನೂನಕಾಂತಿಸಂ
ಪನ್ನಮೆನಿ[3]ಪ್ಪ ಕಾವ್ಯ[3]ಮಣಿದರ್ಪಣದೊಳ್ ನೆಱೆತೋಱಿಸು[4]ತ್ತುಮಿ
ರ್ಪ[4]ನ್ನತಚಾತುರೀನಿಳಯಮಾದ ಮಹಾಕವಿವೃಂದಮಂ ಕರಂ
ಮನ್ನಿಸಿ ನಿಚ್ಚಲುಂ ಬಿಡದೆ ಕೀರ್ತಿಸದಿರ್ಪವರಾರೊ ಲೋಕದೊಳ್ ೨೯

---

1 ಸು (ಜ) 2 ಚಂ (ಜ) 3 ಪ್ಪುದ್ಘ (ಕಚ) 4 ತ್ತು।ಮು (ಕಚ)

*
ಮತ್ತೇಭವಿಕ್ರೀಡಿತ

ಭಣಿತಾನೇಕನಯಂ ಗಜಾಂಕುಶನುದಾತ್ತಂ ನಾಗವರ್ಮಂ ರಸಾ
ಗ್ರಣಿ [1]ಹಂ[1]ಪಂ ಕವಿರಾಜ ನೇಮಿಕವಿ ಭಾಳಾಕ್ಷಾಖ್ಯಕಂ ಜನ್ನಿಗಂ
ಗುಣಿರನ್ನಂ ಕವಿಚಕ್ರಿಯಗ್ಗಳನುಮೆಂಬೀ ಸರ್ವವಿದ್ವಚ್ಛಿರೋ
ಮಣಿ ರಾಜತ್ಕವಿವೃಂದದಿಂದೆಸೆದುದೀ ಭೂಮಂಡಳಂ ಸಂತತಂ ೩೦

ಕಂದ: ಬಹುಧಾನ್ಯವೃದ್ಧಿಗಾಗಿಯೆ
ಮಹಿಯೊಳ್ ಪ್ರಭವಿಸಿ ಕಳಾಧರೋನ್ನತಿಯಂ ನಿ
ರ್ವಹಿಸಿ ಶರತ್ಕಾಲದವೊಲ್
ಪ್ರಹತಿಸುಗೆ ಸಮಗ್ರಪಂಕಮಂ ಸುಜನೌಘಂ ೩೧

ಏಕಸ್ವರೂಪ ಸುಜನಾ
ನೀಕಮನಕ್ಕೆಂತು ಸದೃಶಮಕ್ಕುಂ ಕಂಡೊಂ
ದಾಕಾರ ಸ್ವೀಕಾರದಿ
ನೇಕಸ್ಥಿತಿ[2]ಯ[2]ಲ್ಲದಿರ್ಪ ವಿಕಟಸ್ಫಟಿಕಂ ೩೨

†

ಆ ಸಜ್ಜನಚಯದೊಳ್ ದೋ
ಷಾಸಕ್ತರೆನಿಪ್ಪ ದುರ್ಜನರ್ ಬೆರಸಿರ್ಪರ್
ಭಾಸುರಸುಧಾಂಶುಬಿಂಬಕ
ೞಾಸಮುದಯದೊಳ್ ಕಳಂಕಮಿರ್ಪಂತೆ [3]ಪೊಲಂ ೩೩

ವಕ್ರಗತಿಯುಭಯಜಿಹ್ವಂ
ಮಿಕ್ಕು ಜಗತ್ಪ್ರಾಣನಾಶಕಾರಿ ಧರಿತ್ರೀ
ಚಕ್ರದೊಳೆಯ್ದುವ ಕೃತಿಯಂ
[3]ಚಕ್ರಿಯವೊಲ್[3] ಮಾಡಿ ದುರ್ಜನಂ ನೋಯಿಸುಗುಂ ೩೪

ಖಳಸೇವೆಯಿಂದೆ ಮದ್ಗೋ
ಕುಳಮಾಕರ್ಣೋರುಪಾತ್ರದೊಳ್ ಪಿರಿದೊಂದ
ಗ್ಗಳಮಪ್ಪಮೃತಮನೀ ಭೂ
ವಳಯಮೊಳನವರತಮೆಯ್ದೆ ಕಱೆಯುತ್ತಿರ್ಕುಂ ೩೫

---

[1] ಪಂ (ಜ) [2] ಯಿ (ಜ) [3] ಯೊ (ಕಜ)

* ಸಜ್ಜನ ಪದ್ಧತಿ (ಗಚ) † ದುರ್ಜನ ಪದ್ಧತಿ (ಗಚ) ಇದೇ ರೀತಿ ವಿಷಯನಿರೂಪಣಾ ವಾಕ್ಯಗಳು ಮುಂದೆಯೂ ಈ ಪ್ರತಿಗಳಲ್ಲಿ ಬಂದಿದೆ.

ಮತ್ತೇಭವಿಕ್ರೀಡಿತ

ಕವಿ ತಾಂ ಶ್ರವ್ಯಮೆನಿಪ್ಪ ಕಾವ್ಯಮನಿದಂ ಚಾತುರ್ಯದಿಂ ಪೇಳ್ದೊಡಂ
ಸುವಿವೇಕರ್ ಪರಿತೋಷಮಂ ತಳೆವರೆಂದುಂ ತಾಳರತ್ಯುದ್ಧತರ್
ನವಮಾಧುರ್ಯದ ಸೀಮೆಯಾದ ವಿಲಸತ್ಪೀಯೂಷ[1]ದ[1] ಸ್ವಾದನಂ
ದಿವಿಜವ್ರಾತಮೆ ಬಲ್ಲುದಲ್ಲದೆ ಪಿಶಾಚಾನೀಕಮೇಂ ಬಲ್ಲುದೇ ೩೬

ಉತ್ಪಲಮಾಲೆ

ದುರ್ಜನರೆಯ್ದೆ ದೂಱುವರೆಂದು ಮಹಾಕವಿ ಮಾಳ್ಪ ಕಾವ್ಯಮಂ
ಸಜ್ಜನವಂದ್ಯಮಂ ಬಿಡುವನಲ್ಲನದೆಂತೆನೆ [2]ಪೇ[2]ನಿಗಂಜಿ ಸಂ
ವರ್ಜಿಪರುಂಟೆ ಕುಂತಳಮನೊಲ್ಲರೆ ಕಂಟಕಕಂಜಿ ಯಾನಮಂ
ಸಜ್ಜೆ ನಿವಾಸಮಂ ಬಿಡುವರುಂಟೆ ಕುಮತ್ಕುಣದಂಶಭೀತಿಯಿಂ ೩೭

ಚಂಪಕಮಾಲೆ

ಪಳಿವರೆಂ[3]ದಿ[3]ದೊಂದು ಭಯ[4]ದಿಂ[4]ದೆ ವಿಚಾರಿಸಿ ಚಾರುಶಬ್ದದಿಂ
ದಳವಡುವರ್ಥದಿಂ ಸಮೆದೆ ಸಾ[5]ನ[5]ದಱೊಳ್ ಮಱಹಿಂದೆ ದೋಷಮೊಂ
ದುಳಿದೊಡಮಂತದಂ ಪ್ರಕಟಿಪಾ ನೆವದಿಂ ನಿಜವಕ್ತ್ರದೊಳ್ [6]ಜೆ[6]ಳರ್
ತಳೆಯೆ ಸದೋಷಮಾದುದದು ಮತ್ಕೃತಿ ಶುದ್ಧಿಯನೆಯ್ದೆ ರಂಜಿಕುಂ ೩೮

ಉತ್ಪಲಮಾಲೆ

ಪುಣ್ಯದಿನಾದ್ಯಮಪ್ಪ ಮತಿಯಾದೊಡೆ ಶಾಸ್ತ್ರಮನೋದಿ ಸದ್ಗುಣಾ
ಗಣ್ಯಜಿನೇಶ ಚಾರುಚರಿತಾಂಕಿತಕಾವ್ಯಮನೆಯ್ದೆ ಮಾಡಿ ಸೈ
ಪುಣ್ಯಮನಂತಮಂ ಕವಿ ಕೃತಾರ್ಥನದಲ್ಲದೆ ಪಾಪಹೇತುವಂ
ಬಣ್ಣಿಸಿ ದುಃಖಮಂ ಪಡೆವನುಂ ಕವಿಯೇ ಕೃತಿಯುಂ ಕೃತಾರ್ಥಮೇ ೩೯

ಶಾರ್ದೂಲವಿಕ್ರೀಡಿತ

ಎತ್ತಾನುಂ ಜಿನನಾಮಮಂ ಪಲವುಕಾಲಕ್ಕೊರ್ಮೆ ಜಿಹ್ವಾಗ್ರದಾ
ಯತ್ತಂ ಮಾಡಿದವರ್ಗೆ ಕರ್ಮಮನಿತುಂ ಕೆಟ್ಟೋಡಿಪೋಕೆಂದೊಡಾ
ಪೊತ್ತುಂ ತಚ್ಚರಿತೌಘಮಂ ಹೃದಯದೊಳ್ ತಾಳ್ದಿರ್ದ ತತ್ಕಾವ್ಯಮಂ
ಮತ್ತಂ ಮಾಳ್ಪನ ಪಾಪಹಾನಿಯನದೇನಂತಿಂತೆನಲ್ ತಕ್ಕುದೇ ೪೦

ಮತ್ತೇಭವಿಕ್ರೀಡಿತ

ರಮಣೀಯಂ ಕೃತಭೂಪರಾಗಮುಮನುಂ ಚಿತ್ರಾನುಬದ್ಧಂ ಸ್ಮರಾ
ಶ್ರಮಮಾರ್ಗೋದಿತ ನಿವಾಸಮಪ್ಪ ವಿಲಸತ್ಕಾವ್ಯಂ ಮಹೀಚಕ್ರದೊಳ್
ಸುಮನೋಮಾಲ್ಯದವೊಲ್ ಸುನಾಯಕ ಗುಣಪ್ರೋದ್ದಾಮಮಾಗಿರ್ದೊಡು
ತ್ತಮಪುಣ್ಯಾಧಿಕಕಂಠಭೂಷಣಮದಕ್ಕಂತಲ್ಲದಂದಕ್ಕುಮೇ ೪೧

[1] ದಾ (ಜ) [2] ಪೇ (ಜ) [3] ಬ (ಕ) [4] ದಂ (ಕ) [5] ನಿ (ಜ) [6] ಖ (ಕಗಚ)

ಮತ್ತೇಭವಿಕ್ರೀಡಿತ

ಕೃತಿ ಲೇಸಲ್ಲದೊಡಂ ಜಿನೇಶ್ವರ ಕಥಾಸಂದರ್ಭಸಂಬಂಧಸಂ
ಗತಮಾಗಿರ್ದನಿಮಿತ್ತಮಾದರಿಸುವರ್ ವಿದ್ವಾಂಸರೀ ಕಾವ್ಯಮಂ
[1]ಕ್ಷಿ[1]ತಿಯೊಳ್ ಮೃಣ್ಮಯಪಿಂಡಮಂ ಧರಣಿಪಾಲಾಜ್ಞಾಧಿಮುದ್ರಾಸಮಂ
ಕಿತಮಾಗಿರ್ದುದೆಕಾರಣಂ ತಲೆಯಮೇಲಿಟ್ಟಾದರಂ ಮಾಡರೇ ೪೨

ಕಂದ: ಕೃತಿ ಬಾಹುಬಲಿ ಮುನೀಶನ
ಮತಿಯೆಂಬ ವಿಶಿಷ್ಟಸಸ್ಯಮಂ ಪೆರ್ಚಿಸಿ ಸುಫ
ಲಿತಮಾಗಿ ಮಾಡಿದತ್ತೀ
ಕ್ಷಿತಿಸುತ ನಯಕೀರ್ತಿಯತಿಯ ಕಾರುಣ್ಯರಸಂ ೪೩

ಚಂಪಕಮಾಲೆ

ಅಱಿಯದ ವಿದ್ಯೆಯಿಲ್ಲ ಬಿಡದೋದದ ಕೇಳದ ಶಾಸ್ತ್ರವಿಲ್ಲ ಕೊ
ರ್ತೆಱಿಗದ ಭೂಪರಿಲ್ಲ ಸಲೆ ಸೋಲದ ವಾದಿಗಳಿಲ್ಲ ಸಂತತಂ
ನೆಱೆತಿಯೆ ಸಮಸ್ತರುಂ ಪೊಗಳದಿರ್ದ ಕವಿತ್ವಮುಮಿಲ್ಲ ಲೋಕದ
ಲ್ಲಿಱಿತ ನಯಕೀರ್ತಿದೇವಸುತ ಬಾಹುಬಲಿಪ್ರತಿಶಕ್ತಿಯದ್ಭುತಂ ೪೪

ಮತ್ತೇಭವಿಕ್ರೀಡಿತ

ನಯಕೀರ್ತಿವ್ರತಿನಂದನಂ ಸಕಳವಿದ್ಯಾಚಕ್ರವರ್ತ್ಯಾಹ್ವಯಂ
ದ್ವಯಭಾಷಾಕವಿತಾತ್ರಿಣೇತ್ರನುರುಹೋರಾಶಾಸ್ತ್ರಸರ್ವಜ್ಞಕಂ
ನಯಯುಕ್ತಂ ಪರಮಮೂಲಸಂಘದೊಡೆಯಂ ದೇಶೀಗಣಾಗ್ರೇಸರಂ
ಪ್ರಿಯದಂ ಪುಸ್ತಕಗಚ್ಛಪೂರ್ಣತಿಳಕಂ ಶ್ರೀ[2]ಕೊಂ[2]ಡಕುಂದಾನ್ವಯಂ ೪೫

ಮಹಾಸ್ರಗ್ಧರೆ

ನಿಪುಣಂ ಷ[3]ಟ್ತ[3]ರ್ಕದೊಳ್ ವ್ಯಾಕರಣದೊಳಧಿಕಂ ಛಂದದೊಳ್ ತಾನಭಿಜ್ಞಂ
ವಿಪುಳಾಳಂಕಾರಭೇದಂಗಳೊಳತಿಚತುರಂ ಕಾವ್ಯದೊಳ್ ತಾನೆ ಬಲ್ಲಂ
ಸ್ವಪರೋದಾರಾಗಮವ್ಯಕ್ತಿಯೊಳತಿಕುಶಲಂ ನಾಟಕಾಖ್ಯಾನದೊಳ್ ತಾ
ನೆ ಪುರುಪ್ರಜ್ಞಾವಿಶೇಷಂ ಭುಜಬಳಿಯತಿಪಂ ಮತ್ತೆ ಬೊಟ್ಟಿತ್ತಲುಂಟೇ ೪೬

ಕಂದ: ಇಂತಪ್ಪಧಿಕ ಸುಸಾಮ
ರ್ಥ್ಯಂ ತನಗಳವಟ್ಟು ತೋಱಿತ ತಪಮಂ ಬಾಲ್ಯದೊ
ಳಾಂತು ನಿಜಕೀರ್ತಿ ಸಕಳದಿ
ಗಂತದೊಳೆಸೆವಂದು ಬಾಹುಬಲಿಮುನಿ ನೆಗಳ್ದಂ ೪೭

---

1 ಕ್ಷ (ಕಚ) 2 ಕುಂ (ಕ) 3 ಟ್ಕರ್ಮ (ಜ)

ಮತ್ತೇಭವಿಕ್ರೀಡಿತ

ಮೊದಲೊಳ್ ಸಂಸ್ಕೃತಭಾಷೆಯಿಂ ಬುಧಜನಂ ಕೊಂಡಾಡುತಿರ್ಪಂತೆ ಸಂ
[1]ಮು[1]ದದಿಂ ಗುಮ್ಮಟನಾಥ ಸಚ್ಚರಿತಮೆಂಬೀ ಕಾವ್ಯಮಂ ಪೇಳ್ದು ಮಾ
ಣದೆ ಕರ್ಣಾಟಕದಿಂದೆ ಮತ್ತೆ ರಚಿಸಿ ಶ್ರೀಧರ್ಮನಾಥಪ್ರಬಂ
ಧದ ಪೆರ್ಚಂ ತಳೆದಂ ಸಮಂತುಭಯಭಾಷಾಕಾವ್ಯಕರ್ತೃತ್ವಮಂ ೪೮

ಚಂಪಕಮಾಲೆ

ನಯವಿದರೆಲ್ಲರುಂ ಪೊಗಳೆ ಜಾಣ್ಣುಡಿ ಮಿಕ್ಕಿರೆ ಕಾವ್ಯಮಂ ಗುಣೋ
ದಯಪರಮಾಗೆ ಮಾಡಿ ನಯಕೀರ್ತಿಯತೀಶ್ವರರಗ್ರಶಿಷ್ಯನಿಂ
ತಯಯುತನಪ್ಪ ಬಾಹುಬಲಿಪಂಡಿತದೇವನಭಿಷ್ಟುತಂ ಮಹೋ
ಭಯಕವಿಚಕ್ರವರ್ತಿ ಪೆಸರಿಂದೆಸೆದಂ ಜಗದೊಳ್ ನಿರಂತರಂ ೪೯

ಮತ್ತೇಭವಿಕ್ರೀಡಿತ

ನವಶೃಂಗಾರರಸಪ್ರವಾಹಮತುಳಾಲಂಕಾರಸಂಶೋಭಿತಂ
ಧರಣೀಮಂಡಲಲಾಲಿತಂ ಮೃದುಪದನ್ಯಾಸಾಭಿರಮ್ಯಂ ಸಮು
ದ್ಧುರಭಾವಂ ಕವಿಚಕ್ರವರ್ತಿಯ ಲಸತ್ಕಾವ್ಯಂ ಮಹಾವಾರಸೌಂ
ದರಿಯಂತೆಲ್ಲರನೆಯ್ದೆ ರಂಜಿಸಿ ಮನಸ್ಸಂತೋಷಮಂ ಮಾಡುಗುಂ ೫೦

ಕಂದ : ಸುರಲೋಕದವೋಲಮೃತೋ
ತ್ಕರಮಂ ನೆಱೆಕೞೆದು ಬಾಹುಬಲಿಪಂಡಿತದೇ
ವರ ವಚನವಿಳಾಸಂ ಚಿ
[2]ತ್ರ[2]ರಮಂ ಸುರಸಾರ್ಥಲೀಲೆಯಂ ಪೆರ್ಚಿಸುಗುಂ ೫೧

ಉತ್ಪಲಮಾಲೆ

ಚಿತ್ತದೊಳಾವಗಂ ನೆಲಸಿದತ್ತು ಮಹಾಭ್ರಮೆ ನಿದ್ರೆಯೆಂಬಿದ
ತ್ತತ್ತಲೆ ಮಾಱಿ ಪೋಯ್ತು ಕವಿತಾಗ್ರಹಮೆಂಬ ಖಳಗ್ರಹಂ ಪೊದ
ಳ್ದೊತ್ತಿದೊಡಾದುದಿಂತಿನಿತುಮಾಗ್ರಹಿ [ಬಾಹುಬ]ಳಂ ಕವೀಶನ
ತ್ಯುತ್ತಮ ಪೂಜ್ಯನಾಗಿ ಪರಕೀರ್ತಿಯನಾಂತನಿದೇಂ ವಿಚಿತ್ರಮೋ ೫೨

ಚಂಪಕಮಾಲೆ

ಮಳೆವನಿಯುಂ ಧರಾತಳದೊಳೊಂದೆರಡೆಂದೆಣಿಸಲ್ಕೆ ಶಕ್ತಿಯುಂ
ತಳೆದೊಡೆ ತಾಳಲಕ್ಕು ನಭಮಂ ಕರದಿಂದುಱೆ ಗೇಣನಿಟ್ಟು ಮ
ತ್ತಳೆವಡೆ ಲೆಕ್ಕಮಂ ಬಿಡದೆ ಮಾಳ್ಪಡಮಕ್ಕು ಜಿನೇಶ ಸದ್ಗುಣಾ
ವಳಿಗಳನೆಯ್ದೆ ಪೇಳಲರಿದೀ ಭುವನತ್ರಯದೊಳ್ ನಿರಂತರಂ ೫೩

1 ಮು (ಜ) 2 ತ್ರಿ (ಜ)

ಜಿನಗುಣಮೆಲ್ಲಮಂ ಕೊಱತೆಯಿಲ್ಲದೆ ಪೇಳ್ದಪೆನೆಂಬಿದುದ್ಧವಾ
ಗ್ವಸಿತೆಗೆ ತೀರದಾ ಗಣಧರಾವಳಿಗಾಗದು ಪನ್ನಗಾಧಿರಾ
ಜನವಶ[1]ವಲ್ಲ[1] ಮತ್ತೆ ಜಡಬುದ್ಧಿಯನುಳ್ಳನನಾದೊಡಾನುಮೀ
ಮನದೊಲವಿಂದೆ ಮಾಳ್ಪೆನದನೆಂಬವನಗ್ಗಳದೆಗ್ಗನಲ್ಲವೇ ೫೪

ಉತ್ಪಲಮಾಲೆ

ಆದೊಡಮೇ[2]ನೊ[2] ಮುನ್ನಿನ ಮಹಾಮುನಿನಾಥರ ವಾಕ್ಯದೋಜೆಯಿಂ
ಮೇದುರ ಧರ್ಮನಾಥಚರಿತಾಂಕಿತ ಕಾವ್ಯವಿಧಾನಶಕ್ತಿ ತಾ
ನಾದುದು ಜಾಡ್ಯಮಪ್ಪೆನಗಮಂತದಱಿಂದದನೆಯ್ದೆ ಮಾಳ್ಪೆ ನಾಂ
ಮೇದಿನಿಯೊಳ್ ಗಜೇಂದ್ರಪ[3]ಥ[3]ದೊಳ್ ಪರಿವರ್ತಿಸುವಂತೆ ಕಾಳಭಂ ೫೫

ಶಾರ್ದೂಲವಿಕ್ರೀಡಿತ

ಪೂರ್ವಾಚಾರ್ಯ[4]ದಿ[4]ನೇಶರುಂ ಸ್ವವಚನಪ್ರಜ್ಯೋತಿಯಂ ಮನ್ಮನೋ
ಖರ್ವಾ[5]ತ್ಯ[5]ಲ್ಪಗವಾಕ್ಷದೊಳ್ ಪುಗಿಸೆ ಮತ್ತಭ್ಯಂತರಾಗಾರಮಂ
ನಿರ್ವಾದಂ ಬೆಳಗುತ್ತಿರಲ್ ಬಹುವಿಧಾರ್ಥವ್ಯಕ್ತಿ ತಾನಾಗದೇ
ಸರ್ವೋರ್ವೀತಳದೊಳ್ ಪ್ರಸಿದ್ಧಿವಡೆಗುಂ ಕಾವ್ಯಂ ಸದರ್ಥೋತ್ಕರಂ ೫೬

ಚಂಪಕಮಾಲೆ

ಶುಭಪರಿಣಾಮಮೆಯ್ದೆ ಮನದೊಳ್ ನೆಲೆಗೊಳ್ಗು ದುರಿಂದ್ರಿಯಂಗಳ
ಪ್ರಭವಮಡಂಗಿಪೋಕು ಪರಭಾವನೆ ಪೊರ್ದದು ಪುಣ್ಯಹೇತುವೆಂ
ದಭಿನವಮಾಗಿ ಧರ್ಮಜಿನನಾಥಪುರಾಣಮನೊಲ್ದು ಪೇಳಲಾ
ನಭಿರುಚಿಯಿಂದೆ ತಂದೆನಿರದೀ ಮನಮಂ ಜಿನಭಕ್ತಿಯುಕ್ತಮಂ ೫೭

ಶಾರ್ದೂಲವಿಕ್ರೀಡಿತ

ಮೊದಲೊಳ್ ತದ್ಧರ್ಮಶರ್ಮಾಭ್ಯುದಯಮನೊಲವಿಂದೋದಿ ಕರ್ಣಾ
ಟದಿಂ ಮತ್ತದನೀಗಳ್ ಪೇಳ್ವೆನೆಂಬುಜ್ಜುಗದೊಳಿರುತಿರಲ್ ಭವ್ಯಸಂದೋಹಮಂ ಸ
ನ್ಮುದಮಾಗಲ್ ಜೀಯ ನೀವೀ ಕೃತಿಯನಿರದೆ ಪೇಳಲ್ಕೆ[6]ವೇಳೆಂದೊಡೀ[6] ಸೌ
ಹೃದಮೂರ್ತೋತ್ಕಂಪಮಾಗುತ್ತಿರೆ ವಿರಚಿಸಿದಂ ಚಾತುರೀಜನ್ಮಗೇಹಂ ೫೮

ಕಂದ: ಪ್ರಥಮಾ ನಿಯೋಗಯುಕ್ತಂ
ಪ್ರಥಿತಜಿನೇಶ್ವರವಿಬೋಧಬೀಜೋದ್ಭೂತಂ
ಪೃಥುನಯಶಾಖಾಕೀರ್ಣಂ
ಪೃಥುವೀಮರದಲ್ಲಿ ಕೊರ್ಬಿ ಪರ್ವಿದುದೀಗಳ್ ೫೯

---

1 ಮಲ್ತು (ಜ) 2 ಸು (ಕಚ) 3 ದ (ಕಚ) 4 ಜಿ (ಜ) 5 ಕ್ಷ್ಯ (ಕಚ) 6 ವೇಳ್ಕೆಂದೊಡಂ (ಜ)

ಸ್ರಗ್ಧರೆ

ಎತ್ತೆತ್ತಂ ನೋಳ್ಪಡೆಂತುಂ ಕಡೆನಡುಮೊದಲೆಂಬೀ ವಿಭೇದಂಗಳಂ ತೋ
ಱುತ್ತಿಲ್ಲಿಂತೆಂದೆನಿಪ್ಪಾಗಸದೊಳಧಿಕವಾಯುತ್ರಯಾವೇಷ್ಟಿತಂ ಸಂ
ವಿತ್ತಂ ಷಡ್ದ್ರವ್ಯಪೂರ್ಣಂ ಕೃತಿರಹಿತಮಧಸ್ತಿರ್ಯಗೂರ್ಧ್ವತ್ರಿಭೇದಾ
ಯತ್ತಂ ನಿತ್ಯೈಕರೂಪಂ ತ್ರಿಜಗಮೆಸೆಗುಮಿರ್ಪೇಳುರಜ್ಜುಪ್ರಮಾಣಂ ೬೦

ಕಂದ: [1]ಆ[1]ಲೋಕತ್ರಯಲಕ್ಷ್ಮಿಯ
ಲಾಲಿತ ತನುಮಧ್ಯಮೆನಿಪ ಮಧ್ಯಮಲೋಕಂ
ಲೀಲಾಸಂಖ್ಯಾತದ್ವೀ
ಪಾಳಿಸಮುದ್ರಂಗಳಿಂ ವಿರಾಜಿಸುತಿರ್ಕುಂ ೬೧

ವಚನ: ಅಲ್ಲಿಂಪತ್ತ್ರನೇಕರಜ್ಜು ವಿಸ್ತಾರಿತಮುಮಸ್ತ್ರೋಕಸ್ವಯಂಭೂರಮಣ ಜಳಧಿಪರಿವೃತಮುಮಾದನೇಕ ಸುಕೃತಾನೀಕ[2]ದುಪಾರ್ಜನಬೀಜೋ[2]ಕಮಾಗಿ ಸಮಸ್ತರ ಸತ್ಕ್ಷೇತ್ರಮುರಂ ಮಾಳ್ಪುದಱಿಂ ಮಧ್ಯಮಮಾಗಿಯುಮೆಲ್ಲಾ ಲೋಕಕ್ಕತ್ಯುತ್ತಮಮೆನಿಸಿ ಸೊಗಯಿಸುವ ಬಹಳಾಶ್ಚರ್ಯಕಾರಿಯಪ್ಪ ತಿರ್ಯಗ್ಲೋಕದ ನಟ್ಟನಡುವೆ

ಮಹಾಸ್ರಗ್ಧರೆ

ಪುರುಚಂಚತ್ಸೈನಮುದ್ರಂ ನಿರವಧಿಮಣಿಭದ್ರಂ ನಿಮಗ್ನೀಕೃತಾರ್ಧಂ
ದರ[3]ಕೃಷ್ಣಕ್ಷಾ[3]ದಿಭದ್ರಂ ಕೃತಕುಹರತಳಾದ್ರಂ ಮಹತ್ವಾದರಿದ್ರಂ
ಪರಗಂಗಾಯೋಗರುದ್ರಂ ಘುಳುಘುಳುರವರೌದ್ರಂ ಮಹಾಭೀಷಣಾದ್ರಂ
ಗರಿಮಾದ್ರಂ ರಾಜಕುಂಭೀಕರಲವಣಸಮುದ್ರಂ ತರಂಗೋದ್ವಿನಿದ್ರಂ ೬೨

ಸ್ರಗ್ಧರೆ

ಆಪಾರಾಪಾರಮಧ್ಯಸ್ಥಿತಸರಸಿಜಮೆಂಬಂತೆ ಸಂಪನ್ನಜಂಬೂ
ದ್ವೀಪಂ ತಾಳ್ದಿತ್ತು ಚೆಲ್ವಂ ಬಹುವಿಧಪರಮಕ್ಷೇತ್ರ[4]ಪ[4]ತ್ರಾಭಿರಮ್ಯಂ
ಸರ್ಪಾಧೀಶೋರುದಂಡಂ ಕನಕಧರಣಿಭೃತ್ಕರ್ಣಿಕಾರಾಜಮಾನಂ
ಶ್ರೀಪೂರ್ಣಂ ಚಾರುಸೌಖ್ಯಪ್ರಬಲಪರಿಮಳಂ ಸರ್ವರಿಂ ಲಾಲನೀಯಂ ೬೩

ಉತ್ಪಲಮಾಲೆ

ಮೇರುಮನೇಂಪ್ರಮೆಂಬ ವರಮೌಲಿಯನಿಕ್ಕಿ ದಿನೇಶರೆಂಬ ಪಂ
ಕೇರುಹಯುಗ್ಮಮಂ ಪಿಡಿದು ಲಾವಣವಾರಿಧಿಯೆಂಬ ವಸ್ತ್ರಮಂ
ಚಾರುವೆನಲ್ಕೆಯುಟ್ಟು ರಜತಾದ್ರಿಗಳೆಂಬ ಗಜಂಗಳಿಂದಲಂ
ಕಾರಮನೆಯ್ದೆ ಲಕ್ಷ್ಮಿಯುಮವೊಲೊಪ್ಪಮನಾಳ್ದುದು ದೀಪಮಾಪಗಂ ೬೪

1 ಶ್ರೀ (ಜ) 2 ಧೂಪಾರ್ಜನಬೀಜಾ (ಜ) 3 ತ್ಪನ್ನಾತಾಪ್ರ (ಜ) 4 ಪಾ (ಜ)

ಚಂಪಕಮಾಲೆ

ಬಹುವಿಧಭೋಗಭೂಮಿ ಕುಲಗೋತ್ರವಿರಾಜಿ ಸಮಗ್ರವಾಹಿನೀ
ಮಹಿತತರಂ ವಿಶೇಷಿತಸುವರ್ಣಭರಂ ವಿಬುಧಾಳಿಸೇವಿತಂ
ಮಹಿಮಸಮನ್ವಿತಂ ವಿಶದಭೂರಿಯಶಸ್ತತಿ ಜಂ[1]ಬುದೀ[1]ಪಮಾ
ಮಹಿತಳದಲ್ಲಿ ತನ್ನ ಸಕಲಾಧಿಪತಿತ್ವಮನುಂಟುಮಾಡುಗುಂ ೬೫

ವಚನ: ಅಂತೊಂದುಲಕ್ಷಯೋಜನವಿಸ್ತಾರದಿಂ ಪ್ರಶಸ್ತಮಾದ ಜಂಬೂದ್ವೀಪದ ಮಧ್ಯಕ್ಕಳಂಕಾರಮೆನಿಸಿ

ಉತ್ಪಲಮಾಲೆ

ಪನ್ನಗಲೋಕಮುಂ ಬಿಡದೆ ಮೆ[2]ಟ್ಟಿ[2] ಮನುಷ್ಯರ ಲೋಕಮೆಲ್ಲಮುಂ
ತನ್ನಯ ಪಾದಸೇವನೆಯೊಳೊಂದಿಸಿ ಚೂಳಿಕೆಯಗ್ರಭಾಗದಿಂ
ಸ್ವರ್ನಿಳಯಂಬರಂ ನಿಮಿರ್ದು ಮೂಜಗದೊಳ್ ಮಹಿಮಾಪ್ರಭಾವದಿಂ
ದುನ್ನತಮಾದ ಮೇರುಗಿರಿ ಪುಟ್ಟಿಸುತಿರ್ದುದಗುರ್ವನಾವಗಂ ೬೬

ಕಂದ: ಕೆಲದೊಳ್ ಬೀಳ್ವ ಪತಂಗಾ
ಕಳಿತ ಸುಮೇರುಪ್ರದೀಪಶಿಖಿಯೊಳ್ ಘನಕ
ಜ್ಜಳಮುಂ ಕೊಳಲೆಂದಿಕ್ಕಿದ
ವಿಳಸಿತಖರ್ಪರದ ತೆಱದಿನಿರ್ದುದು ಗಗನಂ ೬೭

*

ಮತ್ತೇಭವಿಕ್ರೀಡಿತ

ಕ್ಷಮೆಯಂ ತಾಳ್ದಿ ಸುಜಾತರೂಪಮುಯುರೂಪಿಂದೊಪ್ಪಿ [3]ತುಚ್ಛೇತರಾ[3]
ಗಮದೊಳ್ ಕೂಡಿ ಸುದರ್ಶನಾಖ್ಯೆಯನದಾವಂ ಪೆತ್ತನೆನ್ನಂತಿರು
ತ್ತಮಮಪ್ಪಾ ಮನುಜಂಗೆ ಮುಕ್ತಿ ಸಸಿನಂ ತಾನಕ್ಕುಮಿಂತೆಂದನು
ಕ್ರಮದಿಂ ಪೇಳ್ವವೊಲೊಪ್ಪುಗುಂ ತಿಳಿಸಿ ಮತ್ತೀ ಮಂದರಂ ಮಂದರಂ ೬೮

ವಚನ: ಆ ಮಂದರಮಹೀಧರದ ದಕ್ಷಿಣದಿಶಾಭಾಗದಲ್ಲಿ

ಕಂದ: ನಿರವಧಿಸುಖಕ್ಕೆ ಪಾತ್ರಂ
ಪರಮಜಿನಾಗಮಜಲಪ್ರವಾಹಪವಿತ್ರಂ
ಉರುತರಶೋಭಾಚಿತ್ರಂ
ಕರಮೆಸೆಗುಂ ರ[4]ಯ್ಯ[4]ಮಪ್ಪ ಭರತಕ್ಷೇತ್ರಂ ೬೯

---

[1] ಬೂದ್ವೀ (ಕಗಚ) [2] ಟ್ಟಿ (ಜ) [3] ತಚ್ಚಿತ್ತರಂ (ಜ) [4] ಮ್ಯ (ಜ)

* ಕೌಶಳದೇಶವ್ಯಾವರ್ಣನೆ (ಗಚ)

ಮಹಾಸ್ರಗ್ಧರೆ

ಅದು ಗಂಗಾಸಿಂಧುಮಧ್ಯಸ್ಥಿತವರವಿಜಯಾರ್ಧಾದ್ರಿಯಿಂ ಭಿನ್ನಮಾಗಿ
ದ್ಱದಱಿಂ ಷಟ್ಖಂಡಮಾಗೊಪ್ಪಿದುದು ಬಹಳಲಕ್ಷ್ಮೀ ಮಹಾಭಾರದಿಂದಂ
ತ್ರಿದಶಾವಾಸಂ ನಿರಾಧಾರಕಮಿದು ಮುಱಿದೀ ಭೂಮಿಯೊಳ್ ಬೀಳ್ದುದೆಂಬಂ
ತುದಿತ ಶ್ರೀರಮ್ಯಮೆಲ್ಲಾ ಜನದ ನಯನಚಿತ್ತಂಗಳಂ ಸೂಱೆಗೊಳ್ಗುಂ ೭೦

ವಚನ: ಆ ಷಟ್ಖಂಡದೊಳಖಂಡಶೋಭಾಕರಂಡಕಮಾದಾರ್ಯಾಖಂಡದಲ್ಲಿ

ಉತ್ಪಲಮಾಲೆ

ಕಾಮಿತವಸ್ತುದಾಯಕಮೆನಿಪ್ಪ ವನಾವಳಿಕೋಶಮುತ್ತಮೋ
ದ್ದಾಮಸುವರ್ಣರತ್ನಖನಿಕಾಂತಿವಿಚಿತ್ರಿತದಿಕ್ಪ್ರದೇಶಮು
ತ್ಕ್ಷೇಮಳಸಸ್ಯಸಂತತಿ ಹರಿದ್ಧರಣೀತಳಸನ್ನಿವೇಶಮಾ
ಭೂಮಿಯೊಳೊಪ್ಪುಗುಂ ವಿಳಸದುತ್ತರಕೌಸಳದೇಶಮಾಪಗಂ ೭೧

ಮಹಾಸ್ರಗ್ಧರೆ

ಅದನಾನೇನೆಂದು ಕೊಂಡಾಡುವೆನಧಿಕತಟಾಕಂಗಳಿಂ ಸುತ್ತಲುಂ ಪ
ರ್ವಿದ ಕುಲ್ಯೌಘಂಗಳಿಂ ಕುಕ್ಕುಟಸಮುದಯಸಂಪಾತ್ಯಮಪ್ಪೂರ್ಗಳಿಂ ಪೆ
ರ್ಚಿದ ಸತ್ಪುಂಡ್ರೇಕ್ಷುವಾಟಂಗಳಿನೆಡೆದೆಱಹಿಲ್ಲಾಗಿ ತುಂಬಿರ್ದುದೆತ್ತಂ
ಮುದದಿಂ ನೋಳ್ಪಡಂ ಕೌತುಕಮನೊದವಿಸುತ್ತಿರ್ಪುದಾ ದೇಶಮೆಂದುಂ ೭೨

ಕಂದ: ವರದಿಕ್ಪಾಲಪುರಂಗಳ್
ಸಿರಿಯಂ ನೋಡಲ್ಕನೇಕರೂಪಂ ಕೈಕೊಂ
ಡಿರದೆಳ್ತಂದವೊಲೆಸೆದುವು
ಭರದಿಂ ಪಿರಿದಪ್ಪ ತತ್ಪುರಂಗಳ್ ಪಲವುಂ ೭೩

ಉದಯಾಸ್ತಗಿರಿಗಳೆಡೆಯೊಳ್
ಪದಪಿಂದೆಡೆಯಾಡುತಿರ್ಪ ರವಿಬಿಂಬಕ್ಕಾ
ಸ್ಪದಶೈಲಂಗಳಿವೆಂಬಂ
ದದಿನೊಪ್ಪುವುವಲ್ಲಿ ಧಾನ್ಯರಾಶಿಗಳೆಂದುಂ ೭೪

ಬಡವನಿವನೆಂದು ಮೃಡನಂ
ಜಡೆಯಲ್ಲಿಯ ಗಂಗೆ ಬಿಟ್ಟು ಬಹುಮುಖದಿಂ [1]ಸಿರಿ[1]
ಯೊಡಗೂಡಿದ ಜನಪದದೊಳ್
ತೊಡದಿರ್ದವೊಲೆಯ್ದೆ ಪರಿಯುತಿರ್ಪುವು ತೊಱೆಗಳ್ ೭೫

---

[1] ಶ್ರೀ (ಚ)

[1]ಪೃ[1]ಷ್ಟಪಯೋಧರಮಂಡಲ
ಮಿಷ್ಟಲತಾಂತಂ ಸುಪತ್ರಪೂಗಂ ಚತುರೋ
ತ್ಕೃಷ್ಟವಿಟಪವಿತತಿಯಂತೆ ವಿ
ಶಿಷ್ಟನದೀತೀರತರುಚಯಂ ರಂಜಿಸುಗುಂ ೭೬

ಕನದುರುನಿತಂಬಮುಚ್ಚೈ
ಸ್ತನಮುದ್ಘವಿಳಾಸಕಂ ಮಹಾಭೋಗಯುತಂ
ವನಿತಾಜನದವೊಲೊಪ್ಪಮ
ನನವರತಂ ಪಡೆದು[2]ವ[2]ಲ್ಲಿ ಪರ್ವತವೃಂದಂ ೭೭

ಗರ್ಭೀಕೃತಭುವನಂ ಸಂ
ದರ್ಭಿತ ಕರ್ಕಟಕ ಮೀನ ಮಕರಸುಚಾರಂ
ನಿರ್ಭರಹಂಸವರಾಬ್ಜಾ
ವಿರ್ಭಾವಂ ನಭದವೊಲ್ ಸರೋಗಣಮೆಸೆಗುಂ ೭೮

ವಚನ : ಮತ್ತಮಲ್ಲಿ

ಮಹಾಸ್ರಗ್ಧರೆ

ಎಲರಿಂದಲ್ಲಾಡುವೀ ಕೂರಿದವೆನಿಪೆಲೆಗಳ್ ಕೋಮಳೇಕ್ಷುಪ್ರಕಾಂಡಂ
ಗಳನಾದಂತಾಗಲಲ್ಲಿಂಡೊಸರ್ವ ರಸದ ಸಾರಪ್ರವಾಹಂಗಳಿಂದಂ
ಬೆಳಗುಂ ನೀರೂಟಮಂ ಪಾರದೆ ಕಳವೆಗಳ ಕ್ಷೇತ್ರಮೆಲ್ಲಂ ತದೀಯೋ
ಜ್ಜ್ವಳಶಾಲಿಕ್ಷೀರಪಾನಂಗಳಿನುಱೆ ಬೆಳೆಗುಂ ಕೀರಪೋತಪ್ರತಾನಂ ೭೯

ಕಂದ : ಧರೆಯೆಂಬ ಜನನಿ ಪದ್ಮಾ
ಕರಮೆಂಬ ಕುಚಾಗ್ರದಲ್ಲಿ ತೀವಿರ್ದ ಮಹಾ
ಪರಮಕ್ಷೀರಮನಿತ್ತು
ದ್ಧರಿಪಳ್ ಸಸ್ಯಂಗಳೆಂಬ ಶಿಶುಗಳನೊಲವಿಂ ೮೦

ಚಂಪಕಮಾಲೆ

ಮೊಲೆಗಳ ಭಾರದಿಂ ಕಟಿತಟಂಗಳ ಭಾರದಿ ತೋರಮಾಗೆ ಸ
ಲ್ಲಲಿತಮೆನಿಪ್ಪ ಸೋರ್ಮುಡಿಯ ಭಾರದಿ[3]ನೇ[3]ಗಳುಮೇಳಲಾಱದು
ಜ್ಜ್ವಳಮೆನಿಸಿರ್ದ ಗೀತರಸದಿಂ ತೆನೆಯುಂ ತಿನಲೆಂದು ಬಂದ ಮಂ
ಜುಳ ಹರಿಣಂಗಳಂ ಬಿಡದೆ ಬಾರಿಪುದಲ್ಲಿಯ ಪಾಮರೀಜನಂ ೮೧

[1] ಸ್ಪ (ಜ) [2] ದ (ಕಚ) [3] ನಾ (ಕಚ)

ಚಂಪಕಮಾಲೆ

ಪಸುರೆಲೆ ಪಕ್ಕದಂತಿರೆ ಮನೋಹರಶೂಕಮುದುದ್ಘತುಂಡದಂ
ತೆಸೆದಿರೆ ಮುಗ್ಧಕೀರಶಿಶು ತನ್ನಯ ಮಾತೃಕೆ ತಪ್ಪದೆಂದು ಬಂ
ದೊಸೆದದಱಗ್ರಮಂಜರಿಯೊಳಿರ್ದು ವಿನೋದಿಸೆ ಕಂಡು ತಾಯುಮಂ
ಶಿಶುವನಗಲ್ಚಲಾಗದೆನೆ [1]ಸೋವ[1]ದೆ ಪಾಮರಿ ಪೋದಳಂದದಂ ೮೨

ಉತ್ಪಲಮಾಲೆ

ಪಾಲುಣಲೆಂದು ಬಂದು ಗಿಳಿವಿಂಡುಗಳೀ ಕಮಳಸ್ಥಳಂಗಳಂ
ಮೇಲೆ ಮುಸುಂಕಿ ಕುಳ್ಳಿದಿರೆ ಭೂರಿಮೃಗಂಗಳಿನಪ್ಪ ಭೀತಿಯಿಂ
ಪಾಲಕಪಾಮರೀವಿತತಿ ಪಚ್ಚೆಯ ಬಣ್ಣದ ವಸ್ತ್ರದಿಂದದಂ
ಲೀಲೆ[2]ಯೊಳೆ[2]ಯ್ದೆ ಬಾಸಣಿಸಿತೆಂಬಭಿಶಂಕೆಯನುಂಟುಮಾಡುಗುಂ ೮೩

ಕಂದ : ಲಲಿತಮೆನಿಪ್ಪೀ ನೀರಿಂ
ಬೆಳೆದು ಸಮೃದ್ಧಂಗಳಾದೆವೆಂದಾ ಸಸ್ಯಾ
ವಳಿಗಳ್ ಮಾರ್ಪೊಳೆ[3]ಪಿಂ[3] ತ
ಜ್ಜಳದೇವತೆಯರ್ಗೆ ಫಳಮನೀಪವೊಲೆಸೆಗುಂ ೮೪

ಮಂದಾನಿಳ ಭರವಸದಿಂ
ದಾಂದೋಳಿತ ಶಾಳಿಕಣಿಶಭೃತಮಹಿಯೆಸೆಗುಂ
ಕುಂದದ ತತ್ಸಂಪತ್ತಿಯ
ನಂದೀಕ್ಷಿಸಿ ತಲೆಯನೆಯ್ದೆ ತೂಗುವ ತೆಱದಿಂ ೮೫

ಚಂಪಕಮಾಲೆ

ಸುರುಚಿರಗಂಧಶಾಳಿವನದೊಳ್ ಭ್ರಮರೀನಿಕುರುಂಬಮೆಲ್ಲಿಯುಂ
ಪರಿಮಳಲೋಭದಿಂದೆ ಸುಳಿದಾಡುತಮಿರ್ದುದಪಾರಪಾಂಥರು
ತ್ತರಳಿತ ಚಾರುದೀರ್ಘತರ ದೃಷ್ಟಿಗಳಂ ಸೆಱೆಗೆಯ್ಯಲೆಂದು ಬಿ
ತ್ತರಿಸಿದ [4]ಚೆ[4]ನ್ನಕಬ್ಬುನದ ಸಂಕಲೆಯೆಂಬಿನಮಲ್ಲಿ ರಂಜಿಕುಂ ೮೬

ಮತ್ತೇಭವಿಕ್ರೀಡಿತ

ಪಿರಿದಪ್ಪಾ ಪರಿಕಾಲದೊಳ್ ಬೆಳೆದ ಪಂಕೇಜಾತಷಂಡಂಗಳು
ದ್ಧುರಭಾಸ್ವದ್ರಜಮೆಂಬ ಜೋಡನೊಲವಿಂದಂ ತೊಟ್ಟು ಸನ್ಮಂಡಲಾ
ಗ್ರರಥಂ ಮಂದಸಮೀರನಾ ಕಳಮಭೂರಿಕ್ರೂರಪತ್ರಾವಳೀ
ಪ[5]ರಿ[5]ಪೀಡಾಭರಭೀತನಾದ ತೆಱದಿಂದಲ್ಲಲ್ಲಿ ಸಂಚಾರಿಪಂ ೮೭

1 ಸಾಯ (ಕಚ) 2 ಯಿನೆ (ಜ) 3 ಪಿಂ (ಕಚ) 4 ಚೆ (ಕಜ) 5 ರ (ಜ)

ಮತ್ತೇಭವಿಕ್ರೀಡಿತ

ತುದಿಯೊಳ್ ನೀರಸಮಾದೊಡಂ ಬಗೆವೊಡಂ ತದ್ಗ್ರಂಥಿಯಂ ಕೂಡಿ ಮಾ
ಣದೊಡಂ ಶಿಷ್ಟಫಲಂಗಳಿಲ್ಲದೊಡಮುತ್ಯುದ್ದಂಡಮಾಗಿರ್ದೊಡಂ
ಪಡೆವಾ ದೇಶದ ಕೂಟದಿಂ ರಸಮನೀವೃತ್ತಿರ್ದುದಿಕ್ಷುಪ್ರಕಾಂ
ಡದ ತಂಡಂ ಜಗದಲ್ಲಿ ಲೇಸೊದವದೇ ಸದ್ವಸ್ತುಸಂಯೋಗದಿಂ ೭೭

ಕಂದ: ಅಲರ್ದ ಬಯಲ್ದಾವರೆಗಳ್
ಸುಲಲಿತ ತದ್ದೇಶನೃಪತಿಗೆತ್ತಿದ ಶೋಭಾ
ಕಳಿತಂಗಳಪ್ಪ ಸತ್ತಿಗೆ
ಗಳ ತೆಱದಿಂ ಕಣ್ಗೆ ಸೊಗಸನೀವುವವೆಂದುಂ ೭೯

ವಚನ: ಮತ್ತಮತ್ಯಂತ ಪೇಶಲಮಾದ ತದ್ದೇಶದೊಳ್ ನೀಳ್ದು ಪರ್ವಿದ ರಾಜಮಾರ್ಗಂಗಳೆಂಬ ಲತಾವಿತಾನಂಗಳೊಳ್ ಪುಟ್ಟಿರ್ದನೇಕಪರಿಪಕ್ವಫಲಸ್ತಬಕಂಗಳೆಂಬಂತೆ ಸುರಭಿಪರಿಮಳಮಿಳಿತ ಪರಮಾಮೃತಾಯಮಾನ [1]ರ[1]ಸಪ್ರಪೂರ್ಣತಮುಚಿತ ನವ್ಯದ್ರವ್ಯಸಂಬಂಧುರಂಗಳಪ್ಪ ಚಂಚತ್ಕಾಂಚನ ಪ್ರಪಂಚಿತ ನಿರುಪಮ ಪ್ರಪಾಕಳಾಪ ಪ್ರಕಾಂಡ ಮಂಡಪಂಗಳಲ್ಲಿ

ಚಂಪಕಮಾಲೆ

ಸರಸಿಜನೇತ್ರೆ ಸತ್ಕಳಶಮಂ ಪಿಡಿಪೆತ್ತಿ ಮನೋಹರಾಂಬುವಂ
ವರಪರಿತೋಷದಿಂದೆಱೆವ ಪೊತ್ತಿನೊಳುಷ್ಣಕುಚಂಗಳ[2]ಕ್ಷಿಗೋ[2]
ಚರಮುಮನೆಯ್ದೆ ಕಾಮಪರಿತಾಪದ ಪೆರ್ಚುಗೆಯಿಂದೆ ಶೋಷಿಸು
ತ್ತಿರೆ ಬಿಡಪಾಗಳುಂ ಜಲಮನೀಂಟುವರಧ್ವಗರಾತುರತ್ವದಿಂ ೮೦

ಮತ್ತೇಭವಿಕ್ರೀಡಿತ

ಪಿರಿದುಂ ಕಣ್ಗಳಿನೀಂಟೆ ರೂಪರಸಮಂ ಶ್ರೋತ್ರಂಗಳಿಂದೀಂಟೆ ಸೌಂ
ದರಭಾಷಾರಸಮಂ ಸು[3]ಶೈತ್ಯ[3]ಜಳಮಂ ಜಿಹ್ವಾಗ್ರದಿಂದೀಂಟೆಯುಂ
ಭರದಿಂ ತೃಪ್ತಿಯನೆಯ್ದದಧ್ವಗಜನಂ ತತ್ಕಾಮಿನೀ ಭೂರಿಭಾ
ಸುರಲಾವಣ್ಯರಸಾತಿರೇಕಮೊದವಿಂದೆಂಬಂತೆ ತತ್ಕಾಲದೊಳ್ ೮೧

ಉತ್ಪಲಮಾಲೆ

ಇಲ್ಲ ಜನೌಘಮಿಲ್ಲದ ಮಹಾಸ್ಥಳಮಾ ಜನಮುಂ ಧನಾಳಿ ಸು
ತ್ತಿಲ್ಲದುದಿಲ್ಲ ತದ್ಧನಮುಮುನ್ನತದಾನವಿಹೀನಮಾದುದು
ತಿಲ್ಲದಮುನ್ನ[4]ದಾನ[4]ಮುಮುಶೇಷ ವಿಶೇಷಿತಪಾತ್ರಸಂಕುಳ
ಕ್ಕಲ್ಲದುದಿಲ್ಲ ತದ್ವಿಷಯದಲ್ಲಿ ನಿರಂತರಮೆಲ್ಲಿ ನೋಳ್ಪಡಂ ೮೨

[1] ಸರ (ಜ) [2] ಕ್ಷೀಣ (ಕಗಚ) [3] ಶೀತ (ಜ) [4] ದಂಡ (ಜ)

ಮಹಾಸ್ರಗ್ಧರೆ

ಭ್ರಮದಸ್ತೋಕೇಕ್ಷುಯಂತ್ರಂಗಳ ಬಿದಿರಿತದಿಗ್ಭಾಗ ಚೀತ್ಕಾರನಾದೋ
ದ್ಗಮದಿಂದಂ ಪಾಡುವಂತಿರ್ದುದುಪವನ ವಿಲೋಲೋಪ್ತಸಸ್ಯಂಗಳಿಂ ನೃ
ತ್ಯಮನಾಗಳ್ ಮಾಳ್ಪವೊಲಿರ್ದುದು ಮಧುಕರಝೇಂಕಾರರಾವಂಗಳಿಂ ವಾ
ದ್ಯಮನಾದಂ ಬಾಜಿಪಂತಿರ್ದೆಸೆದುದು ವಿಷಯಶ್ರೀಸಮೃದ್ಧಿಪ್ರಮತ್ತಂ ೪೩

ವಚನ: ಮತ್ತಮಾ ದೇಶಮಾಕಾಶದಂತನಂತಮಹತ್ವಮಹನೀಯಮುಂ ಚಂದ್ರಬಿಂಬದಂತೆ ಗೋಕುಳಸಮಾಲಂಬನಕರಂಬಿತಮುಂ ಚಕ್ರವರ್ತಿಯಂತೆ ಮಹಿಷೀಸಮುಪಗತಮುಂ ಬ್ರಹ್ಮನಂತೆ ಸರಸ್ವತೀಸಮೇತಮುಂ ವಿಷ್ಣುವಿನಂತಕ್ಷೂಣಲಕ್ಷ್ಮೀವಿರಾಜಿತಮುಂ ಮಹೇಶ್ವರನಂತೆ ವಿಲಸದುಮಾಸಮಾಲಿಂಗಿತಮುಂ ಸ್ವರ್ಗದಂತೆ ವಿಬುಧಾವಳಿಸಮು[1]ದ್ಭೂ[1]ಷಿತಮುಂ ಮೋಕ್ಷದಂತೆ ನಿತ್ಯಸೌಖ್ಯಲ[2]ಕ್ಷಿ[2]ತಮುಂ ಮಹಾಕವಿವಿರಚಿತಶ್ರವ್ಯಕಾವ್ಯದಂತೆ ಪರಾರ್ಥಸಾರ್ಥಸಮರ್ಥಮುಂ ಸಂವತ್ಸರದಂತೆ ಬಹುಧಾನ್ಯವಿಭವವಿಭ್ರಾಜಿತಮುಂ ದೇವೇಂದ್ರನಂತೆ ರುಂದ್ರಸುಧರ್ಮಾಭಿರಾಮಮುಂ ವಿದಗ್ಧಸ್ತ್ರೀಯಂತೆ ವರೋರುಶೋಭಾಪರಿಕಳಿತಮುಂ ಸಮುದ್ರದಂತೆ ವಿವಿಧವಿದ್ರುಮಸಮೃದ್ಧಿಸಹಿತಮುಂ ನಾಗಲೋಕದಂತೆ ಭೋಗೇಂದ್ರಾವಭಾಸಿತಮುಮೆನಿಪುದಂತುಮಲ್ಲದೆಯುಂ

ಚಂಪಕಮಾಲೆ

ಕರಕರಪೀಡನಂ ಕುಚದೊಳುದ್ಭ್ರಮುದಂ ಗಜದೊಳ್ ಗುಣೋ[3]ಜ್ಝನಂ[3]
ಶರದೊಳನೂನಚಿಂತೆ ಮುನಿಯೊಳ್ ದ್ವಿಜಬಾಧೆ ವಿದಗ್ಧಕಾಮಿನೀ
ಸುರತದೊಳುಗ್ರಕಂಟಕಭಯಂ ವರಕೇತಕಿಯೊಳ್ ನಿರೀಕ್ಷಿಸು
ತ್ತಿರೆ ದೊರೆಕೊಳ್ಗುಮಾ ವಿಷಯದೊಳ್ ದೊರೆಕೊಳ್ಳದದಾವಕಾಲ[4]ಮುಂ[4] ೪೪

ಕಂದ: ಪೊಡೆಯೆಂಬಿದು ಬೆಳೆಗೆಯ್ಯೊಳ್
ಪಿಡಿಯೆಂಬಿದು ಕರಿಣಿಯೊಳ್ ವಿಚಾರಿಪೊಡೆಂದುಂ
ಬಡತನಮೆಂಬಿದು ಪೆಂಡಿರ
ಗಡಣದ ನಡುವಿನೊಳಮಲ್ಲದಿಲ್ಲಾ ನಾಡೊಳ್ ೪೫

ನಿರುಪಮಮಪ್ಪಾ ದೇಶಂ
ಪರಿಕಿಪೊಡಂ ಪರಮನೀತಿ ಕಮನೀಯತರಂ
ಸುರುಚಿರಮಂಗಳ ಸಂಗರ
ನಿರಂತರಂ ಪರಮನೀತಿ ಕಮನೀಯತರಂ ೪೬

---

1 ಪ್ರ್ಯಾ (ಕ) ಡ್ಯೋ (ಜ) 2 ಕ್ಷ್ಮೀಸಮೇ (ಜ) 3 ಚ್ಛಲಂ (ಜ) 4 ದೊಳ್ (ಜ)

ವಚನ : ಅಂತತಿಪ್ರಸಿದ್ಧಿಪ್ರವರ್ಧಮಾನಮುಂ ನಿರವಧಿಸಂಪತ್ಸಮೃದ್ಧಿ ಸಾಮೃದ್ಧ[1]ಮುಮೆನಿಪ ತದುತ್ತರಕೋಶಳದೇಶರಮಣೀರಮಣೀಯಮುಖಸರಸೀರುಹಮೆಂಬಂತೆ ಸಮಸ್ತಜನನಯನಮನೋಮಧುಕರನಿಕರಕ್ಕೆ ಪರಿತೋಷಪರಿಷದುತ್ಕರ್ಷಮಂ ಮಾಡುತ್ತುಂ

ಮತ್ತೇಭವಿಕ್ರೀಡಿತ

ಪಿರಿದುಂ ರತ್ನಪುರಂ ಪುರಂ ಸೊಗಯಿಕುಂ ಮುಕ್ತಾಮಯಾಂಗ ಪ್ರಜೋ
ತ್ಕರದಿಂದಂ ನವಪದ್ಮರಾಗ ಮಹಿತಸ್ತ್ರೀರತ್ನಸಂದೋಹದಿಂ
ಪರಿಪಂಥಿವ್ರಜಮೂರ್ಧ್ವವಜ್ರನೆನಿಪ ಕ್ಷ್ಮಾಪಾಲ ನಿಂದಾಪಣೋ
ದ್ಧುರ[2]ಸಂ[2]ಸ್ಥಾಪಿತ ರತ್ನರಾಶಿಚಯದಿಂ ತಾಳ್ದಿತ್ತದನ್ವರ್ಥಮಂ ೯೭

ಕಂದ : ಹರಿಕಾಂತಾಸಮುಪಚಿತಂ
ಪರಿವಿಲಸಿತ ಭೋಗಭೂಮಿ ಮಣಿಕೂಟಯುತಂ
ಪುರುರತ್ನಾಕರಮಾದಂ
ಪುರಮೆಸೆಗುಂ ಜಂಬುದೀಪದಂತನವರತಂ ೯೮

ಉತ್ಪಲಮಾಲೆ

ಗೋತ್ರವಿಭೇದಿಗಾವಸಥಮಾದ ಸುರಾಲಯಮಾದ ಮತ್ತೆಯುಂ
ಧಾತ್ರಿಯಸೊಲ್ಲದಿರ್ದಮರಪತ್ತನಮಂ ನಗು[3]ಗುಂ[3] ದಲೀಪುರಂ
ಗೋತ್ರಸುಪೋಷಿಗಳ್ಗೆ ವರಧರ್ಮಪರರ್ಗೆ ನಿವಾಸಮಾದ ತ
ದ್ಧಾತ್ರಿಯೊಳೊಂದಿ ಬಾಳ್ವಿನಗೆ ಪಾಸಟಿಯಲ್ತಿದುಮೆಂದು ನಾಡೆಯುಂ ೯೯

ಮಹಾಸ್ರಗ್ಧರೆ

ಕವಿಸೇವ್ಯಂ ಕಾವ್ಯಪೀಡಂ ನಿರುಪಮಬಹುಧಾಮಾತಿರಮ್ಯಂ ಬುಧಶ್ರೀ
ಪ್ರವರಂ ಜ್ಯೇಷ್ಠಾಭಿಯೋಗಂ ಸಮುಪಗತಲಸನ್ಮಂಗಳಂ ಸದ್ಗುರೂಚ್ಚಂ
ನವಗಂಧರ್ವಾಭಿರಾಮಂ ಬಗೆವೊಡೆ ಪರರಿಂ ದುರ್ನಿರೀಕ್ಷ್ಯಂ ಪುರಂ ಭಾ
ನುವ ರಾಜದ್ಬಿಂ[4]ಬ[4]ಮೆಂಬಂದದೆ ವರಕಮಳಾನಂದಮಂ ಮಾಳ್ಕುಮೆಂದುಂ ೧೦೦

ಶಾರ್ದೂಲವಿಕ್ರೀಡಿತ

ಅತ್ಯುಚ್ಚೈಸ್ತನಕೂಟರಮ್ಯಮತುಳಂ ಪ್ರಾಕಾರಸಂಶೋಭಿತಂ
ಪ್ರತ್ಯಗ್ರಪ್ರಮದಾಧಿರೂಢಮುಪಕೃತ್ಸಂತೋಷ ಸಂಪಾದಕಂ
ಸ್ತುತ್ಯಂ ಭೂಷಿತರತ್ನಕಾಂತಿಚಯದಿಂ ಚಿತ್ರೀಯಮಾಣಾಂಬರಂ
ನಿತ್ಯಂ ಸ್ತ್ರೀಜನದಂತೆ ಕಣ್ಗೆ ಸೊಗಸಂ ಮಾಡುತ್ತುಮಿರ್ಕುಂ ಪುರಂ ೧೦೧

---

[1] ಮಾಧ್ವರ್ (ಜ) [2] ಸು (ಜ) [3] ವಂ (ಕಚ) [4] ಜ (ಕಗ)

*

ಮತ್ತೇಭವಿಕ್ರೀಡಿತ

ಕಳಹಂಸಾವಳಿ ಪುಷ್ಪಜಾತಿ ಸುಕನತ್ಪತ್ರಾಳಿ ರಾಜತ್ಫಳಾ
ಕಳಿತಾನೋಕಹಪಂಕ್ತಿ ಕೀರ ಪಿಕ ಪಕ್ಷಿಶ್ರೇಣಿ ಭಾಸ್ವಲ್ಲತಾ
ವಳಿಯಿಂ ಚಿತ್ರಿತಮಾದ ಪಚ್ಚೆಯ ಮನೋಹೃದ್ವಸ್ತ್ರಮಂ ತತ್ಪುರೀ
ವಿಳಸತ್ಕಾಮಿನಿಯುಟ್ಟಳೆಂಬ ತೆಱದಿಂ ತನ್ನಂದನಂ ರಾಜಿಕುಂ ೧೦೨

ವಚನ: ಅದಱ ಸುತ್ತಲುಂ

ಕಂದ: ವಿರಹಿಜನಂಗಳ ಚಿತ್ತೋ
ದ್ಧುರ ದಾರುವಿದಾರಣಾರ್ಥಮಾಗಿ ಮನೋಜಂ
ಕರಗಸದ ಕೋಶವಂ ತಂ
ದಿರಿಸಿದವೊಲ್ ಕೇತಕೀವನಾವೃ[1]ತೆ ಮೆಱ[3][1]ಗುಂ ೧೦೩

ವಚನ: ಮತ್ತಮಲ್ಲಿಂದೊಳಗೆ

ಸ್ರಗ್ಧರೆ

ಆನುದ್ದಂಡತ್ವದಿಂದಾಕ್ರಮಿಸಿದೊಡಮದಂ ಸೈರಿಸಿದರ್ಗಂ ನಭಶ್ರೀ
ತಾನೀಗಳ್ ಕೊಟ್ಟಳಾದಂ ತೆಱಪುನುನೆವಗಿಂತೆಂದು ಮತ್ತೀ ವನಶ್ರೀ
ನಾನಾಜಾತೀಯಮಪ್ಪೀ ಸುಫಲತತಿಯನೀಯಲ್ಕೆ ಹಸ್ತಂಗಳಂ ತ
ನ್ನಾನಂದೋದ್ರೇಕದಿಂದೆತ್ತಿದವೊಲೆಸೆವುವಾ ನಾಳಿಕೇರಂಗಳೆಂದುಂ ೧೦೪

ಮಹಾಸ್ರಗ್ಧರೆ

ಪರಿಗಾಯದ್ಭೃಂಗ[2]ಮಾ[2]ಲಂ ಹೃದಯಭವವಿಕಾರಾನುಕೂಲಂ ವಿಯೋಗಾ
ತುರಚೇತೋವೃತ್ತಿಶೂಲಂ ಫಲವಿತರಣ[3]ಶೀ[3]ಲಂ ಪಿಕವ್ರಾತಲೀಲಂ
ವರಶಾಖಾಲೀವಿಶಾಲಂ ಕವಿಕೃತನುತಿಲೋಲಂ ಪ್ರಿಯಗ್ರೀಷ್ಮಕಾಲಂ
ಧರಣೀವಿಕ್ಷಿಪ್ತಮೂಲಂ ಪಡೆದುದು ಸೊಗಸಂ ಮ್ರಾರಸಾಲಂ ರಸಾಲಂ ೧೦೫

ಕಂದ: ಚೆನ್ನಪಣ್ಗೊನೆಯ ಭರದಿಂ
ಸನ್ನತಮಾಗಿರ್ದ ಬಾಳೆಸಸಿಯೊಳ್ ಮಿಳಿರ್ಗುಂ
ತನ್ನ ಶಿಶುವಿಂಗೆ ಮೊಲೆಯಂ
ಮನ್ನಿಸಿ ಬಾಗಿರ್ದ ಕೊಡುವ ಬಾಲೆಯ ತೆಱದಿಂ ೧೦೬

---

[1] ತಮೆಸೆ (ಕಚ) [2] ಮೂ (ಜ) [3] ಶೂ (ಜ)

* ನಂದವನ್ಯಾವರ್ಣನೆ (ಗ) ನಂದನವನವರ್ಣನೆ (ಚ)

ಸ್ರಗ್ಧರೆ

ಜೇರಿಂದಂ ಕಾಯ್ಗುಳಿಂ ಪೇಱಿದ ಪಲಸುಗಳಿಲ್ಲಿಲ್ಲಿಯುಂ ಸತ್ಫಳಾಳೀ
ಭಾರಕ್ಕಂ ಬಳ್ಕುವೀ ಕವುಂಗುಗಳನವರತಂ ಪಣ್ಗಳಿಂ ತುಂಬಿದೀ ಜಂ
ಬೀರಂಗಳ್ ಪಕ್ವಮಾಗಿರ್ದಱೆಬಿರಿದ ಫಲವ್ಯಾಪ್ತವದ್ದಾಡಿಮಂಗಳ್
ನಾರಂಗಂಗಳ್ ಕರಂ ತತ್ಪುರದುಪವನದೊಳ್ ನೋಳ್ಪಡಂ ಕುಂದವೆಂದುಂ ೧೦೭

ಕಂದ: ತುಱುಗಿದ ಕಾಯ್ಗುಳ ಭರದಿಂ
ನೆಱೆತಗ್ಗಿ ವಿಲಂಬಿಸಿರ್ದ ಮಾದಲವೊಪ್ಪಿ
ತ್ತುಱುವ ನೆಲನೆಂಬ ತಾಯೊಳ್
ತಱಿಸಂದು ವಿಸ್ನೇಹದಿಂದೆ ಮುಂಡಾಡುವವೊಲ್ ೧೦೮

ಒಳಗೆ ಕತ್ತಲೆಯು ನೊತ್ತಮ
ನೊಳಕೊಂಡೆಲೆವಳ್ಳಿಗಳ್ ದಿವಾಕರಕರಸಂ
ಕುಳಮಂ ನೂಂಕಲ್ ನಿಜಕರ
ತಳಮಂ ಬಿಡದೆತ್ತಿದಂತೆ ತಳೆದುವು ಚೆಲ್ವಂ ೧೦೯

ವಚನ: ಮತ್ತಮಾ ನಂದನವನಂ ತನ್ಮಯ ಸುಮನೋವಿಸರದೊಳೊರ್ಮೆಯುಮಾಱಡಿಗಳಂ ಪೊರ್ದಲೀಯದುದಱಿಂ ಸಜ್ಜನರ ಪೆಂಪಿಂ[2]ಗಿಂ[2]ಪಾದ ಸಂಪಗೆಗಳಿಂ ಬಹಳ ಪರಿಮಳಭರಾಸ್ವಾದನಲಂಪಟಂಗಳಾಗಿ ತುಂಬಿನ ತಾ[3]ಣ[3]ದೊಳಿಂಬಿ[4]ನಿಂ[4] ಕುಳ್ಳಿರ್ದ ಮಱಿದುಂಬಿಗಳ ಝೇಂಕಾರದಿಂ ತುಂಬಿ ಸಾರಮಾದುದಱಿಂ ಮನೋಜರಾಜ ದಿಗ್ವಿಜಯ ಪ್ರಮಾಣದೊಳೂದುವ ಸನ್ನಿಗಾಳೆಗಳೆಂಬಂತಿರ್ದ ಪುಷ್ಪಂಗಳಿಂ ಮೇದುರಮಾದಾ ಪಾದರಿಯಪಾದಪಂಗಳಿಂ ಭೂರಿತರರಾಗಾವಿಳತ್ವದಿಂದಶೋಕಂಗಳಾಗಿಯುಂ ಪಾಂಥರ್ಗೆ ಕಂದರ್ಪ ಶೋಕೋದ್ರೇಕಮಂ ಮಾಳ್ಪ ವಿಚಿತ್ರಮಹಿಮಾವಳಂಬನಮಾದುದಱಿಂ ವಿಳಾಸವತಿಯರಂತೆ ರಂಜಿಸುವ ಪಲ್ಲವಸಮುಲ್ಲಸದಶೋಕಾನೋಕಹಂಗಳಿಂ ಪೊಂಪುಳಿಯಾದ ಕೆಂಪಂ ಕೊಳಲೆಂದು ಬಂದೊಂದಿರ್ದಿಂದಿಂದಿರಂಗಳ ಘಾಸಿಯಿಂ ಸ್ಯಂದಮಾನ ಮಕರಂದಬಿಂದು ಸಂದೋಹದ ತಂದಲಂ ಸುರಿವುದಱಿಂ ಕಾರ್ಗಾಲದ ಮೇಘಂಗಳೆಂಬ ಶಂಕೆಯುಮನಂ[5]ಕುರಿ[5]ಸುತ್ತಿರ್ದ ಸುರಪೊನ್ನೆಯ ಮರಂಗಳಿಂ ಕಾಮನ ರತಿಯ ಮದುವೆಯೊಳ್ ಪರಿಲಂಬಮಾನ ಚಾಮೀಕರ ಚಾಮರಂಗಳಿಂದಳಂಕೃತಮಾಗಿ ಮಾಡಿದ ವಿವಾಹಮಂಡಪಂಗಳೆಂಬಂತೆ ಕಣ್ಗೊಂಡು ಮೆಱೆವ ತೋರಮಪ್ಪ ಪಣ್ಗೊಂಚಲಿಂದಂ[6]ಚಿರ[6]ಮಾದ ದ್ರಾಕ್ಷಾಮಂಡಪಂಗಳಿಂ ಕುಸುಮಶರಂ ತನ್ನ ಪುಷ್ಪಂಗಳೆಂಬ ಬಾಣಂಗಳಿಂ ತುಂಬಿದ ಪತ್ತಳಿಕೆಗಳನಲ್ಲಿ ತಂದಿರಿಸಿದನೆಂಬಂತೆ ಪಿರಿದಪ್ಪ ಪೂಗಳ ಬಳಗಮನೊಳಕೊಂಡಗುರ್ವುವಡೆದಮರ್ದ ಕೊರ್ವಿ ಪರ್ವಿದ ಮತ್ತಲ್ಲಿಕಾವಲ್ಲೀವಲ್ಲರಿಗಳಿಂದತ್ಯಂತರಮಣೀಯಮಾಗಿರ್ದಂತುಮಲ್ಲದೆಯುಂ

---

1 ಗೊಳಗಂ (ಜ) 2 ಗಿಂ (ಕಜ) 3 ಗೋ: (ಕಜ) 4 ಸಂ (ಕಜ) 5 ಕಿ (ಜ) 6 ಜಿತ (ಜ)

ಉತ್ಪಲಮಾಲೆ

ಪಕ್ವಫಲಂಗಳಿಂದೆ ರಸನೇಂದ್ರಿಯಮಂ ನವಪುಷ್ಪಗಂಧದಿಂ
ಮಿಕ್ಕಿರೆ ನಾಸಿಕೇಂದ್ರಿಯಮನುನ್ನತಶೋಭೆಯನೀಕ್ಷಣಂಗಳಂ
ಸೊಕ್ಕಿದ ಭೃಂಗಚಾರುರವದಿಂ ಶ್ರವಣೇಂದ್ರಿಯಮಂ ಪ್ರವಾ[1]ಳಿಸ
ಚ್ಚ[1]ಕ್ಕಣ ಶಯ್ಯೆಯಿಂದೆ ವಪುರಿಂದ್ರಿಯಮಂ ತಣಿಪುತ್ತುಮೊಪ್ಪುಗುಂ ೧೧೦

ವಚನ : ಅದಱ[2]ಳೀಕ[2]ಪ್ರದೇಶದೊಳ್

ಚಂಪಕಮಾಲೆ

ಮಿಗೆ ವನಪಾಲಬಾಲಿಕೆಯರರ್ಥಿಯಿನುದ್ಭವರಾಗ[3]ದೊಳ್ ಕರಂ[3]
ಜಗಲಿಗಳೋಳಿಯಂ ಸಮೆದು ಪೋಗಲೊಡಂ ಸಲೆ ದೀಪದಂಜೆವಿಂ
ಡುಗಳದಱಲ್ಲಿ ಸುತ್ತಿ ಸುಳಿದಾಡುತಮಿರ್ದುವಗಾರಮಾದವೊ
ಳ್ಪಿಗೆ ಕಲಿವಂತೆ ತತ್ಪುರಪುರಂಧ್ರಿಯರೊಳ್ನಡೆಯೊಂದು ಜಾಣ್ಮೆಯಂ ೧೧೧

ಕಂದ : ಮದನನ ಬಿರುದಾವಳಿಯಂ
ಪದೆದುಗ್ಘಡಿಸುತ್ತುಮಿರ್ದ ಭಟ್ಟರ ತೆಱದಿಂ
ಮದಕಳಕೋಕಿಳಕುಳಮೊ
ಲ್ದದಱೊಳ್ ಬಗ್ಗಿಸುತುಮಿರ್ದುದಗ್ಗಳದಿಂದಂ ೧೧೨

ಸ್ಮರನೆಂಬ ಬೇಂಟೆಕಾಱಂ
ವಿರತದ್ವನದೊತ್ತುಗೊಂಡು ವಿರಹಾರ್ತಮೃಗೋ
ತ್ಕರಮಂ ಕೊಂದನವರತಂ
ಭರದಿಂ ಮೃಗಯಾವಿನೋದದೊಳ್ ಕ್ರೀಡಿಸುವಂ ೧೧೩

ಉತ್ಪಲಮಾಲೆ

ಆ ಪುರಲಕ್ಷ್ಮಿಯಂ ಸಮದಿಗಂಗನೆಯರ್ ನಡೆನೋಡಿದಂದು ಮ
ತ್ತೇಪಡಿಮಾತೊ ದೃಷ್ಟಿವಿಷಮಕ್ಕಿರದೆಂದು ವನಾಧಿದೇವಿ ಭೂ
ರೀಪ್ರಿಯದಿಂದೆ ತುಂಗತರವಾಯುಸಮುತ್ಥಿತಪುಷ್ಪರೇಣುವಂ
ಬೀ ಪುರವಸ್ತ್ರದಿಂದಮದನೆಯ್ದೆ ಮುಸುಂಕುವಳಾವಕಾಲಮುಂ ೧೧೪

ವಚನ : ಅಂತಶೇಷಜನನಯನಮನಸ್ಸಮಾಕರ್ಷಣ ವಿದ್ಯಾದೇವತೆಯಂತೆ ಹೃದ್ಯ
[4]ಮಾದುದ್ಯಾನ[4]ವನದಿಂದೊಳಗೆ

---

1 ಳದಾ ಚಿ (ಜ) 2 ಳೀಕೃತ (ಕಚ) 3 ದೊಳ್ (ಕಗಚ) 4 ಮಾದ (ಜ)

ಶಾರ್ದೂಲವಿಕ್ರೀಡಿತ

ಮುನ್ನಂ ಖ್ಯಾತಿಯನಾಂತಡಂ ಜಗದೊಳಾಂ ರತ್ನಾಕರಾಖ್ಯಾನದಿಂ
ದೆನ್ನಿಂದಗ್ಗಳಮಾಗಿ ರತ್ನಚಯಮಂ ತಾಳ್ದಿರ್ದೆನೆಂದೀಕ್ಷಿಸಲ್
ಮುನ್ನೀರ್ ಬಂದೊಸೆದಿರ್ದುದೆಂಬ ತೆಱದಿಂದಾ ಪತ್ತನೋಪಾಂತದೊಳ್
ಮುನ್ನೂರ್ಮಿಜಮುಖಾತಿಕಾವಳಯಮತ್ಯಾಶ್ಚರ್ಯಮಂ ಪುಟ್ಟಿಕುಂ ೧೧೫

ಉತ್ಪಲಮಾಲೆ

ಒಂದೆಡೆಯಲ್ಲಿ ಮಜ್ಜದಿಭದಾನದ ಕೂಟದಿನೆಯ್ದೆ ಕೃಷ್ಣಮಾ
ಯ್ತೊಂದೆಡೆಯಲ್ಲಿ ವಾರಿಜರಜೋವ್ರಜದಿಂದೆ ಪಿಶಂಗಮಾಯ್ತು ಮ
ತ್ತೊಂದೆಡೆಯಲ್ಲಿ ತೇಂಕುವ ಲಸತ್ಕುಸುಮಾವಳಿಯಿಂದೆ ಶುಭ್ರಮಾ
ಯ್ತುಂದುಱಿ ಖಾತಿಕಾವಳಯಮೊಪ್ಪಿ ಮನೋಹರಮಾದುದೆತ್ತಲುಂ ೧೧೬

ಕಂದ: ಜಲದೊಳ್ ಕ್ರೀಡಿಸುವಾ ಪುರ
ಲಲನಾಜನ ಗುರುಕುಚಾಗ್ರಕುಂಕುಮದಿಂದಾ
ಕಳಿತಂ ಪರಿಖಾತಂ ಮಂ
ಜುಳಮಾದುದು ರಾಗರಕ್ತಮೆಂಬಂತೆವೊಲಂ ೧೧೭

ವಚನ: ಮತ್ತಮಾ ಖಾತಿಕಾವಳಯದಿಂದೊಳಗೆ

ಕಂದ: ಥಳಥಳಿಪ ತನ್ನ ಕಾಂತಿಯು
ನಿಳೆಯೊಳ್ ಮಿಂಚುಗಳ ಶೋಭೆಯಂ ಬಿಡದೆಂದುಂ
ಬೆಳೆಯಿಸುತುಮಿರ್ಪ ಪೆಂಪಂ
ತಳೆದಾದಂ ಪೊನ್ನಕೋಂಟೆ ಕಣ್ಗೆಸೆದಿರ್ಕುಂ ೧೧೮

ಚಂಪಕಮಾಲೆ

ನಿರುಪಮಮಪ್ಪ ರತ್ನಶಿಖರಂಗಳಿನಾಗಸಮಂ ತುಡುಂಕುತಿ
ರ್ದುರು ಫಳವಾಯಯಾದ ಘನಮೋಳಿಯಿನೊಪ್ಪುವ ಪೊನ್ನಕೋಂಟೆಯಂ
ತರಣಿಹಯಂಗಳೀಕ್ಷಿಸಿ ಸುರಾದ್ರಿಯಿಂದೆಂದದುಮಂ ಪ್ರದಕ್ಷಿಣೀ
ಕರಿಸುವ ಬುದ್ಧಿಯಿಂದೆಳವುಮತ್ತಲುಮಿತ್ತಲುಮಾ ರಥಾಂಗಮಂ ೧೧೯

ಎನಗೆ ಸಮಾನಮಪ್ಪ ಪುರಮಿಲ್ಲ ಮಹೀತಳದೊಳ್ ಫಣೀಂದ್ರಪ
ತ್ತನಮುಧರತ್ವಮಂ ತಳೆದುದಿಂದ್ರಪುರಂ ಮಿಗಿಲಾಗಿ ಮೇಗೆ ನಿಂ
ದನ[1]ಣ[1]ಸುಕೀರ್ತಿಯಂ ಪಡೆದುದೆಂದದನೀಗಳೆ ನೂಂಕಿದಪ್ಪೆನೆಂ
ದನುಪಮ ಸಾಲಹಸ್ತಮುಮನೆತ್ತಿದುದೆಂಬಿನಮೊಪ್ಪುಗುಂ ಪುರಂ ೧೨೦

[1] ಣೆ (ಜ)

ಶಾರ್ದೂಲವಿಕ್ರೀಡಿತ

ಉತ್ತುಂಗಾಯತಮಪ್ಪ ಕೋಂಟೆಯುಭಯ[1]ಶ್ರೇ[1]ಣೀ ಸಮಾಲಂಬಿತಂ
ಪ್ರೋತ್ತಾಲಾಂಬುದಮಾಲೆಯೆಂಬ ವಿಲಸತ್ಪಕ್ಷಂಗಳಾಧಾರದಿಂ
ವೃತ್ರದ್ವೇಷಿಯ ಪಟ್ಟಣಕ್ಕೆ ಭರದಿಂ ದಾಳಿಟ್ಟು ತಂದಪ್ಪೆ ನಾಂ
ಮತ್ತೆನ್ನಲ್ಲಿಯ ಜೆಲ್ವನೆಂಬ ತೆಱದಿಂ ತತ್ಪತ್ತನಂ ರಾಜಿಕುಂ ೧೨೧

ಮುನ್ನೆಂದುಂ ಬಲಯುಕ್ತರಪ್ಪ ಪಗೆಗಳ್ ದುರ್ಗರ್ವದಿಂದೆತ್ತಿ ಬಂ
ದೆನ್ನಂ ಮುತ್ತಿದರಾರುಮಿಲ್ಲ ದಿಟಮೆಂಬೀ ಖ್ಯಾತಿಯಂ ಸೂಱುಳಿಂ
ದಿನ್ನುಂ ಲೋಕಜನಕ್ಕೆ ಸೂಚಿಸುವವೊಲ್ ಪ್ರಾಕಾರಹಸ್ತಾಗ್ರದಿಂ
ದೌನ್ನತ್ಯಾಧಿಕಮಾದ ವಿಷ್ಣುಪದಮಂ ಮುಟ್ಟುತ್ತುಮಿರ್ಕುಂ ಪುರಂ ೧೨೨

ಕಂದ: ಕನದಮರಿಶಿಖರಿಕೂಟದ
ಘನಗುಹೆಗಳಿವೆಂಬ ಶಂಕೆಯಿಂದಂ ತಾಂ ಬಂ
ದನಿಮಿಷಮಿಥುನಂ ಕೋಂಟೆಯ
ಕನಕಮಯಾಟ್ಟಾಳಜಾಲದೊಳ್ ಕ್ರೀಡಿಸುಗುಂ ೧೨೩

ವಚನ: ಆ ಮಹೋದಾರಪ್ರಾಕಾರಪರಿವೇಷ್ಟಿ[2]ತಮಾದ[2] ಪುರಲಕ್ಷ್ಮೀದಿಶಾಶೋಭಾವಲೋಕನಾರ್ಥಂ ಕಣ್ದೆಱೆದಳೆಂಬಂತೆ ಸಮುದ್ಘಾಟಿತಕವಾಟಪಕ್ಷ್ಮಪಾಳಿಕಾಪುಟಂಗಳುಮಾಕ್ರಾಂತತಾರಕಂಗಳಪ್ಪ ಗೋಪುರದ್ವಾರಕಂಗಳಿಂದೊಳಗೆ

ಮಹಾಸ್ರಗ್ಧರೆ

ಜನತಾನಿರ್ಘೋಷದಿಂದಂ ಸುಳಿವ ಸುಗಣಿಕಾನೂಪುರೋದ್ದಾಮ ಝಣ್‌ಝಣ್
ಧ್ವನಿಯಿಂದಂ ಗಾಯಿನೀಸಂತತಿ ಕರವಿಲಸದ್ವಲ್ಲಕೀನಾದದಿಂದಂ
ವನಪಾನಕ್ಕಾಗಿ ಮತ್ತಂ ಬಿಡದೆ ನಡೆವ ವಾಜಿವ್ರಜಧ್ವಾನದಿಂದಂ
ಘನಮೊಪ್ಪಂಬೆತ್ತು ವಾಚಾಳಿತಮೆನಿಪುದು ರಾಜತ್ಪುರೀ ರಾಜಮಾರ್ಗಂ ೧೨೪

ವಚನ: ಮತ್ತಮಾ ರಾಜಮಾರ್ಗದಿಕ್ಕೆಲಂಗಳೊಳ್

ಕಂದ: ಪಿರಿದ[3]ಪ್ಪೊಳುವಂ[3]ಡಂಗಳಿ
ನರೆಮಾಗಿರವೆಯ್ದೆ ತುಂಬಿ ತುಳ್ಕಾಡುವವಾ
ಪರದರಂಗಡಿಗಳೆತ್ತಂ
ತರತರದಿಂದಿ[4]ರ್ದು[4] ಕಣ್ಗೆ ಪಡೆದವುಗುರ್ವಂ ೧೨೫

1 ಶ್ರೋಃ (ಜ) 2 ತ (ಜ) 3 ಪ್ಪೋಳ್ಪಂ (ಜ) 4 ಟ್ಟು (ಕಜ)

ಚಂಪಕಮಾಲೆ

ಥಳಥಳಿಪಾಯ್ದ ಮುತ್ತುಗಳ ರಾಶಿಗಳಿಂ ಮಣಿಗಾಜರಾಪಣಂ
ಗಳುಮೆಸೆದಿರ್ಪುವೊಂದೆಡೆಯೊಳೊಂದೆಡೆಯೊಳ್ ನವಚಾರುವಸ್ತ್ರಸಂ
ಕುಳನಿಭೃತಂಗಳಾಗಿ ಪಟವೈಶ್ಯಜನಂಗಡಿಗಳ್ ನಿರಂತರಂ
ತಳೆದವಸೂನಸಂಪದಮನಿಂದ್ರನ ಭಾಂಡಗೃಹಂಗಳೆಂಬಿನಂ ೧೨೬

ವಚನ: ಮತ್ತಮೊಂದೆಡೆಯೊಳ್

ಮತ್ತೇಭವಿಕ್ರೀಡಿತ

ಸ್ಮರವಶ್ಯೌಷಧಸಾರಸಾರಘುಟಿಕಾಪೇಟಂಗಳೆಂಬಂದದಿಂ
ವರಪೂಗೀಫಳರಾಶಿಗಳ್ ಸೊಗಸನೀವುತ್ತಿರ್ದುವಂತಲ್ಲ[1]ದಿಂ
ದಿ[1]ರೆಯೊಳ್ ಸೇವನಮಾತ್ರದಿಂ ಸ್ಮರವಿಕಾರೋದ್ದೀಪನಸ್ಫೂರ್ತಿಯಂ
ಪಿರಿದುಂ ಮಾಳ್ಪ ವಿಶೇಷಶಕ್ತಿದಲಸತ್ಕಾವಂದದಿಂ ಬಂದುದೋ ೧೨೭

ಮಹಾಸ್ರಗ್ಧರೆ

ಕಡುಚಿಬ್ಬಂಬೊಯ್ದು ಬಣ್ಣಂಬಡೆದು ಪೊಸೆಗಳುಂ ಸೇರಿತಾಗಿರ್ದ ಮತ್ತಿ
ಮ್ಮಡಿ ಚೆಲ್ವಂ ಬೀಱುತಂ ರಂಜಿಪ ಬಿಳಿಯೆಲೆಗಳ್ ಕಾಮದೇವಾಧಿರಾಜಂ
ಪಿಡಿದಾರ್ಪಂ ತೋರ್ಪ ಕೂರಂಬುಗಳ ತೆಱದೆ ಕಣ್ಗೊಂಡಪಂತಲ್ಲಪೆಂದೆಂ
ಬಡೆ ಕಾಮೋದ್ವಾಧೆಯೆಂತುಪ್ಪವಿಪುದು ಮನದೊಳ್ ಸೇವನಾಮಾತ್ರದಿಂದಂ ೧೨೮

ಚಂಪಕಮಾಲೆ

ಸೊಗಯಿಪ ತಮ್ಮ ಕೋಮಳಕರಾಂಗುಳಿಯಿಂ ಪಿಡಿದೆತ್ತಲಾಗಳಂ
ತುಗುರ್ಗಳ ಕಾಂತಿರೇಖೆಗಳನಿಮ್ಮಡಿಸುತ್ತಿರೆ [2]ಮಾಲೆ[2]ವೂಗಳಂ
ನೆಗಪಿದ ಮಾಲೆಗಾರ್ತಿಯರನಂಗನ ಹೂಡಿದ ಬಿಲ್ಗಳೆಂಬಿನಂ
ಮಿಗೆ ಜನಚಿತ್ತಮೆಂಬ ಗುಱಿಯಂ ಭರದಿಂದೆಸುತಿರ್ಪರಾವಗಂ ೧೨೯

ಕಂದ: ಪಱಿಮೆಗಳ ಕಪ್ಪಿನಿಂದಂ
ಮಿಱುಗುವ ಕೆಂದಳದ ಕೆಂಪಿನಿಂದಾವಿಳಮಾ
ಗುಱಿ3 ಚಿತ್ರಿಸಿದಂತಾದಂ
ಮೆಱೆ3ಗುಂ ಪಿರಿದಪ್ಪ ಪುಷ್ಪಮಾಲಾನಿವಹಂ ೧೩೦

ಉತ್ಪಲಮಾಲೆ

ಮುತ್ತಿನಹಾರಮುದ್ಘಕುಚಮಂಡಳದೊಳ್ ಕುಣಿದಾಡೆ ಕರ್ಣದೊಳ್
ಬಿತ್ತರಿಸಿರ್ದ ರತ್ನಮಯಭೂಷಣಕಾಂತಿ ಕಪೋಳದೊಳ್ ಕರಂ
ನರ್ತಿಸೆ ಕೈಯ ಕಂಕಣ ಝಣತ್ಕೃತಿಯೊಪ್ಪಿರೆ ಚಿತ್ತದೊಳ್ ಮುದಂ
ಜೆತ್ತರೆಯುತ್ತಮಿರ್ಪುದು ವಿಳಾಸವತೀಜನಮೆಯ್ದೆ ಘಟ್ಟಿಯಂ ೧೩೧

---

[1] ದೇಂತಿ (ಜ) [2] ಪೋರೆ (ಜ)

ಕಂದ: ಎನಗೆ ಪಗೆಯಪ್ಪ ಸಿರಿಯೊಡ
ನನವರತಂ ಕೂಡಿ ಬಾಳ್ವರಿವರೆಂಬೀ ಕೋ
ಪನದಿಂದವೆನೆ ವಿಪತ್ತಿ ದ
ಲಿನಿಸುಂ ಪೊರ್ದದು ಪಣಿಗ್ಗನಂಗಳನಸ[1]ಜಂ[1] ೧೩೨

ವಚನ: ಮತ್ತಮಲ್ಲಿ

ಮಹಾಸ್ರಗ್ಧರೆ

ರತಿಕೇಳೀವೇಳೆಯೊಳ್ ತತ್ಪ್ರಣಯಕಲಹದಿಂ ಪಿಂದುಮುಂದಾದ ಜೇತಃ
ಪತಿಯಂ ದುರ್ನೋಹದಿಂ ಕಾಲ್ವಿಡಿದು ತಿಳಿಪುವೀಕೃತ್ಯದಿಂ ಮಾರುತವ್ಯಾ
ಹತಭಾಸ್ವದ್ದ್ವಾರ ಘಂಟಾನಿನದದಿನತಿರಮ್ಯೋರುತಳ್ಪಂಗಳಿಂ ಸಂ
ಯುತಮಾಗಿರ್ದೆಯ್ದೆ ಚೆಲ್ವಂ ಪಡೆದುದು ಗಣಿಕಾಭೂರಿಸೌಧಪ್ರತಾನಂ ೧೩೩

ಅಲರ್ಗಣ್ಗಳ್ ಬೀಱ ವಿದ್ಯುತ್ಪ್ರಭೆಯನುರುಕುಚಂಗಳ್ ಮಹಾಹೇಮಕುಂಭಂ
ಗಳ ಚೆಲ್ವಂ ತೋಱ ತೋಳ್ಗಳ್ ಮೃದುಳತರಲತಾಶೋಭೆಯಂ ಪೋಲೆ ಕೇಶಾ
ವಳಿಗಳ್ ಮತ್ತಾಳಿನೀಕಾಂತಿಯನಪ[2]ಗ[2]ಯಿಸಲ್ ಪ್ರೌಢವೇಶ್ಯಾಸಮೂಹಂ
ವಿಳಸತ್ಕಾಮಾಧಿರಾಜ ಪ್ರಬಳಬಳಮಿದೆಂಬಂತೆ ತೋಱುತ್ತುಮಿರ್ಕುಂ ೧೩೪

ಕಂದ: ಸ್ನೇಹದನುಬಂಧಮಿನಿತುಂ
ಮೋಹದೊ[3]ದಂ[3] ಕಾಮದೇವ ದೀಪಾಂಕುರಸಂ
ದೋಹಮಾಗಿರ್ದು ಚಿತ್ರೋ
ದ್ದಾಹಮನಾಳ್ದತ್ತು ವಾರನಾರೀನಿವಹಂ ೧೩೫

ಶಾರ್ದೂಲವಿಕ್ರೀಡಿತ

ಎನ್ನಿಂದಿಮ್ಮಡಿಗಾಡಿಯಂ ಪಡೆದು ತೋರ್ಪೀ ಸ್ತ್ರೀಯರೊಳ್ ಕೂಡಿದಂ
ದೆನ್ನಂ ಬಿಟ್ಟಪನೆಂದು ಪಾರ್ವತಿ ಮಹಾಭೂತೇಶನರ್ಧಾಂಗದೊಳ್
ಕೆನ್ನಂ ಪೊಕ್ಕೊಡನಿರ್ಪಳಂತೆ ವಿಳಸಲ್ಲಕ್ಷ್ಮೀಮಹಾದೇವಿಯುಂ
ತನ್ನಾ ಕೃಷ್ಣನ ವಕ್ಷದೊಳ್ ನೆಲಸಿದಳ್ ತರ್ಕೈಸುವ ವ್ಯಾಜದಿಂ ೧೩೬

ಉತ್ಪಲಮಾಲೆ

ಉನ್ನತಜೈನಚೈತ್ಯನಿಳಯಂಗಳ ಮಂಜುಳರತ್ನಕೂಟನಿ
ಷ್ಪನ್ನಮೃಗಾರಿಜಾತ ಭಯದಿಂದೆನೆ ಶೀತಮಯೂಖಮಾಲಿ ತಾಂ
ಸನ್ನಿಹಿತಂ ನಭಸ್ಥಳದೊಳೆಯ್ದುರುಳಂಪಗಲುಂ ನಿರಂತರಂ
ತನ್ನ ಕುರಂಗನುಂ ಪಿಡಿದು ನಿಲ್ಲದೆ ಸುತ್ತಿಬರುತ್ತಮಿರ್ಕುಮಂ ೧೩೭

---

[1] ಜಾ (ಗಜ) [2] ಟ (ಜ) [3] ಡಂ (ಜ)

ಕಂದ : ಅವಱ ಘನಪಟ್ಟಸಾಲಾ
ನಿವಹದೊಳುತ್ಕೃಷ್ಟಜೈನಮುನಿಗಳ್ ಭರದಿಂ
ದವಗತ ಸಮಸ್ತಶಾಸ್ತ್ರರ್
ಪ್ರವರಗುಣಾವಾಸರಿರ್ಪರೊಲಿದನವರತಂ ೧೩೮

ವಚನ : ಮತ್ತಮಾ ಜಿನಾಲಯಂಗಳ ಮುಂದಣ ಮಂಗಳಮಯ ರಂಗಾವಳೀ ಭಂಗುರರಂಗದುತ್ತುಂಗತರ ಮಕರತೋರಣದೋರಣಿ ರಮಣೀಯಂಗಳಪ್ಪ ಭೋಗಸಂಗ ಸ್ಥಾನಂಗಳೊಳ್

ಚಂಪಕಮಾಲೆ

ಪದಚಳನಂ ಸುತಾಳಲಯಭೇದಮನುಗ್ಘಡಿಸಂತೆ ತೋಱಿ ಗೀ
ತದ ರಸಮೆಯ್ದೆ ಹಸ್ತಿಚಳನಕ್ಕನುಕೂಲಮದಾಗೆ ಚಾರುವಾ
ದ್ಯದ ನಿನದಂಗಳಿಂದೆ ವಲಭೀಸ್ಥಳಿ ಮಾರ್ದನಿಯಂ ಕೊಡುತ್ತಿರಲ್
ಸುದತಿಯರೊಲ್ದು ನರ್ತಿಪರನಂಗನ ಮೋಹಶರಂಗಳೆಂಬಿನಂ ೧೩೯

ಮಣಿಮಯ ಭೂಮಿಯೊಳ್ ನಡೆವ ಪೌರವಧೂಪ್ರತಿಬಿಂಬದಂಭದಿಂ
ಫಣಿಪತಿ ಕನ್ಯಕಾನಿಕರಮುಚ್ಚಮನೋಮುದದಿಂದೆ ಬಂದು ತ
ತ್ಪ್ರಣುತ ವಿಳಾಸಮಂ ನೆಱೆಯೆ ನೋೞ್ಪಭಿವಾಂಛೆಯಿನೊಂದಿ ಪೋಪುದೀ
ಪ್ರಣಯದಿನೆಂಬವೊಲ್ ಬಿಡದ ಮಾರ್ಪೊಳಸಿಂ ರಮಣೀಯಮಾ ನೆಲಂ ೧೪೦

ಕಂದ : ಹರಿನೀಳರಚಿತ ಸೌಧೋ
ತ್ಕರದೊಳ್ ಕೀಲಿಸಿದ ತೋರಮುತ್ತುಗಳೆಂದಂ
ಬರದೊಳ್ ಪಗಲುಂ ಮೂಡಿದ
ವರ ತಾರೆಗಳೆಂಬ ತೆಱದಿನೊಪ್ಪಿದವೆತ್ತಂ ೧೪೧

ಪಳಿಕಿನ ಭಿತ್ತಿಯನೊಲವಿಂ
ನಳಿನಾಕ್ಷಿಯರೆಯ್ದೆ ನೋಡಿ ಪಲ್ಸುಲಿಯಲ್ ನಿ
ರ್ಮಳಮಾದೊಡಮಧರಚ್ಛವಿ
ಗಳ ಪೊಳೆಸಿಂದರುಣಮಾಗೆ ಸುಲಿಯುತ್ತಿರ್ಪರ್ ೧೪೨

ಉತ್ಪಲಮಾಲೆ

ಇಂದುಮಯೂಖಲೇಖೆ ಹರಿನೀಲಶಿಲಾವಲಭಿಗವಾಕ್ಷದೊಳ್
ಬಂದುಱಿಪೊಕ್ಕು ಭಿತ್ತಿಗಳ ಮೇಲೆ ವಿಲಂಬಿಸೆ ಮುಗ್ಧಕಾಮಿನೀ
ವೃಂದಮದಲ್ಲಿ ನಿರ್ಮಲ ವಿಮೌಕ್ತಿಕಹಾರಮಿದೆಂದು ಕೈಯನಾ
ನಂದದೆ ನೀಡಲಿಲ್ಲದಿರೆ ಮಾೞ್ಪುದು ಮೇಳದವರ್ಗೆ ಹಾಸ್ಯಮಂ ೧೪೩

ಅಂಬರಮಾರ್ಗಮೊಳ್ ನಡೆದುಬಂದ ಪರಿಶ್ರಮದಿಂ ಬಳಲ್ದ ತ
ನ್ನಿಂಬಿನ ಮಿತ್ರನಂ ಪವನಚಂಚಳಕೇತುಪಟಂಗಳೆಂಬ ಚಿ
ತ್ರಂಬಡೆದಿರ್ದ ವೀಜನಚಯಂಗಳಿನಂದದಿ ಬೀಸುವಂತಿರೊ
ಪ್ಪಂಬಡೆದಲ್ಲಿ ಹರ್ಮ್ಯತತಿ ಮಾಳ್ಪುದು ನೋಳ್ಪರ ಕಣ್ಗೆ ಹಬ್ಬಮಂ ೧೪೪

ಮುತ್ತಿಸಹಾರಮೆಂಬ ಮಮನಿರ್ಝರವಾರಿಯಿನೊಳ್ಪುವೆತ್ತ ತ
ತ್ಪತ್ತನಯೋಷಿದುಚ್ಚಕುಚಮಂಡಲಮೆಂಬ ಮಹೀಧ್ರ ದುರ್ಗಮಂ
ಚಿತ್ತಜನೆಂಬ ರಾಜನೊಸೆದೇಱ ಸುದುಸ್ಸಹತೇಜನಾಗಿ ಲೋ
ಕತ್ರಯದೊಳ್ ತ್ರಿಲೋಚನನನಾದೊಡಮಂತವನೆಯ್ದೆ ಲೆಕ್ಕಿಸಂ ೧೪೫

ವಚನ: ಮತ್ತಮಾಪುರಂ ಕಳಾಧರವಿರಾಜಿತಮಾಗಿಯುಂ ಮೋ[1]ಷೋಚ್ಚ[1]ಯ ಮಲ್ತು ವಿಶಿಷ್ಟಲಕ್ಷ್ಮೀಸಮಾಲಕ್ಷಿತಮಾಗಿಯುಂ ಖರದಂಡಮಲ್ತು ವಿಸ್ತೃತಸೂತ್ರ[2]ವಿ[2]ಧಿ ಸನಾಥಮಾಗಿಯುಂ ಮಹಾಭಾಷ್ಯಮಲ್ತು ಉಮಾಸಮುಪಗತಮಾಗಿಯುಮರ್ಧನಾರಿ ಯಲ್ತು ಪೀತಾಂಬರ[3]ಧಾಮರ[3]ಮಣೀಯಮಾಗಿಯುಂ ಗದಾಭಿಯುಕ್ತಮಲ್ತುಮಂತು ಮಲ್ಲದೆಯುಂ

**ಚಂಪಕಮಾಲೆ**

ಅಗಣಿತವಜ್ರಮುದ್ರರಿನನೇಕ[4]ಸ[4]ಪುಣ್ಯ ಜನಂಗಳಿಂ ಪ್ರಸಿ
ದ್ಧಿಗೆ ನೆಲೆಯಾಗಿ ತೋರ್ಪನಗೆ ತಾಂ ಗಡ ಪಾಸಟಿಯೊರ್ವನೊರ್ವನಿಂ
ಸೊಗಯಿಪ ಶಕ್ರಪತ್ತನಕಮೆಂದದುಮಂ ನಗುವಂತಿರೊಪ್ಪುಗುಂ
ಮಿಗೆ ನಿಜಚಂದ್ರಕಾಂತಗೃಹಸಂತತಿ ಕಾಂತಿಗಳಿಂದೆ ತತ್ಪುರಂ ೧೪೬

ಸುರತತಿ ಸಂತತಂ ಬಿಡದೆ ಕಣ್ಣೆವೆಯಿಕ್ಕದೆ ನೋಡುತಿರ್ದ ದು
ರ್ಧರತರದೃಷ್ಟಿದೋಷಪರಿಹಾರನಿಮಿತ್ತಕಮಾಗಿ ರಾತ್ರಿಸೌಂ
ದರಿ ಪಿಡಿದೆತ್ತುವಾರತಿಯ ಬೆಳ್ಳಿಯ ಭಾಜನಮೆಂಬವೊಲ್ ಮಹಾ
ಪುರಮಸೂನಮಂ ಬಳಸುತಿರ್ಪುದು ಪೂರ್ಣಸುಧಾಂಶುಮಂಡಲಂ ೧೪೭

ವಚನ: ಅಂತು ಛಂದೋವಿದ್ಯೆಯಂತೆ ನಾನಾಛಂದಂಬಡೆದು ರಂಜಿಸುವ ತತ್ಪುರದ ಮಧ್ಯಕ್ಕಳಂಕಾರಮೆನಿಸಿ

ಕಂದ: ಖರಕರನ ಕುದುರೆಗಳ್ಗು
ದ್ಧುರದೂರ್ವಾಂಕುರದ ಶಂಕೆಯಂ ಮಾಡುತ್ತುಂ
ಹರಿನೀಲರಚಿತ ಸಾಲಂ
ನರನಾಥನ ಚಾರುಗೇಹಮಂ ಬಳಸಿರ್ಕುಂ ೧೪೮

1 ಷಾಶ್ರ (ಜ) 2 ವೀ (ಜ) 3 ರಾ (ಜ) 4 ಸು (ಜ)

ವಚನ: ಅದಱ ನಾನಾಪ್ರಕಾರ ಸೂತ್ನರತ್ನಖಚಿತಂಗಳಪ್ಪ ತೋರಣಂಗಳಿಂ ಪೇಶಲ ಮಾದ ಪ್ರಥಮದ್ವಾರಪ್ರದೇಶದೊಳ್

ಉತ್ಪಲಮಾಲೆ

ಪಾಗುಡಮಾಗಿ ಬಂದು ಸಮಯೋಚಿತಮಂ ಸಲೆಸಾರ್ದು ಪಾರ್ದು ಮುಂ
ಬಾಗಿಲೊಳಿರ್ದ ಗಂಧಗಜದಾನಜಲಂಗಳಿನಾದ ಪಂಕ[1]ದೊಳ್
ವೇ[1]ಗಿಗಳಪ್ಪ ವಾಜಿಗಳ ಫೇನಲಸಂಗಳವಲ್ಲಿಗಿಲ್ಲಿಗಿಂ
ಬಾಗಿಯೆ ಬೀಳೆ ಪೋಲ್ತುದದು ಪಂಕದೊಳಿಕ್ಕಿದ ರಂಗವಾಲಿಯಂ ೧೪೯

ವಚನ: ಮತ್ತಮಲ್ಲಿಂದೊಳಗೆ

ಕಂದ: ಆನೆಗಳ ಸಾಲೆಗಳ್ ಪರ
ಮಾನಂದಮನೆಯ್ದೆ ಮಾಳ್ಪುವಖಿಳಜನಕ್ಕಂ
ದಾನ ಪರಿಮಳವಿಲೋಭನಿ
ಲೀನಾಳಿಕುಳಪ್ರಣಾದದಿಂ ಮುಖರಂಗಳ್ ೧೫೦

ಹಯಮಂದಿರಂಗಳೆಲ್ಲರ
ನಯನಂಗಳ್ಗೆವುತಿರ್ಪುವತಿಶಯಮಂ ತ
ಮ್ಮಯ ರತ್ನಕಳಶಕಿರಣೋ
ಚ್ಚಯದೊಳ್ ತೇಂಕಾಡುತಿರ್ದವೆಂಬಂತೆವೊಲಂ ೧೫೧

ಯಮುನ ನಾಲಗೆಯ ತೆಱದಿಂ
ದಮಿತ ಭಯಂಕರ ಸುತೀಕ್ಷ್ಣ ಶಸ್ತ್ರಂಗಳಿನಾ
ದಮೆ ನಿಚಿತಮಾದ ಶಾಲಾ
ಸಮುದಯಮನಿಶಂ ಬೆಡಂಗನವ[2]ಗ[2]ಯಿಸಿರ್ಕುಂ ೧೫೨

ಚಂಪಕಮಾಲೆ

ನಿರುಪಮರತ್ನನಿರ್ಮಿತವಿಶಾಲಸಭಾಸದನಂ ನಿಜಪ್ರಭಾ
ಪರಿಕರವಾರಿಯೊಳ್ ವಿಕ[3]ಸದಂ[3]ಬುಜಮೆಂಬಿನಮೆಯ್ದೆ ಲಕ್ಷ್ಮಿಯಂ
ಧರಿಸಿ ವಿರಾಜಿಕುಂ ಸುಕವಿರಾಜವಿನೋದವಿಲಾಲಿತಂ ನಿರಂ
ತರಿತವಿಚಿತ್ರಪತ್ರರಮಣೀಯಮನೂನಮಧುವ್ರತಾನ್ವಿತಂ ೧೫೩

ವಚನ: ಮತ್ತಮಲ್ಲಿಂದೊಳಗೆ

1 ದೊಳ್ಬೀಳ (ಕಗಚ) 2 ಟ (ಜ) 3 ಸಿತಾಂ (ಜ)

ಮಹಾಸ್ರಗ್ಧರೆ

ಅಡಿಕಿಲ್ಗೊಂಡೊಪ್ಪುವೇಳುಂನೆಲೆಗಳ ಮಣಿಮಾಡಂಗಳಿಂದಂ ವಿಚಿತ್ರಂ
ಬಡೆದಿರ್ದತ್ತುಂಗಕೂಟಂಗಳಿನತುಳಮಹಾಕಾಂತಿಯಿಂ ಗಾಡಿಯಿಂ ನೂ
ರ್ಮಡಿ ಮಾಳ್ಪೊಪ್ಪದ್ಮರಾಗಪ್ರಘಟಿತ ಕಳಶೌಘಂಗಳಿಂ ಕೌತುಕಕ್ಕಂ
ಡೆಡೆಯಾಯ್ತೆಯ್ದುದ್ಧರಾಜಾಲಯಮಖಿಳನುತಂ ಸಪ್ತಕಕ್ಷಾಸಮೇತಂ ೧೫೪

ಚಂಪಕಮಾಲೆ

ಉದಿತದಿನೇಶನೆಂಬ ಮಣಿಕಂದುಕಮಂ ಧರೆಯೆಂಬ ಕಾಂತೆ ತ
ನ್ನುದಯಗಿರೀಂದ್ರಮೆಂಬ ಕರದಿಂದಮೆ ಹಾಕಿ ತದಸ್ತಶೈಲಮಂ
ಬೊದವಿದ ಹಸ್ತದಿಂದೆ ಪಿಡಿವಲ್ಲಿ ಪುರಾಂಗನೆ ಮಧ್ಯದೊಳ್ ವಿ
ನೋದದೆ ಪಿಡಿಯಲ್ಕದಂ ಕರಮನೆತ್ತಿದವೊಲ್ ಮೆಱೆಗುಂ ನೃಪಾಲಯಂ ೧೫೫

ಕಂದ: ಕಡಪದ ಕಂಡರಣೆಯ ಬೇ
ಗಡವೆಸದ ವಿಚಿತ್ರಮಪ್ಪ ಕೆಲಸದ ಗತಿಯಂ
ನಡೆನೋಡಿ ಚತುರ್ಮುಖನುಂ
ಬಿಡದೆ ಕರಾಂಗುಳಿಯನೆಯ್ದೆ ತೂಗದೆ ಮಾಣಂ ೧೫೬

*

ಚಂಪಕಮಾಲೆ

ಒಸರ್ವ ಸುಧಾಂಶುಕಾಂತಮಯಕೂಟದೊಳಂ ಪ್ರತಿಬಿಂಬರೂಪದಿಂ
ಶಶಧರಬಿಂಬಮೊಪ್ಪುತ್ತಿರಲಲ್ಲಿಯ ಕಾಂತೆಯರಾಸ್ಯಶೋಭೆಯಂ
ಮಿಸುಗದೆ ಕಳ್ದೊಡಾ ಧರಣಿಪಂ ಸೆಱೆಯಿಕ್ಕಿರಲಾಗಳುಬ್ಬೆಗಂ
ಮಸಗಿಯಳುತ್ತಮಿರ್ದ ತೆಱದಿಂದದು ಕಣ್ಗೊಳಿಕುಂ ಜನಂಗಳಂ ೧೫೭

ಮಣಿಶಿಖರಂಗಳಿಂ ಬಗೆವೊಡೆನ್ನವೊಲೊಪ್ಪಮನಾಂತುದೆಂಬ ತ
ತ್ಪ್ರಣಯದಿನಾ ನೃಪಾಲಯಮನೀಕ್ಷಿಸಲೆಂದು ಸುರಾದ್ರಿ ಬಂದು ತಾ
ನೆಣಿಕೆಗತೀತಮಾದ ಪರರೂಪಮುಮಂ ಧರಿಸಿರ್ದುದೆಂಬಿನಂ
ಪ್ರಣುತೆಯರಪ್ಪ ರಾಣಿಯರ ಗೇಹಚಯಂ ಬಳಸಿರ್ದುದಂತದಂ ೧೫೮

ಮತ್ತೇಭವಿಕ್ರೀಡಿತ

ನೆಲೆಮಾಡಂಗಳ ಚೂಳಿಕಾಗ್ರಮನಡರ್ದೇಱಿರ್ದ ಕಾಂತಾಸ್ಯಮಂ
ಡಳಮಂ ನೋಡಿ ಸಮಾನಮಾಗದೆ ಕರಂ ನಾಣ್ಚಿರ್ದವೊಲ್ ಮೇಘಸಂ
ಕುಳಮಂ ತಾಂ ಮಱೆಗೊಂಡು ಸಂಕುಚಿತ ವಿಸ್ತಾರಾಂಶುಕಂ ಕಂದನೆ
ಯ್ದೊಳಕೊಂಡಿರ್ದ ಸುಧಾಕರಂ ಕೆಳಗೆ ಪೋಪಂ ಪ್ರೋಚ್ಚಸೌಧಂಗಳಾ ೧೫೯

* ರಾಜಾಲಯವರ್ಣನ (ಕಗಚ)

ಚಂಪಕಮಾಲೆ

ಮರಕತಗೇಹಭಿತ್ತಿಗಳ ಕಾಂತಿಗಳಿಂ ಪುದಿದಿರ್ದ [1]ಸಿತ್ತಿಲೊಳ್[1]
ಕರಮೆಸೆದಿರ್ದ ಭಾವಿಗಳ ಪಕ್ಕದೊಳಿರ್ಪ ರಥಾಂಗಯುಗ್ಮಮು
ಲ್ಲಿರುಳಿನ ಶಂಕೆಯಿಂ ಪಗಲೊಳಾಮೊಡವೆಯ್ದೆ ವಿಯೋಗದುಃಖದೊಳ್
ಪೊರೆದೊದಱುತ್ತುಮಿರ್ಪುದು ವಿಭಿನ್ನ[1]ತಟಾ[1]ಶ್ರಯಮಾಗಿ ನಾಡೆಯುಂ ೧೬೦

ಕಂದ: ಗರುಡೋದ್ಗಾರದ ಪಚ್ಚೆಯ
ಕಿರಣದೊಳೆಳವುಲ್ಲ ಶಂಕೆಯಿಂ ಸ್ಫಟಿ[3]ಕಾಂಶೂ
ತ್ಕ[3]ರದೊಳ್ ಜಳಶಂಕೆಯಿನಾ
ದರದಿಂ ಪೊಗಮಿಡುವವಲ್ಲಿ ಮೃಗಶಾಬಂಗಳ್ ೧೬೧

ವಚನ: ಮತ್ತಮಾ ನಿರುಪಮರೂಪೆಯರಪ್ಸರಸಿಯರನೋಲಯಿಸಲೆಂದು ಬಂದು ಕಿಱದುಂಪೊಳ್ತು ಸೇವಾವಿನೋದದೊಳಿರ್ದ ಬಳಿಯಂ ಕಳುಹಿಸಿಕೊಂಡು

ಮಾಳಿನೀ

ಅರುಣಿತ ಮೃದುಪಾದನ್ಯಾಸರಕ್ತೀಭರದ್ಭಾ
ಸುರ[4]ಹಿಮಕರ[4] ಕಾಂತಗ್ರಾವ ರಾಜಾಂಗಣಂ ರು
ಕ್ಸರಿಪಿಹಿತನಖಾಹ್ವಾನೋತ್ಕಮೆಂಬಂತೆ ಕಾಲುಂ
ಗುರದಲಿ ರುತಿಯೊಪ್ಪೆ ಸ್ತ್ರೀಗಣಂ ಪೋಪುದಲ್ಲಿಂ ೧೬೨

ವಚನ: ಮತ್ತಮಾ ರಾಜಭವನದೇಕಪ್ರದೇಶದೊಳ್

ಕಂದ: ಒಳಗಣ ಪೂಜಾರಚನಾ
ವಿಳಸನಮಂ ಪೊಱಗೆ ತೋಱುಸುತ್ತಂ ಮೆಱೆಗುಂ
ಪಳಿಕಿನ ಶಿಲೆಯಿಂ ಮಾಡಿದ
ಥಳಥಳಿಪ ವಿಶಾಳಚಾರುದೇಹಾರಗೃಹಂ ೧೬೩

ವಚನ: ಮತ್ತೊಂದೆಡೆಯೊಳ್

ಕಂದ: ನಾನಾಪ್ರಕಾರ ರತ್ನವಿ
ತಾನಂಗಳ ಬಹಳರಾಶಿಯಿಂ ತುಂಬಿ ಕರಂ
ಭೂನುತ ಭಂಡಾರಾಲಯ
ಮಾ ನರಪನಿವಾಸದಲ್ಲಿ ರಂಜಿಸುತಿರ್ಕುಂ ೧೬೪

---

1 ಪಿಂತಿಯೊಳ್ (ಜ) 2 ಕಜಾ (ಜ) 3 ಕಾಂ|ಕು (ಕಗಚ) 4 ಮರಕತ (ಜ)

ವಚನ : ಅದಲ್ಲದೆಯುಂ

ಮತ್ತೇಭವಿಕ್ರೀಡಿತ

ಪಿರಿದುಂ ಪುಣ್ಯಸಮೃದ್ಧಿಭಾಜನಮಿದೆಂದೆನ್ನಲ್ಲಿಗೆಳ್ತಂದಪಂ
ಸುರರಾಜಾರ್ಚಿತನಪ್ಪ ಪಂಚದಶತೀರ್ಥಾಧೀಶ್ವರಂ ನಿನ್ನೊಳಾ
ದರಮಂ ಮಾಡದೆ ಪೋಪುದೆಂಬ ಮದದಿಂ ಸರ್ವಾರ್ಥಸಿದ್ಧಾಖ್ಯಮಂ
ದಿರಮಂ ಮೂದಲಿಪಂತೆ ಗೀತರವದಿಂದೊಪ್ಪಿತ್ತು ರಾಜಾಲಯಂ ೧೬೫

ಕಂದ : ಭೂರಿತರ ರತ್ನಕುಟ್ಟಿಮ
ಧಾರಿಣಿಯೊಳ್ ತಾರಕಾಳಿ ಬಿಂಬಿಸೆ ನಿಶಿಯೊಳ್
ಭೂರಮಣಿ ತನ್ನೃಪಾಲಯ
ಚಾರುತೆಯಂ ನೋಡಲೆಂದು ಕಣ್ದೆಱೆದ ವೊಲ್ ೧೬೬

ಚಂಪಕಮಾಲೆ

ಧ್ವಜಪಟವೃಂದ ಪಲ್ಲವಿತಮೆಲ್ಲೆಡೆಯೊಳ್ ನೆಱೆಕೀಲಿಸಿರ್ದ ಪೀ
ನಜನಮನಃಪ್ರಮೋದಕರ ಮೌಕ್ತಿಕಪುಷ್ಪಿತಮುದ್ಘಜೋದ್ಯಭಾ
ವಜನನದಕ್ಷರತ್ನಕಳಶಾವಳಿ ಸತ್ಫಳಿತಂ ದಲಾಗಿ ಭೂ
ಮಿಜಮೆನೆ ರಾಜಗೇಹಮದು ಶೋಭೆಯನಾಂತೆಸೆಗುಂ ನಿರಂತರಂ ೧೬೭

ಮಹಾಸ್ರಗ್ಧರೆ

ಅದಱೊಳ್ ಸಾಮ್ರಾಜ್ಯಲೀಲಾಮುದಿತಹೃದಯನಿರ್ಪಾ ಮಹೀವಲ್ಲಭಂ ಸಂ
ವಿದಿತಾನೇಕಾಂತತತ್ತ್ವಂ ರಿಪುಕುಳಕುಧರಸ್ಫೋಟವಜ್ರಾಯುಧಂ ದಿ
ಕ್ಪದರಾಜತ್ಕೀರ್ತಿಕಂ ಬಾಹುಬಲಿಸುಕವಿರಾಜಂ ಸಮಸ್ತಾಭಿವಾಂಛಾ
ಪ್ರದಕಲ್ಪಕ್ಷ್ಮಾರುಹಂ ಭೂಪತಿವಿನತಪದಂ ಚಾ[1]ತು[1]ರೀಜನ್ಮಗೇಹಂ ೧೬೮

ಗದ್ಯ : ಇದು ಸಕಳಭುವನಜನವಿನೂಪುಮಾನಾನೂನ ಮಹಿಮಾಮಾನನೀಯ
ಪರಮಜಿನಸಮಯ ಕಮಳಿನೀಕಳಹಂಸಾಯಮಾನ ಶ್ರೀಮನ್ನಯಕೀರ್ತಿದೇವ
ಪ್ರಸಾದಸಂಪಾದಪಾದನಿಧಾನದೀಪವರ್ತಿಯುಭಯಭಾ[2]ಷಾಕವಿ[2]ಚಕ್ರ
ವರ್ತಿ ಬಾಹುಬಲಿಪಂಡಿತದೇವ ಪರಿನಿರ್ಮಿತಮಪ್ಪ ಧರ್ಮನಾಥ
ಪುರಾಣದೊಳ್ ಕಥಾವತರ[3]ಣ[3]ವರ್ಣನಂ

## ಪ್ರಥಮಾಶ್ವಾಸಂ

1 ಮ (ಜ) 2 ಷಾ (ಜ) 3 ಣಂ (ಜ)

# ದ್ವಿತೀಯಾಶ್ವಾಸಂ

*

ಕಂದ: ಶ್ರೀ ನೆಲಸೆ ವಕ್ಷದೊಳ್ ವಾ
ಕ್ಶ್ರೀ ನೆಲಸೆ ನಿಜಪ್ರಸನ್ನಮುಖದೊಳ್ ವಿಜಯ
ಶ್ರೀ ನೆಲಸೆ ಭುಜದೊಳೊಪ್ಪಿದ
ನಾ ನರಪಂ ಸರಸಚತುರಕವಿಕುಲತಿಳಕಂ ೧

ಭೂನುತನಾ ನೃಪತಿ ಮಹಾ
ಸೇನಮಹಾರಾಜನೆಂಬ ಪೆಸರಂ ತಳೆದಂ
ಪೀನತರೇಕ್ಷ್ವಾಕುಕುಲಾಂ
ಭೋನಿಧಿ ಶಾರದನಿಶಾಕರಪ್ರತಿಮಾನಂ ೨

ಉತ್ಪಲಮಾಲೆ

ಆತನ ರೂಪಮೆಂಬುರುಸುಧಾರಸಮಂ ನಯನಂಗಳೆಂಬ ಸ
ತ್ಪಾತ್ರೆಗಳಲ್ಲಿ ಕಾಮಿನಿಯರಾತುರದಿಂ ಕುಡಿದಂತರಂಗದೊಳ್
ನೂತನಮಾಗಿ ತೀವಿದೊಡಮುಣ್ಮುವ ತಣ್ಬೆಮರೊಂದು ದಂಭದಿಂ
ದಾತತಮಾಗಿ ತಾಂ ಪೊಱಗೆ ಪೊಣ್ಮಿದುದೆಂಬಿನಮೊಪ್ಪಿ ತೋಱುಗುಂ ೩

ವಚನ: ಆ ಮಹೀಪಾಳಮೌಳಿಮಾಳಾಮಾಣಿಕ್ಯಮಯೂಖಪಟಳಿಕಾಜಟಿಳಿತ ಚರಣ ನಖಕಿರಣನ ಹಳಕುಳಿಶಕಳಶನಳಿನಾದ್ಯಕ್ಷೂಣಲಕ್ಷ[1]ಣ[1]ಪರಿಲಕ್ಷಿತಮಾಗಿ ಮಾಕಂದದ ಕೆಂದಳಿರಂದದಿಂ ಮೇದುರಮಾದ ಪಾದಪಲ್ಲವಂಗಳುಂ ಸುವೃತ್ತಂಗಳಾಗಿ ಮನೋಹರಂಗಳಾದ ಜಂ[2]ಘೆ[2]ಗಳುಂ ದೇಹಗೇಹಕ್ಕಾಧಾರಮಾಗಿ ಸಮುತ್ತಂಭಿತಂಗಳಾದ ಶಾತಕುಂಭಮಯಸ್ತಂಭಸನ್ನಿಭಂಗಳಾಗಿರ್ದೂರುಗಳುಂ ಸಿಂಹದ ಕಟಿಯಂತೆ [3][ಬರ್ಹಿ] ಮಾತ್ರಾಂ[3]ತಂಗಳಾಗಿ ಬಟ್ಟಿದುವಾದ ಕಟಿತಟಂಗಳುಂ ಸಮುಲ್ಲಸಲ್ಲೋಮಮಂಜರಿ ಪರಿರಂಜಿತಮಾಗಿ ವೃತ್ತಾಯತಮಾದ ಮಧ್ಯಪ್ರದೇಶಮುಂ ವಿಶಿಷ್ಟಸಾಮ್ರಾಜ್ಯಲಕ್ಷ್ಮೀ ಭುಜಲತಾಸಮಾಲಿಂಗನ ಕೇಣೀಕೃತಮಾದ ವಿಶಾಲವಕ್ಷಸ್ಥಳಮುಂ ಚಿರಕಾಲೋ ದ್ವಹನದಿಂ ಕೊರಲ್ ಕುಸಿದು ಪರಿಶ್ರಾಂತಧರಣೀಂದ್ರಪರಿಶ್ರಮಪರಿಹರಣಾರ್ಥಮಾಗಿ

---

[1] ಣಲಕ್ಷಣ (ಜ) [2] ಣಲಕ್ಷ ಣ (ಕಗ) [3] ಬಂಹಿಮಹಿಮಾಕ್ರಾಂ (ಜ)

* ಮಹಾಸೇನ ಮಹಾರಾಜನ ವರ್ಣನೆ (ಕಗಚ)

ಧರಣೀಭಾರಪರಿಭರಣ ನಿರ್ಯುಕ್ತಂಗಳಾದ ಪ್ರಚಂಡದೋರ್ದಂಡಕಾಂಡಂಗಳುಂ ಗವೇಂದ್ರ ಕಂಪರದಂತೆ ನಿಸ್ಥೂಲಾಕಾರದಿಂದೊಪ್ಪಂಬೆತ್ತಿರ್ದ ರೇಖಾತ್ರಯಾಂಕಿತಕಂಠಕಂದಳಮುಂ ಸಮಸ್ತನರನಾರೀಜನನಯನಮನೋಮಧುಕರನಿಕರಕ್ಕನಣುವಾಗಿ ತಣಿವನೀವ ಸ್ಮೇರ ಚಾರುಮುಖಕಮಳಮುಂ ಕಾಳಿಂದೀನದೀರಂಗತ್ತರಂಗಭಂಗಿಯಂತೆ ಭಂಗುರಮಾಗಿ ಸ್ನಿಗ್ಧ ಮುಗ್ಧಮಾದ ಕುಂತಳಕಳಾಪಮುಮತ್ಯಂತರಮಣೀಯಮಾಗಿರ್ಪುದಂತುಮಲ್ಲದೆಯುಂ

ಕಂದ : ಆ ಕಾಮದೇವನೀ ಭೂ
ಲೋಕದೊಳಸಮಾನಮಪ್ಪ ನೃಪರೂಪಂ ಕಂ
ಡಾಕಳಿತಾಶ್ಚರ್ಯರಸೋ
ದ್ರೇಕಭರಂ ತಲೆಯನೆಯ್ದೆ ತೂಗದೆ ಮಾಣಂ ೪

ಅಱುವತ್ತುನಾಲ್ಕುಕಲೆಗಳ್
ಮೆಱೆದವು ತದ್ಭೂಪನಲ್ಲಿ ತನ್ಮತಿಶಯಮಂ
ನೆಱೆ ನೋಳ್ಪ ವಾಂಛೆಯಿಂದಂ
ತಱಿಸಂದೊಂದೆಡೆಯೊಳೆಯ್ದೆ ಕೂಡಿದ ತೆಱದಿಂ ೫

ಶ್ರುತವಾರ್ಧಿವಿಧುವೆನಿಪ್ಪಾ
ಕ್ಷಿತಿಪನ ದೆಸೆಯಿಂ ಪರಾಭವಂ ಬಂದಪುದೆಂ
ದತಿಶಯಪತನಾರ್ಥಂ ಭಾ
ರತಿ ಪುಸ್ತಕಮಂ ಕರಾಗ್ರದಿಂ ಬಿಡಳಿನ್ನುಂ ೬

ಅತಿನಿಶ್ಚಳಮಾಗಿಯುಮಾ
ಕ್ಷಿತಿಪನ ಗುಣಗಣಮುಮಖಿಳಜನಚಿತ್ತದೊಳು
ನ್ನತಮಾಗಿ ವರ್ತಿಸುತ್ತಿ
ರ್ಪತಿಶಯಮಂ ತಳೆದು ಮಾಳ್ಪುದದು ವಿಸ್ಮಯಮಂ ೭

ದಾನಗುಣಪ್ರಿಯನಪ್ಪಾ
ಭೂನಾಥಂ ಲಕ್ಷಸಂಖ್ಯೆಯಿಂ ನುಡಿದೊಡಮಿಂ
ತೀ ನೆಲನೆಲ್ಲಂ ಪೊಗಳ್ವುದು
ಮಾನಿತಮಿತಭಾಷಿಯೆಂದು ಭರದಿಂದವನಂ ೮

ಉತ್ಪಲಮಾಲೆ

* ಆತನ ಕೀರ್ತಿಯೆಂಬಮೃತವಾರ್ಧಿ ಪತ್ತುದಿಗಂತರಾಳದೊಳ್
ನೂತನಮಾಗಿ ಪೆರ್ಚಿದೊಡೆ ಪುಟ್ಟಿದುವಾಗಸದಲ್ಲಿಯುಬ್ಬಹಂ
ಸಾತತ ಮೀನ ಕರ್ಕಟಕ ಸನ್ಮಕರಂಗಳದಲ್ಲದಂದು ಪು
ತ್ತ್ರೀತೆಱದೀ ಜಲೋದ್ಭವಿಗಳಾ ಸ್ಥಳವಾಸಿಗಳಾದಕಾರಣಂ ೯

ಕಿನ್ನರದೇವದಂಪತಿಗಳಾ ನರನಾಥನ ಬೀರದೇಳ್ಗೆಯಂ
ಸನ್ನುತಮಾಗಿ ಪಾಡುತಿರಲಾದರದಿಂದಮೆ ಕೇಳ್ವ ಪೊತ್ತಿನೊಳ್
ಸ್ವರ್ನಿಳಯಾಧಿಪಂ ಬಿಡದೆ ಮೆಚ್ಚಿ ಕರಾಂಗುಳಿಚಾಳನಂಗೆಯು
ಲ್ಕುನ್ನತಮಾಗೆ ಕಂಕಣಝಣತ್ಕೃತಿ ನಿಶ್ಚಳಮಾಗಿ ಮಾಡುಮಂ ೧೦

† ಆ ನರನಾಥನುಗ್ರತರತೇಜದ ಬೆಂಕೆ ದಿಶಾಕರೀಂದ್ರಭ
ಸ್ತ್ರಾನನಪ್ರೋತ್ಕೃತಿಪ್ರಭವಮಾರುತನಿಂ ಮಿಗಿಲಾಗಿ ವೈರಿಸಂ
ತಾನದನಲ್ಪಮಪ್ಪ ಕಟಕಂ ಜಗತೀಪಟದೊಳ್ ಪ್ರದಾಹಮಂ
ಪೀನಮೆನಲ್ಕೆ ತಾಳ್ದಿ ಪರಿವರ್ತಿಸುತಿರ್ಪುದದಾವಕಾಲಮುಂ ೧೧

ಕಂದ: ಸುರತಾರ್ಥಿಗಳಪ್ಸರಿಗಳ
ನಿರದಪ್ಪಿದೊಡಂ ಕೃಪಾಣರಮಣಿಯನಾತಂ
ಭರದಿಂ ಪಾಣಿಗ್ರಹಣೋ
ದ್ಧುರಯೋಗ್ಯಳನೆಯ್ದೆ ಮಾಡಿ ಕರವೊಸೆದಿರ್ಪಂ ೧೨

ಮಹಾಸ್ರಗ್ಧರೆ

ಪಿರಿದುಂ ತೇಜಸ್ವಿ ತೇಜಃಪ್ರಸರಮನಿರದಂತೆಲ್ಲಮಂ ಮುಚ್ಚಿ ಕಾಂತ್ಯು
ತ್ಕರಮೆಂಬೀ ಮಿಂಚನಾದಂ ಕಱಿದು ನಿನದಮಂ ತಾಳ್ದಿ ಕಾರ್ಗಾಲದೊಳ್ ಬಿ
ತ್ತರಿಸಿರ್ದೀ ಮೇಘಮೆಂಬಂತುದಯಿಸೆ ನೃಪಖ[1]ಳ್ಗಂ[1] ಮಹಾತೀಕ್ಷ್ಣ ಧಾರಾ
ಪರಿಪಾತತ್ರಾಸದಿಂದೋಡಿದರತಿಜನದಿಂ ರಾಜಹಂಸರ್ [2]ನಿತಾಂತಂ[2] ೧೩

ಉತ್ಪಲಮಾಲೆ

ಆತನ ಖಳ್ಗಮೆಂಬ ಖಳರಾಹು ಸಮುದ್ಧತರಾಜರಂ ಕಳಾ
ಖ್ಯಾತರೆನಿಪ್ಪರಂ ಪಿಡಿದು ನುಂಗಿದೊಡಂತವರೆಯ್ದೆ ಧಾ[3]ತ್ರಿ[3]ಯೊಳ್
ನೂತನಮಾಗಿ ಮುಳ್ಗಿ ನಿಖಿಳಾಶ್ವಮುಮಂ ದ್ವಿಜರಾಜಿಗಿತ್ತು ತ
ಮ್ಮಾತ್ರತಮಪ್ಪ ಚಾಗಮನಿಳಾತಳದೊಳ್ ಮೆಱಿದರ್ ನಿರಂತರಂ ೧೪

---

[1] ಡ್ಗಂ (ಜ) [2]ಪ್ರತಾಪಂ (ಜ) [3] ರೆ (ಕಚ)

* (ಗ) ಪ್ರತಿಯಲ್ಲಿ ೯ನೆಯ ಪದ್ಯವಿಲ್ಲ. † (ಗ) ಪ್ರತಿಯಲ್ಲಿ ೧೧ನೆಯ ಪದ್ಯ ಪುನರುಕ್ತವಾಗಿದೆ.

ಕಂದ: ತಂತ್ರಯುತರಾದೊಡಂ ನಿಜ
ಮಂತ್ರಿಗಳಾ ನೃಪನ ಖ[1]ಳ್ಗ[1]ಭುಜಗನ ವಿಷಮಂ
ಸಂತೈಸಲಾಱರೆಂದರಿ
ಸಂತತಿಗಳ್ ಶಿರದೊಳಾಂತರಾತನ ಪದಮಂ ೧೫

ಉತ್ಪಲಮಾಲೆ
ದಿಕ್ಕುಗಳೆಲ್ಲಮಂ ನೆಱೆಯೆ ಸಾಧಿಸಿ ಕಪ್ಪಮನೆಯ್ದೆ ಕೊಂಬೆನೆಂ
ದುಕ್ಕೆವದಿಂದೆ ಪೋಪ ನರನಾಥನ ಸೇನೆಯ ಭೂರಿಭೂರಿಭಾ
ರಕ್ಕೆ ಧರಾತಳಂ ಕುಸಿದು ಪೊತ್ತ ಫಣೀಶ್ವರನೌಳಿಯೊಳ್ ಕರಂ
ಚಿಕ್ಕನೆ ಕೀಲಿಸಲ್ ಕಳೆಯಲಾಱದವಂ ತಳೆದಿರ್ಪನೀಗಳುಂ ೧೬

ಸೇನೆಯ ಭಾರದಿಂ ಧರಣಿಮಂಡಳ ಕಂಪಿಸುವಂತೆ ಪೋಗುತಿ
[2]ರ್ದಾ[2] ನರನಾಯಕಂಗಗಿದು ಜಂಗಮಭೂಧರವೃಂದವೊಂದೆ ಕಂ
ಪೋನ್ನತಮಾದುದಿಲ್ಲ ತಪರಿವ್ರಜರಕ್ಷಣಮೆಂಬ ದೋಷದಿಂ
ತಾನಿರದಂಜಿದಂತೆ ನಡುಗಿತ್ತು ಕರಂ ಸ್ಥಿರಭೂಧರಾಳಿಯುಂ ೧೭

ಕಂದ: ದಂತಿವ್ರಜದಿಂದಂ ದ್ವಿಜ
ಸಂತತಿಯಿಂ ಖ[3]ಳ್ಗ[3]ವೃಂದದಿಂ ಹರಿಗ[4]ಳ[4]ನಾ
ದಂ ತುಂಬಿರ್ಪುದು ತನ್ನಹಿ
ಕಾಂತನ ಬಂಧುಗಳ ವೈರಿವರ್ಗದ ದುರ್ಗಂ ೧೮

ಆತನ ವೇಳೆಗೆ ಸಂದರ್
ಭೂತಳದೊಳ್ ಕೆಲಬರರಿಗಳದನೊಲ್ಲದವರ್
ಮಾತೇಂ ಮತ್ತೆ ಕೆಲಂಬರ್
ಭೀತಾತ್ಮಕರಂಬುನಿಧಿಯ ವೇಳೆಗೆ ಸಂದರ್ ೧೯

ಧುರದೊಳಿವರೆನಗೆ ಮುನ್ನಂ
ಭರದಿಂ ಬೆಂಗೊಟ್ಟರೀಗಳೆಲ್ಲಿಂ ಬಂದ
ತ್ತಿರದೆಂದು ನೋಳ್ಪ ತೆಱದಿಂ
ದರಸಂ ನತರಾದ ಪಗೆಗಳಂ ಮು[5]ಟ್ಟಿ[5]ರ್ದಂ ೨೦

---

[1] ಡ್ಗ (ಜ) [2] ರ್ಪಾ (ಜ) [3] ಡ್ಗ (ಜ) [4] ೞ (ಜ) [5] ಚ್ಚಿ (ಜ)

ಧ್ರಾಳಿಯನಿಟ್ಟರಿಧಾತ್ರೀ
ಪಾಳರ ಸಂಪತ್ತಿಯೆಲ್ಲಮಂ ತಂದೊಡೆ ಭೂ
ಪಾಳಂ ಕೊಳ್ಳದೆ ಭಟ್ಟ
ರ್ಗೋಲಯಿಸುವವರ್ಗೆ ಕೊಟ್ಟು ಮೆಱೆದಂ ಗುಣಮಂ ೨೧

ಆ ರಾಜನ ಜನಲಾಲಿತ
ಚಾರುಯಶಃಪೂರ್ಣಚಂದ್ರಮಂಡಳದೊಳ್ ತ
ದ್ವೈರಿಗಳ ದುರ್ಯಶಂ ಪರಿ
ರಾರಾಜಿಸುಗುಂ ಕಳಂಕಮೆಂಬಂತೆ ವಲಂ ೨೨

ಪರದಾರಮುಕ್ತನಾಗಿಯು
ಮಿ[1]ರೆ[1]ಯೊಳ್ ಪರದಾರಸಕ್ತನಾ ನರಪಾಳಂ
ಪರಿಕಿಪೊಡೆ ಮಾನ್ಯನಾಗಿಯು
ಮುರು[2]ತರಜ[2]ನಮಾನ್ಯನಾದನಿದು ಚಿತ್ರತರಂ ೨೩

ವಚನ: ಮತ್ತಮಾ ನರೋತ್ತಮಂ ವಿಬುಧಪತಿಯಾಗಿಯುಂ ಗೋತ್ರವಿರೋಧಿಯಲ್ಲು ಜಾತವೇದನಾಗಿಯುಂ ಸಮಾಶ್ರಿತಸಂತಪನೀಯದಾಯಿಯಲ್ಲು ಧರ್ಮರಾಜನಾಗಿಯುಂ ಜಗತ್ಸಂಹಾರಕಾರಿಯಲ್ಲು ಪುಣ್ಯಜನನಾಗಿಯುಂ ಕ್ರವ್ಯಾಹಾರಿ[3]ಯಲ್ಲು ಪ್ರಚೇತನಾಗಿಯುಂ ವಾರುಣೀಕೃತರತಿಯಲ್ಲು ಜಗತ್ಪ್ರಾಣನಾಗಿಯುಂ ಪರಿಧೃತಕುಜಾತಿಯಲ್ಲು[3] ಧನಾಧಿಪತಿಯಾಗಿಯುಂ ಸಮುಪಾತ್ತವೈಶ್ರವಣಾಖ್ಯಾತಿಯಲ್ಲು ಶಂಕರನಾಗಿಯುಂ ವಿಷಾದಿಯಲ್ಲು ಅಹಿಜನಾಗಿಯುಂ ಪ್ರಭಂಜನಸೇವಿಯಲ್ಲು ಕಲಾನಿಧಿಯಾಗಿಯುಂ ಶೀತಕರನಲ್ಲುಮಿಂತು ನಿರ್ದೋಷದಿಕ್ಪಾಲಕನಾಗಿಯುಂ ಅರಿಷಡ್ವರ್ಗಮಂ ನಿರಾಕರಿಸಿ ತ್ರಿವರ್ಗಸಂಪಾದಕನಾದಂ ಶಲ್ಯತ್ರಯಂಗಳಂ ಪರಿಹರಿಸಿದ ಶಕ್ತಿತ್ರಯಾಕ್ರಾಂತನಾದಂ ದುರ್ನೀತರಾಜ್ಯಕಂಟಕರಂ ವಿಸರ್ಜಿಸಿ ನಾನಾವಿಧ ರಾಜನೀತಿವಿರಾಜಮಾನನಾದನಂತುಮಲ್ಲದೆಯುಂ

ಸ್ರಗ್ಧರೆ

ಭೋಗೀಂದ್ರಾವೇಷ್ಟಿತಂ ಸಂಯುತ ಪರಮವೃಷಂ ಭೂರಿಭೂ[4]ತಿ[4]ಪ್ರಯುಕ್ತಂ
ಧೀಗಂಭೀರಂ ಕಳಾಸಂಕಳಿತನನುಪಮಂ ಸನ್ಮಹಾಸೇನಮಾನ್ಯಂ
ಭಾಗ್ಯಾಧಾರಂ ಶಿವಾಲಕ್ಷಿತನೆನಿಪ ಮಹೀಶಂ ಮಹಾದೇವನೆಂಬಂ
ತೀ ಗೋತ್ರಾಚಕ್ರದೊಳ್ ವಿಶ್ರುತನೆನಿಸಿದೊಡಂ ಕಾಮಸಂಹಾರಿಯಲ್ಲಂ ೨೪

---

[1] ಳೆ (ಕಗಜ) [2] ತೆರ್ಜ (ಕಜ) [3] ಯಲ್ತು (ಜ) [4] ರಿ (ಕಜ)

ಮತ್ತೇಭವಿಕ್ರೀಡಿತ

ಕನುಲೋಲ್ಲಾಸನಿಬಂಧನಂ ಕರಪರಿವ್ಯಾಪ್ತಾಖಿಲಾಶಂ ಬುಧ
ಪ್ರಮ[1]ದೇಚ್ಛಾ[1]ಪಟು ಕಾಶ್ಯಪೀಡಿತಗುಣಂ ಗಂಧರ್ವಸಂಸೇವಿತಂ
ದ್ಯುಮಣಿಪ್ರಾಭವನಾಗಿಯುಂ ಕುವಲಯಕ್ಕಾನಂದಮಂ ಮಾಳ್ಪ ಹೃ
ದ್ಗಮಮಪ್ಪದ್ಭುತಶಕ್ತಿಯುಂ ತಳೆದನಾ ವಿಶ್ವಂಭರಾಧೀಶ್ವರಂ ೨೫

ಉತ್ಪಲಮಾಲೆ

ಜ್ಞಾನವಿಶೇಷಮೆಂಬ ಕಿರಣಂಗಳನುಳ್ಳ ಜಿನೇಂದ್ರಚಂದ್ರನಂ
ತಾನತಿಭಕ್ತಿಯಿಂದಿರದೆ ತಾಳ್ದಿದ ಕಾರಣಮಾ ಮಹೀಪಸ
ನ್ಮಾನಸದಲ್ಲಿ ಪೊರ್ದದು ತಮಂ ಕಿಱಿದಾದೊಡಮಂತ[2]ಗುರ್ವು[2]ಮುಂ
ಪೀನಧನಾಢ್ಯರಪ್ಪ ನಿಜಕಿಂಕರರೊಳ್ ಮಡಗಿಟ್ಟನೆಂಬಿನಂ ೨೬

ಮತ್ತೇಭವಿಕ್ರೀಡಿತ

ಉದಯಾಸ್ತಾದ್ರಿಗಳೆಂಬ ಪೀವರಕುಚಾಭೋಗಂಗಳಿಂ ಚಾರುತಾ
ಸ್ಪದಮಾಗಿರ್ದ ತರಂಗಿತಾಂಬುನಿಧಿಯೆಂಬುದ್ದಾಮಸದ್ವಸ್ತ್ರಮಂ
ಪದಪಿಂದುಟ್ಟು ಧರಿತ್ರಿಯೆಂಬ ರಮಣೀಯ ಸ್ತ್ರೀಯ ಚಾರೂರುದೇ
ಶದೊಳೊಯ್ದಿಟ್ಟ ಸುರಮ್ಯಮಪ್ಪ ಕರಮಂ ತಾಳ್ದಂ ನೃಪಂ ಭೋಗಮಂ ೨೭

ಕಂದ: ಪರಬಲಸಂಹಾರಕನು
ದ್ಧುರ ಭಾಸ್ವದ್ವಜ್ರಮುದ್ರಕಂ ಸ್ವಸ್ಥಂ ಧೀ
ಸ್ಫುರಿತ ಗುರುಪ್ರಿಯನಪ್ಪಾ
ನರನಾಯಕನಿಂದ್ರನಂತಿರೊಪ್ಪಂಬಡೆದಂ ೨೮

ವಚನ: ಆ ಮನುಜಮನೋಜನೆನಿಪ ಮಹಾಸೇನ ಮಹಾರಾಜ[3]ನ ಮನೋ[3]
ವಲ್ಲಭೆ

† ಕಂದ: ವಿಶದಾಚಾರದೆ ಸುವ್ರತೆ
ಪೆಸರಿಂದಂ ಸುವ್ರತಾಮಹಾದೇವಿ ಕರಂ
ವಸುಮತಿಯೊಳ್ ತನ್ನಯ ಜಸ
ಮೆಸೆವಿನೆಗಂ ಪಡೆದಳಗ್ರಮಹಿಷೀಪದಮಂ ೨೯

ಚಂಪಕಮಾಲೆ

ಶುಭಪರಮಾಣುರಾಶಿಯನಜಂ ನೆಱೆಕೊಂಡದಱಿಲ್ಲಿ ಚೋದ್ಯಮ
ಪ್ರಭಿಸವಭೂರಿಭಾಗ್ಯದೊಡಮಂ ಚತುರತ್ವಮನುದ್ಘರೂಪಮಂ
ವಿಭವವಿಶೇಷಮಂ ಬಿಡದೆ ಪೆರ್ಚಿಸಿ ದೇವಿಯ ರೂಪವಿದ್ಧಮಂ
ಪ್ರಭವಿಸುವಲ್ಲಿ ಬಿಳ್ದ ಪರಮಾಣುಗಳಿಂ ಸಮೆದಂ ಸುಧಾಧಿಯುಂ ೩೦

[1] ದೈದಾ (ಕಚ) [2] ಸುಕ್ಷ (ಜ) [3] ನ (ಜ)
† ಸುವ್ರತಾ ಮಹಾದೇವಿಯ ವ್ಯಾವರ್ಣನೆ (ಗಚ)

ಕಂದ: ಎತ್ತಾನುಮೊರ್ವ ಬಿದಿ ಕುಶ
ಲತ್ವದೆ ನಿರ್ಮಿಸಿದನೆಂಬ ತೆಱದಿಂದಾ ವನಿ
ತೋತ್ತಮೆಯ ರೂಪು ಜಗದೊಳ್
ಬಿತ್ತರಿಸುತ್ತಿರ್ದುದನುಮ ಕೌತುಕಭರವುಂ ೩೧

ಉತ್ಪಲಮಾಲೆ

ಕಾಮನ ವಿದ್ಯೆ ಕಾಮನಧಿದೇವತೆ ಕಾಮನ ಮಂತ್ರಶಕ್ತಿ ತ
ತ್ಕಾಮನ ಕೀರ್ತಿ ಕಾಮನ ಜಯಾಂಗನೆ ಕಾಮನ ವೀರಲಕ್ಷ್ಮಿಯೆಂ
ಬೀ ಮಹಿಮಪ್ರಭಾವದಿನಧಃಕರಿಪಳ್ ಮಹಿಳಾಸಮೂಹಚೂ
ಡಾಮಣಿ ಮೂಱುಲೋಕದೊಳಗುಳ್ಳ ವಿಳಾಸವತೀಜನಂಗಳಂ ೩೨

ಚಂಪಕಮಾಲೆ

ಶಶಿಕಳೆಯೊಂದೆಯೆಂತು ಕುಮುದಾಳಿ ವಿಕಾಸಮನೆಯ್ದೆ ಮಾಳ್ಪುದಂ
ತಸಿಯಳ ಗಾಡಿಯೊಂದೆ ಜಗತೀಜನಲೋಚನಸಂಚಯಕ್ಕೆ ಸಂ
ತೊಸಮನೆ ಮಾಡಿ ರೂಢಿವಡೆದತ್ತು ದಲೆಂದೊಡೆ ಮತ್ತೆ ಬಣ್ಣಿಸಲ್
ವಸುಮತಿಯಲ್ಲಿ ಬಲ್ಲ[1]ನವನಾ[1]ವನೊ ದೇವಿಯ ಚಾರುರೂಪಮಂ ೩೩

ವಚನ: ಅಂತುಮಲ್ಲದೆಯುಂ

ಉತ್ಪಲಮಾಲೆ

ಅಂಬಿಕೆ ನಿನ್ನ ಚಾರುಮುಖಶೋಭೆಯನಿನ್ನುಱಕೇಳ್ದೊ[2]ಡಾನಭೋ[2]
ಲಂಬನನಪ್ಪೆನೆಂದು ತುಹಿನಾಂಶುಕುಟುಂಬಸಮೇತನಾಗಿ ಬಂ
ದಂಬುಜಪತ್ರನೇತ್ರೆಯ ಪದದ್ವಯಮಂ ನೆಱೆ ಮುಟ್ಟಿಕೊಂಡು ನು
ತ್ತಂ ಬಿಡದಿರ್ದನೆಂಬ ತೆಱದಿಂ ಪದದೊಳ್ ನಖಪಂತಿ ರಂಜಿಕುಂ ೩೪

ಲೀಲೆಯೊಳೊಂದಿ ತೋರ್ಪ ಗತಿಮಾತ್ರದೊಳಂ ಸಲೆರಾಜಹಂಸ ಸ
ಮ್ಮೇಲನಮಂ ಕಱುತ್ತಿರದೆ ಗೆಲ್ದು ನಿಜಪ್ರಭೆಯಂ ನಿಮಿರ್ಚುತಿ
ರ್ದೀ ಲತಿಕಾ ತನೂಚರಣಮೆನ್ನುಮನಿನ್ನುಱ ಗೆಲ್ಗುಮೆಂಬ ಭೀ
ಕೀಲಿತಮಾದುದೆಂಬ ತೆಱದಿಂ ಬಿಡಮಂಬುಜಮಂಬುದುರ್ಗಮಂ ೩೫

ಕಂದ: ಆಕೆಯ ಜಂಘಾಯುಗಳಮ
ದಾಕಳಿತಜ[3]ಡೋ[3]ರುಸಂಗಮಾದೊಡಮೆಂತುಂ
ಸ್ವೀಕೃತವಿಲೋಮಮಾದೊಡ
ಮೇಕಂ ಸದ್ವೃತ್ತಮಾದುದಿಂತಿದು ಚಿತ್ರಂ ೩೬

---

[1] ವನದಾ (ಜ) [2] ಡಾಂ ನಭೋ (ಜ) [3] ದೋ (ಕಚ)

ಚಂಪಕಮಾಲೆ

ಮನಸಿಜನೆಂಬ ಭೂಪನೊಸೆದಿರ್ಪ ವಿಲಾಸನಿವಾಸಮಿಂತಿದೆಂ
ದೆನಿಪ ತದಂಗಮೆಂಬ ಮನೆಗೆತ್ತಿದ ಲೋಚನಹಾರಿ ತಪ್ತಮ
ತ್ಕನಕದ ಕಂಭಮೆಂಬ ತೆಱದಿಂ ನೆಱೆ ರಂಜಿಪುದಾ ಮಹೀಪ ಕಾ
ಮಿನಿಯ ವರೋರುಯುಗ್ಮಮನಿಶಂ ಸಮುಪಾತ್ತ ವಿಶಿಷ್ಟಶೋಭಕಂ ೩೭

ಕಂದ: ಅರಸಿಯ ನಿತಂಬಮಂಡಲ
ಮುರುಶೋಭಾಭಾರಮಂ ಸಮುದ್ಭವಿಸಿ ಕರಂ
ಧರಿಯಿಸಿ ಸುವೃತ್ತಮಂ ವಿ
ಸ್ತರಿಸಿತ್ತದು ತನ್ನ ತಾಂ ಗುರುತ್ವದ ಪೆಂಪಂ ೩೮

ಮಹಾಸ್ರಗ್ಧರೆ

ಪಿರಿದುಂ ಶೃಂಗಾರಮೆಂಬೀ ರಸಭರಿತಮಹಾನಾಭಿಕೂಪಾಂತರಾಳೋ
ದ್ಧುರಮಜ್ಜತ್ಕಾಮಮತ್ತದ್ವಿಪಕರಟತಟಸ್ಥಾನಮಂ ಬಿಟ್ಟು ವೇಗ
ಙ್ಗೆರಪೇಱುತ್ತಿರ್ದ ಭೃಂಗಂಗಳ ಬಳಗಮಿದೆಂಬಂತಿರಾ ಸ್ತ್ರೀಯ ಚಾರೂ
ದರದೊಳ್ ಪುಟ್ಟಿರ್ದ ಚೆಲ್ವಂ ಪಡೆದುದು ಭರದಿಂ ರೋಮರಾಜಿಪ್ರಕಾಂಡಂ ೩೯

ಮತ್ತೇಭವಿಕ್ರೀಡಿತ

ಗುರುವಾಗಿರ್ದ ನಿತಂಬಮೊಂದೆಡೆಯೊಳೊಪ್ಪುತ್ತಿರ್ದುದಾದಂ ಸುಹೃ
ತ್ತರಮಾಗಿರ್ದ ಕುಚದ್ವಯಂ ಬಗೆವೊಡಿತ್ತಲ್ ಪ್ರೋಚ್ಚಮಾಗಿರ್ದುದಾ
ನಿರದಿನ್ನೆಂತು ನಿಜೇಶನೊಳ್ ನೆರೆವೆನೆಂಬೀ ಚಿಂತೆಯಿಂದೆಂಬವೊಲ್
ಭರದಿಂದಂ ಬಡವಾದುದೆಯ್ದೆ ನಡು ತಾಂ ಭೂಪಾಲನರ್ಧಾಂಗಿಯಾ ೪೦

ಉತ್ಪಲಮಾಲೆ

ಮೂಜಗದೊಳ್ ಕಳಾಪತಿಯುಮೀಕೆಯ ಶೀಲಗುಣಪ್ರತಾನದಿಂ
ಪೂಜ್ಯಳುಮೀಕೆಯೀಕೆಯೇ ಮನೋಹರರೂಪಿನ ಸೀಮೆಯಾಗಿ ರಾ
ರಾಜಿಸುತಿರ್ಪಳೆಂದು ಬಿದಿಯಾಕೆಯ ಕುಕ್ಷಿಗೊಳೀ ತ್ರಿರೇಖೆಯುಂ
ಯೋಜಿಸಿದಂತಿರಾಯತವಳಿತ್ರಯಮಾವರಿಸಿತ್ತು ಶೋಭೆಯಂ ೪೧

ಚಂಪಕಮಾಲೆ

ಅರಸಿಯ ತೋರಮಾದ ಕಠಿನಸ್ತನಮಂಡಲಮಂಗಜಗೃಹಂ
ಪರಮವಿಳಾಸಮೆಂಬುರುಸುಧಾರಸಮಂ ನೆಱೆ ತುಂಬಿ ಬಯ್ಕೆಯಾ
ಗಿರಿಸಿದ ಹೇಮಕುಂಭದವೊಲೊಪ್ಪಮನಾಳ್ದುದದಂತುಮಲ್ಲದಂ
ದಿರದದನಂ[1]ಪಿಡಾ[1]ಗಳೆ ಮನೋಜವಿಕಾರಮದೆಂತು ಪುಟ್ಟುಗುಂ ೪೨

---

1 ದೊಡಾ (ಕಚ)

ಕಂದ: ಆ ದೇವಿಯ ನಳಿತೋಳ್ಗಳ್
ಮೇದುರಮಾಗಿರ್ದ ಲತೆಯ ಕಾಂಡದ ತೆಱದಿಂ
ಮೇದಿನಿಯೊಳನುವು ಚೆಲ್ವಿಂ
ಗಾದುದು ನೆಲೆ ತಾಳ್ದಿ ಕೋಮಳತ್ವದ ಪೆಂಪಂ ೪೩

ತಾವರೆಗಳ್ ತಾವರೆಗಳ್
ಭೂವಳಯದೊಳಾದುವಾ ಮಹಾದೇವಿಯ ಶೋ
ಭಾವಿಳಸುಹಸ್ತತಳಮಂ
ಭಾವಿಸಿ ಸಡೆನೋಡಿ ನಾಣ್ಚಿದಂತೆ ನಿತಾಂತಂ ೪೪

ಮೂಱುಂ ರೇಖೆಗಳಿಂದಂ
ತೋಱುಂಕೆಯಂ ಪಡೆದು ಸೊಗಸನೀವುತ್ತಿರ್ದಾ
ನೀಱಱಿಯ ಕೊರಳತಿಶಯಿತಂ
ಮಾಱುಂಗೊಂಡುದು ನೃಪಾಳತಿಳಕನ ಮನಮಂ ೪೫

ಶಾರ್ದೂಲವಿಕ್ರೀಡಿತ

ಎಂದುಂ ಕುಂದದ ಕಂದಿನೊಳ್ ಪೊರೆಯುದಾ ತನ್ವಂಗಿಯಾಸ್ಯೇಂದುವಂ
ಚಂದ್ರಂ ನೋಡೆ ಸಮಾನಮಪ್ಪ ಬಗೆಯಿಂದಂ ತನ್ನ ರೂಪಂ ಸಮಂ
ತಂದಿಂತೊಟ್ಟು ಸಮಸ್ತ ವಿಸ್ತೃತ ಕಳಾನೀಕಂಗಳಿಂ ಪೂರ್ಣಮಾ
ಗಂದಂ ಕೈಮಿಗೆಮಾಡಿ ಮಾಡಿಯುಳಿವುತ್ತಿರ್ಪಂ ನಭೋಭಾಗದೊಳ್ ೪೬

ಚಂಪಕಮಾಲೆ

ಸರಸಿಜಪತ್ರನೇತ್ರೆಯ ನಿರಸ್ತಕಳಂಕಕಪೋಳನುಂಡಳಂ
ನಿರುಪಮಚಾರುಭೂರಿತರಕಾಂತಿಗಳಿಂ ಪೊಳೆಯುತ್ತುಮಿರ್ದು ಭಾ
ಸುರವಿಧುಬಿಂಬದಂತೆ ಚೆಲ್ವಾದೊಡಮಂದು ಕಳಂಕಲೇಖೆಯಿಂ
ದೆರಡಱ ಭೇದಮಂ ಬಿಡದೆ ನಿಶ್ಚಯಿಸಿರ್ಪುದು ತತ್ಪರೀಜನಂ ೪೭

ಉತ್ಪಲಮಾಲೆ

ಬಿಂಬದ ಪಕ್ವಮಾದ ಫಳಮೆಂಬಿನಮಿಾ ಜಗದಲ್ಲಿ ಚೆಲ್ವನಾ
ಲಂಬಿಸಿದತ್ತು ಮಾನಿನಿಯ ಸಾರಮೆನಿಪ್ಪಧರಂ ಮನೋಹರಂ
ತುಂಬಿ ಸುಧಾರಸಪ್ರಸರದಿಂದೆ ವಿರಾಜಿತಮಂತುಮಲ್ಲದಂ
ದಿಂಬಿನ ಪತ್ರವಲ್ಲಿ ನೆಱೆ ಗಲ್ಲದ ತಾಣದೊಳೆಂತು ಪುಟ್ಟುಗುಂ ೪೮

ಚಂಪಕಮಾಲೆ

ಮೃದುಮಧುರಂ ಗಭೀರಮವಿಕಾರಯುತಂ ಬಿದಿ ಕೊಟ್ಟ ಶಾಸನಂ
ಸದಮಳಧರ್ಮಯುಕ್ತಮೆನಿಸಿರ್ದ ಸುನಾದೆಯ ವಾಗ್ವಿಳಾಸಮಂ
ಪದೆದಿರದೆಯ್ದೆ ಕೇಳ್ದು ಘನಲಜ್ಜೆಯನಾಂತವೊಲಂದು ಬೀಣೆಯಾ
ದುದು ಮರನಂತು ಕೋಗಿಲೆ ಕರಂ ಕರಿದಾದುದು ವಿಹ್ವಳೀಕೃತಂ ೪೯

ಉತ್ಪಲಮಾಲೆ

ನಿಪ್ಪೊಸತಪ್ಪ ರತ್ನಚಯಮಂ ಪಿಡಿದಾಯ್ದು ಸುಧಾರಸಂಗಳಿಂ
ತೊಪ್ಪನೆ ತೊಯ್ದವೊಲ್ ಪೊಳೆವ ಪಲ್ಗಳನಂದುಱೆ ತೂಗಲೆಂದು ಜಾ
ಣಪ್ಪಿ ವಿರಿಂಚಿ ಮಾಡಿದ ಸುವರ್ಣತುಳಾವರದಂಡಮೆಂಬವೊ
ಲೊಪ್ಪಮನಾಳ್ದುದಾ ನರಪಕಾಂತೆಯ ಸೌಂದರನಾಸಿಕಾಂಕುರಂ ೫೦

ಕಂದ: ಬಾಲಕಿಯಲರ್ಗಣ್ಗಳ್ ಸಂ
ಲಾಲಿತ ಲಾವಣ್ಯರಸಮಯಾಬ್ಜಾಕರದೊಳ್
ಬಾಳೆಯ ಮೀಂಗಳ ತೆಱದಿಂ
ಲೀಲೆಯೊ[1]ಳಂ[1] ಪೊಳೆದು ತಳೆದವತಿಚಪಳತೆಯಂ ೫೧

ಉತ್ಪಲಮಾಲೆ

ಆ ನೃಪಚಿತ್ತವಲ್ಲಭೆಯ ಪು[2]ರ್ವು[2]ಗಳೆಂಬ ಶರಾಸನಂಗಳೊಳ್
ಮಾನಿತ ಪಕ್ಷ್ಮಪಾಳಿಕೆಗಳೆಂಬುರುನಾರಿಗಳಂ ತೊಡರ್ಚಿಯ
ನ್ಯೂನಕಟಾಕ್ಷಮಾಳಿಕೆಗಳೆಂಬ ಶರಂಗಳನೆಯ್ದೆ [3]ಹೂ[3]ಡಿ ತ
ನ್ಮಾನಸಜನ್ಮನೆಚ್ಚು ಮೆಱೆದಂ ಜಗತೀಜನಚಿತ್ತಲಕ್ಷ್ಯಮಂ ೫೨

ಕಂದ: ಓಂಕಾರದ ಶಂಕೆಯನಂ
ದಂಕುರಿಸುತ್ತಿರ್ದುದಮನು ಕಸ್ತೂರೀತಿಲ
ಕಾಂಕಭ್ರೂಮಧ್ಯಂ ಹರಿ
ಣಾಂಕಾಸ್ಯೆಗೆ ಮಂಗಳತ್ವಮಂ ಸೂಚಿಪವೊಲ್ ೫೩

ಅಷ್ಟಮಿಯ ಚಂದ್ರನಂತಿರೆ
ದೃಷ್ಟಿಗೆ ಕಡುಚೆಲ್ವ[4]ನಾದು[4]ದಾಕೆಯ ನಿಟಿಳಂ
ಪುಷ್ಟತರಕಾಂತಿಯಿಂದು
ತ್ಕೃಷ್ಟಂ ನಿಕಟಸ್ಥತಾರಕಂ ಪ್ರಸ್ತುತ್ಯಂ ೫೪

1 ಳಾ (ಕಚ) 2 ರ್ಬು (ಗಜ) 3 ಪೂ (ಜ) 4 ನಾಂತು (ಜ)

ಮತ್ತೇಭವಿಕ್ರೀಡಿತ

ಪಿರಿದುಂ ಶೋಭೆಯನಾಂತವಾಕೆಯ ಲಸತ್ಪ್ರಾಮಾಣ್ಯಸಂಪತ್ತಿಯುಂ
ಭರದಿಂದಕ್ಷರಚಾರುತಾಮಹಿಮೆಯುಂ ತಾಳ್ದಿರ್ದ ಕರ್ಣಂಗಳೀ
ಧರಣೀಮಂಡಳದಲ್ಲಿ ಸಾರತರಸೌಖ್ಯೈಕ್ಯೈಕೆಯೋ ಸೀಮೆಯೆಂ
ದುರುಬುದ್ಧಿಪ್ರವಿಭಾಸಿಯಪ್ಪ ಬಿದಿ ಪತ್ರಾಲಂಬನಂಗೆಯ್ದವೊಲ್ ೫೫

ಶಾರ್ದೂಲವಿಕ್ರೀಡಿತ

ಕಾಳಿಂದೀನದಿಯಲ್ಲಿ ಪುಟ್ಟಿದ ತರಂಗೌಘಂಗಳಂತಾವಗಂ
ಹೇಳಾಲಂಬಿಗಳಾದವಾಕೆ ಶಿರದೊಳ್ ತಾಳ್ದಿರ್ದ ಕೇಶಂಗಳು
ತ್ಪಾಲಂಗಳ್ ಪರಿಲಾಲನೀಯಪರಮಸ್ನಿಗ್ಧತ್ವಯುಕ್ತಂಗಳುಂ
ನೀಲಂಗಳ್ ತಳೆದಿರ್ದವಂದು ಪಿರಿದುಂ ಜೆಲ್ವಾದ ವಕ್ರತ್ವಮಂ ೫೬

ಕಂದ : ನೊಸಲ್ಮಡಿಯಾಗಿಯೆ ದೇವಿಯ
ಸೋಮರ್ಮುಡಿ ಬೆನ್ನಲ್ಲಿ ಚೆಲ್ವನಾವರಿಸಿತ್ತಾ
ನರ್ಮದೆಯ ಪೊನಲು ಕನಕದ
ನಿರ್ಮಳಶಿಲೆಯಲ್ಲಿ ಮುರಿದು ಪರಿಸಂತೆ ವೊಲಂ ೫೭

ವಚನ : ಮತ್ತಂ

ಉತ್ಪಲಮಾಲೆ

ಆ ಸುಕುಮಾರಿ ಚಾರುನವರತ್ನವಿಭೂಷಣಸಂಚಯಂಗಳಂ
ಲೇಸೆನಿಸಿರ್ದ ಮೆಯ್ಗೆ ಕಡುಭಾರ ವಿಡಾಯಿಗಳೆಂದು ಪುಷ್ಪಮಾ
ಲಾಸಮುದಾಯಮಂ ಮುಡಿಗೆ ಭಾರಮಿದೆಂದದಱ ಪ್ರಭಾಳಿಯುಂ
ಭಾಸುರಮಪ್ಪ ಕಂಪು ತೊಡವಾದಡೆ ಸಾಕೆನುತಿರ್ಪಳಾವಗಂ ೫೮

ಮತ್ತೇಭವಿಕ್ರೀಡಿತ

ರತಿಗಾನಂದವಿಧಾನವೊಂದೆ ಗುಣಮಾ ಲಕ್ಷ್ಮೀಮಹಾದೇವಿಗಂ
ನುತಸೌಭಾಗ್ಯಮದೊಂದೆ ನೋಳ್ಪಡೆ ಗುಣಂ ವಾಗ್ದೇವಿಗಂ ಚಾತುರೀ
ಯುತಿಯೆಂಬೊಂದೆ ಗುಣಂ ದಲೀ ಸತಿಗೆ ಮತ್ತಾನಂದಕಾರಿತ್ವಮುಂ
ನುತಸೌಭಾಗ್ಯಮುಮೆಯ್ದೆ ಜಾಣ್ಮೆಯೊದವುಂ ಕೂಡಿತ್ತಿಳಾಭಾಗದೊಳ್ ೫೯

ವಚನ : ಮತ್ತಮಾ ದೇವಿ ಚಂದ್ರಕಳೆಯಂತೆ ಸಕಳಜನಾನಂದಕಾರಿಣಿಯುಂ ಪುಷ್ಪಮಾಲೆಯಂತೆ ದೃಢಗುಣಸಂಪನ್ನೆಯುಂ ಕಮಳಿನಿಯಂತಕ್ಷೂಣಲಕ್ಷ್ಮೀಸಮಾಲಕ್ಷಿತೆಯುಂ ಗಂಗೆಯಂತೆ ನಿರ್ಮಳಾಂತರಂಗೆಯುಂ ವನಲಕ್ಷ್ಮಿಯಂತೆ ವಿಶಿಷ್ಟಗೋತ್ರೋತ್ಪನ್ನೆಯುಂ ಮಳೆಗಾಲದ ದಿನಮಾಳಿಕೆಯಂತೆ ವಿದೂರಿತರಜೋಪ್ರಜೆಯುಂ ಪ್ರಭಾಕರಪ್ರಭೆಯಂತೆ ಪ್ರತಿಧ್ವಸ್ತ ತಮಃಪ್ರಕರೆಯುಮೆನಿಸಿಪಳಂತುಮಲ್ಲದೆಯುಂ

ಮಹಾಸ್ರಗ್ಧರೆ

ಗುಣದೊಳ್ ನಿತ್ಯತ್ವಮಂ ಮಧ್ಯದೊಳುಱೆಸದಸದ್ಭಾವಮಂ ನೇತ್ರದೊಳ್[1]ತಾಂ[1]
ಕ್ಷಣಿಕತ್ವಾಪತ್ತಿಯಂ ರೂಪಿನೊಳೆಸೆವ ಮಹಾದ್ವೈತಮಂ ಮಂದಯಾನ
ಕ್ಷಣದೊಳ್ ಜಾಡ್ಯತ್ವಮಂ ಕೀರ್ತಿಯೊಳಮಮ ಪರಿವ್ಯಾಪ್ತಕತ್ವಾದಿಯಂ ಧಾ
ರಿಣಿಯೊಳ್ ಸಂಪಾದಿಸುತ್ತುಂ ಮೆಱೆದಳಬಳೆ ವಿದ್ಯಾಂಗಿಯೆಂಬಂದದಿಂದಂ ೬೦

ಚಂಪಕಮಾಲೆ

ನಿಸಿತಕಟಾಕ್ಷಮೆಂಬ ಶರಮಂ ನಖಮೆಂಬ ಕುಠಾರಮಂ ಸಮು
ಲ್ಲಸಿತ ಕುಚಾಗ್ರಮೆಂಬ ವರಚಕ್ರಮನುನ್ನತಕೇಶಭಾರಮಂ
ಬೆಸೆವುರುಪಾಶಮಂ ತಳೆದ ದೇವಿಯನಂಗಜಚಕ್ರವರ್ತಿ ಪೂ
ಜಿಸುಪಸಿದ್ದನ್ನ ಶಸ್ತ್ರದಧಿದೇವತೆಯೆಂದು ಜಗಜ್ಜಯೋತ್ಸುಕಂ ೬೧

ಕಂದ: ವಕ್ರತೆ ಕೇಶದೊಳಲ್ಲದೆ
ಮಿಕ್ಕಿರ್ದ ಚರಿತ್ರದಲ್ಲಿ ಪೊರ್ದದು ಪಿರಿದುಂ
ಕರ್ಕಶತೆ ಕುಚದೊಳಲ್ಲದೆ
ತರ್ಕಜ್ಞೆಯ ಚಿತ್ತದಲ್ಲಿ ತೋಱದದೆಂದುಂ ೬೨

ಮೂಱುಂಲೋಕದ ಸತಿಯರ್
ಮೀಱಿದ ಗುಣಶೀಲ ರೂಪಿನೊಳ್ ಪಾಸಟಿಯುಂ
ತೋಱುವವರಿಲ್ಲ ಬಂದಾ
ನೀಱೆಗೆ ಮಿಗೆ ತೊತ್ತಿರಾಗಿ ಬೆಸಕೆಯ್ವುದಱಿಂ ೬೩

ವಚನ: ಅದಲ್ಲದೆಯುಂ

ಮತ್ತೇಭವಿಕ್ರೀಡಿತ

ಗುಣದೊಳ್ ಕೂಡಿದ ಚಾರುಚಾಪಲತೆಯಿಂ ಧಾನುಷ್ಕಕಿಂತೊಪ್ಪುಗುಂ
ಮಣಿಯೆಂತೊಪ್ಪಮನಾಳ್ದು ತೋರ್ಪುದಧಿಕಂ ನೈರ್ಮಲ್ಯದೊಳ್ ಕೂಡಿದು
ದ್ಘೃಣಿಯಿಂದಂತೆ ವಿಶೇಷಮಪ್ಪ ಗುಣದೊಳ್ ಸತ್ಕಾಂತಿಯೊಳ್ ಕೂಡಿದಾ
ಪ್ರಣುತಪ್ರೇಯಸಿಯಿಂದಮಾ ಜಗದೊಳಾ ಭೂಮೀಶನಂದೊಪ್ಪಿದಂ ೬೪

ವಿಲಸತ್ಪದ್ಮೆಯೊಳೆಂತು ವಿಷ್ಣು ರತಿಯೊಳ್ ತಾನೆಂತು ಚಿತ್ತೋದ್ಭವಂ
[2]ಕುಲದಿಂ[2] ರೋಹಿಣಿಯೊಳ್ ಸುಧಾಕಿರಣನೆಂತೊಲ್ದಿರ್ಪನಂತಾವಗಂ
ಪಲಬರ್ ಪತ್ನಿಯರುಳ್ಳೊಡಂ ಚತುರೆಯಪ್ಪಾ ದೇವಿಯೊಳ್ ಭೂಮಿಭೃ
ತ್ತಿಲಕಂ ಮೋಹಮನೆಯ್ದೆ ಮಾಡಿ ಪಿರಿದೊಂದಾನಂದದಿಂ ಕ್ರೀಡಿಸಂ ೬೫

---

[1] ತಾ (ಜ) [2] ನಲವಿಂ (ಜ)

ಉತ್ಪಲಮಾಲೆ

ಪುರ್ವಿನ ಜರ್ವು ಚುಂಬನದಗುರ್ವು ಲಸತ್ಪುಳಕಾಂಕುರಂಗಳೊಂ
ದುರ್ವು ಮನೋಹರಾಧರಪರಿಗ್ರಹವಾಂಛೆಯ ಕೊರ್ವು ರಾಗದಿಂ
ದೊರ್ವರೊಳೊಲ್ದು ಕೈಮಿಗೆ ರತಿಕ್ರಿಯೆಯೊಳ್ ನೆರೆದಿರ್ದು ಕಾಲಮಂ
ನಿರ್ವಹಿಸುತ್ತುಮಿರ್ದರಸಮಾಯುಧನಾಡಿಪ ಜಂತ್ರದಂದದಿಂ ೬೬

*

ಕಂದ: ಜನಪತಿಯುಂ ತತ್ಕಾಂತೆಯು
ಮನುನಯದಿಂದಿಷ್ಟವಿಷಯಭೋಗಂಗಳನಂ
ದನುಭವಿಸುತ್ತುಂ ಕಳೆದರ್
ಘನಮುದದಿಂ ಕೆಲವುವತ್ಸರಂಗಳನಿಳೆಯೊಳ್ ೬೭

ವಚನ: ಇಂತು ನೆಗಳ್ತೆಗಂ ಪೊಗಳ್ತೆಗಮಳ್ಬಂಬಮಾದ ಸುವ್ರತಾಮಹಾದೇವಿ ಯೊಂದುದಿವಸಮಿಂದುಕಾಂತಶಿಲಾಮಯಮಾಗಿ ಬಹಳಮಪ್ಪ ಬೆಳಗಿನ ಬಳಗಮಂ ವಿಯತ್ತಳದೊಳ್ ನೆಱೆಯೆ ಕಱೆಯುತ್ತುಮಿರ್ದ ನಿರವಧಿಶೋಭಾಸಮಧಿಕಮಾದ ಸೌಧ ತಳದೊಳಶೇಷವಿಶೇಷಿತಾಂತಃಪುರಸಾರಸೌಂದರೀಸಂದೋಹಮೊಡಗೂಡಿ ವಿಮಳತರವಿಪುಳ ಮುಕ್ತಾಫಳಕಳಿತಸಕಳಾಳಂಕರಣಮುಮೆಯ್ದೆ ತೊಟ್ಟು ಥಳಥಳಿಸಿ ಪೊಳೆವ ಧವಳಚಾಮರಂ ಗಳ ಚಳಾಚಳ ವಿಳಸನದಿಂ ನೇರ್ಪಟ್ಟ ಲೀಲೆಯಿಂದೋಲಗಂಗೊಟ್ಟಿರ್ದು ಪಾಲ್ಗಡಲ ಪರಿ ಲಸಿತಲಹರಿಕಾತಳ್ಪತಳದೊಳೊಪ್ಪದಿಂ ಕುಳ್ಳಿರ್ದಕ್ಷೂಣಕ್ಷೀರಬಿಂದುಗಳ ವೃಂದ[2]ದಿಂದೊಂದಿ[2] ತಜ್ಜಳದೇವತಾಸಂಘಾತಸಮಾಶ್ರಿತೆಯಾದ ಶ್ರೀದೇವಿಯ ಶಂಕೆಯನಂಕುರಿಸುತ್ತುಮಿರ್ದಾ ಗಳ್

ಕಂದ: ಪರಮೋರುದೇಶತತಿಯಿಂ
ನಿರುಪಮಮಪ್ಪಗ್ರಹಾರಚಯದಿಂ ಚೆಲ್ವಂ
ಧರಿಸಿತ್ತಾ ದೇವಿಯ ಸಭೆ
ಭರದಿಂದಂ ಕಾಮದೇವಸಾಮ್ರಾಜ್ಯದ ವೊಲ್ ೬೮

ವಚನ: ಆ ಸಮಯದೊಳಾ ಮಹಾಸೇನಮಹಾರಾಜಂ ರಾಜರಾಜಾಧಿರಾಜ ನಂತೆ ರಾಜದಭಿನವವಿಭವಸಮುಭಿಯೋಜ್ಯಮಾನನಾಗಿ ಕರ್ಣಬಾಹಾಲಂಬಮಾನ ಚಮ ರೀಜ ಸಮಾಜಪೂಜ್ಯಮಾನವಾಜಿರಾಜಿಸಮಾರೂಢಪ್ರೌಢರಾಜಕ ರಾಜನ್ಯಕಂಬೆರಸು ಕಾ ತೂಹಳಕಾರಿ [1]ವಾಹ್ಯಾಳಿ[1]ವಿನೋದಮಂ ತೀರ್ಚಿ ಮರಳಿ ತನ್ನರಮನೆಗೆ ಬಂದು ರಾಜಾಂ ಗಣದೊಳ್ ನಿಂದು ಕೂಡಿ ಬಂದರಸುಮಕ್ಕಳಂ ಕಳಿಪಿ ನಿಜತಾಂಬೂಲಿಕನೊರ್ವನಂ ಗೂಡಿ ಕರುಮಾಡ[2]ಮಂ[2] ಪತ್ತಿಸಾರ್ದು ನಿಲ್ವುದುಂ ಮೇಗಣ ನೆಲೆಯುಪ್ಪರಿಗೆಯ ಕಳಕಳ ರವಮಂ ಕೇಳ್ದು ಪಟ್ಟಮಾದೇವಿಯೋಲಗಸಾಲೆಗಭಿಮುಖನಾಗಿ

[1] ದಿಂ (ಜ) [2] ಪೈಹಾಳಿ (ಜ) [3] ದ (ಕಗಚ)

* ಸುವ್ರತಾಮಹಾದೇವಿಯ ಒಡ್ಡೋಲಗ (ಗಚ)

ಮಹಾಸ್ರಗ್ಧರೆ

ನರನಾಥಂ ಬಂದುಪೊಕ್ಕಂ ನಿಜಸತಿಯ ಸಭಾಗೇಹಮಂ ಪ್ರೀತಿಯಿಂದಂ
ವರಸಮ್ಯಕ್ತ್ವಪ್ರಭಾವಂ ಬಹಳತರಕಳಾವಾರ್ಧಿಸಂಪೂರ್ಣಚಂದ್ರಂ
ಧರಣೀಶೋಲ್ಲಾಲಿತಂ ಬಾಹುಬಲಿ ಸುಕವಿರಾಜಂ ಸುರತ್ನತ್ರಯಾಲಂ
ಕರಣಂ ಸ್ಯಾದ್ವಾದವಿದ್ಯಾಕಮಳಮಧುಕರಂ ಚಾತುರೀಜನ್ಮಗೇಹಂ ೬೯

ಗದ್ಯ : ಇದು ಸಕಳಭುವನಜನ ವಿಸೂಯಮಾನಾನೂನ ಮಹಿಮಾಮಾನನೀಯ
ಪರಮಜಿನಸಮಯಕಮಳಿನೀಕಳಹಂಸಾಯಮಾನ ಶ್ರೀಮನ್ನಯಕೀರ್ತಿದೇವ
ಪ್ರಸಾದಸಂಪಾದಪಾದನಿಧಾನದೀಪವರ್ತಿಯುಭಯಭಾಷಾಕವಿಚಕ್ರವರ್ತಿ
ಬಾಹುಬಲಿಪಂಡಿತದೇವ ಪರಿನಿರ್ಮಿತಮಪ್ಪ ಧರ್ಮನಾಥ
ಪುರಾಣದೊಳ್ ಮಹಾಸೇನಮಹಾರಾಜ
ರಾಜ್ಯೋದಯ ವರ್ಣನಂ

**ದ್ವಿತೀಯಾಶ್ವಾಸಂ**

# ತೃತೀಯಾಶ್ವಾಸಂ

ಕಂದ:
ಶ್ರೀರಮಣಂ ವಿಶದಯಶೋ
ರಾರಾಜಿತನೆಯ್ದಿದಂ ಮಹೋತ್ಸಾಹಮನಾ
ಚಾರಸಮೇತಂ ಭುವನಜ
ನಾರಾಧ್ಯಂ ಸರಸಚತುರಕವಿಕುಳತಿಳಕಂ ೧

ವಚನ: ಅಂತು ಬಂದ ಮೂರ್ಧಾಭಿಷಿಕ್ತಂ ತನ್ನಯ ಮನೋವಲ್ಲಭೆಯರ್ಧಾಸನದೊಳಿರ್ದ್ದಮಂ ಕೈಮಿಗೆ ದೇವಿಯ ಕೋಮಳಾಂಗಯಷ್ಟಿಯಂ ಮುಟ್ಟೆ ಸೋಂಕಿ ಕುಳ್ಳಿರ್ದು ಭಾಮಾಸಭಾಶೋಭೆಯಂ ನೋಡುತ್ತುಂ ಹಾವಭಾವವಿಳಾಸವಿಭ್ರಮಾಧಿಕ್ಯಗರ್ವಿತ ಸರ್ವಸೇವಾಗಾಣಿ[1]ಕ್ಯ ಮಧ್ಯ[1]ಮಾಣಿಕ್ಯರೂಪೆಯಾಗಿ ಸೊಗಯಿಸುವ ತತ್ಸುಪ್ರತಾಮಹಾದೇವಿಯ ರೂಢಿವೆತ್ತ ಪ್ರೌಢಿಯಂ ಗಾಡಿಯಂ [2]ನೀಡುಂ[2]ನೋಡಿ [3]ಮನ[3]ದೆಗೊಂಡು ಸಂತೋಷದಂತನೆಯ್ದಿದನಂತರಂ ಸ್ಥಿರೋತ್ತಾನಿತನೇತ್ರನಾಗಿ ಸಮುತ್ತಂಭಿತಮಾದ ವಿಕಸಿತ ಪ್ರಶಸ್ತಹಸ್ತತಳಮಂ ಕಪೋಳಮೂಳಕ್ಕಾಂಕೆಗೊಟ್ಟು ವಿಷಣ್ಣಾಂತರಂಗಂ ತನ್ನೊಳಿಂತೆಂದಂ

ಶಾರ್ದೂಲವಿಕ್ರೀಡಿತ
ಈ ರೂಪೀ ಕುಲಮೀ ಕಳಾವಿಭವಮೀ ವಾಗ್ಮಿತ್ವ ಚಾತುರ್ಯಮೀ
ಸಾರಾಸಾರವಿವೇಕಮೀ [4]ಸಿ[4]ರಿಯುಮೀ ಚಾರಿತ್ರಮೀ ಚಾಗಮೀ
ಚಾರುಶ್ರೀಜಿನಭಕ್ತಿಯೆಂಬಿವಿನಿತುಂ ಸತ್ಪುಣ್ಯದಿಂದಾದು[5]ದೀ[5]
ನಾರೀರತ್ನದೊಳೀಕೆಯಲ್ಲದವರಲ್ಲೊಂದಾದೊಡಂ ದುರ್ಲಭಂ ೨

ಚಂಪಕಮಾಲೆ
ಮೃಗಮದಕಾಂತಿಯಂ ಪರಮರತ್ನಮೃದುತ್ವಮನುದ್ಧಕರ್ಣಿಕಾ
ರಗತಮೆನಿಪ್ಪ ಸೌರಭಮುಮಂ ಹರಿಚಂದನದೊಂದು ನೇರಿತಂ
ಮಿಗೆ ಬಿದಿ ಕೊಂಡು ನಿರ್ಮಿಸಿದ[6]ನೀ[6]ಕೆಯನಲ್ಲದೊಡೆಂತು ಬಂದುದೀ
ಸೊಗಯಿಪ ಕಾಂತಿಯುಂ ಮೃದುತೆಯುಂ ಸುರಭಿತ್ವಮುಮೆಯ್ದೆ ನೇರಿತುಂ ೩

---

1 ಕ್ಯ (ಜ) 2 ನಿಂದು (ಗ) 3 ಮುದ (ಜ) 4 ಪ (ಜ) 5 ವೀ (ಜ) 6 ಳೀ (ಕ)

ಉತ್ಪಲಮಾಲೆ

ಆದೊಡಮೇನುಮೀ ಸತಿಯ ಜನ್ಮನಮೆಂಬ ಮಹಾನುಹೀರುಹಂ
ಮೇದುರರೂಪಮೆಂಬ ರಸದಿಂದಭಿವೃದ್ಧಿಯನೆಯ್ದಿ ಕಾಲಸಂ
ಪಾದಿತ ಚಾರುಪುಷ್ಪಿತಮುದಾಗಿಯುಮಾತ್ಮಜನೆಂಬ ಸತ್ಫಲೋ
ತ್ಪಾದದ ಲಾಭಮಿಲ್ಲದದು ನಿಷ್ಫಲಮಾದುದು ಲೋಕದೊಳ್ ಕರಂ ೪

ಚಂಪಕಮಾಲೆ

ಎನಿತೆನಿತುಂ ಸ್ವಬಾಂಧವ ಸಹಸ್ರಮುಮುಳ್ಳೊಡಮೇನು ಮತ್ತಮಂ
ತೆನಿತೆನಿತುಂ ಸ್ವಗೋತ್ರಜಜನಂಗಳುಮುಳ್ಳೊಡಮೇನು ಪುತ್ರಸಂ
ಜನಿ ತನಗಿಲ್ಲದಂದು ನರನಾವನೊ ದುಃಖಮನೆಯ್ದನಂಬರಂ
ವಿನುತಹಿಮಾಂಶುವಿಲ್ಲದೊಡೆ ತಾರೆಗಳುಳ್ಳೊಡಮೆಂತು ರಂಜಿಕುಂ ೫

ಕಂದ : ಕುಲದೀಪನೆನಿಪ ತನಯಂ
ನಿಳಯದೊಳುಜ್ಜಳಿಸಿ ಬೆಳಗದಿರ್ದೊಡೆ ಧಾತ್ರೀ
ತಳದೊಳದು ಮೆಱೆಯದೆಂತೆನೆ
ವಿಳಸಿತತಮದಿಂದ ಪುದಿದ ಮನೆಯಂತೆ ವಲಂ ೬

ಚಂಪಕಮಾಲೆ

ಸರಸಿರುಹಂಗಳಿಲ್ಲದ ಕೊಳಂ ದಿನನಾಯಕನಿಲ್ಲದಾಗಸಂ
ಸುರುಚಿರಶಾಸ್ತ್ರವಿಲ್ಲದ ತಪಂ ವಧುವಿಲ್ಲದ ಲೀಲೆ ಸತ್ಪ್ರಭಾ
ಪರಿಕರಮಿಲ್ಲದುಮ್ಮಮಣಿಯೆಂತು ಧರಿತ್ರಿಯೊಳೊಪ್ಪದಂತೆ ಸೌಂ
ದರಸುತನಿಲ್ಲದೆನ್ನ ಕುಲಮೆಂತದು ಪೆರ್ಚಿ ಸಮಂತು ರಾಜಿಕುಂ ೭

*

ಉತ್ಪಲಮಾಲೆ

ಎನ್ನ ಕುಲಾಂಕುರಂ ದಲೆನಿಪಾತ್ಮಜನಂ ನೆಱೆಕಾಣದೀಗಳೆ
ನ್ನನ್ವಯಲಕ್ಷ್ಮಿ ತನ್ನಯ ಸುಭೋಗಸಮಾಶ್ರಯಭಂಗಶಂಕೆಯಿಂ
ದುನ್ನತಚಿಂತೆ ನಟ್ಟುನಿಲೆ ಚಿತ್ತದೊಳಾಕುಳೆ ಸುಯ್ಯು ಸುಯ್ಲಿನಿಂ
ತನ್ನ ಕರಾಗ್ರಪಂಕಜಮನೆಯ್ದೆ ಮುರುಂಟಿಸುತಿರ್ಪಳಾವಗಂ ೮

ಚಂಪಕಮಾಲೆ

ಶಶಿಕಿರಣಂಗಳಿಂ ಹಿಮಕಣಂಗಳಿನುದ್ಘಸುಧಾರಸಚ್ಛಟಾ
ಪ್ರಸರದಿನಂಬುಜಂಗಳಿನುದಾರವಿನೌಕ್ತಿಕಹಾರಯಷ್ಟಿಯಿಂ
ದಸುಕೆಯ ಪಲ್ಲವಂಗಳ ಸಮೂಹದಿನಪ್ಪ ಸುಖ[1]ಕ್ಕೆ[1]ದಗ್ಗಳಂ
ಲಲಿತಸುತಾಂಗಸಂಗತದಿನಪ್ಪ ಸುಖಂ ಮನುಜರ್ಗೆ ಲೋಕದೊಳ್ ೯

---

1 ಕ್ಕ (ಜ)

* ಆತನ ಪುತ್ರದೋಹಳವ್ಯಾವರ್ಣನೆ (ಗಜ)

ಶಾರ್ದೂಲವಿಕ್ರೀಡಿತ

ಏನಂ ಮಾಳ್ಪೆ[1]ನಿ[1]ದಾವದೇವತೆಯನಾನಾರಾಧಿಸೆಂ ನಿಷ್ಠೆಯಿಂ
ದಾನಾರಂ ಬೆಸಗೊಳ್ವೆನೀ ವಿಷಯದೊಳ್ ಮತ್ಪೌರುಷಂ ಕೊಳ್ಳದಿ
ನ್ನೇನುಂ ಸಂದೆಯಮಿಲ್ಲ ಧರ್ಮದೊದವಿಂ ಸಾಧ್ಯಂ ದಲೀ ಕಾರ್ಯಮೆಂ
ದಾ ನಾಥಂ ಪರಧರ್ಮಮಂ ಬಿಡದೆ ಮಾಳ್ಪುದ್ಯೋಗಮಂ ತಾಳ್ದಿದಂ ೧೦

ವಚನ: ಇಂತು ನಿರಂತರಿತಚಿಂತಾಸಮುದ್ಭ್ರಾಂತರಾಳತರಂಗಿತಾಂತರಂಗನಾಗಿ ಪ್ಪುದುಂ ತತ್ಸಮಯದೊಳೊರ್ವನುದ್ಯಾನಪಾಲಕಂ ಮುನೀಶ್ವರಸಮಾಗಮನೋತ್ಸಾಹ ವಾರ್ತಾನಿವೇದನೋತ್ಸುಕಂ [2]ನಿರ್ಯತ್ಪ್ರ[2]ಮದಾಶ್ರುಧಾರಾಪೂರಸಮುತ್ಸಿಕ್ತನುದಂಚಿತ ರೋಮಾಂಚಸಂಚಯಕಂಚುಕಿತಗಾತ್ರಂ ಕಯ್ಯೊಳ್ ಕುಡಿಯಂ ಪಿಡಿದೆತ್ತಿಕೊಂಡರ ಮನೆಯ ಬಾಗಿಲೊಳ್ ಬಂದುನಿಂದು ತನ್ನ ಬರವಂ ಪಡಿಯಱಂಗಱಿಪುವುದುಮಾತಂ ಪೋಗಿಯರಸಂಗೆ ಬಿನ್ನಪಂಗೆಯ್ಯೆ ಬರವೇಳೆಂಬುದುಂ

ಚಂಪಕಮಾಲೆ

ದರದಳಿತಂಗಳಪ್ಪ ಕುಸುಮಸ್ತಬಕಂಗಳನೆಯ್ದೆ ತಾಳ್ದಿ ಪೀ
ವರಸುರಸಂಗಳಪ್ಪ ಪರಿಪಕ್ವಫಲಂಗಳ ಸಂಚಯಂಗಳಂ
ಧರಿಸಿ ತದೀಶವಾಂಛಿತಫಳಪ್ರದಮಪ್ಪ ಸುಕಲ್ಪವೃಕ್ಷದಂ
ತಿರೆ ನಡೆತಂದನಂದು ವನಪಾಳಕನುನ್ನತಹರ್ಷಪಾಳಕಂ ೧೧

ವಚನ: ಅಂತು ಬಂದು ವಿನಯವಿನಮಿತೋತ್ತಮಾಂಗನಾಗಿ ತಾಂ ತಂದ ಕಾಲ ನಿಷ್ಪನ್ನಂಗಳಾದ ಪುಷ್ಪಫಲಂಗಳಂ ಕಾಣಿಕೆಯಂ ಕೊಟ್ಟು ಮುಂದೆ ಕುಳ್ಳಿರ್ದು ತನ್ನಯ ಧವಳಚೇಳಾಂಚಳಮನಧರಸವಿಧರಕ್ಕೆ ತಂದು ಬಿನ್ನಪಮೆಂದಿಂತೆಂದಂ

ಉತ್ಪಲಮಾಲೆ

ದೇವಕಳಾವಿಳಾಸದೊದವಿಂದೆ ದಿಗಂಬರಮಾರ್ಗಭೂಷಿಣೀ
ಭಾವಮನೆಯ್ದೆ ತಾರಕಿಗಳೊಳ್ ಪುದಿದಿರ್ದ ಸುಧಾಂಶು ಬಪ್ಪವೊಲ್
ಪಾವನಬೋಧಯೋಗಿ ಸಮುದಾಯಸಮನ್ವಿತನಾಗಿ ಬಂದನೀ
ಭೂಪಳಯಕ್ಕೆ ಚಾರಣಮುನೀಶ್ವರನಂಬರಮಾರ್ಗದತ್ತಣಿಂ ೧೨

ವಚನ: ಪ್ರಜೇತರೆಂಬಾಚಾರ್ಯವರ್ಯರ್ಸೈನೂರ್ತಂಡ ಚಾರಣಋಷಿಸಮು ದಾಯಂಬೆರಸು ಬಂದು ನಮ್ಮಾ ಪುರದ ಬಹಿರ್ಭಾಗದೊಳಿರ್ದುದ್ಯಾನವನಾಂತರ್ಭಾಗಮಂ ಪೊಕ್ಕು ತತ್ರಸ್ಥಕ್ರೀಡಾಶೈಲಚೂಡಾಪ್ರಸ್ಥದೊಳೊಂದಿಂದುಕಾಂತಶಿಲಾಮಯಮಾ[3][ದು] ತ್ತುಂಗ[3]ರಂಗಾಗ್ರದಲ್ಲಿ ಬಿಜಯಂಗೆಯ್ದು ಪಂಥಾತಿಚಾರಕ್ರಿಯೆಯಂ ತೀರ್ಚಿ ಸಮಾಪ

[1] ನ (ಜ) [2] ನೀರ್ಯಪ್ರ (ಜ) [3] ದರಂಗತ್ತು (ಜ)

ವರ್ತಿ ಶಿಷ್ಯಪ್ರಶಿಷ್ಯವರ್ಗಕ್ಕೆ ವಿಶುದ್ಧ ಸಿದ್ಧಾಂತಾದಿ ಸಮಸ್ತಶಾಸ್ತ್ರವ್ಯಾಖ್ಯಾನಮಂ ಮಾಡುತ್ತುಮಿರ್ದರಾ ಮುನೀಶ್ವರರ ಮಹಾಮಹಿಮೆಯಿಂದಾನೋರ್ವನೇ ವಿಪುಳಪುಳಕಂಗಳಿಂದಂಕುರಿತನಾದೆನಿಲ್ಲ ವಸಂತಸಮಯಮನಪೇಕ್ಷಿಸದಲ್ಲಿಯ ವೃಕ್ಷಂಗಳುಮಂಕುರಿತಂಗಳಾದುವು ಮತ್ತಮವರ ಮಾಹಾತ್ಮ್ಯಮಂ ಪೇಳ್ವೊಡೆನ್ನಳವಲ್ಲೆಂದು ಬಿನ್ನಪಂಗೆಯ್ಯಲಾ ಮುನೀಂದ್ರಚಂದ್ರಮನ ಸಮಾಗಮನವಾರ್ತಾಚಂದ್ರಿಕಾಪ್ರಸರದಿಂದಾ ಮಹೀಪಾಳತಿಳಕನ ಮನೋಗತಚಿಂತಾಸಂತಾಪಮೊರ್ಮೊದಲೊಳ್ ಪಿಂಗಿಪೋಗಲೊಡಮಾಗಳಾತನ ನೇತ್ರಂಗಳಿಂದುಕಾಂತಪುತ್ರಿಕಾಪ್ರತಿಮಾನಂಗಳಾದುವು ಕರಂಗಳಂಭೋಜಲೀಲಾಪಾಲಕಂಗಳಾದುವು ನಿರಂತರಿತಪರಮಾ[1]ನಂದ[1]ಸಂದೋಹ[2]ನಿರವಧಿಪಯೋಧಿ[2]ಪ್ರತಿನಿಧಿಯಾಗೆ ಕಾರ್ಗಾಲದ ಮೇಘಧ್ವನಿಯುಂ ಕೇಳ್ದ ನವಿಲಂತನೂನಸಂಭ್ರಮಭ್ರಮಿತಾಂತರಂಗನಾಗಿ

ಮತ್ತೇಭವಿಕ್ರೀಡಿತ

ವರಸಿಂಹಾಸನದಿಂದಮೆಳ್ದು ಧರಣೀಪಾಳಂ ಪ್ರಚೇತೋಮುನೀ
ಶ್ವರನಿರ್ದಾದೆಸೆಯತ್ತಲೇಳಡಿಯುಮಂ ಸದ್ಭಕ್ತಿಯಿಂ ಪೋಗಿ ನಿ
ರ್ಭರದಿಂದಾನತನಾದನೆಂತು ದಿನಪಂ ಪೂರ್ವಾದ್ರಿಯಿಂದೆಳ್ದು ತಾ
ನಿರದಪ್ಪಂ ನತನಾಪ್ರಚೇತನನಿವಾಸಾಶಾಂತದತ್ತಲ್ ಕರಂ ೧೩

ವಚನ : ಅನಂತರಂ ವಿಶಿಷ್ಟೇಷ್ಟಫಳಪ್ರದಾಯಕಂಗಳಪ್ಪ ತನ್ನಯ ಮನೋರಥ ಮಹೀಜಬೀಜಾಯಮಾನಪ್ರಸೂನಫಲಂಗಳಂ ಕಾಣಿಕೆಯಂ ಕೊಟ್ಟ ವನಪಾಲಂಗೆ ಪ್ರತ್ಯುಪಕಾರಮಂ ಮಾಳ್ಪ ಬಗೆಯಿಂದೆಂಬಂತೆ ದೇಯಾದೇಯವಿಚಾರಮಿಲ್ಲದೆ ತೃಪ್ತಿಯೇ ಸೀಮೆಯೆಂಬನ್ನೆವರಂ ದ್ವೀಪಾಂತರಾಯತಾದೃಷ್ಟಪೂರ್ವಾನರ್ಘ್ಯಮಾದ ಸಮಸ್ತ ವಸ್ತುಮಂ ವಿಸ್ಮೃತಪ್ರೀತಿಯಿಂದಂಗಚಿತ್ರಮಂ ಕೊಟ್ಟು ತನ್ಮುನೀಂದ್ರಪಾದಾರವಿಂದದ್ವಂದ್ವಸಂದರ್ಶನೋತ್ಸವಸಮುತ್ಸುಕಂ ಯಾತ್ರಾನಿಮಿತ್ತಂ ಪ್ರಸ್ಥಾನಭೇರಿಯಂ ಪೊಯಿಸಿದಾಗಳ್

ಮಹಾಸ್ರಗ್ಧರೆ

ಪಿರಿದುಂ ಪ್ರಸ್ಥಾನಭೇರೀರವಮಖಿಳದಿಶಾಭೋಗಭಾಗಂಗಳಂ ಮೇ
ಘರವಂ ತಾನೆಂಬಿನಂ ವ್ಯಾಪಿಸೆ ಪುರಜನಮೆಲ್ಲಂ ಮಯೂರಾಳಿಯಂತು
ದ್ಧುರಸಂತೋಷಂಗಳಿಂದಂ ನಟನರಸವಶೀಭೂತಮಾಯ್ತಾ ಜಗಂ ಬಂ
ಧುರಶಬ್ದಾದ್ವೈತಮಂ ಪಾಳಿಸಿದುದು ಭರದಿಂ ತುಂಬಿ ತಚ್ಛಬ್ದದಿಂದಂ ೧೪

---

[1] ಹ್ಲಾದ (ಕ) [2] ಸಂಪದಿಪ...ಧಿ (ಕಚ)

ಉತ್ಪಲಮಾಲೆ

ಆಗಳನೂನಸಂಭ್ರಮಪರಿಭ್ರಮದಂಗನೆಯರ್ ಸ್ವಗೇಹದೊಳ್
ಬೇಗಡೆ ಗಂಧಸಾರಜಳದಿಂ ಚಳಯಂಗಳನೆಯ್ದೆ ಕೊಟ್ಟು ಮುಂ
ಬಾಗಿಲೊಳುನ್ನತಧ್ವಜಚಯಂಗಳನೆತ್ತಿಸಿ ರಂಗವಾಲಿಯಂ
ರಾಗದೊಳಿಕ್ಕಿ ಬೀದಿಯೊಳಮಂದುಜಿತಮಾಡಿದರಷ್ಟಶೋಭೆಯಂ ೧೫

ರತ್ನಚಯಂಗಳಿಂ ಮಿಗುವ ಮುತ್ತುಗಳಿಂ ನೆಱಕೀಲಿಸಿ[1]ರ್ದ[1] ದಲ್
ನೂತ್ನಮೆನಿಪ್ಪಲಂಕರಣಮಂ ಸಲೆತೊಟ್ಟು ಜನಂಗಳುಂ ವಧೂ
ರತ್ನಗಣಂಗಳುಂ ಕನಕದರ್ಪಣಮಂ ಪಿಡಿದರ್ ಕೆಲಂಬರುಂ
ಯತ್ನದೆ ತಾಳ್ದರಷ್ಟವಿಧದರ್ಚನೆ ವಸ್ತುಸುಭಾಜನಂಗಳಂ ೧೬

ವಚನ: ಆ ಮುನೀಂದ್ರಂ ಬಂದನೆಂಬೊಂದಾನಂದಂ ಕೈಮಿಕ್ಕು ತನ್ನಗರೀ ಮಂದಿರಪ್ರಾಂಗಣಂಗಳೊಳ್ ತುಂಬಿ ಪವಣಿಸದೆ ಮೂರ್ತ್ಯಮೂರ್ತಿಯಂ ಕೈಕೊಂಡು ಪೊಱ ಪೊಣ್ಮಿದುದೆಂಬಂತೆ ಪುರಜನಂಗಳ್ ಕುದುರೆಗಳಂ ರಥಂಗಳನೇಱ ಮಾನಿನಿಯರ್ ಪಿಡಿಗಳಂ ಪಿಡಿಪೇಱ ತಂತಮ್ಮ ಮನೆಗಳಿಂ ಪೊಱಮಟ್ಟುಬಂದರಮನೆಯ ವಿರಾಜಮಾನ ರಾಜಾಂಗಣದೊಳ್ ನಿಂದಿರ್ಪುದುಂ

ಚಂಪಕಮಾಲೆ

ಅತಿಶಯಮಾದ ಭೂಷಣವಿಭೂಷಿತನಾಗಿ ನರೇಂದ್ರಕುಂಜರಂ
ಸತಿಯೊಡಗೂಡಿ ಬಂದಿಭಮನೇಱ ಧೃತಾಂಕುಶನೊಪ್ಪಿದಂ ದಿವ
ಸ್ಪತಿಯೊಲವಿಂ ಪುಲೋಮಜೆಯೊಳೊಂದಿ ನಿಜಾಭ್ರಗಜೇಂದ್ರಮಂ ಮಹೋ
ನ್ನತಿಯೊಳಮೇಱ ರಂಜಿಸುವವೊಲ್ ಸುಮನಃಪ್ರಸರಪ್ರಸೇವಿತಂ ೧೭

ನಿರುಪಮರೂಪನೀಕ್ಷಿಸುವ ಪೌರವಧೂನರಲೋಲಲೋಚನೋ
ತ್ಕರಪರಿಕೀಲಿತಾಮಲಶರೀರ ಸುಕಾಂತಿಯನುಳ್ಳ ಭೂಮಿಪಂ
ಧರಣಿಯೊಳೊಪ್ಪಿದಂ ಮಿಗೆ ಸಹಸ್ರವಿಲೋಚನನಂತಿರಾಗಳು
ದ್ಧುರಧವಳಾತಪತ್ರದಡಿಯೊಳ್ ಚಮರೀರುಹಶೋಭಿಮಸ್ತಕಂ ೧೮

ಉತ್ಪಲಮಾಲೆ

ಗೀತರವಂಗಳುಂ ವಿವಿಧವಾದ್ಯಸಮೂಹದ ನಿಸ್ವನಂಗಳುಂ
ನೂತನವಲ್ಲಕೀ ಧ್ವನಿಗಳುಂ ಬಿಡದೋದುವ ಚಾರುಪಾಠಕ
ವ್ರಾತರವಂಗಳುಂ ದಶದಿಶಾತಟಮಂ ಪರಿಭೇದಿಸುತ್ತಿರಲ್
ಭೂತಳನಾಯಕಂ ತಳರ್ದನಂಗಜಮಲ್ಲನ ನೋಳ್ಪ ವಾಂಛೆಯಿಂ ೧೯

---

[1] ದರ್ (ಜ)

ಕಂದ: ಕಿರಣಸಹಸ್ರಂಗಳ್ ಭಾ
ಸ್ಕರನೊಡನೆಯ್ತಪ್ಪ ಮಾಳ್ಕೆಯಿಂದೆಯ್ತಂದರ್
ನಿರುಪಮರಾಜಕುಮಾರರ್
ನರನಾಥನ ಪಿಂದೆ ರಾಗರಸದೊದವಿಂದಂ ೨೦

ಮತ್ತೇಭವಿಕ್ರೀಡಿತ

ಸಮುಪಾತ್ತೋನ್ನತ ಮತ್ತವಾರಣ ಕರಂ ಸಜ್ಜಾಲಕೋಪೇತರಂ
ಸುಮಹಾಭೋಗ ವಿರಾಜಮಾನತರರಂ [1][ಮಾ][1]ನೋಚ್ಛ್ರಯಾಕಾಂತರಂ
ವಿಮಲಾಕಾರರನಿಕ್ಕೆಲಂಬಿಡಿದು ಬ[2]ಪ್ಪ[2] ಕ್ಷಾತ್ರಪರಂ ನೋಡಿದಂ
ರಮಣೀಯಂಗಳೆನಿಪ್ಪ ಕೇಸರಿಗಳೆ ಪಿಂದೆಯ್ತಪ್ಪವೊಲ್ ತೋರ್ಪರಂ ೨೧

ಮಹಾಸ್ರಗ್ಧರೆ

ಸಿರಿದುಂ ಸಂಪಲ್ಲವಾರಂಜಿತಮತುಳವಿಳಾಸಾಸ್ಪದಂ ಪತ್ರವಲ್ಲೀ
ಪರಿಶೋಭಾಸಂಯುತಂ ಭಾಸುರತರತಿಳಕಂ ಲಾಲಸೀಯಾಯತಾಕ್ಷಂ
ಸ್ಮರರಾಜೋದ್ಯಾನಮೆಳ್ತಂದಪುದೆನೆ ಪುರನಾರೀಜನಂ ಸುತ್ತಲುಂ ಭೂ
ವರನೇತ್ರಪ್ರೀತಿಯಂ ಪುಟ್ಟಿಸುತೆ ನಡೆದುದತ್ಯಂತಸಂತೋಷದಿಂದಂ ೨೨

ಕಂದ: ಒರ್ವೊರ್ವರ ದೇಹಂಗಳ
ದುರ್ವಹ ಸಂಘಟ್ಟನಂಗಳಿಂ ಹಾರಂಗಳ್
ನಿರ್ವರದೆ ಪಱಿದು ಬೀಳ್ದೊಡೆ
ಸರ್ವರ್ಗಂ ಚರಿಸಬಾರದಿರ್ದುದು ಮಾರ್ಗಂ ೨೩

ಭೂಪನ ಮುಖಸರಸೀಜ ಸ
ಮೀಪದೊಳಂದಂಗರಾಗಗಂಧಕ್ಕೆಳಸಿ
ವ್ಯಾಪಿಸುವ ಭೃಂಗಮಾಳೆ ಮ
ನೋಪಸರತ್ತಿಮಿರಮಿರದೆ ಪೊಱಪೊಣ್ಮುವ ವೊಲ್ ೨೪

ಉತ್ಪಲಮಾಲೆ

ಮುನ್ನಮೆ ಪೋಗಿ ಪುಷ್ಪಫಲಸಂಚಯಮಂ ನೆಱತಂದುಕೊಟ್ಟು ಸಂ
ಪನ್ನನ ಚಿತ್ತವೃತ್ತಿಗುಱಿ ಬಂದು ದಲೀ ಪದದೊಳ್ ವಿಶೇಷದಿಂ
ಮನ್ನಿಸಿಕೊಂಬೆವೆಂಬ ಬಗೆಯಿಂ ಸಮಯೋಚಿತಸೇವನಾಪರರ್
ಸನ್ನಿದಮಾದ ನಂದನವನಕ್ಕಿರದೆಯ್ದಿದರಂದು ಬೇಗದಿಂ ೨೫

---

1 ಗ... (ಕ) ಮ (ಗಜ) 2 ಪಾರ್ (ಜ)

ಕಂದ : ಆಶೀರ್ವಾದದ ನಿನದಂ
ಲೇಸಾಗಿಯೆ ನೆಗೆಯೆ ವಿವಿಧರಚನಾತಿಶಯೋ
ದ್ಭಾಸಿತನಗರೀದ್ವಾರಮ
ನೀಶಂ ಬಂದೆಯ್ದಿದಂ ಮನೋಮುದದಿಂದಂ ೨೬

ಯತಿಭಾವಸಮೇತಂ ರಾ
ಜಿತಗುಣಕಂ ಸ್ವೀಕೃತಾಖಿಲಾಲಂಕಾರಂ
ಕ್ಷಿತಿಪಂ ಪೊಱಮಟ್ಟಂ ಸ
ನ್ನುತಕವಿಮುಖದಿಂದೆ ನೆಗೆವ ಪದ್ಯದ ತೆಱದಿಂ ೨೭

ಪೊಱವೊಳಲಾತನ ಕಣ್ಣಂ
ಸೆಱೆವಿಡಿದುದು ತಾಯ ಕೆಲದ ಮಗುವಿನ ತೆಱದಿಂ
ಮಿಱುಗುವ ಬಹುಲಕ್ಷಣದಿಂ
ನೆಱೆರಮಣೀಯತ್ವಮೊದವಲಾಂತಿರ್ದ ಕರಂ ೨೮

ವಿಕ್ರಮಪೂಜ್ಯಂ ಧರಣೀ
ಚಕ್ರಪ್ರಭು ಸರ್ವಮಂಗಳೋಪೇತನಮಂ
ಮಿಕ್ಕ ಮಹಾಸೇನಾವೃತ
ನಕ್ಕಿ ಮಹಾಸೇನನೆಂಬಿದಂ ಪ್ರಕಟಿಸಿದಂ ೨೯

ವಚನ : ಅಂತು ರುಂದ್ರಲೀಲೆಯಿಂ ಬರುತ್ತಿರ್ದ ನರೇಂದ್ರಂ ದೂರಾಂತರದೊಳತ್ಯು ಜ್ಜೃಂಭಿತಸ್ತನಶಾಖಿಲೇಖಾಶಾಖಾಶಿಖಾಮುಖಂಗಳಿಂದಾಕಾಶಮನಳ್ಕಿಱಿಯುತ್ತಿರ್ದ ಹೃದ್ಯಮಾದುದ್ಯಾನವನಮಂ ಕಂಡು ಮನದೆಗೊಂಡು ತನ್ನಯ ಮನೋವಲ್ಲಭೆಯ ಮುಖಕಮಳಾವಳೋಕನಂಗೆಯ್ದಿಂತೆಂದಂ

ಉತ್ಪಲಮಾಲೆ

ಭೂನಳಯುಕ್ತಭೀಷ್ಟಫಳದಾಯಿಯೆನಿಪ್ಪ ಮಹಾಮಹೀಜಶಾ
ಖಾವಳಿ ಹಸ್ತಮಂ ನೆಗಪಿ ಸದ್ವಿಜಯಧ್ವನಿಯಿಂದಮೊಪ್ಪಿ ತಾಂ
ಪೀವರನಾಳಿಕೇರರಸಧಾರೆಗಳಿಂ ಪರಿರಂಜಿಸುತ್ತುಮಿ
ರ್ದೀ ವನಮಾ ವನಂಬೊಲೆಸೆದತ್ತು ದಲೆನ್ನಯ ಮುಂದೆ ಲೀಲೆಯಿಂ ೩೦

ಮೂಲಬಲಾನ್ವಿತಂ ವಿವಿಧಪತ್ರಸಮೂಹಸಮಂಚಿತಂ ಸಮು
ನ್ಮೀಲಿತದರ್ಪಕಂ ಕುವಳಯಪ್ರಥಿತಂ ಸುಖವೃದ್ಧಿಶೋಭಿತಂ
ಪಾಲಿತಸತ್ವಕಂ ಪರಮಧುಪ್ರತಸೇವ್ಯತರಂ ಕವೀಶ್ವರೋ
ಲ್ಲಾಲಿತಮಾಗಿ ರಾಜಪದಮಂ ಪಡೆದಂತೆಸೆದತ್ತಿದೆನ್ನ ವೊಲ್ ೩೧

ಕಂದ: ಕೆನ್ನಂ ಮಾಗಾಯ್ಗಳಿನ
ತ್ಯುನ್ನತಮಾದಳಿಯೆಲೆಗಳಿಂದೊಪ್ಪುತ್ತುಂ
ನಿನ್ನಯ ನಂದನನಂತಿರೆ
ಸನ್ನುತಮಿಾ ನಂದನಂ ಕರಂ ಸೊಗಯಿಸುಗುಂ ೩೨

ವಿಪರೀತಮಾಗಿಯುಂ ಸಾ
ಧುಪರಿಷದಾಶ್ರಯಮುಮಾದುದಕುಲೀನತೆಯಿಂ
ದುಪಗತಮಾಗಿಯುಮಿದು ತಾಂ
ವಿಪುಳಸುಗೋತ್ರಾಪಜಾತಮಾದುದು ಚಿತ್ರಂ ೩೩

ಮತ್ತೇಭವಿಕ್ರೀಡಿತ

ಸಿರಿದುಂ ನೀಳ್ದ ಮಹೀರುಹಂಗಳ ಮಹಾಶಾಖಾಗ್ರಪುಷ್ಪೋತ್ಕರಂ
ಭರದಿಂದೊಪ್ಪಮನಾಳ್ದುದುಷ್ಣಕರನಶ್ವಂಗಳ್ ನಭೋಮಾರ್ಗದೊಳ್
ಬರುತುಂ ಪಲ್ಲವಮಂ ತಿಸಲ್ಕೆಳಸಿ ವಕ್ತ್ರಾಗ್ರಂಗಳಂ ನೀಡಿ ಪೀ
ವರಫೇನಂಗಳ ಲೇಶಪಿಂಡಮುದಱಲ್ಲೊಕ್ಕಿರ್ದುದೆಂಬಂದದಿಂ ೩೪

ಚಂಪಕಮಾಲೆ

ಕುಸುಮರಜಸ್ಸಮಾಜವರವಸ್ತ್ರಮನುಟ್ಟು ಕೊಳಂಗಳಲ್ಲಿ ರಂ
ಜಿಸುವ ಪಯಃಕಣಪ್ರಸರಮೆಂಬ ವಿಮೌಕ್ತಿಕಹಾರದಿಂ ವಿರಾ
ಜಿಸಿ ಲತೆಯೆಂಬ ದಂಡಮುಮನೆತ್ತಿ ಸಮಿಾರಣನೆಯ್ದೆ ತಿಂದು ಕೊ
ರಿಸಿ ವನವೆಂಬ ಭೂಪನಿರದಟ್ಟಿದ ಕಟ್ಟಿಗೆಕಾಱನಂದದಿಂ ೩೫

ವಚನ: ಮತ್ತಮಿಾ ನಂದನವನದಲ್ಲಿ ಮುಂದೆ ಪೋದ ಸೈನಿಕರ ಕೋಳಾಹಳದಿಂ ಮಾಲೆಗೊಂಡು ಮೇಗೆ ನೆಗೆವುತ್ತಿರ್ದ ಪಿಕಶುಕಾದಿ ನಾನಾಪ್ರಕಾರ ಪಕ್ಷಿಗಳಿಂ ಪರಿಲಕ್ಷಿತಂಗಳಾದಕ್ಷೂಣವೃಕ್ಷಂಗಳಾಂ ಬಂದಪನೆಂಬುತ್ಸಾಹದಿಂ ವನಲಕ್ಷ್ಮಿಯೆತ್ತಿಸಿದ ಧ್ವಜಂಗಳಂತಿರ್ದುವು ಪೊಂಬಾಳೆಗಳ ಬಹಳಮಪ್ಪ ಪರಿಮಳಭರಕ್ಕೆಳಸುವಳಿಕುಳಂಗಳ ಶ್ರೇಣಿಯಿಂ ಸಮಾಲಂಬಿತಂಗಳಾಗಿ ಕೆಲದೊಳೊಪ್ಪಂಬೆತ್ತಿರ್ದ ಪೂಗದ್ರುಮಂಗಳಿಂದ್ರನೀಲಮಣಿಯ ತೋರಣಮೋರಣಿ [1]ಶೋಭೆ[1]ಯನನುಕರಿಸುತ್ತಿರ್ದುವು ಮಂದಾನಿಳನೆಂಬ ನಟ್ಟುವಿಗನ ಪ್ರೇರಣೆಯಿಂದ ಬಾಳತಾಳಂಗಳ ಮೇಳದೊಡಗೂಡಿ ಪ್ರವಾಳವಿಳಸಿತಲತೆಗಳ್ ತಾಂಡವಾಡಂಬರಮಂ ವಿಡಂಬಿಸುವಂತಿರ್ದುವು ಚಂದನತಿಳಕಾಂಕಿತೆಯಾದ ವನಶ್ರೀ ಪ್ರೀತಿಯಿಂದಕ್ಷತದೂರ್ವೆಗಳಿಂದೆನಗೆ ಮಂಗಳಮಂ ಮಾಡುವಂತಿರ್ದಳೆಂದು ನಿಜಪ್ರಾಣೇಸಿಯೊಡನೆ ನುಡಿಯುತ್ತುಂ ತದುದ್ಯಾನಮನೆಯ್ದಿದಾಗಳ್

[1] ಶಾಖೆ (ಜ)

ಉತ್ಪಲಮಾಲೆ

ಓಡುವ ವಾಜಿಸಂತತಿಗಳೆಂಬ ಪರೋರ್ಮಿಗಳಿಂದೆ ದಾನದೊಳ್
ಕೂಡಿದ ಕುಂಜರಾವಳಿಗಳೆಂಬ ಬಹಿತ್ರಕದಂಬಕಂಗಳಿಂ
ಗಾಡಿಗೆ ತಾಣಮಾದ ಪುರುಸೈನ್ಯ ಸಮುದ್ರದ ತೀರವಲ್ಲಿ ದಲ್
ಮೂಡಿದ ಶೈವಳಾವಳಿಯ ಶಂಕೆಯನಂಕುರಿಸಿತ್ತು ನಂದನಂ ೩೬

ವಚನ: ಅನಂತರಂ

ಕಂದ: ಆ ವನದ ಪೊಱಗೆ ಸೈನ್ಯಮ
ನಾ ವಸುಧಾಧೀಶನಿರಿಸಿ ಗಂಧರ್ವರುಮಂ
ಸೇವಕಜನದಲ್ಲಿರಿಸಿದ
ನಾನೃತಕತಿಪಯಸುಭವ್ಯಸಮುದಯನಾಗಳ್ ೩೭

ಅನುಪಮಕರಾಗ್ರಮಂ ಪಾ
ವನ[1]ಮಂ[1] ನೆಱೆತನುಗಿದು ವಲ್ಲಭಾಸಂಯುಕ್ತಂ
ವನದೊಳಗೆ ಪೊಕ್ಕನಧಿಪಂ
ಘನಪಟಳಿಕೆಯೊಳಗೆ ಪುಗುವ ಚಂದ್ರನ ತೆಱದಿಂ ೩೮

ವಚನ: ಅಂತು ಪೊಕ್ಕನಂತರಮನತಿದೂರದೊಳ್ ಮುಂದೊಂದೊಡೆಯೊಳೊಂದಶೋಕೆಯ ಮರನುನ್ನತಮಾದ ತನ್ನಯ ಕೊಂಬುಗಳಿಂದಾಗಸಮಂ ತುಡುಂಕುತ್ತುಂ ವೀತರಾಗಂಗೆಡೆಗೊಟ್ಟ ತಾಣದೊಳಾನಿರ್ಪುದುಚಿತಮಲ್ಲೆಂದು ರಾಗಂ ಬೇಗದಿಂ ಯೋಗಿಜನಂಗಳ ಚಿತ್ತವೃತ್ತಿಯಂ ಬಿಟ್ಟು ಪೋಗಿ ಸಮಕ್ಷದೊಳಿರ್ದುಮಶೋಕವೃಕ್ಷದೊಳ್ ಪುಂಜಿಸಿರ್ದುದೆಂಬಂತೆ ಸಮುಲ್ಲಸತ್ಪಲ್ಲವಮಂಜರೀಪರಿರಂಜನದಿಂ ಕೆಂಕಮಾದ ಕಂಕೆಲ್ಲೀವೃಕ್ಷದ ಮೊದಲೊಳ್ ಪ್ರಕಟವಿಕಟಸ್ಫಟಿಕಶಿಲಾವಿಘಟಿತವಿಶಾಲಪ್ರದೇಶದೊಳ್

ಕಂದ: ನಿರುಪಮಕರುಣಾರಸದಿಂ
ಪರಿಪೂರ್ಣಂ ಸಕಲವಿಮಳವಿದ್ಯಾವಾಸಂ
ಪುರುಪುಣ್ಯಪುಂಜಮಂತಿರೆ
ಭರದಿಂದೊಪ್ಪಿದುದು ಜೈನಮುನಿಸಮುದಾಯಂ ೩೯

ಉತ್ಪಲಮಾಲೆ

ಪೂವಿನ ಮಾಲೆಯಂತೆ ರಮಣೀಯ ಗುಣಾನುಗತಂ ದಲಾಗಿ ಮೇ
ಘಾವಳಿಕಾಲದಂತಿರೆ ವಿನಷ್ಟರಜೋಪ್ರಜಮಾಗಿ ಪದ್ಮಿನೀ
ಜೀವಿತನಾಥ ಸತ್ಕಿರಣದಂತೆ ತಮೋಹರಮಾಗಿ ಕಣ್ಗೆ ಶೋ
ಭಾವಹಮಾದುದಲ್ಲಿ ಜಿನಯೋಗಿಜನಂಗಳ ಮೊತ್ತಮೆತ್ತಲುಂ ೪೦

---
[1] ಮಾ (ಜ)

ವಚನ : ಅದಱಿಂ ತೊಳೊಂದೆಡೆಯೊಳ್

ಮಹಾಸ್ರಗ್ಧರೆ

ಮುನಿಯೊರ್ವಂ ತನ್ನ ಶಿಷ್ಯಾವಳಿಗೆ ಪರಮಸಿದ್ಧಾಂತಮಂ ಪೇಳುತಿರ್ದಂ
ಮುನಿ ಮತ್ತೊರ್ವಂ ಮಹಾತರ್ಕದ ಬಗೆಯೊಳುಪನ್ಯಾಸಮಂ ಮಾಡುತಿರ್ದಂ
ಮುನಿ ಮತ್ತೊರ್ವಂ ಸಮಸ್ತಾಗಮದ ಪರರಹಸ್ಯಂಗಳಂ ಪೇಳುತಿರ್ದಂ
ಮುನಿ ಮತ್ತೊರ್ವಂ ಕರಂ ಲೌಕಿಕ ಸಕಳಕಥಾಖ್ಯಾನಮಂ ಮಾಡುತಿರ್ದಂ ೪೧

ಕಂದ : ದಿನಕರಬಿಂಬಕ್ಕಭಿಮುಖ
ರೆನಿಸಿರ್ದ ತಪೋಧನರ್ ಕೆಲರ್ ಚಿನ್ಮಯಮಂ
ಮನದೊಳ್ ನಿಷ್ಕಂಪತೆಯಿಂ
ನೆನೆಯುತ್ತಿರ್ದರ್ ತಪಃಪ್ರಭಾವೋತ್ಯಧಿಕರ್ ೪೨

*

ವಚನ : ತತ್ಕಾಲದೊಳಪಸಾರಿತನಿರವಶೇಷಚ್ಛತ್ರಚಾಮರಾದಿ ರಾಜಚಿಹ್ನನಪ್ಪ ಮಹಾರಾಜಂ ವಿನಯದ ಪುಂಜಮೆ ಮನುಜರಾಜರೂಪಂ ಕೈಕೊಂಡು ಮುಂದೆ ಬಂದು ನಿಂದುದೆಂಬಂತೆ ಕೈಗಳಂ ಮುಗಿದು ಜಿನಮುನಿಗಳ ಸಮುದಾಯದ ಶೋಭೆಯಂ ನೋಡುತ್ತುಂ ಬರ್ಪಾಗಳಾ ಸಮುದಾಯದ ನಟ್ಟನಡುವೆ

ಸ್ರಗ್ಧರೆ

ತನ್ನಿಂ ಬೇಱೆಯ್ದು ಮೆಯ್ಯುಂ ಪಗಲಿದಿರುಳಿದೆಂಬೀ ವಿಭೇದಂ ದಲೇನುಂ
ಕೆನ್ನಂ ಮೆಯ್ದೋಱುತಿಲ್ಲಂ ಬಗೆವೊಡೆ ನಿಜನಾಸಾಗ್ರನಿರ್ವ್ಯಗ್ರನೇತ್ರಂ
ತನ್ನಿಂ ತನ್ನಲ್ಲಿ ತನ್ನಂ ಸ್ಥಿರತರಮನದಿಂ ಭಾವಿಸುತ್ತಿರ್ದನಂ ನಿ
ಷ್ಪನ್ನೋದ್ಬೋಧ ಪ್ರಭಾವಾಧಿಕಯತಿಪತಿಯಂ ಕಂಡನಾಗಳ್ ನರೇಂದ್ರಂ ೪೩

ಕಂದ : ಕೆಲದೊಳ್ ಮುನಿಪನ ಕಮಂಡಲಂ
ಸಲೆ ನೋಳ್ಪರ ಕಣ್ಗೆ ಸೊಗಸನೀವುತ್ತಿರ್ದಂ
ವಿಳಸದ್ದಯಾಧ್ವಜಂ ಭೂ
ತಳದೊಳ್ ನೆಱೆ ನಿಮಿರ್ದ ಮೆಱೆವ ತೆಱದಂತೆ ನಲಂ ೪೪

ಆ ಮುನಿಗಳ ಚರಣಾರುಣ
ತಾಮರಸಾಂ[1]ಕಿತ[1]ದ ರಾಜಹಂಸಿಯ ತೆಱದಿಂ
ವಾಮೇಂದುಕಾಂತಗುಂಡಿಗೆ
ಭೂಮಿಯೊಳೊಪ್ಪುತ್ತುಮಿರ್ದುದತಿಶಯದಿಂದಂ ೪೫

---

1 ತಿಕ (ಜ) * ರೂಪಿನ ಸಮುದಾಯ ವ್ಯಾವರ್ಣನೆ (ಗಜ)

ಪರಮಪವಿತ್ರಪೋಲಕ್ಷ್ಮಿ ಮಹಾ
ದರದಿಂ ಕಸ್ತೂರಿಪಂಕಮಂ ಪೂಸಿದವೋಲ್
ಗುರುವರನ ಮೆಯ್ಯೊಳೆಲ್ಲಂ
ಪೊರೆಯೇಱಿರ್ದುದಮಮ ಬಹಳಮಲನಮತಿಸಾಂದ್ರಂ ೪೬

ಕೃತವಿಗ್ರಹದಂಡಂ ಭೂ
ಸುತಮುಕ್ತಾಹಾರಕಂ ಪ್ರಜಾಪಂ ಧೀರಂ
ಯತಿಚಕ್ರವರ್ತಿಯೆಂಬಿದ
ನತಿಶಯಿಸುತ್ತಿರ್ದನಾಗಳಾ ಮುನಿಮುಖ್ಯಂ ೪೭

ಮಹಾಸ್ರಗ್ಧರೆ

ಭರದಿಂದಂ ಜಾತರೂಪಾಕೃತಿಯನಿರದೆ ತಾಳ್ದಿರ್ದ ಸೌವರ್ಣಪೂಜ್ಯೋ
ದ್ಧುರವತ್ವಾದಂಗಳಿಂದಂ ಮೆಱೆದು ನಿರವಧಿಸ್ಥೈರ್ಯದಿಂದೊಪ್ಪಿ ತಾಂ ಮಂ
ದರಮೆಂಬಂತಿರ್ದ ಯೋಗೀಶ್ವರನನುರುಕಳಾವಾಸನಾಗಿರ್ದ ರಾಜಂ
ವರರಾಗಂ ಚಿತ್ತದೊಳ್ ಕೈಮಿಗುತಿರೆ ಬಲಗೊಂಡಂ ಮಹಾಭಕ್ತಿಯಿಂದಂ ೪೮

ವಚನ : ಅಂತು ಮೂಱುಸೂಳ್ವರಂ ಬಲಗೊಂಡು ಮೂಱುಬಾರಿ ಜಯಜಯ ಘೋಷಣಂಗೆಯ್ದು ಮಣಿಕನಕರಜತಮಯಂಗಳಾದ ಭಾಜನಂಗಳೊಳ್ ತುಂಬಿ ತಂದರ್ಚನಾದ್ರವ್ಯಂಗಳಿಂ ಪಾದಾರ್ಚನಾವಿರಚನಾನಂತರಂ ಪಂಚಮುಷ್ಟಿಪರಿನಿಷ್ಠಿತಾಂಗಯಷ್ಟಿಯಾಗಿ ವಂದನೆಯಂ ಮಾಡಿ ಮುಂದೆ ನೆಲದೊಳ್ ಕುಳ್ಳಿರ್ದು ನಿಟಿಳತಟಘಟಿತಾಂಜಳಿಪುಟನಾಗಿರ್ಪನ್ನೆಗಂ

ಕಂದ : ಅಗಣಿತ ದಯಾಂಬುನಿಧಿ ಶೀ
ತಗುಮೆನಿಸುವ ಯೋಗಿಯೋಗನಿಷ್ಠಾಪನೆಯಂ
ಮಿಗೆಮಾಡಿ ಪರಸಿ ಮುಖದಿಂ
ನೆಗೆದುದು ಪರಧರ್ಮವೃದ್ಧಿಯೆಂಬೀ ನಿನದಂ ೪೯

ವಚನ : ಅನಂತರಂ

ಚಂಪಕಮಾಲೆ

ಮದಮುದಯಕ್ಕೆ ಕಾರಣಮಿದೆನಿಸಿರ್ದ ಸಮಸ್ತರಾಜ್ಯಸಂ
ಪದಮೊದವೆತ್ತಮಿಾ ವಿನಯರೂಪಸಮುತ್ಕರುಷಂ ದಲೆತ್ತಮಿಂ
ತಿದು ನವಪುಣ್ಯದಿಂದೆ ದೊರೆಕೊಂಡುದು ಭಾವಿಪೊಡೀನ್ನಪಂಗಮೆಂ
ದುದಿತಕೃಪಾರಸಂ ಬಿಡದೆ ನೋಡಿದನಾತನನಾ ಮುನೀಶ್ವರಂ ೫೦

ವಚನ : ಬಳಿಯಂ ನಿರ್ಭರಭಕ್ತಿಯಿಂದಾ ಸಾರ್ವಭೌಮಂ ರೋಮಾಂಚಚರ್ಚಿತ ಶರೀರನಾಗಿ ತನ್ಮುನೀಂದ್ರಚರಣಾರವಿಂದಮಂ ತನ್ನಯ ದಂತಪಂಕ್ತಿಕಾಂತಿಸಂತತಿಯೆಂಬ ಹರಿಚಂದನ ಚರ್ಚೆಯಿಂದರ್ಚಿಸುತ್ತುಮಿರ್ದಪನೆಂಬಂತೆ ಬಿನ್ನಪಂಗೆಯ್ದಿಂತೆಂದಂ

ಕಂದ : ದೂರಂ ಪೋಗಿಯು [1]ಪಾ[1]ವನ
ಚಾರುಶ್ರೀಪದಮನೀಕ್ಷಿಸಲ್ವೇಳ್ಪುದು ಮ
ತ್ತೋರಂತಾತನೆ ಬಂದೊಡೆ
ಧಾರಿಣಿಯೊಳಗಾನೆ ಧನ್ಯನಾನೆ ಕೃತಾರ್ಥಂ ೫೧

ಉತ್ಪಲಮಾಲೆ

ಇಂದು ಮುನೀಶ ನಿನ್ನ ಚರಣಾಂಬುಜ ಸಂಗತಿಯಿಂದಮಾದೆ ನಾ
ನಿಂದು ಸಮಾನಕೀರ್ತಿಯುತಸುನ್ನತಪುಣ್ಯನಿವಾಸನಾದೆನೀ
ದಂದುಗದಿಂದ ಪುಟ್ಟುವ ಕುದುಃಖಪರಂಪರೆಯೆಂಬ ತಾಪಮಂ
ಕುಂದಿಸಿದಾತನಾದೆನುರುಶಾಶ್ವತಲಕ್ಷ್ಮಿಯೊಳೊಂದಿ [2]ಬ[2]ಳ್ದಪೆಂ ೫೨

ಚಂಪಕಮಾಲೆ

ದಿನಪನ ಮುಂದೆ ಕತ್ತಲೆಯ ಮೊತ್ತದಗುರ್ವು ತೆರಳ್ದು ಪೋಪವೊಲ್
ಘನನೆನಿಸಿರ್ದ ದಳ್ಳುರಿಯ ಮುಂದರಗೆಂತು ಕರಂಗಿಪೋಕುಮ
ತ್ತನಿಲನ ಮುಂದೆ ವಾರಿಧರದೊಡ್ಡು ಕರಂ ಪರಿದೋಡಿ ಪೋಪವೊಲ್
ಮುನಿಪತಿ ನಿನ್ನ ಮುಂದೆ ದುರಿತಪ್ರಕರಂ ನೆಱಕೆಟ್ಟುಪೋಗದೇ ೫೩

ಅನುಪಮಮಾದ ಮುತ್ತೆ ಬೆಳಗಂ ಸಲೆ ಪಾರದ ದೋಷಮಾತ್ರಮಂ
ಜನಿ ತನಗಿಲ್ಲದಂತರಿತಮಂ ವಿಶದೀಕರಿಸುತ್ತುಮಿರ್ಪ ಸ
ನ್ಮುನಿಪತಿ ನಿನ್ನ ಬೋಧಮಯದೃಷ್ಟಿಗಗೋಚರಮಾದ ವಸ್ತು ತಾಂ
ಘನಪಥಪುಷ್ಪಸನ್ನಿಭಮದೆಂದುಱತಭಾವಿಪುದೆನ್ನಮಾನಸಂ ೫೪

ಕಂದ : ನಿನ್ನಯ ಸಂದರ್ಶನದಿಂ
ದೆನ್ನಿಷ್ಟಂ ಸಿದ್ಧಮಾಯ್ತದು ತಾಂ ಬೇಗಂ
ನಿನ್ನಿಂದಱಯಲ್ಪಟ್ಟೊಡ
ಮೆನ್ನ ಜಡತ್ವಾತಿರೇಕದಿಂ ಪೇಳ್ವೆನದಂ ೫೫

ವಚನ : ಅದೆಂತೆಂದೊಡೆನ್ನೀ ಪ್ರಾಣಪ್ರೀತೆಯಪ್ಪ ಕುಲಸ್ತ್ರೀಗೆ ಕಾಲದೊಳಾದೊಡಂ ಪುತ್ರಲಾಭಮಾಗದಿರ್ದುದು ರಾಜ್ಯ[3]ಭಾರಧಾ[3]ರಣಧೌರೇಯನಪ್ಪ ಕುಮಾರನ ಸೊರ್ಪಸನಾದೊಡಂ ಕಾಣದ ಕಾರಣಮಾಗಳೀ ಚತುಸ್ಸಮುದ್ರಾಂಕಿತಮಾದಮೇದಿನೀ

[1] ಮಾ (ಜ) [2] ಬಿ (ಜ) [3] ಧಾ (ಜ)

ಮಂಡಳಮೆನ್ನಯ ಬಾಹುದಂಡಕ್ಕೆ ಕೇವಳಂ ಭಾರಮಾಗಿ ತೋಱುತ್ತಮಿರ್ದಪುದದಱಿಂ ದಾನತಿಕ್ಲೇಶಮುಂ ತಾಳ್ದಿದೆಂ

ಉತ್ಪಲಮಾಲೆ

ಧರ್ಮಮುಮರ್ಥಮುಂ ಬಿಡದೆ ಕಾಮಮುಮೆನ್ನೊಳಗೊಂದಕೊಂದು ಸಾ
ನಿರ್ಮಡಿಯಾಗಿ ಪೆರ್ಚಿದುದು ಮತ್ತಿರದೀಗಳುಮೆನ್ನ ಮಾನಸಂ
ನಿರ್ಮಳಮಪ್ಪ ಮೋಕ್ಷಸುಖಮಂ ಪಿರಿದುಂ ಬಯಸುತ್ತುಮಿರ್ದೊಡಂ
ಪೆರ್ಮೆಯೊಳೊಂದುಮಾತ್ಮಭವಲಾಭಮದಿಲ್ಲದೆ ಮಾಣ್ದು ಬಳ್ದಪೆಂ ೫೬

ಎಮ್ಮಯ ವಂಶದೊಳ್ ನೆಗಳ್ದ ಭೂಪತಿಗಳ್ ಮಹಪುಣ್ಯರೆಲ್ಲರುಂ
ತಮ್ಮಯ ಕೆನ್ನೆಯೊಳ್ ನರೆಯನೀಕ್ಷಿಸಿದಾಕ್ಷಣದಲ್ಲಿ ರಾಜ್ಯಮಂ
ಸಮ್ಮದದಿಂದಮಾತ್ಮಭವರ್ಗಿತ್ತು ಜಿನ ದೀಕ್ಷಿತರಾದರಂತದ
ಕ್ಕೆಂ ಮನಮುಳ್ಳೊಡಂ ತನುಜರಿಲ್ಲದುದಕ್ಕಡಸಿತ್ತು ವಿಘ್ನಕಂ ೫೭

ಕಂದ : ಎಂದಾದಪನೀ ಲಲನೆಗೆ
ನಂದನನುರುರಾಜ್ಯಭಾರಧುರಧರನೆಂಬೀ
ಸಂದೇಹಮೆನ್ನ ಮನದೊಳ್
ಕುಂದದೆ ನೆಲಸಿರ್ದುದೆಂದು ಬಿನ್ನಯಿಸಲೊಡಂ ೫೮

ವಚನ: ಆಗಳಾ ಭೂಪಾಳ[1]ನಂ[1] ಮನದೊಳವಧರಿಸಿ ತನ್ಮುನೀಂದ್ರಚಂದ್ರಂ ತನ್ನಯ ದಶನರಶ್ಮಿವಿಸರಮೆಂಬ ಸುಧಾರಸಧಾರಾಪೂರದಿಂದಾತಂಗೆ ರಾಜ್ಯಾಭಿಷೇಕಮಂ ಮಾಳ್ಪಂತೆ ಮೃದುಮಧುರಗಂಭೀರಧ್ವನಿಯಿಂದಿಂತೆಂದಂ

ಉತ್ಪಲಮಾಲೆ

ನೀನೆ ಕೃತಾರ್ಥಕಂ ಬಗೆಯೆ ನೀನೆ ವಿಶೇಷಿತ ಭಾಗ್ಯಭಾಜನಂ
ನೀನೆ ಸಮಸ್ತ ಸೌಖ್ಯನಿಧಿ ನೀನೆ ಜಗತ್ರಯದಿಂದೆ ವಂದ್ಯನುಂ
ನೀನೆ ವಿಶಿಷ್ಟಲಕ್ಷ್ಮಿಗೆ ನಿವಾಸನುಮೆಂದೊಡೆ ನಿನ್ನ ಪೆರ್ಮೆಯಂ
ಮಾನವರಾವರೇ ಪೊಗಳಲುರ್ವರೆಯೊಳ್ ನರನಾಥಶೇಖರಾ ೫೯

ಕಂದ: ನದಿಗಳ್ಗೆ ಸಿಂಧುವೆಂತಾ
ಸ್ಪದಮಾದುದದಂತೆ ಸಕಳಮಾಂಗಲ್ಯಕ್ಕಂ
ಪದಮಾಗಿರ್ದಪೆಯೆಂದೊಡೆ
ಪಡೆಪಿಂ ನಿನ್ನಳವದನ್ಯಸಾಧಾರಣಮೇ ೬೦

---

1 ನಮಂ (ಕಚ)

ಮೂಱುಂ ಜಗಮುಂ ನಿನ್ನೀ
ಮೀಱಿದ ಜಸಮೆಂಬ ಪಾಲ ಮುನ್ನೀರೊಳ್ ತಾಂ
ಬೇಱೊಂದು ನೊರೆಯ ತೆಱದಿಂ
ತೋಱುವುದಾದಪುದು ವಂದಿಜನಮಂದಾರಾ ೬೧

ಸ್ರಗ್ಧರೆ

ಇಂತಪ್ಪೀ ಚಿಂತೆಗಂ ಭಾಜನನವನಿಪ ನೀನಾಗೆ ತೀವ್ರಪ್ರಕಾಶಂ
ಧ್ವಾಂತಕ್ಕೆಂತಲ್ತು ತಾಂ ಭಾಜನಮವನಿಯೊಳಾಂ ಕ್ಷುಲ್ಲಕಂ ತಪ್ಪದೆಂಬೀ
ಭ್ರಾಂತಂ ಬಿಟ್ಟರ್ಪುದಿನ್ನಾದಪೆ ನಿಖಿಳಜನಾನೀಕದಿಂ ಪೂಜ್ಯನುಂ ನಿ
ನ್ನಂತಾವಂ ಜನ್ಮಸಾಫಲ್ಯಮನಱೆ ಪಡೆದಂ ಭೂಪರೊಳ್ ಧರ್ಮಪಾಲಾ ೬೨

ಕಂದ: ತ್ರಿಜಗದ್ಗುರುವೆನಿಸುವ ಧ
ರ್ಮಜಿನಾಧೀಶಂಗೆ ತಂದೆಯಾದಪೆಯೆಂದೊಡೆ
ನಿಜಪುಣ್ಯದೇಳ್ಗೆ ಲೋಕದೊ
ಳಜಸಿಸಿದುದು ಪಿರಿದುಮದ್ಭುತತ್ವದ ಪೆಂಪಂ ೬೩

ವಚನ: ಪುತ್ರಂ ನಿನ್ನ ಪತ್ನಿಯಪ್ಪ ಸುವ್ರತಮಹಾದೇವಿ ಸಾಮಾನ್ಯಳಲ್ತು

ಕಂದ: ಲಾವಣ್ಯಮೆಂಬ ರಸದಿಂ
ತೀವಿರ್ದ ಸಮುದ್ರವೇಳೆಯಂತೆಸೆದಿರ್ದೀ
ದೇವಿ ನಿಜಗರ್ಭದೊಳ್ ಸ
ದ್ಭಾವದೆ ತಾಳ್ದಪಳನರ್ಘ್ಯರತ್ನಮನಾದಂ ೬೪

ದುರಿತವಿಷಾಪಹರಂ ಭಾ
ಸುರಕಾಂತಿ ಸಮೇತಮಖಿಳಜನಸಂಸ್ತುತ್ಯಂ
ವರಮಾ ಸ್ತ್ರೀರತ್ನಂ ತಾಂ
ಧರ[1]ಣೀತ್ರಯ[1] ಪೂಜ್ಯಮೆಂದು ಬಗೆ ನೀಂ ಮನದೊಳ್ ೬೫

ಉತ್ಪಲಮಾಲೆ

ಇನ್ನಱುದಿಂಗಳುಂ ನೆಱೆಯೆ ಪೋಪಬಳಿಕ್ಕ ಚತುರ್ದಶಾಧಿಕಂ
ಸನ್ನುತನಪ್ಪ ಧರ್ಮಜನನಾಯಕನೀಕೆಯ ಗರ್ಭದಲ್ಲಿಗ
ತ್ಯುನ್ನತಬೋಧಿ ಬಂದಪನಿದಂ ಸಲೆನಂಬು ಸುಧಾಂಶುಮಾಲಿಬಿಂ
ಬಂ ನಭದಿಂದೆ ಬಂದು ಕೊಳದೊಳ್ ಪ್ರತಿಬಿಂಬಿಸುವಂತೆ ರಾಗದಿಂ ೬೬

1 ಣೀತಳ (ಜ)

ಕಂದ : ಸರ್ವಾರ್ಥಸಿದ್ಧಿಯಿಂದಂ
ನಿರ್ವೃಜಿನಜಿನಾಧಿನಾಥನೆಳ್ತಂತದಪನೀ
ಸರ್ವವಿನೂತೆಯ ಗರ್ಭ
ಕ್ಕುರ್ವರೆಗಾಶ್ಚರ್ಯಭಾವಮಂ ಮಾಡುತ್ತುಂ ೬೭

ಉತ್ಪಲಮಾಲೆ

ಕ್ಸಲ್ಲಕರಪ್ಪ ಮಕ್ಕಳುಗಳಂ ಪಡೆವಂಗನೆಯರ್ ಪಲಂಬರಂ
ತುಳ್ಳೊಡಮೇನು ಪುಣ್ಯನಿಧಿಯಾದ ಸುಪುತ್ರನನೊರ್ವನಂ ಕರಂ
ಸಲ್ಲಲಿತಾಂಗನಂ ಪಡೆವ ಕಾಮಿನಿ ಧನ್ಯೆಯದೆಂತು ಪೂರ್ವದಿ
ಗ್ವಲ್ಲಭೆ ಚಂದ್ರನಂ ಪಡೆವಳೊರ್ವಳೆ ಸಾಲದೆಯನ್ಯರಿಂದವೇಂ ೬೮

ಶಾರ್ದೂಲವಿಕ್ರೀಡಿತ

ಇಂತಪ್ಪಾತ್ಮಜಲಾಭಮಲ್ಲದೆ ದಲೀ ಸಂಸಾರಿಗಳ್ಗಂ ಮಹಾ
ಸಂತೋಷಂ ಪೆಜತುಂಟೆ ನೋಳ್ಪೊಡಧಿಕಂ ನಾವಿರ್ವರೇ ಮಾನ್ಯರ
ತ್ಯಂತಂ ಭೂತ್ರಯದಲ್ಲಿಯೆಮ್ಮಯ ಲಸತ್ಸಾಹಸ್ಥ್ಯಮುಂ ಕಲ್ಪಪ
ರ್ಯಂತಂ ಶ್ಲಾಘ್ಯತೆಯಂ ಸಮಂತು ಪಡೆಗೆಂದಾನಂದಮಂ ತಾಳ್ದಿರಿಂ ೬೯

ವಚನ : ಎಂದಾ ಮುನೀಶ್ವರಂ ತನ್ನಯ ವಚನವಿಶೇಷದಿಂದಾ ದಂಪತಿಗಳ ಮನೋಗತ ಚಿಂತಾವಿಷಾದಮಂ ಪರಿಹರಿಸಿದೊಡಮಾಕ್ಷಣದೊಳವರಪರಿಮಿತ ಪರಮಾನುರಾಗರಸಮಂತರಂಗದೊಳ್ ತುಂಬಿ ತುಳುಂಕಾಡಿ ಪನಣಿಸದೆ ಪೊಜಪೊಣ್ಮಿದುದೆಂಬಂತೊರ್ಮೊದಲೊಳ್ ನಿಬಿಡಮಾಗೆ ನೆಗೆದ ಪ್ರಮೋದಾಶ್ರುಪ್ರವಾಹದಿಂ ವಿಪುಳಪುಳಕಾಂಕುರಂ ಪೆರ್ಚಿ ಭಾವಿ ಸುತೋದಯಶ್ರವಣದಿಂದಾದ ಸಂಮುದದಿಂದವರಡಿಗೀರ್ವರು ಮಡಿಗಡಿಗೆ ಪೊಡೆವಡುತ್ತುಂ ಮತ್ತಮುದಭ್ರಸಂಭ್ರಮಸಂಜಾತಗದ್ಗದವಚನದಿಂದಾ ನೃಪಾಳತಿಳಕನಿಂತೆಂದಂ

ಶಾರ್ದೂಲವಿಕ್ರೀಡಿತ

ಆವ ಸ್ವರ್ಗದೊಳಿರ್ದಪಂ ಪರಮಸಮ್ಯಕ್ತ್ವಂ ದಲಾತಂಗೆ ಮ
ತ್ತಾವ ಪ್ರೋದ್ಭವದಲ್ಲಿಯಾದುದು ಜಿನಾಧೀಶತ್ವಮಂ ಮಾಳ್ಪ ಪು
ಣ್ಯಾವಿರ್ಭಾವಮದಾವಜನ್ಮದೊಳಗಾಯ್ತಿಂತೆಲ್ಲಮಂ ವಿಸ್ತರಂ
ನೀವೀ ಪೂರ್ವಭವಾನುಬಂಧಮನಿದಂ ಪೇಳಲ್ಕೆವೇಳ್ಕುಂ ಕರಂ ೭೦

ಕಂದ : ಭಾವಿ ಜಿನಪತಿಯ ಪೂರ್ವಭ
ವಾವಳಿಯುಂ ಕೇಳ್ವ ವಾಂಛೆಯೆನ್ನಯ ಮನದೊಳ್
ಪೀವರಮಾಗಿರ್ದಪುದೆಂ
ದಾ ವಸುಧಾಧೀಶನಾಗಳವರಂ ಕೇಳ್ದಂ ೭೧

ವಚನ : ಅನಂತರಂ

ಮಹಾಸ್ರಗ್ಧರೆ
ಅವಧಿಜ್ಞಾನಂ ದಲೆಂಬೀಕ್ಷಣವಿಕಸನಮಂ ಮಾಡಿದಂ ಯೋಗಿಮುಖ್ಯಂ
ಪ್ರವರಾಚಾರಂ ಜಿನಾಧೀಶ್ವರನುತಗಗನೋಜ್ಜೃಂಭಮಾಣಾರ್ಕರೂಪಂ
ನವತೇಜೋರಾಜಿತಂ ಬಾಹುಬಲಿ ಸುಕವಿರಾಜಂ ಸುದುಸ್ಸಹ್ಯಚೇತೋ
ಭವದುರ್ಗರ್ವಾದ್ರಿಚೂರ್ಣೀಕರಣಪವಿಧರಂ ಚಾತುರೀಜನ್ಮಗೇಹಂ ೭೨

ಗದ್ಯ : ಇದು ಸಕಳಭುವನಜನವಿನೂಯಮಾನಾನೂನ ಮಹಿಮಾಮಾನನೀಯ
ಪರಮಜಿನಸಮಯಕಮಳಿನೀಕಳಹಂಸಾಯಮಾನ ಶ್ರೀಮನ್ನಯಕೀರ್ತಿ
ದೇವಪ್ರಸಾದಸಂಪಾದಪಾದನಿಧಾನದೀಪವರ್ತಿಯುಭಯಭಾಷಾ
ಕವಿಚಕ್ರವರ್ತಿ ಬಾಹುಬಲಿಪಂಡಿತದೇವ ಪರಿನಿರ್ಮಿತಮಪ್ಪ
ಧರ್ಮನಾಥ ಪುರಾಣದೊಳ್ ಮುನೀಂದ್ರವಂದನಾ
ನಿಮಿತ್ತಂ ಯಾತ್ರೋತ್ಸವವರ್ಣನಂ

**ತೃತೀಯಾಶ್ವಾಸಂ**

# ಚತುರ್ಥಾಶ್ವಾಸಂ

ಕಂದ: ಶ್ರೀದಯಿತಂ ಸಕಳಜನಾ
ಹ್ಲಾದಿ ವಿಬೋಧಪ್ರಯೋಗದಿಂ ರಾಗಿಸಿದಂ
ಮೇದಿನಿಪತಿ ಪರಿಪೂಜಿತ
ಪಾದಯುಗಂ ಸರಸಚತುರಕವಿಕುಳತಿಳಕಂ ೧

ವಚನ: ಆಗಳಾ ಮುನಿನಾಯಕಂ ನಿಜಪರಮಾವಧಿಬೋಧದಿಂದಾ ಜನಾಧಿನಾಯಕನ ಪಿಂದಣ ಜನ್ಮವೃತ್ತಿಯುಂ ತನ್ನಂಗೈಯೊಳಗಣ ಸ್ಫಟಿಕಮಣಿಯಂತತಿವ್ಯಕ್ತಮಾಗಱಿದು ವೃತ್ತಾಂತದೊಳ್ ಸಾಕ್ಷೀಭೂತಪ್ರಮಾಣಪುರುಷನಂತೆ ಸಂತೋಷೋತ್ಪಾದಕಮಾದ ಮೃದುನಿನಾದದಿಂದಿಂತೆಂದಂ

ಚಂಪಕಮಾಲೆ

ಜಿನನ ಚರಿತ್ರದೊಂದುಕಥೆಯಂ ನೆಱೆಪೇಳ್ದೊಡೆ ಕೇಳ್ದೊಡಂ ದಲಾ
ತನ ದುರಿತಂಗಳೆಯ್ದೆ ಪರಿದೋಡುಗುಮಿಾ ಹಿತವಸ್ತುಸಿದ್ಧಿಯುಂ
ಜನಿಯಿಕುಮಂತು ಕಾರಣಮೆ ನೀಂ ಬೆಸಗೊಂಡ ಭವಾಂತರಪ್ರಪಂ
ಚನಮುನದೆಂತುಟಂತುಸುರ್ದೆ ನಾನಿದನೀಗಳೆ ಕೇಳ್ ನೃಪಾಗ್ರಣೀ ೨

ವಚನ: ಅದೆಂತೆಂದೊಡೆ ಮೇರುಗಿರಿಗಳಿಂ ದ್ವಿಗುಣಮಾದ ವಿಸ್ತಾರದಿಂ ಚತುರ್ಗುಣಮುದಾಗಿರ್ದಂತೆ ತಾನೆನ್ನಯ ಪೆಸರಿಂದಂ ಮುಖ್ಯಮಪ್ಪ ಪೆಸರನಾಂತುದೆಂಬೀ ಕೋಪದಿಂದನೂನವಾಹಿನೀಸಹಿತಮಾಗಿ ಬಂದು ಸುತ್ತಿಮುತ್ತಿಕೊಂಡಿರ್ದುದೆಂಬಂತೆ ಧಾತಕೀಷಂಡದ್ವೀಪಂ ಲವಣಸಮುದ್ರಸಮೇತಮಾದ ಜಂಬೂದ್ವೀಪಮಂ ಬಳಸಿಕೊಂಡಿರ್ಕುಮಾ ಧಾತಕೀಷಂಡದ್ವೀಪದಲ್ಲಿ

ಚಂಪಕಮಾಲೆ

ಬಹುವಿಧನೂತ್ನರತ್ನಚಯನಿರ್ಮಿತಚೈತ್ಯನಿಕೇತನಂಗಳಿಂ
ಸಹಿತಮನಲ್ಪಕಲ್ಪತರುನಂದನರಾಜಿವಿರಾಜಿತಂ ಮಹಾ
ಮಹಿಮಸಮನ್ವಿತಂ ರತಿಸಮುತ್ಸುಕಮಾನಸದೇವದಂಪತೀ
ಸ್ಪೃಹಿತವಿಶಾಲಕಂದರಮದೊಪ್ಪುಮನಾಳ್ದುದು ಪೂರ್ವಮಂದರಂ ೩

ಕಂದ : ಅಂಬರತಳಮೆಯ್ದೆ ನಿರಾ
ಲಂಬಂ ಮುಱಿದೀ ಧರಿತ್ರಿಯೊಳ್ ಬಿಳ್ದಪುದೆಂ
ದಂಬುಜಜಂ ನಟ್ಟಿರಿಸಿದ
ಹೊಂಬಣ್ಣದ ಕಂಭಮೆಂಬಿನಂ ರಂಜಿಸುಗುಂ ೪

ವಚನ : ಆ ಪೂರ್ವಮೇರುಗಿರಿಯ ಪೂರ್ವದಿಶಾಪ್ರದೇಶದಲ್ಲಿ

ಕಂದ : ಚಾರುಜಿನಧರ್ಮಗೇಹಂ
ಸಾರತರಾಗಣ್ಯಪುಣ್ಯಜನಸಂದೋಹಂ
ಭೂರಿಸೌಖ್ಯಾವಗಾಹಂ
ರಾರಾಜಿಸುತಿರ್ದುದಮಮ ಪೂರ್ವವಿದೇಹಂ ೫

ತಿಂಗಳ್ಗೆ ಮೂಱುಮಳೆಗಳ್
ಪಿಂಗದೆ ಪದನಾಗಿ ಕೊಳ್ವನಲ್ಲಿಯ ಬೆಳೆಯುಂ
ಕಂಗದ್ಭುತಮಂ ಪೆರ್ಚಿಪು
ದಂಗೀಕೃತಬಹಳಧಾನ್ಯಮಂಜರಿಕೆಗಳಿಂ ೬

ಮತ್ತೇಭವಿಕ್ರೀಡಿತ

ಬಱನಿಲ್ಲಾಱಡಿಯಿಲ್ಲ ಕಳ್ಳರ ಭಯಂ ಮುನ್ನಿಲ್ಲ ಬೆರ್ಚಿಲ್ಲ ದಲ್
ಮಱೆಯೇಱಿಲ್ಲ ವಿಪತ್ತಿಯಿಲ್ಲ ರುಜೆಯಿಲ್ಲುತ್ಪಾತಮಿಲ್ಲಾವಗಂ
ಸೆಱೆಕೊಳ್ಳಿಲ್ಲ ನಿರೋಧಮಿಲ್ಲ ಪಿಡಿಕಟ್ಟಿಲ್ಲುದ್ಘಸಂಪತ್ತಿಯಿಂ
ಮೆಱೆವಾ ಪೂರ್ವವಿದೇಹದೊಳ್ ಕುಮತವಾರ್ತಾವೃತ್ತಿಯಿಲ್ಲಿಲ್ಲಿಯುಂ ೭

ಕಂದ : ಜಿನಪತಿಯ ಸಮವಸರಣಂ
ಘನಮೊಪ್ಪುತ್ತಿರ್ಪುದಾವಕಾಲದೊಳಂ ತ
ನ್ಮನುಜರ್ ಪರಮಾಯುಷ್ಯರ್
ತನುಗಳವಯ್ನೂಱುಬಿಲ್ಗಳುತ್ಸೇಧಂಗಳ್ ೮

ವಚನ : ಇಂತದ್ಭುತಾತಿಶಯಮನುಳ್ಳ ಪೂರ್ವವಿದೇಹದ ಮಧ್ಯದೊಳ್

*

ಚಂಪಕಮಾಲೆ

ವಿಚಲದತುಚ್ಛಮತ್ಸ್ಯಮಕರೋತ್ಕರಕರ್ಕಶಕರ್ಕ[1]ಶಾ[1]ವಳೀ
ನಿಚಿತೆ ತಟಾಂತರಾಳಕಳಯುಜ್ಜ್ವಳಬುದ್ಬುದಜಾತೆ ನೂತನ
ಪ್ರಚುರಸ[2]ಮು[2]ಚ್ಚಲತ್ಸಲಿಲಬಿಂದುವಿರಾಜಿತೆ [3]ಫೇ[3]ನಫೇನವೈ
ಕಚಯುತೆ ಸೀತೆಯೆಂಬ ತೊಱೆ ತೋಱುತಿರ್ದುದು ವಿಸ್ಮಯತ್ವಮಂ ೯

---

1 ಟಾ (ಜ) 2 ಮ (ಗಜ) 3 ಪೀ (ಜ) * ಸೀತಾನದಿಯ ವರ್ಣನೆ (ಗ)

ಮತ್ತೇಭವಿಕ್ರೀಡಿತ

ಸುಕನತ್ಕಂಕಣಯುಕ್ತೆ ಚಂಚಲಲ[1]ಸ[1]ನ್ಮೀನಾಕ್ಷಿ ಭಾಸ್ವತ್ಪ್ರವಾ
ಳಕೆ ಪದ್ಮಾನನೆ ನಿರ್ಮಲಾಕೃತಿ ಮಹಾರಾಮಾನ್ವಿತೆ ಸ್ಫೂರ್ತಿಸು
ತ್ಸ್ವಕವಿಸ್ತೃತ್ಯೆ ಕುಲೀನೆ ಸತ್ಕ್ಕವಳಯಪ್ರಖ್ಯಾತೆಯಾಗಿರ್ದ ಮಂ
ಜುಕೆ ಸೀತಾನದಿ ರಂಜಿಸಿತ್ತು ವಿಗೆ ಸೀತಾದೇವಿಯೆಂಬಂದದಿಂ ೧೦

ಮಹಾಸ್ರಗ್ಧರೆ

[1]ಪಿರಿದುಂ[1] ತೀರಂಗಳೆಂಬ ಪ್ರವಿಲಸದಧರೋಷ್ಠಂಗಳಿಂ ರಮ್ಯಮಾಗಿ
ರ್ದಿರುಮೀನವ್ರಾತಮೆಂಬ ಸ್ಫುರಿತತರ ರದಶ್ರೇಣಿಯಿಂದೊಪ್ಪಿ ವಾರಿ
ತ್ವರಮೆಂಬುತ್ಕೃಷ್ಟಜಿಹ್ವಾಗ್ರದಿನುಱ ಮೆಱಿದಂಭೋಜರೇಣುಪ್ರರಾಗಂ
ಧರೆಯೆಂಬೀ ಕಾಂತೆ ಬಾಯಂ ತೆಱದವೊಲೆಸೆವುತ್ತಿರ್ದುದಾ ಸಿಂಧುವೆತ್ತಂ ೧೧

ಕಂದ: ವಿರಹಿಣಿಯಂತುತ್ಕಳಿಕಾ
ಭರಿತಂ ಗೋವಿಂದನಂತೆ ಕಮಲೋಪೇತಂ
ಸ್ಮರನಂತೆ ಮಕರಯುಕ್ತಂ
ಧರಣಿಯೊಳಾ ನದಿ ವಿಚಿತ್ರಮಾದುದು ಪಿರಿದುಂ ೧೨

ವಚನ: ಮತ್ತಮುಭಯಕೂಲವರ್ತಿ ನರನಾರೀಜನಂಗಳ್ ಜಳಕೇಳೀವಿನೋದಾರ್ಥಮಾಗಿ ಬಂದು ಚಂದ್ರಕಾಂತಶಿಲಾಮಯಂಗಳಾದ ಕೂಲಂಗಳ ಶೋಭಾವಿಲೋಕನ ಕೌತೂಹಳಸಮಾಕುಳಿತೆಯರ್ ತಮ್ಮಯ ಕಟಾಕ್ಷವಿಕ್ಷೇಪ ಪರಂಪರಾವ್ಯಾಪಾರಮನಲ್ಲಿ ಬಿತ್ತರಿಸಲೊಡಮೆಡೆವಱಯದೆ ಪಗಲೊಳೊಸರ್ವುದಱಂದಂ ಚಂದ್ರಮನ ಚಂದ್ರಿಕಾಪ್ರಸರದಿಂದಿರುಳೊಸರ್ವುದಱಂದಂ ಪುಟ್ಟಿದ ನೀರಸೀಕರಾಪೂರಂಗಳಿಂ ತುಂಬಿ ಪಗಲುಮಿರುಳುಮೆಲ್ಲಾ ಕಾಲದೊಳಮೆಡೆಯುಡುಗದೆ ನಿಬಿಡಮಾಗೆನಡುಂತಡಿಗಳನೊರಸುತ್ತುಂ ಪರಿಪಸಾತಿಶಯಮಾದ ಸೀತಾನದಿಯ ತೆಂಕಣತೀರದಲ್ಲಿ

ಕಂದ: ಪಂಚೇಂದ್ರಿಯಸುಖವಿಷಯಂ
ಸಂಚಿತವಿತ್ತಪ್ರವಿತ್ತಜನತಾವಿಷಯಂ
ಪ್ರಾಂಚಿತಮಾನಸವಿಷಯಂ
ತಾಂ ಚೆಲ್ವಾಯ್ತೆ[2]ಯ್ದೆ ವತ್ಸಮೆಂಬುದು ವಿಷಯಂ ೧೩

ಸ್ತ್ರೀಜನಮೆಲ್ಲಂ ದಿವ್ಯ
ಸ್ತ್ರೀಜನಮೆ ಮನುಷ್ಯರೆಲ್ಲರುಂ ವಿಬುಧರೆ ಮ
ತ್ತಾ ಜನಪದಮುರುಲಕ್ಷ್ಮೀ
ಭಾಜನಕಂ ಸ್ವರ್ಗದಂತೆ ತಳೆದುದು ಪೆಂಪಂ ೧೪

[1] ಎರಡುಂ (ಜ) [2] ಚೈತ್ತೆ (ಜ)

ಮತ್ತೇಭವಿಕ್ರೀಡಿತ

ಮಣಿಗಳ್ ಪುಟ್ಟದ ಬೆಟ್ಟಮಿಲ್ಲ ಕಮಲಂಗಳ್ ಪುಟ್ಟದಚ್ಛಸ್ಸರೋ
ಗಣಮುಂ ನೋೞ್ಪಡಮಿಲ್ಲ ಪೊನ್ನ ಕಣಿಗಳ್ ತಾಂ ಪುಟ್ಟದ ಕ್ಷೇತ್ರಮಿ
ಲ್ಲಣುಮಾತ್ರಂ ಪರಮೌಕ್ತಿಕಂಗಳ ಸಮೂಹಂ ಪುಟ್ಟದುದ್ಯತ್ತರಂ
ಗಿಣಿ ಮತ್ತಿಲ್ಲತಿಶೋಭೆಗೆಯ್ದೆ ನೆಲೆಯಾದಾ ದೇಶದಲ್ಲೆಲ್ಲಿಯುಂ ೧೫

ಉತ್ಪಲಮಾಲೆ

ಏರಿಗಳೆಂಬ ಪುರ್ವುಗಳಿನೊಪ್ಪಮನಾಳ್ದತಿಶೋಭೆಯಿಂ ಮನೋ
ಹಾರಿಗಳಪ್ಪ ಪೆರ್ಗೆಱೆಗಳೆಂಬ ವಿಸಿಷ್ಟಲಲೋಚನಂಗಳಿಂ
ಭೂರಮೆ ದೇಶಸಂಪದಮನೀಕ್ಷಿಸಿ ತಾಂ ಕಳಮಾಂಕುರಂಗಳ
ಪ್ರೇರಣದಂಭದಿಂದೆ ಪುಳಕಾಂಕಿತೆಯಾದವೊಲೆಯ್ದೆ ರಂಜಿಕುಂ ೧೬

ಮಹಾಸ್ರಗ್ಧರೆ

ಪಿರಿದುಂ ಕುಲ್ಯಾವಿತಾನಂಗಳೊಳೊಗೆದ ವಿಕಾಸತ್ವನುಂ ತಾಳ್ದಿದಾ ಪಾಂ
ಡುರಪಂಕೇಜಂಗಳಿಂದಂ ಮೆಱೆವ ಬಹಳಸಸ್ಯಂಗಳಿಂ ತೀವಿಯೆಲ್ಲಂ
ಹರಿತಾಭಂ ಶಾಲಿವಪ್ರಸ್ಥಳಮತಿಶಯಿಸುತ್ತಿರ್ಪುದಾಕಾಶದೇಶಂ
ವರತಾರಾಕ್ರಾಂತಮಾಧಾರಕರಹಿತತೆಯಿಂ ಬಿಳ್ದುದೆಂಬಂದದಿಂದಂ ೧೭

ಉತ್ಪಲಮಾಲೆ

ಅಲ್ಲಿಯ ಸಾರಮಪ್ಪ ಬೆಳಸಂ ಸಲೆ ಕೊಯ್ದುಱೆ ತೀರ್ಚಲಾಱರಂ
ತಲ್ಲವೆ ಕೊಯ್ದೊಡಂ ತವೆಯಲೊಕ್ಕಿ ಸುರಾಶಿಗಳಂ ವಿನಿರ್ಮಿಸಲ್
ಸಲ್ಲರುಮಂತುಮಾಡಿದೊಡೆ ಲೆಕ್ಕಮಿಡಲ್ಕಣಮಾಱರಂತು ಮ
ತ್ತೆಲ್ಲಮನೆಯ್ದೆ ಲೆಕ್ಕಿಸಿದೊಡಂ ಮನೆಗೆಯ್ದಿಸಲಾಱರಂತವಂ ೧೮

ಕಂದ: ಧನಕನಕಧಾನ್ಯದಿಂದಂ
ಘನಪದಮಂ ಪಡೆದ ಸಕಳಸುಜನಜನಕ್ಕಂ
ವಿನುತಂ ಪದಮಾದುದಱಿಂ
ಜನಪದನಾಮಂ ಯಥಾರ್ಥಮಾದುದದಕ್ಕಂ ೧೯

ಚಂಪಕಮಾಲೆ

ರವಿಕಿರಣಂಗಳಿಂದೆ ನೆಱೆ ಬೆಂದ ತಟಸ್ಥಿತಸೂರ್ಯಕಾಂತಗೌ
ರವ ಶಿಲೆಯಲ್ಲಿ ಪೊನ್ ಕರಗಿ ತಾಂ ಪರಿಯುತ್ತದಲಿರ್ದುದೀಗಳೆಂ
ಬ ವಿಪುಳಶಂಕೆಯುಂ ಬಿಡದೆ ಪುಟ್ಟಿಸುತುಂ ಪರಿಯುತ್ತುಮಿರ್ಪ[1]ವ[1]
ಲ್ಲವಿರಳಪದ್ಮರೇಣುವಿಸರಪ್ರವಿರಂಜಿತ ಸಿಂಧುಗಳ್ ಕರಂ ೨೦

---

[1] ಮ (ಕಚ)

ಚಂಪಕಮಾಲೆ

ವಿಪುಳಫಳಾವಳಿಸ್ತಬಕಭಾರದೆ ಬಾಗುತುಮಿರ್ಪ ಚೂತಪೂ
ಗ ಪರಮನಾಳಿಕೇರಕದಳೀಪನಸಾಫಳಮಾತುಳುಂಗಪಂ
ತಿ ಪುರಸನಂಗಳಿಂದೆ ಪರಿರಂಜಿಸುತಿರ್ಪ ಸುದೇಶದಲ್ಲಿ ಸ
ರ್ವಪಥಿಕರೆಯ್ದೆ ಸಂಬಳಮನೊಲ್ಲದೆ ಪೋಗುತುಮಿರ್ಪರಾವಗಂ ೨೧

ಕಂದ: ವಿಪರೀತತೆ ವನದೊಳ್ ಪರಿ
ಕಿಪೊಡಂ ತಾಂ ರಾಜಬಾಧೆ ತಾವರೆಗೊಳದೊಳ್
ಚಪಳತೆ ಲಲನಾನಯನ ಸ
ಮುಪಚಯದೊಳಮಲ್ಲದಂತದಿಲ್ಲಾ ನಾಡೊಳ್ ೨೨

ವರವತ್ಸದೇಶಮೆಂಬು
ದ್ಧುರವತ್ಸದ ನಿಬಿಡಮಾದ ಪೊರ್ದುಗೆಯಿಂದಂ
ಧರೆಯೆಂಬ ಸುರಭಿ ಸುಖಮೆಂ
ಬುರುಪರಮಾಮೃತಮನೆಯ್ದೆ ಕಱಿಯುತ್ತಿರ್ಕುಂ ೨೩

ವಚನ: ಇಂತು ಪಿರಿದಪ್ಪ ಸಿರಿಗಾಡುಂಬೊಲನಾಗಿ ಮಾಡಿದ ನೂರ್ಮಡಿಗಾಡಿ
ಯೊಳ್ ಕೂಡಿದ ನಾಡಾಡಿಯಾಗಿರ್ದಾ ನಾಡಿನ ನಟ್ಟನಡುವೆ

ಮತ್ತೇಭವಿಕ್ರೀಡಿತ

ವರಮಾಣಿಕ್ಯಮಯಪ್ರಶಸ್ತಕಳಶವ್ರಾತಪ್ರಭಾಭಾರದಿಂ
ಪಿರಿದುಂ ವ್ಯೋಮದೊಳೆಯ್ದೆ ಮಿಂಚುಗಳ ಜೊಲ್ವಂ ಪುಟ್ಟಿಸುತ್ತಿರ್ಪ ಭಾ
ಸುರಸೌವರ್ಣವಿಚಿತ್ರಸೌಧಚಯದಿಂದೊಪ್ಪುತ್ತುಮಿರ್ಕುಂ ಕರಂ
ಪರಿರಾಜನ್ಮಣಿಗೋಪುರಂ ಸುಮಹಿಮಾಸೀಮಂ ಸುಸೀಮಾಪುರಂ ೨೪

ವಚನ: ಮತ್ತಮದಱ ಸುತ್ತಲುಂ

ಮತ್ತೇಭವಿಕ್ರೀಡಿತ

ಪಿರಿದುಂ ಪಣ್ಗಳ ಗೊಂಚಲಿಂದೆಸೆವ ರಂಭಾಚೂತನಾರಂಗ ಪೀ
ವರಜಂಭೀರಸುನಾಳಿಕೇರಪನಸಾದ್ಯತ್ಪೂಗಪೂರಂಗಳಿಂ
ವರಮಲ್ಲೀಘನನಾಗವಲ್ಲಿಲತಿಕಾವೃಂದಂಗಳಿಂ ಕೂಡಿ ತ
ತ್ಪುರಮಂ ಸುತ್ತಿ ವಿರಾಜಿಕುಂ ಬಹಳಶೋಭಾನಂದನಂ ನಂದನಂ ೨೫

ವಚನ: ಮತ್ತಮದಱಂತರ್ಭಾಗದೊಳ್

ಶಾರ್ದೂಲವಿಕ್ರೀಡಿತ

ಸ್ತ್ರೀರತ್ನಂಗಳ ನೊತ್ತದಿಂ ಪುರುಷರತ್ನವ್ರಾತದಿಂ ತುಂಬಿ ಱೊಂ
ದೋರಂತೊಪ್ಪುವ ಹೇಮಸತ್ತ್ರಕಳಸವೆಂಬಂತಿರ್ದ ಪೊಂಗೋಂಟೆಯುಂ
ತೋರಿತ್ತಾದಗಳೆಯ್ದೆ ಸುತ್ತಿ ಮೇಱೆಗುಂ ಕೃಷ್ಣಾಹಿಯಂತಾವಗಂ
ಘೋರಂ ತಾನೆನಿಸಿರ್ಪ ಭೂರಿವಿಷದಿಂದಂ ತುಂಬಿದೀಕಾರಣಂ ೨೬

ಚಂಪಕಮಾಲೆ

ಪೊಸತೆನಿಸಿರ್ದ ತನ್ನ ಘನಕಾಂತಿಪರಂಪರೆಯಂ ದಶಾಶೆಯೊಳ್
ಪಸರಿಸುತುಂ ನಿರೀಕ್ಷಿಪರ್ಗೆ ಚೋದ್ಯಮನಾಗಿಸುತಿರ್ಪ ಕಾರಣಂ
ವಸುಮತಿಯೆಂಬ ಕಾಮಿನಿಯ ಚಾರುಸುವರ್ಣದ ಕುಂಡಲಂ ದಲೆಂ
ಬೆಸಕಮನೆಯ್ದೆ ಸಂಗಡಿಸುತಿರ್ಪು[1]ದುಮ[1]ಲ್ಲಿಯ ಕೋಟೆ ಸುತ್ತಲುಂ ೨೭

ವಚನ: ಮತ್ತಮಲ್ಲಿಂದೊಳಗೆ

ಕಂದ: ನರರೆಲ್ಲರ್ ವಿಷಮಾಸ್ತ್ರರ್
ವರನಾರಿಯರೆಲ್ಲರುಂ ವಿದಗ್ಧೆಯರೆ ಮಹೋ
ದ್ಧುರ ಧನಿಕರೆಲ್ಲರುಂ ತ
ತ್ಪುರದೊಳ್ ನೆಱೆಜಾತರೂಪಯುಕ್ತರೆ ಚಿತ್ರಂ ೨೮

ವಚನ: ಅಂತುಮಲ್ಲದೆಯುಂ

ಉತ್ಪಲಮಾಲೆ

ವಂದಿಜನಕ್ಕೆ ಬೇಡಿದುದನೆಯ್ದೆ ಮನಂ ದಣಿವನ್ನಮಿತ್ತೊಡಂ
ಕುಂದದೆ ಪೆರ್ಚುಗಾ ಪುರದ ದಾನಿಗಳರ್ಥಮದೆಂತು ಸಜ್ಜನರ್
ಬಂದ ಪರರ್ಗೆ ತಮ್ಮಯ ಸುವಿದ್ಯೆಯನಿತ್ತೊಡೆ ಮತ್ತೆಮತ್ತೆಯುಂ
ಸೌಂದರಮಾಗಿ ಪೆರ್ಚುಗೆಯುಮೆಯ್ದುವುದಂತದುವುಂ ನಿರಂತರಂ ೨೯

ಚಂಪಕಮಾಲೆ

ಬಸದಿಗಳೆಯ್ದೆ ತಮ್ಮ ಶಿಖರಂಗಳ ಚೂಳಿಕೆಯಲ್ಲಿ ನಾಡೆ ಶೋ
ಭಿಸುವುರುಪದ್ಮರಾಗಕಳಶಪ್ರಭೆಯಿಂ ಪಗಲಂ ಸಮಂತು ರಾ
ತ್ರಿಸಮಯದಲ್ಲಿಯುಂ ಬಿಡದೆ ಮಾಳ್ಪುದಱಿಂ ಜನಮೆಲ್ಲಮಲ್ಲಿ ಭೇ
ದಿಸಲಣಮಾಱದಿರ್ಪುದಿರುಳುಂಪಗಲೆಂಬ ವಿಶೇಷಭಾವಮಂ ೩೦

1 ದದ (ಜ)

ಚಂಪಕಮಾಲೆ

ಒಸರ್ವ ಸುಧಾಂಶುಕಾಂತಗೃಹಮಂ ನೆಱೆಕಂಡಿರುಳೆಂಬಿದಂ ಸಮಂ
ತ್ರಿಸೆವುರುಸೂರ್ಯಕಾಂತಗೃಹದಿಂ ಕಿಡಿಗಳ್ ಬರುತಿರ್ಪುದಂ ನಿರೀ
ಕ್ಷಿಸಿ ಪಗಲೆಂಬಿದಂ ಪರಿಧಿರುದ್ಧಸುಧಾಂಶುದಿವಾಕರೋದಯೋ
ಲ್ಲಸದನುಮಾನದಿಂದನುಜಂಗಂ ನಗರೀಜನಮಂತದೆಲ್ಲಮಂ ೩೧

ವಚನ: ಇಂತು ಸಕಳಜನಂಗಳ ದಿಟ್ಟಿಗೆ ತೊಟ್ಟನೆ ಮುಟ್ಟಿದ ಸಂತುಷ್ಟಿಯುಂ ಪುಟ್ಟಿಸುತ್ತುಮಿರ್ಪಾ ಪಟ್ಟಣದ ನಟ್ಟನಡುವೆ

ಮತ್ತೇಭವಿಕ್ರೀಡಿತ

ಸಿರಿದಂ ಬಿನ್ನಣದಿಂದೆ ನಿರ್ಮಿಸಿದ ನಾನಾಚಿತ್ರಸತ್ಪತ್ರಿಕೋ
ತ್ಕರಮಂ ತೆತ್ತಿಸಿ ಸುತ್ತಲುಂ ನೆಲೆಗಳಿಂದೌನ್ನತ್ಯಮಂ ತಾಳ್ದಿ ಪೀ
ವರ ಭಾಸ್ವದ್ಧ್ವಜವೃಂದದಿಂ ಗಗನಮಂ ಮುಂಡಾಡುತಿರ್ದಾವಗಂ
ಧರಣೀನಾಥನ ಚೆನ್ನಹೊನ್ನಕರುಮಾಡಂ ಮಾಳ್ಪುದಾಶ್ಚರ್ಯಮಂ ೩೨

ಕಂದ: ದಿನಕರಬಿಂಬಂ ಮಧ್ಯಂ
ದಿನದೊಳಮೊಂದುಕ್ಷಣಂ ನೃಪಾಲಯಚೂಡಾ
ಘನಕಳಶದ ಮುಂದಣ ಶೋ
ಭನವರ್ಣದಂತಿರೊಪ್ಪಮಂ ತಳೆದಿರ್ಕುಂ ೩೩

ಉತ್ಪಲಮಾಲೆ

[1]ಹು[1]ಣ್ಣಮೆಯುಳ್ಳಿ ಚಂದ್ರಮುಖಿಯರ್ ನೆಲೆಮಾಡದ ಚೂಳಿಕಾಗ್ರದೊಳ್
ಕಣ್ಣೆಲರಾಸೆಯಿಂದಿರೆ ನಿಶೀಥಿನಿಯೊಳ್ ಖಳರಾಹು ಬಂದು ಸಂ
ಪೂರ್ಣಸುಧಾಂಶುವಂ ಪಿಡಿಯಲೆಂದನುಗೆಯ್ಯೆ ತದಿಂದುವಂ ಪ್ರಭಾ
ವರ್ಣಿತ ತನ್ಮುಖೇಂದುಗಳನೀಕ್ಷಿಸಿ ಶಂಕೆಯನೆಯ್ದಿದಂ ಕ್ಷಣಂ ೩೪

ವಚನ: ಅಂತಾ ಪುರಮನಾಳ್ವಂ ಭಾನುರಾಜನೆಂಬ ಮಹಾರಾಜನನೂನಪ್ರತಾ[2]ಸ[2]ಮಂ ತಾಳ್ದಿ ಯಥಾರ್ಥಮಪ್ಪ ಪೆಸರಿಂದೊಪ್ಪುತ್ತುಮಿರ್ದಂ

ಉತ್ಪಲಮಾಲೆ

ತನ್ನಯ ಬಂಧುಸಂತತಿಗಳೆಂಬ ಸರೋಜವನಂಗಳಂ ಪ್ರಮೋ
ದೋನ್ನತೆಯಿಂದರಳ್ಚಿ ರಿಪುಭೂಪವಧೂಮುಖಚಂದ್ರಬಿಂಬ ಸಂ
ಪನ್ನತೆಯಂ ಸುರುಳ್ಚಿ ಸುನಯಾಂಶುಗಳಿಂ ಕುನಯಾಂಧಕಾರದೊಂ
ದುನ್ನತಿಯಂ ತಗುಳ್ಚಿ ಖರಭಾನುವಿನಂತೆಸೆದಂ ನರೇಶ್ವರಂ ೩೫

---

[1] ಪು (ಜ) [2] ಪ (ಜ)

ಉತ್ಪಲಮಾಲೆ

ಆತನ ಚಿತ್ತವಲ್ಲಭೆ ಮನೋಹರಿಯೆಂಬಳಪೂರ್ವರೂಪಿನಿಂ
ಭೂತಳದೊಳ್ ಮನೋಹರಿ ವಿಶೇಷಗುಣಂಗಳ ಶೀಲದೇಳ್ಗೆಯಿಂ
ನೂತನವಪ್ಪ ದಾನಗುಣದಿಂದೆ ಮನೋಹರಿಯಾದಕಾರಣಂ
ಸಾತಿಶಯಾಭಿಧಾನಮದು ದೇವಿಗೆ ಸಾರ್ಥಕಮಾಗಿ ತೋಱುಗುಂ ೩೬

ವಚನ : ಇಂತು ನೆಗಳ್ತೆವಡೆದಾ ಭಾನುರಾಜನುಂ ಮನೋಹರಿದೇವಿಯುಮ ನ್ಯೋನ್ಯಾಸಕ್ತಚಿತ್ತರಾಗಿ ಕಾಮನುಂ ರತಿಯುಮೆಂಬಂತೆ ಸುಖದಿಂ ರಾಜ್ಯಂಗೆಯ್ಯುತ್ತುಮಿರೆ ಮತ್ತಮಾ ದೇವಿಗೆ ಕೆಲವಾನು¹ದಿನಂ¹ಗಳಿಂ ಮೇಲೆ ಗರ್ಭಚಿಹ್ನಂಗಳ್ ತೋಱಿಯಾ ಗರ್ಭದರ್ಭಕಂ ಜಿನಪದಭಕ್ತನುಂ ದಾನಗುಣಯುಕ್ತನುಮೆಂಬಿದಂ ಸೂಚಿಸುವಂತಾ ದೇವಿಗೆ ಜಿನಪೂಜೋತ್ಸವನುಂ ಚಾತುರ್ವರ್ಣ್ಯಕ್ಕನೂನದಾನಮುಂ ಮಾಳ್ಪ ಬಯಕೆ ಮನದೊಳ್ ಕಡುತಿಣ್ಣಮಾಗಿಯಂತೆಗೆಯುತ್ತಮಿರೆ

ಕಂದ : ಘನಪುಣ್ಯನಿರ್ದ ತಾಣಂ
ಘನಮಾಗಲ್ವೇಳ್ಕುಮೆಂಬ ಬಗೆಯಿಂದೆಂಬಂ
ತಿನಿಯಳ ತನೂದರಂ ತಾಂ
ಘನಮಾಗಿಯೆ ಬಳೆದು ತೋರ್ಕೆಯಂ ತಳೆದಿರ್ಕುಂ ೩೭

ಚಂಪಕಮಾಲೆ

ಅಲಸಿಕೆಯಾಗಳುಂ ಕೆಳದಿಯಂತಿರೆ ಪೊರ್ದಿದುದಾಗುಳಿರ್ಕೆಯುಂ
ತೊಲಗದು ಕೂರ್ಪ ಮೋಳದವರಂತಿರೆ ಬೆಳ್ಪೆಸದೆಯ್ದೆ ತೋಱಿ ಸ
ಲ್ಲಲಿತಶರೀರದೊಳ್ ನಿಜಯಶಸ್ಥಿತಿಯಂತಿರೆ ತಾಳ್ದಳಂದು ಕೋ
ಮಳಲತಿಕಾಂಗಿ ಬೇಱಿಪೊಸರೂಪಮನಾ ಸಮಯಾಂತರಾಳದೊಳ್ ೩೮

ವಚನ : ಬಳಿಯಮಾ ಬಿಂಬಾಧರೆಗೆ ನವಮಾಸಂ ತುಂಬಲೊಡಂ ಪಂಚಾಂಗಮುಂ ಶುಭಾಂಚಿತಮಾದ ದಿನದೊಳ್ ಪಂಜೇಕ್ಷುಸನ್ನಿಭನುಂ ಸಂಚಿತಪುಣ್ಯರೂಪನುಮಪ್ಪ ಕುಮಾರನಂ ಪಡೆವುದುಮಾಗಳಾ ಪುರದೊಳ್ ಗುಡಿಗಳಂ ಕಟ್ಟಿ ಬದ್ದವಣಂಗಳಂ ಬಾಜಿಸಿ ಪಿರಿದಾಗಿರ್ದೊಸಗೆಯಂ ಕೊಂಡಾಡುತ್ತುಮಿರಲತ್ತಲರಸಂ ಬೇಡುವವರ್ಗೆ ಬೇಡಿದುದಂ ಬೇಡಿದಾಗಳೆ ಕೈಮಡಗದೆ ಕೊಟ್ಟು ಜಾತಕರ್ಮಮಂ ನಿರ್ಮಿಸಿ ಕೆಲವುದಿನಂಗಳ್ ಪೋಗುತ್ತುಮಿರೆ

ಕಂದ : ದಶರಥನೆಂಬೀ ಪೆಸರಂ
ಶಿಶುವಿಂಗಂದಿಟ್ಟು ಲಾಲನಂಗೆಯ್ಯುತ್ತುಂ
ವಸುಧಾಧಿನಾಯಕಂ ಸಂ
ತಸಮಂ ತಾಳ್ದಿರ್ದು ರಾಜ್ಯಮಂ ಪಾಳಿಸಿದಂ ೩೯

¹ ಗುಣಂ (ಗ)

ವಚನ: ಅಂತಾ ಕುಮಾರಂ ಪಾಡಿವದ ಚಂದ್ರಮನೆಂತು ತನ್ನಯ ಸಕಳಕಳಾವಿಶೇಷದೊಡನೊಡನೆ ಬಳೆಗುಮಂತಂತೆ ತಾನುಂ ಚತುಃಷಷ್ಟಿಕಳಾವಿಳಾಸದೊಡನೊಡನೆ ಬಳೆದು ಸಮಸ್ತಶಸ್ತ್ರಶಾಸ್ತ್ರವಿದ್ಯಾವಿಶಾರದನಾಗುತ್ತಿರಲಾ ಭಾನುರಾಜಂ ಪ್ರಾಜ್ಯಮಪ್ಪ ಸಾಮ್ರಾಜ್ಯಮುಂ ನಿಜಯುವರಾಜನ ಮೇಲೆ ನಿಯೋಜಿಸಿ ನಾನೂರ್ವರರಸುಮಕ್ಕಳ್ವೆರಸು ಯಮಧರಭಟ್ಟಾರಕರ ಸಮಕ್ಷದೊಳ್ ಜಿನದೀಕ್ಷಾಪ್ರಾಪ್ತನಾಗಿ ನಿಸರ್ಗದುರ್ಗಮಪವರ್ಗಮುಂ ಸಾಧಿಸಿದನಿತ್ತಲ್

ಉತ್ಪಲಮಾಲೆ

ಶಿಷ್ಟಜನಂಗಳಂ ಬಿಡದೆ ರಕ್ಷಿಸಿ ದುಷ್ಟರನಿಕ್ಕಿಮೆಟ್ಟಿ ಸ
ದ್ದೃಷ್ಟಿಗಳಪ್ಪರಂ ಮರೆದದೆ ಪೆರ್ಚಿಸಿ ಪಾವನಧರ್ಮಮಂ ಮಹೋ
ತ್ಕೃಷ್ಟಮೆನಲ್ಕೆಮಾಡಿ ಕುನಯಂಗಳ ಬೇರ್ಗಳನೆಯ್ದೆ ಕಿತ್ತು ಸಂ
ತುಷ್ಟಮನಂ ಸಮಂತು ಪರಿಪಾಳಿಸಿದಂ ಧರೆಯಂ ಧರಾಧಿಪಂ ೪೦

ವೈರಿಗಳಿಲ್ಲರುಂ ದಶರಥಕ್ಷಿತಿಪಂಗಗಿದೋಡಿ ಪೋಗುತಂ
ವಾರಿಧಿಗೋತ್ರಮುಂ ಬಿಡದೆ ಪೊರ್ದಿ ಬರ್ದುಂಕೆ ಸಮುದ್ರರಾಜಪು
ತ್ರೀರಮಣೀಯ ಲಕ್ಷ್ಮಿ ಸಲೆ ಸೋದರರೆಂದವರಲ್ಲಿ ಭೋಗಮಂ
ಪಾರದೆಬಿಟ್ಟು ತನ್ನ ಪತಿಯೊರ್ವನನೇ ಪತಿಯಾಗಿ ಮಾಡಿದಳ್ ೪೧

ಮತ್ತೇಭವಿಕ್ರೀಡಿತ

ಸಿರಿದಂ ವಾಲಧರಂ ವೃಷೋತ್ತಮತರಂ [1]ಕೋ[1]ಡಿಂಡೆ ರಾರಾಜಿಪಂ
ನರಪಂ ಗೋಪತಿಯಂತಿರೊಪ್ಪಿ ಪರರೆಂಬುಕ್ಷಂಗಳಂ ತೂಳ್ದಿ ಮ
ತ್ತುರುಗೋಮಂಡಳಮುಂ ವಶೀಕರಿಸೆ ರಕ್ತಾಕ್ಷತ್ವಮುಂ ತಾಳ್ದುಕೊಂ
ಡರಿಭೂಪರ್ ಮಹಿಷೀಗಣಂಗಳೊಡನಂಪೆಯ್ದುಂದರಾರಣ್ಯಮಂ ೪೨

ಉತ್ಪಲಮಾಲೆ

ಸಾಸಿಗರಪ್ಪ ವೈರಿಗಳ ಪೆಂಡಿರ ಗಲ್ಲದ ತಾಣದಲ್ಲಿ ತಾಂ
ಹಾಸವಿಶೇಷಮೆಂಬ ಕುಸುಮಾಳಿಯೊಳೊಂದಿದ ಪತ್ರವಲ್ಲಿ ಭಾ
ಭಾಸಿತಭೂಪ ಗೋಪತಿಖಿಯಿಂದೆಮೆ ಬೆಂದವೊಲಿರ್ದುದಲ್ಲದಂ
ದಾಸ್ಯದ ಪಾಂಡುರತ್ವಮದು ಭಸ್ಮದ ಶಂಕೆಯನೆಂತು ಪುಟ್ಟಿಕುಂ ೪೩

ಮತ್ತೇಭವಿಕ್ರೀಡಿತ

ಅತಿರತ್ನಂಗಳಿನೊಪ್ಪಿ ಭೂರಿತರಸತ್ತ್ವಪ್ರಸ್ಫಾತಿಯಂ ತಾಳ್ದಿ ವಿ
ಶ್ರುತನಾಗಿರ್ದು ಕುಲೀನತಾವಿಭವದಿಂ ಕೆಯ್ಮಿಕ್ಕು [2]ನೆಂ[2]ವತ್ಸರ
ಸ್ಥಿತಿಯೊಳ್ ಕೂಡಿ ಸಮುದ್ರದಂತೆ ಪಿರಿದುಂ ಗಂಭೀರನಾಗಿರ್ದೊಡಂ
ಕ್ಷಿತಿನಾಥಂ ಕ್ಷಿತಿಚಕ್ರದಲ್ಲಿ ಜಡತಾಸಂಯುಕ್ತನಲ್ಲದ್ಭುತಂ ೪೪

[1] ಕೊಂ (ಕಚ) [2] ವಂ (ಜ)

ಕಂದ: ಪಾಪಕ್ಕಂಜುವನಾತಂ
ಪಾಪಂ ತಾನಂಜಿಯಾತನಂ ಬಿಟ್ಟೋಡಿ
ತ್ರೀಪರಿಯಂ ದಶದಿಕ್ಕುಗ
ಳಾಪೂರ್ತಂ ನಗುವವವನ ಕೀರ್ತಿಯ ನೆವದಿಂ ೪೫

ಚಂಪಕಮಾಲೆ

ಜಿನಪದಭಕ್ತ ದಾನಗುಣಯುಕ್ತ ದಯಾಮಯಧರ್ಮಸಕ್ತ ಸು
ತ್ರನಿತಚರಿತ್ರ ಕಾಮಸಮಗಾತ್ರ ವಿಶೇಷಿತಪುಣ್ಯಪಾತ್ರನೀ
ವಿನಯನಿಧಾನ ಶತ್ರುಕೃತಮಾನ ಸುಶೀಲವಿರಾಜಮಾನನೆಂ
ದೆನಿಪನನಾದಪಂ ದಶರಥಕ್ಷಿತಿಪಂ ವಿಲಸತ್ಕಳಾಧಿಪಂ ೪೬

ವಚನ: ಮತ್ತಂ

ಕಂದ: ಅಯುಯುತನಪ್ಪಾ ನೃಪತಿಗೆ
ದಯಾವತೀದೇವಿಯೆಂಬ ವಲ್ಲಭೆಯಾದಳ್
ನಯದಿಂದೆಲ್ಲರ್ಗಂ ತಾಂ
ದಯೆಯುಂ ಮಾಳ್ಪುದಱಿಂಸೆಯ್ದಿತ್ತನ್ವರ್ಥತೆಯಂ ೪೭

ಚಂಪಕಮಾಲೆ

ದಶರಥನಾಕಗಗ್ರಮಹಿಷೀಪದಮಂ ನೆಱೆಕೊಟ್ಟು ಪಟ್ಟಮಂ
ವಸುಮತಿಯೆಯ್ದೆ ಬಪ್ಪಿನೆ ಜಸಂ ಮಿಗೆ ಕಟ್ಟಿ ಪರಸ್ಪರಂ ವಿಮೋ
ಹಿಸಿ ಘನಕಾಮಮಂ ತಳೆದರೆಂತುಱೆಧರ್ಮಮುಮರ್ಥಮುಂ ಸಮಂ
ತೆಸೆದುದು ಪೆರ್ಚುಗಂತಿರೆ ಶಚೀಪತಿಯುಂ ಶಚಿಯುಂ ದಲೆಂಬವೊಲ್ ೪೮

ಕಂದ: ಬಾಳೆಯ ಸಸಿಯಂತಬಳೆಯ
ಲೋಲಾಕ್ಷಿಮುಖಂ ವಿಳಾಸಮಂ ತಳೆದಿರ್ಕುಂ
ಲಾಲಿತಮಣಿಕಳಶದವೊಲ್
ಮೇಲೆನಿಸಿದುದದಱ ಕುಚಭರಂ ಕೋಮಳೆಯಾ ೪೯

ಮಲ್ಲಿಕಾಮಾಲೆ

ಹಾಸಭಾವವಿಳಾಸವಿಭ್ರಮವರ್ಧನಾತಿಶಯಂಗಳಿಂ
ದಾಸಗಂ ಧರಣೀತಳಾಧಿಪಚಿತ್ತವೃತ್ತಿಯುಮಂ ಲಸ
ದ್ಭಾಸದಿಂದದಱೊಡನೆ ಪಾತ್ರವಿಶೇಷದಾನದ ವೃತ್ತಿಯಂ
ಪೀವರಸ್ತನೆ ಸೂಱೆಗೊಂಡು ನಿಮಿರ್ಚಿದಳ್ ನಿಜಕೀರ್ತಿಯಂ ೫೦

ವಚನ: ಇಂತತೀವ ಸಂಪತ್ಸನಾಥನುಂ ಪರಿಪೂರ್ಣಮನೋರಥನುಮೆನಿಪ ದಶರಥಮಹೀನಾಥನುಂ ನಿಜಭುಜವಿಜಯಲಕ್ಷ್ಮಿಯಂತಿರ್ದ ದಯಾವತೀ ಮಹಾದೇವಿಯುಂ ಮತಿರಥನೆಂಬ ಕುಮಾರನಂ ಪಡೆದು ಸುಖದಿಂ ರಾಜ್ಯಂಗೆಯ್ಯುತ್ತುಮಿರೆ

ಉತ್ಪಲಮಾಲೆ

ಪೊಂಗಳಶಂಗಳಿಂ ಗಗನಮಂಡಳಮಂ ನೆಱೆತುಂಬುತಿರ್ಪ ದಲ್
ತುಂಗಲಸತ್ಸುಧಾಧವಳಕೂಟವಿರಾಜಿತ ಜೈನಗೇಹಮಂ
ಮಂಗಳಮೆಯ್ದೆ ಮಾಡಿಸಿದರಾ ಧರಣೀತಳನಾಥರತ್ನಮುಂ
ಭೃಂಗವಿನೀಳಕುಂತಳೆಯೆನಿಪ್ಪ ಮಯಾವತಿಯುಂ ಪ್ರಮೋದದಿಂ ೫೧

ಮತ್ತೇಭವಿಕ್ರೀಡಿತ

ಜಿನಮುನಿಗಳ್ಗೆ ಭಕ್ತಿಭರದಿಂದೆ ಚತುರ್ವಿಧದಾನಮಂ ಸಮಂ
ತನುದಿನಮೆಯ್ದೆ ಮಾಡುತುಮುಶೇಷಗುಣಂಗಳ ಶೀಲದೇಳ್ಗೆಯಂ
ವಿನಯವಿಶೇಷಮುಂ ಬ್ರತಮುಮಂ ತಳೆದರ್ ಸಲೆ ಭೂಮಿಕಾಂತನುಂ
ಜನಪತಿಕಾಂತೆಯುಂ ನಿಯತವೃತ್ತಿಯನಾಂತರ[1]ದೇನುದಾತ್ತರೋ ೫೨

ಅಳಿಯೆಂತಂಬುಜಷಂಡದಲ್ಲಿ ಹರಿಯೆಂತಾರಣ್ಯಮಿರ್ದಲ್ಲಿ ಕೋ
ಕಿಳನೆಂತೆಯ್ದೆ ರಸಾಲಚಾರುಕಳಿಕಾಸಂದೋಹಮಿರ್ದಲ್ಲಿ ದಲ್
ಗಿಳಿಯೆಂತುತ್ಕಣಿಶಾಳಿಯಲ್ಲಿ ರತಿಯಂ ಮಾಡುತ್ತುಮಿರ್ಪಂತೆ ಭೂ
ತಳನಾಥಂ ವರದಾನದಲ್ಲಿ ರತಿಯಂ ಮಾಡುತ್ತುಮಿರ್ಪಂ ಕರಂ ೫೩

ವಚನ: [2]ಆ ರೀತಿಗೆ ತಕ್ಕಂದದಿಂದಂತೆಗೆಯ್ಯುತ್ತುಂ ಕೆಲವಾನುದಿನಂಗಳ್ ಪೋಗ ಲಾ ದಶರಥ ಮಹೀನಾಥನೊಂದುದಿವಸಂ ಮೇಲಣನೆಲೆಯ ಭದ್ರದ ಚೂಳಿಕಾಗ್ರದೊಳಶೇಷ ಪರಿವಾರಂಬೆರಸುವೊಡ್ಡೋಲಗಂಗೊಟ್ಟಿರ್ಪ ಸಮಯದೊಳ್ ತಪೋಭೂಷಣರುಮಿರಿಂದ ಮರುಮೆಂಬ ಚಾರಣಪರಮೇಷ್ಠಿಗಳ್ ದೀಪ್ತತಪೋಮಾಹಾತ್ಮ್ಯದಿಂ ಪುಟ್ಟಿದ ಬಹಳ ಮಪ್ಪ ಕಾಯಕಾಂತಿಯಿಂ ವಿಯತ್ತಳಮಂ ಬೆಳಗುತ್ತುಂ ಚಂದ್ರಮಂಡಳಯುಗಳಮೆ ಮುನಿರೂಪಂ ಕೈಕೊಂಡಾಕಾಶಪ್ರದೇಶದಿಂದಿಳಾತಳಕ್ಕವತರಿಸುತ್ತುಮಿರ್ಪುದೆಂಬಂತೆ ಬರುತ್ತುಮಿರ್ಪ ಸಮಯದೊಳ್

ಕಂದ: ಚಾರಣಮುನಿರೂಪಂ ಕೊಂ
ಡೋರಂತಿರಲಾ ನೃಪಾಳಪುಣ್ಯಮೆ ಬರ್ಪಂ
ತಾ ರಾಜನಿವಾಸಕ್ಕಂ
ಭೋರನೆ ಬರುತಿಪ್ಪುದಂ ನಿರೀಕ್ಷಿಸಿ ನರಪಂ ೫೪

ವಚನ: ಅನಂತರಂ ಸಂತೊಸದಂತನೆಯ್ದಿ ಸಮುದಗ್ರಗ್ರೀವನಾಗಿರ್ದು ಸಮರ್ಚ ನಾಯೋಗ್ಯದ್ರವ್ಯದಿಂ ಪರಿಪೂರ್ಣಮಾದ ಜಳಕಳಶಮಿಳಿತಕನಕಮಯ ಪವಿತ್ರಪಾತ್ರಮಂ ಮತ್ತೊಮರ್ಪನ ಕೆಯ್ಯೊಳ್ ಪಿಡಿಸಿಕೊಂಡಿದಿರೆಳ್ದು ಪೋಗಿ ವಿಶಿಷ್ಟಮಪ್ಪ ಶುಚಿಧವಳಶಿರೋ

[1] ರ (ಜ) [2] ರ (ಕ)

ವೇಷ್ಟನಮನುತ್ತರೀಯಮಂ ಮಾಡಿಟ್ಟುಕೊಂಡು ಮುಕುಳಿತಮಾದ ಪಾಣಿಸಂಪುಟಮಂ ನೊಸಲ್ಗೆ ತಂದಿಂದು ನಾನೀ ಕೃತಕೃತ್ಯನಾಡೆಂ ಜಯ ಜಯ ಜಯಯೆಂದುಚ್ಚಾರಣಂ ಗೆಯ್ವು[1]ತ್ತುಂ[1] ನೋಡುತ್ತುಮಿರ್ಪಾಗಳ್ ಭೋಂಕನೆ ಬಂದು ಮುಂದೆ ನಿಂದಿರ್ಪುದುಂ

ಮಾಳಿನೀ

ಪ್ರಮದದಿನೊಗೆದಶ್ರುಸ್ರೋತದಿಂ ಚಾರುಗಾತ್ರೋ
ದ್ಗಮಿತಬಹಳರೋಮಾಂಚಂಗಳಂ ಸೇಕಿಸುತ್ತಿ
ರ್ದಮಿತಪರಮಪೂಜಾದ್ರವ್ಯದಿಂ ಪೂಜಿಸುತ್ತುಂ
ನಮಿಸಿದನವರಂಘ್ರಿದ್ವಂದ್ವಮಂ ಭಕ್ತಿಯಿಂದಂ ೫೫

ವಚನ: [2]ಅಂತು ಬಿ[2]ಜಯಂಗೆಯ್ಸಿ

ಕಂದ: ಖೇಚರತೆಯಿಂದೆ ಧೂಳಿಯ
ನಾಚರಿಸಿದೊಡಂ ತದಂಘ್ರಿಕಮಳಂಗಳನಾ
ಭೂಚಕ್ರಪ್ರಭು ತೊಳೆದಂ
ನೀಚೈರ್ನೋರಜಮನೊರಸಿ ನೆಱತೊಳೆವನ್ನಂ ೫೬

ಮತ್ತೇಭವಿಕ್ರೀಡಿತ

ಇದಿರ್ಗೊಂಡೊಯ್ದು ಸಮುನ್ನತಾಸನದೊಳಂ ಪ್ರಸ್ಥಾಪನಂಗೆಯ್ದು ಸ
ನ್ಮುದದಿಂ ಕಾಲ್ದೊಳೆದರ್ಚಿಸಿ ಪ್ರಣಮನಂಗೆಯ್ದಿಂಬಳಿಕ್ಕಂ ಸಮೃ
ದ್ಧದಯಾಂಬೋಧಿಯೆನಿಪ್ಪ ಯೋಗಿಗೆ ಮನೋವಾಕ್ಕಾಯಸಂಶುದ್ಧಿಯಿಂ
ಪದಪಿಂದಂ ನವುಗಿತ್ತಸಂ ನವವಿಧೋದ್ಯತ್ಪುಣ್ಯಮಂ ತಾಳ್ದನಂ ೫೭

ವಚನ: ಅಂತು ಪಾದಪ್ರಕ್ಷಾಳನಂಗೆಯ್ದು ತದನಂತರಂ ಪಾದಾರ್ಚನಾಪೂರ್ವಕಂ ವಂದನೆಯುಂ ಮಾಡಿಯುಪರಕಾಂತರ್ದೇಶದಲ್ಲಿಗೆ ಮೆಲ್ಲನೆ ಬಿಜಯಂಗೆಯ್ಸಿ ನಾಲ್ವತ್ತೆಂಟು ದೋಷದಿಂ ಪಿಂಗಿದ ಪರಮಾಮೃತದೊಡನೆ ಪುರುಡಿಸುವ ನಿರವದ್ಯಮಾದ ಪಿರಿದುಂ ಸಾರ ಮಪ್ಪಾಹಾರಮನರ್ಥಿಯಿಂ ಕೈ[3]ಯಲಿ[3]ಕ್ಕುವ ಪೊ[4]ತ್ತಿ[4]ನೊಳ್

ಕಂದ: ತೀರ್ಥಕರಪರಮದೇವ ಸ
ಮರ್ಥಪದಪ್ರಾಪಣೈಕ ಕಾರಣಮಾದ
ತ್ಯರ್ಥಪರಿಣಾಮಮೊಗೆದುದು
ಪಾರ್ಥಿವಮುಕುಟಾವಲೀಢಚರಣಂಗಾಗಳ್ ೫೮

---

[1] ತ್ತುಂ ಚಾರಣಯುಗಮಂ (ಜ) [2] ಬಿ (ಕಗಚ) [3] ಯೊಳಿ (ಜ) [4] ಳ್ತಿ (ಜ)

ದಾನಪರಿಣಾಮದಿಂದಂ
ಮಾನಿತತೀರ್ಥಕರಪುಣ್ಯದನುಬಂಧಂ ತ
ದ್ಭೂನಾಥಂಗಾಯ್ತೆಂದೊಡ
ಮಾನಪದಂ ದಾನದಿಂದಮಾಗದುದುಂಟೇ ೫೯

ಸ್ರಗ್ಧರೆ

ಶ್ರದ್ಧಾನಂ ಶಕ್ತಿ ಭಕ್ತಿಪ್ರಚಲಿತತರವಿಜ್ಞಾನಮುದ್ಯದ್ದಯಾಸಂ
ಬದ್ಧತ್ವಂ ಲೋಭಮುಕ್ತಿತ್ಯಜನಮತುಳಿವಕ್ಷಾಂತಿಯೆಂಬೀ ದಲೇಳುಂ
ಶುದ್ಧಂಗಳ್ ಸದ್ಗುಣಂಗಳ್ ಬಿಡದಿರೆ ಪಿರಿದುಂ ದಾನಮಂ ಮಾಳ್ಪ ಭವ್ಯಂ
ಗಿದ್ಧಂಗೇಂ ದೂರಮೇ ಪೇಳ್ ನಿರುಪಮಪರಮಸ್ಥಾನಮಾರ್ಗಂಗಳೇಳುಂ ೬೦

ಉತ್ಪಲಮಾಲೆ

ಉತ್ತಮಭೂಮಿಯಲ್ಲಿ ವಟಬೀಜಮನೊಂದನೆ ಬಿತ್ತಲಂತದು
ದ್ಯತ್ತರಮಾಗಿ ಪೆರ್ಚುವವೊಲುತ್ತಮಪಾತ್ರವಿಶೇಷದಲ್ಲಿ ತಾ
ನಿತ್ತ ಸುದಾನಮೆಯ್ದೆ ಪಿರಿದಪ್ಪ ಫಲಂಗಳನೀವುದೆಂದೊಡೀ
[1]ಭೂ[1]ತ್ರಯದಲ್ಲಿ ದಾನಗುಣದಿಂದಮಸಾಧ್ಯಮದುಂಟೆ ನಿಶ್ಚಯಂ ೬೧

*

ವಚನ: ಆಗಳಾ ಮುನೀಶ್ವರರಿಷ್ಟಾನಿಷ್ಟವಸ್ತುಸ್ವೀಕಾರಪರಿಹಾರಪರಿಣಾಮಮಂ ತಮ್ಮಯ ಕರಾಂಗುಳಿಸಂಜ್ಞೆಯಿಂದಂ ವ್ಯಕ್ತೀಕರಿ[2]ಸಿ[2] ಶಾಸ್ತ್ರೋಕ್ತ[3]ಮಂ[3] ಮೀಱದೆ ಜ್ಞಾನತಪಸ್ಸಾಧನೋಪಯೋಗ ಶರೀರಸಂರಕ್ಷಣಾರ್ಥಮಾಗಿ ಭ್ರಮರಾಹಾರಗೋಚಾರ ರೂಪದಿಂ ಚರಿಗೆಯಂ ಮಾಡಿಯಕ್ಷಯಂ ಭವೇದ್ದಾನಮೆಂದು ಕೈಯನೆತ್ತಿ ಕೊಳೆ ಬಳಿಯಂ ವಂದನಾತತ್ಪರನಾದ ನರಪನಂ ನಿತ್ಯಸುಖಭೋಗಭಾಗಿಯಾಗೆಂದು ಪರಸಿ ಗಗನಮಾರ್ಗದಿಂ ಪೋ[4]ದಿಂ[4]ಬಳಿಕ್ಕಂ

ಮಲ್ಲಿಕಾಮಾಲೆ

ದಾತೃಪಾತ್ರವಿಶೇಷದಿಂದಮೆ ಚಾರುಪುಣ್ಯವಿಶೇಷಮುಂ
ಧಾತ್ರಿಯಂ ಪರಿಪಾಲಿಪಂಗಿರದಾಗಲಂತದಱಿಂ ಮಹಾ
ಚಿತ್ರಮಾಗಿರೆ ಹೇಮವೃಷ್ಟಿ ನೃಪಾಲಯಾಂಗಣದಲ್ಲಿ ತ
ನ್ಮಾತ್ರೆಯಿಂದಧಿಕಂ ದಲೆಂಬಿನಮಾದುದಂ ಪ್ರಭು ನೋಡಿದಂ ೬೨

ವಚನ: ಅದಂ ಕಂಡು ಕಡುಚೋಜಿಗಂಬಟ್ಟು ತನ್ಮುನೀಂದ್ರನ ತಪಃಪ್ರಭಾವಕ್ಕೆ ಮೆಚ್ಚಿ ಮೆಚ್ಚಿ ಮನದೊಳಚ್ಚರಿವಟ್ಟು ಪೊಗಳುತ್ತುಮಾ ವಿತ್ತಮನಲ್ಲಿಯ ಭವ್ಯರ್ಗೆ ನೀವಿನ್ನುಂ ವಿಶೇಷಮಾಗಿ ದಾನಮಂ ಮಾಡಿಯೆಂದಿ[5]ತ್ತು[5]

---

1 ಮಾ (ಕಗಚ) 2 ಸದೆ (ಜ) 3 ಕ್ರಮಮಂ (ಜ) 4 ದ (ಜ) 5 ತ್ತಂ (ಜ)

* ಪಂಚಾಶ್ಚರ್ಯ (ಗ)

ಮತ್ತೇಭವಿಕ್ರೀಡಿತ

ಅರಸಂ ನೂರ್ಮಡಿಯಾಗಿ ದಾನಭರಮಂ ಮಾಡುತ್ತುಮಿರ್ದಾ ಮಹಾ
ಧರಣೀಮಂಡಳಮಂ ಸುರಕ್ಷಿಸುತುಮಿರ್ದಂ ಸತ್ಯಸಂಭಾಷಣಂ
ಸಿರಿದುಂ ನಿರ್ಮಲಮಪ್ಪ ತನ್ನಯ ಯಶೋರಾಶಿಪ್ರಭಾಭಾರದಿಂ
ಮರದಿಗ್ಭಿತ್ತಿಗಳಂ ವಿಲೇಪಿಸುತುಮಿರ್ದಾ ಭೂಪನಂತೊಪ್ಪಿದಂ ೬೩

ವಚನ: ತದನಂತರಮಾ ಮನುಜಮನೋಜನ ಸಾಮ್ರಾಜ್ಯಲಕ್ಷ್ಮೀಸಂಭೋಗ ಕೇಳೀವಿನೋದಕ್ಕೆ ಸಮುದ್ದೀಪಕ ಸಹಾಯಮನೊಸೆದುಬರ್ಪಂತೆ

ಮತ್ತೇಭವಿಕ್ರೀಡಿತ

ಸಕಳಪ್ರಾಣಿಮನಃಪ್ರಮೋದಕರಣಾಲೋಲಂ ಸಮುಜ್ಜೃಂಭಿತಾ
ಧಿಕ ಚೇತೋಭವದುರ್ವಿಕಾರರಚನಾಶೀಲಂ ಸಮಸ್ತ[1]ಪ್ರಕಾ[2]
ಶಕಪೀಯೂಷ ಮಯೂಖಮಾಲಿ ಬಹಲಜ್ಯೋತ್ಸ್ನಾನುಕೂಲಂ ವಿಯೋ
ಗಿಕುಲಧ್ವಂಸಕಮಾಗಿ ಬಂದುದು ಶರತ್ಕಾಲಂ ಸುಮಂದಾನಿಳಂ ೬೪

ವಚನ: [3]ಅಂ[3]ತು ಪ್ರಕಟಿತಾನೇಕಪ್ರಕಾರ ಪಾಂಡುರಮೇಘಾಡಂಬರಪರಿಮಂಡನವಿಡಂಬಿತರಾಜಮಂಡಳವಿಲೋಪಲಾಲನಂಬೆರಸು ಶರತ್ಕಾಲಮತಿಕ್ರಮಿಸಿ ಮೇಲೆತ್ತಿ ಬಂದು ಮೊಗಂದೋಱೆ ವರ್ಷಾಕಾಲಮುಂ ಪಲಾಯನಮನೆಯ್ದಿಸುವುದುಂ

ಉತ್ಪಲಮಾಲೆ

ಪಲ್ಲಟಿಸಿತ್ತು ಪೂಗುಡಿಗಳಂ ಗಿರಿಮಲ್ಲಿಗೆ ಬೀತು ಬಿನ್ನನಾ
ಯ್ತೊಳ್ಳಿಹ ಮೊಲ್ಲೆ ಸೋಗೆನವಿಲೊಲ್ಲದೆ ಮಾಣ್ದುದು ನೃತ್ಯನಾಟ್ಯಮುಂ
ನಿಲ್ಲದೆ ಚಾತಕಂ ಜಲಕಣವ್ರತಮುಂ ಪ್ರತಿಪಾಲಿಸಿತ್ತು ಜೆ
ಲ್ಪಿಲ್ಲದುದಾಯ್ತು ನಾಡೆ ಕಡಮ ಶರದಾಗಮನಪ್ರವೇಶದೊಳ್ ೬೫

ಚಂಪಕಮಾಲೆ

ತವಕಿಸಿ ಹಂಸಮಂಡಳಿ ಮೃಣಾಳದ ಕೋಮಳದಂಡಕಾಂಡಮುಂ
ಸವಿಮಿಱೆ ಸೊಕ್ಕಿದತ್ತು ವಿಕಚತ್ಕಮಳಂ ಮಕರಂದಭಾರಸಂ
ಭವಿ ಬಳಿಯಟ್ಟಿದತ್ತಳಿಗಣಕ್ಕೆ ಮಹೀಧರಮುಚ್ಛನಿರ್ಝರಾಂ
ಬುವನೆಸಗಿತ್ತು ಪೊನ್ನೆನಸೆಯಿಂದೆಸೆದತ್ತು ಶರತ್ಪ್ರವೇಶದೊಳ್ ೬೬

ವಚನ: ಮತ್ತಂ ಗಗನಗಹ್ವರದೊಳ್ ಮಂಡಲಂಗೊಂಡ ಘನಕಾಳವಿಷಧರಂ ಭೂರಿಮಯೂರ ವಿರಾವಶ್ರವಣಭಯದಿಂ ಬೆದಱೆ ಯಥಾಯಥಮಾಗಿ ಪರಿದೋಡಿಪೋದುದಿನ್ನುಜಲಿಲ್ಲೆಂದು ಬಗೆದಂದು ಶರತ್ಕಾಲದ ಪೊಸಮೆಲ್ದಿಂಗಳಿರುಳ್ದೋಷಾಕರನೊಂದಾಗಿ

[1] ಪ್ರತಾ (ಜ) [2] ಇಂ (ಜ)

ಪೋಗಲಾಗದೆಂದು ಪಿಂದುಳಿದು ಸುಖಸ್ಥಾನದೊಳಿರಲೊಡಂ ಪಗಲುಷ್ಣಕಿರಣಕಿರಣಪರಿತಾಪದಿಂ ಕಡುಗಾಯ್ದು ಕನೆಗಟ್ಟಿ ಘಟ್ಟಿಗೊಂಡುದೆಂಬಂತೆ ಪೊರೆಪೊರೆಯಾಗಿ ದಳವೇಱೆ ಬಹಳತರಧವಳತೆಯನಾಂತ ಮುಗಿಲಪೆತ್ತಪೆತ್ತಲುಂ ಬಿತ್ತರಂಬಡೆಯೆ

ಮತ್ತೇಭವಿಕ್ರೀಡಿತ

ದಿನಪಂ ಕನ್ನೆಯನೊಲ್ದು ಕೂಡಲೊಡಮಾ ದುರ್ನೀತಿಯಿಂ ಕೆಟ್ಟುದಾ
ತನ ತೇಜಂ ಕರಣೀಯಮಾವುದಿದಕೆಂದಾ ದೋಷಸಂಹಾರಬು
ದ್ಧಿನಿಮಿತ್ತಂ ತೊಲೆಯಂ ದಲೇಱೆ ಪಡೆದಂ ಮತ್ತುಗ್ರತೇಜಃಪ್ರಭಾ
ವನೆಯಂ ಲೋಕದೊಳಾವನೋ ಪ್ರಭವಿಸಂಶುದ್ಧೀಕೃತೋದ್ದೋಷಕಂ ೬೭

ಕಂದ: ಸುಳಿದಾಡಿ ಕಳಾಳಾಪದಿ
ನೆಳೆಮುದ್ದಂ ತೋಱೆ ಮೊಲೆಯನುಣ್ಬಾತ್ಮಜರೆನೆ
ಗಿಳಿಗಳ ಪಿಂಡುಗಳುಂಡವು
ಕಳವೆಯ ಪಾಲ್ದೆನೆಯ ಘಟ್ಟಿಗೊಂಡೊಳ್ಪಾಲಂ ೬೮

ನೀರೆಂಬ ಸೀರೆಯಂ ಪೆಱ
ಸಾರಿಸುತುಂ ಪುಳಿನಮೆಂಬ ಜಘನಸ್ಥಳದಿಂ
ನಾರಿಯವೊಲ್ ನದಿ ಮೆಱೆಗುಂ
ಶಾರದಸಮಯಂ ದಲೆಂಬ ವಿಟಸನ್ನಿಧಿಯೊಳ್ ೬೯

ವಚನ; ಇಂತು ಶರತ್ಸಮಯಸಮವಸರಣಾನಂತರಂ

ಮತ್ತೇಭವಿಕ್ರೀಡಿತ

ಹಿಮಮುದ್ರೇಕಿಸಿ ಬಂದು ಪತ್ತಿದೊಡೆ ಧೈರ್ಯಂಗೆಟ್ಟು ಬೆಂಬಿರ್ದ ಮ
ತ್ತಮದಂ ಸೈರಿಸದೋಡಿಪೋಗಿ ವಿರಹಾಗ್ನಿಜ್ವಾಲಿಕಾವರ್ಧನ
ಕ್ರಮಮಂ ತಾಳ್ದ ವಿಯೋಗಿಚಿತ್ತಗೃಹದೊಳ್ ಪೊಕ್ಕಿರ್ದನಾ ಕಾಮದೇ
ವಮಹೀವಲ್ಲಭನೆಂದೊಡೇವೊಗಳ್ವೆನಾಂ ಶೀತಾತಿರೇಕತ್ವಮಂ ೭೦

ಕಂದ: ಅಂಜಿ ಪೂರ್ವಾಹ್ಣಹಿಮಕೆ ಧ
ನಂಜಯನುಂ ಪೋಗಿ ಪೊಕ್ಕು ಸರ್ವರ ಬಸಿಱೊಳ್
ಪುಂಜಿಸಿದನಲ್ಲದಿದ್ದೊಡೆ
ರಂಜಿಸುವುದೆ ಧೂಮಮುದಯಮಲ್ಲಿ ಮುಖಸ್ಥಂ ೭೧

ಕೆಳೆಗೊಂಡುದಗ್ನಿಯೊಡನ
ಗ್ಗಳಗಾಳಿ ಮಹೇಶನುರಿಯ ಕಣ್ಣಂ ನೊಸಲೊಳ್
ತಳೆದಂ ಸಮುದ್ರಮೌರ್ವ
ಜ್ವಳನಂ ನಡುವಿರಿಸಿದತ್ತು ಶೀತದ ಭಯದಿಂ ೭೨

ಉತ್ಪಲಮಾಲೆ

ವಾನರಸಂಚಯಂ ನೆರೆದು ಸೈರಿಸಲಾಱದೆ ತೀವ್ರಶೀತಮಂ
ಕಾನನದಲ್ಲಿ ರಂಜಿಸುವ ಗುಂಜೆಯ ಪುಂಜಮನಗ್ನಿಯೆಂದು ಸ
ನ್ಮಾನಿಸಿ ಪತ್ತೆಸಾರ್ದದಱ ಸುತ್ತಲುಮೊಯ್ಕನೆ ಕುಳ್ಳಿದಿರ್ದು ಮ
ತ್ತಾನಿಸಿ ಪೊಟ್ಟೆಯಂ ತಱಿಸುತುಂ ಸಲೆಕಾಯ್ದುದು ಕಿಚ್ಚನಾಕ್ಷಣಂ ೭೩

ಚಂಪಕಮಾಲೆ

ವಿನುತವಿವೇಕಮಂ ತಳೆದ ತುಂಬಿದ ಜೆಲ್ವಿನೊಳೊಂದಿತೋರ್ಪ ಜ
ವ್ವನೆಯರ ತೋರಬಟ್ಟಮೊಲೆಯಿಟ್ಟೆಡೆಗೊತ್ತನೆ ಪತ್ತೆಸಾರ್ದು ಬೆ
ಚ್ಚನೆ ಬಿಗಿದಪ್ಪಿಕೊಂಡು ಬಿಡದಿರ್ದೊಡಮಾ ಮನುಜಂಗಿದೇವುದೋ
ನೆನೆವಡೆ ಸೀರೆಗೀರೆ ಸಲೆ ಕಂಬಳಿಗಿಂಬಳಿ ಕಂತೆಬೊಂತೆಯುಂ ೭೪

ಕಂದ: ಕಡುನಿಮಿರ್ದ ತೋರಮೊಲೆಗಳ
ನಡುವೆಡೆಯೊಳ್ ಪೊಕ್ಕು ಪಚ್ಚಿಸಿದವೊಲ್ ತೊಡರ್ದಿ
ರ್ದೊಡಮೇನವಂಗೆ ನಡುಕಮ
ನೊಡರಿಸಲಾರ್ತಪುದೆ ನೋಡ ಹಿಮಮುಂ ಗಿಮಮುಂ ೭೫

ವಚನ: ಇಂತು ಹೇಮಂತಮುಂ ಶಿಶಿರಮುಮೆಂಬ ಋತುದ್ವಯ ವಿರಮತ್ಯ
ನಂತರಂ ವಸಂತಸಮಯಮುಂ ಪೆಱಪಿಂಗಿಪೋಗೆ

ಸ್ರಗ್ಧರೆ

ವಾತೂಳೀಚಾಳನೋನ್ಮೀಳಿತಜಟಿಳತರಸ್ಥೂಳಧೂಳೀಪ್ರಜಾಳ
ಪ್ರೋತಕ್ಷೋಣೀತಳಂ ಪ್ರೋಚ್ಚಳಿತಘನಮರೀಚೀಚಯವ್ಯಾಪ್ತದಿಕ್ಕಂ
ಖ್ಯಾತಂ ಲೋಕಕ್ಕಗುರ್ವಂ ಪಡೆದು ಬಿಡದೆ ಬಂದತ್ತು ದುರ್ಗ್ರೀಷ್ಮಕಾಲಂ
ಸ್ಫೀತಪ್ರೋಷ್ಮಾನುಕೂಲಂ ವಿರಚಿತಗಗನಸ್ಥಾನಸಂಗ್ರೀಷ್ಮಕಾಲಂ ೭೬

ವಚನ: ಆ ನಿದಾಘಸಮಯಪ್ರತಾಪೋದಯಂ ದಶದಿಶಾವಿವರೋದರದೊಳ್
ಪರಿವರ್ತಿಸಿ ಬಿತ್ತರಂಬಡೆಯೆ

ಸ್ರಗ್ಧರೆ

ಇಂದ್ರಂ ನೇತ್ರಾಳಿ ನೀಳೋತ್ಪಳದೊಳೆ ಪುದಿದಂ ವಾರ್ಧಿಯೊಳ್ ವಹ್ನಿ ಪೊಕ್ಕಂ
ಬಂದೊಂದಿರ್ದಂ ಯಮಂ ಛಾಯೆಯೊಳಿರುಳೊಳೆ ಸಂಚಾರಿಸಂ ನೈರುತಂ ಮ
ತ್ತಂದಾದಂ ಪಾಶಿ ವಾರಾಂಪತಿ ಹಿಮಗುಣಮಂ ತಾಳ್ದಿದಂ ವಾಯುಯಕ್ಷಂ
ಸಂದಿರ್ದಂ ಮಂಜುವೆಟ್ಟಂಬಿಡಿದು ಸಲೆ ಶಿವಂ ಗಂಗೆಯಂ ಪೊತ್ತು ನಿಂದಂ ೭೭

ವಚನ: ಮತ್ತಂ

ಉತ್ಪಲಮಾಲೆ

ಬೇಸಗೆ[1]ಕಾ[1]ಲನೆಂಬಬಳೆ ಬೆಟ್ಟುಗಳಿಂಬೊಲೆಗಲ್ಗಳಲ್ಲಿ ಬೈ
ತೀ ಸಕಳೋರ್ವಿಯೆಂಬ ಪೊಸಗಾವಲಿಯಂ ರವಿವಹ್ನಿಯಿಂದೆ ತೋ
ಯಾಶಯಮೆಂಬ ಸಂಪಣಮನರ್ಪಿಸಿ ತಳ್ತುರಿಯಲ್ಕೆ ಕಾಷ್ಠೆಗಳ್
ದೋಸೆಯನಟ್ಟವೋಲ್ ಮಳಲರಾಶಿಗಳೊಪ್ಪಮನಾಳ್ದುವಾಕ್ಷಣಂ ೭೮

ಚಂಪಕಮಾಲೆ

ನೆಱೆನೆಱೆಚೂರ್ಣಮಾದ ಘನಧೂಳಿಗಳೇ ಮರಿಚಂಗಳಾಗಿ ಪೊ
ಯ್ದುಱೆ ಮಿಱುಗುತ್ತುಮಿರ್ಪ ಜಳವೆಂಬುರುತೈಲದಿನೊಂದಿದುರ್ವಿಯೆಂ
ಬುಱುವ ವಿಶಾಳಭಾಜನದೊಳುಣ್ಮುವ ಜೇಗೆಯ ಜೆಂಕಿಯಿಂ ಕರಂ
ಬಱಬಱನಾಗಿ ತಾಳಿಸಿದವೋಲ್ ಕರಿವೋದವು ಬೆಂದು ಬೆಟ್ಟುಗಳ್ ೭೯

ಕಂದ: ಕೆಱೆಗಳ ತೊಱೆಗಳ ಸರಸಿಗ
ಳಱುನೀರಂ ಪೀರ್ದು ಪೀರ್ದು ನೆಱೆಯದೆ ಧರೆ ಮ
ತ್ತಱಿಸಿ ಬಾಯ್ವಿಟ್ಟ ತೆಱದಿಂ
ನೆಱೆ ಪರ್ವಿ[2]ದವಂ[2]ದು ಬಿರಿದ ಪೆರ್ವೀಡೆಗಳುಂ ೮೦

ಉತ್ಪಲಮಾಲೆ

ಪರ್ವಿದ ಬೆಟ್ಟಬೇಸಗೆಯು ಪೆರ್ವಿಸಿಲರ್ವಿಸೆ ಮೆಯ್ಯನೊಡ್ಡಿ ತಾಂ
ನಿರ್ವಹಿಸಲ್ಕಮಾಱದೆ ಹಿಮಾಂಶುಕಳಾಳಿಯನೆತ್ತಿ ಪೊತ್ತನಾ
ಶರ್ವನುದಾರವಾರಿಶಯನಂ ಹರಿಯಾದನಜಂ ಸರೋಜದೊಳ್
ಕೊರ್ವಿದ ಮೋಹದಿಂ ನೆಲಸಿದಂ ಬಿಡದೇಗಳುಮುಷ್ಣಭೀತಿಯಿಂ ೮೧

ವಚನ: ಅಂತಾಸುರಮಾದ ಬೇಸಗೆಯ ಬಿಸಿಲ ಕಠೋರಪರಿತಾಪದೆಸಕಂ ರಸಾತಳದೊಳೆಲ್ಲಂ ಸೂಸಿ ಪರಿದು ಪಸರಿಸಿ ಸಮುಜ್ಜೃಂಭಿಸುತ್ತುಮಿರೆ

---

[1] ಗಾ (ಜ) [2] ದುದಂ (ಜ)

ಉತ್ಪಲಮಾಲೆ

ಎಮ್ಮಯ ವಂಶದಿಕ್ಕರಿಗಳೆಂಟುಮಿಳಾತಳಭಾರಮಂ ಕೊರಳ್
ಕೊಮ್ಮಿಸಿ ಪೊತ್ತು ನಿತ್ತರಿಸುತಿರ್ದೊಡಮಾ ನೆಲನೆಯ್ದೆ ಕಾಯ್ದು ಮ
ತ್ತೆಮ್ಮುಮನಟ್ಟಿ ಮುಟ್ಟೆ ಸುಡುತಿರ್ದಪುದೆಂದಿಡುಮಂತೆ ಪುಯ್ಯಲಂ
ತಮ್ಮ ಕರಾಗ್ರದೊಳ್ ತೊವಲನಾಂತು ನೆಳಲ್ಗೆ ತೊಳಲ್ದುವಾನೆಗಳ್ ೮೨

ಉಗ್ರನಿದಾಘತಾಪದೆಸಕಕ್ಕಗಿದುನ್ಮದದಾನೆಗಳ್ ನಿಜೋ
ದಗ್ರಕರಾಗ್ರಪುಷ್ಕರಮನೆತ್ತಿ ಕರಂ ಪರಿತಂದು ಗಾಹನ
ವ್ಯಗ್ರತೆಯಿಂ ಸರೋವರದ ತುಚ್ಛತರಾಂಬುವಿನಲ್ಲಿ ಪೊಕ್ಕು ಮು
ಳ್ಗಿ ಗ್ರಹಿಸುತ್ತುಮಿರ್ದವತಿನಿಶ್ಚಳಭಾವಮನೊಂದುಜಾವಮುಂ ೮೩

ಕಂದ: ಕಿಱಿದಾದ ಕೆಸರ್ನೀರಂ
ಮಱಿಯಾನೆಯುಮೊಂದು ಕಂಡು ಕುಡಿವಾತುರದಿಂ
ದೆಱಗಿ ಮೊಗಮಿಕ್ಕುವನಿತ
ಕ್ಕಱಿ ಬತ್ತಿದುದುಷ್ಣಕಿರಣನುಗ್ರಾತಪದಿಂ ೮೪

ವಚನ: ಮತ್ತಮೊಂದೆಡೆಯೊಳ್

ಕಂದ: ಬಿಸಿಲ ಕಡುಗಾಯ್ಪು ಭೋಂಕೆನೆ
ಪಸರಿಸೆ ಬಿದಿರೊಡೆದು ಸುರಿವ ಬಿಸಿಮುತ್ತುಗಳಂ
ಪೊಸನೀರ್ವನಿಗಳಿವೆಂದಂ
ದೊಸೆದೀಂಟಲ್ ಮಿಡುಕಿ ಸೋಗೆ ಪೊಸೆದುದು ಬಸಿಱಂ ೮೫

ಬೇಸಗೆಯ ಬೆಂಕೆಯಿಂದಂ
ಕಾಸಿದವೊಲ್ ಕುದಿದು ಪರಿವ ನಿರ್ಝರಜಳಮಂ
ಕೂಸುಮೃಗಂ ಕುಡಿಯಲ್ ಮೊಗ
ಮಾಸುರದಿಂ ಬೇಱಿ ಮಱುಗಿ ಬಿದಿರ್ದುದು ತಲೆಯಂ ೮೬

ಒಡವರಿವ ತನ್ನ ನೆಳಲಂ
ನಡೆನೋಡಿಯೆ ನೆಳಲಿದೆಂದು ಪೊರ್ದುವ ಬಗೆಯಿಂ
ದೆಡಕಂ ಬಲಕಂ ಪರಿದಾ
ಗಡೆ ಬಸವಳಿದತ್ತು ಬಿಸಿಲೊಳೆಳೆಯ ಕುರಂಗಂ ೮೭

ಮತ್ತೇಭವಿಕ್ರೀಡಿತ

ಮಿಗೆ ತಂಪಪ್ಪೆಡೆಯಲ್ಲಿ ಪತ್ತಿದುದು ಕೂರ್ಮೌಘಂ ಬಿಲದ್ವಾರಸಂ
ದಿಗಳೊಳ್ ಪೊಕ್ಕುದು ಕರ್ಕಟಪ್ರತತಿ ನೀರಿಂಗಿರ್ದ ಪಂಕಾಗ್ರದೊಳ್
ನೆಗೆವುತ್ತುಂ ಪೊರಳುತ್ತುಮಿರ್ದುದು ಮಹಾಮೀನಪ್ರತಾನಂ ಸರೋ
ಜಗಣಂ ಮ್ಲಾನತೆವೆತ್ತುದೆಯ್ದೆ ಕೊಳದೊಳ್ ಗ್ರೀಷ್ಮೋಷ್ಣಮತ್ಯದ್ಭುತಂ ೮೮

ವಚನ: ಮತ್ತಮಾ ಪೊತ್ತಿನೊಳ್

ಸ್ರಗ್ಧರೆ

ಉಗ್ರಗ್ರೀಷ್ಮಪ್ರಭಾವಂ ಪಸರಿಸೆ ಜಗದ ಸ್ತ್ರೀಯರುಂ ಮರ್ತ್ಯರುಂ ಪ್ರ
ತ್ಯಗ್ರೋಶೀರೋರುಧಾರಾಗೃಹ ಸುರಭಿಜಲೋಚ್ಛೀಕರಾಸಾರಮಂ ನಿ
ರ್ವ್ಯಗ್ರಂ ಪೊರ್ದಿರ್ದರಾಗಳ್ ಶಿಥಿಲವಸನದಾಚ್ಛಾದನಂ ತಾಳ್ದರುಜ್ಜೈ
ತ್ಯಾಗ್ರೀಭೂತಾದಿ ಮುಕ್ತಾಭರಣವಿಸರದಿಂ ಜೆಲ್ವನಾಂತಿರ್ದರೆಲ್ಲಂ ೮೯

ಕಂದ: ಪೂಸಿ ಮೆಯ್ಯಲ್ಲಿ ಚಂದನ
ಭಾಸುರಕರ್ದಮಮನಾಲವಟ್ಟಂಗಳುಮಂ
ಬೀಸಿಕೊಳುತ್ತುಂ ಕಳೆದರ್
ಬೇಸಗೆಯೊಳ್ ಪುಟ್ಟಿದಂಗದಾಹೋದಯದಿಂ ೯೦

ವಚನ: ಇಂತು ಪೆರ್ಮೆವಡೆದ ಘರ್ಮಸಮಯಮೊರ್ಮೊದಲೊಳ್ ಭೂವಳಯಮನಾವರಿಸುತ್ತುಮಿರಲಾ ಕ್ಷತ್ರಿಯಚೂಡಾಮಣಿ ತತ್ಸಮಯಕ್ಕುಚಿತಮಾದ ಭೋಗೋಪಭೋಗಂಗಳನನುಭವಿಸುತ್ತುಮುತ್ಯುತ್ಸವದಿಂ ಕೆಲವುವತ್ಸರಂಗಳಂ ಕಳೆವುದುಂ

ಸ್ರಗ್ಧರೆ

ಕೊಂಡಾಡುತ್ತುಂ ಮಹಾದಾನದ ಪರಮಹಿಮಾಶಕ್ತಿಯಂ ಸೂಕ್ತಿಯಿಂದಂ
ಮುಂಡಾಡುತ್ತುಂ ಸುವಿದ್ಯಾಯುವತಿವದನಮಂ ಸಂತತಂ ಧರ್ಮಮಂ ಕೈ
ಕೊಂಡಾಡುತ್ತುಂ ಕರಂ ಬಾಹುಬಲಿ ಸುಕವಿರಾಜಂ ಚರಿತ್ರಪ್ರಕಾಂಡಂ
ಚಂಡೋದ್ದಂಡಪ್ರತಾಪಂ ಧರಣಿಯೊಳೆಸೆದಂ ಚಾತುರೀಜನ್ಮಗೇಹಂ ೯೧

ಗದ್ಯ : ಇದು ಸಕಳಭುವನಜನವಿನೂಯಮಾನಾನೂನ ಮಹಿಮಾಮಾನನೀಯ ಪರಮ
ಜಿನಸಮಯಕಮಳಿನೀಕಳಹಂಸಾಯಮಾನ ಶ್ರೀಮನ್ನಯಕೀರ್ತಿದೇವಪ್ರಸಾದ
ಸಂಪಾದಪಾದನಿಧಾನದೀಪವರ್ತಿಯುಭಯಭಾಷಾಕವಿಚಕ್ರವರ್ತಿ
ಬಾಹುಬಲಿಪಂಡಿತದೇವಪರಿನಿರ್ಮಿತಮಪ್ಪ ಧರ್ಮನಾಥ
ಪುರಾಣದೊಳ್ [1]ದಶರಥಮಹೀನಾಥ ತೀರ್ಥಕರತ್ವ
ಪುಣ್ಯಾನುಬಂಧನಿಬಂಧನೀ ಭೂತದಾನ
ವಿಧಾನಾನುಮೋದ[1]ವ್ಯಾವರ್ಣನಂ

**ಚತುರ್ಥಾಶ್ವಾಸಂ**

---

[1] ಗ್ರೀಷ್ಮಕಾಲ (ಜ)

# ಪಂಚಮಾಶ್ವಾಸಂ

ಕಂದ: ಶ್ರೀಜಿನಚರಣಾಂಬುಜಮಂ
ಪೂಜಿಸುತುಂ ಪಾತ್ರದಾನಮಂ ಮಾಡುತ್ತುಂ
ಧೀಜನವಿನುತಗುಣಂ ರಾ
ರಾಜಿಸಿದಂ ಸರಸಚತುರಕವಿಕುಳತಿಳಕಂ ೧

ವಚನ: ಮತ್ತಮಾ ದಶರಥಮಹೀನಾಥನಕೂಪಾರಚತುಷ್ಕ ಮೇರೆಯಾದ ಧಾರಿಣೀಮಂಡಳಮನಭಿರಕ್ಷಣಂಗೆಯ್ಯುತ್ತುಂ ಕತಿಪಯದಿನಂಗಳ್ ಪೋಗಲೊಡಮೊಂದು ದಿವಸಂ

ಸ್ರಗ್ಧರೆ
ಎನ್ನಂತಾವಂ ದಲಿಂದೀವರವಿತತಿಗೆ ವಿದ್ವೇಷಮಂ ಮಾಡುವಂ ಮ
ತ್ತೆನ್ನಂತುತ್ಪಂಕಜಾತಕ್ಕಿರದತಿಶಯದಿಂ ಕೂರ್ಪನಾವಂ ಕಳಾಸಂ
ಪನ್ನಂಗೆನ್ನಂತಿರಾವಂ ಬಿಡದೆ ಮುನಿವನಾತಂಗಧಃಪಾತಮಕ್ಕಿಂ
ತೆನ್ನಂತೆಂತೆಯ್ದೆ ಲೋಕಕ್ಕಱಿಪುವ ತೆಱದಿಂ ಸೂರ್ಯನಸ್ತಕ್ಕೆ ಸಂದಂ ೨

ಕಂದ: ವಾರಿಜಮಿತ್ರಂ ಕರದಿಂ
ವಾರುಣಿಯಂ ಪಿಡಿದು ಸೇವಿಸಿದ ಕಾರಣದಿಂ
ದೋರಂತಂಬರಮಂ ಬಿ
ಟ್ಟಾರಯ್ಯದೆ ನಡುಗಿ ಕೆಡೆದನಸ್ತಾಚಳದೊಳ್ ೩

ಸಾವಿರಕರಂಗಳಂ ಚರ
ಮಾವನಿಧರದಲ್ಲಿಯೂಱಿಯುಂ ಖರತೇಜಂ
ಭಾವಿಪೊಡೆ ಬಿಳ್ದನೆಂದೊಡ
ಮಾವಂಗಂ ಮಿಾಱಲಪ್ಪುದೇ ವಿಧಿವಶಮಂ ೪

ವಚನ: ಅಂತು ಸೂರ್ಯನಸ್ತಂಗತನಪ್ಪ ಸಮಯದೊಳ್

ಉತ್ಪಲಮಾಲೆ

ಮೂಡಣದಿಕ್ಕಿನಲ್ಲಿ ಪರಿಪೂರ್ಣಕಳಾಯುತಚಂದ್ರಮಂಡಳಂ
ಮೂಡಲೊಡಂ ಕುಮುದ್ವತಿಗೆ ಸಂತಸದಿಂದೆ ವಿಕಾಸಭಾವಮಂ
ಮಾಡಿದುದೆಯ್ದೆ ದೇವಗೃಹದೊಳ್ ವಿವಿಧಾತತವಾದ್ಯನಾದ್ಯಮುಂ
ಮಾಡಿದುದೀ ಜಗಕ್ಕೆ ನೆಱೆಮಾಡಿದುದರ್ಕಜತಾಪಶಾಂತಿಯಂ ೫

ಕಂದ: ಸಂಪೂರ್ಣಮಾದ ವಿಧುಬಿಂ
ಬಂ ಪೂರ್ವದಿಗಂಗನಾ ಲಲಾಟದೊಳಿಟ್ಟಾ
ಸೊಂಪಿನ ಚಂದನತಿಲಕದ
ಸೆಂಪಂ ತಳೆದಿರ್ದುದಂದು ಗಗನಾಂಗಣದೊಳ್ ೬

ವಚನ: ಆಪೊ[1]ತ್ತಿ[1]ನೊಳ್

ಮತ್ತೇಭವಿಕ್ರೀಡಿತ

ಶಶಿಬಿಂಬಂ ರವಿಬಿಂಬವೆಂಬ ವರಘಂಟಾಯುಗ್ಮಮಂ ಕಾಂತೆಯೆಂ
ಬೆಸವೀ ನೇಣಿನೊಳೆಯ್ದೆ ಕಟ್ಟಿ ನಭಮೆಂಬುದ್ದಾಮಮಪ್ಪಾನೆಗಂ
ಪೊಸತಾಗಿಬ್ಬ[2]ರಿ[2]ಯಲ್ಲಿ ಬಿಟ್ಟ ತೆಱದಿಂದೊಂದುಕ್ಷಣಂ ಶೋಭೆಯಂ
ಪೊಸೆಯುತ್ತಿರ್ದುದು ಮೂಡಲುಂ ಪಡುವಲುಂ ಚಂದ್ರಾರ್ಕಸನ್ಮಂಡಲಂ ೭

ವಚನ: ಮತ್ತಂ

ಉತ್ಪಲಮಾಲೆ

ಪಾಲ್ಗಡಲೆಯ್ದೆ ಪೆರ್ಚಿ ಘನಮಾಗಿಯೆ ಮೇರೆಯನಂದು ಮೀಱಿ ತಾಂ
ಮೇಲ್ಗಡ[3]ರು[3]ತ್ತುಮೀ ಧರಣಿಮಂಡಲಮೆಲ್ಲಮುಮಂ ಮುಸುಂಕಿಕೊಂ
ಡೇಳ್ಗೆಯೊಳಿರ್ದುದೆಂಬ ತೆಱದಿಂ ಬೆಳುದಿಂಗಳ ಮೊತ್ತಮೆತ್ತಲುಂ
ವಲ್ಗನದಿಂದೆ ಕೊರ್ವಿ ನೆಱೆಪರ್ವಿದುದೀ ಭುವನಾಂತರಾಳಮಂ ೮

ವಚನ: ಅಂತು ಪತ್ತುಂದಿಕ್ಕಿನೊಳ್ ಪಸರಿಸಿದ ತತ್ಪುಣ್ಯಮೂರ್ತಿಯ ಕೀರ್ತಿಯೊಳ್ ಪುರುಡಿಸುವಂತಚ್ಚವೆಳ್ದಿಂಗಳುಂ ದಶದಿಶಾಪಟಮಂ ಪರಿವ್ಯಾಪಿಸಿ ಸಮಸ್ತಜನಕ್ಕಾನಂದಮಂ ಸಂಪಾದಿಸುತ್ತುಮಿರಲಿತ್ತಲಾ ದಶರಥಮಹೀನಾಥನೊಂದಿಂದುಕಾಂತಶಿಲಾಮಯಮಾದ ಸಮುದಗ್ರಸೌಧಶಿಖರಾಗ್ರದೊಳಶೇಷವಿವೇಕವಿಶೇಷದೊಳೊಂದಿದ ಮೇಳದ ವಿಳಾಸಿನೀಕಳಾಪದೊಡಗೂಡಿ ಲೀಲೆಯಿಂದೋಲಗಂಗೊಟ್ಟಿರ್ದು ದಿಶಾಶೋಭಾವಳೋಕನಂಗೆಯ್ಯುತ್ತುಮಿರ್ಪಾಗಳ್ ತೊಟ್ಟನೆ ಕಟ್ಟಿದಿರೊಳ್

---

1 ಲ್ತಿ (ಜ) 2 ದಿ (ಜ) 3 ಲು (ಕಚ)

ಉತ್ಪಲಮಾಲೆ

ಈ ನರನಾಯಕಂಗಮೆನಗಂ ಸಲೆ ಚಾರುಕಳಾಭಿಯೋಗಮುಂ
ಮಾನಸಮಂದ್ರ ಮಾನವರ ಪಾದಮುಮೆಂದು ಸುಧಾಕರಂ ಕರಂ
ಮಾಸಿತತಾರಕಾಯುಮತಿವೃಂದದೊಳೊಂದಿ ನಭೋನಿವಾಸದೊಳ್
ತಾನುಮದಂತಿರೋಲಗದೊಳಿರ್ದೆಸೆದಂ ಪುರುಡಿಂದಮೆಂಬವೊಲ್ ೯

ಕಂದ: ಆ ರಾಜನ ಸರಿಯಾಗಿ ದ
ಲೀ ರಾಜಂ ಮುಗಿಲಲೇಶಮಾದೊಡಮೇನುಂ
ಸಾರದ ಮಿಗೆ ಪ್ರಸನ್ನ ನ
ಭೋರಾಜಾಲಯದೊಳೊಪ್ಪಮಂ ತಾಳ್ದಿರ್ದಂ ೧೦

ಚಂಪಕಮಾಲೆ

ಅತಿರಮಣೀಯಮಾಗಿ ಪೊಳೆವ ಶ್ರವಣಸ್ಥಿತಿಯಿಂದಮೊಪ್ಪಿ ಸ
ನ್ನುತಮೆನಿಸಿರ್ದ ಕೋಮಳಸುಹಸ್ತವಿಶೇಷದೊಳೊಂದಿ ಸಾರಮು
ಪ್ಪತಿಶಯಚಿತ್ರನಾಗಿ ವಿಶದಾಂಶುಕಮಂ ಪೊದೆದಿರ್ದು ತಾಳ್ದಿಯು
ನ್ನತಿಯನೆ ರಾಜನಂತಿರೆ ವಿರಾಜಿಸಿದಂ ಮಿಗೆ ರಾಜನಾಕ್ಷಣಂ ೧೧

ವಚನ: ಅಂತು ರಾಜಶಬ್ದಸಾಮ್ಯಸಂಜಾತದುರ್ವಹಗರ್ವದಿಂ ಖರ್ವನೆಂಬಂತೆ ನಿಜಪರಿಕರಪರಿವಾರದಿಂ ಪರಿವೃತನಾಗಿ ದಿವದೊಳ್ ಪ್ರತಿಕೂಲಸಭಾಶೋಭೆಯಂ ನಿರ್ವರ್ತಿಸಿ ತನ್ಮಧ್ಯದೊಳೊಪ್ಪುತ್ತುಮಿರ್ದ ಚಂದ್ರಮನಂ ನರೇಂದ್ರಕುಂಜರಂ ನೋಡಿ

ಕಂದ: ಮೆಚ್ಚಿ ನೃಪಾಳಂ ಹೃದಯದೊ
ಳಚ್ಚರಿಯಂ ತಾಳ್ದಿ ನಾಡೆ ಕೊಂಡಾಡುತ್ತುಂ
ಪೆರ್ಚಿದ ಚಂದ್ರನ ಸಿರಿಯಂ
ಚೆಚ್ಚರದಿಂ ನೋಡಿ ತೂಗುತಿರ್ದಂ ತಲೆಯಂ ೧೨

ವಚನ: ಅನ್ನೆಗಮಿತ್ತಲ್

ಶಾರ್ದೂಲವಿಕ್ರೀಡಿತ

ಕ್ರೂರಾಕಾರಮನೆಯ್ದೆ ತಾಳ್ದಿ ತಮಮುಂ ಜಿಲ್ಲುತ್ತುಮಿರ್ದೆಲ್ಲಿಯುಂ
ಘೋರಂ ಕಷ್ಟತರಂ ಭಯಂಕರಮುಖಂ ಪೀಡಾಕರಂ ರಾಹು ಬಂ
ದಾ ರಾಜದ್ವಿಧುಬಿಂಬಮಂ ಬಿಡದೆ ಮೇಲ್ವೊರ್ದುತ್ತುಮಿರ್ದತ್ತು ಪು
ತ್ತೋರಂತಾಗ್ರವಿಷಂ ಮಹಾಮೃತಮನಂದೆಯ್ತಂದು ಸಾರ್ವಂದದಿಂ ೧೩

ಚಂಪಕಮಾಲೆ

ವಿರಹಿಜನಕ್ಕೆ ತೀವ್ರಪರಿತಾಪಮನಾಗಿಸುತಿರ್ಪ ಕಾರಣಂ
ನೆರಪಿದ ಪಾಪಪಿಂಡಮಮ ತಾಂ ಪಿಡಿವಂತಿರೆ ರಾಹು ಚಂದ್ರನಂ
ತ್ವರಿತದೊಳೆಯ್ದೆ ಬಂದು ಪಿಡಿಯಲ್ಕೆ ಸುಧಾಕರಬಿಂಬಮಾಕ್ಷಣಂ
ಕರಮಮಣತ್ವಮಂ ತಳೆದು ಮುನ್ನಿನ ಶೋಭೆಯನೊಕ್ಕುದೆಲ್ಲಮಂ ೧೪

ವಚನ : ಅದಂ ಕಂಡು ಮಹೀಮಂಡನಂ ವಿಸ್ಮಯಂಬಡುತ್ತುಂ ಸಂಶಯಾಕುಳಿತ ಚಿತ್ತನಾಗಿ ತನ್ನೊಳಿಂತೆಂದು ವಿಕಲ್ಪಿಸಿದಂ

ಚಂಪಕಮಾಲೆ

ಸುರಕರಿ ಸೊಕ್ಕಿ ಪೊಕ್ಕು ಸುರಗಂಗೆಯುಮೆಯ್ದೆ ಕಲಂಕೆ ಪಂಕಜೋ
ತ್ಕರಮುಸಡೆತ್ತಿ ಕಿಳ್ತು ಪಿಡಿದಿರ್ದೊಡೆ ತೋಱುವ ಪಂಕಕಂದಮೋ
ತ್ವರಿತದೆ ತುಂಬಿಗಳ್ ಮುಸುಱಕೊಂಡ ವಿಕಾಸಿತ ಕೈರವಾಸ್ಯಮೋ
ಸುರುಚಿರನೀಳಕುಂತಳಸಮಾವೃತಪೂರ್ವದಿಗಂಗನಾಸ್ಯಮೋ ೧೫

ವಚನ : ಇಂತಿವಱೊಳಾವುದೆಂ[1]ದು[1] ಕ್ಷಣಮಾತ್ರಂಬರಂ ಸಂದೇಹಾಂದೋಳಿತ ಚಿತ್ತನಪ್ಪ ನೃಪಾಳೋತ್ತಮಂ ಬಳಿಯಂ ಚಂದ್ರಗ್ರಹಣಮೆಂದು ನಿಶ್ಚಯಿಸುತ್ತುಮಿರ್ಪಿನಂ ಸರ್ವಗ್ರಾಸಿಯಾಗಲಾಗಳೆ ಕತ್ತಲೆಯ ಮೊತ್ತಮೆತ್ತಲುಂ ಬಿತ್ತರಿಸೆ ತಾರಗೆ[2]ಗಳ[2]ನಿಮಿನಿಯೆನುತ್ತುಂ ಪೊಳೆಯಲದಂ ಕಂಡು ನಿಷ್ಪನ್ನನೇತ್ರದಿಂದಂತರಂಗದ ಪರಿಭೇದಮಂ ಪ್ರಕಟೀಕರಿಸುತ್ತುಂ ತನ್ನೊಳಿಂತೆಂದಂ

ಉತ್ಪಲಮಾಲೆ

ನೋಡಿರೆ ನೋಡಿರೇ ಕಟಕಟಾ ಕಡುಕಷ್ಟಮನಯ್ಯೊ ಅಯ್ಯೊ ಪೆಂ
ಪೋಡದ ಚಂದ್ರಮಂ ಪಿಡಿದು ನುಂಗಿದುದೀಗ[3]ಡೆ[3] ಬೆಂದ ರಾಹುವೇಂ
ಮಾಡುವೆನಾವೆನೋ ನಿಯತಿಯಂ ನೆಱೆಮೀಱುವನೀ ಧರಿತ್ರಿಯೊಳ್
ಮಾಡಿದ ಪುಣ್ಯಪಾಪಮನುಭೂತಿಯನೀಯದೆ ಸೈತೆಪೋಕುಮೇ ೧೬

ಈತನ ಶಕ್ತಿಯುಪ್ಪೊಡೆ ಸುರಾಸುರರಿಂಗಮಗೋಚರಂ ನಿಜ
ಪ್ರೀತನೆನಿಪ್ಪ ಕಾಮನನುಮಾಪತಿ ಭಾಳದೃಗಗ್ನಿಯಿಂದೆ ಸಂ
ಜಾತವಿಶಿಷ್ಟಕೋಪಮುಱೆ ಸುಟ್ಟೊಡೆ ತನ್ನಮೃತದ್ರವಂಗಳಂ
ಸಾತಿಶಯಂಗಳಂ ತಳಿದು ಜೀವನಮಂ ಪಡೆದಿಂದುವೆತ್ತಿದಂ ೧೭

ಕಂದ : ಆ ವೈರಪ್ರತಿಕಾರಮ
ನೋವದೆ ಮಾಳ್ಪೊಂದು ಬಯಕೆ ಕೈಮಿಗೆ ಕೋಪೋ
ದ್ಭಾವದಿನೆಂಬಂತೀಶನ
ಪಾವನಶಿರದಲ್ಲಿ ತನ್ನ ಪಾದಮನಿಟ್ಟಂ ೧೮

ಉತ್ಪಲಮಾಲೆ

ಭಾಸುರಬಾಡಬಾಗ್ನಿಯ ವಿಜೃಂಭಣದೊಂದೆಡೆಯಲ್ಲಿ ಮತ್ತೆ ಮ
ತ್ತೀ ಶಶಿ ತನ್ನ ಚಾರುಕಿರಣೋದಯದಿಂದೆ ಸಮುದ್ರವೃದ್ಧಿಯಂ
ಲೇಸೆನೆ ಮಾಡದಿರ್ದೊಡುಱಿಜೀವನಮಂ ಪಿಡಿದಿರ್ಪ ಶಕ್ತಿಯು
ದ್ಭಾಸನಮೆತ್ತಣಿಂ ಬಿಡದೆಬಂದುದದಕ್ಕೆನುತಿರ್ದನಾ ನೃಪಂ ೧೯

1 ದೊಂದು (ಜ) 2 ಗಳ್ ಮಿ (ಜ) 3 ಳೆ (ಜ)

ತನ್ನ ಕರಾಗ್ರದಿಂದೆ ಪರಮಾನವತೀಜನಚಿತ್ರಮಾನದೊಂ
ದುನ್ನತಿಮೂಲಮಂ ಬಿಡದೆ ಕೀಳ್ವ ಸಮರ್ಥನುಮೀತನಿಂದೆ ಮ
ತ್ತನ್ಯನದಾವನೋ ಪ್ರಬಲಮಪ್ಪ ತಮಸ್ತತಿಯೆಂಬ ಚೋರದು
ಸ್ಸೈನ್ಯಮನೆಯ್ದೆ ತೂಳ್ದುಪವನಾವನೊ ಭಾವಿಪೊಡೀತನಿಂ ಪರಂ ೨೦

ಚಂಪಕಮಾಲೆ

ಸುರತರುವಿಂಗೆ ಸೋದರನಶೇಷಜನಸ್ತುತಲಕ್ಷ್ಮಿಗಣ್ಣನು
ದ್ಧುರತರರತ್ನರಾಶಿಯುತ ವಾರಿಧಿಪುತ್ರನನೂನಸತ್ಕಳಾ
ದರನೆನಿಸೀ ಸುಧಾಂಶುಗಿರದಾದುದು ನೋಳ್ಪಡಮಾಯುವಸ್ಥೆಯ
ನ್ಯರನುೞಿ ಕೊಂಡುಕೂಗಿ ಪಟಚೂರ್ಣಮನಾಗಿಸನೇ ವಿಧಾತ್ರಕಂ ೨೧

ವಚನ: ಇಂತು ವಿಚಿತ್ರಸಾಮರ್ಥ್ಯಸಾರ್ಥದೊಳ್ ಕೂಡಿದ ಸಮುತ್ತಮಸಂಪತ್ತಿಯಿಂ ರೂಢಿವಡೆದ ಚಂದ್ರಮನೀಯವಸ್ಥೆಯನೆಯ್ದಿದನೆಂದೊಡೆ ಮತ್ತಿನನ್ಯರತಿತುಚ್ಛಸಾಮರ್ಥ್ಯಸಮನ್ವಿತಸ್ವಲ್ಪತರಸಂಪದುಪಗತರಪ್ಪ ಮನುಷ್ಯರಿಂತಪ್ಪವಸ್ಥೆಯನೆಯ್ದದರೆಂದು ವೈರಾಗ್ಯಸೌಭಾಗ್ಯಭಾಗ್ಯೋದಯಸಮಾವೃತಹೃದಯಂ ಧರಾಧಿನಾಯಕಂ ಸಿರಿಯ ಪಿರಿದಪ್ಪೊಂದಸ್ಥಿರತೆಯುಂ ಸಂಸಾರದ ನಿಸ್ಸಾರತೆಯುಮನಿಂತೆಂದು ಚಿಂತಿಸಿದಂ

ಕಂದ: ತಿಂಗಳ ಸಿರಿ ಪಕ್ಷದೊಳಂ
ಪಿಂಗಿದುದೆಂದೊಡೆ ಮನುಷ್ಯನಾವನೊ ಸಿರಿಯಿರ
ವಿಂಗಂ ಮುಯ್ಯಾಂತಿರ್ಪಂ
ಸಂಗಡಿಸಿದ ಗಾಳಿಯಂತೆ ಪಾಱುವುದಕ್ಕಂ ೨೨

ಉತ್ಪಲಮಾಲೆ

ಬೆಟ್ಟದ ಮೇಗಣಿಂ ಕೆಳಗೆ ಬೀಳ್ವ ಸುನಿರ್ಝರವಾರಿವೇಗದೋ
ಲೊಟ್ಟಜೆಯಿಂದೆ ಬಪ್ಪ ಬರವೇ ನೆಱೆ ಪೋಪುದು ಪೋಪುದೇ ಕರಂ
ನೆಟ್ಟನೆ ಬಪ್ಪುದೆಂದೊಡದಱಸ್ಥಿರಭಾವಮನಾವನೋ ನರಂ
ನಿಟ್ಟಿಸಲಾರ್ಪನಂತೆ ಸಿರಿಯಾಗತಿಯುಂ ಗತಿಯುಂ ಸ್ಥಿರತ್ವಮುಂ ೨೩

ಬರ್ಪೆಡೆಯಲ್ಲಿ ತೀವ್ರತರದುಃಖಮನೆಯ್ದಿಸುತಿರ್ಪುದಂತೆ ಮ
ತ್ತಿಪ್ಪೆಡೆಯಲ್ಲಿ ಕಾಣನಪರೆಂದುದನಾಲಿಸನೆಂತು ಮೂರ್ಛೆಯಂ
ತಪ್ಪದು ಪೋಪಪೊ[1]ತ್ತಿ[1]ನೊಳಮಾತ್ಮನನೋವದೆ ಕೊಂಡುಪೋದುದಿಂ
ತಪ್ಪುದುಕಾರಣಂ ವಿಷಸಹೋದರಿಯೆಂದಱಿದೆಂ ಕುಲಕ್ಷ್ಮಿಯಂ ೨೪

---

[1] ತ್ತಿ (ಜ)

ಶಾರ್ದೂಲವಿಕ್ರೀಡಿತ

ಎಂದಿರ್ದುಂ ಸಿರಿ ಕೆಟ್ಟುಪೋಪುದು ಚಿರಂ ಪುಣ್ಯಾತ್ಮನಲ್ಲಿರ್ದೊಡಂ
ಕುಂದಿಂತಿರ್ದೊಡೆಯುಂ ದುರಾತ್ಮನೊಳದೆಂತ[1]ತ್ಯು[1]ಚ್ಚವೃಕ್ಷಾಗ್ರದೊಳ್
ಸಂದಂ ಕೇಳಿಳಿವಂತೆ ಮತ್ತಮದುಂ ತಾಂ ಪೋದಂದು ಚಿತ್ತವ್ಯಥಾ
ವೃಂದಂ ಪೊರ್ದುಗುಮೆಂದು ಮುನ್ನಮೆ ಸುಪಾತ್ರಕ್ಕಿತ್ತುವಂ ಸತ್ಸುಖಂ ೨೫

ದಾನಂಗೆಯ್ಯದೆ ತಾನುಮುಣ್ಣದೆ ಮಹಾಯತ್ನಂಗಳಿಂ ವಸ್ತುವಂ
ದೀನಂ ರಕ್ಷಿಸುತಿರ್ದೊಡಾತನ ಧನಂ ಮತ್ತನ್ಯರಿಂಗಾಗಿಯು
ನ್ಯೂನೋ[2]ದ್ಭಾ[2]ಗಮನೀವುತಿರ್ಪುದಪರ್ಗಂ [3]ತಾಂ ತಮ್ಮ[3]ನೋರಾಗದಿಂ
ಕನ್ಯಾರತ್ನಮನೆಂತು ರಕ್ಷಿಸಿದೊಡಂ ಮತ್ತನ್ಯರಿಂಗಪ್ಪವೊಲ್ ೨೬

ಕಂದ: ಧನಮುಂಟಾದೊಡೆ ಭೋಗಂ
ಘನತರಸತ್ಪಾತ್ರದಾನಮುಳ್ಳೊಡೆ ಸಫಲಂ
ಜನದೆ ಮನದಾಸೆಯುಂ ತಾ
ನಿನಿಸುಂ ಪೂರೈಸದಾತನರ್ಥಂ ವ್ಯರ್ಥಂ ೨೭

ದಾನಿ ಕಡುಲೋಭಿ ಧನಮಂ
ದಾನದೆ ತಾಂ ಕೂಡಿಕೊಂಡು ಪೋಪುದಱಿಂದಂ
ದೀನಂ ತ್ಯಾಗಿಯದೆಂತೆನೆ
ತಾನಿಲ್ಲಿಯೆ ಬಿಟ್ಟುಪೋಪನಪ್ಪುದಱಿಂದಂ ೨೮

ಸ್ಥಿರಮಲ್ಲದ ಸಿರಿ ಸಾರ್ದೊಡೆ
ಪಿರಿದುಂ ದಾನಮನೆ ಮಾಡುಮಂ ಕಡುಜಾಣಂ
ನೆರಪಿ [4]ಬ್ಬೈತಿ[4]ಟ್ಟು ಮೆಲ್ಲನೆ
ಪರಿಭೋಗಿಪೆನೆಂದು ಬಗೆವವಂ ಕಡುಮೂರ್ಖಂ ೨೯

ವಚನ: ಇಂತು ಸಿರಿಯ ಕೇಡಂ ಪರಿಭಾವಿಸಿ ಮತ್ತಂ ಸಂಸಾರದ ನಿಸ್ಸಾರಸ್ವರೂಪಮಂ ಮನದೊಳಿಂತೆಂದು ಚಿಂತಿಸಿದಂ

ಚಂಪಕಮಾಲೆ

ಹಡಿಕೆಯ ತಾಣಮೆಯ್ದೆ ಕೊಳೆ ನೆತ್ತರ ಕೀವಿನ ಭಾಜನಂ ಸಮಂ
ತಡಸಿದ ಮಾಂಸಪಿಂಡಮೆಲುಮಂ ನರದಿಂದಮೆ ಕಟ್ಟಿ ಚರ್ಮದಿಂ
ಬಿಡದೆ ಮುಸುಂಕಿ ಮಾಡಿದುದು ಮತ್ತಮುಜಂಗಮಮುದ್ಘಜಂಗಮಂ
ನಡಯಿಪ ಜಂತ್ರಮಾದ ತನುವೆನ್ನದಿದೆಂದು ವಿಮೋಹಿಪಂ ಜಡಂ ೩೦

---

1 ಭ್ಯ (ಕ) 2 ದ್ಯೋ (ಜ) 3 ತಾತಂಮ (ಜ) 4 ಬಳ್ತಿ (ಜ)

ಕಂದ: ಮುಪ್ಪಿರದೆ ತೋಱುವೆಯ್ಯಂ
ಸೊಪ್ಪಿಸಿದಂತಾಗೆ ಮಾಡೆ ಶಕ್ತಿಯು ಭರಮುಂ
ನೇರ್ಪಟ್ಟು ಜೆಲ್ವುಮಾದಂ
ತಪ್ಪಿದುದಪಹಾಸ್ಯಮಪ್ಪ ರೂಪಾಯ್ತು ಕರಂ ೩೧

ತನುವಿಂಗೆ ಚಾರುಭೂಷಣ
ಮೆನಿಸುವ ಯವ್ವನಸುರತ್ನಮೆಲ್ಲಿಯೊ ಬಿಳ್ದ
ತ್ತನುಪಮನೆಂದೀಕ್ಷಿಸುವಂ
ತೆನೆ ವೃದ್ಧಂ ಕೆಳಗನೀಕ್ಷಿಸುತ್ತುಂ ನಡೆವಂ ೩೨

ಮಹಾಸ್ರಗ್ಧರೆ

ಜರೆಯೆಂಬೀಕಾಂತೆ ತನ್ನಿಂದುಳಿದಬಲೆಯರೊಳ್ ಕೂಡಿ ಬಾಳುತ್ತುಮಿರ್ದಂ
ನರನೆಂಬೀಕೋಪದಿಂ ಬಂದಡಸಿ ಪಿಡಿದು ಮುಂಗೂದಲಂ ಪೊಯ್ದು ಮತ್ತಂ
ವರಪಾದದ್ವಂದ್ವದಿಂ ಪಲ್ಮುಱಿಯೊದೊಡೆ ಬಾಯಲ್ಲಿ ಪುಟ್ಟಿರ್ದ ದಂತೋ
ತ್ಕರಮೆಲ್ಲಂ ಬಿಳ್ದುದೆಂಬಂತಿರೆ ಕಳೆದವು ವೃದ್ಧಂಗೆ ದಂತಂಗಳೆಲ್ಲಂ ೩೩

ಮತ್ತೇಭವಿಕ್ರೀಡಿತ

ತೆರೆಗಳ್ ಬಂದು ಶರೀರಮಂ ಬಿಡದೆ ಸುತ್ತಂ ಮುತ್ತಿಕೊಂಡಿರ್ದೊಡು
ದ್ಧುರಸಂಕ್ಲೇಶದಿನೆಯ್ದೆ ಜೋಲ್ದು ಶಿಥಿಲತ್ವಾಧಾರಮಾಗಲ್ ಭಯಾ
ತುರದಿಂ ಕೆಟ್ಟನನಂಗನೆಂಬ ತೆಱನಂ ವೃದ್ಧಂಗೆ ಪೇಳ್ದೀ ಜರಾ
ಪರಿಹಾಸಪ್ರಭೆಯೆಂಬಿನಂ ಪಳಿತಮಾಳ್ದತ್ತೊಪ್ಪಮಂ ಕೆನ್ನೆಯೊಳ್ ೩೪

ಶಾರ್ದೂಲವಿಕ್ರೀಡಿತ

[1]ಪಿಂ[1]ದಾಂ ಬಂದಪೆನೆಂಬಿದಂ ನರರ್ಗೆ ನೀಂ ಪೇಳೆಂದು ಮೂರ್ಖಾಂತಕಂ
ನಿಂದ್ಯಾಂಗಂ ಜರೆಯೆಂಬ ದೂದವಿಯುಮಂ ಮುಂದಟ್ಟೆ ಶೀಘ್ರತ್ವದಿಂ
ಬಂದೊಂದಿರ್ದವಳಂ ನಿರೀಕ್ಷಿಸಿಯುಮಾಕಾಲಂ ತಗುಳ್ದೆಯ್ದೆ ಸಾ
ರ್ದಂದಿಂತೊಂದದ ಮುನ್ನಮೇ ತಪದಿನಾಂ ಸಿದ್ಧತ್ವಮಂ ಸಾಧಿಸೆಂ ೩೫

ಮತ್ತೇಭವಿಕ್ರೀಡಿತ

ನೆರಮಂ ಪಾರದೆ ಕೊಲ್ವ ಮೃತ್ಯುಗೆ ಗಜಂ ವ್ಯಾಘ್ರಾಳಿಯುಂ ಕಂಟಕೋ
ತ್ಕರಮುಂ ಶಸ್ತ್ರಸಮೂಹಮುಂ ವಿಷಮುಮುತ್ಯುಗ್ರಾಹಿಸಂದೋಹಮುಂ
ನೆರಮಾಗಲ್ ಮಿಗೆ ಕೊಲ್ಲದಿರ್ಪನೆ ಖಳಂ ಸಂಸಾರಿಜೀವಂಗಳಂ
ಭರದಿಂದಂ ಸುಡದಿಪ್ಪುದೇ ಘೃತಸಮಿತ್ಸಂಘಾತದಿಂ ಪಾವಕಂ ೩೬

---

[1] ಬಂ (ಕ)

ಕಂದ: ಎಡರಡಸಿದಲ್ಲಿ ಶರಣಂ
ಕಡೆಗಣಿಸುವೊಡಾರುಮಿಲ್ಲ ಸಂಸಾರಿಗೆ ತಾಂ
ಕಡೆಯಿಲ್ಲದಬ್ಧಿಮಧ್ಯದ
ಹಡಗಂ ಬಿಟ್ಟಿರ್ದ ಪ[1]ಕ್ಷಿ[1]ಗೆಂತಂತೆವೊಲಂ ೩೭

ವಚನ: ಇಂತು ಶರೀರದಸ್ಥಿರತೆಯನವಧರಿಸಿ ಮತ್ತಂ ಸಂಸಾರಿಕಸೌಖ್ಯದಂದಮನಿಂತೆಂದು ಬಗೆದಂ

ಕಂದ: ವಿಷಮುಮೆನಿಸಿರ್ದ ದುಃಖಾ
ಮಿಷಮುಂ ಮಾಡುವ ಚಿರಂ ದಲಲ್ಲದ ಕಡುಕ
ಲ್ಮಷಕಾರಣಮಾಗಿರ್ದೀ
ವಿಷಯಸುಖಕ್ಕೆಳಸಿಯಾತ್ಮಹಿತಮಂ ಮಱತವರ್ ೩೮

ಮತ್ತೇಭವಿಕ್ರೀಡಿತ
ಘನದುಃಖಂಗಳನೆಯ್ದೆ ಮಾಳ್ಪ ವನಿತಾಸೌಖ್ಯಕ್ಕೆ ಬಾಯ್ವಿಟ್ಟು ದು
ರ್ಮನುಜಂ ಸಿಕ್ಕಿ ವಿಶೇಷದಿಂದೆ ಬಳಲುತ್ತಿರ್ಪಂ ದಲಾತ್ಮಜ್ಞನೆಂ
ದೆನಿಪಂ ಬಾಯ್ವಿಡನಂಬುವೆಂಬ ಬಗೆಯಿಂ ಗಾಂ[2]ಪಂ[2] ಮರೀಚೀಜಲ
ಕ್ಕೆನಸುಂ ಬಾಯ್ವಿಡುವಂ ಪರೀಕ್ಷಕನದಕ್ಕೆಂತಾದೊಡಂ ಬಾಯ್ವಿಡಂ ೩೯

ಕಂದ: ಆಗಲ್ಬೇಡಿರ್ದ ಲಸ
ದ್ಭೋಗಂಗಳೊಳುಂಟೆ ನಿಶ್ಚಯಂ ಪೋದವು ತಾ
ವೇಗೆಯ್ದುಂ ಪೋದುವೆ ಮ
ತ್ತೀಗಳಿನ ಸುಖಂಗಳಿಂಗೆ ಬಾಯಂ ಬಿಡುವರ್ ೪೦

ಖಳತರಸಪ್ತವ್ಯಸನಂ
ಗಳ ವಶಗತರಾಗಿ ಕಷ್ಟಮತಿಗಳ್ ದುಃಖಂ
ಗಳನನುಭವಿಸುತ್ತಿರ್ಪರ್
ತಳವಱರ ವಶಕ್ಕೆ ಸಂದ ಕಳ್ಳರ ತೆಱದಿಂ ೪೧

ಸಿರಿ ಬಡತನಕ್ಕೆ ಪುಟ್ಟುಂ
ಮರಣಕ್ಕೆ ಸುಖಂ ಸಮಂತು ದುಃಖಕ್ಕೆ ಮನೋ
ಹರ ಯುವ್ವನಮದು ಮುಪ್ಪಿಂ
ಗುರುಕಾರಣಮೆಂಬುದು ಬಲ್ಲೊಡಂ ಮೋಹಿಸುವರ್ ೪೨

[1] ಕ್ಷಿ (ಜ) [2] ತಂ (ಜ)

ಉತ್ಪಲಮಾಲೆ

ಪೆಂಡತಿ ದುಃಖಪಿಂಡಮುಱೆತಸೂನು ಕೃಶಾನು ಧನಂ ಸುಬಂಧನಂ
ಮಂಡಳಗಲ್ಲಿ ಬಂಧುಪರಿಮೋಹನಸಿಂಧು ಪರಿಗ್ರಹಂ ಗ್ರಹಂ
ಖಂಡಿತಬೋಧನಾದ ಮನುಜಂ ನಿಜದಿಂದೆ ಪರಂಗಳಪ್ಪುವಂ
ಕಂಡುಮುಪಕ್ಕೆ ಮೋಹಿಸುವನೆನ್ನವಿವೆಂಬ ದುರಾಭಿಶಂಕೆಯಿಂ ೪೩

ಪಿಂದಣ ಜನ್ಮದಲ್ಲಿ ಕೃತಪುಣ್ಯಮನೀಗಳುಣುತ್ತುಮಿರ್ದೊಡಂ
ಮುಂದಣ ಜನ್ಮದಲ್ಲಿಯುಮುದಾಗಲೆವೇಳ್ಪುದುಮೆಂದು ಮತ್ತೆಯುಂ
ಕುಂದದ ಪುಣ್ಯಮಂ ಬಿಡದೆ ಮಾಡುವನೀಗಳೆಯೆಂತುಮಾಡದಿ
ರ್ದಂದುಱೆ ಬಿತ್ತನಟ್ಟು ಪ[1]ದೆ[1]ದುಣ್ಬ ನರಂಗೆಣೆಯಾಗದಿರ್ಪನೇ ೪೪

ವಚನ : ಅಂತುಮಲ್ಲದೆಯುಂ

ಕಂದ : ಮೊದಲಲ್ಲಿ ಯೌವರಾಜ್ಯಂ
ಪದಪಿಂದಂ ನಡುವೆ ಸಕಳಸಾಮ್ರಾಜ್ಯಂ ತಾಂ
ತುದಿಯಲ್ಲಿ ತಪೋರಾಜ್ಯಂ
ಮದನ್ವಯಾಗತ ನೃಪರ್ಗೆ ಕರಮಿದು ಸಹಜಂ ೯೫

ಆನೆಂತುಮಾಡದಿರ್ದೊಡೆ
ಭೂನುತಮಪ್ಪೆನ್ನ ವಂಶವೃದ್ಧಕ್ರಮಮಂ
ಹೀನಂ ಮಾಳ್ಪವನಪ್ಪೆಂ
ಮಾನಿತಪುತ್ರಂ ಕುಲಕ್ಕೆ ದೀಪಕನಕ್ಕುಂ ೪೬

ವಚನ : ಇಂತು ತೂರ್ಣಂ ಪರಿಜೀರ್ಣಕರ್ಮಬಂಧನನಪ್ಪಾ ವಸುಂಧರಾಧಿನಾಯಕಂ ಸಿರಿಯ ತರಳತ್ವಮಂ ಸಂಸಾರಸ್ವರೂಪದ ನಿಸ್ಸಾರತೆಯುಮಂ ಮನದೊಳಭಿವರ್ಣಿಸಿ ಸಾಂಸಾರಿಕಸುಖಕ್ಕೆ ಪಿರಿದುಂ ಕೊಕ್ಕರಿಸಿ ನಿಯಮದಿಂ ದುಶ್ಚರತಪಶ್ಚರಣಪರಿಗ್ರಹಣಮಂ ಮಾಳ್ಪೆನೆಂದು ನಿಶ್ಚಯಿಸಿ ಬಳಿಯಂ ವಿಪಶ್ಚಿಚ್ಚೂಡಾಮಣಿಭೂಮಿನೀಸಭೆಯಂ ವಿಸರ್ಜಿಸಿ ಸಿಂಹಾಸನದಿಂದಮೆಳ್ದು ಪೋಗಿ ಹಂಸತೂಳಪರಿಕಲ್ಪಿತಮಾದ ತಲ್ಪತಳದೊಳೊಯ್ಯನೆ ಮೆಯ್ಯನೀಡಾಡಲೊಡಂ ವೈರಾಗ್ಯಚಿಂತಾಯುವತಿಸಮಾಲಿಂಗಿತನಪ್ಪಾ ಭೂಪತಿಯಂ ನಿದ್ರಾಪುರಂಧ್ರಿ ಪುರುಡಿಂದೆಂಬಂತೆ ಪೊರ್ದದಿರೆ ಮತ್ತಮೆತ್ತಾನುಮಿರುಳುಂ ಕಳೆದು ಸುಪ್ರಭಾತಸಮಯದೊಳ್

ಕಂದ : ಮಂಗಳಗಾಯಕಗೀತರ
ವಂಗಳ ಪಾಠಕಜನಂಗಳೋದುವ ಸತ್ಪ
ದ್ಯಂಗಳ ದೇವಾಲಯಮಾ
ದ್ಯಂಗಳ ಸುಶ್ರವಣದಿಂದಮೆಳ್ದಂ ನರಪಂ ೯೭

[1] ಡೆ (ಕಚ)

ವಚನ : ತದನಂತರಂ ದಂತಧಾವನಸ್ನಾನಮುಂ ಮಾಡಿ ಧೌತವಸ್ತ್ರದಿಂದಳಂಕೃತನಾಗಿ ಕತಿಪಯಭವ್ಯಜನಂಬೆರಸು ಚೈತ್ಯಾಲಯಕ್ಕೆ ಬಂದು ಸಂಗೀತವಾದ್ಯನೃತ್ಯಸಹಿತಂ ಬಸದಿಯಂ ಬಲಗೊಂಡು ಪಾದಪ್ರಕ್ಷಾಲನಾನಂತರಂ [1]ನಿಷಿದ್ಧಿ[1]ಯೆಂದುಚ್ಚಾರಣಂಗೆಯ್ಯುತ್ತುಮೊಳಗಂ ಪೊಕ್ಕು ಮುಕುಳಿತಮಾದ ಕರಕಮಳಮಂ ನೊಸಲ್ಗೆತಂದು ಜಯ ಜಯ ಎಂದು ಸಾಷ್ಟಾಂಗಪ್ರಣತನಾಗಿ ಬಳಿಯುಮಷ್ಟವಿಧಾರ್ಚನೆಯಿಂದಂ ದುಶ್ಚ್ಯವನಾರ್ಚನೀಯನ ಸಚ್ಚರಣಮಂ ಪೆರ್ಚಿದ ಭಕ್ತಿಯಿಂದರ್ಚಿಸಿ ತತ್ಪರಮೇಶ್ವರಂಗಭಿಮುಖನಾಗಿ ನಿಂದು

*

ಕಂದ : ಜಯ ಜಯ ಜಯ ಶುಭಭಾವಾ
ಜಯ ಜಯ ಜಯ ವಿಧೃತವಿಲಸದಸುಭಾವಾ
ಜಯ ಜಯ ಜಯ ನತದೇವಾ
ಜಯ ಜಯ ಜಯ ರಕ್ಷಿಸೆನ್ನನರ್ಹದ್ದೇವಾ ೪೮

ಜಯ ಜಯ ಜಯ ಸರ್ವಜ್ಞ
ಜಯ ಜಯ ಜಯ ಕೋಟಿಚಂದ್ರಕಾಂತಿಮನೋಜ್ಞಾ
ಜಯ ಜಯ ಜಯ ಬಹುಲಜ್ಞ
ಜಯ ಜಯ ಜಯ ರಕ್ಷಿಸೆನ್ನನರ್ಹದ್ದೇವಾ ೪೯

ಜಯ ಜಯ ಜಯ ಜಿನನಾಥಾ
ಜಯ ಜಯ ಜಯ ಪರಮನಿತ್ಯಮಹಿಮಸನಾಥಾ
ಜಯ ಜಯ ಜಯ ಮುನಿನಾಥಾ
ಜಯ ಜಯ ಜಯ ರಕ್ಷಿಸೆನ್ನನರ್ಹದ್ದೇವಾ ೫೦

ಜಯ ಜಯ ಜಯ ಹತಬಾಧಾ
ಜಯ ಜಯ ಜಯ ಸಕಳವಿಮಳಕೇವಳಬೋಧಾ
ಜಯ ಜಯ ಜಯ ಸಮಗಾಥಾ
ಜಯ ಜಯ ಜಯ ರಕ್ಷಿಸೆನ್ನನರ್ಹದ್ದೇವಾ ೫೧

ಜಯ ಜಯ ಜಯ ಗತಕಾಮಾ
ಜಯ ಜಯ ಜಯ ವಿಶ್ವವಿನುತಕೀರ್ತಿಸ್ತೋಮಾ
ಜಯ ಜಯ ಜಯ ಸತ್ಪ್ರೇಮಾ
ಜಯ ಜಯ ಜಯ ರಕ್ಷಿಸೆನ್ನನರ್ಹದ್ದೇವಾ ೫೨

---

1 ನಿಸ್ಸಹಿ (ಜ) * ಸ್ತನಾಷ್ಟಕ (ಗ)

ಜಯ ಜಯ ಜಯ ಗುಣಭೂಷಾ
ಜಯ ಜಯ ಜಯ ರಹಿತವಿಷಮತರದೋಷಾಯಾ
ಜಯ ಜಯ ಜಯ ಹಿತಭಾಷಾ
ಜಯ ಜಯ ಜಯ ರಕ್ಷಿಸೆನ್ನನರ್ಹದ್ದೇವಾ ೫೩

ಜಯ ಜಯ ಜಯ ದಲನಿಂದ್ಯಾ
ಜಯ ಜಯ ಜಯ ನಿಖಿಲಭುವನಜನತಾವಂದ್ಯಾ
ಜಯ ಜಯ ಜಯ ಸುಖನಂದ್ಯಾ
ಜಯ ಜಯ ಜಯ ರಕ್ಷಿಸೆನ್ನನರ್ಹದ್ದೇವಾ ೫೪

ಜಯ ಜಯ ಜಯ ಕೃತಕೃತ್ಯಾ
ಜಯ ಜಯ ಜಯ ಶೇಷನಿಂ ವಿಶೇಷಸ್ತುತ್ಯಾ
ಜಯ ಜಯ ಜಯ ಯುತಸತ್ಯಾ
ಜಯ ಜಯ ಜಯ ರಕ್ಷಿಸೆನ್ನನರ್ಹದ್ದೇವಾ ೫೫

ವಚನ: ಎಂದನೇಕಸ್ತುತಿಶತಸಹಸ್ರಂಗಳಿಂದಾ ಪರಮೇಶ್ವರನಂ ಸ್ತುತಿಗೆಯ್ದು ಪೊಡಮಟ್ಟು ಶ್ರುತಸಂದನಾನಂತರಂ ಗುರುಗಳಿಂಗೆ ಪಾದಾರ್ಚನಾಪೂರ್ವಕಂ ನಮಸ್ಕರಿಸಿ ನಿತ್ಯಬ್ರತಧಾರಿಯಾಗಿ ಜಿನಮಾರ್ಗಪ್ರಭಾವಕರಪ್ಪ ಜೈನೋಪಾಧ್ಯಾಯರ್ಗೆ ಸುವರ್ಣವಸ್ತ್ರ ಕಪಿಲಾಕಲಾಪಂಗಳಿಂ ನಿತ್ಯದಾನಮಂ ನಿರ್ವರ್ತಿಸಿ ಕಿಱಿದುಂ ಪೊಳ್ತು ಧರ್ಮಕಥಾರಸಾಯನದಿಂ ಶ್ರವಣೇಂದ್ರಿಯಮಂ ತಣಿಪಿಸಿ ಬಳಿಯಂ ಬೀಳ್ಕೊಂಡರಮನೆಗೆ ಬಂದು ಸಮುಪಚರಿತ ಮಜ್ಜನಭೋಜನವ್ಯಾಪಾರಪರನಾಗಿ ಚಾರುಕರ್ಪೂರ[1]ಪೂ[1]ರಪಾರಿಸಂಸ್ಕಾರ[2]ದಿ[2] ಬಹಳಪರಿಮಳಮಂ ಬಳಯಿಸುತ್ತಿರ್ಪ ತಾಂಬೂಲಚರ್ವಣದಿಂದಂತರಂಗಸಂಗತರಾಗರಸಮಂ ಬೇಗದಿಂ ಪೊಱಗೆ ಪೊಱಮಡಿಪಂತಧರಮಂ ರಾಗರಂಜಿತಮಂ ಮಾಡುತ್ತುಂ ವಿಚಿತ್ರವೇತ್ರಧರಪುರಸ್ಸರಂ ನಿಜಸಭಾನಿವಾಸಕ್ಕೆ ಬಂದು ವೃಂದಮಂತ್ರಿಮಂಡಳಿಕ ದಂಡನಾಥ ಮಹಾಪ್ರಧಾನ ಪುರೋಹಿತ ಸಾಮಂತ ಸೇನಾನಾಯಕರ್ ಮುಖ್ಯಮಾದಾಪ್ತವರ್ಗಂ ಬೆರಸು ಬಂದು ನಿಷ್ಪ್ರತ್ಯೂಹಾಪದಪರಿಪುಷ್ಟ ಸಿಂಹವಿಷ್ಟರನಿವಿಷ್ಟನಾಗಿ

ಕಂದ: ಅತಿರಥಕುಮಾರನಂ ಭೂ
ಪತಿ ಬರವೇಳ್ದಟ್ಟಿದಂ ಪ್ರತೀಹಾರಕರಂ
ನುತವಸ್ತ್ರಾಲಂಕರಣಾ
ನ್ವಿತನುಚ್ಚಮನೋನುರಾಗದಿಂ ಪೊಱಮಟ್ಟಂ ೫೬

---

[1] ಪ (ಜ) [2] ದಿಂ (ಜ)

ಮಹಾಸ್ರಗ್ಧರೆ

ಮಕುಟಾಗ್ರ ಪ್ರೋತಭಾಸ್ವನ್ಮಣಿಕಿರಣದಿನಾಕಾಶಮಂ ಚಿತ್ರಿಸುತ್ತುಂ
ಸಕಲಾಲಂಕಾರಕಾಂತಿಪ್ರಸರದೆ ವಿಲಸದ್ವಸ್ತ್ರಮಂ ಚಿತ್ರಿಸುತ್ತುಂ
ಸುಕನತ್ಪಾದಾಬ್ಜವಿನ್ಯಾಸದೆ ಮಣಿಧರೆಯಂ ಚಿತ್ರಿಸುತ್ತುಂ ವಿಶಿಷ್ಟಾ
ಧಿಕಪುಣ್ಯಂ ಬಂದು ಪೊಕ್ಕಂ ನೃಪತಿಸಭೆಯನೇಕಾಂಗವೀರಂ ಕುಮಾರಂ ೫೭

ವಚನ: ಅಂತುಬಂದು ವಿನಯವಿನಮಿತೋತ್ತಮಾಂಗನಾಗಿ ನರಪಾಲ ಪರಿಸಂಜ್ಞಿತಮಪ್ಪ ಬಲದ ಕೆಲದೊಳ್ ಕುಳ್ಳಿರ್ಪು[1]ದುಂ ಮತ್ತಂ[1]

ಕಂದ: ಆ ನರಪಂ ತನ್ನ ಕುಮಾ
ರಾನನಮಂ ನೋಡಿ ನುಡಿದನತಿಮುದದಿಂದಂ
ಮಾನಿತಸಭೆ ಭಾಪ್ಪೆನೆ [2]ಸತ್[2]
ಜ್ಞಾನಾಂಬುಧಿ ಚತುರವಚನಜಯಚಾತುರ್ಯಂ ೫೮

ವಚನ: ಅದೆಂತೆನೆ

ಉತ್ಪಲಮಾಲೆ

ಜೇಸಱದಿನ್ನೆಗಂ ಭವಸುಖಾನುಭವಾಂಶೆಯೊಳೊಂದಿ ವೈರಿಸಂ
ತ್ರಾಸನಮಂ ವಿನಿರ್ಮಿಸಿ ತದೀಯ ಸುದುರ್ಗಮದುರ್ಗವರ್ಗಮಂ
ಲೇಸೆನೆ ಕೊಂಡೆನಿನ್ನು ಕೆಡದಿರ್ದ ಸುಖಕ್ಕೆಳಸುತ್ತುಮಿರ್ದುದೆ
ನ್ನಾಶಯಮಂತು ಕಾರಣಮೆ ಸಾಧಿಪೆನಾನಪವರ್ಗದುರ್ಗಮಂ ೫೯

ಕಂದ: ಅದು ಜಿನದೀಕ್ಷಾಬಲಸಂ
ಪದದಿಂದಲ್ಲದೆ ಸುಸಾಧ್ಯಮಾಗದು ದುರ್ಗಂ
ವಿದಿತ ಚತುರ್ವಿಧಬಲದೊಂ
ದೊದವಿಂದಂ ಸಾಧ್ಯಮಪ್ಪ ತೆಱದಂತೆವೊಲಂ ೬೦

ವಚನ: ಅದುಕಾರಣದಿಂ ಜಿನದೀಕ್ಷೆಯಂ ಕೈಕೊಳುವೆನೆಂದು ತಱಿಸಂದು ನುಡಿವುದಂ ಕೇಳ್ದು ಸಭಾಜನಮೆಲ್ಲಂ ಸಂಕ್ಲೇಶಭಾಜನಮಾಗಿ ಕಾರ್ಗಾಲದ ಕಾದಂಬಿನೀನಿನದಮಂ ಕೇಳ್ದ ಕಳಹಂಸೆಯಂತೆ ಕಳವಳಿ[3]ದು ಮಲ್ಕು[3]ಲ ಮಱುಗುತ್ತಮಿರಲಲ್ಲಿಯೊರ್ವಂ ಶೂನ್ಯವಾದ ಪ್ರತಿಪಾದನಪ್ರವೀಣನುಂ ಪರಿವಿದಿತವಿಚಿತ್ರತತ್ತ್ವನುಂ ಚಾರ್ವಾಕಮತಾನುಸಾರಿಮತಿಯುಮಪ್ಪ ಸುಮಂತ್ರನೆಂಬ ಮಂತ್ರಿ ಬಿನ್ನಪಮೆಂದಿಂತೆಂದಂ

---

1 ದುಂ (ಜ) 2 ಸು (ಜ) 3 ಸಿ ಮಮ್ಮ (ಜ)

ಉತ್ಪಲಮಾಲೆ

ಪುಂಡೆಯು ಕೂಡಲಂ ಪಱಿದುಬಿಟ್ಟು ದಲುಟ್ಟುದನೆಯ್ದೆ ದೇಹಮಂ
ಮಂಡಿಸಿ ಸೌಖ್ಯಮಂ ಪಡೆವೆನೆಂಬ ದಿಗಂಬರವಾಕ್ಯಮಂ ಮನಂ
ಗೊಂಡುಱೆ ಕೇಳ್ದು ನೀಂ ಮರುಳನಾಗದಿರಿಂದ್ರಿಯಪೋಷಿಯಾಗು ಕೇಳ್
ಕಂಡವರಾರೊ ಮುಂದಣ ಭವಂಗಳನಿಲ್ಲಿ ಧರಾಧಿನಾಯಕಾ ೬೧

ಶಾರ್ದೂಲವಿಕ್ರೀಡಿತ

ಕಾಣಲ್ಬಾರದ ಮೋಕ್ಷಸೌಖ್ಯ ಪರಿಸೇವಾಲಾಭದಾಕಾಂಕ್ಷೆಯಿಂ
ಕಾಣುತ್ತಿರ್ದ ಸಮಸ್ತರಾಜ್ಯಸುಖಮಂ ಬಿಟ್ಟಪ್ಪೆನಿನ್ನೆಂಬಿದಂ
ಕ್ಷೋಣೀನಾಯಕ ಮಾಣ್ದು ನೀಂ ಸುಖದೊಳೋಲಾಡುತ್ತಿರಾಮಂ ಪಯ
ಶ್ರೇಣೀಕಾರಣಮಾಕಳಸ್ತನಮುಮಂ ಮಾಣ್ದೀಸುಮಂ ಶೃಂಗಮಂ ೬೨

ವಚನ : ಅಂತುಮಲ್ಲದೆಯುಂ

ಚಂಪಕಮಾಲೆ

ಎಲೆ ನೃಪ ಜೀವತತ್ತ್ವದ ಪೊಲಂಬದು ಭಾವಿಪೊಡಿಲ್ಲ ಪುಣ್ಯಮುಂ
ಕಲುಷಮುಮೆಂಬುದಿಲ್ಲದಱಿಂ ಸೆಯ್ದುವ ತತ್ಪರಲೋಕವಾರ್ತೆಯುಂ
ಸಲಿಲುಱೆ ಕೇಳ್ವೊಡಿಲ್ಲದಱಿ ಕಾಂಕ್ಷಣಮೆಂಬುದು ಗಾವಿಲಂ ನಭಃ
ಫಲದಂಸಭೋಗಮಂ ಬಯಸಿ ಬಾಯ್ವಿಡುಮಂದಮನಂಟುಮಾಡುಗುಂ ೬೩

ಸ್ರಗ್ಧರೆ

ಪುಟ್ಟಿಂದಂ ಮುನ್ನೆ ಸಾವಿಂ ಬಳಿಯುಮವಯುಚ್ಛೇದಮಂ ಮಾಡೆ ದುಃಖಂ
ಬಟ್ಟಿರ್ಪಾಖಂಡಯುಗ್ಮಂಗಳ ನಡುವೆ ಕರಂ ಕಾಯದಿಂ ಭಿನ್ನನಾಗ
ಲ್ಪಟ್ಟುಂ ತತ್ಕಾಯದೊಳ್ ತಾಂ ಪುಗುವ ಪೊಱಮಡುತ್ತಿರ್ಪ ಚೈತನ್ಯನಂ ಮೆ
ಳ್ಪಟ್ಟಿಂತೆಲ್ಲಂಪದಿಂದಂ ಬಿಡದಱಿಸಿದೊಡಂ ಕಾಯಮುಂ ಬಿಟ್ಟು ಕಾಣೆಂ ೬೪

ವಚನ: ಮತ್ತಂ ತುಂಬೀಫಲಂ ದಂಡಂ ತಂತಿ ಕಳೆ ಕರಾಂಗುಳಿತಾಡನಮೆಂಬ ಯ್ದಱ ಕೂಟದಿಂ ಧ್ವನಿವಿಶೇಷಮೆಂತುಪುಟ್ಟುಗುಂ ಗುಡಾನ್ನಪಿಷ್ಟೋದಕ ಧಾತಕೀಕುಸುಮಂಗಳೆಂಬಿವಱ ಸಮ್ಮೇಳನದಿಂದುನ್ಮಾದಿನೀಶಕ್ತಿಯುಮೆಂತುಪುಟ್ಟುಗುಮಂತಂತೆ ಪೃಥಿವ್ಯಪ್ತೇಜೋವಾಯ್ವಾಕಾಶಂಗಳೆಂಬ ಪಂಚಭೂತಂಗಳ ಕೂಟದಿಂ ಚೈತನ್ಯರೂಪನಪ್ಪಾತ್ಮಂ ಪುಟ್ಟಿ ಜೀವಿಸುತಿರ್ಪನವು ಪರೆಯೆ ಕೆಟ್ಟುಪೋಪನಿಂತಲ್ಲದೆ ನಿತ್ಯರೂಪನಪ್ಪಾತ್ಮನೊರ್ವನುಮಿಲ್ಲಾತನಿಂ ಮಾಡಲ್ಪಡುವ ಪುಣ್ಯಪಾಪಮುಂ ತತ್ಫಲಾನುಭವನಮುಂ ಸ್ವರ್ಗಾಪವರ್ಗಾದಿ ಪರಲೋಕಮುಮಿಲ್ಲದುಕಾರಣದಿಂ ಮೋಕ್ಷಸೌಖ್ಯಸಾಧನೋಪಯೋಗಿ ಭೂತತಪೋವಿಧಾನೋದ್ಯೋಗಮಂ ಮಾಣ್ದು ಸುಖದಿನಿರ್ಪುದೆನಲಾತನ ಮಾತಂ ಭೂತಳಾಧಿಪತಿ ಕೇಳ್ದು ಮುಗುಳ್ನಗೆ ನಕ್ಕು

ಕಂದ: ಕಿರಣದಿನಾದಿತ್ಯಂ ದು
ರ್ಧರತಮಮಂ ಕೆಡಿಪ ಮಾೞ್ಕೆಯಿಂ ದುರ್ವೃತ್ತಮಂ
ಭರದೆ ನಿರಾಕರಿಸಿದನಾ
ನರನಾಥಂ ತರ್ಕಕರ್ಕಶೋಕ್ತಿಗಳಿಂದಂ ೬೫

ಸ್ರಗ್ಧರೆ

ನೀಂ ಪೇೞ್ದನ್ನಾದಿನೀಶಕ್ತಿ[1]ಗೆ[1] ನಿನಗೊಗೆದುದ್ರಿಕ್ತಮಾಯ್ತೆಂಬಿದಂ ಸೊ
ಕ್ಕಂ ಪೇೞಿರ್ದೀ ವಿಕಾರಾನ್ವಿತವಚನವಿಶೇಷಂಗಳಿಂ ವ್ಯಕ್ತಮಾಯ್ತಾ
ಪೆಂಪಿಂ ಸನ್ಮಂತ್ರನೆಂಬೀ ಪೆಸರಿದು ನಿನಗಂ ವ್ಯರ್ಥಮೆಂದಾ ನೃಪಂ ವಾ
ಗ್ಗುಂಫಂ ಸ್ಯಾದ್ವಾದಮಂ ಸ್ಥಾಪಿಸಿದನಿರದನೇಕಾಂತವಿದ್ಯಾವಿನೋದಂ ೬೬

ವಚನ: ಇಂತು ಪ್ರತ್ಯಕ್ಷಾದಿಪ್ರಮಾಣವಿರೋಧಂಗಳಾದ ವಚನಂಗಳಿಂದಾತ್ಮನಿಲ್ಲೆಂಬೆಯಪ್ಪೊಡೆ ಸತ್ತವರ್ ವ್ಯಂತರಂಗಳಾಗಿ ಪುಟ್ಟಿ ಪೂರ್ವಜನ್ಮಸ್ಮೃತಿಯಿಂ ಪ್ರಿಯಸಂಬಂಧಾನುಬಂಧದಿಂ ಮಿತ್ರಾಮಿತ್ರವರ್ಗಕ್ಕೆ ಜೀವನೋಪಾಯಮಂ ಮಾಳ್ಪುದಂ ಕಾಣ್ಬುದಱಿಂದತೀತಜನ್ಮದೊಳಾತ್ಮನುಂಟೆಂಬಿದು ಪ್ರತ್ಯಕ್ಷಸಿದ್ಧಂ ತನ್ನಯ ಶರೀರದೊಳಾತ್ಮನುಂಟೆಂಬಿದು ಜೀವಂ ಸ್ವಸಂವೇದನಜ್ಞಾನಪರಿವೇದ್ಯಂ ಬಾಧಕಪ್ರಮಾಣಮಿಲ್ಲಪ್ಪುದಱಿಂ ಸುಖದುಃಖಾದಿಕಮೆಂತಂತೆಂಬೀ ಸ್ವಾರ್ಥಾನುಮಾನದಿಂ ಸಮರ್ಥಿತಂ ಪರರ ಶರೀರದೊಳಾತ್ಮನುಂಟೆಂಬಿದು ಜೀವಂ ವಿದ್ಯಮಾನತಾಸಮೇತಂ ಬುದ್ಧಿಪೂರ್ವಕವ್ಯಾಹಾರಗಮನಾಗಮನಾದಿ ಕಾರ್ಯದರ್ಶನದಿಂದೆನ್ನಾತ್ಮನೆಂತಂತೆಂಬೀ ಪರಾರ್ಥಾನುಮಾನದಿಂದನುಮೇಯರೂಪನಪ್ಪುದಱಿಂದನುಮಾನಪ್ರಸಿದ್ಧಮಸ್ತ್ಯಾತ್ಮಾನಾದಿಬುದ್ಧಿಯೆಂಬೀಯಾಗಮದಿಂದಾತ್ಮಸ್ತಿತ್ವಮವಗಮ್ಯಮಾಗಳಂತೆ ಪುಟ್ಟಿದ ಶಿಶುವಿಂಗೆ ಪೂರ್ವಜನ್ಮಸಂಸ್ಕಾರಮಂ ಬಿಟ್ಟು ಮೊಲೆಯುಣ್ಬಭ್ಯಾಸಮಂ ಕಲಿಸಿದರಾರುಮಿಲ್ಲದುಕಾರಣದಿಂ ಪಿಂದಣಜನ್ಮದೊಳಾತ್ಮನುಂಟೆಂಬಿದರ್ಥಾಪತ್ತಿಯಿಂ ಪ್ರತಿಪನ್ನಮಿಂತು ಸ್ಥಿತ್ಯುತ್ಪತ್ತಿವ್ಯಯಾತ್ಮಕನಪ್ಪಾತ್ಮಂ ಭೂತಭವದ್ಭಾವಿಭವಾಂತರದೊಳ್ ವ್ಯಾಪಾರ್ಯಮಾಣಸ್ವರೂಪನುಂಟೆಂಬಿದು ಪ್ರತ್ಯಕ್ಷಾನುಮಾನಾಗಮಾರ್ಥಾಪತ್ತಿಗಳೆಂಬ ಪ್ರಮಾಣಂಗಳಿಂದಂ ಸಂಸಿದ್ಧಮಾದಾತ್ಮದ್ರವ್ಯಮಿಲ್ಲೆಂದಪಲಾಪನಂಗೆಯ್ವುದುಪಪತ್ತಿಶೂನ್ಯಮಪ್ಪುದಱಿಂ ಬಾಲಭಾಷಿತಮಲ್ಲದೆ ಪ್ರಬುದ್ಧಭಾಷಿತಮಲ್ತು

ಕಂದ: ಮೂ[2]ರ್ತಿ[2]ಯುತದೃಷ್ಟಿ ಬಗೆವೊಡ
ಮೂರ್ತನೆನಿಪ್ಪಾತ್ಮನಂ ಕರಂ ಕಾಣಲ್ಕೇ
ನಾರ್ಪುದೆ ಮಸೆದ ಖಳ್ಗಮ
ಮೂರ್ತಾಂಬರಮಂ ವಿಭೇದಿಪುದೆ ಪೊಂಯ್ಯಲೊಡಂ ೬೭

1 ಯೆ (ಜ) 2 ರ್ತ (ಜ)

ವಚನ: ಮತ್ತಂ ಪಂಚಭೂತಂಗಳ ಸಂಯೋಗದಿಂದಾತ್ಮಂ ಪುಟ್ಟುವನೆಂದು ಪೇಳ್ದಿಯಂತಾದೊಡೆ ಪವಮಾನಪ್ರಾಬಲ್ಯಜಾಜ್ವಲ್ಯಮಾನಪಾವಕನಿಂ ಪಾನೀಯ ಸಂತಪನ ಸಮಯದೊಳ್ ವೃತ್ತಿಕಾಮಯಭಾಜನಜಲತೇಜೋವಾಯ್ವಾಕಾಶಸಂಯೋಗಮುಂಟಾಗಿಯುಮಾತ್ಮನೇಕಲ್ಲಿ ಪುಟ್ಟನದುಕಾರಣದಿಂ ನೀಂ ಪೇಳ್ದ ಲಕ್ಷಣಮವ್ಯಾಪ್ತಿಯೆಂಬ ದೋಷದೂಷ್ಯಮಾಣಮಿಂತವಿಚಾರಿತವಚನದಿಂದಿಷ್ಟಸಾಧ್ಯಸಂಸಿದ್ಧಿಯಾಗದೆಂತುಮಲ್ಲದೆಯುಂ ಚೈತನ್ಯಾತ್ಮಕನಪ್ಪಾತ್ಮಂಗೆ ವಿಜಾತೀಯಾ ಚೈತನ್ಯರೂಪಮಾದ ತುಂಬೀಫಲದಂಡಾದಿ ಸಂಯೋಗಸಂಜಾತವಿಶಿಷ್ಟವೀಣಾಧ್ವನಿವಿಶೇಷಮುಂ ಗುಡಾದಿಸಂಬಂಧಸಮುದ್ಭವದುನ್ಮಾದಿಕಾಶಕ್ತಿಯುಂ ದೃಷ್ಟಾಂತಕಕ್ಕಾನಮುಪಲಕ್ಷಿತಮಲ್ಲತ್ಯಂತ ವಿಜಾತೀಯಮಂ ವಿಜಾತೀಯಕ್ಕೆ ದೃಷ್ಟಾಂತೀಕರಣಂ ಯುಕ್ತಿಯುಕ್ತಮಲ್ತಿಂತಿದು ಚಾರ್ವಾಕಮತ ನಿರಾಕರಣಾನಂತರಂ

ಕಂದ: ಮತ್ತೊರ್ವಂ ಬೌದ್ಧಮತಾ
ಯತ್ತಮನಂ ಸುಮತಿಯೆಂಬ ಮಂತ್ರಿವರೇಣ್ಯಂ
ಬಿತ್ತರಿಸಿ ನುಡಿದನಂದು
ನ್ಮತ್ತನವೋಲ್ ಕ್ಷಣಿಕವಾದಮಂ ಕುನಯಜ್ಞಂ ೬೮

ವಚನ: ಸರ್ವಂ ಕ್ಷಣಿಕಂ ಸತ್ವಮುಂಟಪ್ಪುದಱಿಂ ದೀಪಿಕಾಶಿಖಾಕಳಾಪಮೆಂತಂತೆಂಬನುಮಾನದಿಂದಾತ್ಮಂಗಂ ಕ್ಷಣಿಕತ್ವಮುಂಟಾದ ಕಾರಣಂ ತತ್ಕೃತಪುಣ್ಯಪಾಪಫಲಾನುಭವನಮಿಲ್ಲೆಂಬಿವನರಸಂ ಕೇಳ್ದು ಪೂರ್ವಪಕ್ಷಪರಿಕ್ಷೇಪಣಾರ್ಥಮಿಂತೆಂದನಾತ್ಮಂ ಕ್ಷಣಿಕನಾಗಿ ತತ್ಫಲೋಪಭೋಕ್ತೃವಲ್ಲೆಂಬೆಯಪ್ಪೊಡೆ ಲೋಕದಲ್ಲಿ ಸಂಪತ್ತಿವಿಪತ್ತಿಗಳಲ್ಲದೆ ಪೋಗಲ್ವೇಳ್ಕುಮನಂ ಕಾಣುತ್ತುಂ ಕೇಳುತ್ತುಮುಣುತ್ತುಮಿರ್ದುಂ ಸುಖದುಃಖಾನುಭವನಮಿಲ್ಲೆಂಬಿದು ಪ್ರತ್ಯಕ್ಷವಿರೋಧಮಾ ವ್ಯಭಿಚಾರಿಸಾಧನಾಭಿಧಾನದಿಂದಿಷ್ಟಸಿದ್ಧಿಯಾಗದೆಂದು ಬೌದ್ಧಮತವಿಧ್ವಂಸನಮಂ ವಿರಚಿಸಿ ಮತ್ತಂ ಸರ್ವಥಾ ನಿತ್ಯತ್ವಾನಿತ್ಯತ್ವ ವ್ಯಾಪಕತ್ವಾವ್ಯಾಪಕತ್ವ ಮೂರ್ತತ್ವಾಮೂರ್ತತ್ವಾನೇಕತ್ವಾದ್ಯಯಥಾರ್ಥಾರ್ಥ ಸಮರ್ಥನಸಮರ್ಥಿತ ದುರ್ಮತವಾದಿಸಾರ್ಥ ಸಮ್ಮತವ್ಯರ್ಥೀಕರಣಸಮರ್ಥನಪ್ಪಾ ಪಾರ್ಥಿವಂ ಸ್ವಪಕ್ಷರಕ್ಷೀಕೃತ ಪ್ರತ್ಯಕ್ಷಪರೋಕ್ಷಲಕ್ಷಣಪ್ರಮಾಣಂಗಳಿಂದನೇಕಧರ್ಮಾತ್ಮಕನಪ್ಪಾತ್ಮಂಗೆ ಕಥಂಚಿದೇಕತ್ವಾನೇಕತ್ವ ನಿತ್ಯತ್ವಾನಿತ್ಯತ್ವಾದಿ ಪರಮಾರ್ಥಸ್ವರೂಪ ನಿರೂಪಣಸ್ಥಾಪನಂಗೆಯ್ದು

ಕಂದ: ಕಿಡುವೊಡಲಿಂದಂ ಭಿನ್ನಂ
ಕಿಡದಿರ್ಪಾತ್ಮಂ ಸ್ವದೇಹಮಾ[1]ತ್ರ[1]ಪ್ರವಿ ಬೆಂ
ಬಿಡದಿರ್ಪ [2]ಪುಣ್ಯಪಾಪ[2]
ಕ್ಕೊಡೆಯಂ ಕರ್ತೃತ್ವಭೋಕ್ತೃತಾವಸ್ಥೆಯೊಳಂ ೬೯

---

[1] ತ್ರಂ (ಜ) [2] ಪಾಪಪುಣ್ಯ (ಜ)

ಮತ್ತೇಭವಿಕ್ರೀಡಿತ

ನಿಜದಿಂದೂರ್ಧ್ವಗತಿಸ್ವಭಾವನಹುದಿಚ್ಛಾಶಕ್ತಿಯಿಂ ವಕ್ರಮಂ
ಭಜಿಸಿರ್ಪಂ ಘನವಾದ ವಾಯುವಶದಿಂದಂ ಪಾವಕಜ್ವಾಲೆ[1]ಯಂ
ತಜರಂ[1] ಕರ್ಮಕಲಂಕದಾವರಣಮಂ ಸಮ್ಯಕ್ತ್ವಪೋಧ್ಯಾನದಿಂ
ತ್ಯಜಿಸಂ ಭೇಷಜಯೋಗದಿಂದೆ ಕನಕಂ ನಿರ್ದೋಷಮಪ್ಪಂದದಿಂ ೭೦

ಉತ್ಪಲಮಾಲೆ

ಆಸದುಕಾರಣಂ ತನುಮದಾವೃತ ಕರ್ಮಕಳಂಕಪಂಕಮಂ
ಜೈನತಪೋವಿಧಾನಜಲದಿಂ ತೊಳೆವೆಂ ಕೆಸಱಾದ ರತ್ನಮಂ
ಮಾನವನಾವನೋ ತೊಳೆಯದಿರ್ಪವನಂಬುವಧಾರೆಯಿಂದಮೆಂ
ದಾ ನರಪಾಳಕಂ ನುಡಿದನಂದುಱೆ ಮೆಚ್ಚುವಿನಂ ಸಭಾಜನಂ ೭೧

ವಚನ: ಆ ನೃಪಾಳೋತ್ತಮನಿಂತು ಬಾಧಾರಹಿತಮಾದುತ್ತರಮನನುತ್ತರಮಾಗಿತ್ತು ದುರ್ನೀತಿನಿರ್ಣಯನಿಪುಣರಪ್ಪ ಪ್ರತಿವಾದಿಗಳಂ ನಿರುತ್ತರರಂ ಮಾಡಿ ಬಳಿಯ ಮತಿರಥನೆಂ[2]ಬ ತನ್ನ[2] ಕುಮಾರನನೆತ್ತಾನುಮೊಡಂಬಡಿಸಿ ಸಮಸ್ತಸಾಮ್ರಾಜ್ಯಮಂ ಕೊಟ್ಟು ಪಟ್ಟಮಂ ಕಟ್ಟಿ

ಶಾರ್ದೂಲವಿಕ್ರೀಡಿತ

ಪುಲ್ಲಿಂದಂ ಕಡುನೊಚ್ಚಿತಾಗಿ ಬಗೆದಂ ಭೂಭಾರಮಂ ಮತ್ತಮಂ
ತೆಲ್ಲಾ ಬಂಧುಜನಂಗಳಂ ಸುಖಫಲಾರ್ಥಂ ಬಂದು ಕೂಡಿರ್ದ ಕಾ
ಯೇಲ್ಲಾ ಸಾಂಡಭಮಂಗಳೆಂದು ಬಗೆದಂ ಸ್ತ್ರೀಯರ್ಕಳಿಂ ನಿಶ್ಚಯಂ
ಪೊಲ್ಲಾಗಿರ್ದುಱೆನಾಯ್ಗಳೆಂದು ಬಗೆದಂ ವೈರಾಗ್ಯಭಾಗ್ಯೋದಯಂ ೭೨

ಕಂದ: ಕೈವಲ್ಯಕ್ಕೆಱಗುವ ಮನ
ಮೋವದೆ ಸಂಸಾರಪದವಿಗೇನೆಱಗುವುದೇ
ಪೂವಿಂಗೆಱಗುವ ಮಧುಪಂ
ಭಾವಿಸೆ ದುರ್ದಮಿತಕರ್ದಮಕ್ಕೆಱಗುವುದೇ ೭೩

ವಚನ: ಅನಂತರಮಸ್ತೋಕಶೋಕರಸಾಕ್ರಾಂತಮಪ್ಪನೇಕಕಾಂತಾನೀಕಮಂ ಸಮಾಕ್ರಾಂತ ಮಂದಿರಮಾದ ಬಂಧುಸಂದೋಹಮಂ ರೋದನಭರಪರಿವೃತಮಾದ ಪ್ರಧಾನಪ್ರಭೃತಿಸಮಸ್ತಪರಿವಾರಮಂ ಸಮಧಿಕದುಃಖಾವಲಿಖ್ಯಮಾನಮನಸ್ಸಂಸೂಚಕ ಬಾಷ್ಪಾಕುಳಿತನೇತ್ರನಪ್ಪ ಪುತ್ರನುಮನೊಡಂಬಡಿಸಿ ದೀಕ್ಷಾವನಕ್ಕೆ ನಡೆವಾಗಳ್ ಪುರಜನಂಗಳ್ ಬೀದಿಗಳೊಳೊಂದೊಂದೆಡೆಯೊಳ್ ನಿಂದು ನೋಡುತ್ತಂ ತಂತಮ್ಮೊಳೊರ್ವರೊರ್ವರಿಂತೆಂಬರ್

1 ಯೆಂ।ತಂಬರಂ (ಕಚ) 2 ಬ (ಜ)

ಉತ್ಪಲಮಾಲೆ

ಭೂತಳನೂತನುಪ್ಪಖಿಳರಾಜ್ಯಮನಾಳ್ದವನೀಗಳುತ್ತಮ
ಖ್ಯಾತವಿಮುಕ್ತಿರಾಜ್ಯಪದಸಾಧನೆಗಾಗಿ ತಪಸ್ಸು ರಾಜ್ಯಮಂ
ಪ್ರೀತಿಯಿನಾಳ್ವೆನೆಂದಿರದೆ ಪೋದಪನೀತನೊಳಂ ತ್ರಿರಾಜ್ಯಮಂ
ನೂತನಮಾದುದೀತನ ಪುರಾತನಪುಣ್ಯಮದೇನುದಾತ್ತ[1]ಮೋ[1] ೭೪

ವಚನ : ಮತ್ತೊಂದೆಡೆಯೊಳ್

ಉತ್ಪಲಮಾಲೆ

ಕೆಯ್ಯದನೆಯ್ದೆ ಬಿಟ್ಟು ನಿಜಪಾಱುವುದಕ್ಕೆಳಸುತ್ತುಮಿರ್ಪನಂ
ರಯ್ಯಮೆನಲ್ಕೆ ಪೋಲ್ತನಿರದೀ ನರಪಂ ವಶಮಾದ ರಾಜ್ಯಮಂ
ಸುಯ್ಯದೆ ಬಿಟ್ಟು ದೀಕ್ಷೆಗುಱ[2] ಪೋಗುತಮಿರ್ದಪನೆಂದು ಪೌರರಂ
ದೊಯ್ಯನೆ ನಾಡೆ ನೋಡಿ ನುಡಿದರ್ ಕೆಲರಜ್ಞಜನಂಗಳಾತನಂ ೭೫

ವಚನ : ಅಂತು ಮ[2]ಟ್ಟಂ[2] ಜೇಱ[3] ಜೇಱ[3] ನುಡಿಯುತ್ತುಮಿರೆ

ಕಂದ : ಎಲ್ಲರ ಚಿತ್ತದೊಳಿರ್ದಂ
ನಿಲ್ಲದೆ ದೀಕ್ಷಾವನಕ್ಕೆ ಪೋದಂ ನೃಪನಾ
[3]ರ್ವ[3]ಲ್ಲರೊ ಧರಣೀನಾಥನ
ಸಲ್ಲಲಿತಾಚರಣಮಂ ಮಹೀಮಂಡಳದೊಳ್ ೭೬

ವಚನ : ಬಳಿಯಮೆಲ್ಲರಂ ನಿಲಿಸಿದೊಡಂ ನಿಲ್ಲದೊಡನೊಡನೆ ಬರುತ್ತುಮಿರಲಿ ತ್ತಲಾ ದಶರಥಮಹೀನಾಥಂ ವಿಮಳವಾಹನಭಟ್ಟಾರಕರ ಶ್ರೀಪಾದೋಪಾಂತಮನೆಯ್ದಿ ತತ್ಪದಪದ್ಮಯುಗ್ಮಮನಷ್ಟವಿಧಾರ್ಚನೆಯಿಂದರ್ಚಿಸಿ ಗುರುಭಕ್ತಿಪೂರ್ವಕಂ ವಂದನೆಯಂ ಮಾಡಿ ಮುಂದೆ ಕೈಗಳಂ ಮುಗಿದು ನಿಂದು ಮುನಿಮುಖಾರವಿಂದಮಂ ನೋಡಿ ಬಿನ್ನಪ ಮೆಂದಿಂತೆಂದನೆಲೆ ಸ್ವಾಮಿಯೆನಗೆ ದೀಕ್ಷಾಪ್ರಸಾದಮಂ ಕಾರುಣ್ಯಂಮಾಡಿಯೆನಲಾ ಮುನೀಂದ್ರನಿಂತೆಂದಂ

ಉತ್ಪಲಮಾಲೆ

ರಾಜರ್ಷಿರಮೆಂಬುದತಿಕೋಮಳಮೀ ಕಠಿನಸ್ವಭಾವತಾ
ಭಾಜನಮಾದ ದುರ್ಧರತಪೋಗುಣಮಂ ಧರಿಸಲ್ಕೆ ಸಕ್ತಮೋ
ಭೋಜಗದಲ್ಲಿ ದೀನಜನದುದ್ಧೃತಿಯಲ್ಲದೆ ಜೇಱ ಸತ್ತಪೋ
ಯೋಜನೆಯುಂಟೆ ಭಾವಿಪೊಡನಾಥಜನಪ್ರವಿತಾನಬಂಧುವೇ ೭೭

[1] ನೋ (ಕಚ) [2] ಯ್ದಂ (ಜ) [3] ರೊ (ಜ)

ವಚನ : ಅದುಕಾರಣದಿಂ ಸರ್ವಜನರಕ್ಷಣಮೆ ದೀಕ್ಷೆ ಮತ್ತಮಿಾ ದೂರಕ್ಷಮುಮಪ್ಪ ಜೈನದೀಕ್ಷೆಯಂ ಮಾಣ್ದು ಸುಖದೊಳಿರ್ಪುದೆಂದು ಬಿಡೆನುಡಿವೊಡಂ ಮಾಣದೆ ಪಿರಿದು ಮಾಗ್ರಹಂಗೆಯ್ದು ಪ್ರಾರ್ಥಿಸಿ

ಕಂದ : ಕೇಶಪಾಶಂಗಳಂ ಧ್ರುರ
ಣೀಶಂ ಪಱಿದಿಕ್ಕಿದಂ ಮುನೀಶ್ವರಚರಣಾ
ಭಾಸದೊಳೆ ಮೋಹನೀಯ ಕು
ಪಾಶಂಗಳನೆಯ್ದೆ ಪಱಿದುಬೀಸಾಡುವವೊಲ್ ೭೮

ವಚನ: ಅಂತು ತನ್ನ ಸಮಾನರಪ್ಪರಸುಮಕ್ಕಳ್ ನೂರ್ವರ್ವೆರಸು ಪ್ರತಿಪಕ್ಷಕರ್ಮ ಪಕ್ಷಪರಿಕ್ಷೇಪಣದಕ್ಷಮಪ್ಪ ಜಿನದೀಕ್ಷೆಯಂ ಕೈಕೊಳಲೊಡನೊಡನೆ ಬಂದವರ್ ಮಿಡುಮಿಡು ಮಿಡುಕುತ್ತುಂ ಪೋಗಲೊಡಮಿತ್ತಲ್

ಕಂದ : ಉಗ್ರತಪಶ್ಚರಣದಿನತಿ
ನಿಗ್ರಹಮಂ ಬಿಡದೆ ಮಾಡುತಿರ್ದಂ ತನ್ನಯ
ವಿಗ್ರಹಕ್ಕಂದು ಮಿಗೆ ನಿ
ರ್ವ್ಯಗ್ರೀಕೃತಚಿತ್ತನಾಗಿ ತನ್ಮುನಿಮುಖ್ಯಂ ೭೯

ದ್ವಾದಶವಿಧತಪದಿಂದಂ
ದ್ವಾದಶವಿಧಶಾಸ್ತ್ರದೊಂದು ಪರಿಣತೆಯಿಂದಂ
ಮೇದಿನಿಯೊಳ್ ಪೂಜ್ಯತ್ವಮ
ನಾದಂ ತಳೆದಂ ವಿಶಿಷ್ಟದಶಧರ್ಮಯುತಂ ೮೦

ಚಂಪಕಮಾಲೆ

ಪಗೆ ಕೆಳೆಯೆಂಬ ಭೇದಮಿನಿತಾದೊಡಮಿಲ್ಲದೆ ಮೋನದಿಂದಮಿ
ರ್ದಗಣಿತಸರ್ಪವೇಷ್ಟಿತಕಳೇವರನುಚ್ಚವನೈಕದೇಶದೊಳ್
ಮಿಗೆ ನೆಲಸಿರ್ದು ಚಿನ್ಮಯನ ಚಿಂತೆಯ ನಿಶ್ಚಲರೂಪನಾಗಿ ಮೂ
ಲಗುಣಯುತಂ ವಿರಾಜಿಸಿದನಾ ಮುನಿ ಚಂದನವೃಕ್ಷಮೆಂಬಿನಂ ೮೧

ಮತ್ತೇಭವಿಕ್ರೀಡಿತ

ಒಳಗಿರ್ದಂಜನಮಂ ಬಿಡುತ್ತುಮಧಿಕಂ ಪಾತ್ರಾತನುಸ್ನೇಹಮಂ
ತಳೆದಿರ್ದುಂ ಪರಮಪ್ರಕಾಶಮಯರೂಪಿಂದೊಪ್ಪಮಂ ತಾಳ್ದಿಯು
ಗ್ಗಳಸಪ್ಪಾ ಮುನಿಪುಂಗವಂ ನಿಬಿಡಮಿಥ್ಯಾತ್ವಾಂಧಕಾರಂಗಳಂ
ಕಳೆವುತ್ತುಂ ಜಿನಧರ್ಮಮಂ ಬೆಳಗಿದಂ ದೀಪಂ ದಲೆಂಬಂದದಿಂ ೮೨

ಕಂದ: ತಪದೊಳಗತ್ಯಲ್ಪರುಚಿ ತ
ತ್ತ್ರಪನಂ ದೋಷಾಕರಂ ತದನ್ಯೃತಪ್ರಭನೆಂ
ತುಪಮೆಯನೆಯ್ದುವರಾ ಮುನಿ
ಗಪಹೃತದುಸ್ತಂ ತಮೋವಿಕಾರಂಗೆ ಕರಂ ೮೩

ಉತ್ಪಲಮಾಲೆ

ಬೇಸಗೆಯಲ್ಲಿ ಬೇಸಱದೆ ಕಲ್ಮೆಲೆಯಿದ್ದುಱಿ ಮಾಗಿಯಲ್ಲಿ ಮ
ತ್ತಾಸುರಬೆಳ್ವಾಸದೊಳಮಿರ್ದು ಕಸಂ ಮಳೆಗಾಲದಲ್ಲಿಯುಂ
ಭಾಸುರವೃಕ್ಷಮೂಳದೊಳಮಿರ್ದು ತಪಶ್ಚರಣೋದ್ಯಮಂ ಗುಣೋ
ದ್ಭಾಷಿತನಪ್ಪ ಯೋಗಿತಿಳಕಂ ಕಳಿದಂ ಮುದದಿಂ ತ್ರಿಕಾಲಮಂ ೮೪

ವಚನ: ಅಂತು ಮೋಕ್ಷಲಕ್ಷ್ಮೀನಿವಾಸನೀ ಪ್ರಮಾದತೀವ್ರತಪೋನುಷ್ಠಾನಾಧಿಷ್ಠಿತಂ ಬಾಹ್ಯಾಭ್ಯಂತರಪರಿಗ್ರಹಮಂ ತೊಱೆದೇಕವಿಹಾರಿಯಾಗಿ ವಿಹಾರಿಸುತ್ತುಂ ಬಂದಲ್ಲಿ

ಮತ್ತೇಭವಿಕ್ರೀಡಿತ

ಮಿಗೆ ಬಾಹ್ಯೇಂದ್ರಿಯವೃತ್ತಿಯಂ ತೊಱೆದು ಭೇದಜ್ಞಾನದೊಳ್ ಚಿತ್ತಮಂ
ಪುಗಿಸಿ ಪ್ರೇಕ್ಷಣಯುಗ್ಮಮಂ ನಿಲಿಸಿ ನಾಸಾಚೂಳಿಕಾಭಾಗದೊಳ್
ಸೊಗಸಂ ಬೀಱುವ ಮೇರುಶೃಂಗದವೊಲಿರ್ದಂ ನಿಶ್ಚಳಧ್ಯಾನದಿಂ
ಪ್ರಗುಣಂ ಶಾತ್ರವಮಿತ್ರರೊಳ್ ಸಮಮನಂ ಯೋಗೀಶ್ವ[1]ರಾಧೀ[1]ಶ್ವರಂ ೮೫

ವಚನ: ಇಂತು ಜಗನ್ಮಾನ್ಯನುಂ ಧನ್ಯನುಮಪ್ಪಾ ತಪೋಧನನುಪಶಮಶ್ರೇಣಿಯನೇಱಿ ಸಂನ್ಯಸನವಿಧಾನದಿಂ ತಿಂಗಳ್ ಪರ್ಯಂತಮಿರ್ದುಪಶಾಂತಗುಣಜ್ಞಾನದೊಳ್ ನಿಂದು ಬಗೆದಂತಿರೆ ಸಮಾಧಿವಿಧಿ ದೊರೆಕೊಳೆ ಶುದ್ಧಧ್ಯಾನದಿಂ ಶರೀರಭಾರಮಂ ಬಿಟ್ಟು ಸರ್ವಾರ್ಥಸಿದ್ಧಿಯಂ ಮಾಳ್ಪಲ್ಲಿ ಸಮರ್ಥಮಪ್ಪುದಱಿಂ ಯಥಾರ್ಥನಾಮಮಪ್ಪ ಸರ್ವಾರ್ಥಸಿದ್ಧಿ[2]ನಾಮ[2]ವಿಮಾನಮನೆಯ್ದಿದನದೆಂತಿರ್ದುದೆಂದೊಡೆ

ಮಹಾಸ್ರಗ್ಧರೆ

ವರಮುಕ್ತಾಜಾಲಮಾಲಾನಿಬಿಡತರ ಸಮಾಲಂಬ್ಯಮಾನಂ ಲಸತ್ಪ್ರೀ
ವರಮಾಣಿಕ್ಯಪ್ರಘಂಟಾಪಟಳಜಟಿಳಸಂಸೇವ್ಯಮಾನಂ ಮಹಾಭಾ
ಸುರನಾನಾಪ್ರಕಾರಾರುಣಮಣಿಮಯಸತ್ಕಿಂಕಿಣೀ ಶೋಭಮಾನಂ
ಪಿರಿದೊಂದಾಶ್ಚರ್ಯಮಂ ಪುಟ್ಟಿಸಿದುದು ಕಿರಣೋದ್ಭಾಸಮಾನಂ ವಿಮಾನಂ ೮೬

[1] ರಂದೀ (ಕಚ) [2] ಯೆಂಬ (ಜ)

ಕಂದ: ಸಿದ್ಧಾಲಯವಮಂ ನೆಱತಪೊ
ತ್ಸುದ್ಧರಿಪುದು ತನ್ನ ರತ್ನಕಳಶಾವಳಿಯಿಂ
ದುದ್ಧ್ವಜವಿರಾಜಮಾನಮು
ದುದ್ಧರಕಾಂತ್ಯನುಪಮಾನಮಾಯ್ತು ವಿಮಾನಂ ೮೭

ಶುದ್ಧಸ್ಫಾಟಿಕ ಘಟಿತಸ
ಮುದ್ಧನಕ್ಕೈಚ್ಚಿತ್ರಪುತ್ರಿಕಾಸಮುದಯಸಂ
ಬದ್ಧಂ ಚೆಲ್ವಂ ತಾಳ್ದಿದು
ದಿದ್ಧಂ ಸರ್ವಾರ್ಥಸಿದ್ಧಿನಾಮವಿಮಾನಂ ೮೮

ವಚನ: ಅಂತಾ ಮಣಿಮಯವಿಮಾನಾಂತರಾಳದೊಳುದಂಚಿತಕಾಂಚನಮಯ ಮಂಚದ ಮೇಲಡಿಕಿಲ್ಗೊಂಡಿರ್ದ ನಾಲ್ಕುಂಪಾಸಿನ ಪೊರೆಯೊಳುಪಪಾದಜನ್ಮದಿಂ ಮೂವತ್ತಮೂಱುಸಾಗರೋಪಮಕಾಲಂಬರಂ ಪರಮಾಯುಃಸ್ಥಿತಿಪ್ರಮಾಣಪ್ರಮಿತ ನಪ್ಪಹಮಿಂದ್ರನೆಂಬ ದೇವನಾಗಿ ಜನಿಸಿ ಮತ್ತಮೊಂದಂತರ್ಮುಹೂರ್ತಪರ್ಯಂತಂ ಮೂಢತ್ವಾಢೌಕಿತಸ್ವಾಂತನಾದಿಂಬಳಿಯಂ

ಕಂದ: ಚಚ್ಚರದಿಂ ನಿದ್ರಿತ ನರ
ನೆಚ್ಚಱಕೆಯನೆಯ್ದಿ ಪಡೆದವೊಲಹಮಿಂದ್ರಂ
ಪೆರ್ಚಿರ್ದವಧಿಜ್ಞಾನಮ
ನಚ್ಚರಿಯುತಪಾದತಲ್ಪತಳದೊಳ್ ಪಡೆದಂ ೮೯

ವಚನ: ಅಂತು ಸರ್ವಾವಧಿಬೋಧಸಂಪನ್ನನಾದಿಂಬಳಿಯಂ ತದ್ವೃತ್ತಾಂತಮ ನತಿವ್ಯಕ್ತಮಾಗಱಿದು ಮೋಕ್ಷದ ಸೌಖ್ಯಮೊಂದಲ್ಲದುಳಿದೆಲ್ಲಾ ಸೌಖ್ಯಸಂಪತ್ತಿಗಳ ಮೊತ್ತ ಮಲ್ಲಿಯೇ ಮೂರ್ತಿವೆತ್ತುದೆಂಬಂತೆ ದಿವ್ಯಸುಖಮಯಸ್ವರೂಪಮಪ್ಪ ದಿವ್ಯರೂಪಿಂದೊ ಪ್ಪುತ್ತುಮಿರ್ಪಾಗಳ್

ಕಂದ: ಕರ್ಪೂರದ ಘಟ್ಟಿಯಿಂದಂ
ನೇರ್ಪಡೆ ನಿರ್ಮಿಸಿದ ಚಾರುಪುತ್ರಿಕೆಯೆಂಬಂ
ತೊಪ್ಪಿದುದು ಸಪ್ತಧಾತುವ
ಮಾರ್ಪಣಮುಣಮಿಲ್ಲದಿರ್ಪ ದಿವ್ಯಶರೀರಂ ೯೦

ಮತ್ತೇಭವಿಕ್ರೀಡಿತ

ಮಿಗೆ ಶೃಂಗಾರರಸಪ್ರವಾಹದೊದವಿಂಗಾಧಾರಮಾಗಿರ್ದ ತಾಂ
ಸೊಗಸಂ ಬೀಱುವ ದಿವ್ಯರೂಪಮದು ಕರ್ಣಾನಂದಮಂ ಮಾಳ್ಪೊಡಂ
ಪ್ರಗುಣಾವಾಸನೆನಿಪ್ಪ ನಿರ್ಜರವರಂಗೆಂದುಂ ವಿಕಾರಂಗಳಂ
ಬಗೆಯೊಳ್ ಪುಟ್ಟಿಸದೆಂದೊಡೇವೊಗಳ್ವೆನಾಂ ರೂಪಾತಿಶಾಯಿತ್ವಮಂ ೯೧

ಕಂದ: ಬೆಳಗಿನ ಬಳಗಮನುನುತ್ತೊ
ಮಳಮಂ ಬಿಡದುಗುಳ್ವ ದೇವದಿವ್ಯಶರೀರಂ
ಥಳಥಳಿಸುತ್ತಿರ್ದ ಮಹಾ
ವಿಳಸನಮಂ ತಳೆದುದತುಳಪರಿಮಳಮಿಳಿತಂ ೯೨

*ವಚನ: ಅಂತುಮಲ್ಲದೆಯುಂ

ಸ್ವಾಗತ

ಷೋಡಶಾಭರಣಮಾಳಿಕೆಯಿಂದಂ
ಕೂಡಿದಾ [1]ದಿವಿಜ[1]ನಾಯಕದೇಹಂ
ಗಾಡಿಯಂ ಪಡೆದು ರಂಜಿಸುತಿರ್ಕುಂ
ನಾಡೆಯುಂ ಮೃದುಳತಳ್ಪದೊಳಾದಂ ೯೩

ಮಹಾಸ್ರಗ್ಧರೆ

ಸ್ಫುರದತ್ಯುದ್ಯತ್ಪ್ರಭಾಭಾಸುರನಿರುಪಮಮಾಣಿಕ್ಯಕೂಟಂ [2]ಕಿ[2]ರೀಟಂ
ಭರದಿಂದಾ ದೇವತೇಜಃಪ್ರಸರದ ಶಿಖಿಯೆಂಬಂತೆ ಜೆಲ್ವಾಯ್ತು ಮತ್ತ
ಸ್ಫುರಮುಕ್ತಾತಾರಹಾರಾವಳಿ ಕೊರಳೊಳಗೊಪ್ಪುತ್ತುಮಿರ್ದತ್ತು ವೀಕ್ಷಾ
ತುರಿತಶ್ರೀಯಮಾಂಗನಾಪಾತಿತಬಹಳಕಟಾಕ್ಷಾಳಿಯೆಂಬಂದದಿಂದಂ ೯೪

ಕಂದ: ಅರುಣಮಣಿಭೂಷಣಂಗಳ
ಕಿರಣಂಗಳ್ ಪಸರಿಸಲ್ಕೆ ಮಣಿಭಿತ್ತಿಗಳಾ
ಧರಿಸುತ್ತಿರ್ದವು ಕೆಂಪಿನ
ತೆರೆಸೀರೆಗಳೆಂಬ ಶಂಕೆಯಂ ಭರದಿಂದಂ ೯೫

ಮುಕ್ತ್ಯಾಲಂಕೃತೆಯಾದ ವಿ
ಮುಕ್ತಿಸ್ತ್ರೀ ಮಿಗೆ ಸಮೀಪದಲ್ಲಿರ್ದಪಳೆಂ
ದುಕ್ತ್ಯಮನಂ ಸ್ತ್ರೀಸುಖದನು
ರಕ್ತಿಯುಮನದು ಬಯಸದಿಪ್ಪುದಾ ಸುಖನಿಧಿಯೋ ೯೬

[1] ದವನ (ಕ) [2] ತಿ (ಗಜ)
* (ಜ) ಪ್ರತಿಯಲ್ಲಿ ಈ ವಚನವಿಲ್ಲ.

ಅಹಮೇವೇಂದ್ರಂ ಲೋಕದೊ
ಳಹರ್ನಿಶಂ ಸಿದ್ಧರಲ್ಲದನ್ಯರ್ಗೆಲ್ಲಂ
ವಿಹಿತಾರ್ಥಾಹಂಕಾರದಿ
ನಹಮಿಂದ್ರಂಗಾಯ್ತು ಬಗೆವೊಡಹಮಿಂದ್ರಾಖ್ಯಂ ೯೭

ವಚನ: ಮತ್ತಂ

ಮಹಾಸ್ರಗ್ಧರೆ

ಪದಿನಾಱುಂ ತಿಂಗಳುಂ ಪಕ್ಷದೊಳುಸಿರಿಡುವಂ ದಿವ್ಯಪೀಯೂಷಮುಂ ಸ
ಮ್ಮದದಿಂ ಮೂವತ್ತಮೂಸಾಸಿರ ಬರಿಸದೊಳಂ ಚಿಂತಿಪಂ ತನ್ನೊಳಾದ
ಭ್ಯುದಯಂ ಕೈಮಿಕ್ಕು ಪೆರ್ಚುತ್ತಿರೆ ಸೊಗಯಿಸುವಂ ನಿಷ್ಪ್ರವೀಚಾರತಾಸಂ
ಪದದಿಂದಂ ಕೂಡಿದಾ ದೇವನ ಮಹಿಮೆಗಳಂ ಬಣ್ಣಿಸಲ್ ಬಲ್ಲನಾವಂ ೯೮

ಉತ್ಪಲಮಾಲೆ

ಬಾಡದ ಮಾಲೆ ಮುಪ್ಪು ಸಲೆತೋಱದ ಜವ್ವನಮುಟ್ಟೊಡಂ ಮಲಂ
ತೀಡದ ಸೀರೆ ಪೂಸದ ಸುಗಂಧರೆಬೀಯದ ಮೆಯ್ಯ ಸೊಂಪು ಕೈ
ಗೂಡಿದ ಲಕ್ಷಣಂ ಸಹಜಮಾಗಳವಟ್ಟಿರೆ ಲೋಕದಲ್ಲಿ ಕೊಂ
ಡಾಡದನಾವನೋ ತದಹಮಿಂದ್ರನ ಪೆರ್ಚಿದ ಪೆಂಪಿನೇಳ್ಗೆಯುಂ ೯೯

ಮತ್ತೇಭವಿಕ್ರೀಡಿತ

ಅಲರ್ದಂಭೋರುಹಷಂಡದಲ್ಲಿ ಕಳಹಂಸಂ ಲೀಲೆಯಿಂದಿರ್ಪವೊಲ್
ಸಲೆಮಾಣಿಕ್ಯ ವಿಮಾನದಲ್ಲಿಯಹಮಿಂದ್ರಂ ಭೂರಿಸತ್ಸೌಖ್ಯಮಂ
ನಲವಿಂದಂ ಸವಿಯುತ್ತುಮಿರ್ದ್ದು ತಳೆದಂ ನಿಸ್ಸೀಮಸಂತೃಪ್ತಿಯುಂ
ವಿಲಸತ್ಪುಣ್ಯಯುತಂಗೆ ಪೇಳ್ ಗಹನಮೋ ಲೋಕೈಕಮಾಂಗಲ್ಯಮಂ ೧೦೦

ವಚನ: ಇಂತಾ ದಶರಥಚರನುಂ ರುಂದ್ರಸೌಖ್ಯಸಾಂದ್ರನುಮಪ್ಪ ತದಹಮಿಂದ್ರನಱುದಿಂಗಳುಳಿಯೆ ಮೂವತ್ತಮೂಱುಸಾಗರೋಪಮಕಾಲಮುಂ ಕಡೆವರಂ ನಿರಾಯಾಸದಿನೀಸಾಡಿ ಪತ್ತಮಿನ್ನಱುದಿಂಗಳಿಂ ಮೇಲೆ ಚರಮದೇಹಮುಂ ಕೈಕೊಳಲೆಂದಾ ಸರ್ವಾರ್ಥಸಿದ್ಧಿಯಿಂದಿಳಿಮುಬಂದೀ ಧರಣೀತಳಕ್ಕವತರಿಸುವಲ್ಲಿ ಸ್ವಾತೀನಕ್ಷತ್ರದ ಮಳೆವನಿ ಮುಕ್ತಾತ್ಮಕಮಾಗಿ ಶುಕ್ತಿಕಾಗರ್ಭದೊಳುದ್ಭವಿಪುದೆಂಬಂತೆ ನಿನ್ನೀ ಪ್ರಾಣಪ್ರೀತಿಯಪ್ಪ ಕುಲಸ್ತ್ರೀಯ ಗರ್ಭದೊಳ್ ಮುಕ್ತಾತ್ಮಕನುಂ ಪದಿನಯ್ದನೆಯ ತೀರ್ಥಂಕರನುಮಪ್ಪ ಧರ್ಮನಾಥನಾಗವತರಿಸಿದಪನದುಕಾರಣದಿಂ ನೀವೀರ್ವರ್ ಲೋಕತ್ರಯದಿಂದೆ ಸಂಪೂಜ್ಯರೆಂದಾ ಮುನೀಶ್ವರರಾ ಮಹಿಪಾಳತಿಳಕಂಗನಾಗತ ಧರ್ಮನಾಥನ ಪಿಂದಣಜನ್ಮವೃತ್ತಾಂತಮುಂ ತಿಳಿಯ ಪೇಳಲೊಡಮಾಗಳವರಿರ್ಬ್ಬರುಮತ್ಯಂತ ಬಹಳತರಸಂತೋಷಸಮುದ್ರದೊಳ್ ತೇಂಕಾಡುತ್ತುಮುತ್ಪುಳಕಾಂಕುರಾಂಕಿತಂಗಳಪ್ಪ ತಮ್ಮಯ ಶರೀರಂಗಳುಂ ವಿಗಳತ್ಪ್ರಮದಾಶ್ರು

ಧಾರೆಗಳಿಂ ಪ್ರಕ್ಷಾಲನಂಗೆಯ್ದು ತನ್ಮುನಿಗಳ ಚರಣಂಗಳೆಂಬ ಕಮಳಂಗಳನಾತ್ಮೀಯ ಕುಂತಲಂಗಳೆಂಬ ತುಂಬಿಗಳಿಂ ತುಂಬಿ ಮುಸುಂಕಿಸುತ್ತುಂ ಮತ್ತಮಾ ನೃಪಾಳೋತ್ತಮ ಕೈಗಳಂ ಮುಗಿದು ನೊಸಲ್ಗೆ ತಂದಿಂತೆಂದಂ

ಮಹಾಸ್ರಗ್ಧರೆ

[1]ಮುನಿ[1]ನಾಥಾ ನಿನ್ನಯ ಶ್ರೀಪದದ ಭಜನೆಯಿಂ ಯಾಮಮಾತ್ರಂಬರಂ ಮಾ
ಳ್ಪನಗಂ ನಿಶ್ಶೇಷಲೋಕತ್ರಯಸಮಭಿನುತಶ್ರೀಪದಂ ಭಾವಿತೀರ್ಥೇ
ಶನ ಜನ್ಮಜ್ಞಾನದ ಶ್ರೀಪದಮುಮೊಡನೆ ಕೈಸಾರ್ದುದೆಂದುಂ ಭವತ್ಸೇ
ವನೆಯಂ ಮಾಳ್ಪಂಗೆ ಕೈಗೂಡದೆ ಕೆಡದ ಘನಶ್ರೀಪದಂ ಭೂರಿಬೋ[2]ಧಂ[2] ೧೦೧

ವಚನ: ಎಂದಿಂತಾ ಮುನೀಶ್ವರರನಾ ನಾಡೆಜಿತಯುಂ ನಾಡೆಯುಂ ಕೊಂಡಾಡುತ್ತುಮಿರೆ ಮತ್ತಮಾ ಸಭೆಯೊಳ್ ಕೆಲಂಬರ್ ದರ್ಶನಮೋಹನೀಯ ಕರ್ಮೋದಯದಿಂದುದ್ಧೃತಶ್ರದ್ಧಾನರಪ್ಪ ಸಂಶಯಮಿಥ್ಯಾದೃಷ್ಟಿಗಳಿದಕ್ಕೆ ಚಿಹ್ನಮೇನಿದನೆಂತು ನಂಬಲಕ್ಕೆಂದು ಮನದೊಳ್ ಚಿಂತಿಸಲದಂ ಪರಮಾವಧಿಬೋಧನವಧರಿಸಿ ತನ್ನಿಶ್ಚಯಾತ್ಮಕಮಾದ ನಾಯಕವಾಕ್ಯಮನಿಂತೆಂದಂ

ಕಂದ: ದೇವೇಂದ್ರನ ಬೆಸದಿಂದಂ
ದೇವಸ್ತ್ರೀನಿಕರಮಿಲ್ಲಿಗೆಳ್ತಂದಪುದೀ
ಭಾವಕಿಯ ಸೇವೆಗಾಗಿ ಮ
ಹೀವಲ್ಲಭ ನಿನ್ನ ಮಹಿಮೆ ಪೊಗಳಲಳುಂಬಂ ೧೦೨

ನಾಳೆ ಮೊದಲಾಗಿ ಪುರದೊಳ
ಗ್ಗಳಬಿಳಂ ಬಂದು ಪೊನ್ನಮಳೆಗಱೆಿತದಪನಿ
ನ್ನೇಳಿಸದೆ ನಂಬು ಧರಣೀ
ಪಾಳಕ ಮದ್ವಚನಮಂ ಮನೋಮುದದಿಂದಂ ೧೦೩

ವಚನ: ಇಂತಜ್ಞರ ಮನದ ಸಂದೇಹಮನಪಹರಿಸಲೆಂದು ನುಡಿದು ಮತ್ತಮಿಲ್ಲಿಗಿನ್ನು ಸೇವಾನಿಮಿತ್ತಂ ತಂತಮ್ಮ ಪೊತ್ತನತಿಕ್ರಮಿಸದೆ ಬಪ್ಪಂತಪ್ಪ ದೇವರ್ಕಳಿಂಗಂ ದೇವಿಯರಿಂಗಂ ಯಥೋಚಿತ ಸನ್ಮಾನದಾನಮಂ ಮಾಡಲ್ವೇಳ್ಕುಮದುಕಾರಣಂ ನೀಂ ಬೇಗಂ ಪೋಗೆಂಬುದುಂ

[1] ಜಿನ (ಕ) [2] ಧಾ (ಜ)

ಉತ್ಪಲಮಾಲೆ

ಅಷ್ಟವಿಧಾರ್ಚನಾರಚನೆಯಿಂದೆ ಮುನೀಂದ್ರನ ಪಾದಪದ್ಮಮಂ
ತುಷ್ಟಿಯೊಳೊಂದಿ ತೋರ್ಪ ನರನಾಯಕನರ್ಚಿಸಿ ಭಕ್ತಿಭಾರಸಂ
ಪುಷ್ಟಮನಂ ನಮಸ್ಕರಿಸಿದಂ ವರಶೀಲ[1]ಸ[1]ಮಾನ ಸದ್ಗುಣೋ
ತ್ಕೃಷ್ಟೆಯೆನಿಪ್ಪ ಸುವ್ರತೆಯುಮಂತಿರೆ ಮಾಡಿದಳಾ ಕ್ರಮಂಗಳಂ ೧೦೪

ವಚನ: ಅಂತಾ ಮಹಾಸೇನ ಮಹಾರಾಜನುಂ ಸುವ್ರತಮಹಾದೇವಿಯುಂ ವಿಶೇಷ ವ್ರತಂಗಳಂ ಕೈಕೊಂಡು ಸಮ್ಯಗ್ದೃಷ್ಟಿಗಳಪ್ಪ ಶಿಷ್ಟೇಷ್ಟಜನಂಗಳ್ವೆರಸು ಮುನಿರಾಜಕುಂಜರನಂ ಬೀಳ್ಕೊಂಡು ಕಿಱುಮಂತರಂ [2]ಪೋ[2]ದಮಾರ್ಗದಿಂ ಪೋದಿಂಬಳಿಯಂ

ಉತ್ಪಲಮಾಲೆ

ಪೆಣ್ಣುಗಳಿಕ್ಕೆ ಚಾಮರಮನಿಕ್ಕೆಲದೊಳ್ ಧವಳಾತಪತ್ರಮಂ
ತಣ್ಣೆಳಲಿಂಗೆ ಕಾರಣಮದಾಗಿ ದಲೆತ್ತಿ ವಿಶೇಷಭಾ[3]ವ[3]ದಿಂ
ಪಣ್ಣಿದ ಪಟ್ಟದಾನೆಯುನದಂ ಪಿಡಿದೇಱುದರಂದು ವಂದಿಗಳ್
ಬಣ್ಣಿಸುತಿರ್ಪಿನಂ ನೃಪತಿಯುಂ ಸತಿಯುಂ [4]ಹೃದಯಾ[4]ನುರಾಗದಿಂ ೧೦೫

ಮಹಾಸ್ರಗ್ಧರೆ

ವಿಳಸದ್ಗಂಡಂಗಳೊಳ್ ಕುಂಡಳರುಚಿಪಟಳಂ ರಂಜಿಸುತ್ತಿರ್ಪಿನಂ ದಿ
ಗ್ವಳಯಾಂತರ್ಭಾಗದೊಳ್ ವ್ಯಾಪಿಸೆ ಪಟುಪಟಹಧ್ವಾನಮುದ್ಯತ್ಪತಾಕಾ
ಕುಳಮೆಲ್ಲಂ ವ್ಯೋಮಮಂ ಚುಂಬಿಸೆ ರಿಪುನೃಪಸಂತಾನದುಸ್ಸಹ್ಯತೇಜೋ
ವಿಳಿತಂ ದೇವೇಂದ್ರನೆಂಬಂದದೆ ಧರೆಗಧಿಪಂ ಬಂದನಾನಂದದಿಂದಂ ೧೦೬

ವಚನ: ಅಂತು ಬಂದು ನಾನಾಶೋಭಾವಿರಾಜಮಾನಮಾದ ನಿಜರಾಜಧಾನಿಯನೆಯ್ದಿ ಪುರಮನರಮನೆಯುಮಂ ಪೊಕ್ಕು ಕೂಡೆಬಂದ ರಾಜಕರಾಜನ್ಯಕಮಹಾಪ್ರಧಾನರ್ ಮೊದಲಾದ ಸಮಸ್ತಪರಿವಾರಮಂ ಕರ್ಪೂರಸಹಿತಂ ವೀಳೆಯಮಂ ಕೊಟ್ಟು ತಂತಮ್ಮ ನಿವಾಸಕ್ಕೆ ಬೀಳ್ಕೊಟ್ಟು ಕಳಿಪಿದಿಂ ಬಳಿಯಂ

ಕಂದ: ಮಜ್ಜನಭೋಜನಮಂ ಮಾ
ಳ್ಪುಜ್ಜುಗದೊಳಮಿರ್ದು ಕಳಿದರಂದಿನ ದಿನಮಂ
ಸಜ್ಜನಮಂದ್ಯನ ನುಡಿಯುಂ
ದುರ್ಜಯರಾದರಿಸಿ ಸುಖದೊಳೋಲಾಡುತ್ತುಂ ೧೦೭

*ವಚನ: ಮತ್ತಂ

1 ಕು (ಜ) 2 ಪಾ (ಜ) 3 ರ (ಕ) 4 ಪರಮಾ (ಕ)
* (ಜ) ಪ್ರತಿಯಲ್ಲಿ ಈ ವಚನವಿಲ್ಲ.

ಮಹಾಸ್ರಗ್ಧರೆ

ನರಪಂ ಸಾಮ್ರಾಜ್ಯಸೌಖ್ಯೋದಯದೊಳೊಲಿದು ತಾಳ್ದಿರ್ದನಾನಂದಮಂ ಸ
ತ್ಕರುಣಾವಾರಾಶಿ ಸೋಮಂ ಸಕಳವಿಭವಸೀಮಂ ಪ್ರಪೂಜ್ಯಕ್ರಮಂ ಸು
ಸ್ಥಿರಸತ್ಕೀರ್ತಿಪ್ರಜಂ ಬಾಹುಬಲಿಸುಕವಿರಾಜಂ ಜನತ್ಕಲ್ಪಭೂಜಂ
ಧರಣೀಸಂಸ್ತುತ್ಯದೇಹಂ ಘನಗುಣನಿವಹಂ ಚಾತುರೀಜನ್ಮಗೇಹಂ ೧೦೮

ಗದ್ಯ : ಇದು ಸಕಳಭುವನಜನವಿನೂಯಮಾನಾನೂನ ಮಹಿಮಾಮಾನನೀಯ
ಪರಮಜಿನಸಮಯಕಮಳಿನೀಕಳಹಂಸಾಯಮಾನ ಶ್ರೀಮನ್ನಯಕೀರ್ತಿ
ದೇವಪ್ರಸಾದ ಸಂಪಾದಪಾದನಿಧಾನದೀಪವರ್ತಿಯುಭಯಭಾಷಾ
ಕವಿಚಕ್ರವರ್ತಿ ಬಾಹುಬಲಿ ಪಂಡಿತದೇವ ಪರಿನಿರ್ಮಿತಮಪ್ಪ
ಧರ್ಮನಾಥಪುರಾಣದೊಳ್ ಧರ್ಮತೀರ್ಥಂಕರ
[1]ಭವಾಂತರೋಪ[1] ವ್ಯಾವರ್ಣನಂ

## ಪಂಚಮಾಶ್ವಾಸಂ

[1] ನ ಭವಾಂತರಾಳ (ಕ)

# ಷಷ್ಠಾಶ್ವಾಸಂ

ಕಂದ: ಶ್ರೀಗುರುವಚನ ವಿಶೇಷದೊ
ಳಾಗಿಸಿ ವಿಶ್ವಾಸಮಂ ಮಹಾನಂದಮನಾ
ಭೂರ್ಗಧಿನಾಥಂ ತಳೆದಂ
ಭೋಗಯುತಂ ಸರಸಚತುರಕವಿಕುಳತಿಳಕಂ ೧

ವಚನ: ಮತ್ತಮಾ ಮಹಾಸೇನ ಮಹಾರಾಜನಾ ಮುನಿಕುಂಜರಂ ಪೇಳ್ದ ದೇವಸ್ತ್ರೀನಿಕರಸಮಾಗಮನಸಂಭ್ರಮಪರಿಶೋಭಾಕೌತುಕಸಮಾಳೋಕನವ್ಯಾಕುಳಿತಚಿತ್ತನಾಗಿ ಮಱುದಿವಸಂ ಸರ್ವಾವಸರ ಸಮಯಮಾದ ಮಹಾಸ್ಥಾನಮಂಡಪಕ್ಕೆ ಮುನ್ನಮೆ ಸಮುಪಶೋಭನಾರ್ಥಂ ವೇತ್ರಧರರಂ ಕಳಿಪಿ ತತ್ಕೋಣಾಂತರ್ಭಾಗಶೋಧನಾನಂತರಂ ನಿರಂತರಿತಸಂತೋಷದಿಂದಂ ಮೆಲ್ಲಮೆಲ್ಲನಲ್ಲಿಗೆ ಬಿಜಯಂಗೆಯ್ವಾಗಳ್ ಕಟ್ಟಿದಿರೊಳಾ ಸಭಾಮಂಡಪಮೆಂತಿರ್ದುದೆಂದೊಡೆ

ಚಂಪಕಮಾಲೆ

ವಿಳಸಿತಮಪ್ಪ ಕಂಬರಲ ಕಂಬದ ಪಂತಿಗಳಿಂದಮೆಯ್ದೆ ಕೋ
ಮಳಹರಿನೀಳಭಿತ್ತಿಗಳನೊಪ್ಪುವ ಮುತ್ತಿನ ಲಂಬಳಂಗಳಿಂ
ಪಳಿಕಿನ ಜೆಲ್ವ ಪುತ್ತಳಿಗಳಿಂದೆ ಮನೋಹರಮಾಗಿ ಸಂತತಂ
ಥಳಥಳಿಸುತ್ತುಮಿರ್ದುದು ವಿಶಾಳಸಭಾಸದನಂ ನೃಪಾಳನಾ ೨

ವಚನ: ಅದಱಿತೊಳ್

ಮಹಾಸ್ರಗ್ಧರೆ

ಪಿರಿದುಂ ಬಿಳ್ದಿರ್ದ ಕರ್ಪೂರದ ಪರಿಮಳಸಂಸಕ್ತಮತ್ತದ್ವಿರೇಫೋ
ತ್ಕರಮೆಲ್ಲಾ ತಾಣದೊಳ್ ಮಾರ್ಪೊಳೆಯೆ ನಿರುಪಮೇದೀವರೌಘೋಪಹಾರೋ
ದ್ಧುರಶೋಭಾಶಂಕೆಯಂ ನೋಳ್ಪರ ನಯನಚಯಕ್ಕೆಯ್ದೆ ಮಾಡುತ್ತಮಿರ್ದ
ತ್ತುರುಚಂಚಚ್ಚಂದ್ರಕಾಂತಪ್ರಘಟಿತಮಸಮಂ ತುಂಗಮಾಸ್ಥಾನರಂಗಂ ೩

ವಚನ: ಅಂತತಿರಮಣೀಯಂಗಳಪ್ಪ ತನ್ನ ಮಣಿಮಯಶಿಖರಂಗಳ ಬೆಳಗಿಂದಾಕಾಶಾಂತರಾಳದೊಳಾವಗಂ ಮಿಂಚುಗಳ ಸಂಚಯಮಂ ಪ್ರಪಂಚಿಸುತ್ತುಮಿರ್ದ ಸಭಾ

ಸದನಮಂ ನೋಡುತ್ತುಮಾ ನಾಡೆಣಿಕೆಯಿಂ ನಿಜಚರಣವಿಳಸದರುಣಕಮಳವಿನ್ಯಾಸವಿಳಾಸದಿಂ ರತ್ನಕುಟ್ಟಿಮ ಭೂಮಿಕಾವನಿಗೆ ರಾಗರಸಪೂಗದಾಭೋಗಮನೀವುತ್ತುಂ ಬಂದು ತದಾಸ್ಥಾನರಂಗಮೆಂಬ ಲಕ್ಷ್ಮಿಯ ಕಿರೀಟಮೆಂಬಂತೆ ರಂಜಿಸುವ ಸಂತಪ್ತತಪನೀಯ [1]ಕಾಂಚನಮಯ[1]ಸಿಂಹಾಸನಸಮಾಸೀನನಾಗಿರ್ಪುದುಂ

ಕಂದ: ಕನಕಮಯಮಾದ ಸಿಂಹಾ
ಸನದ ಪ್ರಭೆ ಪಸರಿಸಲ್ಕೆ ಮನುಜಾಧೀಶಂ
ಘನ[2]ಮಳೆ[2]ವಿಸಿಲಾವರಿಸಿದ
ದಿನಕರನ [3]ಶ್ರೀ[3]ಯನಾಂತು ಕಣ್ಗೆಸೆದಿರ್ದಂ ೪

ವಚನ: ಮತ್ತಮಾತಂ

ಉತ್ಪಲಮಾಲೆ

ಸಾದಿನ ರೂಪುಗೊಂಡು ತಿಮಿರಾವಳಿ ನಿನ್ನಯ ಕರ್ಣಯುಗ್ಮದೊಳ್
ಮೇದುರಮಾಗಿ ಪೊರ್ದಿ ನಸುಗಂಜದದಿರ್ದಪುದೆಂಬಿದಂ ನೃಪಂ
ಗಾದರದಿಂದೆ ಪೇಳ್ವ ಶಶಿಸೂರ್ಯರ ಮಂಡಳದಂತಿರಿರ್ದ ಚಿ
ತ್ರೋದಯನೂತ್ನರತ್ನಮಯಕುಂಡಲಮಂಡನದಿಂದಮೊಪ್ಪಿದಂ ೫

ವಚನ: ಇಂತನೇಕರಾಜ[4]ನ್ಯಕ[4]ಮುಕುಟತಟಘಟಿತವಿಕಟ ಹರಿನೀಳಮಣಿ ಪೇಟಕ ಮಧುಕರನಿಕರಪರಿಜಟಿಳಿತನಿಜಚರಣನಳಿನಯುಗಳನಪ್ಪಾ ಮಹೀಪಾಳತಿಳ[5]ಕನೊ[6]ಡ್ಡೋಲಗಂಗೊಟ್ಟಿರ್ಪುದುಂ

ಉತ್ಪಲಮಾಲೆ

ಬಂಧುಜನಂಗಳಿಂ ಪಿರಿದುಮಾಪ್ತಜನಂಗಳಿನಾಶ್ರಿತಾದಿಸಂ
ಬಂಧಿಜನಂಗಳಿಂದೆ ಪರಿವಾರಜನಂಗಳಿನೆಯ್ದೆ ತುಂಬಿ ತಾಂ
ಬಂಧುರಮಾಗಿ ತಿಂತಿಣಿಯದಾಯ್ತು ವಿಕೀಲಿತರತ್ನಕಾಂತಿ ಚಿ
ತ್ರಂ ಧರಣೀಶನೋಲಗದ ಶಾಲೆ[6]ಯು[6] ನಿರ್ಮಿಸಿದತ್ತು ಲೀಲೆಯಿಂ ೬

ವಚನ: ಮತ್ತಂ

ಚಂಪಕಮಾಲೆ

ನೆರೆದಧಿರಾಜ ಮಂಡಳಿಕ ಮಂತ್ರಿ ಪುರೋಹಿತ ದಂಡನಾಥವಿ
ಸ್ಫುರಿತಮಹಾಪ್ರಧಾನರ ಲಸನ್ಮಕುಟಂಗಳೊಳೆಯ್ದೆ ಕೀಲಿಸಿ
ರ್ದುರುತರರತ್ನಸಂತತಿಗಳಿಂ ನೆಱೆತುಂಬಿದ ಕಾರಣಂ ಸಭಾ
ಸುರುಚಿರಮಂದಿರಂ ಮೆಱೆವುತಿರ್ದುದು ರೋಹಣಶೈಳಮೆಂಬಿನಂ ೭

---

1 ಮಯ (ಕಗಚ) 2 ಮೆಳ (ಜ) 3 ಸಿರಿ (ಜ) 4 ನ್ಯ (ಕ) 5 ಕಂ ಒ (ಕಚ) 6 ವಿ (ಜ)

ಚಂಪಕಮಾಲೆ

ನಿರುಪಮಚಂದ್ರಕಾಂತಮಯರಂಗದ ಕಾಂತಿವಿತಾನಮೆತ್ತಲುಂ
ಪರಕಲಿಸಲ್ ಸಭಾಜನದ ಮೇಲೆ ಸುದುಗ್ಧಪಯೋಧಿಮಧ್ಯದೊಳ್
ಸುರರ ಸಮೂಹಮೋಕುಳಿಯನಾಡುತಮಿರ್ದಪುದೆಂಬ ಶಂಕೆಯಂ
ನೆರೆಯಿಸುತುಂ ವಿರಾಜಿಸಿದುದಾ ಸಭೆ ಷೋಡಶಭೂಷ[1]ಣಾಂಚಿತಂ[1] ೮

ಕಂದ: ಓಲಗದ ಸೂಳೆಯರ್ ಭೂ
ಪಾಲನನಿಕ್ಕೆಲದೊಳೆಯ್ದೆ ಕುಳ್ಳಿರ್ದರ್ ಸ
ಲ್ಲೀಲೆಯಿನನಂಗಚಕ್ರಿಯ
ಲಾಲಿತ ಬಾಣಂಗಳಂತೆ ಕಣ್ಗೆಸೆವುತ್ತುಂ ೯

ಉತ್ಪಲಮಾಲೆ

ಮಾಳವಭೂಪನೊಂದೆಡೆಯೊಳೊಂದೆಡೆಯೊಳ್ ಮಗಧಾಧಿನಾಯಕಂ
ಚೋಳಮಹೀಪನೊಂದೆಡೆಯೊಳೊಂದೆಡೆಯೊಳ್ ಸಲೆ ಗುರ್ಜರಾಧಿಪಂ
ಗೌಳನರೇಶನೊಂದೆಡೆಯೊಳೊಂದೆಡೆಯೊಳ್ ವರಕುಂತಳಾಧಿಪಂ
ಲೀಲೆಯಿನಿರ್ದರೋಲಗದೊಳಂದು ನರೇಂದ್ರ ಸುವಂದನೀಯನಾ ೧೦

ವಚನ: ಮತ್ತಮೊಂದೆಡೆಯೊಳ್

ಮತ್ತೇಭವಿಕ್ರೀಡಿತ

ರಸಮುಂ ಭಾವಮುಮಪ್ಪುಕೆಯ್ದು ಪಿರಿದುಂ ಶಬ್ದಾರ್ಥವೈಚಿತ್ರ್ಯದಿಂ
ದೆಸೆಯುತ್ತಿರ್ದ ಸಮರ್ಥ ಸತ್ಕವಿವಿತಾನೋತ್ಪಾದ್ಯಮಂ ಪದ್ಯಮಂ
ವಸುಧಾಧೀಶ್ವರನೊಲ್ದು ಕೇಳ್ದು ತಲೆಯಂ ತೂಗುತ್ತುಮಿರ್ದಂ ದಲಾ
ರಸಮಂ ಚಿತ್ತದೊಳೆಯ್ದೆ ತುಂಬಿ ಮಿಗೆ ಮತ್ತಳ್ಳಾಡುತಿರ್ದಂದ[2]ದಿಂ[2] ೧೧

ಕಂದ: ಚಾರ್ವಾಕ ಬೌದ್ಧ ಸಾಂಖ್ಯರ
ಖರ್ವಪ್ರಾಭಾಕರರ್ ಸುನೈಯಾಯಿಕರುಂ
ಸರ್ವಜಿಜ್ಜೈನವಾದಿಗ
ಳುರ್ವೀಶನ ಸಭೆಯೊಳಿರ್ದರತಿಮುದದಿಂದಂ ೧೨

ಕವಿಗಳ್ಗೆ ಸಂತತಂ ಮಿಗೆ
ಸವಿಯಂ ಸಾಲಿಡುತುಮಿರ್ಪ ಸರಸೋಕ್ತಿಯೊಳಂ
ನವನಿಪುಣತ್ವಮನಾಂತೊ
ಪ್ಪುವ ಗಮಕಿಗಳುಂ ಸುವಾಗ್ಮಿಗಳುಮಿರೆ ನಲವಿಂ ೧೩

[1] ಣಾಳಿಯಿಂ (ಕ) [2] ಹೀ (ಜ)

ಚಂಪಕಮಾಲೆ

ಮಲಹರಿ ಮೇಘರಾಜಿ ಘಳಮಂಜರಿ ತೊಂಡಿ ವಸಂತವೆಂಬ ಮಂ
ಜುಳತರ ರಾಗರಂಜನದಿ ಚಿತ್ರಚಮತ್ಕೃತಿಯಂ ನಿಮಿರ್ಚುವು
ಜ್ವಳ ಮೃದುಗೀತಮಂ ಬಿಡದೆ ಪಾಡಿ ಮುದಂ ಮಿಗೆ ಮೆಚ್ಚಿಸುತ್ತುಮಂ
ದಿಳೆಗಧಿನಾಥನೋಲಗದೊಳಿರ್ದುದು ಗಾಯಕಗಾಯಕೀಜನಂ ೧೪

ವಚನ: ಮತ್ತಮಾತನ ಸಮೀಪದೊಳ್

ಮಹಾಸ್ರಗ್ಧರೆ

ಮೊಲೆಗಳ್ ಬಿಣ್ಪಿಂದೆ ಬಳ್ಕುತ್ತಿರೆ ಮಣಿವಿಳಸತ್ಕಂಕಣಂಗಳ್ ಜಝುಣ್ರೆಂ
ದುಲಿಯಲ್ ಮಾಣಿಕ್ಯಹಾರಾಳಿಗಳಲುಗೆ ಕರಂ ಮೇಲುದಲ್ಲಾಡೆ ನೇತ್ರಾಂ
ಚಳಮಂ ಚೆಲ್ಲುತ್ತುಮೆಲ್ಲಾ ಸಭೆಯೊಳಮಳಸಚ್ಚಾಮರೌಘಂಗಳಂ ಭೂ
ತಳನಾಥಂಗಿಕ್ಕಿದರ್ ಕಾಮಿನಿಯರನುಪಮಾಕಾರೆಯರ್ ಲೀಲೆಯಿಂದಂ ೧೫

ವಚನ: ಮತ್ತಮಾ ಕ್ಷತ್ರಿಯಚೂಡಾಮಣಿ ಪೊದೆದಿರ್ದ ಸಿರಿದಂ ಸಪುರಮಾದ ಬೆಳುದಿಂಗಳ ಧಾವಲ್ಯಮನಿಳಿಕೆಯ್ವುತ್ತಿರ್ದ ಪ್ರಶಸ್ತವಸ್ತ್ರಾಂಚಳಂ ಬೀಸುವ ಚಾಮರಂಗಳ ಗಾಳಿಯಿಂದಲ್ಲಾಡುತ್ತುಮಿರಲಾ ನೃ[1]ಪಾಳೋ[1]ತ್ತಮನಿಂತು [2]ಒ[2]ಡ್ಡೋಲಗಂಗೊಟ್ಟಿರ್ದುದುಮನ್ನೆಗಮಿತ್ತಲ್

ಕಂದ: ವಸುಮತಿಗವತರಿಸಿದಪಂ
ದಶರಥಚರನಪ್ಪ ತದಹಮಿಂದ್ರಂ ದಿವದಿಂ
ಮಿಸುಪ ಚರಮಾಂಗಮಂ ಕೊಳ
ಲೆಸಪಂದೆಂದಱಿದನಂದು ಸೌಧರ್ಮೇಂದ್ರಂ ೧೬

ವಚನ: ಇಂತು ನಿಜಪರಮಾವಧಿಬೋಧಪ್ರಯೋಗವಿಧಾನದಿಂ ಧರ್ಮನಾಥನಾಗನವತರಿಸಿದಪನೆಂದಱಿದು ರಾಗಿಸಿ ಬಳಿಯಂ ತನ್ನಯ ಭಾಂಡಾಗಾರಾಧಿಕಾರನಿಯುಕ್ತನಪ್ಪ ಕುಬೇರನಂ ಕರಸಿ ನೀಂ ಪೋಗಿಯುತ್ತರಕೌಶಲದೇಶಾಧೀಶ್ವರನುಂ ರತ್ನಪುರಲಕ್ಷ್ಮೀಮಣಿ[3]ಮಯಮುಕುರನುಮಿ[3]ಕ್ಷ್ವಾಕುವಂಶವನಜವನದಿವಾಕರನುಮೆನಿಪ ಮಹಾಸೇನ ಮಹಾರಾಜನ ವಿರಾಜಮಾನ ರಾಜಧಾನಿಯೊಳ್ ಧರ್ಮತೀರ್ಥಕರ ಗರ್ಭಾವತರಣ ಕಲ್ಯಾಣನಿಮಿತ್ತಂ ರತ್ನವೃಷ್ಟಿಯಂ ಕಱೆಯೆಂದು ಬೆಸಸಲದಂ ಶಿರದೊಳಾಂತು [4]ಮಹಾಪ್ರ[4]ಸಾದಮೆಂದು ಕೈಕೊಂಡಂ ಮತ್ತಂ ನಿಜಪುರಪ್ರಧಾನೆಯರಪ್ಪ ಸುರಪುರಂಧ್ರಿಯರುಮಂ [5]ಬರಿಸಿ[5] ಪೋಗಿ ನೀವಾ ಜಿನನ ಜನನಿಗೆ ಪರಿಚರ್ಯಾಪರಿಕರಮನೊಡರ್ಚುತ್ತುಮಿರಿಯೆಂದು ನಿಯಾಮಿಸಿ ಬೇಱೆವೇಱೆಯವರವರ್ಗೆ ತಕ್ಕಂತಪ್ಪ ಪರಿವಾರದೇವಿಯರುಮನಪ್ಪಯಿಸಿ ಬೀಳ್ಕೊಟ್ಟು ಕಳಿಪಲೊಡಮವರ್ ಬರುತ್ತುಮಾಕಾಶತಳಪ್ರದೇಶಮನೆಯ್ದಿದಾ ಪೊತ್ತಿನೊಳ್

1 ಪೋ (ಜ) 2 ಮೊ (ಜ) 3 ಮುಕುಟನುಮಪ್ಪಿ (ಕಚ) 4 ಪ್ರ (ಕಗಚ) 5 ನೀಂ (ಕಚ)

* ಕಂದ: ಆಗಸದೊಳೊಗೆದುದುಱೆ ಮಿಗಿ
ಲಾಗಿರೆ ಬೆಳಗುಗಳ ಬಳಗಮೆಲ್ಲಾ ತಾಣದೊ
ಳಾಗಳ್ ಸಭೆಯೆಲ್ಲಂ ಬೆಱ
ಗಾಗಿದಿದೇನೆಂದು ನೋಡಿದುದು ವಿಸ್ಮಯದಿಂ ೧೭

ಮಹಾಸ್ರಗ್ಧರೆ

ಮುಗಿಲೇನುಂ ಪೊರ್ದದಿಪ್ಪಾಗಸದೊಳಿರದು ವಿದ್ಯುಲ್ಲತಾಮಾಲೆ ಮತ್ತಂ
ಪಗಲುಂ ನಕ್ಷತ್ರಕಾಂತಿಪ್ರಸರಮದಿರದಿಂತೆಲ್ಲಿಯುಂ ಕೋಪ್ತ[1]ಚಾರಾ
ಳಿಗಳಿನ್ನುಂ[1]ಸಾರದಿರ್ಪರ್ ನೆಲೆಯೊಳುರಿಗಳುಂ ನೋಳ್ಪಡಿಲ್ಲಿಂತಿದೇನೊ
ಯ್ದೊಗೆದಿರ್ದೀ ದೀಪ್ತಿಯೆಂಬೀ ಬಹುವಿಧದ ವಿಕಲ್ಪಂಗಳಂ ಕಲ್ಪಿಸುತ್ತುಂ ೧೮

ವಚನ: ಕಡುಚೋಜಿಗಮಿದೇನೆಂದು ಸಭೆಯುಂ ಸಭಾಪತಿಯುಂ ಕೊರಲ್ಗಳಂ ನೆಗಪಿ ನೋಡುತ್ತುಮಿರಲ್ ಮತ್ತಂ

ಚಂಪಕಮಾಲೆ

ಪೊಳೆವ ಕೊರಲ್ಗಳಂದವಧಿಯಾಗಿ ಮುಗಿಲ್ಗಳ ಮೊತ್ತಮಾ ಸಮು
ಜ್ವಳತರ ದೇಹಯಷ್ಟಿಗಳನಾವರಿಸಲ್ ಮಿಗೆ ಸೂರ್ಯಬಿಂಬಮಂ
ಘಳಿಲನೆ ಗೆಲ್ವುದೊಂದು ಬಗೆಯಿಂದೆ ಸಮುದ್ಯತಪೂರ್ಣಚಂದ್ರಮಂ
ಡಳ ಘನಸೈನ್ಯದಂತೆಸೆದುದಿಂದುಮುಖೀಜನವಕ್ತ್ರಮಂಡಳಂ ೧೯

ವಚನ: ಅದಱಿಂ ಬಳಿಯಂ

ಉತ್ಪಲಮಾಲೆ

ಕೋಮಳಪಂಚರತ್ನಮಯಭೂಷಣಕಾಂತಿಗಳಿಂದೆ ಸುತ್ತಲುಂ
ವ್ಯೋಮದೊಳಾ ಸುರಾಧಿಪವಿಳಾಸವತೀನಿವಹಂಗಳಾಕ್ಷಣಂ
ಕಾಮನ ಬಿಲ್ಗಳಂ ಬಿಡದೆ ನಿರ್ಮಿಸಿ ತಾವವಱಲ್ಲಿ ಮತ್ತಮು
ದ್ದಾಮ ಸುವರ್ಣಬಾಣನಿಚಯಂಗಳಿನೆಂಬವೊಲೊಪ್ಪಿದರ್ ಕರಂ ೨೦

ವಚನ: ಮತ್ತಮಾಕಾಶಮೆಂಬ ಭಿತ್ತಿಯೊಳ್ ಬರೆದ ನವೀನಚಿತ್ರಂಗಳೆಂಬಂತೆ ಭಾವಿತಾಕಾರೆಯರಾಗಿ ತೋಱುತ್ತುಂ ವಿಯತ್ತಳದಿಂದಿಳಿದು ಮೆಲ್ಲಮೆಲ್ಲನೆ ಬರುತ್ತುಮಿರಲ್ ಮತ್ತಂ

---

[1] ಛಾರಾ|ಳಿಗಳೇನುಂ (ಗ)

* ಗರ್ಭಶೋಧನೆಗೆ ದೇವಿಯರು ಬಸ ಸಂಭ್ರಮ (ಗಜ)

ಕಂದ : ವರಪದ್ಮರಾಗಮಣಿಸ್ಥೂ
ಪುರರೂಪಂ ಕೊಂಡು ಸೂರ್ಯನವರಂಘ್ರಿಗಳಂ
ಸ್ಮರಪೀಡಿತನಾಗಿ ಮಹಾ
ದರದಿಂದಂ ಪಿಡಿದನೆಂಬ ತೆಱದಿಂ ಮೆಱೆದಂ ೨೧

ವಚನ : ಅಲ್ಲಿಂಬಳಿಯಂ

ಮತ್ತೇಭವಿಕ್ರೀಡಿತ

ವರವೃಂದಾರಕಸೌಂದರೀಸಮುದಯಂ ತೀರಾಗ್ರದೊಳ್ ಬಂದು ನಿಂ
ದಿರೆ ಮಂದಾಕಿನಿವಾರಿಬಿಂದುಮಯಶೃಂಗಾರಂಗಳಂ ಶ್ರೇಣಿಯಂ
ತಿರೆಗಳ್ ಕೈಗಳನಿತ್ತು ತಾಂ ನುಡಿಸುವಂತಿರ್ದತ್ತು ಘೋಷಂಗಳಿಂ
ಧರೆಯೊಳ್ ನಿರ್ಮಳರಿಂಗೆ ನಿರ್ಮಳರದೇಂ ಸಂಪ್ರೀತಿಯಂ ಮಾಡರೇ ೨೨

ವಚನ : ಆ ಸ್ವರ್ಣದಿಯಂ ಪರಿತೂರ್ಣದಿಂ ತಕ್ಕೈಸಿಕೊಳುತ್ತುಮಿರ್ದಪರೆಂಬಂ ತಿರೀಸಾಡುತ್ತುಂ ದಾಂಟಿಬರುತ್ತುಮಿರ್ಪಾಗಳ್

ಚಂಪಕಮಾಲೆ

ಸುರುಚಿರಪಾರಿಜಾತಕುಸುಮಸ್ತಬಕಂಗಳ ಕರ್ಣಪೂರಸ
ತ್ಪರಿಮಳಲೋಭದಿಂ[1]ತೊ[1]ಡನೆ ತುಂಬಿಗಳುಂ ನಭದಲ್ಲಿ ಮಂಡಳೀ
ಕರಿಸಿ ನಿಳಿಂಪಕಾಂತೆಯರಿಗೆತ್ತಿದ ಹೀಲಿಯ ಚೆಲ್ವವೆತ್ತ ಛ್ರು
ಲ್ಲರಿಗಳಿವೆಂಬಿನಂ ಬಿಡದೆ ಬಂದುವು ಲೀಲೆಯನಂದು ಮಾಡುತುಂ ೨೩

ಗುರುಕುಚಮಂಡಳಸ್ಥಿತಿಯನೀಕ್ಷಿಸಿ ಮಧ್ಯಮಭಾಗದೊಂದುಸಂ
ಸ್ಥಿರತೆಯ ಬೋಧನಂ ಸಭೆಗೆ ಪುಟ್ಟಿಸುತಿರ್ದ ವಿಶಿಷ್ಟರೂಪಮಂ
ಧರಿಸಿ ಸಮಸ್ತಲೋಕವನಿತಾನಿಕರಂಗಳನಾವಗಂ ಲಘೂ
ಕರಿಸುವ ದೇವಕಾಮಿನಿಯರೆಯ್ದಿದರಂದು ಸಭಾಸಮೀಪಮಂ ೨೪

ವಚನ : ಅಂತಾ ದೇವಕಾಂತೆಯರ್ ನಭೋಮಾರ್ಗದಿಂದಿಳಿದು ಬಂದು ತಮ್ಮಯ ಶರೀರಸಂಜಾತಸೌಗಂಧ್ಯಸಂಸ್ಪರ್ಶಸಂಬಂಧದಿಂದಾದ ಸಂಮದ ಮದಭರ ಮಂದರಪ್ರಯಾತಸಪ್ಪ ಬಂಧುರಗಂಧವಹನುಂ ಮುಂದಿಟ್ಟುಕೊಂಡು ವಿಚಿತ್ರರತ್ನಪರಿಮಂಡಿತಮಪ್ಪ ಸಭಾಮಂಡಪದೊಳಗಂಪೊಕ್ಕು ನೋಳ್ಪಾಗಳ್

ಕಂದ : ಹರಿವಿಷ್ಟರದೊಳ್ ಕುಳ್ಳಿ
ರ್ದಾರಸನನಾ ದಿವಿಜಕಾಂತೆಯರ್ ಕಂಡು ಮಹಾ
ದರದಿಂ ಚಿಂತಿಸಿದರ್ ತ
ಮ್ಮುಮ್ಮಚಿತ್ತದೊಳೆಯ್ದೆ ನೋಡುತಂ ಸಂದೆಗನುಂ ೨೫

[1] ದೊ (ಜ)

ವಚನ : ಅದೆಂತೆನೆ

ಚಂಪಕಮಾಲೆ

ಉದಯಗಿರೀಂದ್ರದೊಳ್ ನೆಲಸಿದಿದ್ಧಕಳಾಪರಿಪೂರ್ಣಚಂದ್ರನೋ
ಮದಭರಮತ್ತಮಾನಸೆಯರಪ್ಪ ದಲೆಮ್ಮುಮನೆಯ್ದೆ ಸೋಲಿಸಲ್
ಮದನನೆ ಬಂದು ಕುಳ್ಳಿದನೊ ಮಾನವಲೋಕದದೀಂದ್ರನುಂ ಸಮಂ
ತೊದೆದುಱೆ ನೋಂಕಲೆಂದಿರದೆ ಬಂದ ಕುಬೇರನೊ ಭಾವಿಸಲ್ ನೃಪಂ ೨೬

ಕಂದ : ಎಮ್ಮಂ ಬಂದರೊ ಬಾರರೊ
ಸಮ್ಮದದಿಂ ನೋಳ್ಪೆನೆಂದು ಸೌಧರ್ಮೇಂದ್ರಂ
ಪೆರ್ಮೆಯೊಳೆ ಮುಂದೆ ಬಂದಂ
ತಿಮ್ಮಡಿಸಿರಿಯಲ್ಲಿ ಕೂಡಿ ಕುಳ್ಳಿರ್ದನೊ ಪೇಳ್ ೨೭

ವಚನ : ಎಂದಿಂತು ನಾನಾವಿಕಲ್ಪಂಗಳಂ ಕಲ್ಪಿಸುತ್ತುಮರಸನ ಸಮೀಪಕ್ಕೆವರೆ

ಶಾರ್ದೂಲವಿಕ್ರೀಡಿತ

ಆಗಳ್ ಭೂಪನ ತತ್ಸಭಾಜನದ ಚೇತೋವೃತ್ತಿಯುಂ ಕಣ್ಗಳುಂ
ಬೇಗಂ ಪೋಗಿ ಸುರೇಂದ್ರಕಾಮಿನಿಯರಂ ಮುಮ್ಮುಟ್ಟಿ ಕೌತೂಹಳಂ
ತಾಗಲ್ಕಾಕ್ಷಣಮೆಲ್ಲರುಂ ಮೆಱೆದನ್ಯವ್ಯಾಪ್ತಿಯಂ ಸಂಭ್ರಮಾ
ಭೋಗಂ ಕೈಮಿಗೆ ನೋಡುತಿರ್ದರವರೊಂದಾಶ್ಚರ್ಯಸೌಂದರ್ಯಮಂ ೨೮

ವಚನ : ತದನಂತರಂ

ಉತ್ಪಲಮಾಲೆ

ನ್ಯಾಯದಿನೆಯ್ದೆ ರಕ್ಷಿಸು ಸಮಸ್ತಧರಾತಳಮಂ ಲಸತ್ಸುಖೋ
ಪಾಯ ಜಿನೇಶಧರ್ಮಮುಮನುದ್ಧರಿಸೆಂದು ಮಹೀತಳಾಧಿಪ
ಜ್ಯಾಯನನಂದು ತಾಂ ಪರಸಿದರ್ ನಲವಿಂದುಱೆ ದೇವಕಾಂತೆಯರ್
ಕಾಯವಿಭೂಷಣಪ್ರಭೆಗಳಾವರಿಸಲ್ ಸಭೆಯಂ ವಿಶೇಷದಿಂ ೨೯

ವಚನ : ಅನಂತರಮಾ ದೇವಕಾಂತೆಯರ್ಗೆ ಭೂಕಾಂತಂ ಸ್ವಕೀಯಸೇವಾಪರರಪ್ಪ ಕಿಂಕರರ ಕೈಗಳಿಂದಂ ಯಥೋಚಿತಂಗಳಪ್ಪಾಸನಂಗಳಂ ಕೊಡಿಸಿ ಕುಳ್ಳಿರಲೊಡಂ

ಕಂದ : ದ್ಯುಮಣಿಮ[1]ಯೂ[1]ಖಾವಳಿಗಳ್
ಕಮಳಂಗಳ ನಡುವೆ ಪೊಳೆವುತಿರ್ದಪುವೆಂಬಂ
ತಮರಕುಮಾರಿಯರತ್ಯು
ತ್ತಮಪೀಠಂಗಳೊಳಮಂದು ಪೊಳೆಯುತ್ತಿರ್ದರ್ ೩೦

1 ಯಶಿ (ಜ)

ಮತ್ತೇಭವಿಕ್ರೀಡಿತ

ಪಿರಿದಂ ನಿರ್ಮಳಶೋಭಿತಾಂಬರದೊಳಂ ಭಾಭಾಸ[1]ಮಾನಪ್ರಭೋ
ದ್ಧುರೆಯರ್ ಕೋಮಳಹಸ್ತಸುಶ್ರವಣಭೂಷಾಯುಕ್ತಿಯದ್ದಿವ್ಯಸೌ
ದರಿಯರ್ ತಾರೆಗಳಂತೆ ಚಂದ್ರಮನವೊಲ್ ತೋರ್ಪಾ ಮಹೀಪಾಳನಂ
ಭರದಿಂದಂ ಪರಿವೇಷ್ಟಿಸಿರ್ದು ತಳೆದರ್ ಭೂರಿಪ್ರಸನ್ನತ್ವಮಂ ೩೧

ಮಹಾಸ್ರಗ್ಧರೆ

ಕ್ಷಿತಿನಾಥಂ ಪ್ರೇಮದಿಂ ದೇವಿಯರ ನಿರುಪಮಾಕಾರಮಂ ನಾಡೆಯುಂ ನೋ
ಡುತುಮಿಪ್ಪಾ ಪೊತ್ತಿನೊಳ್ ಪುಟ್ಟಿದುಮವರ ಶರೀರಂಗಳೊಳ್ ಕೂಡೆ ಚಾರೂ
ನ್ನತರೋಮಾಂಚಂಗಳಂದಂಗಜನ ನಿಶಿತಬಾಣಂಗಳುಚ್ಚಳ್ಕೆ ದೇಹ
ಸ್ಥಿತಿಯಿಂಪಂ ಬಾಹ್ಯದೊಳ್ ತೋರ್ಪುವ ಗರಿಗಳಿವೆಂಬಂತಿರೊಪ್ಪಿರ್ದುವೆತ್ತಂ ೩೨

ವಚನ : ಮತ್ತಮಾ ನರೇಂದ್ರಚಂದ್ರಮಂ ತನ್ನಯ ಪಲ್ಗಳ ಬೆಳಗೆಂಬ ಬೆಳುದಿಂಗಳ ಬಳಗದಿಂದಾ ನಿಳಿಂಪ ವಿಳಾಸಿನಿಯರ ನೇತ್ರಂಗಳೆಂಬ ಕೈರವಂಗಳಂ ವಿಕಾಸಿಸುತ್ತುಮತಿಥಿ ಯೋಗ್ಯಸನ್ಮಾನದಾನಪ್ರತಿಪತ್ತಿಯಿಂ ವಿತತೀಕೃತಪರಿಶ್ರಮೆಯರಪ್ಪ ದೇವಿಯರ ಪ್ರಸನ್ನ ಮುಖಂಗಳಂ ನೀಡುಂನೋಡಿ ಗಂಭೀರಧ್ವನಿಯಿಂದಿಂತೆಂದಂ

ಉತ್ಪಲಮಾಲೆ

ಮೂಜಗದಲ್ಲಿಯುಂ ದಿವಿಜಲೋಕಮದುತ್ತಮಭೂರಿಸೌಖ್ಯಸ
ದ್ಭಾಜನಮಗ್ರಗಣ್ಯಪದಮಂ ಪಡೆದೊಪ್ಪಮನಾಳ್ದುದೀ ಮಹಾ
ಪೂಜ್ಯರೆನಿಪ್ಪ ಕಾಮಿನಿಯರಿರ್ಪುದು ಕಾರಣಮುದ್ಧರತ್ನಸಂ
ಯೋಜನಮುಳ್ಳ ತಾಣಮದು ರೂಢಿಯನಾಂತೆಸೆದಿರ್ಪ ಮಾಳ್ಕೆಯಿಂ ೩೩

ಕಂದ : ಇಂತಪ್ಪ ಪುಣ್ಯಮೂರ್ತಿಗ
ಳೆಂತಾದೊಡಮೆಮ್ಮ ಮಂದಿಗರ್ ಮನುಜರಿಳಾ
ಕಾಂತರೆನಿಸಿರ್ದೊಡಂ ಕಾ
ರ್ಯಾಂತರದಿಂ ಪೊರ್ದರೆಮ್ಮ ಮನೆಗಳನೆಂದುಂ ೩೪

ಅಂತಾದೊಡಮಭ್ಯಾಗತ
ಸಂತತಿಗಳ್ಗಿಯ್ದೆ ಮಾಳ್ಪ ವಿನಯನಿಮಿತ್ತಂ
ಸಂತೊಸದಿಂದಿಲ್ಲಿಗೆ ಬಂ
ದಂತಹ ಕಾರಣಮಿದೇನೆನುತ್ತುಂ ಕೇಳ್ದಂ ೩೫

---

[1] ಸ್ವ (ಜ)

ನೀವಾರ್ ನಿಮ್ಮಯ ಪೆಸರೇಂ
ನೀವೆಲ್ಲಿಂ ಬಂದಿರಿಲ್ಲಿಗೆಮ್ಮಿಂದಂ ಸಂ
ಭಾವಿಸುವ ಕಾರ್ಯವೇನೆಂ
ದಾ ವಿಭು ಬೆಸಗೊಂಡನವರನತಿಮುದದಿಂದಂ ೩೬

ಆಗಳ್ ದೇವಿಯರೆಲ್ಲಂ
ವಾಗತಿ ಚತುರತ್ವದೊದವನಾಂತೆಸೆದಿರ್ಪಾ
ಶ್ರೀಗೆ ನುಡಿಯೆಂದು ಪೇಳಲ್
ಭೂಗಧಿಪಂಗುಸುರ್ದಳಾಕೆ ವಿಸ್ತರದಿಂದಂ ೩೭

ವಚನ : ಅದೆಂತೆಂದೊಡನಂತತೀರ್ಥಂಕರಂ ಕೈವಲ್ಯಕಲ್ಯಾಣಪ್ರಾಪ್ತನಾದಿಂ ಬಳಿಯಮರ್ಧಪಲ್ಯಮುಳಿಯಲ್ ನಾಲ್ಕುಸಾಗರೋಪಮಕಾಲಪರ್ಯಂತಂ ಧರ್ಮಂ ಪೆರ್ಚಿ ಪರಿವರ್ತಿಸುತ್ತುಮಿರ್ದತ್ತು ಕಡೆಯುಳುಳಿದಿರ್ದ ಪಲ್ಯಪ್ರಮಿತಕಾಲದೊಳ್ ಧರ್ಮ ಪ್ರಭಾವನಾಪ್ರಕಾಶಮೆಲ್ಲಂ ವಿಚ್ಛಿತ್ತಿಯನೆಯ್ದೆ ಮಿಥ್ಯಾತ್ವಮೆಂಬ ಕತ್ತಲೆಯ ಮೊತ್ತಮೆತ್ತಲುಂ ಪ್ರಬಲಮಾಗೆ

ಕಂದ : ರಮ್ಯಮೆನಿಸಿರ್ದ ತೋಱುವ
ಸಮ್ಯಗ್ದರ್ಶನ ಸುರತ್ನಮುಂ ತನ್ನದುವಂ
ಪೆರ್ಮೆಯೊಳೊಂದಿದ ಜಿನಪತಿ
ಧರ್ಮಂ ತನ್ನೊಡನೆ ಕೊಂಡುಪೋದತ್ತಾಗಳ್ ೩೮

ವಚನ : ಅಂತಱುದಿಂಗಳುಳಿಯೆ ಮಿಕ್ಕಿರ್ದ ಪಲ್ಯಪ್ರಮಾಣಕಾಲಮೆಲ್ಲಂ ಭರತಕ್ಷೇತ್ರದೊಳಧರ್ಮದೋಷದೂಷಿತಮಾಗಲೊಡಮೊರ್ಮೆ ಸೌಧರ್ಮೇಂದ್ರಂ ಜಿನಧರ್ಮಮಾರ್ಗಪ್ರಭಾವನಾ ನಾಯಕನಪ್ಪ ಜಿನನಾಯಕನುದಯಮುಂ ನೋಡುವಂತವಧಿಜ್ಞಾನಮೆಂಬ ವಿಲೋಚನ ವಿಕಾಶಮನೊಡರ್ಚಿಯಱುದಿಂಗಳಿಂ ಮೇಲೆ ಪದಿನಯ್ದನೆಯ ತೀರ್ಥಕರನಪ್ಪ ಧರ್ಮಜಿನನಾಥಂ ನಿಸ್ನಯ ಪಟ್ಟದರಸಿಯಪ್ಪ ಸುವ್ರತಾಮಹಾದೇವಿಯ ಗರ್ಭದೊಳುದ್ಭವಿಸಿದಪನೆಂದಱಿದು ಕಡುನಲಿದು ಬಳಿಯಮೆಮ್ಮಂ ಕರೆದು

ಕಂದ : ಭಾವಿಜಿನಜನನಿಯಪ್ಪಾ
ದೇವಿಗೆ ಶುಶ್ರೂಷೆಯಂ ಮಹಾದರದಿಂದಂ
ನೀವೆಯ್ದೆ ಮಾಡಿಯೆಂದಾ
ದೇವೇಂದ್ರಂ ಬೆಸಸೆ ಬಂದೆವಿಲ್ಲಿಗೆ ನೃಪತೀ ೩೯

ಮತ್ತೊಂದುಕಾರ್ಯಮೇನಂ
ಬಿತ್ತರಿಪೊಡಮಿಲ್ಲ ನಿನ್ನ ವಲ್ಲಭೆಗೆ ಕರಂ
ತೊತ್ತಿ[1]ಯರಾಗಿಯೆ[1] ಬೆಸನಂ
ನೆತ್ತಿಯೊಳಾಂತೆಯ್ದೆ ಮಾಳ್ಪುದಲ್ಲದೆ ನಮಗಂ ೪೦

ದಾಸೀಪುತ್ರನ ತೆಱದಿಂ
ವಾಸವನುಂ ಬಂದು ಸೇವೆಯಂ ಮಾಡಿದಪಂ
ಲೇಸಾಗಿ ಮತ್ತೆ ಕತಿಪಯ
ವಾಸರದಿಂ ಮೇಲೆ ಸಕಳ ಭೂಪತಿತಿಳಕಾ ೪೧

ಇನ್ನು ಜಗತ್ತ್ರಯಗುರುವಿಂ
ಗುನ್ನತ ನೀಂ ತಂದೆಯಪ್ಪ ಕಾರಣದಿಂದಂ
ಪನ್ನಗಸುರನರರೊಳ್ ಮಿಗೆ
ನಿನ್ನವೊಲುತ್ಕೃಷ್ಟಪುಣ್ಯಭಾಜನನಾವಂ ೪೨

ವಚನ: ಮತ್ತಂ ನಾಕಲೋಕದೊಳಗ್ಗಳಮಪ್ಪ ದೇವಸ್ತ್ರೀಯರುಂ ಕುಳಕುಧರ ನಿವಾಸಿಗಳಾದ ಶ್ರೀ ಹ್ರೀ ಧೃತಿ ಕೀರ್ತಿ ಬುದ್ಧಿ ಲಕ್ಷ್ಮಿ ಜಯೆ ವಿಜಯೆ ಅಜಿತೆ ಅಪರಾಜಿತೆ ಯರೆಂಬ ಮುಖ್ಯರಪ್ಪ ದೇವಿಯರುಂ ಬಂದು ನಿಮ್ಮಯ ಸೇವೆಯಂ ಮಾಳ್ಪನಿತು ಪುಣ್ಯ ದೊದವುಂ ನಿನಗಲ್ಲದೆ ಮತ್ತಾರ್ಗಂ ಕೈಸಾರಿತ್ತಿಲ್ಲಮಂತುಮಲ್ಲದೆಯುಂ

* ಕಂದ: ಸುರನಾಥನಾಜ್ಞೆಯಿಂದೀ
ಪುರದೊಳಗೆ ಸುವರ್ಣವೃಷ್ಟಿಯಂ ಕಱೆಯಲ್ಕೆಂ
ದಿರದೆ ಬಂದಿರ್ದನೀತಂ
ನಿರುಪಮಮಹಿಮಂ ಕುಬೇರನೆಂಬಂ ಪೆಸರಿಂ ೪೩

ವಚನ: ಎಂದು ಸುಟ್ಟುಂಬೆಯುಂ ತೋಱಿ ನುಡಿಯುತ್ತುಮಿರ್ದ ಶ್ರೀದೇವಿಯ ಮಾತಂ ಕೇಳ್ದು

ಚಂಪಕಮಾಲೆ

ಯತಿಪತಿ ಪೇಳ್ದುದಂ ಮುಕುಳಿತಾರ್ಥವಿಲೋಚನನಾಗಿ ತನ್ಮಹೀ
ಪತಿ ಮನದಲ್ಲಿ ಭಾವಿಸಿ ಕರಂಗಳನಂದು ಸೊಸಲ್ಗೆ ತಂದು ಮು
ತ್ತತಿಶಯದಿಂದೆ ಮೆಚ್ಚಿ ತಲೆಯಂ ನೆಱೆತೂಗಿದನುದ್ಘಮೌಲಿಕೀ
ಲಿತಮಣಿಗಳ್ ಕರಂ ಕೆದಱೆ ಕಾಮನ ಬಿಲ್ಗಳ ಭೂರಿಶೋಭೆಯಂ ೪೪

[1] ರಾಗಿರ್ದ (ಜ) * ಸುವರ್ಣವೃಷ್ಟಿಯ ವರ್ಣನೆ ಕಾವು (ಗಚ)

ವಚನ: ಅನಂತರಂ ನೂರ್ಮಡಿಯಾದ ತುಚ್ಛೇತರೋತ್ಸಾಹದಿಂ ದುರ್ಲಲಿತ ಗಾತ್ರನಾ ಧಾತ್ರೀವಲ್ಲಭಂ ನಿಜರಾಜಭವನಮೊಳಂ ರಾಜಧಾನಿಯೊಳಮೆಡೆವಱಿಯದೆ ಕುಡಿಗಳಂ ಕಟ್ಟಿಸಿ ಬದ್ದವಣಂಗಳಂ ಬಾಜಿಸಿ ಪಿರಿದುಮೊಸಗೆಯುಮಂ ಮಾಡಿಸುತ್ತುಂ ಬಳಿಯಂ ಕುಬೇರನ ಪೊಗಮಂ ನೋಡಿ ನೀಂ ಪಾಡಲ್ವೇಡಿಬಂದ ಕಾರ್ಯಮಂ ಮಾಡೆಂಬುದುಂ

ಮಹಾಸ್ರಗ್ಧರೆ

ಪರಿಭಾಸ್ವದ್ಭೂಷಣಾಂಶುಪ್ರಕರಮುರುತಟಿನ್ಮಾಲಿಕಾಶೋಭೆಯಂ ಬಿ
ತ್ತರಿಸಲ್ ಚಂದ್ರಾರ್ಕಬಿಂಬಂಗಳ ಕಿರಣಮನಾಚ್ಛಾದನಂಗೆಯ್ದು ಮತ್ತಂ
ಪರಮೇಘಾಡಂಬರಾಕಾರಮನನುಕರಿಸುತ್ತುಂ ಪುರಾಸನ್ನದೊಳ್ ತಾಂ
ಪಿರಿದೊಂದಾಶ್ಚರ್ಯದಿಂದಂ ಗಗನತಳದೊಳಂದೊಡ್ಡಿನಿಂದಂ ಕುಬೇರಂ ೪೫

ಕಂದ: ಸೊಗಯಿಪ ಕುಬೇರನೆಂಬಾ
ಮುಗಿಲಿಂದಂ ಸುರಿದುದಂದು ಪೊಮ್ಮಳೆ ಭರದಿಂ
ನಗರಿಯೊಳೆಲ್ಲಾ ತಾಣದೊ
ಳಗಣಿತಮೆನೆ ಕೂಡೆ ಮಾಡುತುಂ ವಿಸ್ಮಯಮಂ ೪೬

ವಸುಮತಿಯೆಂಬೀ ಪೆಸರಿಂ
ದೆಸೆದುದು ಭೂಭಾಗಮಂದು ಮೊದಲಾಗಿ ಕರಂ
ವಸುವೃಷ್ಟಿಯಿಂದೆ ಪೆರ್ಚಿದ
ಪೊಸತೆನಿಸುವ ವಸುವನುಳ್ಳಕಾರಣದಿಂದಂ ೪೭

ವಚನ: ಮತ್ತಂ

ಚಂಪಕಮಾಲೆ

ಸುರಿದುದು ಕೂಡೆ ಮೂಱುವರೆಕೋಟಿಯೊಳೊಂದಿದ ರತ್ನವೃಷ್ಟಿಯುಂ
ನರಪತಿಗೇಹದೊಳ್ ಪ್ರತಿದಿನಂ ದಶದಿಕ್ತಟಭಿತ್ತಿಭಾಗಮಂ
ಭರವಶದಿಂದೆ ಚಿತ್ರಿಸುತುಮಿರ್ದಪುದೆಂಬಿನಮರ್ಯಮಪ್ರಭಾ
ಪರಿಕರಮೆಲ್ಲಮುಂ ಮಸುಳ್ವವೊಲ್ ಪರಿನಿರ್ಮಿಸುತುಂ ವಿಶೇಷದಿಂ ೪೮

ವಚನ: ಇಂತು ಗರ್ಭಾವತರಣಕಲ್ಯಾಣಂ ಮುಂದಱುದಿಂಗಳೆನಲಂದುಮೊದಲಾಗಿ ಪದಿನೆಂಟುತಿಂಗಳ್ ಪರ್ಯಂತಂ ಪುರದೊಳರಮನೆಯೊಳಂ ಸುವರ್ಣವೃಷ್ಟಿಯುಂ ರತ್ನವೃಷ್ಟಿಯುಮಂ ಕಱೆಕವ ಬೆಸನಂ ಕೈಕೊಂಡು ಬಂದೊಂದು ಪಿರಿದೊಂದಾಶ್ಚರ್ಯದಿಂ ಪ್ರಾರಂಭಂಗೆಯ್ದು ಕುಬೇರಂ ನಿಜನಿವಾಸಕ್ಕೆ ಪೋಪುದುಮಿತ್ತಲ್

ಕಂದ: ಬಯಸುತ್ತುಮಿರ್ದುದೆಮ್ಮಾ
ಶಯಮಿಾಗಳ್ ಸುವ್ರತಾಮಹಾದೇವಿಯುಮಂ
ನಯವಿದೆಯುಂ ನೋಡಲ್ಕೆಂ
ದಯುಯುತನಂ ಕೇಳ್ದರಂದು ದೇವಿಯರೆಲ್ಲಂ ೪೯

ವಚನ: ಬಳಿಯಂ ಮಹೀಪಾಳಂ ವೃದ್ಧಕಂಚುಕಿಯಂ ಕರಸಿ ನೀನೊಡಗೊಂಡು ಪೋಗಿ ಸುವ್ರತಾಮಹಾದೇವಿಯನಿವರ್ಗೆ ತೋಱಿಇಂದಪ್ಪಯಿಸಲೊಡಂ

ಚಂಪಕಮಾಲೆ

ಮಣಿಮಯಮೇಖಳಾಕಳಿತ ಕಿಂಕಿಣಿಝಣ್ಕೃತಿಯುಂ ವಿಶಿಷ್ಟ ಕಂ
ಕಣಘನನಾದಮುಂ ಬಿಡದೆ ತಮ್ಮೊಳಮೆಯ್ದೆ ವಿವಾದಿಸುತ್ತಿರಲ್
ಪ್ರಣುತಕಪೋಳದೊಂದು ಪೊಳೆಪುಂ ನಯನಾಂಚಳಕಾಂತಿಯೊಳ್ ಕರಂ
ಕುಣಿಯೆ ನೃಪಾಂಗಣಾಲಯಕೆ ಬಂದುದು ದೇವವಿಳಾಸಿನೀಜನಂ ೫೦

ವಚನ: ಅಂತುಬಂದು

ಕಂದ: ಚಂದ್ರನ ಕಳೆಗಳ್ ಕೈರವ
ವೃಂದದೊಳಂ ಪೊಳೆವ ಮಾಳ್ಕೆಯಿಂದಂ ಪೊಕ್ಕರ್
ಕುಂದದ ಸಿರಿಯೊಳ್ ಕೂಡಿದ
ಸೌಂದರಿಯ ನಿವಾಸದಲ್ಲಿ ಸುರನಾರಿಯರುಂ ೫೧

ವಚನ: ಅಂತು ಪೊಕ್ಕನಂತರಂ ಮುಂದೊಂದು ರತ್ನಕುಟ್ಟಿಮಭೂಮಿಕೆಯೊಳ ನೇಕ ಭೂಪಾಳಕರರಸಿಯರ ನಿಕರಮುಂ ಕ್ಷತ್ರಿಯಕುಮಾರಿಯರ ಮೊತ್ತಮುಂ ಸೇವಾ ವಿನೋದನಿಮಿತ್ತಂ ಬಂದು ಸುತ್ತಲುಂ ಕಿಕ್ಕಿಱಿಗಿಱಿದು ಕುಳ್ಳಿರಲಾ ಸ್ತ್ರೀಯರ ಒಡ್ಡೋಲ ಗದ ನಟ್ಟನಡುವೆ

ಕಂದ: ಹರಿವಿಷ್ಟರದೊಳ್ ಕುಳ್ಳಿ
ರ್ದರಸಿ ಮಹಾಲಕ್ಷ್ಮಿಯಂತಿರೊಪ್ಪಮನಾಳ್ದಳ್
ನರರೆಲ್ಲರ ಬಡತನಮಂ
ಪರಿಹರಿಸಿ ಸಮರ್ಥರಾಗಿ ಮಾಳ್ಪುದಱಿಂದಂ ೫೨

ಗುಣದ ಕಣಿ ದಾನಚಿಂತಾ
ಮಣಿ ಜಿನಮತಗಗನತಳವಿಭಾಸಿ ವಿಹಾಯೋ
ಮಣಿಯೆನಿಪ ದೇವಿ ಲಲನಾ
ಗ್ರಣಿಗಳ ಸಭೆಯಲ್ಲಿ ರತ್ನಮಿರ್ಪಂತಿರ್ದಳ್ ೫೩

ಚಂಪಕಮಾಲೆ

ಪೊಸತೆನಿಸಿರ್ಪ ಜವ್ವನದ ಸುಗ್ಗಿ ವಿವೇಕದ ಜನ್ಮಭೂಮಿ ಮ
ತ್ತಸದೃಶಮಾದ ಚೆಲ್ವಿನ ಬರ್ದುಂಕು ವಿಶೇಷಿತಕಾಂತಿಯಾಗರಂ
ಕುಸುಮಶರಾಧಿದೇವತೆಯವೊಲ್ ಪರಿರಂಜಿಪ ರೂಪ[1]ಮಿ[1]ಕೆಯಾ
ಗೆಸೆವು[2]ತು[2]ಮಿರ್ದಳಂದು ಮಿಗೆ ಪಟ್ಟದ ರಾಣಿ ವಿಶಿಷ್ಟಲೀಲೆಯಿಂ ೫೪

ಕಂದ: ಕಡೆಗಣ್ಗಳ ಕುಡಿವೆಳಗಿಂ
ಮಡದಿಯರ ಸಭಾನಿವಾಸಮಂ ಧವಳಿಸುತಿ
ರ್ದೊಡೆಯುಂ ಮಾಡುತ್ತಿರ್ಪಳ್
ಪಡಿರಾಣಿಯರಾಸ್ಯದಲ್ಲಿ ಕೃಷ್ಣತ್ವಮುಮಂ ೫೫

ವಚನ: ಅಂತು ಶೋಭಿಸುತ್ತುಮಿರ್ಪ ಭಾಮಾಸಭಾಮಧ್ಯದಲ್ಲಿ ಮಂಗಳಮಣಿದರ್ಪಣದಂತಿರೊಪ್ಪಮನಾಂತು ತೋರ್ಪ ತತ್ಸುಪ್ರತಾಮಹಾದೇವಿಯಂ ದೇವಕಾಂತೆಯರ್ ಕಂಡು ನಾಡೆಯುಂ ಮನದೆಗೊಂಡು

ಕಂದ: ಪಲಕಾಲದಿಂದೆ ಸಂಚಿಸಿ
ದಲಘುವೆನಿಪ್ಪೊಂದು ತಮ್ಮ ರೂಪಿನ ಮದಮಂ
ಸಲೆಬಿಟ್ಟರ್ ದೇವಿಯರಾ
ಲಲನೆಯ ರೂಪಂ ನಿರೀಕ್ಷಣಂಗೆಯ್ವಾಗಳ್ ೫೬

ವಚನ: ಅಂತಾಕೆಯ ಗಾಡಿಯಂ ನೀಡುಂನೋಡುತ್ತುಂ ಸಮೀಪಕ್ಕೆ ನಡೆದು ಬಂದು ಕಡುನಲವಿಂ ತಮ್ಮಯ ಸಮುಲ್ಲಸದಳಕವಲ್ಲಿಗೆ ಮಣಿಕುಟ್ಟಿಮಧಾರಿಣಿಯನಾ[3]ಧಾ[3]ರಮಾಗಿಮಾಡಲೊಡಂ

ಕಂದ: ಆಕೆಯ ಚರಣಂಗಳನಾ
ನಾಕಸ್ತ್ರೀಕುಂತಳಂಗಳಂದಾವರಿಸಲ್
ಕೋಕನದೊಳ್ ಮುಸುಱಿದ ಭೃಂ
ಗೀಕುಳಮಂ ಪೋಲ್ತು ಸೊಗಯಿಸಿತ್ತಾಕ್ಷಣದೊಳ್ ೫೭

ವಚನ: ಅನಂತರಮಾ ದೇವಕಾಂತೆಯರೆಲ್ಲಂ ನಿಂದು ಕೈಗಳಂ ಮುಗಿದುಕೊಂಡಿರ್ಪುದುಮಾ ಭೂಕಾಂತಕಾಮಿನಿಯರಪವರ್ಗೆ ತಕ್ಕಂತಪ್ಪ ಸುವರ್ಣಮಯಂಗಳಾದಾಸನಂಗಳಂ ಕೊಡಿಸಿ ಕುಳ್ಳಿರಿಸಿ ಬಳಿಯಂ ಯಥಾಯೋಗ್ಯಸನ್ಮಾನಪ್ರತಿ[4]ಪತ್ತಿಪೂ[4]ರ್ವಕಂ ಮನ್ನಿಸಿ ಪರಮಸ್ನೇಹದಿಂದಾ ದೇವಿಯರ ಮೊಗಂಗಳಂ ನೋಳ್ಪಾಗಳ್

[1] ನಿಃ (ಕಚ) [2] ದು (ಕಚ) [3] ದ (ಕಚ) [4] ಪೂ (ಕಚ)

ಉತ್ಪಲಮಾಲೆ

ಭೋಗಧಿನಾಥವಲ್ಲಭೆಯ ರೂಪು ಸಮಸ್ತನಿಳಿಂಪಕಾಮಿನೀ
ಪೂಗದ ಚೆಲ್ವ ಮೂಕುತಿಗಳಲ್ಲಿಯ ಮುತ್ತುಗಳಲ್ಲಿ ಬಿಂಬಿಸ
ಲ್ಕಾಗಳದೆಲ್ಲರಂ ಮಿಗುವ ರೂಪುಮನಾಂತೆಸೆದಿರ್ಪ ಕಾರಣಂ
ಮೂಗಿನ ಮೇಲೆ ಪಾತ್ರಮುಮನಾಡುತುಮಿರ್ದವೊಲೊಪ್ಪಿದಳ್ ಕರಂ ೫೮

ವಚನ : ಬಳಿಯಂ ಪ್ರಿಯಸಂಭಾಷಣಕ್ಕೆ ನೆವಸಪ್ಪ ಕಾರಣಮಾಗೆ ನೀವಿಲ್ಲಿಗಾವ ಪ್ರಯೋಜನನಿಮಿತ್ತಂ ಬಂದಿರೆಂದು ಕೇಳ್ವುದುಂ

ಚಂಪಕಮಾಲೆ

ಜಿನಪತಿ ಪುಟ್ಟುವನ್ನೆವರಮಾತನ ತಾಯ್ಗೆ ಸಮಸ್ತಸೇವೆಯಂ
ಘನಮೆನೆ ಮಾಡಿಯೆಂದು ಸುಮನಃಪತಿ ಪೇಳ್ದೊಡೆ ಬಂದೆವಿಲ್ಲಿಗಂ
ಮನದೊಲವಿಂದೆ ನಿಮ್ಮನೞಿ ಸೇವಿಪುದಲ್ಲದೆ ಬೇಱಿ ಸತ್ಪ್ರಯೋ
ಜನಮೆಮಗಿಲ್ಲಮೆಂದು ನುಡಿದರ್ ಕಡುನೀಱಿಯ ಮುಂದೆ ದೇವಿಯರ್ ೫೯

ಉತ್ಪಲಮಾಲೆ

ಎಂತು ನೃಪಂಗೆ ಮುನ್ನಮತಿವಿಸ್ತರದಿಂದಮೆ ಪೇಳ್ದರಂತೆ ತ
ತ್ಕಾಂತೆಗಮಾ ಸುರಾಧಿಪ ವಿಳಾಸಿನಿಯರ್ ಸಲೆ ತಮ್ಮ ಬಂದ ವೃ
ತ್ತಾಂತಮನೆಯ್ದೆ ಪೇಳ್ದೊಡದನಾಲಿಸಿ ಮತ್ತೆ ನಿಜಾಂತರಂಗದೊಳ್
ಸಂತಸಮಂ ಕರಂ ತಳೆದಳಾಕ್ಷಣದೊಳ್ ಮಗನಾದನೆಂಬಿದಂ ೬೦

ವಚನ : ಅಂತು ಪದಿನಯ್ದನೆಯ ತೀರ್ಥಂಕರನಪ್ಪ ಧರ್ಮಜಿನನಾಥನಿನ್ನಱು ದಿಂಗಳಿಂ ಮೇಲೆ ಸರ್ವಾರ್ಥಸಿದ್ಧಿಯಿಂದಂ ಬಂದು ನಿಮ್ಮಯ ಗರ್ಭದೊಳುದ್ಭವಿಸಿದಪನೆಂದು ದೇವೇಂದ್ರನಱಿದೆಮ್ಮಂ ಕರೆದು ಧರ್ಮತೀರ್ಥಂಕರ ಗರ್ಭಾವತರಣಕಲ್ಯಾಣನಿಮಿತ್ತಂ ಪೋಗಿ ನೀವಾ ಜಿನಜನನಿಯ ಗರ್ಭಶೋಧನೆಯಂ ಮಾಡಿಯಾಕೆಗಿಷ್ಟಮಾದ ಪರಿಯಷ್ಟಿಯಂ ಮಾಡುತ್ತುಮಿರಿಯೆಂದು ಬೆಸಸಿ ಕಳಿಪಿದೊಡೆ ಬಂದೆವೆಂಬುದುಮಾ ಸುಪ್ರತಾ ಮಹಾದೇವಿ ತತ್ಪ್ರಚೇತಾಚಾರ್ಯರ್ ಮುಂಪೇಳ್ದ ವಚನಾವಿಸಂವಾದಮಂ ನೆನೆನೆನೆದು ಪರಮಾನಂದದಿಂದಂ ಬಹಳ ಪುಳಕಾಂಕುರಕಳಿತೆಯಾಗಿ ತದೀಯಚರಣಾರವಿಂದದ್ವಂದ್ವಮಂ ಮನದೊಳಭಿನಂದಿಸಿ ತನ್ಮುನೀಂದ್ರರ ಮಾಹಾತ್ಮ್ಯಮನಾ ದೇವಸ್ತ್ರೀಯರೊಡನೆ ನುಡಿಯುತ್ತುಮಿರಲ್ ಮತ್ತಮವರಿಂತೆಂದರ್

ಕಂದ : ನರಯುವತಿಯಾಗಿಯುಂ ನಿ
ರ್ಜರಯುವತಿಯರೊಲ್ದು ಸೇವಿಸುವ ಪುಣ್ಯಂ ಮ
ತ್ತರಸಿ ನಿನಗಾದುದಲ್ಲದೆ
ಧರಣಿಯೊಳುಳಿದನ್ಯಮನುಜಸತಿಯರ್ಗುಂಟೇ ೬೧

ಮೂಜಗದೊಡೆಯಂಗಂ ಗುಣ
ಭಾಜನೆ ನೀಂ ಜನನಿಯಪ್ಪ ಕಾರಣದಿಂ ಸಂ
ಯೋಜಿಸಿದುದಲ್ಲದಿರ್ದೊಡೆ
ರಾಜಿತ ಸುರರ್ಗಂ ನರ್ಗಮಂತರಮೇಂ ಪೇಳ್ ೬೨

ವಚನ : ಅಂತುಮಲ್ಲದೆಯುಂ

ಕಂದ : ಓಲಯಿಸಿಕೊಂಬುದೆಮ್ಮಂ
ಪಾಲಿಪುದುೞಿ ಮಾಳ್ಪ ಕಾರ್ಯಮೇನುಳ್ಳೊಡದಂ
ಬಾಲಕಿ ಮಾಡಿಸಿಕೊಂಬುದು
ಲೀಲೆಯಿನೆಂದಮರಕಾಂತೆಯರ್ ಪೇಳಲೊಡಂ ೬೩

ವಚನ : ಅನಂತರಂ

ಚಂಪಕಮಾಲೆ

ಸೊಗಸುವ ಬೋನಸುಂ ಸಮೆವ ಕಾರ್ಯದೊಳಂ ಕೆಲರಂ ಸುಮಜ್ಜನಂ
ಬೊಗಿಸುವ ಕಜ್ಜದಲ್ಲಿ ಕೆಲರಂ ಹರಿಚಂದನಮಂ ಸಮಂತು ಸ
ಣ್ಣಿಗೆಯೊಳೆ ಸಣ್ಣಿ ಪುಜ್ಜುಗದೊಳಂ ಕೆಲರಂ ಜಿನದೇವಕಾರ್ಯಪೂ
ಜೆಗಳನೆ ಮಾಳ್ಪುದೊಂದುರು ನಿಯೋಗದೊಳಂ ಕೆಲರಂ ಪ್ರಮೋದದಿಂ ೬೪

ಮತ್ತೇಭವಿಕ್ರೀಡಿತ

ಕೆಲರಂ ಕಂಪಿನ ಪೂಗಳಂ ಕೆದಱಿ ಹಾಸಂ ಹಾಸುವುದ್ಯೋಗದೊಳ್
ಕೆಲರಂ ಪಾವುಗೆ ನೀಡುವಲ್ಲಿ ಕೆಲರಂ ಬಾಣಡ್ಡಣಂಗೊಂಡು ಸು
ತ್ತಲುಮೋಲೈಸುವ ಪೆರ್ಮೆಯಲ್ಲಿ ಕೆಲರಂ ದೌವಾರಿಕಸ್ಥಾನದೊಳ್
ಕೆಲರಂ ಜಾಣ್ನುಡಿಯೊಳ್ ಮಹತ್ತರಿಯರಂ ಮಾದೇವಿಯಪ್ಪೈಸಿದಳ್

ವಚನ : ಇಂತಾ ಸುಪ್ರತಾಮಹಾದೇವಿ ತನ್ನಯ ಸೇವಾರ್ಥಂ ಬಂದ ತತ್ತತ್ಕರ್ಮ ಕೌಶಲಸಮರ್ಥೆಯರಾದ ದೇವಸ್ತ್ರೀಯರಂ ನಾನಾಪ್ರಕಾರ ನಿಯೋಗದೊಳ್ ನಿಯೋಜಿಸುತ್ತುಮಿರಲ್ ಮತ್ತಮಾ ದೇವಿಯರೊರ್ವೊರ್ವರ್ ಬೇಱಿವೇಱಿ ತಮ್ಮಯ ಕಳಾಕುಶಲತ್ವಮಂ ನಿಮಿರ್ಚಿಯಚ್ಚರಸಿಯರಿಚ್ಚೆಯಱಿದೋಲಯಿಸಿ ಮೆಚ್ಚಿಸಲೆಂದು

ಚಂಪಕಮಾಲೆ

ಸೊಗಯಿಪ ಚಿತ್ರಪತ್ರಚಯದಿಂದೆ ವಿಚಿತ್ರತರಂಗಳಾದುವಂ
ಮಿಗೆ ಸಪುರಂಗಳಾದ ಸುರಲೋಕದೊಳಗ್ಗಳಮಾದ ಬಣ್ಣವ
ಣ್ಣಿಗೆಗಳಿನೆಸ್ಸಿ ನುಣ್ಪುವಡೆದೊಪ್ಪುವ ಸೀರೆಗಳಂ ಮಹೀಪನಾ
ರಿಗೆ ಕಡುಚೆಲ್ವನಾಗುಡಿಸಿದಳ್ ಸುರಕಾಮಿನಿಯೊರ್ವಳರ್ಥಿಯಿಂ ೬೬

ಕಂದ : ತೊಳಗುವ ಕೆಂದಾವರೆಗಳ
ನೆಳವಿಸಿಲಾವರಿಸಿದಂತಿರಾಕೆಯ ಚರಣಂ
ಗಳ ತಳಮನೂಡಿದರ್ ಕೋ
ಮಳಲಾಕ್ಷಾರಸದಿನಮರಕಾಮಿನಿಯೊರ್ವಳ್ ೬೭

ವರಪಂಚರತ್ನಮಯ ನೂ
ಪುರಂಗಳಂ ತೊಡಿಸೆ ಸತಿಯ ಪಾದಂಗಳೊಳಂ
ಪರಮನಖಚಂದ್ರಮಂಡಳಿ
ಪರಿವೇಷಂಬಡೆದುದೆಂಬಿನಂ ಕಣ್ಗೆಸೆಗುಂ ೬೮

ಚಂಚನ್ಮಣಿಕಿಂಕಿಣಿಗಳಿ
ನಂಚಿತಮಾಡಿರ್ದ ವಿವಿಧರಚನಾಯುತಸ
ತ್ಕಾಂಚನಕಾಂಚೀವಳಯಮು
ಮಂ ಚೆಲ್ವನಿತಂಬದಲ್ಲಿ ಸಾರ್ಚಿದಳೊಲವಿಂ ೬೯

ಚಂಪಕಮಾಲೆ

ಪೊಳೆವ ಮೃಣಾಳನಾಳಚಯಮಂ ಪೊಣರ್ವಕ್ಕಿಯಮೇಲೆ ಸಾರ್ಚುವಂ
ತಿಳೆಗಧಿನಾಥವಲ್ಲಭೆಯ ಪೀನಕುಚಂಗಳಮೇಲೆ ಸಾರ್ಚಿದಳ್
ತೊಳಗುವ ಚಾರುಮೌಕ್ತಿಕಸಮುಜ್ಜ್ವಳಹಾರಲತಾವಿತಾನಮಂ
ವಿಳಸಿತ ಚಾತುರೀಯುತಸುರಾಂಗನೆಯೊರ್ವಳತೀವಲೀಲೆಯಿಂ ೭೦

ಕಂದ : ಮನಸಿಜಮದಗಜದಂತದೊ
ಳನುನಯದಿಂ ಕೀರ್ತಿಮುಖಮನಿಕ್ಕುವ ತೆಱದಿಂ
ವನಿತೆಯ ಬಾಹುಗಳೊಳ್ ಮ
ತ್ತನುಪಮಮಣಿಬಾಹುವಳಯಮಂ ಕೀಲಿಸಿದಳ್ ೭೧

ಸಿರಿಸದ ಬಾಸಿಗಮಂ ವಧು
ಕರಮಾಳಿಕೆ ಬಳಸಿದಂತೆ ಮುಂಗೆಯ್ಗಳೊಳಂ
ಹರಿನೀಳದ ಕಂಕಣಮಂ
ವರಸತಿಗಿಕ್ಕಿದಳಮರ್ತ್ಯಸತಿ ಮತ್ತೊರ್ವಳ್ ೭೨

ಮರಕತಮಣಿಮುದ್ರಿಕೆಗಳ
ನರಸಿಯ ಕಡುಚೆಲ್ವ ಬೆರಳ್ಗಳಲ್ಲಿಕ್ಕಿದಳೊ
ಪ್ಪಿರೆ ದಿಗ್ವಿಜಯಾರ್ಥಂ ಶಂ
ಬರರಿಪುವ ಶರಲ್ಗಳಿಂಗೆ ಗಱಂಗಟ್ಟುವವೊಲ್ ೭೩

ಚಂಪಕಮಾಲೆ

ಪೊಳೆವ ಕದಂಪಿನೊಳ್ ಮಕರಿಕಾದಿವಿಚಿತ್ರಿತ ಪತ್ರವಲ್ಲಿಯಂ
ವಿಳಸಿತಗಂಧಸಾರರಸದಿಂ ಬರೆದಳ್ ಸುರಕಾಂತೆಯೊರ್ವಳಂ
ದಳಿಕುಳನೀಳಕುಂತಳೆಯ ಭೂರಿವಿಳಾಸಸಮುದ್ರಗಾಧದೊಂ
ದಳವಿಯನೆಯ್ದೆ ಸಂಗಡಿಸಬಾರದುದಂ ನೆಱೆ ಪೇಳ್ವ ಮಾಳ್ಕೆಯಿಂ ೭೪

ಕಂದ : ಚಿತ್ರಭವಂ ತನ್ನಾಜ್ಞೆಯ
ನೊತ್ತಮಿಸಲ್ ಬಾರದೆಂದು ಮುದ್ರೆಯನಿಟ್ಟಂ
ತುತ್ತಮೆಯಾ ಮೂಗಿನೊಳ್ ಮಿಗೆ
ಮುತ್ತಿನ ಮೂಕುತಿಯನಿಕ್ಕಿದಳ್ ಕಡುನಲವಿಂ ೭೫

ವಚನ : ಮತ್ತೊರ್ವಳಮರಕನ್ನಿಕೆಯಾಕೆಯ ಕರ್ಣಪಾಲಿಕೆಗಳೊಳನೇಕವರ್ಣ ಪರಿವರ್ಣನೀಯ ಪರಾ[1]ರ್ಘ್ಯ[1]ರತ್ನಂಗಳಿಂ ಪರಭಾಗಂಬಡೆದ ಸುವರ್ಣಮಯ ಕರ್ಣಾಭರಣಂಗಳಂ ತೊಡಿಸಿ ನೋಡಿ

ಕಂದ : ಕಿವಿದೊಡವಿನ ಮಣಿಗಳು ಸು
ಚ್ಛವಿಗಲ್ಲದೊಳೆಯ್ದೆ ಪೊಳೆಯೆ ತಾಂಬೂಳರಸಂ
ಕವಿದಿರ್ದುದೆಂಬ ಬಗೆಯಿಂ
ದಿವಿಜಾಂಗನೆ ತೊಡೆದಳಂದು ತನ್ನಯ ಕರದಿಂ ೭೬

ನಯನಂಗಳೊಳಂಜನಮಂ
ನಯದಿಂ ರಂಜಿಸಿದಳೊರ್ವಳಮರಾಂಗನೆಯತಿ
ಶಯಿತಮನೋಭವಶರಸಂ
ಚಯಮಂ ಕಪ್ಪಿಂದೆ ಬಚ್ಚಿಸುವ ತೆಱದಿಂದಂ ೭೭

ವರಕಸ್ತೂರೀತಿಲಕಮ
ನರಸಿಯ ಕಡುಚೆಲ್ವನೊಸಲೊಳಿಟ್ಟಳ್ ಸುರಸೌಂ
ದರಿಯೊರ್ವಳ್ ನಗೆಮೊಗಮೆಂ
ಬುರುಚಂದ್ರಮನಲ್ಲಿ ಪೇಱಿವ ಕಱೆಯೆಂಬಿನೆಗಂ ೭೮

ವಚನ : ಆ ದೇವಿಗೆ ದೇವಕುಮಾರಿ ಮತ್ತೊರ್ವಳ್

---

1 ಘ್ರ (ಗಚ)

ಮಹಾಸ್ರಗ್ಧರೆ

ಕೂದಲಸೆಯ್ದಿ ಸಿಕ್ಕಿ ಪುದಿಗತ್ತುರಿಯಂ ತಳೆದಲ್ಲಿಗಲ್ಲಿಗಂ
ಮೇದಿನಿ ತೋರಮಾಗಿ ಮುಡಿಯಂ ಮುಡಿಸಿಟ್ಟದಜಲ್ಲಿ ಕಲ್ಪಭೂ
ಜೋದಿತಪುಷ್ಪಮಂ ಪಿಡಿದು ಸೂಡಲದಾಕ್ಷಣದಲ್ಲಿ ಕಣ್ಗೆ ಜೆ
ಲ್ವಾದುದು ತಾರಕಾಳಿ ಪುದಿದಿರ್ದ ನಭಸ್ಥಳಮೆಂಬವೊಲ್ ಕರಂ ೭೯

ಮಹಾಸ್ರಗ್ಧರೆ

ಪಿರಿದುಂ ಶ್ರೀಮಾಡಿದಳ್ ಸೌಖ್ಯಮನನವರತಂ ಭಾರತೀದೇವಿ ತನ್ನಾ
ದರದಿಂದಂ ಪ್ರೀತಿಯಂ ಪುಟ್ಟಿಸುವ ಬೆವಸೆಯಿಂದೆಯ್ದೆ ಮಾತಾಡಿದಳ್ ಬಂ
ಧುರರಾಗೋದ್ರೇಕಮಂ ಮಾಡಿದಳುೞಿ ಮತ್ತೆಲ್ಲರುಂ ಮಾಳ್ಪುದಂ ಬಿ
ತ್ತರದಿಂದಂ ಮಾಡುತಿರ್ದರ್ ಜಿನಜನನಿಗೆ ಸ್ಪರ್ಧೆಯಿಂದೆಂಬವೊಲ್ ತಾಂ ೮೦

ವಚನ : ಅಂತುಮಲ್ಲದೆಯುಂ

ಚಂಪಕಮಾಲೆ

ಶರದದ ಚಂದ್ರಮಂಡಳಮನೂನ ಕನತ್ಪರಿವೇಷಶೋಭೆಯಂ
ಧರಿಯಿಸಿತೆಂಬಿನಂ ಮೆಱೆವ ಪಲ್ಲವಸತ್ತಿಗೆಯಂ ಸಮುಜ್ವಳೋ
ದ್ಧುರತರನೂತ್ನರತ್ನಮಯದಂಡವಿಮಂಡಿತಮಂ ಸುರೇಂದ್ರಸೌಂ
ದರಿ ಪಿಡಿದಿರ್ದಳೊರ್ವಳುೞಿ ಪಟ್ಟದ ರಾಣಿಗೆ ಮುಟ್ಟಿದರ್ಥಿಯಂ ೮೧

ಕಂದ : ಅಮರಕುಮಾರಿಯರಾ ಭೂ
ರಮಣನ ವಲ್ಲಭೆಗೆ ಚಾಮರಂಗಳನತಿಸಂ
ಭ್ರಮದಿಂದಿಕ್ಕಿದರತ್ಯು
ತ್ತಮಕಾಂಚನದಂಡಮಂಡಿತಂಗಳನಾಗಳ್ ೮೨

ವಚನ : ಹಡಪಮಂ ಪಿಡಿದಿಪ್ಪ ನಿಯೋಗನಿಯುಕ್ತೆಯಪ್ಪ ಮತ್ತೊರ್ವಳ್

ಚಂಪಕಮಾಲೆ

ಕಡುವೆಳಿದಾದ ತಂಬುಲದ ಜೆಲ್ವೆಲೆಯಂ ಮಡಿಸಾಳ್ಪಿರಳ್ಗಳಿಂ
ಪಿಡಿದು ಜಿನೇಶನಂಬಿಕೆಗೆ ನೀಡುತುಮಿರ್ದ ನಿಳಿಂಪಕಾಂತೆ ಸಂ
ಗಡಿಸಿದ ಪುಂಡರೀಕದಳಮಂ ಪಿಡಿದಂಬುಧಿಮಧ್ಯದಿಂದ ಮೇ
ಗಡರ್ದ ಸುಲಕ್ಷ್ಮಿಯಂತೆ ತಳೆದಳ್ ಸಲೆ ನೂರ್ಮಡಿಯಾದ ಗಾಡಿಯಂ ೮೩

ಕಂದ : ದರದಳಿತಮಾದ ಹೊಂದಾ
ವರೆಯಲರಂ ಪಿಡಿದು ಮೆಱೆವ ಲಕ್ಷ್ಮಿಯ ತೆಱದಿಂ
ಸುರನಾರಿಯೊರ್ವಳಾ ಭೂ
ವರನಾರಿಗೆ ಹೊನ್ನ ಡವಕೆಯಂ ಪಿಡಿದಿರ್ದಳ್ ೮೪

ಲಾಲಿಪ ಪೇರಣೆಯೊಳ್ ಮಿಗೆ
ಮೇಲೆನಿಸುವ ಕುಶಲೆ ದಿವಿಜಸತಿ ಮತ್ತೊರ್ವಳ್
ಕಾಲೇ ನಾಲಗೆಯೆಂಬಂ
ತೋಲಗದೊಳ್ ಕುಣಿದು ದೇವಿಯಂ ಮೆಚ್ಚಿಸಿದಳ್ ೮೫

ವಚನ : ಮತ್ತಂ ಭರತಶಾಸ್ತ್ರನಿರತೆಯುರಪ್ಪ ಕೆಲಂಬರ್ ದೇವಿಯರ್ ಪಿರಿದಾಗಿ ರಾಗರಸಮಂ ತುಂಬಿ ತುಳ್ಕಾಡುತ್ತುಮಿರೆ ನಾಟ್ಯಮನೊಡ್ಡಯಿಸಿದಾಗಳ್

ಮತ್ತೇಭವಿಕ್ರೀಡಿತ

ಕಳೆಯಂ ನೂಂಕಿ ಸಮಾನದಂಡಿಗೆಗಳಂ ಪೊಯ್ದು ಶ್ರುತಿಸ್ಫೂರ್ತಿಯು
ಗ್ಗಳಮಂ ನೋಡಿ ಸಮಂತು ತಂತಿಯನದಂ ಸಂತೈಸಿ ಪೀನಸ್ತನಂ
ಗಳ ಮೇಲೊಯ್ಯನೆ ಸಾರ್ಚಿಕೊಂಡು ಸೊರೆಯಂ ಗಂಧರ್ವೆಯೊರ್ವಳ್ ಕರಾಂ
ಗುಳಿಯಿಂ ಬೀಣೆಯನೊಲ್ದು ಬಾಜಿಸಿದಳಾ ತನ್ವಂಗಿ ಮೆಚ್ಚಲ್ ಕರಂ ೮೬

ಪಿರಿದುಂ ನುಣ್ಗೊರಳಿಂದಮೊಂದಱಿತಾನೇಕಚ್ಛಂದಮಂ ತೋಱಿ ಬಂ
ಧುರರಾಗಂಗಳನುನ್ನತಪ್ರಮದದಿಂದಾಳಾಪನಂಗೆಯ್ದು ನಿ
ರ್ಜರ ಸೀಮಂತಿನಿಯೊರ್ವಳಾಕೆಯ ಗುಣಸ್ತೋತ್ರಾಂಕಗೀತಂಗಳಂ
ಭರದಿಂದಂ ನೆಱೆಪಾಡಿ ಮೆಚ್ಚಿಸಿದಳಾ ಭೂಪಾಳನರ್ಧಾಂಗಿಯಂ ೮೭

ವಚನ : ಮತ್ತಂ

ಕಂದ : ಧಿಂ ಧಿಂ ಧಿಮಿಕ್ಕು ಧಿಮಿಕೆಂ
ದಿಂದೀವರಲೋಲಲೋಚನೆಯು ಮುಂದೊಲವಿಂ
ವೃಂದಾರಕ ವಧುವೊರ್ವಳ್
ಕುಂದದ ಜಾಣಿಂದೆ ಮುರಜಮಂ ಬಾಜಿಸಿದಳ್ ೮೮

ರಂಭೆಯುದೊರ್ವಳ್ ನಯದಿಂ
ದಂ ಭಾಮೆಯ ಮುಂದೆ ಚಂದ್ರಕಾಂತದ ಕಡುಪಿಂ
ಭೊಂ ಭೊಂ ಭೊಂ ಭೊಂಬೆಂಬೀ
ಶುಂಭಧ್ವನಿ ಪೊಣ್ಮೆ ಢಕ್ಕೆಯಂ ಬಾಜಿಸಿದಳ್ ೮೯

ಹೊನ್ನಿನ ಕಹಳೆಗಳಂ ಪೊಸ
ರನ್ನದ ವಾಸಂಗಳಂ ಸುಶಂಖಂಗಳುಮಂ
ಚೆನ್ನಿನ ಮೌರಿಗಳಂ ಸುರ
ಕನ್ನೆಯರೊರ್ವೊರ್ವರೂದಿದರ್ ಕಡುನಲವಿಂ ೯೦

ಮಹಾಸ್ರಗ್ಧರೆ

ದಿವಿಜಸ್ತ್ರೀಯರ್ಗಳಾ ಷಟ್ಪದ ಯುವತಿಯು ಮುಂದಂದು ತನ್ನಂತರಂಗೋ
ತ್ಸವದಿಂದಂ ತಾಂಡವಾಡಂಬರಮನೊಡರಿಸಲ್ ಚಾರುಮಾಣಿಕ್ಯಭೂಷಾ
ರವಮುಂ ನಾನಾಸುತಾಳಧ್ವನಿಯುಮೊಡನೆ ಪೇಳ್ವೈಸಿ ಹಸ್ತಾಂಘ್ರಿಸಂಚಾ
ರವಮುಂ ಜಿಹ್ವಾಗೆ ದೇಹಪ್ರಭೆಯೊಡನೆ ದಲಾಡುತ್ತುಮಿರ್ದರ್ಗಳ್ ವಿಚಿತ್ರಂ ೯೧

ಉತ್ಪಲಮಾಲೆ

ಆವುದಪೂರ್ವಮಾದುದು ದಲಾವುದು ಭಾವಿಪೊಡಿಷ್ಟಮಾದುದಂ
ತಾವುದು ಮೂಱುಲೋಕದೊಳಮುತ್ತಮಮಾದುದುಮಂತದೆಲ್ಲಮಂ
ದೇವಿಯರೊರ್ವರೊರ್ವರ ಮಹಾಕುಶಲತ್ವದ ವೃತ್ತಿಯಿಂ ಸಮಂ
ತಾಪಗಮೆಯ್ದೆ ಮಾಱುವುದಱಿಂದೆನೆ ಮಾಡಿದರಂಬುಜಾಕ್ಷಿಗಂ ೯೨

ಗದ್ದಿಗೆಯುಕ್ಕು ನಂದೆ ಪಡಿಗಂಗೊಡು ಮಾಳಿನಿ ಕುಂಭದಲ್ಲಿ[1]ಕಂ
ಪಿ[1]ದ್ದ ಜಲಂಗಳಂ ವಿಜಗೆ ತೀವುಱಿ ಕಾಳ್ದೊಳೆ ಪೈಜಯಂತಿ ನೀ
ಸೆದ್ದು ಸುವರ್ಣಭಾಜನಮನಾಯಿತಮಾಗಿಡು ಸುಪ್ರಬುದ್ಧೆಯೆಂ
ದುದ್ದದೆ ಪೇಳ್ದು ಸಂಭ್ರಮಿಸಿದತ್ತಿಡೆಮಾಡುವ ಪೊತ್ತಿನೊಳ್ ಕರಂ ೯೩

ಚಂಪಕಮಾಲೆ

ಅನಿಮಿಷಕಾಂತೆಯರ್ ಪರರಸಾಯನಸಾರದಿ ಚಾರುಗರ್ಭಶೋ
ಧನೆಯನೊಡರ್ಚೆ ದೇವಿಯ ಮನೋಹರಮೂರ್ತಿ ನಿರೀಕ್ಷಣಕ್ಕೆ ಪಾ
ವನಮೆನಿಸಿತ್ತು ಮತ್ತಮೃತವಾರಿಯ ಪೀವರಧಾರೆಯಿಂ ಪಳ
ಚ್ಚನೆ ತೊಳೆದಿರ್ದ ಪೊಚ್ಚ ಪೊಸಮುತ್ತಿನ ಪುತ್ಥಳಿಯೆಂಬ ಮಾಳ್ಕೆಯಿಂ ೯೪

ವಚನ : ಇಂತಾ ಜಿನಾಂಬಿಕೆಯಂ ಬಗೆಗೊಳಿಸಲೆಂದಾ ನಿಳಿಂಪವಿಳಾಸಿನಿಯರೀ ತೆಱದ ಬಾಹತ್ತರನಿಯೋಗಮುಖದಿಂದಾಕೆಗುಪಾಸನಂಗೆಯ್ವುತ್ತುಂ ಕೆಲವುದಿನಂಗಳ್ ಪೋದಿಂಬಳಿಯುಮನಲ್ಪತರಭಾವಿಫಲ ಲಾಭಾರ್ಥಂ ಕಲ್ಪತರುಶಾಖೆ ಪುಷ್ಪವತಿಯಪ್ಪುದೆಂದಂತಾ ಸುವ್ರತಾಮಹಾದೇವಿಯುಂ ಧರ್ಮತೀರ್ಥಕರನೆಂಬ ಭವಿಷ್ಯಮಾಣ ವಿಶಿಷ್ಟೇಷ್ಟ ವಿಪುಳಫಳೋದಯಲಾಭಪ್ರಾಪ್ತಿನಿಮಿತ್ತಂ ಪುಷ್ಪವತಿಯಪ್ಪುದುಂ

ಚಂಪಕಮಾಲೆ

ಸರಸಿಜವಕ್ತ್ರೆಗುತ್ಪಳದಳಾಯತನೇತ್ರೆಗೆ ಕುಂದಕುಟ್ಮಳೋ
ದ್ಧುರತರದಂತಪಂಕ್ತಿಕೆಗೆ ಚಂಪಕನಾಸಿಕೆಗುದ್ಧಪಾಟಳಾ
ಧರಗೆ ಸುಕೇತಕೀನಖಿಗೆ ಚಾರುವಿಕಾಸಿ ಶಿರೀಷದಾಮ ಸೌಂ
ದರತನುಗಿಂತು ಪುಷ್ಪವತಿಯೆಂಬಿದು ಸಾರ್ಥಕಮಾಗದಿ[2]ರ್ಪುದೇ[3] ೯೫

---

[1] ತಂ।ದಿ (ಕಚ) [2] ರ್ಕುಮೆ (ಚ)

ಕಂದ : ಮೊಲೆಗಳ್ ಕೆತ್ತಿದುವಾಗಳ್
ಮೊಲೆಗಳ ಸಂಧಿಗಳೊಳೆಯ್ದೆ ನಸುಬೆಮರೊಗೆದುದು
ನಳಿನಾಕ್ಷಿಗೆ ಋತುಸಮಯಂ
ತಲೆದೋಱಿದ ಪೊತ್ತಿನಲ್ಲಿದಾದುದು ಚಿಹ್ನಂ ೯೬

ವಚನ : ಮತ್ತಂ ಕಡೆಯಾಣಿಯ ಮಿಱುಗುವ ಮಿಸುನಿಯಂ ಸಮೆದ ಜಿಲುಮ ಜಗಲಿಯ ಮೇಲೆ ಕುಳ್ಳಿರ್ದು ಬಾಲಕರ್ ಮೊದಲಾದೆಱಯದನ್ಯಜನಸಂಸ್ಪರ್ಶಪರಿಹರಣಾರ್ಥಂ ವಜ್ರಂಗಳಿಂ ಕೇವಣಿಸಿದ ಹೊನ್ನ ಸೆಳೆಯಂ ಪಿಡಿದು ಚಾಳನಂಗೆಯ್ವುತ್ತುಂ ಸುರಕುಮಾರಿಯರೊಡನೆ ಪ್ರಹೇಳಿಕಾವಿನೋದದಿಂ ಪೊತ್ತಂ ಕಳೆವುತ್ತುಮಿರ್ದು ಮೂಱು ದಿನಂಗಳ್ ಪೋಗಲೊಡಂ

ಕಂದ : ಋತುಸಮಯದೊಳೊಪ್ಪಿದಳಾ
ಸತಿ ಭರದಿಂದಂ ವಸಂತಋತುಸಮಯದೊಳೊಗೆ
ದತಿಕೋಮಳಲತೆಯಂತುಪ
ಗತವಿಭ್ರಮಿಕೆ ಪ್ರವಾಳವಿಳಸಿತೆ ಪಿರಿದುಂ ೯೭

ವಚನ : ಬಳಿಯಂ ನಾಲ್ಕನೆಯ ದಿವದೊಳ್ ಮಜ್ಜನಂಬುಗಿಸುವುಜ್ಜುಗಂಗೈಮಿಗಲಪ್ಸರಸೆಯರ್ ಕೊಪ್ಪರಿಗೆಗಳೊಳಮಳಜಳಂಗಳಂ ತುಂಬಿಯಗ್ನಿಸಂಧುಕ್ಷಣಂಗೆಯ್ಯೆ ಕಡುಗಾಯ್ದೂಷ್ಮಾಯಮಾಣಮಾದ ಜಳಂ ತೆರೆಮಸಗಿ ಕಟಾಹಕೋಟರಾಂತರಾಳದಿಂದುಕ್ಕಿ ಪೊಱಪೊಣ್ಮುತ್ತಿರೆ

ಕಂದ : ಶಂಬರವೈರಿಯ [1]ಶರಗಳ[1]
ವೆಂಬಂದದಿನೆಸೆವುತಿರ್ದ ಸುರನಾರಿಯರುಂ
ಶಂಬರಮಂ ಮಱುಗಿಸಿದರ್
ಸಂಬಂಧಿ ವಿರೋಧಿಗಳ್ಗೆ ಮುಳಿಯದರೊಳರೇ ೯೮

ವಚನ : ತದನಂತರಂ

ಕಂದ : ಕಮ್ಮೆಣ್ಣೆಯಿಂದೆ ಮಜ್ಜನ
ಮಂ ಮಾಡಿಸಿದರ್ ನಿಳಿಂಪಕಾಂತೆಯರೊಲವಿಂ
ದಂ ಮಿಗೆ ನೀರ್ದಳಿವಂತಿರೆ
ರಮ್ಯಾಳಕವಲ್ಲಿಗಮಿತನಖಕಾಂತಿಗಳಿಂ ೯೯

1 ಸರಳ್ಗಳಿ (ಕಗಚ)

ಪಿಕ್ಕಿದರಳಕಮನುಗುರ್ಗಳಿ
ನುಕ್ಕೆವದಿಂ ಚಂದ್ರಕಳೆಗಳಂ ರಾಹು ಕರಂ
ಮುಕ್ಕುಳಿಸುಗುಳುತುಮಿರ್ದಪು
ದಕ್ಕುಮಿದೆಂಬೊಂದು ಸಂಕೆಯಂ ಪುಟ್ಟಿಸುತುಂ ೧೦೦

ವಚನ : ಬಳಿಯಂ ಜಾಂಬೂನದಮಯಮಾದ ಸ್ನಾನಸ್ಥಾನದ ನಟ್ಟನಡುವೆ ಪೊಳೆಯುತ್ತುಮಿರ್ದ ಚಂದ್ರಕಾಂತ ಚತುರಾಘಾಟಪಟ್ಟಕದ ಮಧ್ಯದಲ್ಲಿ ಕುಳ್ಳಿರಿಸಿ

ಮತ್ತೇಭವಿಕ್ರೀಡಿತ

ಸ್ತನಕುಂಭಸ್ಥಳೆಯರ್ ಮುದಾನ್ವಿತೆಯರತ್ಯಂತಾಲಸಾಯಾನೆಯರ್
ವಿನುತಾನಂಗಮಹೀಪದಂತಿನಿಗಳೆಂಬಂತಿರ್ದ ದೇವೇಂದ್ರನಂ
ಗನೆಯರ್ ಕೈಗಳನೆತ್ತಿಕೊಂಡು ಬಿಸಿನೀರಿಂ ತುಂಬಿರ್ದ ಸ್ವರ್ಣಪಾ
ವನಕುಂಭಂಗಳನಂತು ನೀರೆಱೆದರೆಂತು ಶ್ರೀಗಿಭಂಗಳ್ ಕರಂ ೧೦೧

ಕಂದ : ಕಮಳಿನಿಯ ಮೇಲೆ ಪಿರಿದುಂ
ದ್ಯುಮಣಿಯ ಕಿರಣಂಗಳೆಱಗಿ ಸುರಿವಂತಿರೆ ಸ
ತ್ಕಮಳಾಕ್ಷಿಯ ಮೇಲೆಱಗಿದು
ದಮಳಿನ ಕಮಳಪ್ರವಾಹಮತಿಸಂಭ್ರಮದಿಂ ೧೦೨

ಸಾರತೆ ಜಳದೊಳಮೊಪ್ಪುವ
ಧಾರೆಗಳೊಡಗೂಡಿ ಭುವನದೊಳ್ ಪೊಳೆವುದಱಿಂ
ದಾ ರಮಣಿ ಕಾಮದೇವನ
ಕೂರಸಿಯೆಂಬಿದನೆ ನಿಶ್ಚಯಂಗೆಯ್ದಳ್ ತಾಂ ೧೦೩

ವಚನ : ಆಗಳ್

ಉತ್ಪಲಮಾಲೆ

ಭೂಷಣಮೆಲ್ಲಮಂ ತೆಗೆದು ನೈಜಸುರೂಪದೊಳಿರ್ದೊಡಂ ಮ[1]ರು[1]
ದ್ಯೋಷಿಯರೊಳ್ನೊಸಲ್ಗಳೊಳಮಂದು ಕೊರಲ್ಗಳೊಳಂ ಸಮಂತು ಸಂ
ಪೋಷಿಸಿದುದ್ಗಘರ್ಮಜಳಬಿಂದುಗಳಿಂದುಱಿ ಬೇಱದೊಂದು ವೈ
ಶೇಷಿತರೂಪಮಂ ತಳೆದು ಪುಟ್ಟಿಸಿದರ್ ನಯನಪ್ರಮೋದಮಂ ೧೦೪

ವಚನ : ಅಂತು ಚತುರ್ಥಸ್ನಾನವಿಧಾನಾನಂತರಂ ಶುದ್ಧೀಕೃತಶರೀರೆಯಾಗಲ್ಲಿಂ ಪೊಱಮಟ್ಟು ಶೃಂಗಾರಾಗಾರಕ್ಕೆ ಮೆಲ್ಲಮೆಲ್ಲನೆ ಬಿಜಯಂಗೆಯ್ವುದುಮಾಗಳಾ ತುಂಗ ಸ್ತನೆಯ ಮಂಗಳಮಾಪಂಗಳೊಳಂಗಮಟ್ಟಮಂ ಸಂಗಡಿಸಿದಿಂಬಳಿಯಂ

[1] ಹ (ಜ)

ಕಂದ : ಬೆಳುದಿಂಗಳ ಧಾವಲ್ಯಮ
ನಿಳಿಕೆಯ್ವುತ್ತಿರ್ದ ಬಿಳಿಯ ಪಟ್ಟಾವಳಿಯಂ
ನಳಿನಾಕ್ಷಿಗೆ ತಂದುಡಿಸಿದ
ಳೊಲಿದೊರ್ವಳ್ ದಿವಿಜಕಾಂತೆ ಕಡುಜಾಣಿಂದಂ ೧೦೫

ಹರಿಚಂದನಕಲ್ಕಮನೊ
ಲ್ದರಸಿಯ ಮೆಯ್ಯಲ್ಲಿ ಪೂಸಲಂತಾಕ್ಷಣದೊಳ್
ಶರದದ ಮುಗಿಲಾವರಿಸಿದ
ಸುರಗಿರಿಶಿಖರಂ ದಲೆಂಬಿನಂ ಕಣ್ಗೆಸೆದಳ್ ೧೦೬

ಉತ್ಪಲಮಾಲೆ

ಮುತ್ತಿನ ತೋಳಬಂದಿ ಪೊಸಮುತ್ತಿನ ಚೂಳಿಕೆ ಮುತ್ತಿನೈಸರಂ
ಮುತ್ತಿನ ಸೂಡಗಂ ಪೊಳೆವ ಮುತ್ತಿನ ಕಂಕಣಮೆಯ್ದೆ ಮುತ್ತಿನಿಂ
ಬಿತ್ತರಿಸಿರ್ದ ನೂಪುರಮದೊಪ್ಪುವ ಮುತ್ತಿನ ನೇವುರಂ ದಲೆಂ
ದುತ್ತಮಮಾದ ಭೂಷಣದಿ ಭೂಷಿಸಿದರ್ ಸುರಕಾಂತೆಯರ್ ಕರಂ ೧೦೭

ಮುತ್ತಿನ ದಂಡೆ ಮುತ್ತಿನ ಲಸತ್ತಿಲಕಂ ಸುರಿಮುತ್ತಿನೋಲೆಯೊಳ್
ಮುತ್ತಿನ ಪೆಂಡೆಯುಂ ಮಿಸುಪ ಮುತ್ತಿನ ಕೊಪ್ಪುಱಿ ಮುತ್ತಿನುಂಗುರಂ
ಮುತ್ತಿನ ಪಿಲ್ಲಿಯೆಂಬ ಸದಲಂಕರಣಂಗಳನೆಯ್ದೆ ತೊಟ್ಟು ತಾಂ
ಮುತ್ತಿನ ಬೊಂಬೆಯೆಂಬ ಬಗೆಯಂ ನೆಱಪುಟ್ಟಿಸುತಿರ್ದಳಾಕ್ಷಣಂ ೧೦೮

ವಚನ : ಇಂತು ಬೆ[1]ಳುವ[1]ಸದನಂಗೆಯ್ದಾಗಳ್

ಮತ್ತೇಭವಿಕ್ರೀಡಿತ

ವರಕರ್ಪೂರದ ಘಟ್ಟೆಯಂ ಕಡೆದು ನಾನಾ ಕೌಶಲೋತ್ಕರ್ಷನಿ
ರ್ಭರದಿಂ ಪುತ್ಥಳಿಯಂ ವಿನಿರ್ಮಿಸಿದವೊಲ್ ಚೆಲ್ವಿಂಗೆ ಪಕ್ಕಾದಳಾ
ಧರಣೀವಲ್ಲಭಚಿತ್ತವಲ್ಲಭೆ ಮಹಾಸೌಗಂಧ್ಯಸಂಬಂಧಬಂ
ಧುರೆ ತಾಳ್ದಳ್ ಪರಿನಿರ್ಮಳಾಭರಣದಿಂ ಶೃಂಗಾರಿತಾಕಾರಮಂ ೧೦೯

ಚಂಪಕಮಾಲೆ

ಮಿಗೆ ಸುಮನೋರಮಾರ್ಪಿತ ವಿರಾಜದಲಂಕರಣಂ ಪ್ರಸಾದ ಚಾ
ರುಗುಣವಿಶೇಷಯುಕ್ತನುಪಸಾರಿತದೋಷಮಶೇಷಲಾಲಿತಂ
ಸೊಗಯಿಪ ಶುದ್ಧವಿಗ್ರಹಮನಾಂತು ಕವೀಶ್ವರವಾಣಿಯಂತೆ ಭೂ
ಮಿಗೆ ಕಡುಜಾಣೆ ರಾಣಿ ರಮಣೀಯತೆಯಂ ಪಡೆದಿರ್ದಳಾಕ್ಷಣಂ ೧೧೦

---

[1] ಳ್ವ (ಜ)

ವಚನ : ಮತ್ತಂ ಕಡೆಗಣ್ಣ ಳುಗುಳ್ವ ಕುಡಿವೆಳಗಿಂ ಮುಡಿದ ಮಲ್ಲಿಗೆಯುಚ್ಚ ಬಾಸಿಗಂ ದ್ವಿಗುಣಿಸೆಯುಂ ದರಹಾಸ ವಿಳಾಸದೊಳ್ ಪುದಿದ ಥಳಥಳಿಪ ಸುಲಿಪಲ್ಗಳ ಪೊಳೆಪಿಂ ಪೊಸ ಮುತ್ತಿನ್ನೈಸರದ ಕಾಂತಿಯು ಮೊತ್ತಂ ತ್ರಿಗುಣಿಸೆಯುಂ ಕೊರಲೊಳಿಕ್ಕಿದ ಮುಕ್ತಾಫಳಹಾರ ಕಿರಣದೊಳ್ ಕೂಡಿದ ಪೂಸಿದ ಹರಿಚಂದನ ಚರ್ಚೆಯೊಳೊಂದಿದ ಬೆಳ್ಪಸದನದ ನುಣ್ಬೆಳ ಗಿಂದುಟ್ಟ ದುಕೂಲಚೇಲದ ಧಾವಲ್ಯಂ ಚತುರ್ಗುಣಮಾಗಿಂತು ಚೆಲ್ವುವೆತ್ತಾ ದೇವಿಯ ದೇಹಯಷ್ಟಿಗೆ ಪೊಸತಾಗಿ ನಿರ್ಮಿಸಲ್ಪಟ್ಟ ಬೆಳ್ಪಸದನಂ ನೋಳ್ಪರ ಕಣ್ಗಾನಂದಮಂ ಸಂಪಾದಿಸುತ್ತುಮಿರೆ

ಕಂದ : ಸೊಗಯಿಪ ಬೆಳ್ಪಸದನಮಂ
ಮೃಗಶಾಬ ವಿಶಾಲನೇತ್ರೆ ಕೈಕೊಂಡಾಗಳ್
ಮಿಗೆ ತಣ್ಣ ದಿರಾವರಿಸಿದ
ಮೃಗಧರಮಂಡಳಿಯುವೊಲ್ ವಿರಾಜಿಸುತಿರ್ದಳ್ ೧೧೧

ವಚನ : ಅಂತಾ ಪಟ್ಟದರಸಿ ಪೊಸತಾಗಿಯತಿಶಯದಿಂ ಬೆಳುವಸದನಂಗೆಯ್ದ ನಂತರಮಾಕೆಯ ಮುಂದೆ ಸುರಕುಮಾರಿ ಮತ್ತೊರ್ವಳ್

ಚಂಪಕಮಾಲೆ

ಭುಜಶಿಖರಾಗ್ರದಲ್ಲಿ ಘನಕುಂಕುಮದಿಂ ಬರೆದಿರ್ದ ಪತ್ರಕ
ಪ್ರಜದಿನತೀವರಮ್ಯಮೆನಿಸಿದ ಸುಬಾಹುಲತಾಪ್ರಕಾಂಡದ
[1]ಲ್ಲ[1]ಜನಿಸಿ ತೋರ್ಪ ಸತ್ಕುಸುಮಮಂಜರಿಯೆಂಬಿನಮೊಪ್ಪಮಂ ಕರಂ
ಭಜಿಸಿದ ರಂಧ್ರದರ್ಪಣಮುಮಂ ಪಿಡಿದಿರ್ದಳೊರ್ವಳರ್ಥಿಯಿಂ ೧೧೨

ಕಂದ : ಮಡದಿಯ ಮುಖದಿಂದೆನಗಿಂ
ದೊಡರಿಸಿದುದು ಬನ್ನಮೆಂಬ ಚಿಂತೆ ಕರಂ ಸಂ
ಗಡಿಸಿ ಕರಗುವವೊಲೊಸರ್ದುದು
ಸಡೆಸಮಸಂ ಚಂದ್ರಕಾಂತಮಣಿಮಯಮುಕುರಂ ೧೧೩

ವಚನ : ಮತ್ತಂ

ಕಂದ : ಥಳಥಳಿಪ ಚಂದ್ರಕಾಂತೋ
ಪಳದಿಂದಂ ಸಮೆದ ಚೆಲ್ವ ಪಾವುಗೆಗಳನು
ಜ್ವಳಿತಾಂಗಿಯ ಮುಂದಿರಿಸಿದ
ಳೆಳೆಯೊಳ್ ಗೀರ್ವಾಣರಮಣಿಯತ್ಯಾದರದಿಂ ೧೧೪

[1] ಲ್ಲಿ (ಕಚ)

ಉತ್ಪಲಮಾಲೆ

ಕಾಲ ಪಳಂಚಿನುಂಗುರದ ಮೆಲ್ಲುಲಿಯಿಂದಮೆ ಪೇಳ್ದು ತಮ್ಮ ಲೀ
ಲಾಲಸಯಾನಮಂ ಕಳಮರಾಳಯುಗಂಗಳಿಗೆಯ್ದೆ ಶಿಕ್ಷಿಸಂ
ತಾ ಲಲಿತಾಂಗಿ ಪಾವುಗೆಗಳಂ ನಿಜಪಾದತಳಂಗಳಿಂದೆ ಸಂ
ಲಾಲಿತಮಾಗಿ ಮೆಟ್ಟಿ ನಡೆತಂದಳನೂನಮನೋನುರಾಗದಿಂ ೧೧೫

ವಚನ: ಅಂತು ಬಂದು ದೇಹಾರಾಗಾರಮಂ ಪೊಕ್ಕು ವೀತರಾಗಶ್ರೀಚರಣ ಸಮಾರಾಧನಂಗೆಯ್ದು ಬಳಿಯಮಾರೋಗಣೆಯಂ ಮಾಡಿ ತದನಂತರಮಾ ಶತಪತ್ರನೇತ್ರೆ ರಾಗರಸಪಾತ್ರೆಯಾಗಿ ರಾತ್ರಿಯೊಳ್ ಮೇಳದ ಕೆಳದಿಯರೊಡಗೂಡಿ ತಮ್ಮಯ ಬೆಳಗಿಂ ದಿರುಳಾದೊಡಂ ಪಗಲಂ ಪುಗಿಸುತ್ತುಮಿರ್ಪ ಕೈದೀವಿಗೆಗಳ ನಟ್ಟನಡುವೆ ಕಾಮವಿಕಾರ ಕಾರಣೋಪಕರಣಸಜ್ಜೀಕೃತಮಾದ [1]ಸೆಜ್ಜಾ[1]ಗೃಹಕ್ಕೆ ಮೆಲ್ಲನೆ ಬಿಜಯಂಗೆಯ್ದಾಗಳ್

ಕಂದ: ರಾಗಿಣಿಯ ಪದಸ್ಪರ್ಶದೆ
ರಾಗಂಬಡೆದುದು ಸುರತ್ನಕುಟ್ಟಿಮಭೂಮಿ
ಭಾಗಂ ಚೈತನ್ಯಯುತಂ
ರಾಗಾವಿಳನಪ್ಪನೆಂಬಿದೊಪ್ಪದೆ ಜಗದೊಳ್ ೧೧೬

ವಚನ: ಇಂತು ಬಂದು ಬಾಳದ ಜೇರ್ಗಳಿಂ ಸಮೆದ ಕೇರ್ಗಳೊಳ್ ಪನ್ನೀರಂ ತಳಿಯಲ್ಕಿಂಬಾದ ತಂಬೆ[2]ರಲ[2] ವಶದಿಂ ಮೇಲೆ ಬೀಳ್ವ ತುಂತುರ್ವನಿಗಳಿಂದಂ ಕಪ್ಪುರದ ಧೂಳಿಯ ಕಂಪಿನಿಂ ಸೊಂಪುವಡೆದ ಚಂದನಕರ್ದಮಸ್ಥಾಸಕದ ವಾಸನೆಯನಾಸೆಗೆಯ್ದು ಬಂದ ತುಂಬಿಗಳೆಂಬಂತಿರ್ದುಪಹಾರದ ಕನ್ನೆಯ್ದಿಲ್ಗಳಿಂ ಮತ್ತಮಲ್ಲಿ ಬಿಳ್ದಿರ್ದ ಕತ್ತುರಿಯ ಪರಿಮಳವಿಳಾಸಕ್ಕೆ ಸೋಲ್ತು ಕಂದಿ ಸುಗಿದು ನುಸುಳ್ಗಂಡಿಯಿಂ ನುಸುಳ್ದೋಡುವಂತೆ ಗವಾಕ್ಷಜಾಳದಿಂ ನುಗುಳ್ದು ಪೋಪ ಕಾಳಾಗರುವಿನ ಪೊಗೆಗಳಿಂ ಮನಂಗೊಳಿಪ ಸಜ್ಜಾ ಗೃಹಮಂ ಪುಗುವುದುಂ

ಉತ್ಪಲಮಾಲೆ

ಚಂಚದನೂನಚಿತ್ರಯುತಕಾಂಚನಮಂಚದ ಮೇಲೆ ಚೆಲ್ವವೆ
ತ್ತಂಜೆಯ ತುಪ್ಪುಳಿಂ ಸಮೆದ ಪಾಸುಗೆಗಳೇಳುಮ[3]ನಿಕ್ಕಿ[3] ಸಮ್ಮದಂ
ಸಂಚಿಸೆ ಮೇಲೆ [4]ಪೋಲ್ಮ[4]ಡಿಕೆ ಮತ್ತೆ ದುಕೂಲ ಪರಿಚ್ಛದಂಗಳಂ
ಪ್ರಾಂಚಿತಮಾಗಿ ಪಾಸಿದೊಡೆ ಪುಟ್ಟಿಸುತಿರ್ದುದದೆಂದು ರಾಗಮಂ ೧೧೭

ವಚನ: ಅಂತು ಪಾಲಿಂಗಡಲ ತೆರೆಯಡಂಗಿದ ತಾಣದೊಳ್ ನಿಶ್ಚಳಮಾಗಡಿ ಕಿಲ್ಗೊಂಡ ಫೇನಪಿಂಡಂಗಳೆಂಬ ಬಗೆಯನೊಗೆಯಿಸುತ್ತಿರ್ದಡುಕುವಾಸುಗಳ ಮೇಲೆ

---

[1] ಶಯ್ಯಾ (ಜ) [2] ಲರ (ಜ) [3] ನೀಕ್ಷಿ (ಕಜ) [4] ಮೋಲ (ಕಜ)

ಬುದ್ಬುದಾಯಮಾನ ಕುಸುಮೋಪಹಾರದಿಂ ರಮಣೀಯಮಾದುದಂ ಕಂಡದಱ ಮೇಲೆ ಕುಳ್ಳಿರ್ದಾಗಳ್

ಕಂದ: ಪಾಲ ಬಿಂದುಗಳ ಪೊತ್ತಂ
ಮೇಲುಱೆ ಕವಿದಿರ್ದು ನೆಗೆವ ಲಕ್ಷ್ಮಿಯ ತೆಱದಿಂ
ಲಾಲಿತ ಮುಕ್ತಾಭರಣದ
ಮೇಳವದಿಂದಬಳೆ ತಳೆದಳತಿಶಯರೂಪಂ ೧೧೮

ವಚನ: ಮತ್ತಮುದ್ರಿಕ್ತಮಾದ ಕಾಮವಿಕಾರೋತ್ಕರ್ಷಸಮಾಕರ್ಷಣನಿಮಿತ್ತಂ ಮಾಡಿದೌಷಧದ ಘಟಿಕಾಪೇಟಿಕಂಗಳೆಂಬಂತಿರ್ದ ಕರ್ಪೂರತೈಲದಿಂ ಘೋಳಿಸಿದ ನೇಲುವತ್ತಿಯಾಡಡಕೆಯ ಭಾಗಂಗಳಿಂದಂ ನಿನ್ನಯ ರಂಗದ ಪಾಂಗಂಗಳೆಂಬ ಮೋಹನ ಬಾಣಂಗಳಿಂ ಜಗಂಗಳನೊರ್ಮೊದಲೊಳೆ ಭಂಗಂಬಡಿಸುವೆನೆಂಬೀ ಪ್ರತಿಜ್ಞೆಯಿಂದನಂಗಂ ತದನಂಗವತಿಗೆ ಭಾಷಾಪತ್ರಂಗಳಂ ಕೊಟ್ಟನೆಂಬಂತಿರ್ದ ಕಡುಚೆಲ್ವನಾಗಿ ಚಿಬ್ಬಂಪೊಯ್ದು ನೇರ್ಪಿಂಗಡರ್ಪಾದ ನಾಗವಲ್ಲೀಪತ್ರಂಗಳಿಂದಂ ಕರ್ಪೂರಚೂ[1]ರ್ಣ[1]ಪರಿಮಿಶ್ರೀಕರಣದಿಂ [2]ಸೆಜ್ಜ[2]ನಿಶಾಂತಭ್ಯಂತರಮಂ ಸುಗಂಧೀಕರಿಸುತ್ತುಮಿರ್ದತಿಬಹಳಧವಳಿತೆಯನಾಂತು ಖಂಡಿತಪರ್ಣಂಗಳಲ್ಲಿ ಲಘುಪಿಂಡಂಗಳಾಗಿಟ್ಟ ಸುಸ್ನಿಗ್ಧಚೂರ್ಣಂಗಳಿಂ ತುಂಬಿದ ರಜತ ಭಾಜನಂಗಳುಮಂ ನಾನಾವಿಧರಚನಾವಿಶೇಷಸಂಸ್ಕೃತಮಾಗಿ ಬಹಳತರಸುಗಂ[3]ಧಿ[3]ದ್ರವ್ಯ ಸಂಬಂಧಾಧಿವಾಸನದಿಂ ಮನೋಹರಮಾದ ಪರಮಾಮೃತರಸಸಮಾಸ್ವಾದಸೋದರೀ ಭೂತನೂತನಶೀತಳಪಾನೀಯಪರಿಪೂರ್ಣಕುಂಭಗಳುಮಂ ಅವ್ಯಕ್ತಮಾದ ಕಾಮುಸಂ ರಾಗೋಜ್ಜೃಂಭಣಮುಖದಿಂ ವ್ಯಕ್ತಮಾಗಿ ತೋಱುಸುವಂತೆ ಸುತ್ತಲುಂ ಥಳಥಳಿಸಿ ಪೊಳೆ ಯುತ್ತುಮಿರ್ದ ರತಿಸಮುದ್ದೀಪಕಮಾದ ಮಾಣಿಕ್ಯಮಯದೀಪಕಳಾಪಂಗಳುಮಂ ಕಾಮೋದ್ದೀಪೀಕರಣಪ್ರವೀಣ ನಾನಾಪ್ರಕಾರೋಪಕರಣಕಿರಣಗಣಂಗಳ ರಮಣೀಯತೆ ಯುಮಂ ಕಂಡು ಕಡುಪಿರಿದುಂ ರಾಗರಸಂ ತನ್ನಯ ಮನದೊಳೊಗೆಯಲದಱ ಭಾರದಿಂ ಮಲಂಗುವಂತೆ ಸೋಪಧಾನಶಯನೀಯದ ಮೇಲೆ ಮೆಲ್ಲನೆ ಮಲಂಗುವುದುಂ

ಕಂದ: ಚರಣತಳಂ ಮೃದುವೋ ಪೇೞ್
ಸರಸಿರುಹಂ ಮೃದುವೊಯೆಂದು ಪರಿಕಿಪ ತೆಱದಿಂ
ಕರತಳದಿಂದೊತ್ತಿದಳು
ದರಸಿಯ ಪದತಳಮನಮರಕಾಮಿನಿಯೊರ್ವಳ್ ೧೧೯

ವಚನ: ಅಂತಿಪ್ಪುದುಮಿತ್ತಲಾ ಮಹಾಸೇನಮಹಾರಾಜಂ ಗರ್ಭಾಧಾನಮೆಂಬ ಮಂಗಳವಿಧಾನಮನಂಗೀಕರಿಸಿದಿಂಬಳಿಯಂ

---

[1] ರ್ಣ (ಜ) [2] ಶಯ್ಯಾ (ಜ) [3] ಧ (ಜ)

ಕಂದ: ಅನುಪಮರಚನಾಚಿತ್ರಿತ
ಘನಪರಿಧಾನೋತ್ತರೀಯಕಂ ಮಣಿಮಯ ನೂ
ತನಭೂಷಣ ಪರಿಭೂಷಿತ
ನನುಲೇಪನಶೋಭಿತಾಂಗನಾಗಿ ನರೇಂದ್ರಂ ೧೨೦

ವಚನ: [1]ಸೆಜ್ಜಾ[1]ಗೃಹಪ್ರವೇಶಯೋಗ್ಯ ಕತಿಪಯಾಂಗರಕ್ಷಕಜನಂಬೆರಸು ವಿಚಿತ್ರ ವೇತ್ರಧರಪುರಸ್ಸರಂ ಸೆಜ್ಜೆವನೆಗೆ ಬಿಜಯಂಗೆಯ್ವುದುಮಾಗಳ್ ಬೆಳುವಸದನದ ಪೊಸ ದೇಸೆಯಂದೆಸೆಯುತ್ತುಮಿರ್ದ ಶತ್ರುಪ್ರತಾಮಹಾದೇವಿ ನಿಪ್ಪೊಸತಪ್ಪ ಕಪ್ಪು[2]ರದ[2] ಲೆಪ್ಪದ ಪೆಣ್ಣಂಬಂತೆ ಕಣ್ಗೆ ಸೊಗಸನಜನಿಸುತ್ತುಮತಿಸಂಭ್ರಮದಿನಿದಿರೆಳ್ದು ನಿಂದಿರ್ಪುದುಂ

ಕಂದ: ಶರದದ ಮುಗಿಲೊಡ್ಡುಗಳೊಳ್
ಪರಿಪೂರ್ಣಶಶಾಂಕನಿರ್ಪ ತೆಱದಿಂದರಸಂ
ವರಹಂಸತೂಳತಳ್ಪದೊ
ಳುರುಮುದದಿಂದರಸಿವೆರಸು ತಾಂ ಕುಳ್ಳಿರ್ದಂ ೧೨೧

ವಚನ: ಅನಂತರಂ

ಕಂದ: ಚತುರಪರಿಹಾಸವಚನಾ
ಮೃತಚಂದ್ರಿಕೆಯಿಂದೆ ನರಪಮುಖವಿಧುಬಿಂಬಂ
ಸತಿಯ ಮನಃಕುಮುದಮನುರು
ರತಿರಸಮಂ ಬಿಡದಲರ್ಚಿಸಿತ್ತು ನಿತಾಂತಂ ೧೨೨

ಸ್ಮಿತಧವಳಕಮಳದೊಳ್ ಮ
ತ್ತತಿಶಯಹಂಸಂ ಸ್ವಹಂಸೆಯಂ ಸೋಂಕುವವೊಲ್
ಪತಿ ನಿಜಸತಿಯಂ ಸೋಂಕಿದ
ನತುಳಿತತಳ್ಪದೊಳು ರಾಗರಸದೊದವಿಂದಂ ೧೨೩

ರತಿಸಾಗರದೊಳಗೋಲಾ
ಡುತುಮಿರ್ದಾ ನೃಪತಿಯುಂ ಮಹಾದೇವಿಯುಮೆ
ಯ್ದೆ ತನು ಬಿಡದಾಡಿಸುತ್ತಿ
ರ್ದತಿಶಯಪುತ್ರಿಕೆಗಳೆಂಬ ತೆಱದಿಂದಾಗಳ್ ೧೨೪

ವಚನ: ಅಂತು ವಿಶ್ರಾಂತಸಂಭೋಗಸುಖದಿಂದೊಗೆದ ಬೆಮರ ಬಿಂದುಗಳಿಂದಾ ದಂಪತಿಗಳ ನಿಕಾಮಕೋಮಳತನುಲತೆಗಳಾರ್ದಂಗಳಾಗಿಯುಂ ಮೆಯ್ಸೋಂಕಿನೊಳುಬ್ಬರಿ

---

1 ಶಯ್ಯಾ (ಜ) 2 ರ (ಜ)

ಘನವಿಪುಳಪುಳಕಾಂಕುರಂಗಳಿಂ ಕರಿಸತ್ವಮಂ ತಾಳ್ದಿರ್ದವು ಮತ್ತಂ ನಿಬಿಡಮಾದ ಗಾಢಾಲಿಂಗನದಿಂದಿರ್ವರ ಶರೀರಂಗಳನೊಂದಾಗಿ ಪಚ್ಚಿಸಿದರೆಂಬಂತೈಕ್ಯಮನಾಂತು ಕ್ಷೀರನೀರಾಕಾರದೊಳೊಂದಿದ ರತ್ನಶ್ರೇಣಿಯಂತಿರಾ ಮಹಾಸೇನಮಹಾರಾಜನೊಡನೆ ಪವಡಿಸುತ್ತುಮಿರ್ದ ಸುವ್ರತಾಮಹಾದೇವಿ ಪರಿಶ್ರಮನಿಮೀಲಿತನಯನೆಯಾಗಿ ಬೆಳಗಪ್ಪ ಜಾವದೊಳ್ *

ಚಂಪಕಮಾಲೆ

ಅನುಪಮತೀರ್ಥನಾಥಜನನೋತ್ಸವಮಂಗಳಕಾರಣಂಗಳಂ
ಕನಸುಗಳಂ ಯಥಾಕ್ರಮದೊಳಂ ಪದಿನಾಱುಮನೆಯ್ದೆ ಕಂಡಳಾ
ಜಿನಜನನಿ ಪ್ರಮೋದಭರದಿಂ ಮರುಷೋಡಶಭಾವನಾದಿ ಭಾ
ಜನನೆನಿಸಿರ್ದ ಪುಣ್ಯತನಯೋದಯಮಂ ನೆಱೆಸೂಚಿಪಂದದಿಂ ೧೨೫

ವಚನ: ಅದೆಂತೆನೆ

ಉತ್ಪಲಮಾಲೆ

ನೀಳ್ಕಿಸಿ ತುಂಬಿಗಳ್ ಮೊರೆದು ಬಂದು ಮದಾಂಬುವ ಗಂಧಶಾಲಿಯಿಂ
ಕುಳ್ಳಿರೆ ಗಂಧದೊಳ್ ಮೆಱೆವ ಭಾಸುರಭದ್ರಗಜಾಧಿರಾಜನಂ
ಬೆಳ್ಳಿಯ ಬೆಟ್ಟಮೆಂಬ ಬಗೆಯಂ ಸಲೆಪುಟ್ಟಿಸುತಿರ್ದುದಂ ಭಯಂ
ಗೊಳ್ಳದೆ ನೋಡಿದಳ್ ಕನಸಿನೊಳ್ ಮದಕುಂಜರಯಾನೆ ಲೀಲೆಯಿಂ ೧೨೬

ಚಂಪಕಮಾಲೆ

ಶರದದ ಚಂದ್ರಮಂಡಲದವೊಲ್ ಪರಿಪಾಂಡುರದೇಹವರ್ಣನಂ
ಸುರುಚಿರವೃತ್ತಸತ್ಕಕುದನಂ ಘನಲಂಬಿತಲೋಲವಾಲನಂ
ಸತತಶೃಂಗಸಂಗತಿ ಕದರ್ಥಿತಸದ್ಗ್ರಹನಂ ಗವೇಂದ್ರನಂ
ಪರಿಕಿಸಿ ನೋಡಿದಳ್ ಕನಸಿನಲ್ಲಿ ಗವೇಂದ್ರಸುಕಂತೆ ರಾಗದಿಂ ೧೨೭

ಶಾರ್ದೂಲವಿಕ್ರೀಡಿತ

ಕೆಂಪಾಗಿರ್ದುರುಕೇಸರಪ್ರಸರದಿಂ ಜೊಲ್ಲಾದ ದಾರ್ದರ್ಪದಿಂ
ಪೆಂಪಂ ತಾಳ್ದ ವಿಭಾಸುರಾರ್ಧ ಶಶಿಲೇಖಾಕಾರದಂಷ್ಟ್ರಂಗಳಿಂ
ಸೊಂಪಂ ಬೀಱುವ ವೃತ್ತಸತ್ಕಟಿಗಳಿಂದೊಪ್ಪಿರ್ದುದಂ ಸಿಂಹಮಂ
ಕೆಂಪಾಪಾಂಗಿತೆ ನೋಡಿದಳ್ ಕನಸಿನೊಳ್ ತನ್ನೊಂದು ಸಂತೋಷದಿಂ ೧೨೮

ಚಂಪಕಮಾಲೆ

ಮಿಗೆ ನಿಮಿರುತ್ತುಮಿರ್ದ ವರರತ್ನವಿಭೂಷಣಭೂರಿಕಾಂತಿಯಿಂ
ದ್ವಿಗುಣಿತ ದೇಹಕಾಂತಿಯ ಪರಂಪರೆಯೊಳ್ ಪೊಳೆಯುತ್ತುಮಿರ್ದ ಗಾ
ಡಿಗೆ ನೆಲೆಯಾದ ಲಕ್ಷ್ಮಿಯ ಸದಾಕ್ಷಣದೊಳ್ ಮಥಿತಾಬ್ಧಿಮಧ್ಯದೊಳ್
ನೆಗಳಿಪಕಾಂತಿದೇವಿಗಳನಂಗನೆ ಕಂಡಳತಿಪ್ರಮೋದದಿಂ ೧೨೯

---

* ಸ್ವಪ್ನಾವಳಿ (೧೬)

ಕಂದ: ಅತಿಧವಳಪುಷ್ಪಮಾಲಾ
ದ್ವಿತಯಮನುದ್ಭ್ರಮರಭಂಗಿ ಸಂಭ್ರಮಭೃತಮಂ
ನುತವಿಕಸನಯುತಮಂ ನೋ
ಡುತುಮಿರ್ದಳ್ ಕನಸಿನಲ್ಲಿ ಗತಿಕೌತುಕದಿಂ ೧೩೦

ಚಂಪಕಮಾಲೆ

ಸಕಳಕಳಾವಿಳಾಸದೊಡಗೂಡಿ ಸಮಸ್ತದಿಗಂತರಾಳಮಂ
ಪ್ರಕಟಿತಮಾಗಿ ದಲ್ ಬೆಳಗುತಿರ್ದ ಸಮುದ್ಧುರಚಂದ್ರಬಿಂಬಮಂ
ಮಕರಪತಾಕನುತ್ಸವವಿಧಾನಸಮರ್ಥಮೆನಿಪ್ಪುದಂ ಕರಂ
ವಿಕಸಿತಕೈರವಾಕ್ಷಿ ನಡೆನೋಡುತಮಿರ್ದಳಪೂರ್ವರಾಗದಿಂ ೧೩೧

ಕಮಳವನಂಗಳಂ ಬಿಡದಲರ್ಚಿಸುತುಂ ನಿಬಿಡಾಂಧಕಾರಮಂ
ದಮನಮಿತ ಬೆರ್ಚಿಸುತ್ತುಮುರುರಾಗನಿಭಾಸಿ ಸಹಸ್ರಭಾನು ಸಾ
ರ್ಥಮನೆ ನಿಮಿರ್ಚಿಸುತ್ತುಮುದಯಾಚಳಚೂಳಿಕೆಯಗ್ರಭಾಗದಿಂ
ದಮುದಯಿಸುತ್ತುಮಿ[1]ರ್ದ[1] ರವಿಮಂಡಳಮಂ ನಳಿನಾಸ್ಯೆ ನೋಡಿದಳ್ ೧೩೨

ಕಂದ: ಮೀಂಗಳಯುಗಳಮನುದಕದೊ
ಳಂಗೀಕೃತಚಾರುಚಿತ್ರಸಂಚಾರಮುಮಂ
ಪಿಂಗದೆ ಪೊಳೆಯುತ್ತಿರ್ಪುದ
ನಂಗನೆ ಕನಸಿನೊಳೆ ಕಂಡಳಚ್ಚರಿಯಿಂದಂ ೧೩೩

ಮತ್ತೇಭವಿಕ್ರೀಡಿತ

ಸಿತತಂತುದ್ವಯವೇಷ್ಟಿತಂಗಳನತಿಸ್ವಚ್ಛಾಂಬುಪೂರ್ಣಂಗಳಂ
ನುತಮುಕ್ತಾಸ್ರಗಲಂಕೃತಂಗಳನುರುಶ್ರೀಗಂಧಚರ್ಚಾರ್ಚಿತಾ
ಕ್ಷತರಮ್ಯಂಗಳನಾಸ್ಯದೊಳ್ ಪೊಳೆವ ಪಂಕೇಜಂಗಳಿಂದೊಪ್ಪದು
ನ್ನತಿಯಂ ತಾಳ್ದಿದ ಚೆನ್ನಹೊನ್ನವೆರಡುಂ ಕುಂಭಂಗಳಂ ನೋಡಿದಳ್ ೧೩೪

ಕಂದ: ದೇವಿ ಕನಸಿನೊಳೆ ಕಂಡಳ್
ತಾವರೆಗೊಳನಂ ಮರಾಳಿಕಾಪಕ್ಷಮಲೀ
ಲಾವಿಕ್ಷಿಪ್ತ ಸರೋರುಹ
ಪಾವನಕಿಂಜಲ್ಕಪುಂಜಪಿಂಜರಿತಮುಮಂ ೧೩೫

ಪಿರಿದುಂ ಗಂಭೀರತೆಯಂ
ಧರಿಸಿದ ಬಹುರತ್ನರಾಶಿಪರಿರಂಜಿತಮಂ
ಪರಮಕ್ಷೀರಸಮುದ್ರಮ
ನರಸಿ ಸ್ವಪ್ನದೊಳೆ ನೋಡುತಿರ್ದಳ್ ನಲವಿಂ ೧೩೬

---

[1] ರ್ದ (ಜ)

ಕನಕಮಯಚಾರುಸಿಂಹಾ
ಸನಮಂ ನವರತ್ನರಾಜಿಪರಿಕೀಲಿತಮಂ
ಘನಕೌಶಲನಿರ್ಮಿತಮಂ
ಪನಿತೋತ್ತಮೆ ಕನಸಿನಲ್ಲಿ ಕಂಡಳ್ ಮುದದಿಂ ೧೩೭

ಉತ್ಪಲಮಾಲೆ

ಪೀವರತೋರಣೋಲ್ಬಣ ಲಸದ್ಧ್ವಜರಾಜವಿರಾಜಮಾನಮಂ
ಪಾವನರತ್ನಕಿಂಕಿಣಿಗಳ ದ್ಯುತಿಮಂಜರಿದೀಪ್ಯಮಾನಮಂ
ದೇವನಿತಂಬಿನೀ ಮಧುರಗೀತ ಮೃದುಧ್ವನಿಶೋಭಮಾನಮಂ
ದೇವವಿಮಾನಮಂ ಕನಸಿನಲ್ಲಿ ನೃಪಾಂಗನೆ ಕಂಡಳರ್ಥಿಯಿಂ ೧೩೮

ಕಂದ: ಎತ್ತಿದ ಪೆಡೆಗಳ ಮೇಲ
ತ್ಯುತ್ತಮಮಣಿಗಳ ಮಯೂಖಮಂಜರಿ ಮಿಗೆ ನಿಮಿ
ರುತ್ತಮಿರೆ ಕಣ್ಗೆ ಸೊಗಸಂ
ಬಿತ್ತರಿಪ ಫಣೀಂದ್ರಗೇಹಮಂ ಸತಿ ಕಂಡಳ್ ೧೩೯

ಪರಕಲಿಸಿ ನಿಮಿರ್ವ ಕಿರಣೋ
ತ್ಕರದಿಂದಾಗಸದೊಳಿಂದ್ರಚಾಪಶ್ರೀಯಂ
ನೆರಪಿಸುತುಮಿಪ್ಪನರ್ಘ್ಯ
ಸ್ಫುರದುದ್ಧುರರತ್ನರಾಶಿಗಳನೀಕ್ಷಿಸಿದಳ್ ೧೪೦

ಏನುಂ ಪೊಗೆ ಪೊಜಮಡದ ಕೃ
ಶಾನುಜ್ವಾಲಾಕಲಾಪಮಂ ಕೆಲಗೆಲದೊಳ್
ತಾನವ್ವಳಿಸುತ್ತಿರ್ಪುದ
ನಾ ನೃಪಸತಿ ಕನಸಿನಲ್ಲಿ ಕಂಡಳ್ ನಯದಿಂ ೧೪೧

ವಚನ : ಈ ಮಹಾಶ್ಚರ್ಯಕರ ಷೋಡಶ ಶುಭಸ್ವಪ್ನಸಂದರ್ಶನಾನಂತರಂ ಸಹಸ್ರ ಕಿರಣೋದಯ ಸಮಯದೊಳ್

ಉತ್ಪಲಮಾಲೆ

ತಂಬೆಲರೆಂಬಿನಂ ಸುಳಿದು ಬೀಸಿ ಸುವರ್ಣಗವಾಕ್ಷಮಾರ್ಗದಿಂ
ದಂ ಬಿಡದೆಯ್ದೆ ಬಂದವರನೊಯ್ಯನೆ ಸೋಂಕಿ ಸೊಡರ್ಗಳಾಗಳಾ
ಲಂಬಿತ ನಿದ್ರೆಯಂ ಕೆಡಿಸಲಾಗ ದಲೆಂದುಱಿ ಸನ್ನೆಯಿಂದೆ ಬೇ
ಡೆಂಬವೊಲೆಯ್ದೆ ತೂಗಿ ತಲೆಯಂ ಪಡೆದರ್ ಸುಖದಿಂ ಪ್ರಬೋಧಮಂ ೧೪೨

ವಚನ : ಆಗಳ್

ಶಾರ್ದೂಲವಿಕ್ರೀಡಿತ

ಮಂಜೀರಧ್ವನಿಯುಂ ಸುಕಂಕಣಝಣತ್ಕಾರಂಗಳುಂ ಮೇಖಳಾ
ಮಂಜುಧ್ವಾನಮುಮುಣ್ಮೆ ಪೊಣ್ಮೆ ನಯನಂ ಕೆಂಪಾಗೆ ಧಮ್ಮಿಲ್ಲಭಾ
ರಂ ಜೋಲ್ದೊಪ್ಪೆ ಶರೀರಯಷ್ಟಿ ತಳೆಯಲ್ ಬೇಱೊಂದು ಸೌರಭ್ಯಮುಂ
ರಂಜಂ ನೀವಿ ಸಡಿಲ್ದು ತೋಱೆ ಸತಿ [1]ಪಾ[1]ಸಿಂದೆರ್ದಳಾನಂದದಿಂ ೧೪೩

ವಚನ : ಅಂತುಪ್ಪವಡಿಸಿ ಪ್ರಭಾತಕಾಲಕರಣೀಯನಿತ್ಯನಿಯಮಂಗಳಂ ನಿರ್ವರ್ತಿಸಿದನಂತರಂ

ಕಂದ : ಪತಿಯ ಸಮೀಪಕ್ಕೆ ಮುದಾ
ಸತಿ ಬಂದುಱೆ ತನ್ನ ಕಂಡ ಕನಸುಗಳಂ ಸಂ
ಗತಿಯಿಂ ಪೇಳ್ದಳ್ ದಂತ
ದ್ಯುತಿಯಿಂದಂ ದ್ವಿಗುಣಿಸುತ್ತುಮೌಕ್ತಾವಳಿಯಂ ೧೪೪

ಸ್ರಗ್ಧರೆ

ಭೂಪಂ ಸ್ವಪ್ನಂಗಳಂ ಕೇಳ್ದಪರಿಮಿತ ವಿವೇಕಪ್ರಭಾವಾತ್ತಚಿತ್ತ
ವ್ಯಾಪಾರಂ ಮತ್ತಮಿಂತೆಂದುಸಿರ್ದನವಱ ಭೂಯಃಫಲಪ್ರಾಪ್ತಿಯಂ ತ
ನ್ನ ಪ್ರಾಣಪ್ರೀತೆಗಾಗಳ್ ನಗೆಯೆ ದಶನಭಾಭಾರಮುಂ ವಕ್ತ್ರದಿಂದಂ
ಪೊಂಪಿಂ ಬೇಱೊಬ್ಬ ಚಂದ್ರಂ ಪಗಲೊಳಮೆಳೆವೆಳ್ದಿಂಗಳಂ ಬೀಱುವನ್ನಂ ೧೪೫

ವಚನ : ಅದೆಂತೆಂದೊಡೆ

ಚಂಪಕಮಾಲೆ

ಸಿತಗಜದಂತೆ ದಾನಯುತನಂ ವೃಷದಂತಿರೆ ಧರ್ಮಭಾರದು
ರ್ಧೃತಿಪರನಂ ಮೃಗಾಧಿಪತಿಯಂತಿರೆ ವಿಕ್ರಮಯುಕ್ತನಂ ಸಮು
ನ್ನತತರಲಕ್ಷ್ಮಿಯಂತಿರೆ ಸಮಸ್ತಜಗಜ್ಜನಸೇವ್ಯಮಾನನಂ
ಸಿತಕುಸುಮೋಚ್ಚಮಾಲ್ಯದವೊಲೊಪ್ಪುವ ಕೀರ್ತಿಸುಸೌರಭಾಂಕನಂ ೧೪೬

ಉತ್ಪಲಮಾಲೆ

ಚಂ[2]ದ್ರ[2]ಮನಂತೆ ನಿರ್ಮಳಕಳಾಧರನಂ ರವಿಯಂತೆ ದುಸ್ಸಹಾ
[3]ಮಂ[3]ದಸುತೇಜನಂ ವರಝಷದ್ವಯದಂತಿರೆ ಭೂರಿಹರ್ಷನಂ
ಸೌಂದರ ಹೇಮಕುಂಭಯುಗದಂತಿರೆ ಪೀವರಮಂಗಳತ್ವಸ
ನ್ಮಂದಿರನಂ ಸರೋವರದವೊಲ್ ಜಗತೀಜನತಾಪಹಾರಿಯಂ ೧೪೭

---

[1] ಹಾ (ಕಚ) [2] ದ್ರಿರ (ಜ) [3] ನುಂ (ಜ)

ಚಂಪಕಮಾಲೆ

ಜಲನಿಧಿಯಂತಪಾರಮಹಿಮಾಸ್ಪದನಂ ಹರಿಪೀಠದಂತೆ ಮಂ
ಜುಳತರದರ್ಶನೋನ್ನತನುಮಂ ಸುರಲೋಕವಿಮಾನದಂತಿರು
ಜ್ವಲಿತ ಸುರೇಂದ್ರಯಾತ್ರಕನುಮಂ ಫಣಿರಾಜನಿವಾಸದಂತೆ ನಿ
ರ್ಮಳತರತೀರ್ಥಘೋಷಣವಿಶೇಷಿತಚಾರುಮಹಾನುಭಾವನಂ ೧೪೮

ಕಂದ : ವರರತ್ನರಾಶಿಯಂತಿರೆ
ನಿರುಪಮಕಾಂತಿಪ್ರಭಾವನಂ ಪಾವಕನಂ
ತಿರೆ ಘಾತಿಕರ್ಮಗಹನೋ
ದ್ಧುರಗಹನ ಸುದಹನದಕ್ಷನಪ್ಪಾತ್ಮಜನಂ ೧೪೯

ಪಡೆದಪೆ ನೀನಲ್ಲ[1]ದರೀ[1]
ಪೊಡವಿಯೊಳಿಂತಪ್ಪ ಕನಸನೀಕ್ಷಿಪ ಸೈಪಿಂ
ಗೆಡೆಯಾದರಾರೊ ಭಾವಿಸು
ವಡೆ ಪೂರ್ವೋಪಾತ್ತಪುಣ್ಯಮೇನದ್ಭುತಮೋ ೧೫೦

ಉತ್ಪಲಮಾಲೆ

ಪೋದ ಭವಂಗಳೊಳ್ ನೆರಪಿದೊಂದು ತಪಃಫಲಮಾಗಳೆಯ್ದೆ ಸಂ
ಪಾದಿಸಿದತ್ತು ತಾನುದಯಮಂ ಸಲೆ ನಿನ್ನೊಳಶೇಷದೇವರಾ
ಜಾದಿಕವಂದ್ಯತೀರ್ಥಕರಮಾತೃವೆನಲ್ ದೊರೆವೆತ್ತ ಚಾರುಪು
ಣ್ಯೋದಯೆ ನಿನ್ನವೊಲ್ ಮಿಗುವ ನೋಂಪಿಗಳಂ ನೆಱೆನೋಂತರಾರೊ ಪೇಳ್ ೧೫೧

ಚಂಪಕಮಾಲೆ

ಕನಸುಗಳೆಲ್ಲ[2]ವುಂ[2] ಫಲಮನೀವುವು ತಪ್ಪದೆ ಸುವ್ರತಾಢ್ಯರುಂ
ಘನಗುಣರುಂ ನಿರೀಕ್ಷಿಸಲೊಡಂ ಪುಸಿಯಾಗವವೆಲ್ಲಿಯುಂ ವ್ರತಾ
ಭಿನುತಗುಣಾಢ್ಯೆ ನೀಂ ಬಗೆವೊಡೀ ಕನಸಂ ನೆಱೆಕಂಡ ಕಾರಣಂ
ಜಿನಪತಿಮಾತೃವಾಗಿ ಪಡೆದಪ್ಪೆ ಕೃತಾರ್ಥತೆಯುಂ ವಿಶೇಷದಿಂ ೧೫೨

ತನುಭವಲಾಭವಾರ್ತೆಯನಿದಂ ನಿಜಹೃತ್ಪತಿ ಪೇಳೆ ಕೇಳ್ದು ಮು
ತ್ತನುಪಮಭೂರಿಹರ್ಷಭರದಿಂ ಪುಳಕೋದ್ಗಮಭಾರಮಂ ನೃಪಾಂ
ಗನೆ ತಳೆದಿರ್ದಳಂದು ವನಲಕ್ಷ್ಮಿ ವಿಶೇಷವಸಂತಕಾಲದೊಳ್
ಘನಕಳಿಕಾಕಳಾಪಮನದೆಂತುಟು ತಾಳ್ದುವಳಂತಿರೊಪ್ಪದಿಂ ೧೫೩

1 ದೊಡೀ (ಜ) 2 ಮುಂ (ಜ)

ವಚನ : ಅನ್ನೆಗಮಿತ್ತಲಾ ಸರ್ವಾರ್ಥಸಿದ್ಧಿಯೆಂಬ ವಿಮಾನದೊಳ್ ಪುಟ್ಟಿರ್ದ ದಶರಥಚರನಪ್ಪಹಮಿಂದ್ರನೆಂಬ ದೇವಂ ತನ್ನಯ ಪರಮಾಯುಷ್ಯಮಾದ ಮೂವತ್ತ ಮೂಱುಸಾಗರೋಪಮಕಾಲಮೆಲ್ಲಂ ದಿವ್ಯಸುಖಾನುಭವದಿಂದೊಂದುದಿನಮೆಂಬಂತೆ ಸಂಪೂರ್ಣತೆಯನೆಯ್ದಲೊಡಂ ನಿಜಾಯುರವಸಾನಸಮಯಮನಱಿದು

ಕಂದ: ಬಗೆಯೊಳ್ ಭೇದಜ್ಞಾನಮ
ದೊಗೆದಿರೆ ಪರಮಾತ್ಮರೂಪಮನುಂ ಧ್ಯಾನಿಸುತುಂ
ಬಗೆಯದಹಮಿಂದ್ರಸುಖಮುಂ
ಮಿಗೆ ದಿವ್ಯಶರೀರಭಾರಮಂ ವಿಭು ಬಿಟ್ಟಂ ೧೫೪

* ವಚನ: ಮತ್ತಮಾ ದೇವಂ ಸರ್ವಾರ್ಥಸಿದ್ಧಿಯಿಂ ಬಳ್ಳಿ ಬಂದು ವೈಶಾಖಮಾಸದ ಕೃಷ್ಣಪಕ್ಷದ ತ್ರಯೋದಶೀ ತಿಥಿಯೊಳ್ ಚಂದ್ರಮಂ ರೇವತೀನಕ್ಷತ್ರದಲ್ಲಿರುತ್ತಮಿರೆ ಬಾಳತರಣಿಕಿರಣಂ ಕಮಳಿನಿಯ ಕಮಳದೆಸಳ ಪೊರೆಯೊಳ್ ಪೊಕ್ಕೊಳಗಣ್ಗಿಳಿದು ಪೋಗಿ ಮೃಣಾಳಿಕಾಗರ್ಭದೊಳುದ್ಭವಿಸುವಂತಿರಾ ಸುವ್ರತಾಮಹಾದೇವಿಯ ಕೋಮಳ ಮುಖ ಕಮಳದೊಳ್ ಕರಿಕಲೇವರಾಕಾರದಿಂ ಪೊಕ್ಕು ನುಸುಳ್ದು ಪೋಗಿ ನಿರ್ಭರಿತ [1]ಶೋಭಾ[1] ಸಂದರ್ಭಗರ್ಭಿತಮಾದ ಗರ್ಭಾವಾಸದಲ್ಲಿ ಶುಭಮುಹೂರ್ತದೊಳವತರಣ ಕರಣಮನೆಪ್ಪ ಕೆಯ್ಯುದುಮಾಗಳ್

ಉತ್ಪಲಮಾಳೆ

ಆಸನಕಂಪಕಲ್ಪಿತ ಚತುತ್ತ್ಯತಿಯಿಂದಱಿದುದ್ಧಭಕ್ತಿಯಿಂ
ವಾಸವಮುಖ್ಯಮಾದಖಿಳದೇವಸಮೂಹಮುದೆಯ್ದೆ ಬಂದು ಜೈ
ನೇಶನ ಮಾತೃವಂ ನಮಿಸಿದರ್ ಬಲವಂದರನರ್ಘ್ಯರತ್ನದಿಂ
ಲೇಸೆನೆ ವಸ್ತ್ರದಿಂದೆ ಪರಿಪೂಜಿಸಿದರ್ ನುತಿಗೆಯ್ದರೊಪ್ಪದಿಂ ೧೫೫

ವಚನ: ಇಂತು ಚತುರ್ನಿಕಾಯದೇವರ್ಕಳೆಲ್ಲಂ ಪಂಚಾಶ್ಚರ್ಯಪುರಸ್ಸರಂ ಗರ್ಭಾವತರಣಕಲ್ಯಾಣಾರ್ಹಣಾವಿಧಾನಮಂ ಮಹಾಮಹಿಮೆವೆರಸು ಮಾಳ್ಪುದಂ ನೋಡುತ್ತುಮಿರ್ದ ಮಹಾಸೇನ ಮಹಾರಾಜಂ ಮನದೊಳ್ ಪೆಟ್ಟುವೆರ್ಚಿ ನಾನುಮಿಾತೆಱದಿಂದೀ ಕಲ್ಯಾಣೋತ್ಸಾಹಮನಿಲ್ಲೀಗಳೆ ಮಾಳ್ಪೆನೆಂದು ಬಗೆಯುತ್ತುಮಿರಲಮರ್ತ್ಯರ ಮೊತ್ತಮೆಲ್ಲಂ ತತ್ಕಲ್ಯಾಣಪೂಜೆಯಂ ಮಾಡಿ ಸ್ವಕೀಯಧಾಮಂಗಾಮಿಗಳಪ್ಪುದುಂ

ಕಂದ: ಪುಟ್ಟದ ಮುನ್ನಂ ದಿವಿಜರ್
ನೆಟ್ಟನೆ ಗರ್ಭಾವತರಣದುತ್ಸವಮಂ ಮುಂ
ದಿಟ್ಟು ಸೇವಿಸಿದರೆಂದೊಡೆ
ಪುಟ್ಟಿದ ಪೊತ್ತಿನೊಳೆ ಮಾಳ್ಪುದಂ ಬಣ್ಣಿಪರಾರ್ ೧೫೬

---

[1] ಶಾಖಾ (ಕಗ) * ಗರ್ಭಾವತರಣ (ಗ)

ವಚನ : ಅನಂತರಂ

ಕಂದ : ಒಡೆಯನ ಗರ್ಭಾಧಾನದ
ಸಡಗರಮಂ ಪಿರಿದುಮಳ್ತಿಯಿಂ ಭೂತಳದೊಳ್
ಕಡುಚೋಜಿಗಮಪ್ಪಂತಿರ
ಲೊಡರಿಸಿದಂ ಮತ್ತಮಾ ನೃಪಾಳಕತಿಳಕಂ ೧೫೭

ಮಹಾಸ್ರಗ್ಧರೆ
ಕ್ಷಿತಿನಾಥಂ ತನ್ನ ಪುಣ್ಯೋದಯದ ಮಹಿಮೆಯಂ ಕೊಡೆಕೊಂಡಾಡುತಿರ್ದಂ
ವ್ರತಶೀಲಾಧಾರನುದ್ಯದ್ವಿಮಳತರಗುಣಂ ಭಾರತೀಕರ್ಣಪೂರಂ
ನುತವದ್ದಾನಪ್ರಿಯಂ ಬಾಹುಬಲಿಸುಕವಿರಾಜಂ ಮಹಾರಾಜಪೂಜ್ಯಂ
ಜಿತಮಿಥ್ಯಾವಾದಿ ಸಾರ್ಥಪ್ರವಚನರಚನಂ ಚಾತುರೀಜನ್ಮಗೇಹಂ ೧೫೮

ಗದ್ಯ : ಇದು ಸಕಳಭುವನಜನವಿನೂಯಮಾನಾನೂನ ಮಹಿಮಾಮಾನನೀಯ
ಪರಮಜಿನಸಮಯಕಮಳಿನೀಕಳಹಂಸಾಯಮಾನ ಶ್ರೀಮನ್ನಯಕೀರ್ತಿದೇವ
ಪ್ರಸಾದಸಂಪಾದಪಾದನಿಧಾನದೀಪವರ್ತಿಯುಭಯಭಾಷಾಕವಿ
ಚಕ್ರವರ್ತಿ ಬಾಹುಬಲಿಪಂಡಿತದೇವ ಪರಿನಿರ್ಮಿತಮಪ್ಪ
ಧರ್ಮನಾಥಪುರಾಣದೊಳ್ ಧರ್ಮತೀರ್ಥಕರ
ಗರ್ಭಾವತರಣಕಲ್ಯಾಣಪರಿವ್ಯಾವರ್ಣನಂ

**ಷಷ್ಠಾಶ್ವಾಸಂ**

# ಸಪ್ತಮಾಶ್ವಾಸಂ

ಕಂದ: ಶ್ರೀಕಾಂತಂ ವಿಶದಯಶಃ
ಶ್ರೀಕಾಂತಂ ಪರಮಹರುಷಮಂ ತಳೆದಿರ್ದಂ
ಲೋಕಜನಲಾಲನೀಯ ಗು
ಣಾಕಾರಂ ಸರಸಚತುರಕವಿಕುಳತಿಳಕಂ ೧

ಉತ್ಪಲಮಾಲೆ

ಎಂತೞಿ ಪೂರ್ವದಿಗ್ವನಿತೆ ಮೇರುತಿರೋಹಿತ ಚಂದ್ರಬಿಂಬಮಂ
ಸಂತಸದಿಂದೆ ತಾಳ್ದಿ ಪರಿರಂಜಿಪಳಂತೆ ದಲಾ ಮಹೀಪಸೀ
ಮಂತಿನಿ ಚೆಲ್ವ ತನ್ನುದರದೊಳ್ ಸಲೆ ತಾಳ್ದಳಪೂರ್ವಗರ್ಭಮಂ
ಸ್ವಾಂತದೊಳೆಯ್ದೆ ರಾಗರಸಮಾನರಿಸಿರ್ದುದು ಪೆ[1]ರ್ಚಲು[1]ತ್ಕಟಂ ೨

ಮಹಾಸ್ರಗ್ಧರೆ

ಜಿನಪೂಜೋತ್ಸಾಹಮಂ ಮಾಡುವ ಭರವಸದಿಂ ದಾನಮಂ ಮಾಳ್ಪ ತದ್ಬಂ
ಧನದೊಳ್ ಸಿಕ್ಕಿರ್ದರಂ ತಾಂ ಬಿಡಿಸುವ ಕರುಣಾಭಾವದಿಂದೆಲ್ಲರಂ ಪಾ
ಲನಮಂ ಮಾಡುತ್ತುಮಿರ್ಪೀ ಬಯಕೆ ಬಗೆಯೊಳಾ ದೇವಿಗಾದತ್ತು ಮತ್ತಾ
ತನಯಂ ಪೂಜ್ಯಂ ಮಹಾದಾನಿಯುಮುಪಗತವದ್ಬಂಧನಂ ಸರ್ವಪಾಲಂ ೩

ವಚನ: ಎಂಬಿದಂ ಸೂಚಿಸಂದದಿಂ

ಕಂದ: ಉದರದೊಳಿರ್ದ ಜಿನೇಶನ
ಸದಮಳಘನಕೀರ್ತಿಯಿಂ ಸಮಾವೃತಮೆಂಬಂ
ತು ಧರಣಿಯ ಕೋಮಳಾಂಗಂ
ಪಡೆಸಿಂದಾಂತುದು ಮನೋಜ್ಞಧವಳಚ್ಛವಿಯಂ ೪

ಮಹಾಸ್ರಗ್ಧರೆ

ಲಲನಾಗಂಡಸ್ಥಳೀ ಮಂಡಳದ ಪೊಳೆಪು ಪೂರ್ಣೇಂದುವಂ ಮಾಣದೆ[2]ಯ್ದಂ
ಡ[2]ಲೆಯಲ್ ಜೇಸತ್ತು ಮತ್ತಂ ಭಯರಸವಶದಿಂ ಪೇಡಿವಟ್ಟೋಡಿಪೋಗಲ್
ಸಲೆ ಪಾಳಾಗಿರ್ದುದಂತಲ್ಲದೊಡದೞಿಳಗಾರಣ್ಯದಲ್ಲಿರ್ಪ ಪುತ್ತಂ
ಮೊಲನಂ ಚೆಲ್ವಾಲಮುಂ ಪುಲ್ಲೆಯುಮುೞಿ ನೆಲಸಿರ್ಪಂದಮಾವಂದಮಿನ್ನುಂ ೫

---

[1] ರ್ಚತು (ಜ) [2] ಯ್ತಂದ (ಕಚ)

ಚಂಪಕಮಾಲೆ

ಪರಬಲದಿಂದನಂತಬಲಿಯೊರ್ವನೆ ನೂಂಕಿ ವಲಿತ್ರಯಂಗಳಂ
ನಿರುಪಮ ಮಧ್ಯದೇಶಮನೆ ಪೇರ್ಚಿಪುದಂ ನಡೆನೋಡಿ ಹರ್ಷಮಂ
ಧರಿಸಿದವೆಂಬಿನಂ ಪಡೆದುವುಚ್ಚಕುಚಂಗಳವಂದು ಬಿಣ್ಪುಮಂ
ಪರರ ಸಮೃದ್ಧಿಯಿಂ ತಣಿವರೆಯ್ದೆ ಸುಹೃತ್ತುಗಳುಂ ಸುವೃತ್ತರುಂ ೬

ಪರಮವಿಳಾಸಮೆಂಬ ರಸದಿಂದಮೆ ತೀವಿದುರಸ್ಥಳೋಲ್ಲಸ
ತ್ಸರಸಿಯೊಳೆಯ್ದೆ ಪುಟ್ಟಿದ ಸಭೃಂಗ ಮುಖಾಂಬುಜ ಕೋಶಯುಗ್ಮದಂ
ತಿರೆ ತುದಿ ಕಪ್ಪುವೆತ್ತ ಕುಚಮಂಡಳಯುಗ್ಮಮದಂತುಮಲ್ಲದಂ
ದುರುತರ ಪತ್ರವಲ್ಲಿಯದಱಲ್ಲೊಗೆದಿರ್ಪ ನಿಮಿತ್ತಮಾವುದೋ ೭

ಎನಿತನಿತುಂ ತನೂದರಮುದಾಂತುದು ಪೆರ್ಚುಗೆಯಂ ಸನುಂತು ಮ
ತ್ತನಿತನಿತುಂ ಕುಚದ್ವಯಮುದಾಂತುದು ವಕ್ತ್ರದೊಳೆಯ್ದೆ ಕಪ್ಪುಮಂ
ಘನಕಠಿಣತ್ವಭಾವದೊದವಂ ತಳೆದಿರ್ದ ಜಡಾತ್ಮರನ್ಯವ
ರ್ಧನಮನೆ ಸೈರಿಸರ್ ತಳೆದೊಡಂ ದಲವರ್ ಸಲೆ ಮಧ್ಯವೃತ್ತಿಯಂ ೮

ಕಂದ: ನೆಟ್ಟನೆ ನೈಜಸುವರ್ಣಮ
ನೊಟ್ಟಜೆಯಿಂ ಕರ್ಕಶಸ್ವಭಾವರ ಮುಖಮುಂ
[1]ತೊ[1]ಟ್ಟು ಕಱಂಗುವ ತೆಱದಿಂ
[2]ತೊ[2]ಟ್ಟು ಕಱಂಗಿದುದು ನೋಳ್ಪಡತಿಶಯದಿಂದಂ ೯

ಬಡವಂ ನಿಧಾನಮಂ ಮ
ತ್ತಡಿಗಡಿಗಂ ನೋಡುತಿರ್ಪ ತೆಱದಿಂದರಸಂ
ಬಿಡದೆ ನೋಡುತುಮಿರ್ದಂ
ಸಡಗರದಿಂ ಗರ್ಭವತಿಯ ಗರ್ಭಸ್ಥಿತಿಯಂ ೧೦

ಕುಸುಮಮಂಜರಿಗೆ ಪರಿಮಳ
ದೆಸಕಂ ಭಾರಮನದೇನುಮಂ ಮಾಡದವೊಲ್
ಪೊಸತೆನಿಪ ಗರ್ಭವತಿಗಾ
ಶಿಶು ಭಾರಾಯಾಸದೊದವನಿನಿಸುಂ ಮಾಡಂ ೧೧

---

1 ಕೊ (ಕಚ) 2 ಕೊ (ಕಚ)

ಜನನಿಯ ಗರ್ಭದೊಳಿರ್ದುಂ
ಘನತೇಜಂ ಸುಖದ ಪೆರ್ಚನೀವುತ್ತಿರ್ದಂ
ದಿನನಾಯಕ ಕರವೆಂತ
ಬ್ಜಿನಿಗೆಂದುಂ ಸುಖದ ಪೆರ್ಚನೀವಂತೆ ಕರಂ ೧೨

ಚಂಪಕಮಾಲೆ

ಮೊದಲ ವಿಳಾಸದಿಂ ಪಿರಿದುಮುಗ್ಗಳಮಾದ ವಿಳಾಸಮಾದುದ
ಲ್ಲದೆ ಮಿಗೆ ಗರ್ಭಚಿಹ್ನದ ವಿಕಾರಮದಾಕೆಯ ದೇಹದಲ್ಲಿ ತೋ
ಱಿದುದಿನಿತಿಲ್ಲ ನಿರ್ವಿಕೃತಿಯಪ್ಪ ಜಿನಾರ್ಭಕನಿರ್ದ ತಾಣದ
ಲ್ಲುದಯಿಸಲಾರ್ಪುದೇ ವಿಕೃತಿರತ್ನಧರಾದ್ರಿ ವಿಕಾರಿಯಕ್ಕುಮೇ ೧೩

ಸೊಗಯಿಪ ಗರ್ಭದಲ್ಲಿ ನೆಲಸಿರ್ದಿನಿಸುಂ ಪೊರೆಯಂ ಮಲಂಗಳೊಳ್
ಮಿಗುವ ಮತಿಶ್ರುತಾವಧಿಗಳೆಂಬ ವಿಶೇಷಿತವ ತ್ರಿಬೋಧಮುಂ
ಬಗೆಯೊಳೆ ತಾಳ್ದಿದಂ ದಲುದಯಾದ್ರಿಕರಂ ಮಱೆಯಾದೊಡಂ ಪ್ರಭಾ
ಳಿಗಳನದಾವಗಂ ತರಣಿಮಂಡಳಮೆಯ್ದುಱೆ ತಾಳ್ದುವಂದದಿಂ ೧೪

ವಚನ: ಮತ್ತಮಾ ಭೂಪಾಳಕಂ ಕುಲವೃದ್ಧಾನುಗತಕ್ರಮವರ್ತನಾ ಪರಿಪಾಲನಾರ್ಥಂ ಪುಂಸವನಾದಿಕ್ರಿಯಾವ್ಯಾಪಾರಮುಂ ಕಾಲದೊಳ್ ನಿರ್ವರ್ತಿಸಲ್ವೇಳ್ಕುಮೆಂದು ಬಗೆಯುತ್ತುಮಿರಲಾತನೊಡನೆ ಸ್ಪರ್ಧೆಯೆಂದೆಂಬಂತೆ ವೃದ್ಧಶ್ರವಂ ಮುನ್ನವೆ ಬಂದು ತತ್ಪುಂಸವನಾದಿ ಕರ್ಮಮಂ ನಿರ್ಮಿಸಿ ಪೋದಿಂಬಳಿಯಂ

ಚಂಪಕಮಾಲೆ

ತನುನಯುಮೇಱೆ ಕೂಡೆ ಬಡವಾದುದು ಲೋಲವಿಶಾಲಚಾರುಲೋ
ಚನಯುಗಮೆಯ್ದೆ ಮಿಾಱೆ ಪೊಳಪೇಱದುದುಜ್ಜುಗಮಂದು ಗುಜ್ಜನಾ
ಯ್ತನುಪಮಗರ್ಭನಿರ್ಭರದ ಪೊತ್ತಿನೊಳೆ ಶುಭಚಿಹ್ನಮಾಗಿ ರಾ
ಜನ ಮನದಲ್ಲಿ ರಾಗರಸಪೂಗಮನಾಗಿಸುತಿರ್ದುದಾವಗಂ ೧೫

ಮತ್ತೇಭವಿಕ್ರೀಡಿತ

ಅಮರೇಂದ್ರಂ ಪೊಸತಾದಲಂಕರಣವಸ್ತ್ರಾನೀಕಮಂ ಭಕ್ತಿಯಿಂ
ದಮೆ ಕೊಟ್ಟಟ್ಟಲದಂ ನಿರೀಕ್ಷಿಪುದಱಿಂ ಕೊಂಡಾಡುವುತ್ಸಾಹದಿಂ
ದಮರಸ್ತ್ರೀಯರ ತೊತ್ತುಗೆಯ್ತಮನದಂ ಕಂಡುಂ ಮಹಾಸೇನಭೂ
ರಮಣಂ ಮಾಳ್ಪ ವಿಮೋಹದಿಂ ದ್ವಿಗುಣಿಸಿತ್ತಾ ದೇವಿಗಾನಂದಮುಂ ೧೬

ವಚನ: ಇಂತು ತುಷ್ಟೇತರೋತ್ಸಾಹದೊಡನೆ ಗರ್ಭಂ ಬಳೆಯೆವಳೆಯೆ ಮತ್ತಂ ಕೆಲವುದಿನಂಗಳ್ ಪೋದಿಂಬಳಿಯಂ ನವಮಾಸಂ ಪರಿಪೂರ್ಣತೆಯನೆಯ್ದಲೊಡಮೊಂದು ದಿವಸಮಾ ಮರಾಳಿಕಾಗಮನೆ ತನ್ನಯ ಮೃದುಪಾದತಳಂಗಳೆಂಬ ಕೆಂದಾವರೆಯರಲ್ಗಳ

ಲೀಲಾವಿನ್ಯಾಸವಿಶೇಷದಿಂ ಪಳಿಕಿನ ಕಟ್ಟಿದುಧರಣೀತಳಮಂ ರಾಗರಮಣೀಯತರೆಸಂ ನೂಡುತ್ತುಂ ನಿಷ್ಟಿಷ್ಟಾಷ್ಟಾಪದ ಪರಿಪುಷ್ಟಾಟ್ಟನಿವಾಸಕ್ಕೆ ಮೆಲ್ಲಮೆಲ್ಲನೆ ಬಿಜಯಂ ಗೆಯ್ವುದುಮಾಗಳ್ ಪೋಗುತ್ತುಂ ಬರುತ್ತುಮಲ್ಲಲ್ಲಿ ನೆರವಿಯಾಗಿರುತ್ತುಮಿರ್ದ ಬಹಳ ದಿವಿಜ ಮಹಿಳಾಸಂಕುಳದ ಸಂಭ್ರಮ ಸಮುತ್ಥಿತ ಕೋಳಾಹಳರವರಭಸದಿಂ ತುಂಬಿ ತುಳುಂಕಾಡುವ ಸೂತಿಕಾನಿಳಯಂ ಪ್ರತಿಧ್ವನಿಯ ನೆಪದಿಂ ಲೋಕತ್ರಯೈಕಮಂಗಳ ಮುದಯಮಂ ಮೂಜಿಂಜಗಕ್ಕೆ ಸಾಱುವಂತಿರ್ಪುದುಮನಂತರಂ ಮಾಘಮಾಸದ [1]ವಳ[1]ಕ್ಷ ಪಕ್ಷದೊಳಶೇಷಶೋಭನಾವಸಥಿಯಾದೇಕಾದಶೀತಿಥಿಯಲ್ಲಿ ಚಂದ್ರಮಂ ಸಮಸ್ತಕ್ಷೇಮ ಕ್ಷೇತ್ರಮಾದ ಪುಷ್ಯನಕ್ಷತ್ರ ಸಮಾಶ್ಲಿಷ್ಯಮಾಣನಾಗುತ್ತುಮಿರೆ ಸಕಳಾಭೀಷ್ಟಫಳಸಂಯೋಗ ಯೋಗ್ಯಮಾದ ಸೌಭಾಗ್ಯಯೋಗದೊಳಂ ನಿಖಿಳಕಲ್ಯಾಣಕರಣಪ್ರವೀಣಮಾದ ಗರಜಾ ಕರಣದೊಳಂ ವಿಪುಳಮಾಂಗಲ್ಯಸಾಕಲ್ಯಕ್ಕಾಧಾರಮಾದ ವಾಚಸ್ಪತಿವಾರದೊಳಿಂತು ಪಂಚಾಂಗಮುಂ ಶುಭಾಂಚಿತಮಾಗೆ ಪೂರ್ವಾಹ್ಣದ ಪೊತ್ತಿನೊಳಖಿಳಶುಭಗ್ರಹಂಗಳುದ ಗ್ರಸ್ಥಾನಂಗಳೊಳಿರುತ್ತುಮಿರೆ ಶುಭಮುಹೂರ್ತದಲ್ಲಿ ಪ್ರಾಚೀದಿಗ್ದೇವಿ ಜಗತ್ಪ್ರಕಾಶಕನಪ್ಪ ಸೂರ್ಯನನೆಂತು ಪಡೆವಳಂತಿರಾ ಸುವ್ರತಾಮಹಾದೇವಿಯುಂ ಲೋಕತ್ರಯವರ್ತಿ ಸರ್ವ ಜನವೃಂದಕೊವರ್ಗದಮೊಳೆ ಸಂಪಾದಿತಾನಂದಾಭಿನಂದನನಪ್ಪ ನಂದನನಂ ಪಡೆವುದು ಮಾಗಳ್

*

ಮಹಾಸ್ರಗ್ಧರೆ

ಸಿರಿಯಿಂ ಪೊಂಬಣ್ಣದಂತೊಪ್ಪುವ ತನುವಿನ ಸತ್ಕಾಂತಿಯಿಂ ಚೆಲ್ವನಂದಾ
ವರಿಸಿರ್ದಾ ಬಾಳಕಂ ಪಾವನಜನನಿಯ ಮುಂದೊಪ್ಪುತಿರ್ದಂ ಮಹಾದೇ
ವರ ಮೂರ್ಧಾರ್ಧೇಂದುಲೇಖಾಲಸಿತಕಳೆಯ ಮುಂದಿರ್ದ ಭಾಳಾಂತರಾಳ
ಸ್ಫುರದುದ್ಯತ್ತೇಜದಿಂದಂ ಥಳಥಳಿಪುರಿಗಣ್ಣೆಂಬಿನಂ ರಂಜಿಸುತ್ತುಂ ೧೭

ಉತ್ಪಲಮಾಲೆ

ಸಾಸಿರದೆಂಟುನೂಱು ಶುಭಲಕ್ಷಣಲಕ್ಷಿತಮಪ್ಪುದಂ ಮಹಾ
ಭಾಸುರ ಪುಣ್ಯಮೂರ್ತಿಯೆನಿಸಿರ್ದ ಜಿನಾರ್ಭಕಮೂರ್ತಿಯಂ ಸಮಂ
ತೋಸರಿಸಿರ್ದ ಕೌತುಕದೆ ಕಣ್ಣೆವೆಯಿಕ್ಕದೆ ನೋಡುತಿರ್ದ ಭಾ
ವಾಪಮುದಾಯಮಾದುದನಿಮೇಷಮಿಲ್ಲದೊಡಂ ಸುರತ್ವಮುಂ ೧೮

ಬಾಲನ ಮೆಯ್ಯ ಕಾಂತಿಲಹರೀಚಯದಿಂದುರು ಸೂತಿಕಾತಿ ರ
ಪ್ಯಾಲಯದಲ್ಲಿ ಕತ್ತಲೆ ಬಿಗುತ್ತಿರದೋಡಿದೊಡಂ ವಿಶೇಷದಿಂ
ಬಾಲಿಕೆ ಸಪ್ತದೀಪಿಕೆಗಳಂ ಮಿಗೆ ಕೇವಳ ಮಂಗಳಾರ್ಥಮಾ
ಗೋಳಿಯಮೆಯ್ದೆ [2]ಪೊಚ್ಚಿ[2]ಸಿದೊಡುಜ್ವಳಿಸುತ್ತುಮಿರ್ದವಾಕ್ಷಣಂ ೧೯

[1] ಬಲ (ಗಚ) ಬಹುಲ (ಜ) [2] ಪೆರ್ಚಿ (ಜ)
* ದೇವರ ಪ್ರಸೂತೋತ್ಸಾಹ ವ್ಯಾವರ್ಣನೆ (ಗ)

ವಚನ: ಆಪೊತ್ತಿನೊಳ್

ಚಂಪಕಮಾಲೆ

ಅನುರಕುಮಾರಿಕಾ ತರಳಲೋಚನದ ಪ್ರತಿಬಿಂಬ ದಂಭದಿಂ
ದನೆ ಧರಣೀಮಹಾರಮಣಿ ತನ್ನಯ ವಲ್ಲಭನಂ ನಿರೀಕ್ಷಿಪು
ದ್ಯನುಮೊಳನುಂದು ಕಣ್ದೆಱೆದಳೆಂಬವೊಲೊಪ್ಪುಮನಾಳ್ದುದಾ ಮಹೀ
ರಮಣನ ಮಂದಿರಾಂಗಣದ ರತ್ನವಿನಿರ್ಮಿತಭೂಮಿಮಂಡಳಂ ೨೦

ವಚನ: ಮತ್ತಮಾ ಜಿನರಾಜನ ಜನನಸಮಯದಲ್ಲಿ ರಾಜರಾಜಂ ಬಂದು ರತ್ನಪುರದ ತಾಣದೊಳೆಲ್ಲಿಯುಂ ಮಾಣಿಕದ ಮಳೆಯುಂ ಕಱೆಯುತ್ತುಮಿರೆ ಕಡುನಿಮಿರ್ದು ಪರಕಲಿಸಿ ಪೊಳೆವ ಕಿರಣಮನುಗುಳ್ವ ಮಣಿಗಳನೊಳಕೊಂಡ ಧರಣೀವಳಯಮಗಸ್ತ್ಯನಾಪೋಶನಂಗೊಂಡು ನೀರಿಂಗಿದ ರತ್ನಾಕರಮೆಂಬಂತೆ ಕಣ್ಗಿಂಬನಜನಿಸುತ್ತುಮಿರ್ದುದು ಬಳಿಯಂ ಪೊನ್ಮಳೆಯುಂ ಕಱೆಯುತ್ತುಮಿರಲಾ ವಿಶ್ವಂಭರೆ ಸುವರ್ಣಮನೊಳಕೊಂಡ ಕಾರಣಂ ಕ್ಷತ್ರಿಯಕುಲದಂತೆ ಪರಿಸಣ್ಯ್ಯಮಾನಮಾದುದು ಅನಂತರಮಲರ್ಮಳೆಯುಂ ಕಱೆಯುತ್ತುಮಿರಲಾ ನೆಲನೆಲ್ಲಂ ಸುಮನಃಪ್ರಸರದಿನೆಸೆವ ನಿಮಿತ್ತಂ ಸಜ್ಜನರ ಸಮೂಹದಂತೆ ಸಂಸೇವ್ಯಮಾನಮಾದುದು ತನದಂತರಮೊರ್ಮೊದಲೊಳೆಯ್ದೆ ದೇವದುಂದುಭಿಗಳ್ ಮೊಳಗುತ್ತುಮಿರಲಾ ಮಹೀತಳಮಪರಿಮಿತ ಶಬ್ದಸಂದರ್ಭದಿಂ ತುಂಬಿ ತುಳುಂಕಾಡುತ್ತುಮಿರ್ಪ ನಿಬಂಧನದಿಂ ಶಬ್ದಾದ್ವೈತವಾದದಂತೆ ರವಿಕಲ್ಪಶಬ್ದಮಯಮಾಗಿರ್ದುದು ಮತ್ತೆ ಕುಳಿರ್ವೆಲರೆಲ್ಲೆಡೆಯೊಳಂ ಮೆಲ್ಲಮೆಲ್ಲನೆ ತೀಡುತ್ತುಮಿರಲಾ ಧರಿತ್ರೀಚಕ್ರಂ ಸುಖಸ್ಪರ್ಶನಸಂಬಂಧಮನೊಳಕೊಂಡುದಱಿಂದಬಳಾಲಿಂಗಿತ ಕಾಮುಕನಂತೆ ಸುಖದ ಸೊಕ್ಕಿಂದುಕ್ಕುರ್ಗುತ್ತುಮಿರ್ದುದಿಂತು ಪಂಚಾಶ್ಚರ್ಯಮುಂ ಪ್ರಸಂಚಿಸುತ್ತುಮಿರೆ

ಮಹಾಸ್ರಗ್ಧರೆ

ಜಿನಪೂಜೋತ್ಸಾಹಕೋಳಾಹಳಮುಮನು ಮಹಾಪತ್ತನಸ್ಥಾನದೊಳ್ ತೆ
ಕ್ಕನೆ ತೀವಿರ್ದೆಲ್ಲಿಯುಂ ದಲ್ ಕುಡಿಯಡರಿ ನಿಮಿರ್ದೆಯ್ದೆ ತಾಂ ಪರ್ವಿ ಮತ್ತಂ
ವಿನುತೋದ್ಯನ್ಮೂರ್ತಿಯಂ ಕೊಂಡೊಸೆದು ನೆಲಸಿ ನಿತ್ಯತ್ವಮುಂ ತಾಳ್ದಿದತ್ತೆಂ
ಬಿನಮುತ್ಯಾಶ್ಚರ್ಯಮುಂ ಪುಟ್ಟಿಸಿದುದು ಪಿರಿದುಂ ಕಣ್ಗಳಿಂಗಂ ಮನಕ್ಕಂ ೨೧

ಕಂದ: ಲೋಕತ್ರಯಕ್ಕೆ ಭೂಷಣ
ದಾಕಳಸಮನಾಂತನರ್ಘ್ಯಜಿನಪತಿರತ್ನಮ
ದೇಕಂ ಪುಟ್ಟಿದ ಕಾರಣ
ಮಾ ಕಾಲಂ ರತ್ನಪುರಮದಾದುದು ಸಾರ್ಥಂ ೨೨

ವಚನ: ಅನ್ನೆಗಮಿತ್ತಲರ್ಥಾರ್ಥಿಯಪ್ಪನೊರ್ವಂ ಮೊಟ್ಟಮೊದಲೊಳ್ ಬೇಗದಿಂ ಪೋಗಿಯರಸಂಗೆ ಜಿನಜನ್ಮೋತ್ಸಾಹ ಪ್ರಥಮವಾರ್ತೆಯಂ ಪೇಳಲಬಳಾಹರ್ಷೋತ್ಕರ್ಷದಿಂ

ದುರ್ಲಲಿತಗಾತ್ರನಾಗಿ ಮತ್ತಮೆಲ್ಲಾ ಭೂವಲ್ಲಭರ ಮೌಳಿಗಳಲ್ಲಿ ಚೂಡಾಮಣಿಯುಂತೊಪ್ಪುತ್ತುಮಿರ್ಪ ಜ್ಞಾನಮುದ್ರೆಯೊಂದಲ್ಲದೆಲ್ಲಾ ವಸ್ತುಗಳನಂಗಚಿತ್ರಮುಂ ಕೊಟ್ಟು ಬಹಳಮಪ್ಪೈಶ್ವರ್ಯದಿಂ ತನ್ನಯ ಸಮಾನನಾಗಿ ಮಾಡಿ ಬಳಿಯಂ ಪುರದೊಳರಮನೆಯೊಳಮಗ್ಗಳಮಾಗಿ ಪಿರಿದು ಜನ್ಮೋತ್ಸಾಹಮಂ ಕೊಂಡಾಡಲ್ವೇಳ್ಪುದುಂ

ಮತ್ತೇಭವಿಕ್ರೀಡಿತ

ಕುಡಿಗಳ್ ಕಟ್ಟಿದವೆಲ್ಲಿಯುಂ ಮಣಿಮಯೋದ್ಯತ್ತೋರಣಶ್ರೇಣಿಗಳ್
ಬಿಡಪೆತ್ತಿರ್ದವು ಬೀದಿಬೀದಿಗಳೊಳಂ ರಂಗಾವಳೀಪಂತಿಗಳ್
ನಡುವಿಕ್ಕಿರ್ದವು ಕೂಡೆ ಬದ್ದವಣಮುಂ ಭೋರೆಂದು ದಲ್ ಬಾಜಿಸಲ್
ಗಡಣಂಗೊಂಡೆಡೆಯಾಡುತಿರ್ದುದದರಿಂದೊಳ್ ಶೃಂಗಾರಿತಸ್ತ್ರೀಜನಂ ೨೩

ಉತ್ಪಲಮಾಲೆ

ಒಂದೆಡೆಯಲ್ಲಿ ಪಾಠಕಜನಂ ಬಿಡದೋದುವ ಗದ್ಯಪದ್ಯಮಂ
ನಂದಿತ ಮಂಗಳಧ್ವನಿಗಳುಂ ದಲದೊಂದೆಡೆಯಲ್ಲಿ ಯೋಗ್ಯರುಂ
ಗೊಂದಣಿಸಿರ್ದು ಘೋಷಿಸುವ ಮಂತ್ರನಿನಾದಮುಮೆಯ್ದೆ ಪೆರ್ಚಿ ಭೋ
ರೆಂದುಲಿಯಲ್ಕದಾಯ್ತು ಕರೆವಂತಿರೆ ತಾಂ ತ್ರಿಜಗತ್ಪುರಂಗಳಂ ೨೪

ಚಂಪಕಮಾಲೆ

ಗಗನಮನೆಯ್ದೆ ಚುಂಬಿಸುತುಮಿರ್ದ ಲಸದ್ಧ್ವಜಚೂಳಿಕಾಪಟಾ
ಳಿಗಳಿನತೀವ ಪಲ್ಲವಿತಮಾಗೆಸೆವಾ ಪುರದಲ್ಲಿ ಭಾಸ್ಕರಂ
ಸೊಗಯಿಪ ತನ್ನ ಪಾದಮುಮನಿಕ್ಕಿದುದಿಲ್ಲ ಮಚಂದನಾಂಬುವಂ
ಮಿಗೆ ತಳಿಯಲ್ ದಲಾದ ಕೆಸಱಿಂಗಿರದಂಜಿದನೆಂಬ ಮಾಳ್ಕೆಯಿಂ ೨೫

ಕಂದ: ಫಳಿಕಿಂ ಸಮೆದ ಸುಸೌಧಂ
ಗಳೊಳಂ ಮಾರ್ಪೊಳೆದ ಧವಳಕೇತುಪಟಂಗಳ್
ತಳೆದುವು ಚೆಲ್ವಂ ರಜತಾ
ಚಳದೊಳ್ ಮಿಗೆ ಪೊಳೆವ ಬಿಳಿಯ ಮುಗಿಲೆಂಬಿನೆಗಂ ೨೬

ಚಂಪಕಮಾಲೆ

ಮನೆಮನೆತಪ್ಪದೆಲ್ಲೆಡೆಯೊಳಂ ವಿವಿಧಾತತವಾದ್ಯನಾದಮುಂ
ಘನಲಯ ತಾಳನಾದದೊಡಗೂಡಿದ ಮಂಗಳಗೀತನಾದಮುಂ
ಮನಮನಲರ್चलುಣ್ಮೆ ಸೆಱಿಪೊಣ್ಮೆ ವಿಭಾಸಿತವಾರನಾರಿಯರ್
ವಿನುತಮೆನಿಪ್ಪ ನೃತ್ಯಮನೊಡರ್ಚಿ ದಲಾಡುತುಮಿರ್ದರರ್ಥಿಯಿಂ ೨೭

ಕಂದ: ಸಂದಣಿಸಿ ಕುಣಿವ ಲಲನಾ
ವೃಂದ ಪ್ರತಿಬಿಂಬಮೆಲ್ಲಿಯುಂ ಪೊಳೆಯಲ್ಕಾ
ನಂದದಿನನೇಕರೂಪಿನೊ
ಳೊಂದಿ ಪುರೀಲಕ್ಷ್ಮಿ ಕುಣಿವವೊಲ್ ಕಣ್ಗೆಸೆಗುಂ ೨೮

ವಚನ: ಅದಲ್ಲದೆಯುಂ

ಉತ್ಪಲಮಾಲೆ

ಎಮ್ಮಯ ವಲ್ಲಭರ್ ತ್ರಿದಿವದಿಂದಿರದೀಗಳೆ ಬಂದು ಪೆರ್ಮೆ ಮ
ತ್ತಿಮ್ಮಡಿಯಾಗೆ ಕೂಡಿದಪರೆಂದು ವಿಶೇಷಿತಪುಣ್ಯತೀರ್ಥದೊಳ್
ಸಮ್ಮದದಿಂದೆ ಮಿಂದವೆನೆ ದಿಕ್ಕುಗಳೆಲ್ಲಮತಿಪ್ರಸನ್ನತಾ
ಧರ್ಮಿಗಳಾಗಿ ನಿರ್ಮಳತೆಯಂ ಪಡೆದೊಪ್ಪುತುಮಿರ್ದವಾಕ್ಷಣಂ ೨೯

ನೀರಜಮಾಯ್ತು ಭೂಮಿ ಸುಜನೋತ್ಕರದಂತೆ ಸರೋವರಂಗಳುಂ
ಸಾರತೆವೆತ್ತು ಕೂಡೆ ತಿಳಿದಿರ್ದುವು ಲಾಲಿತಸನ್ಮನಂಗಳಂ
ತಾರಯೆ ವಹ್ನಿ ದಕ್ಷಿಣದೊಳಂ ಸುಳಿದಿರ್ದುದು ಪಾಂಚಜನ್ಯದಂ
ತಾ ರಮಣೀಯಮಾಯ್ತು ಸುರಭಿತ್ವಮನಾಂತುದು ಧೇನುವೆಂಬಿನಂ ೩೦

ಕಂದ: ನಿರ್ಮಳಮಾದುದು ಗಗನಮು
ದೊರ್ಮೊದಲೊಳಮಿಂದುಕಾಂತಶಿಲೆಯಂತೆ ಕರಂ
ಪೆರ್ಮೆಯ ಪಂಚವಿಭೂತಿಗ
ಳಂ ಮಿಗೆ ತಾಳ್ದಿದವು ಪಂಚಭೂತಂಗಳವುಂ ೩೧

ವಚನ: ತನದನಂತರಂ

ಕಂದ: ಚಿರಕಾಲದೆ ಸೆಱೆಯೊಳಗಿ
ರ್ದರಿರಾಯರ್ ಮುಖ್ಯರಾದ ಸೆಱೆಯೆಲ್ಲಮುಮಂ
ನರಪಂ ಬಿಡಿಸಿದೊಡಾಗಳ್
ಪರೆದುದು ಮಿಗೆ ಮೆಲ್ಲಮೆಲ್ಲನಡಿಯನಿಡುತ್ತುಂ ೩೨

ಎಲ್ಲಾ ಪ್ರಜೆಗಳ್ಗಂ ತ
ಳ್ವಿಲ್ಲದೆ ಸಂಪತ್ತಿಯುಂ ಮಹಾರೋಗ್ಯಮುಮಾ
ಯ್ತಲ್ಲಿ ಜಿನಜನನಸಮಯದೊ
ಳೆಲ್ಲಂ ಸುಖಕಾರಣಂ ದಲಾಗದುದುಂಟೇ ೩೩

ವಚನ: ಇಂತು ಸಕಳಜನಮನೋನಯನ ಸಮಾಕರ್ಷಣ ವಿದ್ಯಾದೇವತೆಯಂತೆ
ಹೃದ್ಯಮಯಮಾಗಿರ್ಪುದುಂ

ಕಂದ : ಪಿರಿದಾದುತ್ಸವರಾಶಿಯ
ನರವಿಂದಜನಲ್ಲಿ ಬೈಕೆಯಾಗಿರಿಸಿದವೊಲ್
ಪುರಮದು ನಿರವಧಿ ನಿರುಪಮ
ಪರಮೋತ್ಸವಭರಿತಮಾಗಿ ಪಡೆದುದು ಚೆಲ್ವಂ ೩೪

ವಚನ : ಮತ್ತಂ ದೇವಾಧಿದೇವನ ಜನನಮಂ ಚತುರ್ವಿಧದೇವರ್ಕಳೆಲ್ಲಮಱಿ ವಂತಿರಾ ಮಹಾನುಹಿಮನ ನಿರತಿಶಯಸುಕೃತಮೆಂಬ ದೂತಂ ಪೋಗಿ ತನ್ನಿವಾಸ ದೊಳಸಾಧಾರಣ ಲಕ್ಷಣಮಂ ಪ್ರೇರಿಸಿದನೆಂಬಂತಿರಿಂತಪ್ಪ ಚಿಹ್ನಂಗಳೊಗೆದವವೆಂತೆಂದೊಡೆ

ಕಂದ : ಭವನಾಮರ ಲೋಕದೊಳೂ
ದುವರನಪೇಕ್ಷಿಸದೆ ಶಂಖನಿನದಂ ದಶದಿ
ಗ್ವಿರವನ್ನಾವರಿಸಿತ್ತಭಿ
ನವಪುಣ್ಯನ ಜನಿಯನಱಿದರವರದಱಿಂದಂ ೩೫

ವ್ಯಂತರಲೋಕದೊಳಂ ಕರ
ಸಂತಾಡನರಹಿತಮಾಗಿ ಡಿಂಡಿಮರವಮಾ
ಶಾಂತದೊಳೆಲ್ಲೆ ಡೆಯೊಳವೋ
ರಂತಿರೆ ಪರಕಲಿಸಲಱಿದರವರದಱಿಂದಂ ೩೬

ಜ್ಯೋತಿರ್ಲೋಕದೊಳಂ ಸಲೆ
ಸಾತಿಶಯಂಬಡೆದು[1]ದುಚ್ಚ[1]ಸಿಂಹನಿನಾದಂ
ಘಾತಗುಣನಿಳಯನುದಯಮ
ನೀತೆಱದಿಂದಱಿದರಾಗಳಾ ಜ್ಯೋತಿಷ್ಕರ್ ೩೭

[2]ಕಲ್ಪಾವಾಸಿಗ[2]ಲೋಕದೊ
ಳಲ್ಪೇತರವಮಾ ಸುವರ್ಣಘಂಟಾಜಾಳಂ
ಶಿಲ್ಪಿಕರಸ್ಪರ್ಶನ ಪರಿ
ಕಲ್ಪನಮಿಲ್ಲದೆಯುಮುಲಿಯಲದಱಿಂದಱಿದರ್ ೩೮

ವಚನ : ಇಂತೀ ತೆಱದ ಕುಱುಪುಗಳಿಂ ನಾಲ್ಕುಪರಿಯಾದ ದೇವರ್ಕಳೆಲ್ಲಂ ಧರ್ಮ ಜಿನನಾಥನುತ್ಪತ್ತಿಯಮೊರ್ಮೊದಲೆಯಱಿ[3]ತ[3]ತೀವ ಭಕ್ತಿಭಾರಭರದಿಂದೆಂಬಂತಿರವನತ ಮಸ್ತಕರಾಗಿ ಕೈಗಳಂ ಮುಗಿದಾನಂದದೊಳೊಂದಿರ್ಪುದುಂ ಬಳಿಯಂ ಸೌಧರ್ಮಕಲ್ಪದ ಸುಧರ್ಮಾಪರಿಸರದೊಳ್

[1] ದೆಯ್ದೆ (ಜ) [2] ಕಲ್ಪವಾಸಿಕರ (ಕಗಚ) [3] ದ (ಜ)

ಕಂದ : ಸುರರೊಲವಿಂ ಸುರಿಯದೊಡಂ
ಸಿರಿದಾಗಿಯೆ ಕೊಳ್ವ ಜೆಲ್ವ ಪೂಮಳೆಯುಂ ಕಂ
ಡರಿದಪ್ಪ ವೈವಿಗುಂದ
ಚ್ಚರಿವಟ್ಟುದು ಶಕ್ರಮುಖ್ಯದೇವಸಮೂಹಂ ೩೯

ವಚನ : ತದನಂತರಂ

ಚಂಪಕಮಾಲೆ

ಉದಯಿಸೆ ಮೂಜಗಕ್ಕೊಡೆಯನುಂ ಪರಮಾತಿಶಯಪ್ರಭಾವ ಸಂ
ಪದನುಮೆನಿಪ್ಪ ಧರ್ಮಜಿನಪಂ ಸಲೆ ಮತ್ತುಳಿದನ್ಯರಿಂಗದೇ
ಕೊದವಿದ[1][ಡಿದ್ಧತಾ][1]ಮದ ವಿಡಂಬನಮೆಂತು ತದೀಯಶಕ್ತಿ ಬಂ
ದೊದೆದವೊಲಾಕ್ಷಣಂ ನಡುಗಿದತ್ತು ಸುರಾಧಿಪಸಿಂಹವಿಷ್ಟರಂ ೪೦

ಮತ್ತೇಭವಿಕ್ರೀಡಿತ

ನಿಜಸಿಂಹಾಸನಕಂಪಕಾರಣಮುಮಂ ಸಾಹಸ್ರನೇತ್ರಂಗಳ
ವ್ರಜದಿಂ ಕಾಣದೆ ವಿಸ್ಮಯಾಕುಳಿತನಾಗುತ್ತಾವಧಿಜ್ಞಾನಮೆಂ
ಬ ಜನಸ್ತುತ್ಯವಿನೇತ್ರಮಂ ತೆಱೆದು ಕಂಡಂ ವ್ಯಕ್ತಮಾಗಂದು ಧ
ರ್ಮಜಿನಾಧೀಶ ಸಮುದ್ಭವಸ್ಥಿತಿಯನಾ ದೇವೇಂದ್ರನಾನಂದದಿಂ ೪೧

ವಚನ : ಅದೞಿಂ ಪದಿನಯ್ದನೆಯ ತೀರ್ಥಂಕರನುದಯಮನತಿವಿಸ್ತಾರದಿಂದಱಿದು ಜೇಗದಿಂ ಸಿಂಹಾಸನದಿಂದೆಳ್ದು ಕೈಗಳಂ ಮುಗಿದು ನೊಸಲ್ಗೆ ತಂದಾ ದಿಕ್ಕಿಂಗಭಿಮುಖನಾಗಿ

ಕಂದ : ಏಳಡಿಯಂ ನಡೆದತ್ತಲ್
ಮೇಲೆನೆ ಜಯಜಯನಿನಾದಮಂ ಮಾಡುತ್ತುಂ
ಲೀಲೆಯಿನೆಱಗಿದನಿಂದ್ರಂ
ಪಾಲಿತಘನಭಕ್ತಿಭಾರದಿಂದೆಂಬಿನೆಗಂ ೪೨

ವಚನ : ಮತ್ತಂ

ಕಂದ : ಜನ್ಮಾಭಿಷೇಕಮಂ ಮಿಗೆ
ಮನ್ಮಥಹರಣಂಗೆ ಮಾಳ್ಪ ಬಗೆಯಿಂದಂ ದಿವಿ
ಷನ್ಮಂಡಳಮಱಿವಂತಿರೆ
ಸನ್ಮಣಿಯಾನಂದಭೇರಿಯಂ ಪೊಯ್ಸಿಸಿದಂ ೪೩

---

1 ಡೀದ್ರತಾ(ಕಗಚ)ದಿವ್ಯತ (ಜ)

ಸ್ರಗ್ಧರೆ

ಆ ಭೇರೀನಾದನಾದಂ ಸಕಳಸುರವಿಮಾನಪ್ರತಾನೋರುರಂಧ್ರಾ
ಳೀ ಭೋಗಾಭೋಗದೊಳ್ ತಿಕ್ಕನೆ ಭರಸದಿಂ ತೀವಿ ಪೆರ್ಚಿರ್ದುದೆತ್ತಂ
ಶೋಭಾವದ್ದೇವವೃಂದಂಗಳನುಜಿತ ಕರೆಯುತ್ತಿಂಬವೊಲ್ ಬೇಗದಿಂದೆ
ಸ್ವರ್ಭೂವಿಸ್ಥಾನದೊಳ್ ವ್ಯಾಪಿಸಿದುದು ಪಿರಿದಾಶ್ಚರ್ಯಮಂ ಪುಟ್ಟಿಸುತ್ತುಂ ೪೪

ವಚನ: ಅನಂತರಂ ಭವನಾಮರಲೋಕದಿಂ ಚಮರವೈರೋಚನ ಪ್ರಮುಖ ಚತ್ವಾರಿಂಶದಿಂದ್ರರ್ ಮುಖ್ಯಮಾದ ಭವನವಾಸಿದೇವರ್ಕಳೆಲ್ಲಂ ವ್ಯಂತರಲೋಕದಿಂ ಸತ್ಪುರುಷ ಮಹಾಪುರುಷ ಪುರಸ್ಸರ ದ್ವಾತ್ರಿಂಶದಿಂದ್ರರಾದಿಯಾದ ವ್ಯಂತರದೇವರ್ಕಳೆಲ್ಲಂ ಜ್ಯೋತಿರ್ಲೋಕದಿಂ ಚಂದ್ರಸೂರ್ಯಮುಖರರಾದ ಜ್ಯೋತಿಷ್ಕದೇವರ್ಕಳೆಲ್ಲಂ ಕಲ್ಪಾಮರಲೋಕಂಗಳಿಂದೀ ಸನತ್ಕುಮಾರ ಮಾಹೇಂದ್ರಪ್ರಭೃತಿ ಚತುರ್ವಿಂಶತೀಂದ್ರರ್ ಮುಂತಾದ ಕಲ್ಪವಾಸಿ ದೇವರ್ಕಳೆಲ್ಲಂ ನಿಜನಿಜದೇವಿಯರೊಡಗೂಡಿ ಮಣಿಮಯ ಷೋಡಶಾಭರಣ ಪರಿಭೂಷಿತ ದಿವ್ಯದೇಹರಾಗಿ ಸಾಮಾನಿಕತ್ರಯಸ್ತ್ರಿಂಶದಾತ್ಮರಕ್ಷಲೋಕಪಾಳಕ ಪ್ರಕೀರ್ಣಕಾಭಿಯೋಗ್ಯ ಕಿಲ್ಬಿಷದೇವಪ್ರಮುಖ ಪರಿವಾರ ಸೇನಾಸಮೂಹಂಬೆರಸು ತಂತಮ್ಮ ವಾಹನಂಗಳನೇಱಿ ಮಹೋವೇಗದಿಂದೆಯ್ದೆ ಬಂದು ಸೌಧರ್ಮೇಂದ್ರನ ರುತುವಿಮಾನದ ಮುಂಪೆ ಸಂದಣಿಸಿ ಗೊಂದಣಂಗೊಂಡು ನಿಂದಿರ್ಪುದುಂ

ಕಂದ: ದಶದಿಕ್ಪಾಲಕರೆಯ್ದಿದ
ರೊಸೆದು ಸ್ವಾಯುಧವಧೂಸುಚಿಹ್ನಸಮೇತರ್
ವಿಸುವ ಪರಿವಾರಮುಂ ಬೆರ
ಸೆಸೆವ ಸ್ವಸ್ವೋರುವಾಹನಾರೂ[1]ಢರ್ ತಾಂ[1] ೪೫

ವಚನ: ಅಂತವಿಲಂಬನದಿಂ ನೆರೆದು ಬಂದ ನಿರವಶೇಷಿತಾಂಬರಚರ ಚಮೂ ವಿಚಿತ್ರ ಶೋಭಾಡಂಬರ ಕರಂಬಿತ ವಿಮಾನ ನಿಕುರುಂಬಂಗಳ ಪಂತಿಗಳ್ ತಿಂತಿಣಿಗೊಂಡೊಂದೆ ತಾಣದೊಳ್ ನಿಲಲಂದು ಧರ್ಮಜಿನನಾಥನ ಜನ್ಮಾಭಿಷವಣಕಲ್ಯಾಣಕರಣಕಾರಣಂ ನಿರ್ಮಾಣರಣರಂಕ ಪರಿಕ[2]ಳಿ[2]ತನಾದ ಗೀರ್ವಾಣರಮಣನ ಪೂಜಾವೀಡೆಂಬಂತೆ ಕಣ್ಗೊಂಡಿಪ್ಪುದುಂ

ಮತ್ತೇಭವಿಕ್ರೀಡಿತ

ಪಿರಿದುಂ ತೋರಿದವಾದ ರತ್ನಮಯಘಂಟಾಚಕ್ರವಾಳಂಗಳಿಂ
ವರಮುಕ್ತಾಮಯಮಾಲಿಕಾವಿಸರ ನಾನಾಚಿತ್ರಲಂಬಂಗಳಿಂ
ಪರಿತಪ್ರೋತ್ರಮ ಹೇಮಕಿಂಕಿಣಿಗಳಿಂ ಸದ್ಘಂಟಿಕಾಪೇಟದಿಂ
ಕರಮೊಪ್ಪಂಬಡೆದಿರ್ದ ದೇವಗಜಮಾಗಳ್ ಬಂದುದಾನಂದದಿಂ ೪೬

[1] ಡಾರ್ಥಂ (ಜ) [2] ಣಿ (ಕಜ)

ವಚನ : ಮತ್ತಮೈರಾವತಕ್ಕೆ ಮೂವತ್ತೆರಡು ಮೊಗಂಗಳಾ ಮೊಗಂಗಳೊಂದೊಂದಕ್ಕೆಂಟೆಂಟು ದಂತಂಗಳಾ ದಂತಂಗಳೊಂದೊಂದಱೊಳೊಂದೊಂದು ಸರೋವರಂಗಳಾ ಸರೋವರಂಗಳೊಂದೊಂದಱೊಳೊಂದೊಂದು ಪದ್ಮಿನೀವಲ್ಲಿಯಾ ಪದ್ಮಿನೀವಲ್ಲಿಯೊಂದೊಂದಱೊಳ್ ಮೂವತ್ತೆರಡು ವಿಕಚಕಮಳಂಗಳಾ ಕಮಳಂಗಳೊಂದೊಂದಕ್ಕೆ ಮೂವತ್ತೆರಡೆಸಳ್ಗಳಾ ಎಸಳ್ಗಳೊಂದೊಂದಱೊಳ್ ಮೂವತ್ತಿರ್ವರಮರಕುಮಾರಿಯರ್ ತಾಂಡವಾಡಂಬರಮಂ ವಿಡಂಬಿಸುತ್ತುಮಿರ್ಪರಿಂತು ವಿಗುರ್ವಣೆಯಗುರ್ವಿಂದುರ್ವಿ ಕೊರ್ವಿದೈರಾವಣ ಮಹಾವಾರಣಂ ಬಂದು ನಿಂದಿರ್ಪುದುಂ

ಮಹಾಸ್ರಗ್ಧರೆ

ಧರಣೀಂದ್ರಶ್ರೇಣಿ ಮೇಗಣ್ಗಡರಿದ ತೆಱದಿಂ ಲಂಬಿಸುತ್ತಿರ್ದ ಮೂವ
ತ್ತೆರಡುಂ ಶುಂಡಾಲದುಂಡಂಗಳಿನತಿಸಿತಮೇಘಂಗಳೊಡ್ಡಂಬಿನಿಂ ಸೀ
ಪರಕಂ[1]ಪೋ[1]ತ್ಕರ್ಷತಾಳಂಗಳಿನಱೆ ಗಗನಾಭಾಗಮಂ ತುಂಬಿಕೊಂಡಿ
ರ್ದುಱು ಭಾಸ್ವತ್ಕಾಯದಿಂದದ್ಭುತಮನೊಡರಿಸಿತ್ತಭ್ರಮೂಜಾತೀವಿಶೇಷಂ ೪೭

ವಚನ : ಅನಂತರಂ

ಚಂಪಕಮಾಲೆ

ಪಿರಿದುಮನರ್ಘ್ಯರತ್ನಮಯಷೋಡಶಭೂಷಣಮೆಲ್ಲಮಂ ಮಹಾ
ಕಿರಣಗಣಂಗಳಿಂ ಕೆದಱುತಿರ್ದುದನೊಯ್ಯನೆ ತೊಟ್ಟು ಚಿತ್ರಬಂ
ಧುರತರವಸ್ತ್ರಮಂ ಮುದದಿನುಟ್ಟು ಮಹಾಶಚಿಯುಂ ಸುರೇಂದ್ರನುಂ
ಸುರಕರಿಯಂತಿಕಕ್ಕೆ ನಡೆತಂದರತೀವ ವಿಚಿತ್ರವೇಷದಿಂ ೪೮

ಉತ್ಪಲಮಾಲೆ

ಸಾಸಿರಕಣ್ಗಳೆಲ್ಲಮುಮನೊರ್ಮೊದಲೊಳ್ ತೆಱೆದಾ ಪ್ರಭಾಳಿಯಿಂ
ಲೇಸೆನೆ ಚಿತ್ರಿಪಂತೆ ಬಿಳಿಯಾನೆಯ ವಿಸ್ಮಯಕಾರಿರೂಪಮಂ
ವಾಸವನೆಯ್ದೆ ನೋಡಿ ತಲೆಯಂ ನೆಱೆತೂಗಿರದೇಱಿದಂ ಸಮು
ದ್ಭಾಸಿ ಸಿತಾತಪತ್ರತತಿಗಳ್ ಪುದಿಯಲ್ ನಭದಂತರಾಳಮಂ ೪೯

ಚಂಪಕಮಾಲೆ

ಮಣಿಮಯಪಾರಿಹಾರ್ಯರವ ಕಿಂಕಿಣಿ ಕಂಕಣಮುಖ್ಯಚಾರುಭೂ
ಷಣನಿನದಂಗಳುಣ್ಮೆ ನೆಱೆ ಪೊಣ್ಮೆರೆ ಕೋಮಳದೇಹಕಾಂತಿಗಳ್
ಕಣಿಸಡರ್ದೇಱಲಾಗಸಮುಮಂ ಮುದವೇಱಿರೆ ಚಿತ್ತವೃತ್ತಿಯಿಂ
ಪ್ರಣುತೆ ಶಚೀಮಹಾಸತಿ ದಲೇಱಿದಳಂದು ಸುರೇಂದ್ರದಂತಿಯಂ ೫೦

ವಚನ : ಇಂತು ನಾನಾವಿಧ ಪರಿಲಂಬಮಾನಚಂಚಚ್ಚಾರುಚಾಮೀಕರಚಾಮರಸಂಚಯಂಗಳಿಂ ಪಲವುಂ ತೆಱದ ಪಲ್ಲವ ಸತ್ತಿಗೆಗಳ ಮೊತ್ತದಿಂದಳಂಕೃತಮಾ

[1] ಪ (ಜ)

ದ್ವೈರಾವಣ ಮಹಾವಾರಣಮಂ ದೇವೇಂದ್ರನಿಂದ್ರಾಣಿ ಸಮೇತನಾಗಿ ಸಮಾರೋಹಣಂಗೆಯ್ದು ಸಿಂಧುರಸ್ಕಂಧದೊಳ್ ಕುಳ್ಳಿರ್ಪುದುಂ

ಚಂಪಕಮಾಲೆ

ದಿವಿಜಗಜಂ ಜಳಜ್ಝಳಝಳೆಂದುರುಚಂಚಳಕರ್ಣಪಾಳಿಕಾ
ನಿವಹಮನೆಯ್ದೆ ಬೀಸೆ ಮದಗಂಡವಿಮಂಡಳಮಂಡಿತಾಳಿಗಳ್
ಜವದೊಳಮೆಳ್ದು ಮೇಗಡರುತಿರ್ದುದು ಕಣ್ಗೆಸೆದತ್ತು ಪಾಪದು
ರ್ಲವಮಿರದಂಜಿ ಜೈನಪಥವರ್ತಿಗಳಂ ನೆಱೆಬಿಟ್ಟು ಪೋಪವೊಲ್ ೫೧

ವಚನ: ಇಂತು ಚತುರ್ನಿಕಾಯಾಮರೇಂದ್ರಪುರಸ್ಸರಂ ಸೌಧರ್ಮೇಂದ್ರನತೀವ ರುಂದ್ರಲೀಲೆಯಿನಲ್ಲಿಂದಂ ತಳರ್ವುದುಂ

ಸ್ರಗ್ಧರೆ

ನಾನಾಜಾತೀಯ ಗಂಭೀರ ಮಣಿಮಯಮಹಾತೂರ್ಯಸಂದೋಹಭೂರಿ
ಧ್ವಾನಂ ತಳ್ಪೊಯ್ಯೆ ದಿಗ್ಭಿತ್ತಿಗಳನಮಿತಸತ್ಕಾಹಳಾವತ್ಕಳಾಪ
ಸ್ವಾನಂ ಕೈಗಣ್ಮಿ ಪೊಣ್ಮುತ್ತಿರೆ ಜಯಜಯವೆಂಬುದ್ಘನಿರ್ಘೋಷಣಾಸಂ
ತಾನಂ ಭೋರೆಂದು ಪೆರ್ಚುತ್ತಿರೆ ಮಿಗೆ ನಡೆಗೊಂಡಂ ನಿಳಿಂಪಾಧಿರಾಜಂ ೫೨

ಮತ್ತೇಭವಿಕ್ರೀಡಿತ

ಗಗನಂ ತೆಕ್ಕನೆ ತೀವೆ ಚಿತ್ರರುಚಿರಶ್ವೇತಾತಪತ್ರಂಗಳಿಂ
ಸೊಗಸಂ ಬೀಱುವ ರತ್ನದಂಡ ಚಮರೀಜಶ್ರೇಣಿ ಸಂಚಾರದಿಂ
ದೊಗೆವುತ್ತಿರ್ದುರುಮಂದಗಂಧವಹನಿಂದಂ ಪೆರ್ಚಿ ತೀವ್ರಾನಿಳಂ
ಗಗನಂ ತಾಂ ತೆಱಪಿಲ್ಲಮೆಂಬ ತೆಱದಿಂ ಬಂದತ್ತದೊಂದೊಪ್ಪದಿಂ ೫೩

ಉತ್ಪಲಮಾಲೆ

ಬಾಳದ ಬೇರ್ಗಳಿಂ ಸಮೆದ ಬಾಳಮನೋಹರತಾಳವೃಂತಮಂ
ಲೀಲೆಯೊಳೊಪ್ಪದಿಂ ಪಿಡಿದ ದೇವವಿಳಾಸವತೀಜನಂಗಳಂ
ದೋಳಿಯೆ ನಿರ್ಜರಾಧಿಪತಿಯಿಕ್ಕೆಲದೊಳ್ ನಡೆತಂದರುತ್ಕಟಾ
ಕ್ಷಾಳಿಗಳಿಂ ಕರಂ ಧವಳಿಸಿತ್ತುಮಶೇಷದಿಗಂತರಾಳಮಂ ೫೪

ವಚನ : ಮತ್ತಂ ದೇವೀಜನಂ ದೇವಾಧಿಪನ ಸುತ್ತಲುಮತ್ಯುತ್ತಮ ವಿಳಾಸರಸಂ ತುಂಬಿ ತುಳ್ಕಾಡುತ್ತುಮಡಿಗಡಿಗಳನಿಡುವ ಪದಪದದೊಳ್ ಕೊರಳ್ಗೞೊಳಿಕ್ಕಿದ ಮಣಿಮಯ ತೋರಹಾರಭಾರಾಗ್ರಂಗಳ ಬಳಗಂ ತಂತಮ್ಮೊಳೊಂದೊಂದಱೊರಸೊರಸಿಂ ಪುಟ್ಟಿದ ಝಣಝಣ ಮೆಲ್ಲುಲಿಯಿಂ ವಾಚಾಳಿತಂಗಳಾದ ತೋರಬಟ್ಟಮೊಲೆಗಳ್ ತಮ್ಮೊಳೊಂದೊಂದು ಮುಟ್ಟಿ ಬಿಣ್ಪಿಂದಳ್ಳಾಡುತ್ತುಮಿರ್ದು ಸಮುಲ್ಲಾಸಿಲಾಸ್ಯರಸಪೇಶಲ ಕಾಂಸ್ಯತಾಳಲೀಲಾಸಮಾಶ್ರಿತಂಗಳಾದುವೆಂಬ ಶಂಕೆಯನಂಕುರಿಸುತ್ತುಮಿರೆ ಮೊತ್ತಗೊಂಡು ಮೆಲ್ಲಮೆಲ್ಲನೆ ನಡೆವಾಗಳ್

ಚಂಪಕಮಾಲೆ

ತೊಡಿಗೆಯ ತೋರಮುತ್ತುಗಳ ಮೊತ್ತಮೆ ತಾರೆಗಳಂತೆ ಕೂಡೆ ಸಂ
ಗಡಿಸಿರೆ ವಕ್ತ್ರಮಂಡಳಿಗಳುದ್ಧ ಕಳಾಧರಮಂಡಳಂಗಳಂ
ತೊಡರಿಸೆ ಜೆಲ್ವನೆಯ್ದೆ ದರಹಾಸವಿಳಾಸಮೆ ಚಂದ್ರಿಕೌಘಮಂ
ಬಿಡದುಱೆ ಪೆರ್ಚಿಸಲ್ ಪಗಲೊಳಂ ಪಡೆದತ್ತದು ರಾತ್ರಿಯಂದಮಂ ೫೫

ಮತ್ತೇಭವಿಕ್ರೀಡಿತ

ಪಿರಿದುಂ ನಾಟ್ಯಮನಾಡುತಿರ್ದಮರನಾರೀರತ್ನಭೂಷಾವಳೀ
ಕಿರಣಂ ಚಂಚದಪಾಂಗಕಾಂತಿ ನಿಕುರುಂಬಂ ಕುಂತಳಚ್ಛಾಯೆಯುಂ
ಭರದಿಂದಂ ಪುದಿದೆಯ್ದೆ ರಂಜಿಸುತುಮಿರ್ದತ್ತಾಕ್ಷಣಂ ಬಾಳಭಾ
ಸ್ಕರತೇಜಂ ಬೆಳುದಿಂಗಳುಂ ತಮಮುಮೊಂದಾಗಲ್ಲಿ ತೋರ್ಪಂದದಿಂ ೫೬

ದಿವಿಜಸ್ತ್ರೀಯರದೊರ್ವರೊರ್ವರ ತನೂಸಂಘಟ್ಟದಿಂ ರತ್ನಹಾ
ರವರಂಗಳ್ ಪಱಿದೆಯ್ದೆ ಚಲ್ಲಿ ಪೊಳೆಯುತ್ತುಂ ವ್ಯೋಮದಿಂ ಬಿಳ್ದು ತಾಂ
ಕವಿಯುತ್ತಿರ್ದವು ತಾಳ್ದಮಂದು ಸೊಗಸಂ ದೇವೇಭಪಾದಪ್ರಭಾ
ರವಶೋಚ್ಚೂರ್ಣಿತ ತಾರಕಾವಿತತಿಗಳ್ ವ್ಯೋಮಾಗ್ರದಿಂ ಬೀಳ್ವವೊಲ್ ೫೭

ಕಂದ: ಕಂಗಳ್ ಮೀಂಗಳ್ ಮೊಲೆಗಳ್
ತುಂಗ ರಥಾಂಗಂಗಳಾಗೆ ಲಾವಣ್ಯರಸಂ
ಪಿಂಗದಿರಲಪ್ಸರೋಗಣ
ಮಂ ಗೆಲೆಪಂದಪ್ಸರೋಗಣಂ ರಂಜಿಸುಗುಂ ೫೮

ರಂಭೆಯ ತೆಱದಿಂ ಜೆಲ್ವಂ
ರಂಭೆಕರಂ ತಳೆದಳಂದು ನೀಲಾಮರಣೋ
ಜ್ಜೃಂಭದ್ವಿವರಾಂತರದೊಳೆ
ಶುಂಭನ್ಮೃದುಳೋರುದಂಡೆಯಪ್ಪುದಱಿಂದಂ ೫೯

ವಚನ : ಮತ್ತಂ ಮಾಲ್ಯಾಂಗಕಲ್ಪತರುಪರಿಸಿಪ್ಪನ್ನಾನಲ್ಪತರಪುಷ್ಪಮಾಲಾವಳಿ ವಿಪುಳಫಳಸಂಕುಳಮಿಳಿತಮಣಿಮಯಪವಿತ್ರಪಾತ್ರಂಗಳಂ ಕರಂಗಳಿಂ ಪಿಡಿದುಕೊಂಡಿರ್ದ ಕಿಂಕರಸುರಚಕ್ರವಾಳಂ ಜನ್ಮಾಭಿಷವಣಕಲ್ಯಾಣಕೌತುಕಮಂ ನೋಡಲೆಂದು ಪಿಂದನೆ ಬರುತ್ತುಮಿರ್ದ ಕಲ್ಪವೃಕ್ಷನಂದನವನಮೆಂಬಂತೆ ಸುತ್ತಲುಂ ಕಿಕ್ಕಿಱಿಗಿಱಿದು ನಡೆಯೆ

ಕಂದ : ಅಲರ್ಗಳನುಳಿ ಕವಿತರಲಂ
ಜೊಲಿದಿದಿರ್ಗೊಳಲೆಂದು ಪೋಪ ತುಂಬಿಗಳೆಂಬಂ
ತೆಲರಿಂದಳ್ಳಾಡುವ ವಿಗೆ
ಪಳವಿಗೆಗಳ ನೀಲಘನಪಟಂಗಳ ಬಳಗಂ ೬೦

ವಚನ : ಆಗಳ್

ಕಂದ : ತರುಣರವಿನಿಕರಕಿರಣಂ
ಭರದಿಂದಂಬರಮನೆಯ್ದೆ ಬೆಳಗುವ ತೆಱದಿಂ
ಸುರಮಕುಟಾರುಣ ಮಣಿಗಳ
ಕರವೊಂದಾಗಂದು ಬೆಳಗಿದತ್ತಂಬರಮಂ ೬೧

ತಾರಾಪಥದೊಳ್ ದಿವಿಜರ್
ತಾರೆಗಳಂ ಕಂಡು ಪೋಪ ಗಜಘಟೆಗಳ ಪೂ
ತ್ಕಾರವಿನಿರ್ಗತ ಜಲಕಣ
ಸಾರಂಗಳಿವೆಂದು ಬಗೆದರತಿದೂರದೊಳಂ ೬೨

ಒರ್ವೊರ್ವರ್ರಂಗಸಂಗದ
ಗುರ್ವಿಂದಂ ಪಱಿದು ಬಿಳ್ದ ಮುತ್ತುಗಳೆಲ್ಲಂ
ಕೊರ್ವಿರ್ದವೆಂದು ಬಗೆದರ್
ಗೀರ್ವಾಣರ್ ಮತ್ತೆ ಸನ್ನಿಧಿಸ್ಥಾನದೊಳಂ ೬೩

ಸ್ರಗ್ಧರೆ

ಹೂಹೂ ಹಾಹಾದಿ ಗಂಧರ್ವರ ಮೃದುತರ ಸಂಗೀತರಾಗಚ್ಛವಿ ಸಂ
ದೋಹಾಸಕ್ತಂ ಸುಧಾಸತಿಯ ಹರಿಣನದೊಂದು ಕ್ಷಣಂ ಕೂಡೆ ಚಿತ್ರೋ
ದ್ವಾಹಿ ಸ್ವರ್ಗಾನಕಂಗಳ್ ಮೊಳಗಲವಱ ನಾದಂಗಳಂ ಕೇಳ್ದು ಭೀತಿ
ಗ್ರಾಹಂ ತಾನತ್ತಲಿತ್ತಲ್ ಪರಿದುಱಿ ವಿಧುವಂ ಕಾಡುತಿರ್ದತ್ತದಾದಂ ೬೪

ಚಂಪಕಮಾಲೆ

ಸುರರ ವಿಚಿತ್ರಪತ್ರಚಯದಿಂದವೆ ತುಂಬಿ ನಭೋಮಹೀರುಹಂ
ಸುರುಚಿರ ಶೋಣಕೇತುಪಟದಿಂದವೆ ಪಲ್ಲವಿತಂ ದಲಾಯ್ತು ಬಂ
ಧುರ ಧವಳಾತಪತ್ರಗಣದಿಂದವೆ ಪುಷ್ಪಿತಮಾಯ್ತು ರತ್ನವಿ
ಸ್ಫುರಿತ ವಿಮಾನದಿಂದೆ ಫಲಿತಂ ಬಿಡದಾಗೆಸೆದತ್ತದಾಕ್ಷಣಂ ೬೫

ಚಂಪಕಮಾಲೆ

ರವಿತುರಗಂಗಳುಂ ಯಮುನ ಕೋಣನುಮೊಪ್ಪುವ ಚಂದ್ರಸಿಂಹಮುಂ
ಪವನನ ಪುಲ್ಲೆಯುಂ ನೆಱೆಯೆ ಬಿಟ್ಟು ಪರಸ್ಪರ ವೈರಭಾವಮಂ
ಜನದೊಳೆ ಬಂದವಂದು ನೆರೆದಿಲ್ಲವುಮೊಂದಿ ಜಿನೇಶಮಾರ್ಗಮಂ
ಭವಿಗಳದಾರೊ ಬಿಟ್ಟು ಕಳೆಯರ್ ಮನದಲ್ಲಿಯ ವೈರಭಾವಮಂ ೬೬

ವಚನ : ಈ ತೆಱದಿಂ ನಾಕಸೈನ್ಯಾನೀಕಮೆಲ್ಲಂ ಜ್ಯೋತಿರ್ಲೋಕಮನಾಕ್ರಮಿಸು ತ್ತುಮಿರೆ

ಚಂಪಕಮಾಲೆ

ಮಿಸುಪ ವಿಮಾನಸಂತತಿಗಳೆಂಬ ಮನೋಹರಕೂಟಕೋಟಿಯಿಂ
ದೆಸೆವ ನಭಸ್ಥಳೀನಗರಗೋಪುರದೊಳ್ ಪಳಿಕಿಂದೆ ಕೂಡಿ ನಿ
ರ್ಮಿಸಿದ ಪೊಸಂತಿಲೆಂಬ ಬಗೆಯಂ ಸುರರಿಂಗುಱೆ ಪುಟ್ಟಿಸುತ್ತು ಮಾ
ನಸದೊಳೆ ದೇವಗಂಗೆ ಸೆಱೆಗೊಂಡುದು ನೋಳ್ಪರ ಕಣ್ಗಳಿಲ್ಲಮಂ ೬೭

ಕಂದ : ಅನಿಮೇಷದೃಷ್ಟಿವಿಷದು
ದ್ಧನತೆಯಿನುರುಗಗನಮೆಂಬ ಕಾಳೋರಗನಿಂ
ವಿನಿಮಿತ್ತ ಭೂರಿನಿರ್ಮೋ
ಕನ ಮಾನಸುರಜ್ಜು ನೆಂಬಿನಂ ಕಣ್ಗೆಸೆಗುಂ ೬೮

ಚಂಪಕಮಾಲೆ

ಕರಿಘಟೆಯೊಡ್ಡುಗಳ್ ತರಣಿಮಂಡಳಸನ್ನಿಧಿಯೊಳ್ ಬರುತ್ತುಮಿ
ರ್ದುರುತರಗಂಡಮೂಲಮತಿತಾಪಮನಾಂತಿರೆ ಜಾಹ್ನವೀಜಲಾಂ
ತರದೊಳೆ ಪೊಕ್ಕು ಮುಕ್ಕುಳಿಸಿ ಪೂತ್ಕರಿಸಲ್ ನೆಗೆದಿರ್ದ ಸೀಕರೋ
ತ್ಕರಮೆಸೆದತ್ತು ತಚ್ಛ್ರವಣಚಂಚಳ ಚಾಮರಸಾರ್ಥದಂದದಿಂ ೬೯

ವಚನ : ಅಂತುಮಲ್ಲದೆಯುಂ

ಮಹಾಸ್ರಗ್ಧರೆ

ಸುರಗಂಗಾತೀರದೊಳ್ ಭೂರಿತರಹರಿತಪತ್ರಂಗಳಿಂ ಚೆಲ್ವನಾಂತಿ
ರ್ದುರುಭಾಸ್ವದ್ಬಿಂಬಮಂ ಕಂಡಿದು ಲಸದರುಣಾಂಭೋಜಮೆಂದಾ ಸುರಾಧೀ
ಶ್ವರದಂತೀಂದ್ರ ಸ್ವಹಸ್ತಾಗ್ರದಿನುಱೆಪಿಡಿಯಲ್ಕುಷ್ಣದಿಂ ನೊಂದು ತಾಂ ಪೂ
ತ್ಕರಿಸುತ್ತುಂ ಬಿಟ್ಟು ಕೈಯಂ ಕೊಡಹಿಕೊಳುತುಮಿರ್ದಲ್ಲಿಯಾದತ್ತು ಹಾಸ್ಯಂ ೭೦

ಉತ್ಪಲಮಾಲೆ

ಪತ್ತುಮುದಭ್ರವಿಭ್ರಮವಿನಿರ್ಭರಿತಾಭ್ರಪರಿಸ್ಫುರನ್ಮರು
ನ್ನರ್ತಿತಶುಭ್ರಕೇತನಪಟಂಗಳವೊಪ್ಪಿದುಪಭ್ರದಲ್ಲಿ ದೇ
ವೋತ್ತಮಗಂಗೆ ಮಜ್ಜನದ ಪೊತ್ತಱಿಂದಂದುರುರೂಪಕೋಟಿಯಂ
ಪೆತ್ತು ಬರುತ್ತಮಿರ್ದ ತೆಱದಿಂ ಕಳಿದರ್ ಸುರರಾ ದ್ಯುಗಂಗೆಯಂ ೭೧

ಆಗಸಮೆಂಬ ವಾರಿನಿಧಿಯಂ ಮಕರೋಚ್ಚಕುಳೀರಮೀನಸಂ
ಯೋಗಮನುಳ್ಳುದಂ ಸುರರ ಗೀತರವೋಲ್ಲಹರೀತರಂಗಿತಾ
ಭೋಗಮನೆಯ್ದಲುತ್ತರಿಸಿ ಬಂದರಶೇಷ ಸುರಾಸುರರ್ ಕರಂ
ಬೇಗದಿನುಲ್ಲಸನ್ಮಣಿವಿಮಾನಬಹಿತ್ರಕದಂಬಕಂಗಳಿಂ ೭೨

ನಿರ್ಜರರಾಜಧಾನಿ ಮೊದಲಾಗಿ ಜಿನೇಶ್ವರಪತ್ತನಂಬರಂ
ನಿರ್ಜರಸೈನ್ಯದೋರಣಿ ನಭಸ್ಥಳದೊಳ್ ತೆಱಪಿಲ್ಲದೆಲ್ಲಿಯುಂ
ಸಜ್ಜಿಕೆ ಮಾಲೆಗೊಂಡು ಮಿಗೆದಟ್ಟಮುದಾಗಿ ಬರುತ್ತುಮಿರ್ದುದಾ
ಮರ್ಜಯಮೋಕ್ಷಮಾರ್ಗ ವರಪಂತಿಯಿದೆಂಬಿನಮಾಳ್ದುದೊಪ್ಪಮಂ ೭೩

ವಚನ: ಮತ್ತಮಿತ್ತಲಾ ರತ್ನಪುರದ ಸ್ತ್ರೀಜನಂಗಳುಂ ಪುರುಷರ ಮೊತ್ತಂಗಳುಂ ತಂತಮ್ಮ ನೆಲೆಮಾಡಂಗಳ ಚೂಳಿಕಾಗ್ರಂಗಳುಮಂ ವಸತಿಕಾಶಿಖರ ಶಿಖಾಕಳಾಪಂಗಳುಮಂ ಪ್ರೋತ್ತುಂಗಪ್ರಕಾರಪ್ರತೋಳಿಕಾಪ್ರದೇಶಪ್ರಕಟೀಕೃತಹಾಟಕಕೂಟ ಕೋಟಿಗಳುಮಂ ಸಮುತ್ತಾಳಿಕಾಟ್ಟಾಳಜಾಳಂಗಳುಮನೊರ್ವೋರ್ದಲೊಳನೆಡೆವಱಿಯದೆ ತಿಂತಿಣಿಗೊಂಡು ಸಂದಣಿಸಿ ನಿಂದು ಸಮುದಗ್ರಗ್ರೀವರಾಗಿರ್ದು ಮೇಷತ್ವಮಿಲ್ಲದೆಯನಿಮಿಷತ್ವಮಂ ಪಡೆದು ವಿಸ್ಮಯಸ್ಮೇರನಿರೀಕ್ಷಣರಾಗಿ ದೇವಾಗಮನಸಂಭ್ರಮಮಾದಭ್ರವಿಭ್ರಮಮಂ ಕೌತೂಹಳದಿಂ ನೀಡುಂನೋಡುತ್ತುಮಿರಲಾ ದೇವಸಮೂಹಮೆಲ್ಲಮಾಕಾಶಪ್ರದೇಶದಿಂದಿಳಿದಾ ಪಟ್ಟಣಮಂ ಮುಟ್ಟೆವರ್ಪುದುಂ

ಸ್ರಗ್ಧರೆ

ಆಗಳ್ ಬಿತ್ತಿರ್ದ ಪುಣ್ಯದ್ರುಮ ನಿರುಪಮ ಬೀಜಂಗಳಿಂ ಪುಟ್ಟಿ ಮತ್ತಂ
ಮೇಗಣ್ಗೆ ವ್ಯಾಪಿಸುತ್ತಿರ್ಪವಿರಳತರ ಸಾರಾಂಕುರಾಕಾರಶಂಕಾ
ಪೂಗಪ್ರಾಕಟ್ಯಮಂ ಪುಟ್ಟಿಸುತುಮುಡರ್ದು ತಾಂ ನೀಳ್ದು ಪರ್ವಿರ್ದ ಕಾಂತ್ಯಾ
ಭೋಗವ್ಯಾಕೀರ್ಣರತ್ನಂಗಳ ಬಳಗಮುಮಂ ದೂರದೊಳ್ ಕಂಡನಿಂದ್ರಂ ೭೪

ಮಹಾಸ್ರಗ್ಧರೆ

ಪುರದೆಲ್ಲಾತಾಣದೊಳ್ ಮಾಣದೆ ಮಣಿಗಣದಾಸಾರಮಂ ಪೊಯ್ಯಲಂದಂ
ಬರದಿಂದಂ ಬಿಳ್ದ ರತ್ನಂಗಳ ಪೊಳೆವ ಮಹಾರಾಶಿಗಳ್ ಸುತ್ತಲುಂ ತಾ
ಳ್ದಿರೆ ಚೆಲ್ವಂ ಶ್ರೀಯ ಕೇಳೀಗಿರಿಗಳ ತೆಱದಿಂದಾಗಳಂತೆಲ್ಲಮಂ ಕಂ
ಡಿರದಿಂದ್ರಂ ಚೋದ್ಯದಿಂ ರತ್ನಪುರಮಿದು ಕರಂ ತಪ್ಪದಾಯ್ತೆಂದಾಗಳೆಂದಂ ೭೫

ವಚನ: ಬಳಿಯುಂ

ಚಂಪಕಮಾಲೆ

ಗಗನದೊಳೆಯ್ದೆ ಮಂಡಳಿಸಿ ನಿಂದ ವಿಮಾನಸಮೂಹಸಂತಿಗಳ್
ಸೊಗಸಿದವಲ್ಲಿ ಬೇಱೆ ಪೊಸಪಟ್ಟಣಮಂ ನೆಱೆಕಟ್ಟಿದಂದದಿಂ
ನಗರದ ಸುತ್ತಲಿಲ್ಲೆಡೆಯೊಳಂ ಸಲೆಕೋಂಟೆಯ ಮೇಲೆಯುಂ ಗೃಹಾ
ಳಿಗಳ ಸಮೀಪದೊಳ್ ತೊಳಗುವಟ್ಟಳೆಯೋಳಿಗಳಿಕ್ಕೆಲಂಗಳೊಳ್ ೭೬

ಕಂದ: ತೆಕ್ಕನೆ ತೀವಿರ್ದು ಕರಂ
ಕಿಕ್ಕಿಱಿಗಿಱಿದೆಯ್ದೆ ತುಂಬಿ ನೆರೆದಿರ್ದುವು ಮಾ
ಣಿಕ್ಯವಿಮಾನಂಗಳವುಂ
ಮಿಕ್ಕಱಿಸೋಳ್ಪರ್ಗೆ ಮಾಡುತುಂ ವಿಸ್ಮಯಮಂ ೭೭

ವಚನ: ಅನಂತರಂ ದೇವಸಮೂಹಂಬೆರಸು ದೇವೇಂದ್ರಂ ತದ್ರತ್ನಪುರಮಂ ಮೂಱುಸೂಳ್ವರಂ ಬಲಗೊಂಡು ಪುರಲಕ್ಷ್ಮೀಮಣಿಮಯನೂಪುರಮೆಂಬಂತಿರ್ದ ಗೋಪುರದ್ವಾರದೊಳಗಂ ಪೊಕ್ಕು ಜಿನನ ಜನ್ಮೋತ್ಸಾಹ ಕೋಳಾಹಳಸಂಗತಸಮುತ್ತುಂಗಮಂಗಳಮಂ ನೋಡುತ್ತುಂ ಬಂದು ತ್ರಿಜಗಜ್ಜನಸಂಪೂಜ್ಯಮಾ[1]ನ ನಾನಾವಿಧ ಶೋಭಾರಾರಾಜ್ಯಮಾನ ರಾ[1]ಜಮಂದಿರಮುಮನಾ ಪರಿಯಿಂದಂ ಬಲಗೊಂಡು ರಾಜಾಂಗಣದೊಳೈರಾವಣ ಮಹಾವಾರಣಮಂ ನಿಲಿಸುವುದುಂ

ಕಂದ: ಸುರಗಂಧಗಜದ ಮೂವ
ತ್ತೆರಡುಂ ಹಸ್ತಂಗಳೊಪ್ಪಿದುವು ಲಂಬಿಸುತುಂ
ಪರಮನರಮನೆಯ ಪಳಿಕಿನ
ಪುರುವಿಜಯಸ್ತಂಭಸಂತಿಯೆಂಬಂತೆವೊಲಂ ೭೮

ವಚನ: ತದನಂತರಂ

ಚಂಪಕಮಾಲೆ

ಎಲೆ ಸತಿ ಪೋಗಿ ನೀಂ ಪರಮಧರ್ಮಜಿನೇಶನನೆತ್ತಿಕೊಂಡು ಬಾ
ಕಳಿಯದೆ ಪೊತ್ತಸೆಂದು ಶಚಿಗಂ ಬೆಸಸಲ್ ದಿವಿಜಾಧಿನಾಯಕಂ
ಬಳಿಯ ಗಜೇಂದ್ರದಿಂದಿಳಿದು ಪೋಗಿ ದಲಾಕ್ಷಣದಲ್ಲಿ ಪೊಕ್ಕಳಾ
ವಿಳಸಿತಸೂತಿಕಾಗೃಹಮನಾ ಶಚಿ ರಾಜ್ಯಸುಲಕ್ಷ್ಮಿಯಂದದಿಂ ೭೯

ವಚನ: ಮತ್ತಂ ಪೂರ್ವದಿಗ್ದೇವಿಯ ಮುಂದೆ ಪೊಳೆವ ಧವಳಕಿರಣಮಯೂಖಲೇಖೆಯಂತೆ ನೋಳ್ಪರ ಕಣ್ಗಳಿಗೆ ಸುಖದಾಯಕನಾಗಿ ನಿಜಜನನಿಯಪ್ಪ ತತ್ಸುಪ್ರತಾ

1 ನರಾ (ಜ)

ಮಹಾದೇವಿಯ ಮುಂದೆ ಥಳಥಳಿಸುತ್ತುಮಿರ್ದ ತದ್ಬಾಳಕನಂ ಕಂಡು ಬಹಳಪುಳಕಕಳಿತ ಕಳೇವರೆಯಾಗಿ ಕತಿಪಯ ಪರಿವಾರದೇವೀಜನಂಬೆರಸು ಮಾಣಿಕ್ಯದೀಪಕಳಿಕಾಕಳಾಪ ಪರಿರಾಜಮಾನ ನೀರಾಜನಾಭಾಜನಸಮಾಜಂಗಳಂ ಪಿಡಿದು ಮಣಿಮಯಮೇಖಳಾ ಕ್ವಣಿತದೊಡನೆ ಮಚ್ಚರದಿಂದೆಂಬಂತೆ ಮಂಗಳಸಂಗೀತಧ್ವನಿ ನೂರ್ಮಡಿಸುತ್ತಿರೆ ಜಿನನಂ ಜಿನಜನನಿಯುಮಂ ಮೂಱುಸೂಳ್ ಬಲಗೊಂಡು ಪೀಸರಾಧಾರದಿಂದಾರತಿಯನೆತ್ತಿ ನಮಸ್ಕಾರಂಗೆಯ್ದಿಂಬಳಿಯಂ

ಕಂದ : ದೇವಿಯ ಮುಂದಿರಿಸಿದಳಂ
ದೋವದೆ ಮಾಯಾಮಯಾರ್ಭಕನ ರೂಪಂ ತಂ
ದಾ ವನಿತೆಯರ್ಗೆಲ್ಲಂ ನಿ
ದ್ರಾವರಣದ ಮುದ್ರೆಯಂ ವಿಗುರ್ವಿಸಿ ಮುನ್ನಂ ೮೦

*ಮತ್ತೇಭವಿಕ್ರೀಡಿತ

ಸಲೆ ರತ್ನಾಕರದಿಂದನರ್ಘ್ಯತರಮಂ ಸದ್ರತ್ನಮಂ ನೋಡಿ ಮ
ತ್ತೊಲವಿಂದೆತ್ತುವ ಮಾಳ್ಕೆಯಿಂದೆ ಮಣಿಮಂಚಸ್ಥಾನದಿಂ ಕಾಂತಿಮಂ
ಜುಳನಂ ಬಾಳಕನಂ ಸ್ವಹಸ್ತತಳದಿಂದಂದೆತ್ತಿಕೊಂಡಿರ್ದು ಪೊ
ತ್ತುಳದೊಂದಿಂದುವ ಬಿಂಬಮಂ ಪೊಱುವವೊಲ್ ಪೂರ್ವಾಚಳಂ ಮಸ್ತದೊಳ್ ೮೧

ಕಂದ : ಪೊತ್ತು ನಡೆತಂದಳಂದ
ತ್ಯುತ್ತಮ ಜಿನಶಿಶುವನಿಂದ್ರವಲ್ಲಭೆಯಾ ದೇ
ವಸ್ತ್ರೀಯರ ಮೊತ್ತಂಗಳ್
ಬಿತ್ತರಿಸಲ್ ಜಯಜಯಪ್ರಣಾದೋತ್ಕರಮಂ ೮೨

ಕ್ಷೀರೋದಲಹರಿಯಿಂದಂ
ತಾರೇಶನನೊಯ್ವ ಗಗನಲಕ್ಷ್ಮಿಯ ತೆಱದಿಂ
ದಾ ರಮ್ಯತಲ್ಪತಳದಿಂ
ದಾ ರಮಣಿ ಜಿನೇಶಶಿಶುವನೊಯ್ದಳ್ ನಲವಿಂ ೮೩

ವಚನ : ಅನಂತರಂ

ಚಂಪಕಮಾಲೆ

ನೆಲೆಮೊಲೆಯೊತ್ತಿನಿಂ ತೊಲಗೆ ಮೇಲುದಿನಂಚಳಮೆಯ್ದೆ ನೀಳ್ದ ತೋ
ಳ್ಗಳ ಮೊದಲಲ್ಲಿ ನುಣ್ಬೊಗರದುಂ ತಲೆದೋಱಿ ಜಿನೇಶಬಾಳನಂ
ಸಲೆ ಶಚಿ ನೀಡುತಿರ್ದ ಪದದಲ್ಲಿದಿರಾಗಿ ಸುರಾಧಿಪಂ ಕರಂ
ಗಳನುರುಭೂಷಣಾಂಗ ತರುಶಾಖೆಗಳೆಂಬಿನಮಂದು ನೀಡಿದಂ ೮೪

* ಜನ್ಮಾಭಿಷೇಕಕ್ಕೆ ಕೊಂಡುಹೋಹ ಠಾವು (ಗ)

ವಚನ : ಅಂತು ನೀಡುವುದುಂ

ಕಂದ : ಚಿಂತಿತಫಲಪ್ರದಾಯಕ
ಚಿಂತಾಮಣಿಯುಂ ಸುಪುಣ್ಯದೇವತೆ ತಂದೀ
ವಂತೆ ಜಿನಶಿಶುವನಿತ್ತಳ್
ಸಂತಸದಿಂ ದೇವಿ ಸುರಪಕರತಳಪುಟದೊಳ್ ೮೫

ವಚನ : ಅಂತೀವುದುಂ ಸಾತಿಶಯಪ್ರೀತಿನಿವಾಸನಾದ ವಾಸವಂ ಬೀಸರಂಜೊಗದ ಸಡಗರದಿಂದೀಸಿಕೊಂಡು ಲೇಸಾಗಿ ವಾಸನೆವಡೆದ ದೇವಾಂಗವಾಸನುಂ ತನ್ನಯ ಪರ್ಯಂಕಾಸನಬಂಧದೊಳ್ ಪಾಸಿ ಮೆಲ್ಲನಲ್ಲಿ ಕುಳ್ಳಿರಿಸುವುದುಂ

ಕಂದ : ಪಿರಿದಾದ ಭಕ್ತಿಯಿಂದಂ
ಧರಣೀತ್ರಯಗುರು ಜಿನೇಶಪಾದಂಗಳುಮಂ
ಪರಮಮಣಿಮುಕುಟಕಿರಣೋ
ದ್ಧುರಜಳದಿಂದಿಂದ್ರನರ್ಘ್ಯಪಾದ್ಯಮನಿತ್ತಂ ೮೬

ವಚನ : ಅಂತು ವಿನಯವಿನಮಿತಮಸ್ತಕನಪ್ಪುದುಂ

ಕಂದ : ಸಾಸಿರಕಣ್ಗಳೊಳಂ ಪ್ರಮ
ದಾಶ್ರುಗಳೊಗೆದೆಯ್ದೆ ತುಂಬಿತುಳ್ಕಾಡುತ್ತಿರೆ
ಭಾಸುರಜಿನಶಿಶುರೂಪಂ
ಕ್ಲೇಶದಿನೀಕ್ಷಿಸಿದನಂದು ಸೌಧರ್ಮೇಂದ್ರಂ ೮೭

ವಚನ : ಇಂತು ನಡೆನೋಡುವ ಪೊತ್ತಿನೊಳ್

ಚಂಪಕಮಾಲೆ

ಮಿಸುನಿಯ ಬಣ್ಣಮಂ ದಲಿಳಿಕೆಯ್ವ ಜಿನೇಶತನುಪ್ರಭಾಳಿಗಳ್
ಪಸರಿಸೆ ತತ್ಸಹಸ್ರನಯನಂಗಳ ಮೇಲೆ ವಿಶೇಷಮಾಗಿ ರಂ
ಜಿಸಿದವು ಹೇಮತಾಮರಸಚಾರುಸಹಸ್ರದಳಂಗಳೆಂಬ ಮಾ
ನಸಮನದಾಕ್ಷಣಂ ಬಿಡದೆ ಪುಟ್ಟಿಸುತುಂ ದಿವಿಜಾಸುರರ್ಗೆ ತಾಂ ೮೮

ವಚನ : ಮತ್ತಂ

ಚಂಪಕಮಾಲೆ

ನಿರುಪಮರೂಪನೀಕ್ಷಿಸಡೆ ಲೋಚನಯುಗ್ಮಮಿದೆಯ್ದದೆಂದು ಸಾ
ಸಿರಮಲರ್ಗಣ್ಗಳಂ ಬಯಸಿ ಬಾಯ್ವಿಡುತಿರ್ದುದದಾಕ್ಷಣಂ ಸುರಾ
ಸುರರ ಸಮೂಹಕಂ ತವಕದಿಂ ನೆರೆದೆಲ್ಲಮುಮೆಯ್ದೆ ನೋಡಿದ
ತ್ತುರುಶುಭಲಕ್ಷಣಪ್ರಯುತಮಪ್ಪ ಜಿನಾರ್ಭಕದಿವ್ಯಮೂರ್ತಿಯಂ ೮೯

ವಚನ : ಅದಲ್ಲದೆಯುಂ

ಉತ್ಪಲಮಾಲೆ

ಕಾಂಚನದಂತೆ ರಮ್ಯತರಮಪ್ಪ ಜಿನಾಧಿಪಮೂರ್ತಿ ಸತ್ಪ್ರಭಾ
ಸಂಚಯ ಮಧ್ಯವರ್ತಿಯೆನಿಸಿರ್ದು ಸುರೇಂದ್ರಮದೇಭಮಸ್ತದೊಳ್
ಪ್ರಾಂಚಿತಮಾಗಿ ತಾಂ ಪೊಳೆಯುತಿರ್ದುದು ಶಾರದ ಮೇಘದೊಡ್ಡಿನೊಳ್
ಚಂಚದನೂನದೀಧಿತಿಯುತಾಭಿನಯೋದಿತಚಂದ್ರನಂದದಿಂ ೯೦

ಚಂಪಕಮಾಲೆ

ಸುರರ ಕರಂಗಳೆಂಬ ಕಮಳಾವಳಿಗಳ್ ಮುಕುಳಂಗಳಾದವಂ
ದುರುನಯನಂಗಳೆಂಬ ಕುಮುದಂಗಳರಲ್ದವು ಮಾನಸಂಗಳೆಂ
ಬಿರದೆ ಚಕೋರಕಂಗಳೊಲವಿಂ ತಣಿಸಂ ತಳೆದಿರ್ದವಾಕ್ಷಣಂ
ಧರೆಯೊಳೆ ಮಾಡಿದತ್ತು ಜಿನಚಂದ್ರಮನಾಗಮಮೆಯ್ದೆ ರಾಗಮಂ ೯೧

ವಚನ : ತದನಂತರಂ

ಮಹಾಸ್ರಗ್ಧರೆ

ಪರಿವೇಷಂಬೆತ್ತ ಬೇಱೊಂದಮಳತರಶರಚ್ಚಂದ್ರಬಿಂಬಂಬೊಲಿಂಬಾ
ದುರು ನಾನಾರತ್ನಮಾಲಾಮಯ ವಿಲುಳಿತ ಸತ್ಪಲ್ಲವಾಲಂಕೃ[1]ತಿಪ್ರ[1]
ಸ್ಫುರಿತಂ ತಾನಾದ ಮುಕ್ತಾ ಖಚಿತ ವರಸಿತಚ್ಛತ್ರಮಂ ತಾಳ್ದಿ ನಿಂದಂ
ಪರಮೇಶಾನೇಂದ್ರನುದ್ಭೂಷಣ ಸಮಭಿಯುತಂ ವಾರಣೇಂದ್ರಾಧಿರೂಢಂ ೯೨

ವಚನ : ಆಗಳ್

ಕಂದ : ಮಣಿಮಯಮಕುಟಚ್ಛಾಯಾ
ಗಣಮುಂ ನಿಜರತ್ನಮುದ್ರಿಕಾದೀಧಿತಿಯುಂ
ಪೆಣದೊಂದಿ ಮಂಡಳಿಸೆ ತಾ
ನೆಣೆಯಾದುದು ಮತ್ತಮೊಂದು ಸತ್ತಿಗೆಗೆ ಕರಂ ೯೩

ವಚನ : ಮತ್ತಂ ಕೆಲಂಬರಂಬರಚರೇಂದ್ರರಂಬರತಳಂ ವಿಕಚಸ್ಥಳಪದ್ಮಕದಂಬ ವಿಡಂಬನದಿಂ ತುಂಬಿದುದೆಂಬಂತೆ ಜಾಜ್ವಲ್ಯಮಾನ ಜಾಂಬೂನದ ದಂಡಕಾಂಡಪರಿಮಂಡಿತ ವಿಚಿತ್ರಚಿತ್ರರಚನಾರುಚಿರತರಾತಭ್ರಶುಭ್ರಾತಪತ್ರಶತಂಗಳಂ ಪಿಡಿದಿರ್ಪುದುಂ

ಮತ್ತೇಭವಿಕ್ರೀಡಿತ

ನಲವಂ ತಾಳ್ದ ಸನತ್ಕುಮಾರಮರನುಂ ಮಾಹೇಂದ್ರನುಂ ದೇವನಿ
ಕ್ಕೆಲದೊಳ್ ನಿಂದು ಸುಚಾಮರಂಗಳನತೀವಪ್ರೌಢಿಯಿಂದಿಕ್ಕಿದರ್
ವಿಲಸತ್ಕಲ್ಪಜಭೂಷಣಾಂಗ ತರುಶಾಖಾಕಾಂಡದಲ್ಲೆಯ್ದೆ ಸಂ
ಚಲಿಸುತ್ತಿರ್ದುಱಿ ನೀಳ್ದ ಪೂಗುಡಿಗಳೆಂಬಂತಂದು ಕಣ್ಗಾದುದಂ ೯೪

[1] ತಂವಿ (ಜ)

ವಚನ : ಮತ್ತಂ ಕೆಲರವನೀರಾಧಿಪರಮೃತಾಂಗನಾ ಸಮುತ್ತುಂಗಮಂಗಳ ಭಂಗುರಾಪಾಂಗಭಂಗಿಯಿಂ ಸಂಘಾತಮೆಂಬಂತೆ ಥಳಥಳಿಸಿ ಪೊಳೆವ ನವರತ್ನಖಚಿತ ಕನಕದಂಡದ ಬೆಡಂಗನಂಗೀಕರಿಸಿದ ಚಟುಳಧವಳತರಚಾರುಚಾಮರ ಸಂಚಯಂಗಳನಿಕ್ಕುವುದುಂ

**ಚಂಪಕಮಾಲೆ**

ಜಿನಪನ ಮೆಯ್ಯ ಚಾರುಕನಕೋಜ್ವಳಕಾಂತಿಗಳೀಂಟೆ ಶಂಗಮಾ
ದನಿಮಿಷದಂತಿಯೊಪ್ಪಿದುದು ಭಕ್ತಿಯಿನಂದಿದಿರಾಗಿ ಬಂದ ಕಾಂ
ಚನಗಿರಿಯಂತೆ ತಜ್ಜಿನಪದದ್ವಯ ಸನ್ನಖದೀಪ್ತಿಗಳ್ ವೃಗಾಂ
ಕನ ಸಕುಟುಂಬನ ಪ್ರಭೆಗಳೆಂಬಿನಮಾವರಿಸಿರ್ದುವಂದದಂ ೯೫

ವಚನ : ಮತ್ತಂ ಸುತ್ರಾಮನಾ ಧರ್ಮಜಿನನಾಥನ ಜನ್ಮಾಭಿಷೇಕಕಲ್ಯಾಣಯಾತ್ರಾನಿಮಿತ್ತಮುದ್ಭುತಕ್ಕೆ ಮೊಗಮಿತ್ತೈರಾವತಮಹಾಮಾತಂಗಮನಣೆದುನೂಂಕಲೊಡಂ

**ಮತ್ತೇಭವಿಕ್ರೀಡಿತ**

ಒಲವಿಂದಂದಮರೀಜನಂ ಬಿಡದೆ ಪಾಡುತ್ತಿರ್ದನಾನೋರುವಂ
ಗಳ ಸಂಗೀತನಿನಾದಮೆಯ್ದೆ ಪುದಿಯಲ್ ವ್ಯೋಮಸ್ಥಳೀಸ್ಥಾನಮಂ
ಕಲವೀಣಾರವ ವೇಣುನಾದ ಪಟಹಪ್ರಧ್ವಾನಮುಂ ಕೂಡೆ ದಿ
[1]ಕ್ತಲದೊಳ್[1] ತುಂಬಿ ತುಳುಂಕೆ ತಾಂ ತಳರ್ದನಲ್ಲಿಂದಿಂದ್ರನಾನಂದದಿಂ ೯೬

ತ್ರಿಜಗತ್ಪೂಜ್ಯನೆನಿಪ್ಪ ಧರ್ಮಜಿನನಂ ತಾಳ್ದಿರ್ದ ಪುಣ್ಯೋದಯಂ
ತ್ರಿಜಗನ್ಮಂಡಳದಲ್ಲಿ ನೋಳ್ಪಡೆನಗೊಂದಕ್ಕಲ್ಲದನ್ಯೋನ್ನತಂ
ಗಜಯೂಥಂಗಳಿಗಿಲ್ಲಮೆಂಬ ಮದದಿಂದಂ ಪೆರ್ಚುವೆಚ್ಚಿರ್ದ ನಾ
ಕಜನಾಗಂ ನಡೆದತ್ತು ಮಂದಗತಿಯಿಂದಾ ವೀಥಿಕಾಮಾರ್ಗದೊಳ್ ೯೭

**ಮಹಾಸ್ರಗ್ಧರೆ**

ಪಿರಿದಾದೈರಾವತಾಂಗೋತ್ಕಿರಣದ ಬಳಸಿಂ ಶುಭ್ರಮಾಗಿರ್ದ ದೇವಾ
ಸುರಸೈನ್ಯಂ ಕಣ್ಗೆ ಚೆಲ್ವಂ ಪಡೆದುದು ಜಿನಜನ್ಮಾಭಿಷೇಕಾರ್ಥಮಾಯಾ
ತ್ಪರಮು ಕ್ಷೀರಾಬ್ಧಿಯೆಂಬಂತುರುತರಧವಳಚ್ಛತ್ರಫೇನಪ್ರತಾನಂ
ಪರಿಚಂಚಚ್ಚುಭ್ರಲೋಲಧ್ವಜ ಪಟಪಟಲೀ ನಿರ್ಮಲೋರ್ಮಿಪ್ರ[2]ತಾ[2]ನಂ ೯೮

ವಚನ : ಇಂತು ನಡೆವ ಪೊತ್ತಿನೊಳಮಳಿನ ಸೂರ್ಯಕಾಂತಮಯಮಾದೊಂದೇಕಾವಿನೊಳ್ ಪೊಂಗಳಸಂಗಳಿಂ ಪೊಳೆವ ಸಾಸಿರ ಬೆಳ್ಗೊಡೆಗಳ ಗಡಣಮಂ ಪಿಡಿದೊತ್ತಿ ಪಂತಿಗೊಂಡು ತೆತ್ತಿಸಿದರೆಂಬಂತೆ ಧರಣೇಂದ್ರಂ ತನ್ನಯ ಕೆದಱಿದ ಸಹಸ್ರಪೃಥುಳ ಫಣಾ

---

[1] ಗ್ವಲಯಂ (ಜ) [2] ದಾ (ಗಚ)

ಮಂಡಳಂಗಳೊಳನೇಕವಿಧೋಪಹಾರ ಮನೋಹಾರಿ ವಿಪುಲತರ ಸಹಸ್ರಸುವರ್ಣಮಯ ಪೂರ್ಣಮಂಗಳಕಳಶಂಗಳನಭಿಷವಣನಿಮಿತ್ತಂ ಪೊತ್ತು ಮುಂದೆ ನಡೆಯೆ

ಕಂದ: ಮೇಗಣ್ಗೆ ನಿಮಿರ್ವ ಘನಕಾ
ಳಾಗರು ಸದ್ಧೂಪಧೂಮಲತಿಕಾವರ್ತಿಗ
ಳಾಗಸದೊಳೊಪ್ಪಿದವು ಸೇ
ವಾಗತ ನಿಶ್ಶೇಷ ಭೋಗಿವೃಂದಂಗಳವೊಲ್ ೯೯

ವಚನ: ಆಗಳ್

ಮತ್ತೇಭವಿಕ್ರೀಡಿತ

ಸುರತೂರ್ಯಧ್ವನಿಯುಣ್ಮಿಪೊಣ್ಮೆ ಸುರಪಂ ಮಾಡುತ್ತುಮಿರ್ದಾ ಜಿನೇ
ಶ್ವರಸಂಸ್ತೋತ್ರಮದೆಲ್ಲರಿಂದೆ ಮಿಗೆ ಕೇಳಲ್ಪಟ್ಟುದಿಲ್ಲಾದೊಡಂ
ಭರದಿಂದುಚ್ಚರಿಸಲ್ಕೆ ಮಾಣದಧರೋಷ್ಠಸ್ಪಂದಲೀಲಾಪರಂ
ಪರೆಯಂ ಕಂಡನುಮಾನದಿಂದಮಱಿಯಲ್ಪಟ್ಟತ್ತು ಗೀರ್ವಾಣರಿಂ ೧೦೦

ಮಾಲಿನೀ

ತ್ರಿಭುವನಜನಮೆಲ್ಲಂ ಬಂದು ಕೂಡಿರ್ದುದೊಂದಾ
ಗಭಿಷವಣನಿಮಿತ್ತಂ ದೇವನಂ ಕೊಂಡುಪೋಪ
ಲ್ಲಭಿನವಘನಶೋಭಾತತ್ಪುರೀಸ್ಥಾನದೊಳ್ ತಾಂ
ಪ್ರಭವಿಸಿದುದು ಭೂಯಸ್ಸಂಭ್ರಮಂ ಚೋದ್ಯದಿಂದಂ ೧೦೧

ವಚನ: ಇಂತು ಸೌಧರ್ಮೇಂದ್ರಂ ರುಂದ್ರಪ್ರಭಾವನಾತಿಶಯದಿಂದಾ ರತ್ನಪುರಮಂ ಪೊಱಮಟ್ಟು ಕಿಱಿದಂತರಂ ಪೋದಿಂಬಳಿಯಂ

ಚಂಪಕಮಾಲೆ

ದಿವಿಜವಿಳಾಸಿನೀಕುಳಮುದಾಲಸಭೂರಿವಿಳಾಸಯಾನಮುಂ
ದಿವಿಜರ ಗಂಧಸಿಂಧುರಘಟಾಮದಮಂಥರ ಚಾರುಯಾನಮುಂ
ನವರಸಸಾರತಾಂಡವ ವಿಡಂಬನದೊಳ್ ವಿಲಸತ್ಕಳಾಸಮುಂ
ದಿವದೊಳುಪಾಶ್ರಯಂಬಡೆಯದಂತದಱಿಂ ಪಿರಿದಾಗಿ ಮುಗ್ಗುಗುಂ ೧೦೨

ವಚನ: ಆಧಾರಮಿಲ್ಲದಂದೆಲ್ಲಾ ಕಾರ್ಯಮುಂ ಪೊಲ್ಲದಕ್ಕುಮೆಂದು ಮನಂದು ಶಕ್ರಂ ವಿಕ್ರಿಯರ್ಧಿಯಿಂದಾ ರತ್ನಪುರದ ಬಹಿಃಪ್ರದೇಶಂಬಿಡಿದು ಮಂದರಗಿರಿ ಪರಿಯಂತರಂ ಸ್ಫಟಿಕಶಿಲಾಪರಿಘಟಿತ ವಿಕಟವಿಶಾಲಸಹಸ್ರಸೋಪಾನವೀಥಿಕಾಸಂಪತ್ತಿಯನಂತರಿಕ್ಷವಿಭಾಗದೊಳ್ ವಿರಚಿಸಿಯುದಜ ಪೂರ್ವಾಪರದೆರಡುಂಕೆಲಂಗಳೊಳಿಂದ್ರನೀಲ ಮಾಣಿಕ್ಯಮಯಂಗಳಾದ ಮೂಱುಮೂಱುಸೋಪಾನಪಂಕ್ತಿಗಳಂ ವಿಗುರ್ವಿಸಿವಾಗಳ್

ಕಂದ: ಆಕಾಶಗಂಗೆಯುಂ ಪರಿ
ಲೋಕಿಸಲೆಂದಮು ಬಂದು ಬಳಸಿದ ಕಾಳಿಂ
ದೀಕೂಲಂಕಷೆಗಳ ಸಿರಿ
ದಾಕೃತಿಯಂ ಪೋಲ್ತು ಕಣ್ಗೆ ಪಡೆದವಗುರ್ವಂ ೧೦೩

ವಚನ: ಇಂತು ದೇವೇಂದ್ರಂ ಸಮಸ್ತದೇವಸೈನ್ಯಮೆಲ್ಲಮಂ ಪೈಕುರ್ವಣ ಸೋಪಾನಮಯಿಾ ವೀಥೀಪಂತಿಗಳ ಮೇಲೆ ಪೋಗಲ್ವೇಳ್ದನಂತರಂ

ಮತ್ತೇಭವಿಕ್ರೀಡಿತ

ನೆಲದಿಂದಂ ಗಗನಸ್ಥಳಕ್ಕೆ ನೆಗೆದತ್ತೈರಾವತಂ ಶಕ್ರನು
ಜ್ಜ್ವಳಸಾಹಸ್ರವಿಲೋಚನಪ್ರಭೆ ನಭೋಭಾಗಂಗಳಂ ಚಿತ್ರಿಸಲ್
ಸಲೆ ಘಂಟಾರವನಾದಮೆಣ್ದೆಸೆಗಳಂ ತಳ್ಪೊಯ್ಯೆ ಚಾತುರ್ಯಮಂ
ಜುಳಮಲ್ಲಂಘನದಿಂದಮಾ ಸಭೆಗೆ ತಾಂ ಮಾಡಿತ್ತುಮಾಶ್ಚರ್ಯಮಂ ೧೦೪

ಚಂಪಕಮಾಲೆ

ನೆಗೆದವು ಕೂಡೆ ಕುಂಜರಘಟಾವಳಿಗಳ್ ಜವದಿಂದಮಾಕ್ಷಣಂ
ಮಿಗುವ ತುರಂಗಮಂಗಳಗಣಂಗಳಮಂದೊಡನೊಡ್ಡುಗೊಂಡು ಮೇ
ಗೊಗೆದವು ಮತ್ತಮಾಗಳೊಡನೊರ್ಮೊದಲಲ್ಲಿ ರಥಂಗಳೋಳಿಗಳ್
ನೆಗೆದವವುಂ ಪದಾತಿಗಳ ಪಂತಿಗಳುಂ ನೆಗೆದಿರ್ದುವೆಲ್ಲಮುಂ ೧೦೫

ಪೊಸಪೊಸರಾಹುಮಂಡಳಿಗಳೆತ್ತರುತಿರ್ದಪುವೆಂದು ನಾಡೆಯುಂ
ಶಶಿರವಿಮಂಡಳಂಗಳಿರದಂಜುವಿನಂ ಹರಿನೀಳಸದ್ವಿಮಾ
ನಸಮುದಯಂಗಳಂ ನೆಗೆದನಂದದಜಿಃಒಂದು ತಮಸ್ಸಮೂಹಮಂ
ಪೊಸತಱಿಯಟ್ಟುವಂತೆ ನೆಗೆದಿರ್ದವು ಶೋಣವಿಮಾನಕಂಗಳುಂ ೧೦೬

ಲಟಹಸುರಾಂಗನಾನಿಕರಮಂ ನೆಱತಾಳ್ದಿದ ಪೀನನಿರ್ಮಳ
ಸ್ಫಟಿಕಶಿಲಾವಿನಿರ್ಮಿತ ವಿಮಾನಚಯಂ ನೆಗೆದತ್ತದಾ ನಭ
ಸ್ತಟಿಗೆ ಸರೋಜಿನೀಲತೆಗಳೊಳ್ ಪುದಿದಿರ್ದ ಸರೋವರಂಗಳು
ತ್ಕಟದೆ ನಭಸ್ಥಳಕ್ಕೆ ನೆಗೆಸಂತಿರೊಡರ್ಚಿಸಿದತ್ತು ಚಿತ್ರಮಂ ೧೦೭

ಕಂದ: ಜಿನಮತಪಕ್ಷಮನಾಂತಿ
ರ್ದನಮದ್ಯರ್ ಮೇಗೆ ನೆಗೆದು ಪೋಪುದನೆಲ್ಲಾ
ಜನವಿತತಿಗಱಪುವಂತೆ ದ
ಲನಿಮಿಷಸೈನ್ಯಂ ನಭಕ್ಕೆ ನೆಗೆದತ್ತಾಗಳ್ ೧೦೮

ಅಂಬರದೊಳಿರ್ದ ದೇವನಿ
ತಂಬಿನಿಯರ ತೆಕ್ಕೆಗೊಂಡ ಸೋರ್ಮುಡಿಗಳ್ ಚೆ
ಲ್ವಂ ಬಳಯಿಸಿದವು ಗಗನದೊ
ಳಂಬೆಸೆ ನೆರೆದಿರ್ದ ಸೋಗೆಗಳ ತೆಱದಿಂದಂ ೧೦೯

ಉತ್ಪಲಮಾಲೆ

ತಿಂತಿಣಿಗೊಂಡು ಕೂಡೆ ನೆರೆದಿರ್ದ ಸಮಸ್ತವಿಮಾನಮಾಳಿಕಾ
ಸಂತತಿಯಿಂದೆ ಸಂದಣಿಸಿದತ್ತು ನಭಸ್ಥಳಿ ಸರ್ವದಿಕ್ಪ್ರದೇ
ಶಾಂತಮಸಂಖ್ಯಶಂಖಸುರವಾದ್ಯವಿತಾನಪಟುಪ್ರಣಾದದಿಂ
ದಂತುಱೆ ತುಂಬಿದತ್ತುರು ಪತಾಕೆಗಳಳ್ಳಿಱಿಯಲ್ ನಭೋಂತಮಂ ೧೧೦

ವಚನ : ಆಸಮಯದೊಳಿಂದ್ರನೈರಾವತಕರೀಂದ್ರಮಂ ಮೇರುಗಿರೀಂದ್ರಕ್ಕಭಿಮುಖಮಾಗಿ ಕೂರಂಕುಸದಿಂದಣೆದುನೂಂಕುವುದುಂ

ಕಂದ : ಒಂದೊಡ್ಡುಗಳೊಡ್ಡಾಗಿಯೆ
ಕುಂದದೆ ಸಪ್ತಾಂಗಭೇದದಿಂದಂ ತೋರ್ಕುಂ
ಮುಂದ್ಮೈಸಿದ ಮೊದಲೊಡ್ಡುಮ
ದೊಂದೆ ದಲಱುವತ್ತುನಾಲ್ಕುಸಾಸಿರಮಕ್ಕುಂ ೧೧೧

ವಚನ : ಮಹರ್ಧಿಕರಪ್ಪ[1]ಪೂರ್ವ[1] ದೇವರ್ಕಳನಂತಪ್ಪ ಮೊದಲೊಡ್ಡುಗಳಱುವತ್ತುನಾಲ್ಕುಸಾಸಿರಂ ಬಳಸಿಕೊಂಡಿರ್ಕುಮಾ ಮಹರ್ಧಿಕದೇವರ್ಕಳಸಂಖ್ಯಾತರಪ್ಪುದು ಕಾರಣಂ ಸಾಮರ್ಥ್ಯಭೇದದಿಂ ದ್ವಿಗುಣ ತ್ರಿಗುಣ ಚತುರ್ಗುಣ ವಿಸ್ತಾರಂಗಳಾಗುತ್ತರೋತ್ತರಮಸಂಖ್ಯಾತಂಗಳಾದ ಚತುರ್ವಿಧದೇವರ್ಕಳ ಚತುರಂಗಸೈನ್ಯಸಮೂಹಂಗಳೆಲ್ಲಮೊಂದಾಗಿ ಕೂಡಿ ಗಗನಮಂಡಳದೊಳಖಂಡಿತಂಗಳಾಗಿ ಮೊತ್ತಂಗೊಂಡು ಸಡಗರದಿಂದಂ ನಡೆಯೆ

ಉತ್ಪಲಮಾಲೆ

ಕೀರ್ತಿಮುಖಂಗಳಿಂ ಪೊಳೆವ ಕೈಗಳನೆತ್ತಿ ತಟಿಲ್ಲತಾಳಿಗಳ್
ವರ್ತಿಸಿದಂತೆ ತೋಱುರೆ ವಿಷಾಣ ಪರಸ್ಪರಘಾತಘೋಷಮಿ
ಸ್ಫೂರ್ತಿ ನಿಘೂರ್ಣಿಸಲ್ ಮೊಳಗಿನಂತಿರೆ ಕಾರ್ಮುಗಿಲೊಡ್ಡಿನಂದದಿಂ
ಸಾರ್ತರುತಿರ್ದುವಂದು ಗಜಸೇನೆ ಬಿಡುತ್ತೆ ಮದಾಂಬುಧಾರೆಯಂ ೧೧೨

ಚಂಪಕಮಾಲೆ

ಕವಿತರೆ ಲೋಳೆಗಳ್ ಬಿಡದೆ ತಳ್ಕಟವಾಯಿಗಳಿಂದೆ ಪೂಗಳಾ
ದಿಮದೊಳೆ ತುಂಬಿದಂತೆ ದೆಸೆಗಳ್ ತೆಱಸಿಲ್ಲದವಾಗೆ ಹೇಷಿತ
ಪ್ರವಿತತಿಗೊಡ್ಡುಗಟ್ಟಿ ನಡೆತಂದವು ಕೂಡೆ ತುರಂಗಮಂಗಳಂ
ದವಿರಳ ದೇವವಾಹಿನಿಯ ತುಂಗತರಂಗಚಯಂಗಳೆಂಬಿನಂ ೧೧೩

[1] ಪೂರ್ವರ್ (ಜ)

ಕಂದ : ಘೋಣಾವಿನಿರ ಸಮೀರಣ
ಘೂರ್ಣಿತ ವದನಂಗಳೆಸೆದವಶ್ವಂಗಳ್ ಕಡಿ
ಯಾಣಂಗಳೊಡನೆ ತಮ್ಮ ಪ್ರ
ಯಾಣಾರ್ಣದಮಂ ಸೂಸಿರ್ದು ರ್ಷಂಕಿಪ ತೆಱದಿಂ ೧೧೪

ಮತ್ತೇಭವಿಕ್ರೀಡಿತ

ಮಿಗೆ ಚೀತ್ಕಾರನಿನಾದದಿಂ ಜಿನಗುಣಸ್ತೋತ್ರಾಂಕಗೀತಂಗಳೋ
ಳಿಗಳಂ ಪಾಡುತುಮಿರ್ದುದೆಂಬ ತೆಱದಿಂ ಬಂದತ್ತು ನಾನಾಯುಧಾ
ಳಿಗಳಿಂ ತೀವಿದ ತಪ್ತಹೇಮರಥಯೂಥಂ ಭಾಸನಾಥಂ ಮಹಾ
ಖಗಸಂಪಾದಿ ಮನೋರಥಂ ಧ್ವಜಸಮಾಲಿಂಗತ್ಪಯೋಭೃತ್ಪಥಂ ೧೧೫

ಕಂದ : ಪಿರಿದದ್ಭುತಕಾಯಬಲಂ
ನೆರೆದು ಬರುತ್ತಿರ್ದುದಂದು ಘನಪತ್ತಿಬಲಂ
ನಿರುಪಮ ಸಂಪತ್ತ್ರಬಲಂ
ಪರದುಸ್ಸಹ್ಯಪ್ರತಾಪರೂಪಾತಿಬಲಂ ೧೧೬

ವಚನ : ಮತ್ತಂ

ಮತ್ತೇಭವಿಕ್ರೀಡಿತ

ಭರದಿಂದಂ ರಸಭಾವಮುಂ ಪಡೆದು ತತ್ತೂರ್ಯಾಂಗಮೆಂಬಿಂದ್ರಭೂ
ಮಿರುಹಂ ಕೊಟ್ಟ ವಿಶೇಷವಾದ್ಯಚಯಮುಂ ನಾನಾಗತಿಸ್ಥಾನಬಂ
ಧುರಮಾರ್ಗಂಗಳಿನಂದು ಬಾಜಿಸುತುಮುದ್ಯತ್ತಾನಮಾನಂಗಳೊಳ್
ಸರಿಸಂಬೆತ್ತು ಬರುತ್ತುಮಿರ್ದುದು ಕರಂ ಗಂಧರ್ವದೇವೋತ್ಕರಂ ೧೧೭

ಗಡಣಂಗೊಂಡೆಳಮಿಂಚುಗಳ್ ಪೊಳೆವವೋಲಾಡುತ್ತುಮಿರ್ಪಲ್ಲಿ ಸಂ
ಗಡದಿಂ ಬಾಹುಪರಿಭ್ರಮೋಲ್ಲಸಿತ ನಾಟ್ಯಚ್ಛದ್ಮದಿಂ ಚೆಲ್ವಮುಂ
ದಿಡೆ ತದ್ವ್ಯೋಮಸಮುದ್ರದಲ್ಲಿ ಪಿರಿದಾಗೀಸಾಡುತಿರ್ಪಂದದಿಂ
ನಡೆಗೊಂಡತ್ತು ನಿರಾಕುಳಂ ಬಹಳನಾನಾನರ್ತಕೀಸಂಕುಳಂ ೧೧೮

ವಚನ : ಅನಂತರಂ

ಉತ್ಪಲಮಾಲೆ

ರಾಗದೊಳೊಂದಿ ವಿಭ್ರಮದಗುರ್ವನೆ ತೋಱುವ ವೃದ್ಧಮೂರ್ತಿಯ
ಪ್ಪಾಗಸಮೆಂಬ ಕಾಮಿನಿಯ ಮಸ್ತಕದಿಂದಿಳಿತರ್ಪ ಬೆಳ್ಪ ಲೇ
ಸಾಗೆಸೆದಿರ್ದ ನೀಳ್ದ ಜಡೆಯೊಂದೆ ದಲೆಂಬಿನಮೊಪ್ಪುವಾ ನಭೋ
ಗಂಗೆಯುಮಂದು ನಿರ್ಜರಪರಂ ಕಡುದೂರದೆ ಬಿಟ್ಟುಪೋಪುದುಂ ೧೧೯

ವಚನ: ಆ ಸಮಯದೊಳ್

ಚಂಪಕಮಾಲೆ

ಸುರರ ಕಿರೀಟಕಾಂತಿಗಳ ಪರ್ವುಗೆಯಿಂದೆ ವಿಚಿತ್ರವರ್ಣಮಂ
ಧರಿಸಿದ ತಾರಕಾತತಿಗಳೊಳ್ ಪುದಿದಿರ್ದ ದಲಗ್ರಭಾಗದೊಳ್
ತರಣಿಯ ಬಿಂಬಮಂ ತಳೆದ ಶಾರದನೀರದಖಂಡಮಾ ಜಿನೇ
ಶ್ವರಶಿಶುಗೆತ್ತಿದೊಂದು ಪೊಸಮುತ್ತಿನ ಸತ್ತಿಗೆಯಂತೆ ರಂಜಿಕುಂ ೧೨೦

ಮತ್ತೇಭವಿಕ್ರೀಡಿತ

ಪಿರಿದಂ ಶೀಘ್ರಗತಿಪ್ರಭೂತಪವಮಾನಾಕೃಷ್ಟಮಾಣಾಂಬುದೋ
ತ್ಕರಮಾ ಚಾರುವಿಮಾನಸಂಹತಿಗಳಂ ಪಿಂದಟ್ಟಿ ಪೋದತ್ತು ಬಂ
ಧುರದಿಂದಂತವಱಲ್ಲಿ ಕೀಲಿಸಿದ ನಾನಾರತ್ನಕಾಂತಿಸ್ಫುರ
ತ್ಸುರಚಾಪಂಗಳನೆಯ್ದೆ ಕೊಳ್ವ ಬಗೆಯಿಂದೆಂಬಂತೆ ತತ್ಕಾಲದೊಳ್ ೧೨೧

ವಚನ: ಮತ್ತಮಾಗಳ್

ಕಂದ: ಸುರಕರಿ ಬೆಳ್ಮುಗಿಲೊಡ್ಡಂ
ನಿರೀಕ್ಷಿಸಿ ಪ್ರತಿಗಜಂ ದಲೆಂಬೀ ಬಗೆಯಿಂ
ಭರಿಕೈಗಳನೆತ್ತಿಯುದ
ಕ್ಕಿರದಿದಿರಂ ಬಿಡದೆ ನಡೆದು ಪೋದತ್ತಾಗಳ್ ೧೨೨

ಶಾರ್ದೂಲವಿಕ್ರೀಡಿತ

ಸೊಕ್ಕಿಂದೆನ್ನಯ ಮುಂದಿದೊಂದುಮೊಗದೊಡ್ಡಿಂದಾಂತು ನಿಂದಿರ್ಪ ಸಾ
ಸಕ್ಕಂ ತಕ್ಕಗಜಂಗಳಿಲ್ಲ ದಲಿದೊಂದುಂ ಬಂದು ನಿಂದಿರ್ದುದೆ
ನ್ನುರ್ಕಂ ತೋಱುವೆನೆಂದು ದೊಡ್ಡಮುಗಿಲೊಡ್ಡಂ ಪೊಯ್ದು ನೂಂಕಲ್ಕೆ ಮೇ
ಲ್ವೊಕ್ಕಂ ಪಾಱೆ ಸಮೀರನಿಂ ಪಳಿಗಿ ತಾಂ ಮಾಡಿತ್ತು ಹಾಸ್ಯತ್ವಮಂ ೧೨೩

ವಚನ: ಇಂತು ರುಂದ್ರಲೀಲೆಯಿಂದಮರೇಂದ್ರನಮರವರೂಥಿನೀಸಮೇತನಾಗಿ ಮನೋವೇಗದಿಂ ವಿಯನ್ಮಾರ್ಗದೊಳ್ ಪೋಗುತ್ತುಮಿರ್ಪುದಂ

ಕಂದ: ತೊಟ್ಟನೆ ಕಟ್ಟಿದಿರೊಳ್ ಪೊಂ
ಬೆಟ್ಟಂ ಜನ್ಮಾಭಿಷೇಕ ಸಮುಚಿತಪಟ್ಟಂ
ದಿಟ್ಟಿಗೆ ಪೊಲನಾದುದು ಮಿಗೆ
ಪುಟ್ಟಿಸುತಂ ತನ್ನ ಕಾಂತಿಯಿಂ ಮಿಂಚುಗಳಂ ೧೨೪

ವಚನ: ಆ ಸಮಯದೊಳಖಂಡಮಾಗಡಿಕಿಲ್ಗೊಂಡಿರ್ದ ಷೋಡಶಕಲ್ಪಭೂಮಿಕೆಗಳೆಂಬ ಪದಿನಾಱುಂ ನೆಲೆಯ ಮಣಿಮಾಡಂಗಳನಾಂತಿರಲೆಂದಾಧಾರಮಾಗಿ ಸುವರ್ಣ

ಮಯಮಾದೊಂದು ಕಂಭಮನಾಂಕೆಗೊಟ್ಟನಂಬುಜಗರ್ಭನೆಂಬಂತುನ್ನತಿಯಂ ಪಡೆದು ತನ್ನಯ ಚೂಳಿಕೆಯಿಂ ಮೊದಲ ಸ್ವರ್ಗದ ನೆಲಗಟ್ಟಿನ ತಳಮಂ ಮುಟ್ಟುತ್ತುಂ ನವನವತಿ ಸಹಸ್ರಯೋಜನೋತ್ಸೇಧದಿಂ ಪ್ರಶಸ್ತಮಾದ ಮಂದರಮಹೀಧರೇಂದ್ರಮಂ ಕಂಡು ಭವನಾಮರೇಂದ್ರರಪ್ಪ ಚಮರವೈರೋಚನರ್ಗೆ ತೋಱಿ

ಕಂದ: ಉದ್ಯಾನಶೋಭಮಾನಂ
ಹೃದ್ಯೋಜ್ವಳವಜ್ರಧಾರಿ ಸುಮನಸ್ಸೇವ್ಯಂ
ಸದ್ವರ್ಣಮಾಗಿಯೆನ್ನಂ
ತಿರ್ದುದು ಮಂದರಮಿದೆಂದು ಪೊಗಳ್ದಂ ಸುರಪಂ ೧೩೫

ಮೇರುನಿತಂಬಿನಿಯಂಗಮ
ನೋರಂತೆ ಮುಸುಂಕಿ ಮೇಖಳಾಮಣಿರುಚಿ ಕಿ
ರ್ಮ್ಮೀರ[1]ಮದಾಗಿರ್ದಂ[1]ಬರ
ಮಾರಯಲಂಬರದ ತೆಱದಿನಿರ್ದುದದಕ್ಕಂ ೧೩೬

ಸುರಚಾಪ ಚಿತ್ರಮೇಘೋ
ತ್ಕರಮೆಲ್ಲಾ ದೆಸೆಗಳಿಂದೆ ಬಂದಿರೆ ಕೆಲದೊಳ್
[2]ವರ[2]ರತ್ನವಿರಚನಾಯುತ
ಘನಂಗಳೋಲೈಸಲೆಂದು ಬಂದವೊಲೆಸೆಗುಂ ೧೩೭

ಉತ್ಪಲಮಾಲೆ

ಎನ್ನ ಸುವರ್ಣಕೋಟಿಗಳನೀಯಡುಚೋರರೆ ಕಳ್ದು ಕೊಳ್ವೆಮೆಂ
ಬನ್ನಯದಿಂದೆ ಸುತ್ತಿಬರುತಿರ್ದಪರೆಂದು ಮಹೀಧರಾಧಿಪಂ
ತನ್ನ ವಿಶಾಲವತ್ಕಟಕದಲ್ಲಿ ತೊಳಲ್ವವೊಲಾಗಿ ಮಾಡಿದಂ
ಪ್ರೋನ್ನತತೇಜದಿಂದೆಸೆವ ಭಾಸ್ಕರಮುಖ್ಯನವಗ್ರಹಂಗಳಂ ೧೩೮

ಚಂಪಕಮಾಲೆ

ವಿಳಸಿತ ಭದ್ರಶಾಲವನಮೆಂಬ ವಿಶಾಲವಿಶೇಷ ಮೇಖಳಾ
ವಳಯದೊಳೊಪ್ಪುಗುಂ ಸುರಮಹೀಧರಮೆಂಬ ನಿತಂಬಿನೀಸಮು
ಜ್ವಳಿತ ನಿತಂಬಮಂಡಳದ ಮೇಲೆ ಹರಿನ್ಮಣಿಶಾಲಿಮೇಖಳಾ
ವಳಯದ ಮಾಳ್ಕೆಯಿಂ ಮಿಗೆ ವಿಚಿತ್ರತರಂ ವಿಬುಧಾಳಿ ಸಂತತಂ ೧೩೯

ವಚನ: ಆ ಮೇರುಗಿರೀಂದ್ರಮಂ ಬಳಸಿದ ಭದ್ರಸಾಲಮೆಂಬ ಪ್ರಥಮಮೇಖಳಾವನದ ನಾಲ್ಕುಂದೆಸೆಗಳೊಳಂ ಮಣಿಕನಕರಜತಮಯಂಗಳಾದ ನಾಲ್ಕಕೃತ್ರಿಮ ಜಿನಚೈತ್ಯಾಲಯಂಗಳೊಳ್ ತೊಳಗುತ್ತುಮಿರ್ಪುವಲ್ಲಿಂ ಮೇಲೆ

1 ಮಾಗಿರ್ದುಮಂ (ಜ) 2 ನವ (ಕಚ)

ಕಂದ: ಅತ್ಯುಚ್ಚೈಸ್ತನತಟಮಂ
ಬಿತ್ತರಿಸಿ ಮುಸುಂಕಿದುರು ಹರಿದ್ವಸ್ತ್ರದವೋಲ್
ಸುತ್ತಿರ್ದುದು ನಂದನಮೆಂ
ಬುತ್ತಮವನಮಾತ್ರಪುಷ್ಪಜಾತಿಸಪತ್ರಂ ೧೩೦

ವಚನ: ಆ ನಂದನಮೆಂಬದ್ವಿತೀಯಮೇಖಳಾವನದ ನಾಲ್ಕುಂದೆಸೆಗಳ ನಾಲ್ಕು ಮಯ್ಯೊಳಂತಪ್ಪ ನಾಲ್ಕಕೃತ್ರಿಮಜಿನಚೈತ್ಯಾಲಯಂಗಳ್ ಬೆಳಗುತ್ತುಮಿರ್ಪುವಲ್ಲಿಂದತ್ತಲ್

ಚಂಪಕಮಾಲೆ

ತೊಳಗುವ ಮೇರುವೆಂಬ ವರಕಲ್ಪಮಹೀರುಹದಲ್ಲಿ ಪುಟ್ಟಿದ
ಗ್ಗಳಮೆನಿಸಿರ್ದ ಸೌರಭವಿಲೋಭವಿಲೀನಮದಾಳಿನೀ ಸಮಾ
ಕುಳಿತ ವಿಶೇಷಸೌಮನಸಮಂಜರಿಯಂತಿರೆ ಕಣ್ಗೆ ಶೋಭೆಯಂ
ಬಳಯಿಸಿದತ್ತು ಸೌಮನಸಮೆಂಬ ವನಂ ಸ್ಮರಕೇಳಿಕಾರಣಂ ೧೩೧

ವಚನ: ಆ ಸೌಮನಸಮೆಂಬ ತೃತೀಯಮೇಖಳಾವನದ ನಾಲ್ಕುಂದೆಸೆಗಳ ನಾಲ್ಕುಭಾಗಂಗಳೊಳಂ ಸುವರ್ಣರೂಪ್ಯರತ್ನರಮಣೀಯಂಗಳಾದ ನಾಲ್ಕಕೃತ್ರಿಮ ಜಿನ ಚೈತ್ಯಾಲಯಂಗಳ್ ಥಳಥಳಿಸಿ ಪೊಳೆಯುತ್ತುಮಿರ್ಪುವಲ್ಲಿಂದಂ ಮೇಲೆ

ಚಂಪಕಮಾಲೆ

ಸುರಗಿರಿಯೆಂಬ ಕಾಮಿನಿಯ ಮಸ್ತಕದಲ್ಲಿಯ ನೀಳ್ದ ಕುಂತಳೋ
ತ್ಕರದವೊಲಿರ್ದ ವೃಕ್ಷಚಯದಿಂ ಮಿಗೆ ನೀಲತೆವೆತ್ತ ಪಾಂಡುಕೋ
ದ್ಧುರವನಮೆಂಬ ತೋರಮುಡಿಯಲ್ಲಿ ತಱಂಬಿದ ಕೇತಕೀಪ್ರಸೂ
ಹರದಳಮೆಂಬಿನಂ ಬಗೆಗೆವಂದುದು ಪಾಂಡುಶಿಲಾತಲಂ ಕರಂ ೧೩೨

ವಚನ: ಅಂತಖಂಡಶೋಭಾಕರಂಡಕಮಾದ ಪಾಂಡುಕವನಮೆಂಬ ಚತುರ್ಥ ಮೇಖಳಾವಳಯದೊಳಂ ಚಿತ್ರೀಯಮಾಣ ಮಂಡನಮಹಿಮಾಪರಿಮಂಡಿತಂಗಳಪ್ಪ ನಾಲ್ಕಕೃತ್ರಿಮ [1]ಜಿನಚೈ[1]ತ್ಯಾಲಯಂಗಳಿಂ ಲಾಲನೀಯಮಾಗಿರ್ದುದಲ್ಲಿ ತತ್ತದ್ದಿಗ್ದೇಶದೊಳುದ್ಭವಿಸಿದ ತೀರ್ಥಕರಜನ್ಮಾಭಿಷವಣಕರಣಕಾರಣಂ ಪೀಠೀಭೂತತಾದೃಗ್ವಿಶಿಷ್ಟಶಿಲಾಚತುಷ್ಟಯಂ ಕಣ್ಗಾನಂದಮಂ ಪುಟ್ಟಿಸುತ್ತಿರ್ದುದಲ್ಲಿಂದಂ ಮೇಲೆ ತುತ್ತತುದಿಯೊಳ್

ಉತ್ಪಲಮಾಲೆ

ಬೆಳ್ಪಿಸೆದಿರ್ಪ ಪಾಂಡುಕಮುಮೊಳ್ಕವಿಲಾದುರುಪಾಂಡು ಕಂಬಳಂ
ನೋಳ್ಪೊಡಲಕ್ತಕಪ್ರಭೆಯ ರಕ್ತಕಮುಂ ಕಿಸುಗಲ್ಲ ಸಾರದಿಂ
ಕಲ್ಪಿತರಕ್ತಕಂಬಳಮುಮೆಂಬಿವು ನಾಲ್ಕುತಟಂಗಳೋಳಿಯಿಂ
ಮೊಳ್ಪುವಗುರ್ವನೀಶಸದಿ[2]ಶಂ[2] ಮೊದಲಾದ ವಿದಿಗ್ವಿಭಾಗದೊಳ್ ೧೩೩

[1] ಚೈ (ಕಚ) [2] ಕಂ (ಜ)

ಚಂಪಕಮಾಲೆ

ಬಲಪರುತಿರ್ಪ ಸೂರ್ಯಶಶಿಗಳ್ಗಿರದಂಜಿ ತಮಸ್ಸಮೂಹಕಂ
ನಿಲಲಣಮಾಱದೋಡಿ ಮಿಗೆಪೋಗಿ ಸುರಾಚಳಚೂಳಿಕಾಗ್ರದೊಳ್
ನೆಲಸಿದುದೆಂಬಿನಂ ಸುಹರಿನೀಳಮಯಾಗ್ರದ ಕಾಂತಿ ಸುತ್ತಲುಂ
ತಳೆದುದಗುರ್ವನಿಂದ್ರಗಿರಿಗೆತ್ತಿದ ಝಲ್ಲರಿಯೆಂಬ ಮಾಳ್ಕೆಯಿಂ ೧೩೪

ವಚನ : [1]ಇಂತು ಬೇ[1]ಱೆವೇಱೆ ನಾಲ್ಕುಮೇಖಳಾವನಾಂತರಾಳದೊಳಕೃತ್ರಿಮಂಗಳಾದ ಷೋಡಶಜಿನಮಂದಿರಂಗಳಂ ತಾಳ್ದಿ ನಿಂದ ಮಂದರಗಿರಿಯುಂ ಪುರಂದರನಂ ದೀಕ್ಷಿಸಿದ ತೀರ್ಥಸ್ನಾನಮೆಂದು ಕರಕಮಳಂಗಳಂ ಮುಗಿದು ವಂದನಾಪರನಪ್ಪುದುಮಾ ಗರ್ವದಿಂ ಗರಿಷ್ಠಾಪ್ರತಿಷ್ಠಾಧಿಷ್ಠಿತಮಾದುದೆಂಬಂತೆ ಉನ್ನತಶಿರಸ್ಕಮಾಗಿರ್ದುದಂತುಮಲ್ಲದೆಯುಂ

ಕಂದ : ಸ್ಥಳಕಮಳರೇಣುಪುಂಜಂ
ಗಳನನಿಳಂ ನೆಗಪೆ ಮಂಡಳಿಸಿ ನಿಲೆ ತುದಿಯು
ಲ್ಲೆಳಸಿ ಜಿನನೀಕ್ಷಣಕ್ಕು
ದ್ಗಳನುಂ ನೆಗಪಿರ್ದುದೆಂಬಿನಂ ಕಣ್ಗೆಸೆಗುಂ ೧೩೫

ವಚನ : ಮತ್ತಂ

ಚಂಪಕಮಾಲೆ

ಮೊದಲೊಳನಂತಲೋಕಮಧಃಕೃತಮಾದುದು ಮತ್ತಮುನ್ನತ
ತ್ರಿದಶರಲೋಕಮಿಂದೆನಗೆ ಸಂಪದದಿಂದಧಿಕಂ ದಲಾದುದೆಂ
ದದಱತಿಕೋಪದಿಂದಮರುಣಾಬ್ಜವಿಲೋಚನವಕ್ತ್ರಬಿಂಬಮಂ
ಪಡೆದಿರದೆತ್ತಿನೋಡುವವೊಲೊಪ್ಪಮನಾಳ್ದುದು ಮಂದರಾಗ್ರಕಂ ೧೩೬

ದಿವಸತಮಸ್ವಿನೀಭ್ರಮಣದಿಂದಭಿರಂಜಿಪ ಕಾಂಚನಾಚಳಂ
ನವನಿಜತೇಜಮಂ ನಿಖಿಳಕಾಷ್ಠೆಯೊಳುಜ್ವಳಿಸುತ್ತುಮಿರ್ದುದು
ಪ್ರವರವಿವಾಹದಲ್ಲಿ ಸಲೆ ದಂಪತಿಗಳ್ ಬಲಗೊಳ್ವ ಹೋಮದ
ಹ್ವಿವಿಸರ ಪುಂಜಮೆಂಬ ಬಗೆಯಂ ನೆಱೆಪುಟ್ಟಿಸುತಿರ್ದುದಾಕ್ಷಣಂ ೧೩೭

ಬಿಳಿಯ ಮುಗಿಲ್ಗಳಾವರಿಸಿದರ್ಧಸುವರ್ಣಮಯಸ್ವರೂಪಮಂ
ತಳೆದುದು ಸಂತಿಯೆಂಬುರುಕಪಾಲಮಾಲಿಕೆಯಿಂದಮೊಪ್ಪಿ ತಾಂ
ತಲೆಯೊಳೆ ಪೊತ್ತು ಪಾಂಡುಕಶಿಲಾತಳಮೆಂಬ ದಲರ್ಧಚಂದ್ರನಂ
ಬಳಯಿಸಿತರ್ಧನಾರಿ ಪರಿಶಂಕೆಯನಾಂತು ಗಿರೀಶಭಾವಮಂ ೧೩೮

---

[1] ಬೇ (ಜ)

ಶಶಿರವಿಮಂಡಳಂಗಳೆರಡುಂಕೆಲದೊಳ್ ಪರಶಂಖಚಕ್ರದಂ
ತೆಸೆದಿರಲಂತರಾಳ ಧೃತನೀಲಮಣಿಪ್ರಭಹೇಮಮೂರ್ತಿಕಂ
ಪೊಸತೆನಿಸಿರ್ದ ಪೀತವಸನಾವೃತಕೃಷ್ಣನ ಮೂರ್ತಿಯಂದಮಂ
ಪೊಸಯಿಸಿತಿರ್ದ ಮೇರುನವಮಾಲೆಯಿನೊಪ್ಪಮನಾಂತುದಗ್ಗಳಂ ೧೩೯

ಉತ್ಪಲಮಾಲೆ

ಬಂದಮನೆನ್ನ ಸನ್ನಿಧಿಗೆ ಧರ್ಮಜಿನೇಶ್ವರನೆಂಬ ತೋಷದಿಂ
ದಂದು ಮಣಿಪ್ರಭಾತತಿಗಳೆಂಬ ಲಸತ್ಪುಲಕೋದ್ಗಮಂಗಳಿಂ
ದೊಂದಿ ಮರುಚ್ಚಲತ್ಸುರಮಹೀರುಹಶಾಖೆಗಳೆಂಬ ಕೈಗಳ
ಸ್ಪಂದನದಿಂದೆ ನಾಟ್ಯಮನೊಡರ್ಚುತುಮಿರ್ದವೊಲಾಯ್ತು ಮಂದರಂ ೧೪೦

ಮತ್ತೇಭವಿಕ್ರೀಡಿತ

ಮಿಗೆನಿಷ್ಕಂಪ ಚಮೂಧ್ವಜಾಗ್ರನೆನಿಪಾ ದೇವೇಂದ್ರನೆಕ್ತಪ್ಪ ಜೋ
ಜಿಗಮಂ ನೋಡುವೆನೆಂದು ಮುಂದೆ ಪಿರಿದಾದೌತ್ಸುಕ್ಯದಿಂಪೆಯ್ದೆ ಸಾ
ರಿಗೆ ತಾಂ ಬಂದುಜಿತ ನಿಂದುದೆಂಬ ತೆಱದಿಂದಾಯ್ತಾಕ್ಷಣಂ ಸಮ್ಮುಖಂ
ನಗರಾಜಂ ಪ್ರತಿನಾದದಿಂ ವಿನಯವಾಕ್ಸಂಭಾಷಣಂಗೆಯ್ವವೊಲ್ ೧೪೧

ಗಜದಂತಾದ್ರಿಗಳಿಂದಮೊಪ್ಪಿ ಘನಸತ್ಪಾದಂಗಳಿಂ ಶೋಭೆಯಂ
ಭಜಿಸಿ ಪ್ರೋನ್ನತದಾನ[1]ವಾರಿ[1]ಗಳಿಗಾಧಾರಂ ದಲಾಗಿರ್ದ ಸ
ರ್ವಜನಸ್ತುತ್ಯಕರಾಗ್ರ ಸಂಚರಣದಿಂ ಜೆಲ್ವಾಗಿಯಾ ಮೇರು ನಾ
ಕಜಮಾತಂಗದ ಮುಂದೆ ತಾಂ ಪ್ರತಿಗಜಂ ನಿಂದಿರ್ದುದೆಂಬಂದದಿಂ ೧೪೨

ವಚನ : ಮತ್ತಮಂತಲ್ಲದೆಯುಂ

ಚಂಪಕಮಾಲೆ

ನಿರತಿಶಯಾಗಮಪ್ರಭವಕಾರಣಕಂ ಘನಮಾನಮಾನಿತಂ
ಸ್ಥಿರಗುಣಕಂ ಕ್ಷಮಾಧರಮುಮೆಯ್ದೆ ನಿರಾಶಮಶೇಷಲಾಲಿತಂ
ಗುರುಭುವನಕ್ಕೆ ಸಾಧುಪರಿಕೀರ್ತಿತ ಪಾದಮುಮಾಗಿ ತಜ್ಜಿನೇ
ಶ್ವರನ ಸಮೀಪದೊಳ್ ಗಣಧರಪ್ರಭುವೆಂಬಿನಮಿರ್ದುದಾ ನಗಂ ೧೪೩

ವಚನ : ಇಂತಪ್ಪದ್ಭುತಾತಿಶಯ ಪರಿವರ್ಣನೀಯಮಾದ ಸುವರ್ಣಾಚಲಮೂಲ ಮನಾಖಂಡಳಂ ನೋಡಿ ನಾಡೆಯುಂ ಸಹಸ್ರಮುಖದಿಂ ಕೊಂಡಾಡುತ್ತುಂ ಮತ್ತಮದಂ ಪೊಗಳ್ವ ಸುರಸೇನೆಯ ಕಳಕಳರವಮಂ ಕೇಳುತ್ತುಂ ಮುಟ್ಟಿವಂದು ಪಿಂದೆ ಬರುತ್ತುಮಿರ್ದ ವೃಂದಾರಕವೃಂದಮೆಲ್ಲಮನೊಂದಾಗಿ ಕೂಡಿಕೊಂಡು ಮಂದಯ್ಸಿ ಪೋಗಲ್ವೇಡಿ

[1] ಧಾರೆ (ಕಚ)

ಮತ್ತೈರಾವತಮಾತಂಗಮನಲ್ಲಿ ನಿಲಿಸಿ ಕುಂದದ ಪರಮಾನಂದದೊಳೊಂದಿ ನಿಂದಿರ್ದು ದಿಶಾವಲೋಕನಂಗೆಯ್ವಾಗಳ್

ಉತ್ಪಲಮಾಲೆ

ಒಂದೆಡೆಯಲ್ಲಿ ಪಾಡುವವರಂ ಬಿಡದೊಂದೆಡೆಯಲ್ಲಿ ನಾಟ್ಯಮಂ
ಗೊಂದಣಿಸಿರ್ದೊಡರ್ಚುವವರಂ ಮಿಗೆಯೊಂದೆಡೆಯಲ್ಲಿ ಭಕ್ತಿಯಿಂ
ವಂದಿಸುತಿರ್ಪ ದೇವನಿವಹಂಗಳನೆಯ್ದೆ ಸಹಸ್ರದೃಷ್ಟಿಯಿಂ
ದಿಂದ್ರನತೀವರಾಗರಸಮುಣ್ಮಲದೊರ್ವೊದಲಲ್ಲಿ ನೋಡಿದಂ ೧ಳಳ

ವಚನ : ತದನಂತರಂ

ಮಹಾಸ್ರಗ್ಧರೆ

ಸುರರಾಜಂ ಮೆಚ್ಚಿ ತಾಳ್ದಂ ನಿರುಪಮಮಮಘಸಂತೋಷದುತ್ಕರ್ಷಮಂ ಬಂ
ಧುರಭವ್ಯಸ್ತೂಯಮಾನಂ ಪರಮಜಿನಪಪೂಜಾವಿಧಾನಪ್ರದಾನಂ
ಸ್ಫುರದುತ್ತೇಜೋವ್ರಜಂ ಬಾಹುಬಲಿ ಸುಕವಿರಾಜಂ ವಿಬೋಧಾನುಭಾವಂ
ವರಸದ್ಧರ್ಮಪ್ರಭಾವಂ ಕುಮತಸಮುಪಹಂ ಚಾತುರೀಜನ್ಮಗೇಹಂ ೧ಳಜ

ಗದ್ಯ : ಇದು ಸಕಳಭುವನಜನವಿನೂಯಮಾನಾನೂನ ಮಹಿಮಾಮಾನನೀಯ
ಪರಮಜಿನಸಮಯಕಮಳಿನೀಕಳಹಂಸಾಯಮಾನ ಶ್ರೀಮನ್ನಯಕೀರ್ತಿದೇವ
ಪ್ರಸಾದಸಂಪಾದಪಾದನಿಧಾನದೀಪವರ್ತಿಯುಭಯಭಾಷಾಕವಿ
ಚಕ್ರವರ್ತಿ ಬಾಹುಬಲಿಪಂಡಿತದೇವ ಪರಿನಿರ್ಮಿತಮಪ್ಪ
ಧರ್ಮನಾಥಪುರದೊಳ್ ಧರ್ಮತೀರ್ಥಂಕರ
ಕುಮಾರೋದಯ ವರ್ಣನಂ

**ಸಪ್ತಮಾಶ್ವಾಸಂ**

# ಅಷ್ಟಮಾಶ್ವಾಸಂ

ಕಂದ : ಶ್ರೀಮಜ್ಜಿನಪತಿಪೂಜಾ
ಪ್ರೇಮಂ ವಿಬುಧಾಧಿನಾಯಕಂ ತಾಳ್ದಂ ನಿ
ಸ್ಸೀಮ ಸಂತೋಷಭರಮಂ
ಸೋಮಯಶಂ ಸರಸಚತುರ ಕವಿಕುಳತಿಲಕಂ ೧

ವಚನ : ತದನಂತರಂ

**ಉತ್ಪಲಮಾಲೆ**

ಬಂದ ಜಿನಂಗೆ ಮೇರುಗಿರಿ ತನ್ನಯ ರತ್ನಮರೀಚಿ ನೀರದಿಂ
ದಂದಿರದರ್ಘ್ಯಪಾದ್ಯಮನೆ ಕೊಟ್ಟು ಪಯೋಜದ ಮೌಕ್ತಿಕಾಕ್ಷತೋ
ವೃಂದದಿನರ್ಚಿಸಿ ಪ್ರಬಲತತ್ಪ್ರತಿನಾದದೆ ಸಂಸ್ತವಂಗಳಂ
ಕುಂದದ ಭಕ್ತಿಯಿಂ ಬಿಡದೆ ಮಾಳ್ಪವೊಲೊಪ್ಪುತುಮಿರ್ದುದಾಕ್ಷಣಂ ೨

ಕಂದ : ಕಡುಗಾಳಿಯಿಂದೆ ಮೇಗ
ಣ್ಗಡರ್ದುಱಿ ಮುಂಡಳಿಸಿ ಕೆದಱಿ ಬೀಳ್ವಲರಿಂದಂ
ಕೊಡುವಂತಿರ್ದುದು ಜಿನಪತಿ
ಯಡಿಗಳ್ಗೆ ಸುಮೇರು ಚಾರುಪುಷ್ಪಾಂಜಳಿಯುಂ ೩

ಸುರಪತಿ ಕೂರಂಕುಶದಿಂ
ಸುರಕರಿಪತಿಯುಂ ದಲಣೆದು ನೂಂಕಲ್ಕೆ ಕರಂ
ಸುರಗಿರಿಯನಡರ್ದುದಾಗಳ್
ಸುರತೂರ್ಯನಿನಾದಮೆಯ್ದೆ ಪುದಿಯಲ್ ದೆಸೆಯುಂ ೪

**ಮತ್ತೇಭವಿಕ್ರೀಡಿತ**

ಸಮಭೂಮಂಡಳಮಂ ಸಮಂತು ತಳೆದಿರ್ದೈರಾವತಂ ಪುಂಡರೀ
ಕಮುಮಾ ವಾಮನಮುಂ ಲಸತ್ಕುಮುದಮುಂ ಕ್ರೂರಾಂಜನಂ ಪುಷ್ಪದಂ
ತಮುಮಾ ಸಾರ್ವಭೌಮಮುಂ ಪಿರಿದುಮಾದ್ಯತ್ಸುಪ್ರತೀಕಂ ದಲೆಂ
ಬ ಮಹಾದಿಗ್ಗಜಭಾರಮಂ ತಳೆದು ಕೀಳ್ಮಾಡಿತ್ತು ಭೂಭೃತ್ವಮಂ ೫

ಮದಮಾತಂಗಘಟಾವಿತಾನಪದಸಂಚಾರಪ್ರಹಾರಂಗಳಿಂ
ದದು ಸುಗ್ಗಾಗದೆ ತಗ್ಗಿ ಮುಗ್ಗದೆ ಕರಂ ತಾಳ್ದಿರ್ದು ತದ್ಭಾರಮಂ
ಪಡೆಪಿಂ ತನ್ನ ಮಹಾಚಲತ್ವಮನದಂ ಸತ್ಯಾರ್ಥಮಂ ಮಾಡುತಿ
ರ್ದುದು ತನ್ಮಂದರಮಂದು ಸುಸ್ಥಿರನನಾಂತಿರ್ದಾಂತುದು ಸ್ಥೈರ್ಯಮಂ ೬

ಮಹಾಸ್ರಗ್ಧರೆ

ಅದು ಕಾಣಲ್ಪಟ್ಟೊಡಂ ಮುನ್ನಡಿಗಡಿಗನಿಶಂ ಮತ್ತಮಾತಂಗಸೇನಾ
ಮದಧಾರಾಪೂರಮೆತ್ತಂ ಪಸರಿಸಿ ಪರಿದಾ ಮೇರುವಂ ವ್ಯಾಪಿಸಲ್ ಮಾ
ಣದೆ ಮತ್ತಾ ಪೊತ್ತಿನೊಳ್ ಕಜ್ಜಲಮಯಗಿರಿರಾಜಂ ದಲೆಂಬೊಂದು ಶಂಕಾ
ಪದಮಂ ದೇವಾಸುರೌಘಂಗಳಿಗೆ ಸುರನಗಂ ಪುಟ್ಟಿಸುತ್ತಿರ್ದುದಾದಂ ೭

ಮತ್ತೇಭವಿಕ್ರೀಡಿತ

ಘನಕುಂಭಸ್ಥಳಜಾತರತ್ನರುಚಿಯಿಂದಂತಸ್ತಮಂ ಕೂಡೆ ತ
ತ್ತನುವಿಂದಂ ಪೊಱಮಟ್ಟುಪೋಪ ತೆಱದಿಂ ಗಂಡಸ್ಥಳೀನಿರ್ಗತಾ
ತನುದಾನಾಂಬುಗಳಿಂ ನಿರುದ್ಧನಯನಂಗಳ್ ಭದ್ರಮಾತಂಗ ಪಾ
ವನಯೂಥಂಗಳವೇಱಿ ಪೋದುವು ಕರಂ ಮಂದಪ್ರಚಾರಂಗಳಿಂ ೮

ವಚನ: ಅದಱಿಂ ಬಳಿಯಂ

ಮತ್ತೇಭವಿಕ್ರೀಡಿತ

ಮದವೆಂಬಂಜನದಿಂ ಗಜಂಗಳನುವಿಂದಂ ದಕ್ಷರ ನ್ಯಾಸಮಂ
ಕೆದಱಲ್ ಮತ್ತೆ ಖುರಂಗಳೆಂಬ ವಿಲಸಟ್ಟಂಕಂಗಳಿಂ ವಾಜಿಗಳ್
ಪಡೆಪಿಂ ಜೈನಯಶಃಪ್ರಶಸ್ತಿಯನದಂ ಹೇಷಾಳಿಯಿಂದೋದುತಂ
ಮುದದಿಂದಂ ಬರೆವಂತೆ ಮೇರುಶಿಲೆಯೊಳ್ ಪೆಂಪೋದವೆಯ್ದೊಪ್ಪದಿಂ ೯

ಚಂಪಕಮಾಲೆ

ಕುಸಿಯೆ ಕೊರಳ್ಗಳುಂ ತೆಗೆದ ವಾಘೆಗಳಿಂ ನೆಱಿಪಿಂದಣಂಗಮಂ
ಪಸರಿಸೆ ಪೂರ್ವಕಾಯದೊಳೆ ಸಂಕುಚಿತಾಂಗತುರಂಗಮಂಗಳುಂ
ಪೊಸತೆನಿಸಿರ್ದ ಚಿತ್ರಗತಿಯಿಂ ಕುಣಿವುತ್ತುಮವೆಯ್ದೆ ಕೂಡಿ ಸಂ
ತಸದೊಳೆ ಪೋದುವಂದು ಜಿನನಾಥನ ಮುಂದೆ ವಿಶೇಷವೇಷದಿಂ ೧೦

ಕಂದ: ಕುದುರೆಗಳ ಖುರವಿಘಟ್ಟನ
ದೊದವಿಂ ನೆಗೆವುತ್ತುಮಿರ್ದ ಕಿಡಿಗಳ್ ಶೋಭಾ
ಸ್ಪದಮಾದುವು ಭೂತಳಮಂ
ಪಡೆದೊಡೆದುಱಿ ನೆಗೆವ ಫಣಿಪಮೌಲಿಪ್ರಭೆಯೊಲ್ ೧೧

ಉತ್ಪಲಮಾಲೆ

ಸಾಧಿತ ಪಂಚಧಾರೆಗಳೆನಿಪ್ಪ ಮನೋಜ್ಞತುರಂಗಮಂಗಳು
ದ್ಬೋಧಿತ ವಿಸ್ಮಯಾಭಿನವವೀಥಿಗಳೊಳ್ ಬಿಡದುಚ್ಚನೀಚಮಾ
ರ್ಗಾಧಿಕವೇಗದಿಂದೆ ಪರಿಲಂಘಿಸುವಲ್ಲಿಯಮೇ ನಭೋಂತದೊಳ್
ಸಾಧನೆಯಿಂದೆ ಮತ್ತೆ ಕೆಲವೆಂಬಿನಮೊಂದೆರಡಾಗಿ ತೋಱುಗುಂ ೧೨

ವಚನ : ಮತ್ತಂ

ಉತ್ಪಲಮಾಲೆ

ಕಾಂಚನಭೂಮಿಭಾಗಮದು ಚಾರುರಥಂಗಳ ತೀಕ್ಷ್ಣನೇಮಿಧಾ
ರಾಂಚಿತಮಾಗಿ ತಾನೊಡೆದು ಧೂಳಿಸಮಾಕುಳಮಾದುದಂತು ಮು
ನ್ನಂ ಚಿರಕಾಲದಿಂ ನಡೆದೊಡಂ ರವಿ ಸಾರಥಿಗೆಯ್ದೆ ಚಿತ್ತಮಂ
ಸಂಚಳಿಸುತ್ತುಮಿರ್ದುಱಿ ಪಥಭ್ರಮವೆಂತಿರದಪ್ಪುದಾಕ್ಷಣಂ ೧೩

ವಚನ : ಅನಂತರಂ ಪದಾತಿಸೈನ್ಯಂ ಪತ್ತಿಪೋಪ ಪೊತ್ತಿನೊಳ್

ಚಂಪಕಮಾಲೆ

ಅದು ಮೊದಲಾಗಿ ಮಕ್ಕಳುಗಳಂತಿರೆ ದೇವಸಮೂಹಮೆಲ್ಲಮುಂ
ಪದುಳದೆ ಭೂಮಿಯಲ್ಲಿ ಚರಣಂಗಳನಿಟ್ಟುಱಿ ಮೆಲ್ಲಮೆಲ್ಲನಾ
ತುದಿಗಿರಲೆಯ್ದುವಲ್ಲಿ ಸಲೆಮುಂದನೆ ಪೋಪ ಯಮಂ ವಿದೃಷ್ಟಿದೋ
ಷದ ಪರಿಹಾರಕಾರಣಮೆ ಕಾಡಿಗೆಯಾರತಿಯಂತಿರೊಪ್ಪದಿಂ ೧೪

ವಚನ : ಆಗಳ್

ಉತ್ಪಲಮಾಲೆ

ಮೂಸಿ ನಿತಂಬಮಂ [1]ಮು[1]ದದಿನೆತ್ತಿ ನಿಜಾನನಮಂ ನಿಕುಂಚಿತೋ
ನ್ನಾಸಿಕೆಯಗ್ರಮಂ ಪಡೆದರಳ್ಚಿಸಿ ಮಾಣದೆ ಕಾಮಧೇನು ಸಂ
ಭಾಷಿತ ಪೃಷ್ಠಮಂ ಬಿಡದೆ ಪತ್ತಿರದೋಡುವ ಗೂಳಿ ಕಾಡಿ ಸಂ
ಕ್ಲೇಶಮನಿತ್ತುದೇಱಂ ನಡೆವಲ್ಲಿ ಕುಬೇರಸಖಂಗೆ ನಾಡೆಯುಂ ೧೫

ವಚನ: ಅಂತು ದ್ವಿವಿಜರ ಪಡೆ ನಡೆಯೆ

ಚಂಪಕಮಾಲೆ

ಅತಿಮುದದಿಂದನಂತಪಥದೊಳ್ ಪಥಿಕರ್ ವಿಬುಧರ್ ಬರಲ್ಕೆಯು
ನ್ನತಶಿರದಲ್ಲಿ ತಾಳ್ದಿ ವಿಬುಧೌಘ ನಿರಂತರಿತಾನುವೃತ್ತಿಸಂ
ಗತಫಲಮಂ ಜಗಕ್ಕೆ ನೆಱಿತೋಱಿಸುತಿರ್ದುದಾಕ್ಷಣಂ ಮಹಾ
ಕ್ಷಿತಿಯೊಳುದಾತ್ತರಪ್ಪರುಚಿತಜ್ಞತೆಯಂ ಸಲೆ ಮಾಡದಿರ್ಪರೇ ೧೬

[1] ಮು (ಜ)

ಉತ್ಪಲಮಾಲೆ

ಬಂದುದು ಭದ್ರಸಾಲವನಸಾನುಗದೆಂಬನಿತಕ್ಕೆ ಬೇಗದಿಂ
ನಂದನಸಾನುಗೆಯ್ದುದದೊರ್ವೆಯೆ ಸೌಮನಸಕ್ಕೆ ಪೋದುದ
ಲ್ಲಿಂದವೆನಲ್ಕೆ ಪಾಂಡುಕಶಿಲಾಪನಸಾನುಗಡರ್ದುದಿಂತು ದೇ
ವೇಂದ್ರನ ವಿಕ್ರಿಯಾಗಜಮದೇಂ ಮನದಿಂ ಕಡುವೇಗಿಯಾದುದೋ ೧೭

ಕಂದ : ಇಂದ್ರನನಗಲ್ದಿರಲಾಱದೆ
ನಂದನಮಾ ದಿಸದಿನಿಳಿದು ಬಂದಿರ್ದುದೆನಲ್
ಮುಂದೆ ನೆಲಸಿರ್ದ ಪಾಂಡುಕ
ಸೌಂದರವನಮಂ ಸುರೇಂದ್ರನೆಯ್ದಿದನೊಲವಿಂ ೧೮

ವಚನ : ಆಸಮಯದೊಳ್

ಕಂದ : ಪಾಂಡುಕವನವನಜವನಾ
ಡಂಬರದಿಂ ಬಂದ ಮಂದಮರುತಂ ಕಾಮವಿ
ಡಂಬನಮುಂಡಿತನಂತಿರ
ಖಂಡಂ ನೆಱೆಬೀಸಿದತ್ತು ಮಂದರಗತಿಯಿಂ ೧೯

ಶಾರ್ದೂಲವಿಕ್ರೀಡಿತ

ದೇವಸ್ತ್ರೀಯರ ಕೇಶಮಂ ಕೆದಱುತುಂ ವಸ್ತ್ರಂಗಳಂ ನೂಂಕಿ ಜಂ
ಘಾವಕ್ಷೋರುಹಮಂಡಳಂಗಳನಮಂ ಮುಟ್ಟುತ್ತುಮಂಗಂಗಳಂ
ತೀವಿ ವ್ಯಾಪಿಸಿ ಮಿಕ್ಕು ತರ್ಕಯಿಸುತುಂ ತಾಳ್ದತ್ತು ಸತ್ಸೌಖ್ಯಮಂ
ಭಾವಾಶಂ ಮರುತಂ ಮರುತ್ಪದಮಂ ತಾನೆಯ್ದಿತಂದೆಂಬಿನಂ ೨೦

ವಚನ : ಇಂತು ಕಲ್ಪಾಧಿನಾಯಕಂ ಸಮಸ್ತಜನಸಂಕಲ್ಪಿತವಸ್ತುಪ್ರಧಾನಪ್ರವೀಣಾನಲ್ಪತರ ಕಲ್ಪತರುವರನಿಕರರಮಣೀಯಮುಂ ಚಾರುನಿರ್ಝರವಾರಿಧಾರಾಪೂರವಿಹಾರ ಮನೋಹಾರಿಯುಂ ವಿಲಸತ್ಕಿಸಲಯಕುಸುಮವಿಸರವಿಪುಳಫಳಮಂಡಳಾಖಂಡಮಂಡನಾಭಿಯೋಗಪರಿಮಂಡಿತಮುಮೆನಿಸಿಪ್ಪ ಪ್ರಕಾಂಡಕಪಾಂಡುಕವನಮಂ ದೂರದೊಳ್ ಕಂಡು ಮನಂಗೊಂಡು ಕೊಂಡಾಡುತ್ತುಂ ಮುಂದೆಪೋದ ಸರ್ವಗೀರ್ವಾಣಸೈನ್ಯಮೆಲ್ಲಮನಲ್ಲಿ ಬಿಡಲ್ವೇಳ್ವುದುಂ ಸ್ಥಳಚರ ವನಚರ ಜಳಚರ ಶಾಖಾಚರಂಗಳಪ್ಪ ತಂತಮ್ಮ ವಾಹನಂಗಳ್ಗೆ ಯೋಗ್ಯಂಗಳಾದ ಸ್ಥಾನಂಗಳಂ ನೋಡಿ ಯಥಾಯಥಮಾಗಿ ದೇವರ್ಕಳೆಲ್ಲಂ ನಿಜನಿಜವಾಹನಂಗಳನಲ್ಲಿ ನಿಲಿಸುವುದುಂ

ಚಂಪಕಮಾಲೆ

ಸಕಳ ಸುರಾಸುರರ್ ನಿಜನಿಜೋಚ್ಚಗಜಂಗಳ ಮೇಲೆ ಪಣ್ಣಿದ
ಪ್ರಕಟಕುಥಂಗಳಂ ತೆಗೆದೊಡಾಕ್ಷಣದೊಳ್ ನೆಱೆಬಿಟ್ಟಪಂತವಂ
ವಿಕಸಿತಕರ್ಮಕಾವರಣಮಂ ಬಿಡುವಂತಿರೆ ಲೋಕದೊಳ್ ಜಿನಾ
ಧಿಕತರಮಾರ್ಗಗಾಮಿಗಳಿಗಾವರಣಂ ಸಲೆ ಬಿಟ್ಟುಪೋಗದೇ ೨೧

ವಚನ : ಅನಂತರಂ

ಉತ್ಪಲಮಾಲೆ

ಭೂರಿಪಯೋಧರಸ್ಥಿತಿಯನೊಪ್ಪಿ ವಿಶೇಷವಿಲಾಸದಿಂ ಮನೋ
ಹಾರಿಯುಮಾಗಿ ವಾಮೆಯೆನಿಸಿರ್ದನಿಱ ಪೋಗುತಮಿರ್ದ ತನ್ನದೀ
ನಾರಿಯ ಕೇಶದಂತೆಸೆವ ನೀಲಸಮುತ್ಪಲಮಂ ಕರಾಗ್ರದೊಳ್
ಸೇರಿಸಿ ಬಲ್ಪಿನಿಂ ಪಿಡಿದು ಸೇವಿಸಿದತ್ತು ಮಹಾಮತಂಗಜಂ ೨೨

ಹಾವಸೆಯೆಂಬ ನೀಲಿಯ ಸುವಸ್ತ್ರಮನೆಯ್ದೆ ತೆರಳ್ಚಿ ಮಧ್ಯಮಂ
ಭಾವಿಸಿ ದಂತಿ ಮುಟ್ಟಲೆರಡುಂತಡಿಗಳ್ ಜಘನಂಗಳಂತಿ[1]ರೆ[1]
ದ್ರಾವಮನಾಂತಿರಲ್ ನದಿಯೊಳಾಳ್ದುದು ಸೂಚಿಪ ಮಾಳ್ಕೆಯಿಂ ವಧೂ
ಸೇವೆಯ ಸಂಗದಿಂ ಬಿಡದಧೋಗತಿಯಪ್ಪುದು ತಪ್ಪದೆಂಬಿದಂ ೨೩

ಕಂದ : ಜಲದೊಳ್ ಮು[2]ೞ್ಗಿ[2]ದ ಕರಿ ನೀ
ಳ್ದಲಘುಕರಾಗ್ರಮುಮನೆತ್ತಿರಲ್ ಗಂಡವಿಸಂ
ಡಲದಿಂದೆಳ್ದಳಿವಳಯಂ
ಪೊಳೆದುದು ಘನದಂಡನೀಲಿಕಾಚ್ಛತ್ರದವೊಲ್ ೨೪

ದ್ರುತವಿಳಂಬಿತ

ಮಿಗೆ ರಜಸ್ವಲೆಯಾದೊಡಮಾ ಗಜಾ
ಳಿಗಳವುಂ ನಟಿಯುಂ ಭಜಿಸಿರ್ದವೀ
ಜಗದೊಳುದ್ಧಮದಾಂಧಿತರಪ್ಪವರ್
ಬಗೆವರೇ ಗುಣದೋಷವಿಶೇಷಮಂ ೨೫

ಕಂದ : ನೀರಡಿಕೆಯಾದೊಡಂ ವನ
ವಾರಣಮುದಮಿಳಿತಜಳಮನೀಂಟಿದುದಿಲ್ಲಾ
ವಾರಣಗಣಮಭಿಮಾನಮೆ
ಸಾರಂ ಮಾನ್ಯರ್ಗೆ ಪೀಡಿತಾವಸ್ಥೆಯೊಳಂ ೨೬

---

[1] ರಲ್ (ಜ) [2] ಗ್ಗಿ (ಕ) ಗಿ (ಗ)

ವಚನ : ಅಂತುಮಲ್ಲದೆಯುಂ

ಚಂಪಕಮಾಲೆ

ಕಮಳದೆಸಳ್ಗಳಂ ಕಿಱಿದು ಮೇಲಿರದೊಟ್ಟೆಕೊಳಲ್ಕಮಂತಮೆ
ಲ್ಲಮುಮುಱಿಕ ದೇಹದಲ್ಲಿ ಮಿಗೆ ಪತ್ತಿರಲೊಪ್ಪುತುಮಿರ್ದುದಾ ಗಜಂ
ಕಮಳಿನಿಯೆಂಬ ಕಾಂತೆ ರತಿಕೇಳಿಯೊಳೆಯ್ದೆ ನಖಕ್ಷತಂಗಳಂ
ಪ್ರಮದದೊಳಿಕ್ಕಿದಂತಿರೆ ಜಲಾಶಯದಿಂ ಪೊಱಮಟ್ಟುದಾಕ್ಷಣಂ ೨೭

ವಚನ : ಅಂತು ಪೊಱಮಟ್ಟು ಪೋಗುತ್ತುಮಿರ್ದ ಗಂಧಸಿಂಧುರಮಾ ವನದಲ್ಲಿ ಮುಂದೊಂದೆಡೆಯೊಳ್ ದೊಡ್ಡಮಾಗೊಡ್ಡುಗೊಂಡು ಕಱಂಗಿ ನಿಂದು ಕರಿಕಲೇವರಾಕಾರಮನನುಕರಿಸುತ್ತುಮಿರ್ದ ಸಪ್ತಚ್ಛದಮುಂ ಕಂಡು ಪ್ರತಿಗಜಮೆಂಬ ಭ್ರಾಂತಿಯಿಂದುಪಾತ್ತಕೋಪಮಾಗಿ ಪೋಗಿ ಕೋಡುಗಳ ಮೊನೆಯಿಂದೀಡಿಱಿದದಂ ಕೆಡಪಿ ಬಳಿಯಂ ವೀಥಿಮಾರ್ಗಮುಂ ಬಿಟ್ಟು ಯದೃಚ್ಛೆಯಿಂದತ್ತಲಿತ್ತಲ್ ಪರಿದೋಡಿ ಮಾವಂತಿಗನಂ ಕಾಡುತ್ತುಮಿರ್ದುದಂ ಮೆಲ್ಲಮೆಲ್ಲನೆ ಸಾಮೋಪಾಯಪ್ರಯೋಗದಿಂದಾಲಾನಸ್ತಂಭದಂತಿಕಕ್ಕೆ ತಂದು ನಿಲಿಸುವುದುಂ

ಚಂಪಕಮಾಲೆ

ಪಿರಿದು ನಯಪ್ರಯುಕ್ತಗಜಸಂತತಿಗಳ್ ಮಿಗೆ ತಮ್ಮ ತಮ್ಮ ಪೀ
ವರತನುಬಂಧನಾರ್ಥಮುರುರಜ್ಜುಗಳಂ ಸಲೆತಂದು ಕೈಗಳಿಂ
ದಿರದವು ಕೊಟ್ಟು ತಾವೆ ನೆಱೆಕಟ್ಟಿಸಿಕೊಂಡವು ಲೋಕದೊಳ್ ಜಡಾ
ತ್ಮರ ಗಡಣಂ ಹಿತಾಹಿತವಿವೇಕದ ವೃತ್ತಿಯನೆಂತುಬಲ್ಲುದೋ ೨೮

ವಚನ : ಅನಂತರಂ ಮತ್ತೊಂದೆಡೆಯೊಳ್

ಚಂಪಕಮಾಲೆ

ಸಡಿಲಿಸಿ ಪಲ್ಲಣಂಗಳನಮಂ ನೆಱೆಬಿಟ್ಟು ಸುರಾಸುರಾಳಿ ಕೈ
ಮುಡಗದೆ ಲೀಲೆಯಿಂ ತೆಗೆದುದಂದು ದೃಢೀಕೃತಕರ್ಮಬಂಧಮಂ
ಬಿಡಿಸುವ ಮಾಳ್ಕೆಯಿಂ ಕುದುರೆಗಳ್ ಕಡಿಯಾಣಮುಮಂ ಕಳಲ್ಚಿಕೊಂ
ಡೆಡಬಲದಲ್ಲಿ ಪಲ್ಮೊಸುತುಮೋಡಿಯೆ ಕಾಡಿದುವೆಯ್ದೆ ಗೋವರಂ ೨೯

ಉತ್ಪಲಮಾಲೆ

ಅತ್ತಲುಮಿತ್ತಲುಂ ಬಿಡದೆ ಸುತ್ತಿರದೋಡುವ ವಾಜಿರಾಜಿ ಸ
ದ್ವೃತ್ತಮುಖಂಗಳಿಂದುಗುವ ಫೇನಲವಂಗಳವಲ್ಲಿಗಲ್ಲಿಗಂ
ಬಿತ್ತರಿಸಿರ್ದುವಂದವಱ ಕೂಟದೆ ಭೂಮಿನಿತಂಬಿನೀ ಮನೋ
ಹೃತ್ತರಹಾರಮುಂ ಪಱಿದು ಚೆಲ್ಲಿದ ಮುತ್ತುಗಳೋಳಿಯೆಂಬಿನಂ ೩೦

ಮತ್ತೇಭವಿಕ್ರೀಡಿತ

ಸಲಿಲಕ್ರೀಡೆಯೊಳಿರ್ದ ವಾಜಿಗಳ ಸರ್ವಾಂಗಂಗಳೊಳ್ ತುಂಬಿ ಸೈ
ವಳಜಾಳಂ ಪುದಿಯಲ್ಕವಂದು ಪಿರಿದುಂ ನೀಲಂಗಳಾಗಾ ಕೊಳಂ
ಗಳಿನಾಗಳ್ ಪೊಱಮಟ್ಟುಪೋಪ ಪದದೊಳ್ ಸೂರ್ಯೋದ್ಧರಾಶ್ವಂಗಳಂ
ಜಲಧಿಕ್ರೋಡದಿನಂಬರಕ್ಕಡರ್ದು ಪೋಪಂತಾಳ್ದುವೆಯ್ದೊಪ್ಪಮಂ ೩೧

ವಚನ: ಇಂತು ನದೀನದಸರಸ್ಸಂಕುಳಂಗಳೊಳ್ ಜಲಾವಗಾಹನಂಗೆಯ್ದು ಬಳಿಯಂ ಪೊಱಮಟ್ಟುಪೋಪ ವಿರಾಜಮಾನ ವಾಜಿರಾಜಸಮಾಜಂಗಳಂ ನಯವಿದರಪ್ಪ ಚತುರವಾಹಕರನುನಯದಿಂ ತಂದು ತಂತಮ್ಮ ನಿವಾಸಮಂದಿರಂಗಳೊಳ್ ಕಟ್ಟಿದನಂತರಂ

ಕಂದ: ಜಿನನಂ ಧರಿಸಿದ ಕಾರಣ
ಮನಿಮಿಷಪತಿ ವೃಜಿನರಹಿತನಾಗಿ ಸುಪಾಂಡುಕ
ವನಮನುಱಿ ಮುಟ್ಟೆವಂದಂ
ಘನಮುದದಿಂ ನೋಡಿ ನೋಡಿ ಕೊಂಡಾಡುತ್ತುಂ ೩೨

ಉತ್ಪಲಮಾಲೆ

ಶೀಕರಸಾರದಿಂದೆ ಮಿಗೆ ನೀರ್ದಳಿದುಂ ಸುಪರಾಗದಿಂದೆ ಚಿ
ತ್ರೀಕರರಂಗವಾಲಿಯುಮನಿಕ್ಕಿದಳುತ್ಕುಸುಮೋಪಹಾರನುಂ
ಬೇಕೆನೆಮಾಡಿ ತುಂಬಿಗಳ ಮಂಗಳಗೀತಪುರಸ್ಸರಂ ಸುಮಂ
ದಾಕೃತಿವಾಯು ಬಂದುದು ಜಿನಂಗಿದಿರಾಗಿ ಪಯಃಕಣಾಕ್ಷತಂ ೩೩

ಕಂದ: ಆದರದಿಂದಂ ಜಿನಪತಿ
ಪಾದಂಗಳನೆಯ್ದೆ ಮುಟ್ಟಿ ಪೂಜಿಸಿ ಕರೆವಪೊ
ಲಾದುದು ಜಿನನಂ ತತ್ಸಮ
ಯೋದಯದೊಳ್ ಕೂಡೆ ಬೀಱುತಂ ಸೌರಭಮಂ ೩೪

ವಚನ: ಇಂತು ಸುರಪತಿ ಸುರಸಮಿತಿವೆರಸು ನಾಲ್ಕನೆಯ ಮೇಖಳೆಗೆಯ್ತಪ್ಪುದು ಮುದಱುತ್ತರ ಪೂರ್ವ ದಿಶಾಭಾಗಾಂತರಾಳದೊಳ್

ಕಂದ: ವಿಕಟ ಧೂರ್ಜಟಿಜಟಾಜೂ
ಟಕದೊಳಗರ್ಧೇಂದು ಪೊಳೆವವೊಲ್ ಮೇರುಚತು
ರ್ಥಕ ಮೇಖಳಾಗ್ರದೊಳ್ ಪಾಂ
ಡುಕಶಿಲೆ ಪರಿರಂಜಿಕುಂ ಸಿತಾಂಶುಪ್ರಸರಂ ೩೫

ಮಹಾಸ್ರಗ್ಧರೆ

ಘನಸಂಸಾರಾರ್ಥಿಯೆಂಬಂದದೆ ಗತಿಪಥಮಂ ಬಿಟ್ಟು ಲೋಕಾಗ್ರದಲ್ಲಿಂ
ಬಿನಮಾ ಹೇಮಾದ್ರಿಧಾಮಾಗ್ರದೊಳೆ ನೆಲಸಿ ನಿತ್ಯತ್ವಮಂ ತಾಳ್ದಿ ಪತ್ತಿಂ
ಬಿನೆಗಂ ಶೋಭಾವಿಶೇಷಾತಿಶಯಮನೊಳಕೊಂಡಿರ್ದ ತತ್ಪಾಂಡುಕಂ ಪಾ
ವನಮೋಕ್ಷಸ್ಥಾನಮೆಂಬಂತಿರೆ ಸುರಪನದಂ ಪೊರ್ದಿ ಸತ್ಸೌಖ್ಯನಾದಂ ೩೬

ವಚನ : ಮತ್ತಮದಷ್ಟಯೋಜನದುದ್ದಮುಯ್ವತ್ತುಯೋಜನದಗಲಮಗಲದಿಮ್ಮಡಿ ನೀಳಮಾಗಿ ಥಳಥಳಿಸಿ ಪೊಳೆವರ್ಧಚಂದ್ರಾಕಾರಮನನುಕರಿ [1]ಪು[1]ತ್ತುಮಿರ್ದ ಪಾಂಡುಕ ಶಿಲಾತಲಂ ಕಡುರಮಣೀಯತರಮಾಗಿರ್ದುದಂತುಮಲ್ಲದೆಯುಂ

ಚಂಪಕಮಾಲೆ

ಸುಳಿವಮರೀ ವಿಶಾಲಪರಿಲೋಲವಿಲೋಚನಸಂಚಯಂ ಸಮು
ಜ್ವಳಿತ ಸುಧಾಂಶುಕಾಂತಮಯ ಪಾಂಡುಶಿಲಾತಳದಲ್ಲಿ ಕೂಡೆ ಮಾ
ರ್ಪೊಳೆದೊಡದಂದು ಕಣ್ಗೊಳಿಪ ಬಾಳೆಯ ಮೀಂಗಳ ಮೊತ್ತಮೆತ್ತಲುಂ
ಬಳಸಿದ ದುಗ್ಧವಾರಿನಿಧಿಮ[2]ಧ್ಯ[2]ಮದೆಂಬಿನಮಾಳ್ದುದೊಪ್ಪಮಂ ೩೭

ಕಂದ : ಆ ಸಱಿಯು ನಟ್ಟನಡುವೆ ಮ
ಹಾ ಸಿಂಹಾಸನಮದೊಪ್ಪುಗುಂ ದುಗ್ಧಪಯೋ
ರಾಶಿಯ ನಡುವಣ ಮಣಿಭಾ
ಭಾಸುರರತ್ನಾದ್ರಿಯೆಂಬಿನಂ ಪೊಳೆಯುತ್ತುಂ ೩೮

ಶಾರ್ದೂಲವಿಕ್ರೀಡಿತ

ಆ ಸಿಂಹಾಸನದಿಕ್ಕೆಲಂಗಳೊಳಮೊಪ್ಪುತ್ತಿರ್ದವಂದು ಪ್ರಭಾ
ರಾಶಿವ್ಯಾಪ್ತಶುಭಾಸನಂಗಳೆರಡುಂ ಜನ್ಮಾಭಿಷೇಕೋದ್ಭವ
ಷಾಸೂಚೀಪ್ರತಿಸೂರ್ಯಬಿಂಬಯುಗಳಂ ಮಾರ್ತಂಡಸನ್ಮಂಡಲಾ
ಭ್ಯಾಸಸ್ಥಾನದೊಳಿರ್ದುದೆಂಬ ತೆಱದಿಂದಾ ಪಾಂಡುಕಾಕಾಶದೊಳ್ ೩೯

ವಚನ : ಮತ್ತಮಾ ಪಾಂಡುಕಶಿಲಾವಳಯದ ಮೇಲೆ

ಮತ್ತೇಭವಿಕ್ರೀಡಿತ

ಅಱಿಯಂ ಸೂತ್ರವಿಡಲ್ಕೆ ಮತ್ತಮದಱಿಂದಾಕಾರದಿಂ ಪ್ರೌಢಿಯಂ
ಮೆಱೆವಾ ರೂಢಿಯ ವಿಶ್ವಕರ್ಮನುಮೆನಲ್ ಕೌಶಲ್ಯಸಾಕಲ್ಯಮಂ
ನೆಱೆತಾಳ್ದಿರ್ದಳಿಸುಟ್ಟದಾಕ್ಷಣದೊಳಂತಿರ್ದಿರ್ದುದಂ ಬಣ್ಣಿಸ
ಲ್ಕಱಿಯೆಂ ಶ್ರೀಯಭಿಷೇಕಮಂಡಳಮನುಪ್ಯತ್ಕೇತುಮಾಲಾಪಮಂ ೪೦

---

[1] ಸಿಸು (ಜ) [2] ತ್ತ (ಕಚ)

ಕಂದ : ರತ್ನಮಯಮಪ್ಪ ಪಾಂಡುಕ
ನೂತ್ನಶಿಲಾಗ್ರದೊಳೆ ಪುಟ್ಟೆ ಕೂಡೆ ಮಡಲ್ತ
ಪ್ರತ್ನನಿಕುಂಜಂಗೊಂಡದು
ಯತ್ನದಿನಂಬರಮನಡರ್ವವೊಲ್ ಕಣ್ಗೆಸೆಗುಂ ೪೧

ಉತ್ಪಲಮಾಲೆ

ಸುತ್ತಲುಮೆಯ್ದೆ ತೆತ್ತಿಸಿದ ಮಿಂಚುವ ಮುತ್ತಿನ ಸೂಸಕಂಗಳಿಂ
ದುತ್ತಮಮಾದ ಕೆಂಬರಲ ಕಂಭದ ಪಂತಿಗಳಿಂ ವಿನೀಲಸ
ದ್ಭಿತ್ತಿಗಳೋಳಿಯಿಂದೆ ಪವಳಂಗಳ ಕೀಲ್ಗಳಿನೊಪ್ಪದೇಳ್ಗೆಯಿಂ
ಬಿತ್ತರಿಸುತ್ತುಮಿರ್ದುದಭಿಷೇಕದ ಮಂಡಪಮುದ್ಘಮಂಡಪಂ ೪೨

*

ಚಂಪಕಮಾಲೆ

ಕೆದಱಿದ ಜೊಲ್ವ ಪೂವಲಿಗಳಿಂ ಬಿಡುಮುತ್ತಿನ ರಂಗವಾಲಿಯಿಂ
ಪುದಿದುಱೆ ಚೆನ್ನರನ್ನದುರುತೋರಣದೋರಣವೀಧಿಯೊಳ್ ತೊಡ
ರ್ಚಿದ ಪೊಸಪೊನ್ನಘಂಟೆಗಳಿನುತ್ತಮಮಂಗಳದರ್ಪಣಂಗಳಿಂ
ದದು ರಮಣೀಯಮಾಗಿ ಪರಿರಂಜಿಸಿದತ್ತಭಿಷೇಕಮಂಡಪಂ ೪೩

ಕಂದ : ಘನಕೌತುಕ[1]ಕ[1]ರಶೋಭೆಯಿ
ನನುಪಮ ಸರಸಮವಸರಣಮೆನ್ನದೆ ಮತ್ತೊಂ
ದನೆ ಬೇಱೆ ಕಲ್ಪಿಸುವುದೇ
ಜಿನಪನ ಜನ್ಮಾಭಿಷೇಕಮಣಿಮಂಡಪಮಂ ೪೪

ವಚನ : ಮತ್ತಮದಱೊಳ್

ಕಂದ : ನಿಲಿಸಿದ ನೆಲವಡಲಿಗೆಗಳ
ಪಲವಾದುಱೆ ಜಾಗರಂಗಳಿಂ ದ್ವಿಗುಣಿಸಿದ
ಗ್ಗಳ ಪಚ್ಚೆಯ ಕಂಬಂಗಳ
ಬೆಳಗುಂ ಪೊಲಗೆಡಿಸಿದತ್ತು ಸುರರೀಕ್ಷಣಮಂ ೪೫

ಹರಿನೀಳಸ್ತಂಭಾಭ್ಯಂ
ತರದೊಳ್ ಮಾರ್ಪೊಳೆದ ರತ್ನದೀಪಪ್ರಭೆ ಬಂ
ಧುರಮಾದುದು ಕೃಷ್ಣನ ಭಾ
ಸುರತನುವಂ ನೆಮ್ಮಿ ತೋರ್ಪ ಲಕ್ಷ್ಮಿಯ ಬಗೆದಿಂ ೪೬

---

[1] ತ (ಜ)

* (ಜ) ಪ್ರತಿಯಲ್ಲಿ ೪೩ನೆಯ ಪದ್ಯವಿಲ್ಲ.

ಅರುಣಮಣಿದೀಪದಿಂದಂ
ಪರಭಾಗಂಬಡೆದ ಸೂರ್ಯಕಾಂತಸ್ತಂಭಂ
ಪರಿರಂಜಿಸಿದುದು ಭಸ್ಮ
ಸ್ಫುರದೀಶಂ ತೋಱಿದಂತೆ ನೊಸಲುರಿಗಣ್ಣಂ ೪೭

ವಚನ: ಮತ್ತಂ ಪರಮಕರುಣಾಕರನೆನಿಸಿದಾ ಜಿನೇಶ್ವರನ ಸಮೀಪದೊಳ್ ಪರಪೀಡಾಕರಮಪ್ಪುಷ್ಣಮಂ ಪಾಳ್ಪುದನುಚಿತಮೆಂದು ತರುಣತರತರಣಿಕಿರಣಂ ತನ್ನಯ ಸಹಜಮಾದುಷ್ಣಮನೇನುಮಂ ತೋಱದೆ ಪರಿಕಲಿಸಿ ತೊಳಗಿ ಬೆಳಗುತ್ತಮಿರ್ದುದೆಂಬಂತತಿ ರಮಣೀಯಮಣಿಮಂಡಪದಂತಃಪ್ರದೇಶಂಗಳೊಳ್ ಕಡುಥಾಳಂಬೆತ್ತು ಥಳಥಳಿಸಿ ಪೊಳೆವ ಮಾಣಿಕದ ಸೊಡರ್ಗುಡಿಗಳ್ ಸುತ್ತಲುಂ ಮೊತ್ತಂಗೊಂಡು ಮಾಣದೆ ಸಮುಜ್ವಳಿಸುತ್ತುಮಿರ್ದುವಂತುಮಲ್ಲದೆಯುಂ

ಸ್ರಗ್ಧರೆ

ನಾನಾಶೃಂಗಾರಭಾರಂಗಳಿನಧಿಕತರಾಲಂಕೃತಂಗಳ್ ಸಮಂಧಾ
ರಾನೇಕಸ್ಫಾರಮಾಲಾವಲಯವಿಲಸಿತಂಗಳ್ ಚತುಷ್ಕೋಣಶೋಣಾ
ಪೀನೋನ್ಮಾಣಿಕ್ಯಕುಂಭಂಗಳನಣುರುಚಿಗಳ್ ನೋಳ್ಪ ಸರ್ವಾಮರೀ ಸಂ
ತಾನಕ್ಕಂ ಚೋದ್ಯಮಂ ಪುಟ್ಟಿಸಿದುವು ಪಿರಿದುಂ ದರ್ಪಣಾಭ್ಯರ್ಚಿತಂಗಳ್ ೪೮

ವಚನ: ಇಂತು ಕಮನೀಯಕಂಠಾವಲುಂಠಿತ ಚಾರುಹರಿಚಂದನಚರ್ಚಾರ್ಚಿತ ಮುಕ್ತಾಫಲಾಕ್ಷತ ಸಮಾಲಕ್ಷಿತ ವಿಕಸಿತಸಹಸ್ರದಳಧವಳಕಮ[1]ಳಕುಳ ಪ[1]ರಿಕಳಿತಮಾತುಳುಂಗಫಳವಿಳಸಿತ ಮುಖಮುಖರ ಸಮುತ್ತುಂಗ ಶೃಂಗಾರಿತಭೃಂಗಾರಸಂಘಾತ ಸಂಗತ ನಿರತಿಶಯ ಮಣಿಮಯಮಂಗಳಕಳಶಸಹಸ್ರಪರಿಕಳಿತಮುಂ ವಿಶಿಷ್ಟಾಷ್ಟಮಂಗಳ ಪರಿವೇಷ್ಟಿತಮುಮಷ್ಟವಿಧಾರ್ಚನಾಯೋಗ್ಯ ನವ್ಯದ್ರವ್ಯಪರಿಪೂರ್ಣವಿಸ್ತೀರ್ಣ ತತ್ಸಮಯೋಚಿತ ಬಹಳೋಪಕಿರಣ ಕಿರಣಗಣಾಭಿದ್ಯೋತಿತಾಭ್ಯಂತರಮುಮಾದ ಮಹಾಭಿಷೇಕ ಮಣಿಮಂಡಪಮನಾಖಂಡಳಂ ಮುಟ್ಟೆವಂದು ವಂದನ ಮಾಲಾದಿ ಬಹುವಿಧಾಲಂಕರಣ ರಮಣೀಯಮುಮಾದ ಮರಕತಮಯದ್ವಾರಬಂಧದ ಮುಂದೈರಾವತ ಮಹಾಮಾತಂಗಮಂ ನಿಲಿಸಿ

ಕಂದ: ಕರತಳಪುಟದೊಳ್ ಜಿನನಂ
ಧರಿಸಿ ಸುರಾಧೀಶನಿಳಿದನಾ ಗಜದಿಂದಂ
ಸುರರ ಜಯಜೀವನಂದ
ಸ್ವರಮಾಗಳ್ ಪುದಿಯೆ ಸಕಳದಿಙ್ಮಂಡಳಮಂ ೪೯

1 ಳಪ (ಜ)

ಸ್ರಗ್ಧರೆ
ಆಗಳ್ ದೇವಾನಕಂಗಳ್ ನೊಳಗೆ ಜಯಜಯಧ್ಯೋಷಣಂ ಪೆರ್ಚೆ ಜೇತೋ
ರಾಗಂ ಕೈಗಣ್ಮೆ ಪೊಣ್ಮುತ್ತಿರೆ ಜಿನಪತಿಯಂ ನಾಗಲೋಕಾಧಿನಾಥಂ
ಬೇಗಂ ದಲ್ ತನ್ನ ಹಸ್ತಾಂಜಳಿಯೊಳೆ ಬಿಜಯಂಗೆಯ್ಸಿ ಭೂರಿಪ್ರಕಾಶಾ
ಭೋಗಂ ವ್ಯಾಕೀರ್ಣತನ್ಮಂಡಪದ ನಡುವೆಗೆಯ್ತಂದನಾನಂದದಿಂದಂ ೫೦

ವಚನ: ಮತ್ತಮಾ ಮಂಡಪದ ನಟ್ಟನಡುವಣರ್ಚಿಸಿದ ನವೀನರಜನಾಖಚಿತ ಸಮುಜ್ವಳಮಣಿಮರೀಚಿನಿಚಯಪರಿಭಾಭಾಸ್ಯಮಾನಮಹಾರ್ಘ ಸಿಂಹಾಸನದೊಳ್ ಪೂರ್ವಾಭಿಮುಖನಾಗಿ ತಜ್ಜಿನಾರ್ಭಕನನಿರಿಸುವುದುಂ

ಕಂದ: ಹರಿವಿಷ್ಟರಮುದಯಮಹೀ
ಧರದಂತಿರೆ ಬಾಳಕಂ ಸುಬಾಳಾರ್ಕನವೋಲ್
ಸಿರಿದಾದ ತೇಜದೊದವಂ
ಪರಿಕಲಿಸುತ್ತಿರ್ದನಖಿಳದಿಕ್ತಟದೆಡೆಯೊಳ್ ೫೧

ಮತ್ತೇಭವಿಕ್ರೀಡಿತ
ಮೊದಲೊಳ್ ಪಾಂಡುಶಿಲಾತಳಂ ದಲಭಿಷೇಕೋತ್ಸಾಹಮಂ ಮಾಳ್ಪವೊಲ್
ಕೆದಱುತ್ತಿರ್ದವು ಪಾಂಡುರಪ್ರಭೆಯನಾ ತೀರ್ಥೇಶಸರ್ವಾಂಗದೊಳ್
ಪಡೆಸಿಂ ಪಾಂಡುರವರ್ಣನಾಗಿ ಸುರರಿಂಗಂ ಪುಟ್ಟಿಸುತ್ತಿರ್ದನೋ
ವಡೆ ತನ್ನೊಪ್ಪುವ ಕೀರ್ತಿಯಾವರಿಸಿದತ್ತೆಂಬೊಂದು ಸಂದೇಹಮಂ ೫೨

ಇರೆ ದಿಕ್ಪಾಲಕರಂದು ತಂತಮಗೆ ಯೋಗ್ಯಸ್ಥಾನದೊಳ್ ಸ್ವಾಂಗನಾ
ಪರಿವಾರಾಯುಧವಾಹನಂಬೆರಸು ಶೇಷಾಶೇಷದೇವರ್ಕಳುಂ
ನೆರೆದಲ್ಲಲ್ಲಿ ಪರಿಗ್ರಹಂಬೆರೆ[2]ಸಿರೆ[2] ಸ್ವಸ್ಥಾನದೊಳ್ ಕಿನ್ನರೇ
ಶ್ವರನಾದೇಶದಿನಲ್ಲಿ ತಳ್ತೆಸೆಯೆ ನಾನಾಭೂಷಣಾಂಶೂತ್ಕರಂ ೫೩

ವಚನ: ಆಗಳಾ ಮಣಿಮಯಸಿಂಹಾಸನದೆರಡುಂಕೆಲದೊಳಿರ್ದ ಶುಭಾಸನಂಗಳಲ್ಲಿ ಸೌಧರ್ಮೇಂದ್ರನುಮೈಶಾನೇಂದ್ರನುಮುತ್ತರ ದಕ್ಷಿಣಾಭಿಮುಖರಾಗಿ ತಜ್ಜಿನಾಧೀಶ್ವರನ ದಕ್ಷಿಣ ವಾಮಭಾಗದೊಳ್ ಕುಳ್ಳಿರ್ದು ಸಕಳಕಲ್ಪಾಮರಪ್ರಮುಖ ನಿಜನಿಜ ಪರಿಕರಪರಿವೃತಸುರನಿಕರಮುಮುಚಿತಸ್ಥಾನದೊಳ್ ಕುಳ್ಳಿರಿಸಿ ಜ್ಯೋತಿಷ್ಕದೇವೇಂದ್ರರ್ ಮುಂತಾದ ಭವನಾಮರೇಂದ್ರರುಂ ಕರೆದು ಪರಿಚಾರಕ ಪದವಿಯೊಳ್ ನಿಜೋಸಿದನಂತರಂ

[1] ರ (ಜ) [2] ಸುಸ್ಸ (ಜ)

ಚಂಪಕಮಾಲೆ

ಕರಸಿ ಕುಬೇರನಂ ಬೆಸಸಿದಂ ಸುರನಾಯಕನಂದು ನೀಂ ಸುರಾ
ಸುರರ ಗಣಂಗಳಂ ನಿಜನಿಜೋಚಿತಕೃತ್ಯದೊಳಂ ನಿಯೋಜಿಸಿ
ತ್ವರಿತದೆ ಮಾಡಿಸೆಂದು ಗುರುಭಕ್ತಿಯಿನಾಂತನವಂ ತದಾಜ್ಞೆಯಂ
ಸುರುಚಿರನೂತ್ನರತ್ನಮಯದಂಡವಿಮಂಡಿತ ಬಾಹುದಂಡಕಂ ೫೪

*

ವಚನ : ಆಗಳ್

ಮತ್ತೇಭವಿಕ್ರೀಡಿತ

ಕಳೆ ನೀಂ ವಾಯುಕುಮಾರ ಸೂಕ್ಷ್ಮರಜಮಂ ಗಂಧೋದಕಾಸಾರಮಂ
[1]ತಳಿ[1] ನೀಂ ಮೇಘಕುಮಾರ ಮಾಡುಮಣಿಯಿಂ ಮುಕ್ತಾಫಳಶ್ರೇಣಿಯಿಂ
ಡೆಲೆ ದಿಕ್ಕಾಂತೆಯರಿಕ್ಕಿ ಕೂಡೆ ಸಿರಿದುಂ ರಂಗಾವಲೀಭಂಗಿಯಂ
ನಲವಿಂ ದೇವಿಯರೆಯ್ದೆ ಚೆಲ್ಲಿಯುದಱುಳ್ ಮಂದಾರಪುಷ್ಪಂಗಳಂ ೫೫

ಉತ್ಪಲಮಾಲೆ

ತಾಳಮನೆಯ್ದೆ ಮೇಳವಿಸು ತುಂಬುರ ಮಂಗಳಗೀತಮಂ ಸಮಂ
ತೋಳಿಯಿನೊಲ್ದು ಪಾಡು ವರಕಿನ್ನರ ಪಾವನವಾಣಿವೀಣೆಯಂ
ಲಾಲಿಸಿ ಸೈತೆಮಾಡು ಭರತಜ್ಞ ವಿಶೇಷಿಸು ನಾಟ್ಯರಂಗಮಂ
ಲೋಲವಿನೇತ್ರೆ ರಂಭೆ ನಟನಾರ್ಥಮೆ ನೀಂ ಸಮಕಟ್ಟಿಕೊಳ್ ಕರಂ ೫೬

ಮುತ್ತಿನ ಚೆಲ್ವಸತ್ತಿಗೆಗಳಂ ಭವನಾಮರ[2]ರೆ[2]ತ್ತಿನಿಲ್ಲಿಯು
ತ್ಯುತ್ತಮ ಹೇಮದಂಡ ಪರಿಮಂಡಿತಚಾಮರಸಂಚಯಂಗಳಂ
ಸುತ್ತೆ ಸನತ್ಕುಮಾರವರರಿಕ್ಕಿ ತದಂಗನೆಯರ್ ಕೆಲಂಬರುಂ
ಬಿತ್ತರದಿಂದೆ ಬೀಸಿ ಪೊಸಬಾಳದ ಬೇರ್ಗಳ ವೀಜನಂಗಳಂ ೫೭

ವ್ಯಂತರದೇವರುದ್ಘಪಟಹಪ್ರಕರಂಗಳನಾಯತಂಗಳಿಂ
ಬಂತಿರೆ ಚೆಲ್ವನಾಗಿ ನೆಱೆಮಾಡಿ ತದೀಯವಧೂಜನಂಗಳುಂ
ಸಂತೊಸದಿಂದೆ ಮತ್ತೆಕೆಲವುಂ ಸಮಯೋಚಿತಮಂಗಳಂಗಳಂ
ಚಿಂತಿಸಿ ಬೇಗದಿಂ ಸಮೆಯಿಯೆಂದುಸಿರ್ದಂ ಧನದಂ ದಲಾಕ್ಷಣಂ ೫೮

---

[1] ಸಲೆ (ಕಚ) [2] ರೊ (ಕಚ)

* ಕುಬೇರಂ ಸುರಾಸುರ ಗಣಂಗಳ್ಗೆ ನಿಜೋಚಿತ ಕೃತ್ಯಂಗಳಂ ಮಾಡಿ ಬಂದು ಪೇಳ್ವ ಠಾವು (ಚ)

ದೇವಕುಮಾರಿಯರ್ ಪರಮಪುಷ್ಪಫಳಾಕ್ಷತಗಂಧಧೂಪಮಂ
ತೀವಿ ವಿಚಿತ್ರಪಾತ್ರಚಯದಲ್ಲಿ ಮಹಾಕುಲದೇವಿಯರ್ ಕರಂ
ಪೀವರ ಮಂಗಳಾರತಿಗಳಂ ಮಣಿಭಾಜನಪಂತಿಯಲ್ಲಿ ಸಂ
ಭಾವಿಸಿ ಮಾಡಿಯೆಂದು ಸುರದೇವಿಯರಿಂಗುಸಿರ್ದಂ ಧನಾಧಿಪಂ ೫೯

ವಚನ : ಇಂತು ಸಕಳಾಮರೇಂದ್ರಪ್ರಮುಖ ದೇವದೇವೀನಿವಹಂಗಳಂ ದ್ವಾರಪಾಲಕನಪ್ಪ ಕುಬೇರನಂ ಜಿನಜನ್ಮಾಭಿಷೇಕಕಾಲಕರಣೀಯಂಗಳಪ್ಪ ಬಾಹತ್ತರನಿಯೋಗಂಗಳ್ ಬೇಱೆವೇಱೆ ಪಾಕಶಾಸನ ಸಮಾದೇಶದಿಂ ನಿಯಾಮಿಸುವುದುಂ

ಕಂದ: ಕಳಕಳಕೋಳಾಹಳದ
ಗ್ಗಳಮಂ ಮಾಡದಿರಿ[1]ಯೆಂ[1]ದು ದೇವಾಸುರರಂ
ಸಲೆ ಜಡಿದು ನುಡಿದು ನಿಲಿಸಿದ
ನೊಲವಿಂದಾ ದೇವಸಭೆಯೊಳಂದು ಕುಬೇರಂ ೬೦

*ಮತ್ತೇಭವಿಕ್ರೀಡಿತ
ವರಕರ್ಪೂರಪರಾಗಪೂಗಘನಗಂಧಾಂಧಾಳಿನೀಸಂಕುಳಂ
ನೆರೆದಲ್ಲಲ್ಲಿಗೆ ಮಾಲೆಗೊಂಡು ನೆಗೆವುತ್ತಿರ್ದತ್ತದಾಗಳ್ ಜಿನೇ
ಶ್ವರಜನ್ಮಾಭಿಷವೋತ್ಸುಕರ ಚೇತೋವೃತ್ತಿಯಂ ಬಿಟ್ಟು ದು
ರ್ಧರಪಾಪಂ ಪಱಿದೋಡಿಪೋಪ ತೆಱದಿಂ ಕಣ್ಗೆಂ ಬೆಡಂಗಾದುದೋ ೬೧

ವಚನ : ತದನಂತರಂ

ಮತ್ತೇಭವಿಕ್ರೀಡಿತ
ಅನುಭಾವಕ್ಕನುಕೂಲಮಾಗಿ ಸಿರಿಗಂ ತಕ್ಕಂದದಿಂ ತನ್ನ ವ
ರ್ತನೆಗಂ ಯೋಗ್ಯಮೆನಲ್ಕೆ ಮತ್ತಮುಚಿತಂ ತದ್ದೇಶಕಾಲಕ್ಕಮೆಂ
ಬಿನೆಗಂ ಮಾಡಲೆವೇಳ್ಪುದೊಂದು ಪಿರಿದುಂ ಜನ್ಮಾಭಿಷೇಕಪ್ರಭಾ
ವನೆಯಂ ತೋಱಿದಿನೆದ್ದನಂದು ಸುರಪಂ ಭಕ್ತಿಪ್ರಸನ್ನಾಯಶಂ ೬೨

ಕಂದ: ಕ್ಷೀರಸಮುದ್ರದ ನಿರ್ಮಳ
ನೀರಂ ತರಲೆಂದು ಬೇಗಮೆಳ್ದಂ ಸುರಪಂ
ಚಾರುಶತೇಂದ್ರರ್ ತನ್ನೊಡ
ನೋರೊರ್ಮೊದಲೆಳ್ದರಮರತತಿವೆರಸಿ ಕರಂ ೬೩

---

[1] ವೆಂ (ಜ) [2] ಧಾ (ಕಚ)

* ಜನ್ಮಾಭಿಷೇಕದ ಠಾವು (ಗ)

ವಚನ: ಇಂತು ಶತೇಂದ್ರರೊಡಗೂಡಿದ ಬಿಡೌಜಂ ಕಡುಪಡಗರದಿಂದುದ್ದಾಮರ ವಾಮಹೇಮೀಯ ಕುಂಭಸಂಭೃತಕರವಿರಾಜಮಾನ ದೇವಸಮೂಹಸಮಾವೃತನಾಗೆ ಮಹಾಪ್ರಭಾವನೆಯಿಂ ಕ್ಷೀರೋದಯಮನೆಯ್ದುವುದುಂ

ಉತ್ಪಲಮಾಲೆ

ಕ್ಷೀರಸಮುದ್ರಮಂ ಬಿಡದೆ ಕೌತುಕದಿಂದಮೆ ನೋಡುತಿರ್ದ ದೈ
ತ್ಯಾರಿವಿ[1]ಧಾ[1]ನಮಂ ಸುರಪನೀಕ್ಷಿಸಿ ವಾಕ್ಚತುರಂ ತದೀಯಶೃಂ
ಗಾರಮನಿಂತು ವರ್ಣಿಸುತುಮಾ ದಿವಿಜರ್ಗುಸಿರ್ದಂ ಸಮಂತು ವಿ
ಸ್ತಾರಿಸದಿರ್ಪುದೇನವ[2]ಸರೋ[2]ಚಿತಭಾಷಣಮೆಯ್ದೆ ತೋಷಮಂ ೬೪

ಕಂದ: ಬಡವಾನಳೋಷ್ಣಭರಮಂ
ಕೆಡಿಸಲ್ಕೆಂದಿಂದುಕಿರಣಗಣಮಂ ಪಾಲಿಂ
ಗಡಲೆಯ್ದೆ ಪೊದೆದ ತೆಱದಿಂ
ಕಡುವೆಳದಾಗಿರ್ದು ಪಡೆದುದತಿಕೌತುಕಮಂ ೬೫

ಮಹಾಸ್ರಗ್ಧರೆ

ಪಿರಿದುಂ ನಾಗೇಂದ್ರನಂದಾವರಿಸಿದ ವಿಲಸನ್ಮೇರುರೂಪಂಗಳಂತಿ
ರ್ದುರುಮುಕ್ತಾಮಾಲಿಕಾಲಂಕೃತ ಕನಕಮಯಸ್ಥೂಳಕುಂಭಂಗಳಂ ಸಾ
ದರದಿಂದಂ ಕೊಂಡುಬರ್ಪಾ ಸುರಸಮುದಯಮಂ ಕಂಡು ದುಗ್ಧಾರ್ಣವಂ ಬಿ
ತ್ತರಿಪಂತಿರ್ದತ್ತು ಮತ್ತಂ ಮಥನಭಯದಿನಾಕಂಪಮಂ ತುಂಗಭಂಗಂ ೬೬

ವಚನ: ಅಗಳ್

ಮತ್ತೇಭವಿಕ್ರೀಡಿತ

ಹರಿನೀಳಚ್ಛವಿಯೆಂಬ ಜೆಲ್ವತೊವಲಂ ಕಲ್ಲೋಲಹಸ್ತಾಗ್ರದೊಳ್
ಧರಿಸಿರ್ದಂ ಪವಳಂಗಳೊಳ್ ಬೆಳಗಿನಿಂ ಕೆಂಪಾದ ಸಚ್ಛುಕ್ತಿಕೋ
ತ್ಕರದಂತಂಗಳಿನೊಪ್ಪುವೆತ್ತ ಸುಳಿಯೆಂಬಾ ಬಾಯುಮಂ ಬಿಟ್ಟು ದು
ರ್ಧರನಿರ್ಘೋಷಣದಿಂದೆ ಪುಯ್ಯಲಿಡುವಂತಿರ್ದತ್ತು ದುಗ್ಧಾರ್ಣವಂ ೬೭

ವಚನ: ಅಂತುಮಲ್ಲದೆಯುಂ

ಚಂಪಕಮಾಲೆ

ಅಱಿದು ಜಿನಾಭಿಷೇಕಸಮುಪಸ್ಥಿತಿಯಂ ಗಗನಾಧ್ವದಲ್ಲಿ ಪೋ
ಪೆಱಕದಿನುಚ್ಚಲದ್ಘನತರಂಗಚಯಚ್ಛಲದಿಂ ಸಘೋಷಣಂ
ನೆಱೆನೆಗೆವುತ್ತುಮಿರ್ದು ನಿಜಭೂರಿಜಡತ್ವದಿನೇಱಲಾಱದಿಂ
ತುಱುಕೆ ಕೆಳಗಣ್ಗೆ ಬೀಳುತಮಿರ್ದುದು ದುಗ್ಧಸಮುದ್ರಮಾಕ್ಷಣಂ ೬೮

---

[1] ತಾ (ಜ) [2] ರಸೋ (ಜ)

ಕಂದ: ಎನ್ಮಯ ಜನನಿಯೆನಿಪ್ಪೀ
ಸನ್ಮಹಿಯಂ ಕ್ಷೀರವಾರ್ಧಿಯಾಕ್ರಮಿಸುಗುಮೆಂ
ದುಂ ಮಹಿಜಂಗಳ್ ತಡಿಯನ
ದೊರ್ಮೆಯು ಬಿಡವುದಕವೇಗರೋಧನಿಮಿತ್ತಂ ೬೯

ಸ್ರಗ್ಧರೆ

ಮುತ್ತಂ ಮಾಣಿಕ್ಯಮಂ ದಲ್ ಪವಳದ ಕುಡಿಯಂ ಚಾರುಕಲ್ಲೋಲವೆಂಬ
ತ್ಯತ್ತಾಲೋಲ್ಲೋಲಹಸ್ತಾಗ್ರದೊಳೆ ನೆಗಪಿ ತಾಂ ತೋಱುತ್ತುಂ ಮಹಾವೃ
ದ್ಧತ್ವವ್ಯಾಪ್ತಾಂಗನಪ್ಪಾ ಪರದನ ತೆಱದಿಂ ಪಾಲ್ಗಡಲ್ ಕೂಡೆ ಚೆಲ್ವಂ
ಬಿತ್ತುತ್ತಿರ್ದತ್ತು ಮತ್ತಂ ಜಡಜಠರತೆಯಿಂದಂ ಸ್ವಶೈಥಿಲ್ಯಕಚ್ಛಂ ೭೦

ಕಂದ: ಕಡುಗಾಳಿಯ ಪೊಯಿಲಿಂದಂ
ಕಡಲ ತರಂಗಂಗಳೆಯ್ದೆ ನೆಗೆದವು ದೂರಂ
ಗಡ ಪೋಗಿ ಬೀಳುತಿರ್ದುವು
ವುಡುಮುಕ್ತಾಸಂಗ್ರಹೇಚ್ಛೆಯಿಂದೆಂಬಿನೆಗಂ ೭೧

ಮತ್ತೇಭವಿಕ್ರೀಡಿತ

ಅಮೃತಂ ಕಲ್ಪಮಹೀರುಹಂ ಸಿತಗಜಂ ಸತ್ಕೌಸ್ತುಭಂ ತಾರಕಾ
ರಮಣಂ ಲಕ್ಷ್ಮಿ ಪರಾರ್ಧ್ಯರತ್ನನಿಚಯಂ ಮುಂತಾದ [1]ಸ[1]ದ್ವಸ್ತುಸಾ
ರ್ಥಮುಮಂ ತಂತಮುಗೊಯ್ದರೆಂದು ಪಿರಿದಾರ್ಥಂಬಟ್ಟು ದುಗ್ಧಾರ್ಣವಂ
ಭ್ರಮೆಗೊಂಡಂತಿರೆ ಘೋಷದಿಂ ಮೊಱೆಯಿಡುತ್ತಿರ್ದತ್ತು ಭಂಗಾಕುಳಂ ೭೨

ಕಂದ: ನದಿಯೆಂಬಬಲೆಯ ಶೋಭಾ
ಸ್ಪದಮಾದುರುಪುಳಿನಮೆಂಬ ಜಘನಸ್ಥಳಮಂ
ಗದೆ ಮಸೃಣಮಣಿತಮಂ ಘೋ
ಷದ ನೆವದಿಂ ದುಗ್ಧವಾರ್ಧಿಯುಱ[2]ಬ್ಬ[2]ರಿಸುವವೊಲ್ ೭೩

ಚಂಪಕಮಾಲೆ

ವಿಳಸಿತವಾಹಿನೀಶತಸಹಸ್ರದಿನೊಪ್ಪಮನಾಳ್ದು ಕೂಡೆ ನಿ
ರ್ಮಳತರವಾರಿಮಗ್ನಚರಭೂಧರವೃಂದದೊಳೊಂದಿ ಸರ್ವದಿ
ಕ್ಕುಳಮನದೊರ್ಮೆಯಾಕ್ರಮಿಸಿ ದಿಗ್ಜಯಮಂ ನೆಱೆಮಾಡಿ ಪೆರ್ಚಮಂ
ತಳೆದುದು ಚಕ್ರವರ್ತಿಯವೊಲೊಪ್ಪುತುಮಿರ್ದುದು ದುಗ್ಧಸಾಗರಂ ೭೪

---

1 ನು (ಕಚ) 2 ಚ್ಚ (ಕಚ)

ವಚನ : ಮತ್ತಂ ಪದ್ಮಾನ್ವಿತಮಾಗಿಯುಂ ಧರಣೀಂದ್ರನಲ್ತು ಅಮೃತಾಧಿವಾಸಮಾಗಿಯುಂ ಸ್ವರ್ಗಭೂಮಿಯಲ್ತು ಕನತ್ಕಂಕಣಾಂಚಿತಮಾಗಿಯುಂ ಕಾಮಿನೀಜನಮಲ್ತು ವಜ್ರಧರಣಪರಿರಾಜಿತಮಾಗಿಯುಂ ವಾಸವನಲ್ತು ನೂತ್ನರತ್ನರಮಣೀಯಮಾಗಿಯುಂ ರೋಹಣಾಚಳಮಲ್ತುಮಂತುಮಲ್ಲದೆಯುಂ

ಚಂಪಕಮಾಲೆ

ಪರಿಕಿಪೊಡೆನ್ನ ಜೀವನಮೆ ಲೋಕದೊಳೆಯ್ದೆ ಕೃತಾರ್ಥಮಾದುದೀ
ಸುರಪನಪೇಕ್ಷೆಗೆಯ್ದನಭಿಷೇಕದೊಳೀ ನೆಪದಿಂ ಜಿನಾಂಗಮಂ
ಭರವಸದಿಂದೆ ಮುಟ್ಟುವನಿತಕ್ಕುಱ ಯೋಗ್ಯಮುಮಾದೆನೆಂದು ತ
ಚ್ಛರದಿ ತರಂಗದಿಂದೆಸೆವುತಿರ್ದುದು ಕೈನಿಱಿದಾಡುವಂದದಿಂ ೭೫

ವಚನ : ಇಂತು ವಿಚಿತ್ರಸಾಮರ್ಥ್ಯಕ್ಕಾಧಾರಮಾದ ಕ್ಷೀರನೀರನಿಧಿಯಂ ಶುನಾಸೀರಂ ಸಹಸ್ರಮುಖದಿಂ ಪೊಗಳುತ್ತುಮೆಡಬಲದೊಳ್ ಬರುತ್ತುಮಿರ್ದ ಸುರನಿಕರಂಗಳ ಪ್ರಶಂಸಾವಚನಂಗಳಂ ಕೇಳುತ್ತುಂ ಮುಟ್ಟೆವರ್ಪುದುಮಾಗಳದು ನಳಿನದಳಂಗಳೆಂಬ ನಯನಂಗಳಿಂ ನೋಡಿ ಸಮುಲ್ಲೋಲಕಲ್ಲೋಲಂಗಳೆಂಬುಲ್ಲಸತ್ಕರಂಗಳಿಂದನರ್ಘ್ಯಮಣಿಮಯಾರ್ಘ್ಯಮಂ ಕೊಟ್ಟು ಗಭೀರಘೋಷಣದಿಂ ಸಂಭಾಷಣಂಗೆಯ್ವಂತಿರ್ಪುದುಮದಂ ನೋಡುತ್ತುಂ ತಡಿಯೊಳ್ ನಿಲ್ವುದುಂ

ಮಹಾಸ್ರಗ್ಧರೆ

ಅತಿವೃದ್ಧಂ ನಿಮ್ನಗಾಧೀಶ್ವರನತಿಶಯಿತಾಂಧಂ ಕರಂ ತಾನೆನಿಪ್ಪೀ
ನುತಪದ್ಮುದ್ಗಾರ್ಣಪಂ ಮೇರುವಶಿಖರಮನೆಂತೇಱುಗೆಂದಾ ಸಮಸ್ತಾ
ಮೃತಭೋಜಿವ್ರಾತಮುಂದೆಯ್ದಿ ಸಲದನದೞಿದೊಂದಗ್ರಮಂ ಪಂತಿಯಂ ಮಾ
ಡುತುಮಿರ್ದತ್ತುದ್ಯ[1]ಶುಂಭ[1]ತ್ಕನಕಕಳಶಸಂದೋಹಮಂ ತಾಳ್ದಿ ಚೆಲ್ವಂ ೭೬

ಚಂಪಕಮಾಲೆ

ಅದು ಮೊದಲಾಗಿ ಪಾಂಡುಕವನಂಬರಮಿಕ್ಕೆಲದಲ್ಲಿ ಕೂಡೆ ನಿಂ
ದುದು ಮಿಗೆಮಾಲೆಗೊಂಡು ಬಿಡದೋಳಿಯಿನೆಲ್ಲ ಸುರಾಸುರಾಳಿಗಳ್
ಪುದಿಯೆ ಕಿರೀಟಕೋಟಿಜಟಿಲಾಂಶುಗಳಂ ಸಲೆಪೊತ್ತುಕೊಂಡ ತೋ
ರಿದುವೆನಿಸಿರ್ದನೇಕವಿಧರತ್ನಸುವರ್ಣಘಟಪ್ರಭಾಳಿಯುಂ ೭೭

ಕಂದ : ಎಮಗೆ ಪಗೆಯುಪ್ಪ ದುರ್ಧ್ವಾಂ
ತಮನೊಳಕೊಂಡಿರ್ದುದೆಂದು ವೇಳಾವನಮಂ
ದ್ಯುಮಣಿಕೋಟಿಗಳೆ ಬಂದಾ
ದಮೆ ಮುತ್ತಿದುವೆನಿಸಿದುವು ಸುವರ್ಣಘಟಂಗಳ್ ೭೮

1 ಚಂಚ (ಕಚ)

ಉತ್ಪಲಮಾಲೆ

ಚಂದ್ರನ ಪೆರ್ಚೆ ಪೆರ್ಚುಗೆಡಲಾಗಿ ಬರ್ದುಂಕುವ ದುಗ್ಧವಾರ್ಧಿಯುಂ
ಸಂದ ವಿರೋಧಿಮಿತ್ರನೆನಿಸಿರ್ದ ನಿಮಿತ್ತದೆ ವೈರಿಯೆಂದು ಸಾ
ರ್ತಂದುರುರಾಹುವುಮಂಡಳಿಗಳೋವದೆ ಮುತ್ತಿದುವೆಂಬಿನಂ ಪಯಃ
ಸಿಂಧುವ ತೀರವುಂ ಬಳಸಿನಿಂದುವು ನೀಲಘಟಂಗಳೋಳಿಯಿಂ ೭೯

ಕ್ಷೀರಸಮುದ್ರತೀರದೆಡೆಯಂ ಮಿಗೆ ನಿರ್ಮಳಚಂದ್ರಕಾಂತಭೃಂ
ಗಾರಸುಪಾರಮಾವರಿಸಿ ನಿಂದುದು ಧೋರಣೆಯಿಂದೆ ಸುತ್ತಲುಂ
ಶಾರದನೀರದಂ ಮೊಗೆಯಲೀ ಕವಿತಂದುದೆ ಪಾಲನೆಂಬ ಶಂ
ಕಾರಸಮಂ ನಿರೀಕ್ಷಿಪರ ಚಿತ್ತದೊಳಾಗಿಸುತಿರ್ದುದಾಕ್ಷಣಂ ೮೦

ಸಂದಣಿಸಿರ್ದು ಕೂಡೆ ಬಿಡದಲ್ಲಿದುದಿಲ್ಲಿದುದತ್ತಲಿತ್ತಲುಂ
ಸಂದಿಸಿದತ್ತಿದೊರ್ವೊದಲೊಳೊಂದೆ ದಲೆಲ್ಲಿಯುಮೆಂಬ ಮಾಳ್ಕೆಯಿಂ
ಮುಂದರದಲ್ಲಿಯುಂ ನಡುವೆಯುಂ ಕಡಲಲ್ಲಿಯುಮೆಯ್ದೆ ತಮ್ಮುಮಂ
ಕುಂದದೆ ಕಾಣ್ಬಿನಂ ನಡೆದುಬಂದುದು ಬೇಗಮಮರ್ತ್ಯಸಂಕುಳಂ ೮೧

ವಚನ : ಅದಱಿಂ ಬಳಿಯಂ

ಕಂದ : ಕೂಡೆ ವಿಗುರ್ವಿಸಿದಂ ಚೆ
ಲ್ವೋಡದ ಸಾಹಸ್ರಬಾಹುಕಂಡಂಗಳುಮಂ
ನಾಡೆ ಶಾಖಾಸಹಸ್ರಂ
ಕೂಡಿದ ಸುರವೃಕ್ಷದಂತಿರೊಪ್ಪಿದನಿಂದ್ರಂ ೮೨

ವಚನ : ಇಂತು ವಿಕ್ರಿಯರ್ಧಿವಿಭವದಿಂ ವಿಗುರ್ವಿಸಿದ ಸಹಸ್ರಬಾಹುದಂಡಕಾಂಡಂಗಳಿಂದೇಕೈಕಯೋಜನಪ್ರಮಿತಮುಖಮುಖರಂಗಳುಮಷ್ಟಯೋಜನ ಪರಿಪ್ರಮಾಣಾಂತರಾಳವಿಸ್ತಾರ ಪ್ರಶಸ್ತಂಗಳಾದ ವಿಕಟಹಟದ್ಘಾಟಕೀಯ ಸಹಸ್ರಘಟಪೇಟಕಂಗಳಂ ಪಿಡಿದು ಬಾ[1]ಕ್ಕೆ[1]ವಲಸು ಪಿರಿದಾಗಿ ಕಾಯ್ದು ನಿಂದಿರ್ದುದೆಂಬಂತೆ ಕಣ್ಗಳಿಂಗಾನಂದಮುನಜನಿಸುತ್ತುಮಿರೆ

ಕಂದ : ಥಳಥಳಿಪ ಗಂಡಶೈಲಂ
ಗಳೆ ಸಾಸಿರದಿಂದೆ ಮೆಱೆವ ಮೇರುವ ತೆಱದಿಂ
ಪೊಳೆವ ಸೌವರ್ಣಕುಂಭಂ
ಗಳ ಸಾಸಿರದಿಂದಮೊಪ್ಪಿದಂ ದೇವೇಂದ್ರಂ ೮೩

---

[1] ಕ್ಕೈ (ಕಚ)

ವಚನ : ಅನಂತರಂ

ಕಂದ : ಪಟುಪಟಹಂಗಳ ರವಮು
ತ್ಕಟಕೋಳಾಹಳನಿನಾದದೊಡನೊರ್ವೆಯೆ ದಿ
ಕ್ತಟಮಂ ಪುದಿಯಲ್ ಪೊಕ್ಕಂ
ಸ್ಫುಟಲಂಘನದಿಂದೆ ಸುರಪನಮೃತಾರ್ಣವಮಂ ೮೪

ವಚನ : ಇಂತು ತತ್ಕ್ರೀ[1]ಡನಮಂ[1] ಕ್ರೀಡೆಯಿಂ ಪುಗುವುದುಂ

ಕಂದ : ಸಂಗಡಿಸಿ ಪೊಂಗೊಡಂಗಳ
ಪಿಂಗಪ್ರಭೆ ಕೂಡೆ ಪಿರಿದುಮಾವರಿಸಲ್ ಪಾ
ಲಿಂಗಡಲನುಕರಿಸಿದುದು
ತ್ತುಂಗಘೃತಾರ್ಣವವಿಳಾಸಮಂ ಭರದಿಂದಂ ೮೫

ಉತ್ಪಲಮಾಲೆ

ಎಮ್ಮ ಮಗಂ ಕರಂ ಕಿಱಯನಪ್ಪವನೊರ್ವನೆ ಕುಂಭಸಂಭವಂ
ಮುಮ್ಮಿಗೆ ಪೀರ್ದನೆಂದೊಡೆಮಗೇ ಕಡುಬೇಗದಿಂದಮಿಂ
ತೊರ್ಮೊದಲಲ್ಲಿ ಪೀರ್ವೆವಿದನೀಗಳೆ ನೋಳ್ಪಡಮೆಂದು ಚೋದ್ಯದಿಂ
ದಂ ಮೊಗೆವುತ್ತುಮಿರ್ದವು ಮಹಾಪರಿಣಾಹಕಕುಂಭಕೋಟಿಗಳ್ ೮೬

ಕಂದ : ನಿಮಿಷದೊಳೆ ತುಂಬಿ ನೀಡಿದ
ನಮರೇಶಂ ಸಲಿಲದೇವಿಯರ್ ಕಾಣಿಕೆಗೊ
ಟ್ಟಮೃತದ ಕುಂಭಂಗಳ ಸುರ
ಸಮಿತಿಗೆ ಕೊಡುತಿರ್ಪ ಮಾಳ್ಕೆಯಿಂದೆಂಬಿನೆಗಂ ೮೭

ವಚನ : ಮತ್ತಂ

ಮತ್ತೇಭವಿಕ್ರೀಡಿತ

ದಿವಿಜರ್ ಬೊಬ್ಬಿಱಿದಾಲಿ ತಂದು ಕುಡೆ ಕೋಟಾಕೋಟಿ ಕುಂಭಂಗಳಂ
ದಿವಿಜೇಂದ್ರಂ ಕಡುಚೋಜಿಗಂಬಡೆದ ಕೋಟಾಕೋಟಿ ಹಸ್ತಂಗಳಿಂ
ದವೆ ತಾಂ ಕೊಂಡುಱಿ ತುಂಬಿ ನೀಡುವೆಡೆಯಂ ನಿಟ್ಟೈಸಲಾರ್ಪನ್ನ[2]ನಾ
ರಸನಂ[2] ತೋಱುವೊಡಿಲ್ಲದೇಂ ಪಡೆದುದೋ ವೈಚಿತ್ರ್ಯಸಾಮರ್ಥ್ಯಮಂ ೮೮

---

[1]ಡಂ(ಜ) [2]ನೊರ್ವನುಮಂ (ಕಜ)

ಉತ್ಪಲಮಾಲೆ

ಎಲ್ಲೆಡೆಯಲ್ಲಿಯುಂ ಪೊಗೆವ ಬೆಳ್ಳಿಯ ಪಾವನಚಂದ್ರಕಾಂತದ
ಪ್ರೊಲ್ಲ[1]ಸಿ[1]ತಾಮಲಸ್ಫಟಿಕದುಚ್ಚಘಟಂಗಳ ಕೋಟಿ ಕೂಡೆ ತ
ಳ್ವಿಲ್ಲದೆ ಸುತ್ತಲುಂ ಪೊಳೆಯೆ ದುಗ್ಧಸಮುದ್ರಮದಂದು ತಾರಕಾ
ತಲ್ಲಜಮಂಡಳಾವೃತನಭಸ್ಥಳಮೆಂಬಿನಮಾಳ್ದುದೊಪ್ಪಮಂ ೮೯

ಮಹಾಸ್ರಗ್ಧರೆ

ಕಡಲಿಂದೆಳ್ತಪ್ಪ ಮತ್ತಂ ಕಡಲಕಡೆಗೆ ಪೋಗುತ್ತುಮಿರ್ಪಾಳಿಯಿಂದಂ
ನಡೆದಾ ಹೇಮಾದ್ರಿಯುಂ ಪತ್ತುವ ಬಿಡದಿಳಿದಲ್ಲಿಂ ಬರುತ್ತಿರ್ಪ ಮುನ್ನಂ
ಕುಡುಮಿಂದ್ರಂಗಿಂದ್ರನುಂ ತಾಂ ಕುಡೆ ಕೊಳುವ ಮಹಾಸಂಭ್ರಮೋತ್ಕರ್ಷದಿಂದಂ
ಪಡೆವುತ್ತಿರ್ದತ್ತಗುರ್ವಂ ಸುರರ ಪಡೆ ಕರಂ ವಾರ್ಘಟೀಯಂತ್ರದನ್ನಂ ೯೦

ಕಂದ: ಒ[2]ವೊರ್ವ[2]ರ ಕೈಗಳೊ
ಳು[3]ರ್ವಿ[3]ಂದಂ ಕೊಡುವ ಕೊಳುವ ಪದಮುಂ ಬೇಗಂ
ಕೊ[4]ರ್ವಿ[4]ದ ಗಮನಾಗಮನಮ
ನುರ್ವರೆಯೊಳ್ ಭೇದಿಸಲ್ಕಮಾಱಂ ಬ್ರಹ್ಮಂ ೯೧

ನವರತ್ನಕಳಶಶತಮಭಿ
ನವಮಂದರಗಿರಿಯನಡರ್ದು ಪೋದುದು ನಾನಾ
ಛವಿಯಿಂದೆ ಮಿಗುವ ತೆಱದಿಂ
ನವಗ್ರಹಂಗಳ ವಿಳಾಸಮಂ ಭರದಿಂದಂ ೯೨

ಚಂಪಕಮಾಲೆ

ಜಿನಪನ ಸಮ್ಮುಖಂಗಳೆನಿಸಿರ್ದವು ಪೂರ್ಣತರಂಗಳಾಗಿ ಪಾ
ವನದಿವಮಂ ಸಮಾಶ್ರಯಿಸಿ ಪೋದುವು ತದ್ವಿಮುಖಂಗಳಾಗಿ ಘ
ಮ್ಮನೆಬರುತಿರ್ದ ಕುಂಭನಿಚಯಂಗಳವುಂ ನೆಱೆರಿಕ್ತಕಂಗಳೆಂ
ದೆನಿಸಿಯೆ ಬಿಳ್ದವಬ್ಧಿಯೊಳೆ ತೋಱಿಸುವಂತೆ ಜಿನಪ್ರಭಾವಮಂ ೯೩

ಕಂದ: ಸಡಗರದಿಂದಂ ದಿವಿಜರ
ಪಡೆ ಪಡೆದದ್ಭುತಮನೆಯ್ದೆ ತಂದಿರಿಸಿತ್ತಂ
ದೊಡೆಯನಭಿಷವ ನಿಮಿತ್ತಂ
ತಡೆಯದೆ ಪಾಲ್ಗಡಲನಮರಗಿರಿಮಸ್ತಕದೊಳ್ ೯೪

---

1 ಲಿ (ಜ) 2 ಬೊರ್ಬ (ಕಚ) 3 ಬಿರ್ಂ (ಕಚ) 4 ಬಿರ್ (ಕಚ)

ಚಂಪಕಮಾಲೆ

ಪೊಗೆಯೆ ಮುಗುಳ್ದು ಸರ್ವದಿವಿಜಾಸುರರಾವಳಿ ಮತ್ತೆಮತ್ತೆಯುಂ
ತೆಗೆದದು ಕೊಡೆಕೊಡೆ ನೆಜಿತಬತ್ತುತುಮಿರ್ದುದು ಭೂಮಿ ಕಾಣ್ಬನಂ
ಜಗದೊಳಿದೇಂ ವಿಚಿತ್ರಮೊ ಜಿನಾಭಿಷವೋತ್ಸವಕಾರಣಂ ಸುರಾ
ಳಿಗಳಿಗಧೀಶ್ವರಂ ಬಿಡದೆ ಪಾಲ್ಗಡಲಂ ಪೊಗೆವಂದು ಸಂಭ್ರಮಂ ೯೫

ಮತ್ತೇಭವಿಕ್ರೀಡಿತ

ಎನಿತಾನುಂ ಘಟಕೋಟಿಯಿಂ ಪೊಗೆಯಲಾ ಕ್ಷೀರಾರ್ಣವಂ ವೀಚಿತಾ
ಡನದಿಂದಾದುರುರೇಖೆಗಳ್ ತಡಿಗಳೊಳ್ ತೋರ್ಪಂತೆ ಪಿಂಗಿತ್ತು ಮ
ತ್ತೆನಸುಂ ತಾಯ್ಗಡಲೆಯ್ದೆ ಕಾಣ್ಬ ತೆಱದಿಂ ಬತ್ತಿತ್ತು ಮತ್ತಂ ಮಹಾ
ಘನರತ್ನಂಗಳ ರಾಶಿಗಳ್ ಬಿಡದೆ ಮೆಯ್ದೋರ್ಪಂತೆ ಪೋದತ್ತು ನೀರ್ ೯೬

ಕಂದ: ಚುಳಕಪ್ರಮಾಣಮಾದೊಡ
ಮುಳಿಯುದವೊಲ್ ದುಗ್ಧವಾರ್ಧಿಜಳಮಂ ಪೊಗೆದರ್
ಪುಳಕಿತ ತನುಗಳ್ ದಿವಿಜರ್
ಬಳಿಯಂ ಮಣಿ[1]ವಸರದಂ[1]ತೆ ಪಡೆದುದು ಜೆಲ್ವಂ ೯೭

ವಚನ: ಇಂತು ನಿರಂತರಾನುಗತ ನಿಖಿಳನಿಳಿಂಪಕುಳಸಮಾರಬ್ಧಮಾರ್ಗೋಭಯ ಶ್ರೇಣಿಯೊಳುಜ್ವಳಿತಾನಣುತರ ಮಣಿಮಯಕಂಕಣಗಣರಮಣೀಯಘನರಣನಪರಿಣಾಯಮಾನಮಾಗಿ ಲೀಲಾಸಮುತ್ತಂಭಿತೋತ್ತಾಲ ಭುಜನಾಲಾವಲಯದೊಳತಿವೇಗಚಮತ್ಕಾರದಿಂ ರಿಕ್ತಪೂರ್ಣ ಘಟಸಮಾವರ್ತನ ನಿವರ್ತನಂಗಳಿಂದಾಕ್ಷಣಂ ಸಭಸ್ಥಳಂ ಚಟುಳ ಜಳಯಂತ್ರಘಟಿಕಾಜಾಳಜಟಿಳೀಕೃತಮಾದುದೆಂಬಂತೆ ಪುರಂದರ ಪುರಸ್ಸರಂ ಸಕಳಸುರಾಸುರ ಪರಿಕರನಿಕರಮುಂ ಕ್ಷೀರೋದನೀರನಾಶ್ಚರ್ಯದಿಂ ಜಿನಜನ್ಮಾಭಿಷವಣಕಲ್ಯಾಣ [2]ಕ[2]ರಣನಿಮಿತ್ತಂ ಭಕ್ತಿಯಿಂದಂ ತಂದು

ಕಂದ: ದೇವರ್ಕಳ ಕಳಕಳಘನ
ರಾವದಿನೊಗೆವುತ್ತುಮಿರ್ದ ಕೋಳಾಹಳಮಂ
ಸೇವಕ ಧನದಂ ಮಾಣಿಸಿ
ಯೋವದೆ ತಂತಮ್ಮ ತಾಣದಲ್ಲಿರಿಸುವುದುಂ ೯೮

ವಚನ: ಮತ್ತಂ

---

[1] ಸರಗಳಂ (ಜ) [2] ಕಾ (ಜ)

ಮಹಾಸ್ರಗ್ಧರೆ

ತಳಿರಿಂ ಪೂಮಾಲೆಯಿಂ ಕನ್ನಡಿಯಿನಮಳಸೂತ್ರಂಗಳಿಂ ಗಂಧಚರ್ಚಾ
ವಿಳಸನ್ಮುಕ್ತಾಕ್ಷತಶ್ರೇಣಿಗಳಿನೆಸೆವ ಸತ್ಕಂಠದೊಳ್ ದಿವ್ಯವಸ್ತ್ರಂ
ಗಳ ಸುತ್ತಿಂ ರಂಜಿಸುತ್ತಿರ್ಪರುಣಮಣಿಮಹಾಪೂರ್ಣಸತ್ಕುಂಭಮಂ ಮಂ
ಗಳ ಚಾತುಷ್ಕಸ್ಥಮಾಯಾಕ್ಷರದ ನಡುವೆ ಸಂಸ್ಥಾಪನಂಗೆಯ್ದನಿಂದ್ರಂ ೯೯

ವಚನ: ಇಂತು ಓಂ ಹ್ರೀಂ ಸ್ವಸ್ತಯೇಕಳಶಸ್ಥಾಪನಂ ಕರೋಮಿ ಸ್ವಾಹಾ ಎಂಬೀ ಮಂತ್ರಮನುಚ್ಚರಿಸುತ್ತುಂ ಮಂದಾಕಿನೀಮಾನಸಸರೋವರಾದಿಗಳಿಂ ತಂದ ನವರತ್ನಸಮಾಕಳಿತ ಸರ್ವೌಷಧಿಸನ್ಮಿಶ್ರೀಕೃತತೀರ್ಥಾಣಃಪರಿಪೂರ್ಣಕುಂಭಮಂ ಸ್ವಸ್ತಿಕ ವಿಸ್ತಾರದಿಂ ಪ್ರಶಸ್ತಮಾದ ಸಮಸ್ತಧಾನ್ಯಪ್ರಸ್ತಾರ ಪ್ರಸ್ತೂಯಮಾನಮಧ್ಯಪ್ರದೇಶದಲ್ಲಿ ಪ್ರಸ್ಥಾಪನಂಗೆಯ್ದುಂಬಳಿಯಂ ಸೌಧರ್ಮೇಂದ್ರನುಮಿಶಾನೇಂದ್ರನುಮಾಚಮನಸಕಳೀ ಕರಣಾದಿ ತದ್ಯೋಗ್ಯಕ್ರಮಮನನುಕ್ರಮದಿಂ ಮಾಡಿ ಸಿದ್ಧಗುಣಸ್ತೋತ್ರಪರಿಸಮಾಪ್ತ್ಯ ನಂತರಂ

ಕಂದ: ಅಮರಾಧಿಪರೀರ್ವರುಮು
ಘ್ಯಮನೆತ್ತೆ ನಭೋಂತರಾಳದೊಳ್ ತೀವಿಮದಂ
ದಮಳ ಜಳಾಕ್ಷತಮಿಶ್ರಿತ
ಸುಮೇರು ನಂದನಸಮೇರುಕುಸುಮಪ್ರಸರಂ ೧೦೦

ವಚನ: ಅಂತು ತಜ್ಜಿನಾರ್ಭಕನ ಮುಂದೆ ಸಮಗ್ರಾರ್ಘ್ಯೋದ್ಧರಣಮಂ ನಿರ್ವರ್ತಿಸಿ

ಚಂಪಕಮಾಲೆ

ಬಹಳದಶಾಂಗಧೂಪನಿರಧೂಮಲತಾನಿಚಯಂ ಸಮಸ್ತದಿ
ಕ್ತಟಮನೆಲ್ಲಮಂ ಪರಿಮಳೀಕರಿಸುತ್ತುಮದಿರ್ಪದಾಕ್ಷಣಂ
ಬಹುವಿಧಸೂತ್ನರತ್ನಮಯದೀಪಕಳಾಕಳಿಕಾಕಳಾಪಮುಂ
ಮಹಿಮಸಮೇತ ಕಾಂತಿಭರದಿಂ ಬೆಳಗಿತ್ತು ತದಂತರಾಳಮಂ ೧೦೧

ಮಹಾಸ್ರಗ್ಧರೆ

ಪಿರಿದುಂ ನಾನಾಪ್ರಕಾರ ಪ್ರಪಟುಪಟಹಸಂದೋಹಗಂಭೀರಭೇರೀ
ಪರಿಷತ್ಸತ್ಕಾಹಳಾಸಂಕುಳಬಹುವಿಧ ನಿಸ್ಸಂಖ್ಯಶಂಖಪ್ರರಿಂಖ
ತ್ಸ್ವರನಿರ್ಘೋಷಂಗಳಂದೊರ್ಮೊದಲೊಳೆ ದಶದಿಙ್ಮಂಡಳೀಸರ್ವಕೋಣಾಂ
ತರದೊಳ್ ಘೋರೆಂದು ತಾವಿಮ್ಮಡಿಸಿದವು ಮಹಾತತ್ಪ್ರತಿಧ್ವಾನದಿಂದಂ ೧೦೨

ಕಂದ : ಗಂಧರ್ವದೇವದೇವೀ
ಬಂಧುರಸಂಗೀತತಂಗಮಂಗಳರವಸಂ
ಬಂಧಂ ತೀವಿರ್ದುದು ದಿ
ಕ್ಸಂಧಿಗಳೊಳ್ ಜಿನನ ಜನನಸವನೋತ್ಸವದೊಳ್ ೧೦೩

ಮಾಳಿನೀ
ಘನತರ ಸುಷಿರಾಳೀಜಾತಚಾರುಪ್ರಣಾದಂ
ಘನಮಣಿಮಯಭೂಷಾರಾವದಿಂದೆಯ್ದೆ ಪೆರ್ಚಲ್
ವಿನುತನವರಸಂಗಳ್ ತುಂಬಿ ತುಳ್ಕಾಡೆ ದೇವಾಂ
ಗನೆಯರೊಲಿದು ನಾಟ್ಯಂಗೆಯ್ವುತಿರ್ದರ್ ವಿಚಿತ್ರಂ ೧೦೪

ವಚನ : [1]ಇಂತು[1] ಜಿನಜನ್ಮಾಭಿಷೇಕಸೂಚಕ ಸಂಭ್ರಮಕೋಳಾಹಳಂ ಕೈಗಣ್ಮಿ ಪೊಣ್ಮುತ್ತಿರಲಾಗಳುಚ್ಚಾರಿತ ಕಳಶೋದ್ಧರಣಮಂತ್ರ ಮುಖರಮುಖರಪ್ಪ ಶತಮುಖರಿರ್ವರುಂ ಪೂರ್ಣಕಳಶಂಗಳಂ ತಳೆದುಕೊಂಡು ತತ್ಪರಮೇಶ್ವರನುಭಯಪಾರ್ಶ್ವಂಗಳಲ್ಲಿ ನಿಂದಿರ್ಪುದುಂ

ಉತ್ಪಲಮಾಲೆ
ಇಕ್ಕೆಲದಲ್ಲಿ ನಿಂದ ದಿವಿಜೇಂದ್ರರ ಹಸ್ತತಳಂಗಳಲ್ಲಿ ಕೈ
ಮಿಕ್ಕಭಿರಂಜಿಸಿರ್ಪ ಕಳಶಂಗಳವೊಪ್ಪಮನಾಳ್ದವಾಕ್ಷಣಂ
ಚೆಕ್ಕನೆ ತಜ್ಜಿನೇಶ್ವರನ ಪುಣ್ಯಮಹಾಮಹಿಮಪ್ರಭಾವಸೌ
ಧಕ್ಕೆ ಸುವರ್ಣಪೂರ್ಣಕಳಶಂಗಳನಿಟ್ಟಪರೆಂಬ ಮಾಳ್ಕೆಯಿಂ ೧೦೫

ಚಂಪಕಮಾಲೆ
ಜಯಜಯಘೋಷಣಂ ಪುದಿಯೆ ದಿಕ್ತಟಮಂ ಪ್ರಣವಾದಿಮಂತ್ರಸಂ
ಚಯಮುಮುಮನೋದುತಂ ಜಿನನ ಮಸ್ತಕದೊಳ್ ಘನದುಗ್ಧವಾರ್ಧಿಧಾ
ರೆಯನಮರಾಧಿಪರ್ ಸುರಿವುತಿರ್ದರದೆಂತು ಸಮಸ್ತದೇವಕೋ
ಟಿಯ ಹೃದಯಕ್ಕೆ ಕೌತುಕವಿಶೇಷಮನಾಗಿಪುದಂತಿರಾಕ್ಷಣಂ ೧೦೬

ಸೊಗಯಿಪ ತೋರಕೆಚ್ಚಲವೊಲೊಪ್ಪೆ ಮಹಾಕಳಶಂ ತದಗ್ರದ
ಲ್ಲೊಗೆದುಱುನೀಳ್ದ ಪೆರ್ಮೊಲೆಗಳಂತೆ ಕರಾಂಗುಳಿಗಳ್ ವಿರಾಜಿಸಲ್
ಮಿಗೆ ವೃಷವತ್ಸವತ್ಸಳತರಾಶಯವೃತ್ತಿಗಳಾಗಿ ಕಾಮಧೇ
ನುಗಳವೊಲಿಂದ್ರರುಂ ಕಱೆವುತಿರ್ದರುದಾರಪಯಃಪ್ರವಾಹಮಂ ೧೦೭

1 ಅಂತು (ಜ)

ಪರಿವಿಲಸತ್ಪಯೋಧರಘಟಾತ್ರಯಕಂ ಮಣಿಮುದ್ರಿಕಾಪ್ರಭಾ
ಪರಿಕರಶಕ್ರಚಾಪವಿಸರಂ ಘನಕಂಕಣದುಜ್ಝಣಂಬ ಪೀ
ವರರವಗರ್ಜಿತಂ ನಖಮಯೂಖತಟಲ್ಲತಿಕಾ ವಿಶೇಷಮಾ
ಗಿರೆ ಕಜಿಕಿಯುತ್ತು ಮಿರ್ದುದುರುಹಸ್ತಮಸೂನಪಯಃಸುಧಾರೆಯಂ ೧೦೮

ಮತ್ತೇಭವಿಕ್ರೀಡಿತ

ಪಲವುಂ ಕಾಲದ ಗೆಡ್ಡೆಯಂತೆ ಸೊಗಸಿರ್ದಾ ಪಾಂಡುಕೋಚ್ಚೈಶ್ಶಿಲಾ
ತಳದೊಳ್ ಪುಟ್ಟಿದ ಶೋಣಪಾಣಿತಳಚಂಚತ್ಪಲ್ಲವೋಲ್ಲಾಸಿ ಕೋ
ಮಳಪುಣ್ಯದ್ರುಮಸಸ್ಯದಂತೆಸೆವ ತೀರ್ಥೇಶಂಗೆ ದೇವೇಂದ್ರರಂ
ದೊಲವಿಂದಂ ಸುರಿಯುತ್ತುಮಿರ್ದರಧಿಕಂ ಪೀಯೂಷತಾಪೂರಮಂ ೧೦೯

ಮಿಗೆವೈಕುರ್ವಣದಿಂದೆ ಕೊರ್ವಿ ಪಿರಿದುಂ ಪರ್ವಿರ್ದ ಹಸ್ತಂಗಳೋ
ಳಿಗಳಂ ಪೂರ್ಣಘಟಂಗಳಂ ಕೊಳುವ ತಾಂ ರಿಕ್ತಂಗಳಂ ನೀಡುವು
ಜ್ಜುಗದಿಂ ಆಟಣಮೆಂಬಿನಂ ಜಿನಪಪುಣ್ಯಕ್ಷೇತ್ರದೊಳ್ ಪುಣ್ಯವಾ
ರಿಗಳಂ ಪೊಯ್ದರಧೀಂದ್ರರುಂ ಬಳೆವವೊಲ್ ವಿಜ್ಞಾನಸಸ್ಯಂಕರಂ ೧೧೦

ವಚನ: ಅಂತುಮಲ್ಲದೆಯುಂ

ಕಂದ: ಅರುಣಮಣಿಮಯಘಟಂಗಳಿ
ನುರವಣಿಸಿಯೆ ಬೀಳ್ವ ದುಗ್ಧಪೂರಂ ಜೆಲ್ವಂ
ಧರಿಸಿದುದು ತಳಿರ ತೊಂಗಲ
ನೆರವಿಗಳಿಂಪುಗುವ ಕುಸುಮಮಂಜರಿಗಳವೊಲ್ ೧೧೧

ಹರಿನೀಳದ ಕಳಶಂಗಳಿ
ನಿರದುಃಜಿ ಪೊಜಿಮಡುವ ದುಗ್ಧಮಾಳ್ಕುದು ಸೊಗಸಂ
ಪರರಾಹುಮಂಡಳಿಗಳಿಂ
ಸುರಿವ ಮಹಾಚಂದ್ರಚಾರುಕಳೆಯೆಂಬಿನೆಗಂ ೧೧೨

ಹೈರಣ್ಯಕುಂಭಮುಖದಿಂ
ಪೋರಂತಿರೆ ಸುರಿವ ದುಗ್ಧವೊಪ್ಪಿತ್ತು ಕರಂ
ಹೈರಣ್ಯಗರ್ಭಮುಖದೊಳ್
ಸೇರಿರ್ದ ಸರಸ್ವತೀಕಟಾಕ್ಷಂಗಳವೊಲ್ ೧೧೩

ಸ್ಫಟಿಕಕಳಶಂಗಳಿಂದು
ತ್ಕಟಮಾಗಿ ದಲುಗುವ ದುಗ್ಧಧಾರಾಪೂರಂ
ಪರಮನ ಶುಕ್ಲಧ್ಯಾನಂ
ಭರದಿಂದಂ ಪೊಱಗೆ ಪೊಣ್ಮುವಂತಿರಲೆಸೆಗುಂ ೧೧೪

ಮುಟ್ಟೆ ಸರ್ವಾಂಗಮುಂ ಬೆ
ಳ್ಪಟ್ಟೆಯ ಕುಪ್ಪಸಮನೆಯ್ದೆ ತೊಟ್ಟಂತೆ ಕರಂ
ನೆಟ್ಟನೆ ಮಂ[1]ದರ[1]ಗತಿಯಿಂ
ಬೊಟ್ಟಿಸಿಳಿದುದು ಜಿನಾಭಿಷೇಕಕ್ಷೀರಂ ೧೧೫

ಮಹಾಸ್ರಗ್ಧರೆ

ಬಱಯಿಂತಿತ್ತಲ್ ಸುಧಾವಾರ್ಧಿ ಪೊಗೆವ ಮಹಾವೇಗದಿಂದಂ ಸುರೇಂದ್ರರ್
ನೆಱೆಮುಳ್ಗಿತ್ತಲೀ ಮೇರುಗಿರಿ ಬಳಸಿದ ಕ್ಷೀರಪೂರಂಗಳಿಂದಂ
ತುಱುಗಿತ್ತು ವ್ಯೋಮಮುಂ ಬಿಂದುಗಳ ಬಳಗದಿಂ ತಾರಕಾಕ್ರಾಂತಮೆಂಬಂ
ತುಱೆ ಪೆರ್ಚುತ್ತಿರ್ದುದೇನದ್ಭುತಮೊ ಶತಮುಖಂ ಮಾಳ್ಪ ಜನ್ಮಾಭಿಷೇಕಂ ೧೧೬

ಮತ್ತೇಭವಿಕ್ರೀಡಿತ

ಪರಮಾನೇಕಘಟಂಗಳಿಂ ಪಿಡಿದು ಪೀನಾನೇಕಹಸ್ತಂಗಳಿಂ
ಸುರರೊರ್ವೋರ್ವರದೆಲ್ಲಿಯುಂ ಬಿಡದ ಯಾನಾಯಾನವೇಗಂಗಳಿಂ
ದಿರದಿಂತೊರ್ವೊದಲಲ್ಲಿಯೆಲ್ಲೆಡೆಯೊಳಂ ತಂತಮ್ಮ ರೂಪಂಗಳಂ
ಭರದಿಂ ತೋಱುಂಪರಾಗಿ ದೇವತತಿ ಸಂಖ್ಯಾತೀತಮೇನಾಗದೇ ೧೧೭

ಚಂಪಕಮಾಲೆ

ಹಿಮಗಿರಿಯಂತೆ ಮೇರುಗಿರಿಯಂತೆ ಸಲೆಮಾಳ್ಪ ಸಮಸ್ತಧಾತ್ರಿಯೆ
ಲ್ಲಮುಮನದೊರ್ಮೆ ಮುಳ್ಗಿಸುವ ಶಕ್ತಿಯನುಳ್ಳ ಪಯಃಪ್ರವಾಹಮಂ
ಭ್ರಮಮುಱೆ ಮೇಲೆ ಮೇಲೆ ಜಿನಮಸ್ತಕದೊಳ್ ಕವಿಯಲ್ಕೆ ನಿಶ್ಚಳ
ಪ್ರಮದದಿನಿರ್ದನಂದು ಸಹಜಂ ಜಿನಪುಂಗವಮಾರ್ಯವೀರ್ಯಕಂ ೧೧೮

ಮಹಾಸ್ರಗ್ಧರೆ

ಕವಿವ ಕ್ಷೀರವಾಹಂ ಪಿರಿದು ಶಿಶು ಕರಂ ತಾಳಲೇನಾರ್ಪನೆಂದಾ
ದಿವಿಜೌಘಂ ಚಿಂತಿಸಲ್ಕಂದದನಱಿದವಧಿಜ್ಞಾನದಿಂದರ್ಭಕಂ ತ
ತ್ತ್ರವಿಚಿಂತಾಭಾರಮಂ ಮಾಣಿಸುವ ಬೆಸಸೆಯಿಂ ಸೀಂಪುದುಂ ವ್ಯೋಮದೊಳ್
ದೇವವಿಮಾನವ್ರಾತಮುಂ ಪೂವಲಿಗೆದಱಿದವೊಲ್ ಚೆಲ್ಲಿ ಪೋದತ್ತದೆತ್ತಂ ೧೧೯

---

1 ಥ (ಕ)

ಪರನಾಸಾಗರ್ಭದೊಳ್ ತಾಂ ಪೊಱಮಡುವುಸಿರಿಂ ದೂರಮಂ ಪೋಗುತಂ ಮ
ತ್ತಿರದಾಗಳ್ ಬರ್ಪ ಸುಯ್ಲಿಂದೊಡನೆ ಬರುತುಮಿರ್ದಾ ವಿಮಾನಂಗಳಂ ದೇ
ವರ ದೇವಂ ಪೆಲ್ಲಸಪ್ಪೊಂದುಸುರಿನ ವಶದಿಂ ಸ್ಥಾಪನಂಗೆಯ್ವುದಕ್ಕ
ಚ್ಚುಱಪಟ್ಟಿಂತೆಂದಪೆಲ್ಲರ್ ಗಹನಮೆ ಪರಮಾನಂತವೀರ್ಯಂಗಿದೆಲ್ಲಂ ೧೨೦

ವಚನ : ಇಂತು ಮುನ್ನೆಂದುಂ ಭುವನತ್ರಯದೊಳನುದ್ಭೂತಮಾದದ್ಭುತಮಪ್ಪ ಜಿನನ ಜನನಸವನದನಂತರಂ

ಮತ್ತೇಭವಿಕ್ರೀಡಿತ

ನಟನಂಗೆಯ್ವಮರೀಕಟಾಕ್ಷಸಿ[1]ಚ[1]ಯಂ ತೀರ್ಥೇಶಗಂಡಸ್ಥಳೀ
ಪುಟದೊಳ್ ತಾಂ ಪ್ರತಿಬಿಂಬಿಸುತ್ತಿರಲದಂ ದೇವೇಂದ್ರಸಧ್ರ್ಯಂಗಿಯು
ತ್ಕಟದಿಂ ಕಂಡಭಿಷೇಕದುಗ್ಧಕಣಶೇಷಾಶಂಕೆಯಿಂ ಹಸ್ತದೊಳ್
ದಿಟದಿಂದಂ ತೊಡೆವುತ್ತುಮಿರ್ದಮರರಿಂಗಂ ಹಾಸ್ಯಮಂ ಮಾಡಿದಳ್ ೧೨೧

ಕಂದ : ಕ್ಷೀರೋದಬಿಂದುವಿತತಿ ಶ
ರೀರಮನಾವರಿಸೆ ಮೆಱೆದನಾ ದೇವೇಂದ್ರಂ
ತೋರಮುತ್ತಿನ ಸುಕಂಚುಕ
ಭಾರಮುಮಂ ತೊಟ್ಟನಾಗಳೆಂಬೀ ತೆಱದಿಂ ೧೨೨

ಚಂಪಕಮಾಲೆ

ವಿಳಸಿತರತ್ನಭಿತ್ತಿಗಳ ಸುತ್ತಲುಮೊಯ್ಯನೆ ತೆತ್ತಿಸಿರ್ದ ಪು
ತ್ಥಳಿಗೆಯ ಕೈಗಳೊಳ್ ಬಿಡದೆ ತುಂಬಿದ ಜೆಲ್ವಭಿಷೇಕದುಗ್ಧದು
ಜ್ವಳಕಣರಾಜಿಗಳ್ ಬಿಡದ ನಿರ್ಮಳಮೌಕ್ತಿಕಮಂಗಳಾಕ್ಷತಂ
ಗಳ ಬಳಗಂಗಳೆಂಬ ತೆಱದಿಂ ಸೊಗಸಂ ತಳೆದಿರ್ದವಾಕ್ಷಣಂ ೧೨೩

ಮಹಾಸ್ರಗ್ಧರೆ

ಕೃತಪುಣ್ಯೋದ್ರೇಕಪಾಕಂ ಸಕಳವಿಭವಸೀಮಾತಿರೇಕಪ್ರವೇಕಂ
ಕೃತಕೃತ್ಯಾನೇಕಲೋಕಂ ಬಹಳಕಲುಷಸಂಹಾರಣೈಕಪ್ರಕಾಶಂ
ಕೃತಚಿತ್ತಾನೇಕಶೋಕಂ ಪಡೆದುದು ಸೊಗಸಂ ಕೌಶಲಾನೀಕರೇಕಂ
ನುತತುಷ್ಯಂ ನಾಕಲೋಕಂ ಸುರಪತಿಕೃತಕಂ ಜೈನಜನ್ಮಾಭಿಷೇಕಂ ೧೨೪

ವಚನ : ಇಂತಾ ಪರಮಜಿನೇಶ್ವರಂ ಚರಮದೇಹಧಾರಿಯುಪ್ಪುದಱಿಂ ಮುನ್ನಮೆ ಸಕಳಮಳಿನವಿರಹಿತನಾಗಿ ಶುದ್ಧೀಕೃತದಿವ್ಯಶರೀರಿಯಾದೊಡಂ ತ್ರೈಲೋಕಾಧಿಪತ್ಯ ಸೂಚಕಮಾ[2]ಗಿ ರಾಜ್ಯಾಭಿಷೇಕಂಗೆಯ್ವಂತೆ ಜ[2]ನ್ಮಾಭಿಷೇಕಂಗೆಯ್ವುದುಂ

---

[1] ಳ (ಕಚ) [2] ಗಿಜ (ಜ)

ಮಹಾಸ್ರಗ್ಧರೆ

ಒಳಕೊಂಡತ್ತೆಯ್ದೆ ತತ್ಪಾಂಡುಕವನತಟಮಂ ಸುತ್ತಿಮುತ್ತಿತ್ತು ಮತ್ತ
ಗ್ಗಳಮಾಗಲ್ ಕೂಡೆ ತತ್ಸೌಮನಸವನಮುಮಂ ನಂದನಪ್ರಸ್ಥಮಂ ಮೂ
ವಳಸಾಗಲ್ ಮೀಱಿ ಮತ್ತಂ ಬಳಸಿದುದು ಮಹಾಭದ್ರಶಾಳೋದ್ವಿಶಾಳ
ಸ್ಥಳಮಂ ತಾಂ ಮುದ್ರಿಸಿತ್ತಂದಭಿಷವಣ ಘನಕ್ಷೀರಧಾರಾಪ್ರವಾಹಂ ೧೨೫

ವಚನ: ಮತ್ತಮಪಾರಸಮುದಾರತತ್ಪಯಃಪೂರಪೂರಿತಮಾದ ಮೇರುಗಿರಿಪರಿದೃಶ್ಯಮಾನ ಚೂಡಾಪೀಡಮಾತ್ರಮಾಗಿರ್ಪುದುಂ

ಚಂಪಕಮಾಲೆ

ನೆಗೆದುದಬಿಂದುಸಂತತಿಗಳಂತಿರೆ ತಾರೆಗಳುಂ ವಿಮಾನರಾ
ಜಿಗಳುಮದೆಲ್ಲಿಯುಂ ನೊರೆಯ ಪಿಂಡುಗಳಂದ[1]ದ[1]ನೆಯ್ದೆ ತೇಂಕಿ ಮೇ
ಗೊಗೆಯೆ ಜಿನಾಭಿಷೇಕಘನದುಗ್ಧಜಳಂ ನೆಱೆ ತೀವಿದತ್ತು ತಾಂ
ಗಗನಮುಮಂ ಸಮಸ್ತಧರಣೀತಳಮಂ ಸಮದಿಕ್ಕುಳಂಗಳಂ ೧೨೬

ವಚನ: ಆ ಜಿನಸವನಸುಧಾವಾರಿಧಿಯೊಳ್

ಮತ್ತೇಭವಿಕ್ರೀಡಿತ

ಜಲದೇವೀಜನಮೆಂಬಿನಂ ಸಕಳತದ್ದೇವೀಜನಂ ಮುಳ್ಗಿದ
ತ್ತೊಲವಿಂದಂ ನೆಱೆನೀರ್ಮನುಷ್ಯರವೊಲಾ ದೇವರ್ಕಳುಂ ತೇಂಕಿದರ್
ಗೆಲವಿಂದಂದಮರೆಲ್ಲರುಂ ಜಿನಪನಂಗಸ್ಪೃಷ್ಟಪೀಯೂಷಮಂ
ಜಳಸೇವಾಫಳದಿಂದೆ ನಿರ್ಜರತೆಯುಂ ತಾಳ್ದರ್ ಸುದುರ್ಲಭ್ಯಮಂ ೧೨೭

ಅಭಿಷೇಕಾಮೃತವಾರಿಪೂರಚಯದೊಳ್ ತೇಂಕಿತ್ತು ಮುಳ್ಗಿತ್ತು ಮ
ತ್ತುಭಯಂ ಕೋಡುಗಳಿಂದಮೀಡಿಱುವುತಂದುತ್ಫೇನಪಿಂಡಂಗಳಂ
ಪ್ರಭವಾನಂದದಿನೀಸಿದತ್ತು ಮರಳಿತ್ತೋಲಾಡಿದತ್ತಾಡಿದ
ತ್ತಭಿನೂತಂ ದಿವಿಜೇಂದ್ರವಾರಣವರಂ ನೀರಾನೆಯೆಂಬಂದದಿಂ ೧೨೮

ವಚನ: ಮತ್ತಂ ದೇವರ್ಕಳೆಲ್ಲಂ ನೆರೆದು ದೇವೇಂದ್ರಾಚಳಚೂಳಿಕಾಗ್ರದಲ್ಲಿ [2]ಜಿನಜ[2]ನ್ಮಾಭಿಷೇಕವ್ಯಾಪಾರದೊಳ್ ಪರಿಪೂರ್ಣಾಮೃತಾರ್ಣವನಿಮಗ್ನಮೇಖಳಾಕಲ್ಪವೃಕ್ಷಲಕ್ಷ್ಮೀ ದಿವಿಜಗಜಂ ಮೊದಲಾದುವೆಲ್ಲ ಮುಳ್ಗಿ ತಿರೋಭಾವಮನೆಯ್ದೆ ಬಳಿಯಂ ತತ್ಪ್ರವಾಹಗಹನವಶದಿಂದಾವಿರ್ಭಾವಮನೆಯ್ದುವುದುಮಮೃತಮಥನವಿಧಾನದೊಳ್ ಪುಟ್ಟಿದವೆಂಬೀ ಪ್ರವಾದಂ ಲೋಕದೊಳೆಸೆದತ್ತೀ ತೆಱದಿಂ ದೇವದಾನವರಿಂದಾದ ಮಹಾಮೃತಮಥನಂ ಮಂಗಳಕಾರಣಮಾದುದಿಂ[3]ತು[3]

[1] ದಿ (ಜ) [2] ಜ (ಜ) [3] ತುಂ (ಜ)

ಚಂಪಕಮಾಲೆ

ಇಳಿದುದು ಮೆಲ್ಲಮೆಲ್ಲನೆ ಸುರಾಚಳದಿಂದೆ ಪಯಃಪ್ರವಾಹಮು
ಗ್ಗಳಮೆನೆ ಭೂಮಿಯೊಳ್ ನೆಲಸಿ ಮಾರ್ಗದಿಂ ನಡೆಗೊಂಡು ಬೇಗದಿಂ
ಕಳಿದು ಸಮಸ್ತದೇಶದ ಧರಾತಳಮಂ ಲವಣಾಬ್ಧಿಯಲ್ಲಿ ಸಂ
ಗಳಿಸಿಯೆ ಪೋಗಿ ಪೊಕ್ಕುದದು ವಿಸ್ಮಯಮಂ ಜಗದಲ್ಲಿ ಮಾಡುತಂ ೧೨೯

ವಚನ : ತದನಂತರಮಮರನಿಕರಂ ನಿಖಿಳಕುಳನದೀಪ್ರಮುಖಪವಿತ್ರತೀರ್ಥಜಲಂಗಳಂ ನಾನಾಸರೋಜಸಮಾಜಕಿಂಜಲ್ಕಮಂಜರೀಪುಂಜಪರಿರಂಜನಪಿಂಜರಿತಂಗಳನಪಾರ ಭೃಂಗಾರಕಳಶಕುಂಭಂಗಳೊಳ್ ತುಂಬಿ ತಂದು ಪುರಂದರಂಗೆ ಸಂಧಿಸುವುದುಂ

ಮತ್ತೇಭವಿಕ್ರೀಡಿತ

ವರಕರ್ಪೂರರಸರಾಗಪೂಗಪರಮಶ್ರೀಗಂಧಸತ್ಕುಂಕುಮೋ
ತ್ಕರಕಾಳಾಗರು ಯಕ್ಷಕರ್ದಮಸುಮಾಂಗಲ್ಯಾದಿಸೌಗಂಧಬಂ
ಧುರಸದ್ದ್ರವ್ಯವಿಶೇಷಮಿಶ್ರಜಳದಿಂ ಗಂಧೋದಕಸ್ನಾನಮಂ
ಸುರಪಂ ಮಾಡಿದನಾ ಜಿನಂಗೆ ದೆಸೆಯಂ ತಳ್ಪೊಯ್ಯೆ ವಾದ್ಯಸ್ವನಂ ೧೩೦

ಕಂದ : ಮಿಗೆ ಗಂಧೋದಕಪರಿಮಳ
ಮಗಣಿತಜಿನದೇಹಸಹಜಪರಿಮಳಭರಮಂ
ಸೊಗಸಿಂ ಪೊರ್ದಿಯದಾಯ್ತು
ದ್ವಿಗುಣಂ ತ್ರಿಗುಣಂ ಚತುರ್ಗುಣಂ ಪಂಚಗುಣಂ ೧೩೧

ಮತ್ತೇಭವಿಕ್ರೀಡಿತ

ಪರಮೌದಾರಿಕದಿವ್ಯದೇಹಸಹಜಾಮೋದಾಭಿಸಮ್ಮಿಶ್ರಬಂ
ಧುರಗಂಧೋದಕಭೂರಿಭೂರಿಪರಮಾಮೋದಕ್ಕೆ ಸೋಲ್ತಂಜಿ ನಿ
ತ್ತರಿಸಲ್ಕಾರದೆಯೋಡಿಪೋಗಿ ಜಲಮಂ ಪೊಕ್ಕಿರ್ದುವಬ್ಜಂಗಳು
ದ್ಧುರಪುಷ್ಪಂಗಳವುಂ ಮರಂಗಳನಡರ್ದೇರ್ದಮಂದಾದಿಯುಂ ೧೩೨

ಕಂದ : ಬನಮಂ ಪೊಕ್ಕುದು ಚಂದನ
ಮನುಪಮಕಸ್ತೂರಿಮೃಗದ ಬಸಿಱಂ ಪೊಕ್ಕುದು
ಜಿನಗಂಧೋದಕನಿರುಪಮ
ಘನಗಂಧಕ್ಕಗಿದು ಸೋಲ್ತುದೆಂಬಂತೆ ವಲಂ ೧೩೩

ಶಾರ್ದೂಲವಿಕ್ರೀಡಿತ

ಮೂಱುಂ ಲೋಕದೊಳುಳ್ಳ ಸರ್ವಸುರಭಿದ್ರವ್ಯಂಗಳಾಮೋದಮಂ
ಮೀಱುತ್ತಿರ್ದ ಜಿನಾಂಗದಿವ್ಯಸಹಜಾಮೋದಕ್ಕೆ ಸೋಲ್ತಂಜಿ ಮೆ
ಯ್ದೋಱಲ್ಕಮ್ಮದೆಯೋಡಿಪೋಗಿ ಜಲಮಂ ಪೊಕ್ಕಿರ್ದವೆಂಬಂದದಿಂ
ಬೇಱೊಂದದ್ಭುತಗಂಧಮಂ ತಳೆದುದಾ ಗಂಧೋದಕಂ ಶ್ರೀದಕಂ ೧೩೪

ಉತ್ಪಲಮಾಲೆ

ದಿಗ್ಗಜಗಂಡಮಂಡಲಗಲನ್ಮದಗಂಧಮನೆಯ್ದೆ ಬಿಟ್ಟು ಮ
ತ್ತಗ್ಗದ ಪುಷ್ಪಸಂಕುಳದ ಗಂಧಮನೊಲ್ಲದೆಯಾತುರತ್ವದಿಂ
ದಗ್ಗಳಮಾದ ಜೈನಸವನೋದಕಗಂಧನಿಷೇವಣಾಸೆ ಮೆ
ಯ್ಯೊಗ್ಗೆ ಮಧುವ್ರತಪ್ರತತಿಬಂದುದು ಸರ್ವದಿಗಂತರಾಳದಿಂ ೧೩೫

ಮತ್ತೇಭವಿಕ್ರೀಡಿತ

ಸಿರಿದುಂ ಪಾಪಮಲಪ್ರಲೇಪಭರಮಂ ವ್ಯಾಲೋಪನಂಗೆಯ್ದು ಬಿ
ತ್ತರದಿಂ ನಿರ್ಮಳಭಾವಮಂ ಬಿಡದೆ ಮಾಳ್ಕೆಮ್ಮಲ್ಲಿ ಸಲ್ಲೀಲೆಯಿಂ
ಪರಿತಾಪಪ್ರವಿಭೇದಿಕಂ ಘನದಯಾವಲ್ಲೀಸಮುತ್ಪಾದಕಂ
ವರಶಾಂತಿಪ್ರತಿಪಾದಕಂ ಜಿನಪತಿಸ್ನಾನೋರುಗಂಧೋದಕಂ ೧೩೬

ವಚನ : ಅನಂತರಂ

ಕಂದ : ದೇವಾಂಗವಸ್ತ್ರದಿಂ ಜಿನ
ದೇವಾಂಗಮನೆಯ್ದೆ ತೊಡೆದು ಕುಂಕುಮಕರ್ಪೂ
ರಾವಿಳಗಂಧಕ್ಷೋದದೆ
ಪಾವನಜಿನತನುವನೊಲ್ದು ಪೂಸಿದನಿಂದ್ರಂ ೧೩೭

ವಚನ : ಮತ್ತಮಾ ತ್ರಿಳೋಕತಿಲಕನ ಸಹಜಸುರಭಿಪರಿಮಳಮಿಳಿತನಿಟಿಳಸ್ಥಳದೊಳತಿಶಯಿತ ಹರಿಚಂದನರಸಕಲ್ಕದ ಮಂಗಳತಿಳಕಮನಿಡಲೊಡಮಾಗಳಾ ನಗೆಮೊಗಂ ಧವಳಮಧುಕರದಿಂದೊಂದಿದ ಪೊಂದಾವರೆಯಲರನನುಕರಿಸುತ್ತುಮಿರೆ

ಕಂದ : ಮಸೃಣಮಣಿಮಕುಟಮಂ ಜಿನ
ಶಿಶುವಿನ ಮಸ್ತಕದೊಳಿಕ್ಕಿ ದೇವೇಂದ್ರಂ ದಲ್
ಪೊಸತೆನಿಪ ಕಿರಣಜಾಳ
ಪ್ರಸರದಿ ಸಾಗಿಸುತುಮಿರ್ದುದದು ಕೌತುಕಮಂ ೧೩೮

ವಚನ : ಮತ್ತಂ ವಜ್ರಧರಂ ಪರಿನಿಶಿತವಜ್ರಮಯಸೂಚ್ಯಗ್ರದಿಂ ಕೋಮಳಕರ್ಣಪಾಳಿಕಾಯುಗಳಮನೂಱಿ ಪ್ರತ್ಯಗ್ರೋದಗ್ರವಜ್ರಮಾಣಿಕ್ಯಮಯಕುಂಡಲಂಗಳನಿಕ್ಕಿ

ಚಂದ್ರಸೂರ್ಯರ್ ಬಂದು ನಾವಾವ ಬೆಸನಂ ಮಾಳ್ಪೆವೆಂದು ಕರ್ಣೋಪಾಂತಮನೆಯ್ದಿ ಕೇಳ್ವಂತೆ ಥಳಥಳಿಸಿ ಪೊಳೆಯುತ್ತುಮಿರ್ದವು ಬಳಿಯುಂ ಮುಕ್ತಾಫಳತಾರಹಾರಂಗಳಂ ತ್ರಿಗುಣಿಸಿ ವಿಶಾಳವಕ್ಷಸ್ಥಳದೊಳಿಕ್ಕಿ ಮುಕ್ತಿಲಕ್ಷ್ಮಿಯುಂ ಶ್ರೀದೇವಿಯುಂ ಧರಣೀರಮಣಿ ಯುಮೆಂಬೀ ಮೂವರುಮೊರ್ಮೊದಲೊಳೆ ಬಂದು ತವಕದ ಸಂಭ್ರಮಂ ಕೈಮಿಗಲಾಗಳೆ ಸ್ವಯಂಬರಮಾಲೆಗಳನಿಕ್ಕಿದರೆಂಬಂತೆ ತೊಳಗಿಬೆಳಗಿದವು ಬಳಿಕ್ಕಂ ರಮಣೀಯಮಣಿ ಕಂಕಣಕಾಂಚನಮಯಕಾಂಚೀದಾಮ ವೈಡೂರ್ಯಕೃತಕೇಯೂರ ನವರತ್ನರಚಿತಗ್ರೈ ವೇಯಕ ಗೋಮೇಧಮೇದುರಾಂಗದಂ ಮೊದಲಾದ ಸಕಳಭೂಷಣಕಳಾಪಮಂ ತೊಡಿಸಿ ಸ್ವರ್ಗಲೋಕದೊಳಗಗ್ಗಳಮಾದ ವಿಚಿತ್ರಚಿತ್ರವಿಸ್ತೃತಪ್ರಶಸ್ತವಸ್ತ್ರಂಗಳನುಡಿಸಿಯುಮಿಂತ ತ್ಯಾಶ್ಚರ್ಯಕಾರಿಯಪ್ಪಲಂಕಾರಸಾರದಿಂದದ್ಭುತಮಾಗಳಂಕರಿಸೆ

ಚಂಪಕಮಾಲೆ

ಚರಮಶರೀರಮಂ ಸಹಜದಿಂದಮತೀವವಿಳಾಸಭಾಸುರಂ
ಸುರಪತಿಕಾಂತೆ ಮತ್ತಮದನುತ್ತಮಬಾಳವಿಭೂಷಣಂಗಳಂ
ಸುರತರು ಕೊಟ್ಟಮಂ ತೊಡಿಸಿ ನೋಡಿದೊಡಂ ರವಿಬಿಂಬಮಂ ಮಹಾ
ದರದೊಳೆ ದೀಪಿಕಾತತಿಗಳಿಂದಭಿರಂಜಿಸುವಂತಿರಾಯ್ತು ತಾಂ ೧೩೯

ವಚನ: ಆಗಳ್

ಕಂದ: ವರಷೋಡಶಳಾಭಿರಮ್ಯಂ
ಪರಮಸುವರ್ಣಪ್ರಭಾವಿಶೇಷಿತರೂಪಂ
ಸುರಗಿರಿ ಮತ್ತೊಂದೆಂಬಿನ
ಮರಹಂತಂ ಪಾಂಡುಶಿಲೆಯೊಳೆಸೆಯುತ್ತಿರ್ದಂ ೧೪೦

ವಚನ: ಆಪೊತ್ತಿನೊಳ್

ಚಂಪಕಮಾಲೆ

ಜಿನಪನ ದಿವ್ಯಮೂರ್ತಿಯನಭೀಕ್ಷಿಪೊಡೆನ್ನಯ ಲೋಲಚಾರುಲೋ
ಚನಯುಗಮೆಯ್ದದೆಂದುಱ ವಿಗುರ್ವಿಸಿ ಸಾಸಿರಕಣ್ಗಳೋಳಿಯಂ
ಘನತರಭಕ್ತಿಯಿಂ ಸುಕೃತಮೂರ್ತಿಯ ವಿಸ್ಮಯಕಾರಿರೂಪಮಂ
ಮನದನುರಾಗಮುಣ್ಮೆ ನಡೆನೋಡುತುಮಿರ್ದನಮರ್ತ್ಯನಾಯಕಂ ೧೪೧

ಸುರಪತಿಯಂತೆ ಮತ್ತಮೆಮಗಂ ಸಲೆಸಾಸಿರಕಣ್ಗಳಾದೊಡೀ
ಪರಮನ ಮೂರ್ತಿಯಂ ಬಿಡದೆ ನೋಡುತುಮಿಂತಿರಲಕ್ಕುಮೆಂದು ಸ
ರ್ವರುಮಮರಾಧಿಪರ್ ಪಡೆದು ಬಾಯ್ಬಿಡುತುಂ ನಡೆನೋಡುತಿರ್ದರಾ
ಸುರುಚಿರಮೂರ್ತಿಯಂ ತವಕದಿಂ ನೆಱಕಣ್ತಣಿವನ್ನಮಾಕ್ಷಣಂ ೧೪೨

ವಚನ: ಇಂತಾಸೇಚನಕಾರಿಯಪ್ಪ ಜಿನನಾಯಕನಾಕಾರಮಂ ಸಮಸ್ತಸುರಾಸುರ ನಿಕರಮೆಲ್ಲಂ ನೀಡುಂನೋಡುತ್ತುಮಿರೆ ಬಿಡೌಜಂ ಪರಮೇಷ್ಠಿಗಷ್ಟವಿಧಾರ್ಚನಾವಿರಚನ ತತ್ಪರನಾಗಿ

* ಕಂದ: ಶ್ರೀಮತ್ಕಾಂಚನಕಳಶಭೃ
ತಾಮಳತರಕಮಳದಳಸುವಾಸಿತಜಳದಿಂ
ಕಾಮಿತಫಳಪ್ರದಾಮರ
ಭೂಮಿಜನಂ ಧರ್ಮನಾಥನಂ ಪೂಜಿಸುವೆಂ ೧೪೩†

ವರಕುಂಕುಮಪಂಕಾಂಕಿತ
ಸುರುಚಿರಕರ್ಪೂರಚೂರ್ಣಪರಿಕಳಿತ ಮಹಾ
ಹರಿಚಂದನಕಲ್ಕದಿನಘ
ಪರಿಹರನಂ ಧರ್ಮನಾಥನಂ ಪೂಜಿಸುವೆಂ ೧೪೪‡

ವಿಳಸಿತಕಿರಣಕಳಾವಳಿ
ಗಳ ಧವಳತರಾಕ್ಷತಾಂಗಕಳಮಾಕ್ಷತಸಂ
ಕುಳರಂಜಿತಪುಂಜದಿನು
ಜ್ವಳಗುಣನಂ ಧರ್ಮನಾಥನಂ ಪೂಜಿಸುವೆಂ ೧೪೫§

ಸುರಭಿಪರಿಮಳ ವಿಶೇಷಿತ
ದರದಳಿತ ಸರೋಜಮಲ್ಲಿಕಾ ಚಂಪಕ ಬಂ
ಧುರಪುಷ್ಪಮಾಲೆಯಿಂದುಂ
ದರಹರನಂ ಧರ್ಮನಾಥನಂ ಪೂಜಿಸುವೆಂ ೧೪೬††

ಕಾಂಚನಮಯ ಘನಭಾಜನ
ಸಂಚಯನಿಹಿತಾಮೃತೋಪಮಾನಪ್ರಾಜ್ಯಾ
ಜ್ಯಾಂಚಿತ ನಾನಾಚರುವಿಂ
ದಂಚಿತನಂ ಧರ್ಮನಾಥನಂ ಪೂಜಿಸುವೆಂ ೧೪೭‡‡

ವಿನುತಪ್ರಭಾಪ್ರಭಾವಿತ
ಘನತರರತ್ನಪ್ರದೀಪದೀಪಕಳಾಪದಿ
ನನುಪಮಕೇವಳಬೋಧಾ
ತ್ಮನನೊಲವಿಂ ಧರ್ಮನಾಥನಂ ಪೂಜಿಸುವೆಂ ೧೪೮§§

* ಅಷ್ಟವಿಧಾರ್ಚನೆ (ಗಚ) † ಜಲ (ಕಗಚ) ‡ ಗಂಧ (ಕಗಚ) § ಅಕ್ಷತೆ (ಕಗಚ) †† ಪುಷ್ಪ (ಕಗಚ) ‡‡ ಚರು (ಕಗಚ) §§ ದೀಪ (ಕಗಚ)

ಧೂಪಿತದಿಙ್ಮಂಡಲದಿಂ
ದಾಪತದಳಿನೀವಿತಾನಕಾಘ್ರಾತದಿನು
ದ್ವ್ಯಾಪಿತೋಷ್ಮಾಯಮಾಣಸು
ಧೂಪದಿನಾಂ ಧರ್ಮನಾಥನಂ ಪೂಜಿಸುವೆಂ ೧೪೯†

ಚೂತಪನಸಾಮ್ರಕದಳೀ
ನೂತನಜಂಬೀರ ನಾಳಿಕೇರಾದಿ ಫಳ
ವ್ರಾತದಿನಭಿರಕ್ಷಿತ ಜಗ
ತೀತಳನಂ ಧರ್ಮನಾಥನಂ ಪೂಜಿಸುವೆಂ ೧೫೦‡

ಚಂಪಕಮಾಲೆ

ಮಳೆ ಪಿರಿದಾಗಿ ಕೊಳ್ಗೆ ಧರಣೀತಳದಲ್ಲಿ ಸಮಸ್ತಧಾನ್ಯಮುಂ
ಬೆಳಗೆ ಸುಭಿಕ್ಷಮಕ್ಕೆ ಬಿಡದೆಲ್ಲೆಡೆಯಲ್ಲಿಯುಮೆಯ್ದೆ ಭೂಪರುಂ
ವಿಳಸಿತ ಧರ್ಮದಿಂ ನೆಲನನಾಳ್ಗೆ ವಿಶೇಷಿತ ಜೈನಧರ್ಮಮು
ಜ್ಜ್ವಳಮೆನೆ ಲೋಕದೊಳ್ ಪರೆದತಿಪ್ರಬಳತ್ವಮನೆಯ್ದುಗಾವಗಂ ೧೫೧

ಕಂದ : ಪೂಜಿಸುವಂ ದೇವೇಂದ್ರಂ
ಪೂಜ್ಯಂ ಜಿನನಾಥನಮಳಪೂಜಾದ್ರವ್ಯಂ
ರಾಜಿತಸುರತರು ಸುಫಳಿಸ
ಲಾಜಂ ಗಡಮಂದಱ ಮಹಿಮೆ ಸಾಧಾರಣಮೇ ೧೫೨

*

ವಚನ : ಇಂತು ವಿಶಿಷ್ಟಾಷ್ಟವಿಧಾರ್ಚನಾವಿಧಾನದಿಂ ಸಂತುಷ್ಟಚಿತ್ತನಾದ ತ್ರಿವಿಷ್ಟಪಾಧೀಶ್ವರಂ ವಿಪುಳಪುಳಕಾಂಕುರಾಕಳಿತಕಳೇವರಂ ಬಳಿಯಂ ಕಿಂಚಿನ್ನಮಿತ ನಿಜನಿಟಿಳತಟ[2]ಘ[2]ಟಿತಾಂಜಳೀಪುಟನಾಗಿ ಸಕಳದೇವದಾನವನಿವಹಂಬೆರಸು ಜಯಜಯ ಯೆಂದು ನಿರ್ಭರಭ[3]ಕ್ತಿ[3]ಯಿಂದಾ ಸರ್ವಜ್ಞನ ವಾಸ್ತವಮಾದ ರೂಪಗುಣವಾಸ್ತವಸ್ತವನ ವಿಸ್ತಾರಸ್ಫೂರ್ತಿಯಮಾನಸ್ತೋತ್ರಮುಖರಮುಖನಾಗಿ

ಉತ್ಪಲಮಾಲೆ

ಶ್ರೀಪದಲಾಭಕಾರಣಮಶೇಷಜನಂಗಳಧೀಶ ನಿನ್ನಯ
ಶ್ರೀಪದಸೇವೆಯಂ ಬಿಡದೆ ಮಾಳ್ಪರದಲ್ಲದೆ ಮೋಹಕಾರಣಂ
ವ್ಯಾಪಿಸರೇನುಮಂ ಜಗದೊಳೆಂತು ವಿನಿರ್ಮಳವಾರಿಸೇವೆಯುಂ
ತಾಪದ ಶಾಂತಿಗಾಗಿ ಮಿಗೆ ಮಾಳ್ಪರುಮಂತೆ ಜಿನಾಧಿನಾಯಕಾ ೧೫೩

---

[1] ಸ (ಜ) [2] ಪು (ಕಜ) [3] ಕ್ತಿಭಕ್ತಿ (ಜ)
* ಶಾಂತಿಧಾರೆ (ಕಗಜ) † ಧೂಪ (ಕಗಜ) ‡ ಫಳ (ಕಗಜ)

ದೇವರ ದೇವ ನಿನ್ನ ಮತವಾಸನೆಯಿಲ್ಲದನೇಕಕಾಲಮುಂ
ಪೀವರಮಾದ ಸಂಸರಣಕಾನನದಲ್ಲಿ ಪೊಲಂಬುಗೆಟ್ಟ ನಿ
ನ್ನೀ ವಚನಂಗಳಿಂ ತಿಳಿದೆನೀಗಳಧೀಶ್ವರ ಧರ್ಮಮಾರ್ಗಮಂ
ಪಾವನಮೋಕ್ಷಪತನಮನೆಯ್ದುವೆ ನಾನಪಜಂ ಜಿನೇಶ್ವರಾ ೧೫೪

ಮಹಾಸ್ರಗ್ಧರೆ

ಇನಿತುಂ ಕಾಲಂಬರಂ ನಾನಱಿಯದನಘ ನಿನ್ನಂ ಕುಮಿಥ್ಯಾತ್ವದುರ್ಭಾ
ವನೆಯಿಂದಂ ಕ್ಷೀಣದೈವಂಗಳನೆ ಭಜಿಸಿ ಸಂಸಾರದುಃಖಕ್ಕೆ ದುರ್ಭಾ
ಜನನಾದೆಂ ಮೂರ್ಖನೆನೆಂದಱಿಯದೆ ಪೊಸಕೆಂಡಂಗಳಂ ಕಂಡು ಚಂಚ
ದ್ಘನಮಾಣಿಕ್ಯಂಗಳೆಂದೆತ್ತಿದೊಡೆ ಕರತಳಂ ಬೆಂದು ನೋವಂದದಿಂದಂ ೧೫೫

ಮೊದಲೊಳ್ ಸ್ವರ್ಗಾವತಾರೋತ್ಸವದಿನಖಿಳವಿಶ್ವಂಭರಾಚಕ್ರದೊಳ್ ಸ್ವ
ರ್ಣದ ವರ್ಷಾಪೂರದಿಂದಂ ಕಳೆದೆ ಜನವಿಪತ್ಪೀಡೆಯಂ ನೀನುಮೀಗಳ್
ಪದೆಪಿಂದೆನ್ನಂತರಂಗಾಲಯದೊಳಿರುತಿರಲ್ಕಿನ್ನ ದುಃಖಂಗಳಂ ಬೇ
ಗದಿನಾದಂ ತೂಳ್ದದೆಂತಿರ್ದೊಡೆ ನಿನಗೆ ಜಿನಾ ಪೊರ್ದುಗುಂ ಪಕ್ಷಪಾತಂ ೧೫೬

ಉತ್ಪಲಮಾಲೆ

ಮುನ್ನಮನೇಕ ಭವ್ಯತತಿ ನಿನ್ನ ಪದಾಂಬುಜಸೇವನಾರತಾ
ತ್ಯನ್ನತಮಾಗೆ ಪೆತ್ತುದುರುಶಾಶ್ವತಸೌಖ್ಯಮನೆಂದೊಡಾವಗಂ
ನಿನ್ನಯ ವೇಳೆಯಾಗಿ ಪರಿಪೂಜಿಸು ಭಾವಿಸು ತೀರ್ಥನಾಥನ
ಪ್ಪೆನ್ನನುಪೇಕ್ಷಿಸಲ್ಕೆ ಗುಣಮೇ ನಿನಗಿಂದ್ರನರೇಂದ್ರವಂದಿತಾ ೧೫೭

ಚಂಪಕಮಾಲೆ

ಕೆಡದ ಮಹಾಪ್ರಕಾಶಮಯಮೂರ್ತಿಕ ಭವ್ಯನದಾವನೊಲ್ದು ನಿ
ನ್ನಡಿಯನೆ ಸಾರ್ದು ಸೇವಿಸುತುಮಿರ್ದಪನಾತನನೆಯ್ದೆ ನಿನ್ನವೋಲ್
ತಡೆಯದೆ ಮಾಳ್ಪ ದೀಪಕಳಿಕಾಂಕುರಮೆಂತುಱತಿ ತನ್ನ ಸಾರ್ದ ಸಂ
ಗಡಿಸಿದ ವರ್ತಿಯಂ ಪಡೆದು ತನ್ನವೊಲಾಗಿಸುವಂದದಿಂ ಜಿನಾ ೧೫೮

ಜಿನಪತಿ ನಿನ್ನ ಮಾರ್ಗಮಪವರ್ಗಸುಖಕ್ಕನುಕೂಲವೃತ್ತಿ ನೆ
ಟ್ಟನೆ ನರಕಾದಿದುಃಖದುದಯಕ್ಕೆ ಕರಂ ಪ್ರತಿಕೂಲವೃತ್ತಿ ಸ
ತ್ವನಿತ ದಯಾಮಯಾತ್ಮಕಮುಮಾಗಿ ಸಮಸ್ತಜನಕ್ಕೆ ಸೌಖ್ಯಮಂ
ಘನಮೆನೆ ಮಾಡುತುಂ ಜಗಮನುದ್ಧರಿಸುತ್ತುಮಿರ್ದದೊಪ್ಪದಿಂ ೧೫೯

ಮತ್ತೇಭವಿಕ್ರೀಡಿತ

ಜಿನ ನಿನ್ನಂಘ್ರಿಯನರ್ಚಿಸುತ್ತುಮಮಳಸ್ತೋತ್ರಂಗಳಂ ಪೇಳುತಂ
ವಿನುತಾಕಾರಮನೀಕ್ಷಿಸುತ್ತುಮಮೃತಶ್ರೀಮೂರ್ತಿ ಸೌರಭ್ಯಮಂ
ಮನವೊಲ್ದೀವಡೆ ವಾಸಿಸುತ್ತುಮಧಿಕಂ ನಿನ್ನಾಗಮಪ್ರೋಕ್ತ ಪಾ
ವನ ಸದ್ಯುಕ್ತಿಯನಾಲಿಸುತ್ತುಮುಱಿ ಪೋಕಿಂತೆನ್ನ ಜನ್ಮಂ ಕರಂ ೧೬೦

ವಚನ : ಎಂದಿಂತು ಸೌಧರ್ಮೇಂದ್ರನಾ ಜಿನೇಂದ್ರಚಂದ್ರನ ರುಂದ್ರಗುಣಸ್ತವನ[1]ಮಂ[1] ಪವಣಿಲ್ಲೆಂಬಿನಂ ಪ್ರಶಸ್ತಮಾಗಿ ವಿಸ್ತರಿಸಿ ವಿನಯವಿನಮಿತಮಸ್ತಕನಾದಿಂಬಳಿಯಂ ಸಮಸ್ತಸುಮನಸ್ತತಿಯ ನಟ್ಟನಡುವೆ ಕುಳ್ಳಿರ್ದು

ಕಂದ : ಇನಿತೊಂದು ವಿಭವಮಂ ಜಿನ
ಪನ ಜನನದ ಸಮಯದಲ್ಲಿ ಮಾಡಿದನೊಲವಿಂ
ದನಿಮಿಷವರನೆಂದೊಡದಾ
ವನೊ ಬಲ್ಲಂ ಮುಂದೆ ಮಾಳ್ಪ ವಿಭವದ ತೆಱನಂ ೧೬೧

ವಚನ : ಮತ್ತಂ

ಮಹಾಸ್ರಗ್ಧರೆ

ಪಿರಿದುಂ ಜನ್ಮಾಭಿಷೇಕೋತ್ಸವದ ಮಹಿಮೆಯಂ ಮೆಚ್ಚಿ ಕೊಂಡಾಡಿ ಶಕ್ರಂ
ಪರಿತೋಷೋತ್ಕರ್ಷಮಂ ತಾಳ್ದಿದನಧಿಗತಸಾಹಿತ್ಯವಿದ್ಯಾವಿಶೇಷಂ
ಕರುಣಾಕೇಳೀಗೃಹಂ ಬಾಹುಬಲಿಸುಕವಿರಾಜಂ ಮಹಾಗಣ್ಯಪುಣ್ಯ
ಸ್ಫುರಣಂ ಸಮ್ಯಕ್ತ್ವಚೂಡಾಮಣಿ ಗುಣನಿವಹಂ ಚಾತುರೀಜನ್ಮಗೇಹಂ ೧೬೧

ಗದ್ಯ : ಇದು ಸಕಳಭುವನಜನವಿನೂಯಮಾನಾನೂನ ಮಹಿಮಾಮಾನನೀಯ
ಪರಮಜಿನಸಮಯಕಮಳಿನೀಕಳಹಂಸಾಯಮಾನ ಶ್ರೀಮನ್ನಯಕೀರ್ತಿ
ದೇವಪ್ರಸಾದಸಂಪಾದಪಾದನಿಧಾನದೀಪವರ್ತಿಯುಭಯಭಾಷಾ
ಕವಿಚಕ್ರವರ್ತಿ ಬಾಹುಬಲಿಪಂಡಿತದೇವಪರಿನಿರ್ಮಿತಮಪ್ಪ
ಧರ್ಮನಾಥ ಪುರಾಣದೊಳ್ ಜನ್ಮಾಭಿಷವಣ
ಕಲ್ಯಾಣವರ್ಣನಂ

**ಅಷ್ಟಮಾಶ್ವಾಸಂ**

---

1 ಮಾ (ಜ)

# ನವಮಾಶ್ವಾಸಂ

ಕಂದ: ಶ್ರೀ ಜಿನಪತಿ ವರಚರಣ ಸ
ರೋಜಂಗಳನಮಿತಭಕ್ತಿಯಿಂ ವಿಬುಧೇಂದ್ರಂ
ಪೂಜಿಸಿ ನಲಿವುತ್ತಿರ್ದು ವಿ
ರಾಜಿಸಿದಂ ಸರಸಚತುರ ಕವಿಕುಳತಿಳಕಂ ೧

ವಚನ : ಅನಂತರಮಾ ದೇವೇಂದ್ರಂ ದೇವಸಭಾಸ್ಥಾನದ ನಟ್ಟನಡುವೆ ಕುಳ್ಳಿರ್ದು ಮಹಾನಂದನರ್ತನೋತ್ಸಾಹ ಸಮುತ್ಸುಕಚಿತ್ತನಾಗಿಯನುರಾಗಂಬೆತ್ತು ರಾಗರಸತರಂಗಿತಮಲ್ಲದಾಸ್ಥಾನರಂಗಂ ಪರಿರಂಜಿಸದೆಂದು ಬಗೆದಂದು ತದಾಸ್ಥಾನರಂಗದ ಮುಂದೆ ಕುಳ್ಳಿರ್ದು ನಾನಾವಿಧರಾಗಸ್ವರಭಂಗಿಯಿಂ ಭಂಗುರಿತಮಾದ ಸಂಗೀತವಿದ್ಯಾವಿಶೇಷಾಧಿಕ್ಯಗರ್ವಿತ ಸರ್ವಪ್ರಸನ್ನಕಿನ್ನರದೇವೀಜನಂಗಳ ಮೊಗಂಗಳಂ ನೋಡುವುದುಮಾಗಳವರವಸರಮುಱಿದು ರಚ್ಚೆಯು ಮಟ್ಟೆಯು ಪಡಿಮಟ್ಟೆಯು ಝಂಪೆಯುಮುಡ್ಡ ತಾಳರೂಪಕಮೆಕ್ಕತಾಳಂಗಳೆಂಬ ಸಪ್ತತಾಳಂಗಳಂ ನಿವರ್ತನಗೆಯ್ದು ಜಂತ್ರಸ್ವರಮಂಡಳ ಬ್ರಹ್ಮನಾದ ರಾವಣಹಸ್ತಾದಿ ಸಮಸ್ತವೀಣಾವಿಶೇಷಂಗಳಂ ಸೈತೆಮಾಡಿ ವಿಪಂಚಿಯ ಸಂಚಯದಿಂಚರದೊಳುಪಾಶ್ರಯಂ ಬಡೆದು ವಿಂಶತಿಯುತಿಪ್ರಪಂಚದೊಳ್ ನೆಱೆದು ಮಧ್ಯಮ ಧೈವತ ಷಡ್ಜ ಪಂಚಮ ನಿಷಾದ ರುಷಭ ಗಾಂಧಾರಂಗಳೆಂಬ ಸಪ್ತಸ್ವರಸಂಯೋಗಸಂಜಾತದೇಶೀಯರಾಗಂಗಳಂ ಸ್ವರಭಾಷಾವಿದರಿಂದಮಾದ ಮತ್ತೆ ಪೆಱವು ರಾಗಂಗಳಂ ವಲಿ ಹವಣಿ ಠಾಯಂಗಳಿಂದಾಳಾಪನಂಗೆಯ್ದು

ಚಂಪಕಮಾಲೆ

ಮದನನ ಬಿಲ್ಲ ಜೇವಡೆಯ ಮೆಲ್ಲುಲಿಯೆಂಬಿನಮಿಂಬುವೆತ್ತ ರಾ
ಗದ ಬಹುಭೇದಮಂ ನೆಱೆಯೆ ತೋಱುತಮಂ ತಲೆದೂಗೆ ತಜ್ಜ್ಞರಾ
ಪದದೊಳೆ ಮೆಚ್ಚಿ ತಾಳಲಯಮಾರ್ಗವಶಾನುಗತಂ ದಲಾಗಿ ಪಾ
ಡಿದರನುರಾಗದಿಂ ಜಿನಗುಣಸ್ತವನಾಂಕಿತಪಸ್ತುಗೀತಮಂ ೨

ಮತ್ತೇಭವಿಕ್ರೀಡಿತ

ನೂನಮೊಲ್ದು ಶ್ರವಣಾವನೀವಳಯದೊಳ್ ಕೌತೂಹಳಂ ಕೂಡೆ ತೋ
ರ್ಪಿನಗಂ ಕಾಳ್ಪುರಮಾಗೆ ರಾಗರಸಮಾಶಾದೇಶದಲ್ಲಲ್ಲಿಯುಂ
ಘನರೋಮಾಂಚಚಯಾಂಕುರಂ ಬಳೆದು ಮೆಯ್ದೋರ್ಪನ್ನಮಾ ಕಿನ್ನರೀ
ಜನಮೆಂಬಂಬುದಮುಂದದೇಂ ಕಱೆದುದೋ ಗೀತಾಮೃತಾಸಾರಮಂ ೩

ವಚನ : ಇಂತು ಸಮಂತು ತೆಕ್ಕನೆ ತೀವಿ ಕಿಕ್ಕಿಱಿಗಿಱಿದುಂ ಕುಳ್ಳಿರ್ದು ಕೇಳ್ವ ಚತುರ್ನಿಕಾಯದೇವರ್ಕಳ ಕಿವಿಯುಂ ಕೆಯ್ಮಿಕ್ಕು ಜಕ್ಕುಲಿಸುತ್ತುಮಿರ್ದು ಸೊಕ್ಕಿಸಳು ರ್ಕೆಯುಂ ಮನಕ್ಕೆ ಪುಟ್ಟಿಸುವ ನವರಸಂಗಳಂ ಮುಕ್ಕುಳಿಸಿದ ತಾರ ಮಂದ್ರ ಮಧ್ಯಮ ಭೇದ ಮೇದುರನಾದ ಸಮಾಹ್ಲಾದನೀಯ ವಿವಿಧ ಮಧುರಗೀತಜಾತಿಗಳಂ ಪಾಡುವೆಡೆಯೊಳ್

ಚಂಪಕಮಾಲೆ

ಸುರಪತಿ ಮೆಚ್ಚಿ ಮೆಚ್ಚಿ ತಲೆದೂಗಲೊಡಂ ಮಣಿಮೌಳಿ ಕೂಡೆ ಜೋ
ಲ್ದಿರೆ ಸಸಿನಕ್ಕೆ ತಪ್ಪ ಪದದಲ್ಲಿ ವಿಕೀಲಿತ ಕಿಂಕಿಣೀ ಜಗ್ಗು
ಣ್ಕಾರಣದೆ ಕೇಳಬಾರದಿರೆ ಬಾಗಿದ ಕಂಠದಿನೊಪ್ಪುತಿರ್ದನಾ
ವರಿಸಿಯೆ ನಿಂದ ರಾಗರಸಭಾರದಿನೋಸರಮಾದುದೆಂಬಿದಂ ೪

ವಚನ : ಈತೆಱದಿಂ ಕಿನ್ನರರೆಲ್ಲಂ ಚೆನ್ನಾಗಿ ಪಾಡುತ್ತುಮಿರೆ

ಕಂದ : ಸಕಳಾಪವಾದ ಪರಿವಾ
ರಕರಂ ನೆಱೆಕೂಡಿಕೊಂಡು ವಾದಕರೆಲ್ಲಂ
ಪ್ರಕಟವಾದ್ಯಂಗಳಂ ಕೌ
ತುಕದಿಂದಂ ಬಾಜಿಸಲ್ಕೆ ತೊಡಗಿದರಾಗಳ್ ೫

ಮಹಾಸ್ರಗ್ಧರೆ

ಪಿರಿದುಂ ನಾದಾಪ್ರಕಾರಾತಿಶಯಿತ ಗತಿಭೇದಂಗಳುಂ ಮಾಡಲಂದ
ಚ್ಚರಿಯುಂ ಮಾರ್ಗಪ್ರಚಾರಂ ಬಗೆಗೆ ಬಯಕೆಯುಂ ಪುಟ್ಟಿಸಲ್ ಚಾರುಚಾರೀ
ಚರಣಂ ವೈಚಿತ್ರ್ಯಮಂ ಸಂಗಡಿಸಿರೆ ಸುಚಸುತ್ಕಾರಚಾತುರ್ಯಮಪ್ಪಂ
ತಿರೆ ಸದ್ವಾದ್ಯಂಗಳಂ ವಾದಕರತಿಮುದದಿಂ ಬಾಜಿಸುತ್ತಿರ್ದರೆಲ್ಲಂ ೬

*
ಜಗುಝೇಂ ಝೋ ಝಂ ಮೃಣಂ ಝಂ ಝುಮೃಣ ಮೃಣಮಣಂ ಝಂ ಮೃಣಂ ಝಂ ಮೃಣಂಣಂ
ತಗಿತತ್ಥೋ ಥಗ್ಗಿಣತ್ಥೋ ಥಗಿಣ ಗಿಣಗಿಣಂ ಥಗ್ಗಿಣಂ ಥಗ್ಗಿಣತ್ಥೋ
ಧಿಗಿ ಧಿಂ ಧಿಂ ಧಿಂ ಧಿಮಿಕ್ಕಂ ಧಿಮಿ ಧಿಮಿ ಧಿಮಿಕುಂ ಧಿಂಧಿಮಿಕ್ಕಂ ಧಿಮಿಕ್ಕಿಂ
ದೊಗೆವನ್ನಂ ನಾಟ್ಯರಂಗಸ್ಥಳಿಯೊಳಮರಿಯರ್ ಬಾಜಿಸುತ್ತಿರ್ದರಾದಂ ೭

ವಚನ : ಇಂತು ವಾದ್ಯವಿದ್ಯಾವದ್ಯೋತನವಿದುಷಿಯರಪ್ಪ ವಿಬುಧವಿಳಾಸಿನಿಯರನೇಕಚ್ಛಂದದಿಂಗಭಿನವವಾದ್ಯಂಗಳಂ ಹೃದ್ಯಮಾಗಿ ಬಾಜಿಸುತ್ತುಮಿರೆ

---

* ಇಂದ್ರನಾಟ್ಯಮನಾಡುವ ಠಾವು (ಗಚ)

ಮತ್ತೇಭವಿಕ್ರೀಡಿತ

ಪವನಾಖಂಡಮಯೂಖಮಂಡಲ ವಿಲಸನ್ಮಾಣಿಕ್ಯಸನ್ಮಂಡಸೋ
ತ್ಕರದಾಡಂಬರ ಶೋಭೆಯಿಂದೆ ಪಿರಿದುಂ ಕಣ್ಗೊಂಡು ಸಂತೋಷದೊಂ
ದಿರಲಾಖಂಡಳನಂದು ತಾಂಡವವಿಡಂಬಪ್ರೌಢಿಯಿಂ ತೋಳಲೆಂ
ದಿರದೆಲ್ಲಂ ಸಭೆಗೆಲ್ವಿನಂ ಬಿಡದೆ ರೋಮಾಂಚಾಂಕುರಶ್ರೇಣಿಯಂ ೮

ವಚನ: ಮತ್ತಂ

ಕಂದ: ಉಟ್ಟ ದೇವಾಂಗವಂ ನೆಱೆ
ತೊಟ್ಟೊಳ್ಮುತ್ತಿನ ನವೀನಕಂಚುಕವಂ ಸಮ
ಕಟ್ಟಿ ನರ್ತನನಿಮಿತ್ತಂ
ಕಟ್ಟಾಯತನಾದನಂದು ಸೌಧರ್ಮೇಂದ್ರಂ ೯

ವಚನ: ಇಂತು ತತ್ಕಾಲಯೋಗ್ಯ ನಾನಾವಿಧಶೃಂಗಾರಭಂಗಿಯಿಂ ಬೆಡಂಗುವಡೆದ ಸುರಲೋಕದೊಡೆಯಂ ನಾಂದೀಪೂಜಾವಿಧಾನಪೂರ್ವಕಂ ನಾಟ್ಯರಂಗದ ಮುಂದೆ ನಿಂದು ಕೈಗಳಂ ಮುಗಿದು ನಿರವದ್ಯಹೃದ್ಯತರ ಮಂಗಳಪಠನಾನಂತರಂ

ಕಂದ: ಪೂರ್ವರಂಗಪ್ರಸಂಗದೊ
ಳುರ್ವಿಂದಂ ಕೂಡೆ ಚೆಲ್ಲಿ ಪುಷ್ಪಾಂಜಳಿಯಂ
ಸರ್ವಜ್ಞಂಗೆಱಗಿ ಮುದಂ
ಪರ್ವಿನ್ನಂ ನಡೆದು ಬಂದು ರಂಗಂಬೊಕ್ಕಂ ೧೦

ವಚನ: ಅಂತನೇಕವಿಧರಚನಾಸಮುತ್ತುಂಗ ನಾಟ್ಯರಂಗಮಧ್ಯಸ್ಥಳಮನಲಂಕರಿಸಿ ನಿಂದಿರ್ಪುದುಂ

ಚಂಪಕಮಾಲೆ

ಮಣಿಮಯನಾಟ್ಯರಂಗವಳಯಾಂತರದೊಳ್ ಪ್ರತಿಬಿಂಬರೂಪದಿಂ
ಪೆಣಿಸಿ ಸಹಸ್ರಲೋಚನನುಮೊರ್ವೆಯೆ ಪಜ್ಜಳಿಸಲ್ಕೆ ಚೆಲ್ವನಾ
ಕ್ಷಣದೊಳೆ ತಾಳ್ದಿದತ್ತು ವಿಕಸತ್ಕಮಳಂಗಳೆಸಳ್ಗಳಿಂ ಮನಂ
ದಣಿವಿನಮಲ್ಲಿ ಮತ್ತೆ ಕುಸುಮಾಂಜಳಿಯಂ ಮಿಗೆ ಚೆಲ್ಲಿದಂದದಿಂ ೧೧

ಕಂದ: ವರವೈಶಾಖಸ್ಥಾನದೊ
ಳುರುಮುದದಿಂ ನಿಂದು ಭರತಶಾಸ್ತ್ರಜ್ಞಂ ತ
ನ್ನೆರಡುಂ ಕೆಯ್ಯತಳಂಗಳ
ನೆರಡುಂ ಕಟಿತಟದೊಳಿಟ್ಟು ತೋಱಿಕೆವೆತ್ತಂ ೧೨

ವಚನ: ಅಂತು ನಿಂದ ನಿಲವೆ ವೈಕುರ್ವಣಾವಿರ್ಭೂತಮುಮೆನಿಸಿ

ಚಂಪಕಮಾಲೆ

ಕಡುತುಱುಗಿರ್ದ ತೋಳ್ಗಳನಡೆಯ್ದೆ ವಿಗುರ್ವಿಸಿ ಭಾವುಭಾವೆನಲ್
ಬಿಡದಱುವತ್ತುನಾಲ್ಕು ವರಹಸ್ತತಳಾಭಿನಯಮನಂಗಳೆಲ್ಲಮಂ
ತಡವಿನಿಸಿಲ್ಲದೊರ್ವೊದಲೊಳಂ ನೆಱತೋಱುಸುತುಂ ಸುರಾಧಿಪಂ
ಸಡಗರದಿಂದೆ ನರ್ತಿಸುತುಮಿರ್ದನತೀವಕುತೂಹಳಂಗಳಿಂ ೧೩

ಮಹಾಸ್ರಗ್ಧರೆ

ಗದಗಂಪಂಗೊಂಡುದಯ್ದುಂತೆಱದ ಚರಣವಾರಿಪ್ರಯೋಗಂಗಳಿಂ ಮಾ
ಣದೆ ಭೂಮಿಮಾಮಂಡಳಂ ದಿಕ್ಕರಿಗಳಳುಱತ ಬಾಯ್ಬಿಟ್ಟವೀರ್ವೈದು ಸಂಸ್ಥಾ
ನದ ಬಾಹುಕ್ಷೇಪದಿಂದಂ ನವತಿನಯನಭೇದಂಗಳಿಂ ರಂಜಿಸುತ್ತಿ
ರ್ದುದು ಸರ್ವಾಶಾಪ್ರದೇಶಂ ಸುರಪತಿನಟನಂ ವಿಸ್ಮಯಂಬೆತ್ತುದಾದಂ ೧೪

ಉತ್ಪಲಮಾಲೆ

ಆಗಸದಲ್ಲಿಯುಂ ಧರಣಿಮಂಡಳದಲ್ಲಿಯುಮೆಂಟು ದಿಕ್ತಟೀ
ಭಾಗದೊಳೆಲ್ಲಮೊರ್ವೊದಲೊಳಾ ದಿವಿಜಾಧಿಪನೊಂದುರೂಪು ನೂ
ಱಾಗಿರೆ ವಿಕ್ರಿಯಾವಿಭವದಿಂದೆ ವಿಗುರ್ವಿಸಿ ಮತ್ತೆಮುತ್ತೆಯುಂ
ರಾಗರಸಂ ಪೊನಲ್ವೊನಲನಟ್ಟೆ ತರಂಗಿತಮಾಗಲಾಡಿದಂ ೧೫

ಮಹಾಸ್ರಗ್ಧರೆ

ವರಭೂಷಾವೇಷಭಾಸ್ವತ್ಕಿರಣಗಣವಿಶೇಷಂಗಳಿಂ ದಿಗ್ವಿಭಾಗಂ
ಪರಭಾಗಂಬೆತ್ತುಮೊಪ್ಪುತ್ತಿರೆ ಸುರಸಭೆಗಾಶ್ಚರ್ಯಮಂ ಪುಟ್ಟಿಸುತ್ತುಂ
ತಿರುಪಂ ಕೊಟ್ಟಂ ಸಮಸ್ತಾಮರಸಮಿತಿಯ ನೇತ್ರಂಗಳುಂ ಚಿತ್ತಮುಂ ಸ
ತ್ವರದಿಂದಾ ಪೊತ್ತಿನೊಳ್ ತನ್ನೊಡನೆ ತಿರುಗೆ ದೇವೇಂದ್ರನಾಡುತ್ತುಮಿರ್ದಂ ೧೬

ವಚನ: ಇಂತತೀವರೂಥಿವಡೆದ ತಾಂಡವಾಡಂಬರಕ್ರೀಡೆಯೊಳಾಖಂಡಳಂ ಪ್ರೌಢಿವೆತ್ತು ಶೃಂಗಾರಹಾಸ್ಯಕರುಣಭಯಾನಕವೀರರೌದ್ರಬೀಭತ್ಸಾದ್ಭುತಶಾಂತಂಗಳೆಂಬ ನವರಸಂಗಳಿಂ ಪರಿಪೂರ್ಣಮಾದ ವಿಭಾವಾನುಭಾವ ಸಂಚಾರಿವ್ಯಭಿಚಾರಿಸ್ಥಾಯಿಭಾವಂಗಳೆಂಬ ಪಂಚಭಾವಂಗಳಿಂದಂಚಿತಮುಮೆನಿಪ ತತ್ತದ್ಯೋಗ್ಯಸ್ಥಾನಕಂಗಳೊಳೆಲ್ಲಂ ಪೊಸಪೊಸತಾದ ಕಾಳಾಸವಿಳಾಸದಿಂದೆಸೆವುತ್ತುಮಿರ್ದ ಭರತಾಗಮಕ್ಕೆ ಟೀಕಂಬರೆದೋದುವಂತೆ ಪದಪದದುಗ್ಘಡಣೆಯಿಂದಗ್ಗಳಮಾಗಿ ರಂಜಿಸುವ ವಿಕಟನಾಟಕಮಂ ಭರತಶಾಸ್ತ್ರಸಮಾಲಕ್ಷಿತ ನಿರತಿಶಯಲಕ್ಷಣಕ್ಕಿದೇ ಪರಮಸೀಮಾಲಕ್ಷ್ಯಮೆಂಬಂತೆಡ್ಡಮಾಗಿ ಜಿನಪತಿಯ ಮುಂದೊಡ್ಡಯಿಸಿದಾಗಳ್

ಚಂಪಕಮಾಲೆ

ಅಲಗುಗಳೊಪ್ಪಿ ರಂಗನಲನಕ್ಕನುಕೂಲತೆವೆತ್ತ ದೋರ್ಲತಾ
ವಲನದ ವೇಗದಲ್ಲಿ ಗತಿಭಾವರಸಾಭಿನಯಂಗಳೋಜೆಯಿಂ
ಗೊಲೆಗೊಳಿಸಲ್ ಕರಂ ಲಯಮನಶಾನುಗಮಾಗಿರೆ ದೇವಕಾಂತೆಯರ್
ನಲಿದೊಡನಾಡುತಿರ್ದರಮರೇಂದ್ರನ ನೃತ್ತಮನೊಪ್ಪನಪ್ಪಿಸಂ ೧೭

ಕಂದ: ಒಡೆಯಂ ಕುಡೆ ತಿರುಪಂ ತ
ನ್ನೊಡನಮರೀಜನಮುಮಂದು ಕೊಟ್ಟುದು ತಿರುಪಂ
ಕುಡೆ ದಂಡಭ್ರಮರಿಯನಾ
ಗಡೆ ದಂಡಭ್ರಮರಿಯಂ ನಿಮಿರ್ಚಿತ್ತದಱವಂ ೧೮

ಮತ್ತೇಭವಿಕ್ರೀಡಿತ

ಸವಿಯಂ ಸಾಲಿಡುತಿರ್ಪ ಗೀತರಸಮಾ ಗೀತಕ್ಕೆ ನೇರ್ಪಟ್ಟು ಪೊ
ಣ್ಮುವ ವಾದ್ಯಂ ಮೃದುಗೀತವಾದ್ಯಮೆರಡಕ್ಕಿಂಬಾದ ನೃತ್ಯಂ ಮಹಾ
ದಿವಿಜಾಸ್ಥಾನಜನಕ್ಕೆ ಮಾಡೆ ಬಿಡಪತ್ಯಾನಂದಮುಂ ನಾಡೆಯುಂ
ದಿವಿಜಾಧೀಶನ ಮುಂದದೇನೆಸೆದುದೋ ಸಂಗೀತಕಂ ಕೌತುಕಂ ೧೯

ಕಂದ: ದೇವೇಂದ್ರಂ ಶಾಶ್ವತಸುಖ
ಸೇವನೆಯಂ ಬಯಸಿ ಭಕ್ತಿಯಿಂದಾಡಿದನಾ
ದೇವನ ಮುಂದೆಂದೊಡಮಿ
ನ್ನೇವೇಳ್ವುದೊ ನೃತ್ಯಫಳಮುಮಂ ನೃತ್ಯಮುಮಂ ೨೦

ವಚನ: ಇಂತು ಪುರಂದರನಾನಂದನರ್ತನಮಂ ನಿರ್ವರ್ತಿಸಿ ಜಯಜಯ ಘೋಷ ಣಂಗೆಯ್ದು ತದನಂತರಮಾ ಧರ್ಮಜಿನನಾಥನ ಮುಂದೆ ಸಂಭ್ರಮದಿಂದಿಳಾಮೂಲಮಿಳ ನ್ಮೌಳಿಯಾಗಿ ಮತ್ತಂ ದಿವಿಜಸಭಾಮಧ್ಯಸ್ಥಿತಶುಭಾಸನಸಮಾಸೀನನಾಗಿರ್ಪುದುಂ

ಚಂಪಕಮಾಲೆ

ದಿವಿಜರುಘೋಷಯುಘೋನಿನದಮುಂ ಸುರಪಾಠಕಪದ್ಯನಾದಮುಂ
ದಿವಿಜಕರಾಹತಪ್ರಬಳವಾದ್ಯನಿನಾದಮುಮಷ್ಟದಿಕ್ತಟೀ
ವಿವರದೊಳೆಯ್ದೆ ತೀವೆ ದಿವಿಜಾಂಗನೆಯರ್ ನೆರೆದೆಲ್ಲರುಂ ಸಮು
ತ್ಸವದೊಳೆ ಮಂಗಳಾರತಿಗಳಂ ಜಿನಪಂಗಿರದೆತ್ತಿದರ್ ಕರಂ ೨೧

ವಚನ: ಆಗಳಾ ಶಚೀಮಹಾದೇವಿ ದೇವೀಜನಂಬೆರಸು ಕಳಧೌತಭಾಜನ ಸಮಾಕಳಿತ ನೀರಾಜನದೀಪಕಳಿಕಾಕಳಾಪಂಗಳ ಬೆಳಗಿನ ಬಳಗದಿಂ ದ್ವಿಗುಣಿಸಿದ ಕಮ ನೀಯಕಾಯಕಾಂತಿಮಯ ಸಮ್ಮೋಹರಸತರಂಗಿಣಿಯ ತೆರೆಮಾಲೆಗಳೆನಿಪ ತೋಳ್ಗಳಿಂ

ವಚನ: ಅಂತು ನಿಂದ ನಿಲವೆ ವೈಕುರ್ವಣಾವಿರ್ಭೂತಮುಮೆನಿಸಿ

ಚಂಪಕಮಾಲೆ

ಕಡುತುಱುಗಿರ್ದ ತೋಳ್ಗಳನಪೆಯ್ದೆ ವಿಗುರ್ವಿಸಿ ಭಾಪುಭಾಪೆನಲ್
ಬಿಡದಱವತ್ತುನಾಲ್ಕು ವರಹಸ್ತತಳಾಭಿನಯಾನಂಗಳೆಲ್ಲಮುಂ
ತಡವಿನಿಸಿಲ್ಲದೊರ್ಮೊದಲೊಳಂ ನೆಱತೋಱುತುಂ ಸುರಾಧಿಪಂ
ಸಡಗರದಿಂದೆ ನರ್ತಿಸುತುಮಿರ್ದನತೀವಕುತೂಹಳಂಗಳಿಂ ೧೩

ಮಹಾಸ್ರಗ್ಧರೆ

ಗದಗಂಪಂಗೊಂಡುದಯ್ದುಂತೆಱದ ಚರಣವಾರಿಪ್ರಯೋಗಂಗಳಿಂ ಮಾ
ಣದೆ ಭೂಮಿಮಾಮಂಡಳಂ ದಿಕ್ಕರಿಗಳಳುಱೆ ಬಾಯ್ಬಿಟ್ಟವೀರ್ಬ್ಬಿದು ಸಂಸ್ಥಾ
ನದ ಬಾಹುಕ್ಷೇಪದಿಂದಂ ನವತಿನಯುಸಭೇದಂಗಳಿಂ ರಂಜಿಸುತ್ತಿ
ರ್ದುದು ಸರ್ವಾಶಾಪ್ರದೇಶಂ ಸುರಪತಿನಟನಂ ವಿಸ್ಮಯಂಬೆತ್ತುದಾದಂ ೧೪

ಉತ್ಪಲಮಾಲೆ

ಆಗಸದಲ್ಲಿಯುಂ ಧರಣಿಮಂಡಳದಲ್ಲಿಯುಮೆಂಟು ದಿಕ್ತಟೀ
ಭಾಗದೊಳೆಲ್ಲಮೊರ್ಮೊದಲೊಳಾ ದಿವಿಜಾಧಿಪನೊಂದುರೂಪು ನೂ
ಱಾಗಿರೆ ವಿಕ್ರಿಯಾವಿಭವದಿಂದೆ ವಿಗುರ್ವಿಸಿ ಮತ್ತೆಮುತ್ತೆಯುಂ
ರಾಗರಸಂ ಪೊನಲ್ವೊನಲನಟ್ಟೆ ತರಂಗಿತಮಾಗಲಾಡಿದಂ ೧೫

ಮಹಾಸ್ರಗ್ಧರೆ

ವರಭೂಷಾವೇಷಭಾಸ್ವತ್ಕಿರಣಗಣವಿಶೇಷಂಗಳಿಂ ದಿಗ್ವಿಭಾಗಂ
ಪರಭಾಗಂಬೆತ್ತುಮೊಪ್ಪುತ್ತಿರೆ ಸುರಸಭೆಗಾಶ್ಚರ್ಯಮಂ ಪುಟ್ಟಿಸುತ್ತುಂ
ತಿರುಪಂ ಕೊಟ್ಟಂ ಸಮಸ್ತಾಮರಸಮಿತಿಯ ನೇತ್ರಂಗಳುಂ ಚಿತ್ತಮುಂ ಸ
ತ್ವರದಿಂದಾ ಪೊತ್ತಿನೊಳ್ ತನ್ನೊಡನೆ ತಿರುಗೆ ದೇವೇಂದ್ರನಾಡುತ್ತುಮಿರ್ದಂ ೧೬

ವಚನ: ಇಂತತೀವರೂಢಿವಡೆದ ತಾಂಡವಾಡಂಬರಕ್ರೀಡೆಯೊಳಾಖಂಡಳಂ ಪ್ರೌಢಿವೆತ್ತು ಶೃಂಗಾರಹಾಸ್ಯಕರುಣಭಯಾನಕವೀರರೌದ್ರಭೀಭತ್ಸಾದ್ಭುತಶಾಂತಂಗಳೆಂಬ ನವರಸಂಗಳಿಂ ಪರಿಪೂರ್ಣಮಾದ ವಿಭಾವಾನುಭಾವ ಸಂಚಾರಿವ್ಯಭಿಚಾರಿಸ್ಥಾಯಿಭಾವಂಗಳೆಂಬ ಪಂಚಭಾವಂಗಳಿಂದಂಚಿತಮುಮೆನಿಪ ತತ್ತದ್ಯೋಗ್ಯಸ್ಥಾನಕಂಗಳೊಳೆಲ್ಲಂ ಪೊಸಪೊಸತಾದ ಕಾಳಾಸವಿಳಾಸದಿಂದೆಸೆವುತ್ತುಮಿರ್ದ ಭರತಾಗಮಕ್ಕೆ ಟೀಕಂಬರೆದೋದುವಂತೆ ಪದಪದದುಗ್ಗಡಣೆಯಿಂದಗ್ಗಳಮಾಗಿ ರಂಜಿಸುವ ವಿಕಟನಾಟಕಮಂ ಭರತಶಾಸ್ತ್ರಸಮಾಲಕ್ಷಿತ ನಿರತಿಶಯಲಕ್ಷಣಕ್ಕಿದೇ ಪರಮಸೀಮಾಲಕ್ಷ್ಯಮೆಂಬಂತೆಡ್ಡಮಾಗಿ ಜಿನಪತಿಯ ಮುಂದೊಡ್ಡಯಿಸಿದಾಗಳ್

ಚಂಪಕಮಾಲೆ

ಅಲಗುಗಳೊಪ್ಪಿ ರಂಗವಲನಕ್ಕನುಕೂಲತೆವೆತ್ತ ದೋರ್ಲತಾ
ವಲನದ ವೇಗದಲ್ಲಿ ಗತಿಭಾವರಸಾಭಿನಯಂಗಳೋಜೆಯಂ
ಗೊಲೆಗೊಳಿಸಲ್ ಕರಂ ಲಯವಶಾನುಗಮಾಗಿರೆ ದೇವಕಾಂತೆಯರ್
ನಲಿದೊಡನಾಡುತಿರ್ದರಮರೇಂದ್ರನ ನೃತ್ತಲುಮೊಪ್ಪನುಪ್ಪಿನಂ ೧೭

ಕಂದ: ಒಡೆಯಂ ಕುಡೆ ತಿರುಪಂ ತ
ನ್ನೊಡನಮರೀಜನಮುಮಂದು ಕೊಟ್ಟುದು ತಿರುಪಂ
ಕುಡೆ ದಂಡಭ್ರಮರಿಯನಾ
ಗಡೆ ದಂಡಭ್ರಮರಿಯಂ ನಿಮಿರ್ಚಿತ್ತದಱವುಂ ೧೮

ಮತ್ತೇಭವಿಕ್ರೀಡಿತ

ಸವಿಯಂ ಸಾಲಿಡುತಿರ್ಪ ಗೀತರಸಮಾ ಗೀತಕ್ಕೆ ನೇರ್ಪಟ್ಟು ಪೊ
ಣ್ಮುವ ವಾದ್ಯಂ ಮೃದುಗೀತವಾದ್ಯಮೆರಡಕ್ಕಿಂಬಾದ ನೃತ್ಯಂ ಮಹಾ
ದಿವಿಜಾಸ್ಥಾನಜನಕ್ಕೆ ಮಾಡೆ ಬಿಡದತ್ಯಾನಂದಮುಂ ನಾಡೆಯುಂ
ದಿವಿಜಾಧೀಶನ ಮುಂದದೇನೆಸೆದುದೋ ಸಂಗೀತಕಂ ಕೌತುಕಂ ೧೯

ಕಂದ: ದೇವೇಂದ್ರಂ ಶಾಶ್ವತಸುಖ
ಸೇವನೆಯಂ ಬಯಸಿ ಭಕ್ತಿಯಿಂದಾಡಿದನಾ
ದೇವನ ಮುಂದೆಂದೊಡಮಿ
ನ್ನೇವೇಳ್ವುದೊ ನೃತ್ಯಫಳಮುಮಂ ನೃತ್ಯಮುಮಂ ೨೦

ವಚನ: ಇಂತು ಪುರಂದರನಾನಂದನರ್ತನಮಂ ನಿರ್ವರ್ತಿಸಿ ಜಯಜಯ ಘೋಷಣಂಗೆಯ್ದು ತದನಂತರಮಾ ಧರ್ಮಜಿನನಾಥನ ಮುಂದೆ ಸಂಭ್ರಮದಿಂದಿಳಾಮೂಲಮಿಳನ್ಮೌಳಿಯಾಗಿ ಮತ್ತಂ ದಿವಿಜಸಭಾಮಧ್ಯಸ್ಥಿತಶುಭಾಸನಸಮಾಸೀನನಾಗಿರ್ಪುದುಂ

ಚಂಪಕಮಾಲೆ

ದಿವಿಜರುಘೋಷಯುಘೋನಿನದಮಂ ಸುರಪಾಠಕಪದ್ಯನಾದಮಂ
ದಿವಿಜಕರಾಹತಪ್ರಬಳವಾದ್ಯನಿನಾದಮುಮಷ್ಟದಿಕ್ತಟೀ
ವಿವರದೊಳೆಯ್ದೆ ತೀವೆ ದಿವಿಜಾಂಗನೆಯರ್ ನೆರೆದೆಲ್ಲರುಂ ಸಮು
ತ್ಸವದೊಳೆ ಮಂಗಳಾರತಿಗಳಂ ಜಿನಪಂಗಿರದೆತ್ತಿದರ್ ಕರಂ ೨೧

ವಚನ: ಆಗಳಾ ಶಚೀಮಹಾದೇವಿ ದೇವೀಜನಂಬೆರಸು ಕಳಧೌತಭಾಜನಸಮಾಕಳಿತ ನೀರಾಜನದೀಪಕಳಿಕಾಕಳಾಪಂಗಳ ಬೆಳಗಿನ ಬಳಗದಿಂ ದ್ವಿಗುಣಿಸಿದ ಕಮನೀಯಕಾಯಕಾಂತಿಮಯ ಸಮ್ಮೋಹರಸತರಂಗಿಣಿಯ ತೆರೆಮಾಲೆಗಳೆನಿಪ ತೋಳ್ಗಳಿಂ

ಕೇವಳಮಂಗಳಾರ್ಥಮಾಗಿ ಮಂಗಳಾರತಿಗಳಂ ನಿವಾಳಿಸಿಯಷ್ಟವಿಧಾರ್ಚನೆಗಳಿಂದರ್ಚಿಸಿ ಪೊಡೆವಟ್ಟು

ಕಂದ: ಕಣ್ಣೆ ಮೆಯ್ಯಿಕ್ಕುವರೆಲ್ಲಂ
ಕಣ್ಣೆ ಮೆಯಿಕ್ಕಲ್ಕೆ ಮುಜಿತದರೆಮೆಯ್ಯಿಕ್ಕದರುಂ
ಕಣ್ಣೆ ಮೆಯಿಕ್ಕದುದೆಮಗಂ
ತಿಣ್ಣಂ ಫಳಮಾದುದೆಂದು ನೋಡುತ್ತಿರ್ದರ್ ೨೨

ವಚನ: ಬಳಿಯಮಿಂತು ಕಯ್ಗೆಯ್ದು ಧರ್ಮನಾಥಕುಮಾರನಂ ನಿಜಪುರಕ್ಕೆಯ್ದಿಸುವ ಬಗೆ ಬಗೆಯೊಳೊಗೆದು ಮಘವಂ ಪ್ರಯಾಣಭೇರಿಯುಂ ಪೊಯ್ಯಲ್ವೇಳ್ವುದುಂ

ಕಂದ: ಗಮನಸಂಸೂಚಿಭೇರೀ
ಸಮಿತಿಗಳೊರ್ಮೊದಲೆ ನೋಳಗೆ ದೆಸೆಯೆಲ್ಲಂ ಶ
ಬ್ದಮಯಮಾಗಿರ್ದುದದ್ವೈ
ತಮನಾಶ್ರಯಿಸಿದತ್ತದತ್ತದೆಂಬೀ ತೆಜದಿಂ ೨೩

ವಚನ: ಅಂತು ಪರಿಪೂರ್ಣಿತಭೇರೀರವಾಕರ್ಣನದಿಂದವಗತನಿರ್ಯಾಣಕ್ಷಣರಾಗಿ ಸಕಳಸುರಾಸುರ ನಿಕರಮೆಲ್ಲಂ ನೆರೆದುಬರಲೊಡಂ ಪುರುಹೂತನೈರಾವತಮಹಾಮಾತಂಗ ಸಮಾರೂಢನಾಗೆ

ಮಹಾಸ್ರಗ್ಧರೆ

ನಲವಿಂದಿಂದ್ರಾಣಿ ತನ್ನ ಸ್ತನತಟಯುಗಮಂ ಮಾಡಿ ಮೆಯ್ಗೊತ್ತಿನೊಳ್ ಸೋ
ಗಿಲೊಳಂ ತದ್ವಾಳಸಂ ಮೆಲ್ಲನೆ ದಿಕರರಾಧಾರದಿಂ ನೋಡಿ ರಾಗಂ
ನೆಲೆವೆರ್ಚಲ್ ಕೂಡೆ ನಾನಾಪಟುಪಟಹರವಂ ಪೊಣ್ಮೆ ಬಂದೇಜಿದಳ್ ಮಂ
ಗಳ ದೇವೇಂದ್ರೇಭಮಂ ಕೋಮಳಪುಳಕಕುಳಂ ಬೇಜಿತ ಬಂದೇಜಿ ಮೆಯ್ಯಂ ೨೪

ವಚನ: ಇಂತು ಬಂದೇಜಿ ಶಚಿ ತನ್ನಯ ವಲ್ಲಭನ ತಲ್ಲಜಪಾಣಿಪಲ್ಲವಕ್ಕೆ ಮೆಲ್ಲನೆ ಜಿನಶಿಶುವಂ ನೀಡುವುದುಮಾಗಳಾ ಬಳರಿಪು ಮರಿತರಿಪುವಂ ನಿಜಕರತಳಪುಟದೊಳ್ ಬಿಜಯಂಗೆಯ್ಸಿಕೊಂಡು ಸಂಭ್ರಮಲೋಳಾಕ್ಷಿಳಂ ಕೆಯ್ಮಿಕ್ಕು ಪೆರ್ಚುತ್ತುಮಿರೆ

ಉತ್ಪಲಮಾಲೆ

ಇಕ್ಕುವ ಚಾಮರಾವಳಿಗಳಿಂ ಪೊಸಮುತ್ತಿನ ಲಂಬನಂಗಳಿಂ
ಸಿಕ್ಕಿದ ಜೆಲ್ವ ಸತ್ತಿಗೆಗಳಿಂದಮಗುರ್ವಿನ ಕೊರ್ವು ಪರ್ವಿ ಕೆ
ಯ್ಮಿಕ್ಕಿರೆ ದೇವಸೈನ್ಯಮೆಸೆದಂಕೆಲದಲ್ಲಿ ವಿಘೂರ್ಣಿಸುತ್ತಿರಲ್
ಬೆಕ್ಕಸೆ ದೇವರಾಜನಿಳಿತಂದನಮುತ್ತಮಮಂದರಾಗ್ರದಿಂ ೨೫

ವಚನ: ಆಗಳ್

ಚಂಪಕಮಾಲೆ

ಉಲಿವ ಸಮಸ್ತಸೈನ್ಯಶತಮಂ ಸುರತಾಡಿತವಾದ್ಯಕೋಟಿಯುಂ
ತೊಲಗಲೊಡಂ ಮಹಾಕಳಕಳಂ ಪೆಱಸಿಂಗಿದುದಾಕ್ಷಣಂ ಸುರಾ
ಚಳಮದು ನೋಡೆ ಬಾಜಿಸುತುಮೊಲ್ಲದೆ ಮಾಣ್ದ ಸುವರ್ಣಘಂಟೆಯೆಂ
ಬಳವಿಯ ಶಂಕೆಯಂ ಬಿಡದೆ ಪುಟ್ಟಿಸುತಿರ್ದುದು ಭಿನ್ನನಾಗಿ ತಾಂ ೨೬

ವಚನ: ಅನಂತರಂ

ಮಹಾಸ್ರಗ್ಧರೆ

ನೆಲನೆಲ್ಲಂ ಕೊಳ್ಗಿಸರ್ ಮಾಣದೆ ಮಸಗುವಿನಂ ದಂತಿದಾನಂಗಳಿಂ ದಿ
ಕ್ಕುಲಮೆಲ್ಲಂ ಕೂಡೆ ಚಿತ್ರಂ ಮಿಗೆ ಮಸಗುವಿನಂ ರತ್ನಭೂಷಾಂಶುವಿಂದಂ
ಸಲೆರೋದಂ ಕಾಳ್ಪುರಂ ಬೇಗದೆ ಮಸಗುವಿನಂ ಗೀತಪೀಯೂಷದಿಂದಂ
ಸಲವಿಂದಂದೆಯ್ದಿ ಬಂದಂ ಜಿನನ ಪುರಿಗೆ ದೇವೇಂದ್ರನಾನಂದದಿಂದಂ ೨೭

ವಚನ: ಅಂತಳಂಕಾರಶಾಸ್ತ್ರದಂತೆ ನಾನಾಪ್ರಕಾರಚಿತ್ರಾಳಂಕಾರಪ್ರಕರದಿಂದ ಳಂಕೃತಮಾದ ಧರ್ಮಜಿನರಾಜನ ರಾಜಧಾನೀರುತ್ಸೇತರೋತ್ಸಾಹ ವಿರಾಜಮಾನಮಪ್ಪುದ ರತ್ನಪುರಮಂ ದಿವಿಜರಾಜಂ ದಿವಿಜಸಮಾಜಂಬೆರಸು ಮಹಾಪ್ರಭಾವನಾಪ್ರಭಾವ ಪ್ರಾದುರ್ಭಾವಮುಗುರ್ವುವಡೆವಿನಂ ಪುಟ್ಟಿವಂದು ಪುರಮನರಮನೆಯುಮಂ ಪೊಕ್ಕು ತನ್ನಯ ಬೆಸದಿಂಮುನ್ನಮೆ ಪೋಗಿ ಕಲ್ಪಜಶಿಲ್ಪಿಗಳ್ ಪರಿಕಲ್ಪಿಸಿದ ಕರುಮಾಡದ ಮುಂದಣ ಮಹಾಸಭಾಮಂಟಪದ ಮಣಿಕುಟ್ಟಿಮಧರಣಿಯು ನಟ್ಟನಡುವಣ ರಮಣೀಯಮಣಿ ಮಯಸಿಂಹಪೀಠದೊಳಾ ಜಿನಾರ್ಭಕನನಿರಿಸಿ ತತ್ಪುರಂದರಂ ಮುಂದೆ ಕುಳ್ಳಿರ್ದು ಸಮಸ್ತ ಸುರಾಸುರರೆಲ್ಲಂ ನೆರೆದು ಮಹಾಮಹಿಮೆಯಿಂ ಒಡ್ಡೋಲಗಂಗೊಟ್ಟಿರ್ಪುದಂ

ಕಂದ: ಪೂಜ್ಯಮಹಾಸೇನಮಹಾ
ರಾಜನುಮಾ ಸುವ್ರತಾಮಹಾದೇವಿಯುಮಂ
ದಾ ಜಿನಮಣಿಮಂಡಪಮಂ
ರಾಜಿತಮುಮನೆಯ್ದಿವಂದು ಪೊಕ್ಕರ್ ಮುದದಿಂ ೨೮

ತನಯಮುಖದರ್ಶನೋತ್ಸುಕ
ಮನರಾಗಳ್ ಬಂದು ಕೆಲದ ಭದ್ರಾಸನದೊಳ್
ಘನರಾಗದೆ ಕುಳ್ಳಿರ್ದರ್
ತನುಲತೆಯೊಳ್ ತೋಱಿ ಪುಳಕಕಳಿಕಾಜಾಳಂ ೨೯

ವಚನ: ಅಂತು ಕುಳ್ಳಿರ್ದು

ಚಂಪಕಮಾಲೆ

ತವಕದೆ ಚಕ್ರವಾಕಮಿಥುನಂ ತದಹರ್ಮುಖಮಂ ನಿರೀಕ್ಷಿಸಿ
ಪ್ರವರವಿಶೇಷಹರ್ಷದೊದವಿಂ ನಲಿವಂತೆ ಮಹಾತನೂಜನೊ
ಪ್ಪುವ ಮುಖಮಂ ಮನಂದಣಿವಿನಂ ನಡೆನೋಡಿ ವಿಶೇಷಹರ್ಷದಿಂ
ದನೆ ನಲಿಯುತ್ತುಮಿರ್ದುದು ದಲಾ ಮಿಥುನಂ ಪವಣಿಲ್ಲವೆಂಬಿನಂ ೩೦

ವಚನ: ಇಂತನಂತಸಂತೋಷಸಮುದ್ರದಪರಪಾರಮನೆಯ್ದುತ್ತುಮಿರ್ಪುದುಂ

ಶಾರ್ದೂಲವಿಕ್ರೀಡಿತ

ಅಂತಪ್ಪದ್ಭುತಪುಣ್ಯಮೂರ್ತಿಯೆನಿಪೀ ಲೋಕತ್ರಯಸ್ವಾಮಿಗೆಂ
ತುಂ ತಾಯ್ತಂದೆಗಳಪ್ಪ ಸೈಪು ದೊರೆಕೊಂಡಂದೇ ಸಮಾರಾಧ್ಯರುಂ
ಚಿಂತ್ಯರ್ ಪೂಜ್ಯರುಮಿಾ ಜಗಕ್ಕೆವರೆನುತ್ತುಂ ಶಕ್ರನಾನಂದಿತ
ಸ್ವಾಂತಂ ಪೂಜಿಸಿದಂ ಸುಕಲ್ಪಜವಿಭೂಷಾಮಾಲ್ಯವಸ್ತ್ರಂಗಳಿಂ ೩೧

ವಚನ: ಅಂತಾ ಜಿನನ ಜನನೀಜನಕರಂ ದಿವಿಜರಾಜಂ ದಿವ್ಯವಸ್ತುಗಳಿಂ ಪರಿ ಪೂಜಿಸುತ್ತುಮಿರೆ

ಶಾರ್ದೂಲವಿಕ್ರೀಡಿತ

ಇನ್ನುಂ ರತ್ನಸುವರ್ಣವೃಷ್ಟಿ ಕೞಿತಿಯುತ್ತಿರ್ದಪ್ಪುದೀ ತಾಣದೊಳ್
ಸ್ವರ್ನಾಥಂ ದಿವಿಜಾಸುರರ್ ಬೆರಸಿಬಂದಾರಾಧಿಸುತ್ತಿರ್ದಪಂ
ಮುನ್ನೆಂದುಂ ಸುತ ನಿನ್ನನಂ ಪಡೆದರಿಲ್ಲೀ ಲೋಕದಲ್ಲೆಲ್ಲಿಯುಂ
ಕೆನ್ನಂ ತತ್ಪಿತೃಮಾತೃಗಳ್ ಪಿರಿದು ಮುನ್ನೇಂ ನೋಂಪಿಯಂ ನೋಂತರೋ ೩೨

ಕಂದ: ಆ ಮಾತಾಪಿತೃಗಳನಿ
ನ್ನೇಮಾತಿಂತೆಂದು ಕೂಡೆ ಕೊಂಡಾಡುತ್ತುಂ
ಪ್ರೇಮದೆ ನೋಡುತ್ತಿರ್ದುದು
ವೈಮಾನಿಕದೇವದೇವಿಕಾನಿಕುರುಂಬಂ ೩೩

ವಚನ: ಅಂತುಮಲ್ಲದೆಯುಂ

ಸ್ರಗ್ಧರೆ

ಲೇಸಾಗಿರ್ದಾ ಜಿನಾಧೀಶ್ವರನ ನಿರುಪಮಾಕಾರಮಂ ಪೆತ್ತ ತಾಯಂ
ದೀಸಾರಂ ತಾನೆಸೆಪ್ಪಾ ಜನಕನವರ ರೂಪಂ ಸಭಾಶೋಭೆಯಂ ಕಂ
ಡೀ ಸೈಪಿನ್ನಾರ್ಗೆ ಕೈಸಾರ್ಗುಮೊ ದಿಟಮೆನುತುಂ ಪೌರನಾರೀನರೌಘಂ
ಸೂಸುತ್ತುಂ ಹರ್ಷಬಾಷ್ಪಾಂಬುವನತಿಶಯದಿಂ ನೋಡುತಿರ್ದತ್ತದಾದಂ ೩೪

ವಚನ : ಆಗಳ್

ಮಹಾಸ್ರಗ್ಧರೆ

ಜಲದೊಳ್ ಕುಳ್ಳಿರ್ದನೀತಂ ಸುರಪತಿ ಕೆಲದೊಳ್ ಕುಳ್ಳಿರ್ದಿರ್ದೀಕೆ ಜೆಲ್ವಿಂ
ಗಿಲೆಯಾದಿಂದ್ರಾಣಿ ಸುತ್ತಂ ನೆಲಸಿಸರೊಸೆದೋಲ್ಪೈಸುವರ್ ಲೋಕಪಾಳರ್
ಪಲಬರ್ ದೇವನಿಯೋಗಾಧಿಕೃತಿರತಿರಿವರ್ ಮತ್ತಮಿಂತೆಂದು ತಮ್ಮೊಳ್
ಸಲೆಬೊಟ್ಟಿಂ ತೋಱಿ ಮಾತಾಡುತವೆ ಬಳಸಿ ನೋಡಿತ್ತು ವಾಮಾಸಮೂಹಂ ೩೫

ವಚನ : ಇಂತು ಪರಿಜನ ಪುರಜನ ಬಂಧುಜನಂಗಳೆಲ್ಲಂ ನೆರೆದುನಿಂದು ನೋಡು ತ್ತುಂ ಸುಟ್ಟುಂಬೆದೋಱಿ ನುಡಿಯುತ್ತುಂ ತಜ್ಜಿನಾರ್ಭಕನ ಸಮುದ್ಭೂತಮಾದ ಪುಣ್ಯ ಶಕ್ತಿಯಂ ಮಿಗೆಪೊಗಳ್ದು ವ್ಯಕ್ತೀಕರಿಸುತ್ತು ಮಿರ್ಪನ್ನೆಗಮಾಗಳನೇಕಪ್ರಶಸ್ತವಸ್ತುವಿಸ್ತೀರ್ಣ ಮಾಗಿ ಜಂಭಾರಾತಿ ಜಾತಕರ್ಮಸಮುತ್ಸವಪರಿನಿರ್ಮಾಣಮಂ ವಿಸ್ತರಿಸಿ ತದನಂತರಂ

ಶಾರ್ದೂಲವಿಕ್ರೀಡಿತ

ಈತಂ ಮಾಡಿದಪಂ ವಿನಿರ್ಮಳಮಹಾಧರ್ಮಪ್ರಭಾವಾಂಗಮಂ
ಧಾತ್ರೀಮಂಡಳದಲ್ಲಿ ಮೇಲೆನಿಪಿನಂ ಧರ್ಮಕ್ಕಮಿನ್ನುಂ ಸಮಂ
ತೀತಂ ತಾನಧಿನಾಥನೆಂದು ಶಿಶುಗಂ ಶ್ರೀಧರ್ಮನಾಥಂ ದಲೆಂ
ಬೀತಂ ನಾಮಮನಿಟ್ಟು ಘೋಷಿಸಿದನಾ ದೇವೇಂದ್ರನಾನಂದದಿಂ ೩೬

ವಚನ : ಇಂತು ನಾಮೋಚ್ಚಾರಣಂಗೆಯ್ದಂಬಳಿಯಂ

ಉತ್ಪಲಮಾಲೆ

ತತ್ತುವ ಜೆಲ್ವ ಮೆಯ್ದೊಳೆವ ಕಾಡಿಗೆಯೆಚ್ಚುವ ಮುದ್ದುಮಾತುಮಂ
ಬಿತ್ತರಿಸುತ್ತುಮಿರ್ಪ ಮೊಲೆಯೂಡುವ ಬಾಳವಿಭೂಷಣಂಗಳಂ
ಮತ್ತಮದೆಲ್ಲಮಂ ತೊಡಿಪ ಜೇವಸದಲ್ಲಿಗೆ ದೇವರಾಜನ
ತ್ಯುತ್ತಮದೇವಕಾಮಿನಿಯರಂ ಬೆಸವೇಳ್ದನತೀವಭಕ್ತಿಯಿಂ ೩೭

ವಚನ : ಇಂತು ಬಾಲಕಾಲಕರಣೀಯಪರಿಚರ್ಯಾಪರಿಕರಮಂ ವಿರಚಿಸುತ್ತು ಮಿರಿಯೆಂದು ಪುರುಹೂತಂ ಪುರಮಹತ್ತರಿಕಾಸಂಕುಳಮಂ ಬರಿಸಿಯಪ್ಪಯಿಸುವುದುಂ

ಉತ್ಪಲಮಾಲೆ

ದೇವಕುಮಾರರಂ ಕರೆದು ನೀವು ಸಮಾನವಯಸ್ಕರಾಗಿ ನಾ
ನಾವಿಧಚೋದ್ಯಮಂ ಬಗೆಗೆ ಪುಟ್ಟಿಸುತಿರ್ಪ ವಿನೋದಮಂ ಸಮು
ದ್ಭಾವಿಸಿ ಕೂಡೆಯಾಡುತಿರಿಯೆಂದು ನಿಯಾಮಿಸಿದಂ ಕೆಲಂಬರಂ
ದೇವವರಂ ಸಮರ್ಪಿಸಿದ ನೇಳಕಮಂ ಪಿಡಿಯಲ್ ಕೆಲಂಬರಂ ೩೮

ವಚನ: ಅಂತಾ ಜಿನಕುಮಾರಕನಿಚ್ಛಾನುಕೂಲಮಾಗಿ ತತ್ಕಾಲೋಚಿತ ಸಹಪಾಂಸುಕ್ರೀಡಾವಿನೋದಮನಾತನೊಡನೊಡರ್ಚುತ್ತುಮಿರಿಯೆಂದು ಸುರಕುಮಾರಕರಂ ನಿಯೋಜಿಸಿ ಬಳಿಯಂ ಬಳರಿಪು ಪಿರಿದುಂ ಪ್ರಶ್ರಯವಿನಮ್ರಮಸ್ತಕನಾಗಿ ತದ್ಧರ್ಮಜಿನ ರಾಜನುಮನಾ ಜಿನನ ಜನನೀಜನಕರುಮಂ ಬೀಳ್ಕೊಂಡು

ಉತ್ಪಲಮಾಲೆ

ಬೀಸುವ ಚಾಮರಾವಳಿಗಳಿಂ ಧವಳಾತಪವಾರಣಂಗಳಿಂ
ಸೂಸುವ ಮುತ್ತಿನಕ್ಷತೆಗಳಿಂ ಪಿಡಿದೆತ್ತಿದ ಸದ್ಧ್ವಜಂಗಳಿಂ
ಲೇಸೆನೆ ಶೋಭೆವೆತ್ತಮರಸೈನ್ಯಶತಂಬೆರಸಿಂದ್ರನಂದು ಮ
ತ್ತಾ ಸುರಲೋಕಮಂ ಪಿರಿದು ಸಂ[1]ತಸ[1]ದಿಂ ನಿಮಿಷಕ್ಕೆ ಮುಟ್ಟಿದಂ ೩೯

ವಚನ: ಇಂತು ತಜ್ಜಿನಾರ್ಭಕಂಗೆ ಮಹಾಮಹಿಮೆಯಿಂ ಜನ್ಮಾಭಿಷವಣ ಕಲ್ಯಾಣಪುರಸ್ಸರಂ ಜಾತಕರ್ಮನಾಮಕರಣಮಂಗಳವಿಧಾನವಿ[1]ರಚನಾ[1]ನಂತರಂ ವಾಸವಂ ನಿಜನಿವಾಸಕ್ಕೆ ಪೋಪುದುಂ

*

ಕಂದ: ಇತ್ತಲ್ ಬಳಿಕ್ಕಮತಿಮೃದು
ಪೆತ್ತಮರಕುಮಾರಿಕಾಕರಾರುಣ ಕಮಲೋ
ನ್ಮತ್ತಕಳಹಂಸನೆನಿಪ ಜಿ
ನೋತ್ತಮಶಿಶು ಕಣ್ಗೆ ಸೊಗಸನೀವುತ್ತಿರ್ದಂ ೪೦

ಎಱಿಕಂ ತನಗೇತಱಿಂತೂಳಂ
ಕಿಱಿದಾದೊಡಮಿಲ್ಲವೆಂಬಿದಂ ಸೂಚಿಸುವಂ
ತಿರೆ ನಿರಪೇಕ್ಷೇಕ್ಷಣದಿಂ
ಮೆಱೆತಿಯುತ್ತುತ್ತಾನಶಯ್ಯೆಯೊಳ್ ಶಿಶುವೆಸೆದಂ ೪೧

ಕಜ್ಜಳಪರಿರಂಜನದಿಂ
ದುಜ್ವಳನಯನಂಗಳೆಯ್ದೆ ಕಪ್ಪಾಗಿಯೆ ಪ
ಶ್ಯಜ್ಜನಮನಕ್ಕೆ ಶಾಗೋ
ಪಾರ್ಜನಮಂ ಮಾಡುತಿರ್ದನಿದು ಚಿತ್ರತರಂ ೪೨

ಮಿಗೆ ಜಾತಿಜರಾಮರಣಾ
ದಿಗಳಿಂಗೊಳಗಾಗಿ ಸೇದೆವಡುತಿರ್ದಪುದೀ
ಜಗಮೆಂದು ನಗುವತೆಱದಿಂ
ಮುಗುಳ್ನಗೆಯಂ ನಕ್ಕು ಮನಮನಿಕ್ಕುಳಿಗೊಂಡಂ ೪೩

[1] ತೋಷ (ಗ) [2] ಧಾ (ಗ) * ಬಾಲಕ್ರೀಡೆ (ಚ)

ಪರಮಹರಿನ್ಮಣಿವಿರಚಿತ
ಮರಳೆಲೆ ಬಾಲಕನ ನೊಸಲೊಳೆಸೆವುತ್ತುಂ ಬಂ
ಧುರಮಾದುದರ್ಧಚಂದ್ರೋ
ದರದೊಳ್ ಪೊಳೆಯುತ್ತುಮಿರ್ಪ ಕಪ್ಪಿನ ತೆಱದಿಂ ೪೪

ಮತ್ತೇಭವಿಕ್ರೀಡಿತ
ಮೃದುಸಿಕ್ತಂ ಸಮನೋಭಿರಾಮನಮಿತಚ್ಛಾಯಾವಿಶೇಷಾಸ್ಪದಂ
ಪದುಳಂ ನಂದನಬಾಳಚೂತಮೆನೆ ಕಣ್ಗಿಂಬಾದನಾ ಬಾಳಕಂ
ಮುದಮಂ ಪುಟ್ಟಿಸಿ ವಸ್ತ್ರವಿಂಗೆ ಮಿಗೆಮತ್ತಂತಲ್ಲದಂದಿಂದ್ರನೀ
ಲದ ಮಾಣಿಕ್ಯಗಳಾವ ಕಾರಣದಿನಾಕರ್ಣಂಗಳಲ್ಲೊಪ್ಪುಗುಂ ೪೫

ವಚನ: ಆಪೊತ್ತಿನೊಳ್

ಕಂದ: ಸುತನಂಗಸ್ಪರ್ಶನದೊಂ
ದತಿಶಯದಿಂ ಕಣ್ಗಳೆರಡುಮಂ ಮುಚ್ಚಿದನಾ
ಪಿತೃಸುಖಮನಂತರಂಗಾ
ತತಗೃಹದಲ್ಲಿರಿಸಿ ಕದವನಿಕ್ಕಿದ ತೆಱದಿಂ ೪೬

ತೊಡೆಯಮೇಲಿರ್ದ ಕೂಸಂ
ಕಡುಪಿಂದಮರ್ದಪ್ಪಿ ಮಾತೃ ಕಣ್ಮುಚ್ಚಿದಳಾ
ಗಡೆ ಗಾಢಾಲಿಂಗನದಿಂ
ದೊಡಲೆನಿತೋ ಪೊಕ್ಕುದೆಂಬಿದಂ ನೋಡುವವೊಲ್ ೪೭

ಕುಂದದ ಪೆರ್ಚುಗೆಯಂ ಜಿನ
ಚಂದ್ರಂ ತಳೆಯಲ್ಕೆ ಕೂಡೆ ನಿರುಪಮಬಹಳಾ
ನಂದಸಮುದ್ರಂ ಪೆರ್ಚಿ ದ
ಲಂದು ಕರಂ ತುಂಬಿದತ್ತು ಲೋಕದೊಳೆಲ್ಲಂ ೪೮

ಬಿಡದೆನ್ನಂತಿರೆ ತಾನುಂ
ಗಡ ತೇಜೋಮಯಮುಮೆಂಬ ಬಗೆಯಿಂದೆನೆ ಶಿಶು
ಮಡದಿಯರ ಕೈಗಳಿಂದಂ
ಕಡುನಿಮಿರ್ದಂ ಪಿಡಿಯಲೆಂದು ದೀಪಾಂಕುರಮಂ ೪೯

ಪದೆಪಿಂ ಕಿವಿಗಳ್ಗಿಂಬಂ
ಕೆದಱುತ್ತುಂ ಸರ್ವವಶ್ಯಮಂತ್ರಂಗಳವೊಲ್
ತೊದಳಾದ ಮುದ್ದುನುಡಿಗಳ್
ಮುದಮಂ ಪುಟ್ಟಿಸುತಮಿರ್ಪವಖಿಳಜನಕ್ಕಂ ೫೦

ವಚನ: ಮತ್ತಂ ಕೆಲವಾನುದಿನಗಳಿಂ ಮೇಲೆ

ಚಂಪಕಮಾಲೆ

ಜನನಿಯು ದೇವಕಾಮಿನಿಯು ಕೆಯ್ಯ ಬೆರಳ್ಗಳನಾಗಳೊಯ್ಯನೊ
ಯ್ಯನೆ ಪಿಡಿದೆಳ್ದು ನಿಂದು ಮಣಿಕುಟ್ಟಿಮಧಾರಿಣಿಯಲ್ಲಿ ಲೀಲೆಯಿಂ
ಜಿನಶಿಶುಕೊಡೆ ದಟ್ಟಡಿಯನಿಟ್ಟು ತಳರ್ನಡೆಗಲ್ತನೆಯ್ದೆ ಕೆಂ
ಪಿನ ಕಡುಚೆಲ್ವ ತಾವರೆಯರಳ್ಗಳನಲ್ಲಿರಿಸುತ್ತುಮಿರ್ಪವೊಲ್ ೫೧

ಪಿಡಿದು ಕರಾಗ್ರದಿಂದುದಯಮೇಖಳೆಯಂ ಜನನೀಸದಂಕದಿಂ
ಕಡುನಲಿದೆಳ್ದು ಭೂತಳದೊಳಂ ನಿಜಪಾದಮನಿಟ್ಟು ಬಾಳಕಂ
ನಡೆವುತಮಿರ್ದನಾ ಮೊದಲ ದಿಗ್ವಧುವಂಕದಿನೆಳ್ದ ಸೂರ್ಯನಂ
ತಡಸಿದ ರಾಗದಿಂದುಲಿಯೆ ಗೆಜ್ಜೆಗಳೆಂಬುರುಪಕ್ಷಿಗಳ್ ಕರಂ ೫೨

ಮಣಿಮಯಮೇಖಳಾವಳಯಕೀಲಿತಪಾವನಕಿಂಕಿಣೀ ಕಣ
ಕ್ವಣನಮದುಣ್ಮಿಪೊಣ್ಮಿ ರಮಣೀಯವಿಚಿತ್ರಿತಚಿತ್ರಪತ್ರಕಂ
ಕಣರಣನಂ ವಿಶೇಷಿಸೆ ಮನೋಹರಭಾಸುರವಜ್ರಮುದ್ರಿಕಾ
ಗಣಕಿರಣಂ ವಿರಾಜಿಸೆ ಜಿನಂ ನಡಪಾಡುತಮಿರ್ದನರ್ಥಿಯಿಂ ೫೩

ಕಂದ: ಮಿಗೆ ಭೂಷಣಾಂಗಸುರಕುಜ
ದಗೆಯೆಂಬಿನಮಿಂಬುವೆತ್ತ ಜಿನಶಿಶುವಂಗಂ
ಸೊಗಯಿಪ ಮರುತ್ಪ್ರಚಾರದ
ಬಗೆಯಿಂದಾಡುತ್ತುಮಿರ್ದುದತಿರಮಣೀಯಂ ೫೪

ಮತ್ತೇಭವಿಕ್ರೀಡಿತ

ಗಡಣಂಗೊಂಡೊಡನಾಡಿಗಳ್ ಸುರಕುಮಾರರ್ ಧೂಳಿಕಾಕೇಳಿಯೊಳ್
ಕಡುರಾಗಂಬೆರಸಾ ಜಿನಾರ್ಭಕನ ಮೇಲೆಲ್ಲಂ ರಜೋಜಾಳಮಂ
ಕಡುಪಿಂದಂ ಕೆದಱುತ್ತುಮಿರ್ದೊಡಮವಂ ನೈರ್ಮಲ್ಯಮಂ ತಾಳ್ದ ಕ
ನ್ನಡಿಯೆಂಬಂತಿರೆ ಚೆಲ್ವನಾಗಿ ಪೊಳೆಯುತ್ತಿರ್ದಂ ವಿನೇತ್ರಪ್ರಿಯಂ ೫೫

ಕಂದ: ಒಡನೊಡನೆ ತಾಯ ದಿಟ್ಟಿಗ
ೞಿಡೆವಿಡದೆ ಕುಮಾರನತ್ತ ಪರಿದಾಡುವಿನಂ
ಕಡುನೀಳ್ದ ತನ್ನ ಕಣ್ಗಳ್
ತಡೆಯದೆ ಪೊಳೆದಾಡೆ ಮುದದಿನಾಡುತ್ತಿರ್ದಂ ೫೬

ಚಂಪಕಮಾಲೆ
ಸುಳಿಸುಳಿದಾಡುತಿರ್ದ ರಮಣೀಯಕುಮಾರನ ತೆಳ್ಪುವೆತ್ತು ದ
ಳ್ಪೊಳೆವ ಕದಂಪಿನಲ್ಲಿಯುವತಂಸವಿಶೋಣಮಣಿಪ್ರಭಾಳಿ ಮಾ
ರ್ಪೊಳೆದೆಸೆಯುತ್ತುಮಿರ್ದುದದು ಚುಂಬಿಸೆ ಬಂದು ವಿಮುಕ್ತಿಲಕ್ಷ್ಮಿ ತಂ
ಬುಲದೆಸರೊಕ್ಕುದಲ್ಲಿ ಬಿಡದೆಂಬಭಿಶಂಕೆಯನುಂಟುಮಾಡು[1]ಗುಂ[1] ೫೭

ವಚನ: ಅಗಳ್

ಚಂಪಕಮಾಲೆ
ಪರಮವಿಶೇಷಮೋಹರಸಸಾರವಿಶಾಲವಿಲೋಚನಂಗಳಿಂ
ಸುರುಚಿರರೂಪನಂ ಜಿನಕುಮಾರಕನಂ ನಡೆನೋಡಿ ಪೆತ್ತ ತಾ
ಯಿರದಮರ್ದಪ್ಪಿಕೊಂಡು ಬಿಡದಾರನಿದಾನವಿದಾರಮುದ್ದಿದಾ
ರರಸನಿದಾರಮಾಣಿಕವಿದೆಂದುಪಲಾಲಿಸುತಿರ್ದನರ್ಥಿಯಿಂ ೫೮

ವಚನ: ಮತ್ತಮಾ ಪೊತ್ತಿನೊಳ್

ಚಂಪಕಮಾಲೆ
ಜನನಿಯ ಕಂಬುಕಂಠದೊಳಿಕ್ಕಿದ ಮುತ್ತಿನ ತಾರಹಾರಮಂ
ಜಿನಶಿಶು ತನ್ನ ಕೆಯ್ಯಬೆರಳಿಂ ಪಿಡಿದೊಂದೆರಡೆಂಟುನಾಲ್ಕುಮಾ
ಱುನುತೆಣಿಸುತ್ತುಮಿಾ ತಡತಡಾದ ತೊದಳ್ನುಡಿಯಿಂದ ನಾಡೆಯುಂ
ಮನದೊಳನೂನರಾಗದೊದವಂ ಸಲೆಪುಟ್ಟಿಸುತಿರ್ದನಾಕ್ಷಣಂ ೫೯

ವಚನ: ಇಂತಾ ಬಾಲಕನ ಬಾಲಲೀಲಾವಿನೋದಂಗಳಿಂ ತನ್ನಯ ಜನನೀ ಜನಕರಿಂಗಮಂದಾನಂದಸಂದೋಹಮನಂದು ಜನಿಸುತ್ತುಮಿರಲ್ ಮತ್ತಂ

* ಕಂದ: ಅನಿಮಿಷಪತಿಯನ್ನಪ್ರಾ
ಶನಚೌಲೋಪನಯನಾದಿ ಕರ್ಮಂಗಳುಮಂ
ಮನಮೊಲ್ದು ಮಾಡಿದಂ ತ್ರಿಭು
ವನದಲ್ಲಿ ವಿಚಿತ್ರಮಪ್ಪಿನಂ ಸಂಭ್ರಮದಿಂ ೬೦

1 ತುಂ (ಗ)

* ದೇವರ ರೂಪವ್ಯಾವರ್ಣನೆ (ಗಚ)

ಚಂಪಕಮಾಲೆ

ತಡೆಯದೆ ಮೂಜಗಂಸಂಜೆಯೊಳಮೊಪ್ಪುವ ರತ್ನವಿಭೂಷಣಂಗಳಂ
ಕೊಡುವುದು ಭೂಷಣಾಂಗಮದು ಕೊಟ್ಟವನೋಲಗಿಪಂ ಸುರಾಧಿಪಂ
ತೊಡಿಸುವರಂದವಂ ಶಿಶುಗೆ ದೇವವಿಳಾಸವತೀಜನಂಗಳೆಂ
ದೊಡಮದನೇನ ಬಣ್ಣಿಸುವೆನಾತನ ಪುಣ್ಯಮಹಾಪ್ರಭಾವಮಂ ೬೧

ವಚನ : ಇಂತು ನಿಳಿಂಪವಿಳಾಸಿನೀಸಂಕುಳಕರಣೀಯಬಾಲ್ಯಾಂಗ ಸಂಸ್ಕಾರಾದಿ ಕ್ರಿಯಾವಿಶೇಷಂಗಳನಂಗೀಕರಿಸಿ ಬಳಿಯಂ ಶೈಶವಾವಸ್ಥಾಸ್ಥಿತಿಯನತಿಕ್ರಮಿಸಿ ಪರಂಪರೆಯಿಂ ಪ್ರತಿಪತ್ಕಳಾಮಾಳಿಯಂತೆ ಪ್ರತಿದಿನಂ ಪ್ರವರ್ಧಮಾನಕಳಾಕಳಾಪವಿಳಾಸದೊಡನೊಡನೆ ಬಳೆವಳೆದಭಿವೃದ್ಧಿಯನಪ್ಪುಕೆಯ್ವುದುಂ

ಉತ್ಪಲಮಾಲೆ

ಆ ಸುಕುಮಾರಕುಂಜರನ ಸರ್ವಮನೋಹರದಿವ್ಯರೂಪಮಂ
ಲೇಸೆಲೆ ಬಣ್ಣಿಸಲ್ ಬಗೆವೊಡೆನ್ನಳವಲ್ತು ಸಹಸ್ರಜಿಹ್ವಿಕಾ
ವಾಸುಕಿಗಗ್ಗಳಂ ಸುಕೃತಕಾರಣಮಾಗಿ ದಲೆನ್ನ ಬಲ್ಲವೋ
ಲೀಶನಮೂರ್ತಿಯಂ ಪೊಗಳ್ವೆನಲ್ಲದೊಡಂತದು ಮೊಗ್ಗೆ ವರ್ಣನಂ ೬೨

ವಚನ: ಅದೆಂತೆನೆ

ಚಂಪಕಮಾಲೆ

ನಿರುಪಮಶಂಖಚಕ್ರಕುಳಿಶಂ ಮೊದಲಾದ ಸುಲಕ್ಷಣಂಗಳಂ
ಧರಿಸಿದ ತತ್ಕುಮಾರಪದಪದ್ಮಮನೊಪ್ಪುವ ಲಕ್ಷ್ಮಿ ಕಂಡು ತ
ನ್ನರಸನ ಚಿಹ್ನಮಿರ್ದುದಜನಾತನುವಿಲ್ಲಿಗೆ ಬರ್ಪನಿಂತಿದೆ
ನ್ನರಮನೆಯೆಂಬ ಮೋಹವಶದಿಂ ಬಿಡದಲ್ಲಿರುತಿರ್ಪಳಾವಗಂ ೬೩

ಮತ್ತೇಭವಿಕ್ರೀಡಿತ

ಚರಣಾಂಗುಷ್ಠನಖಂಗಳಿಂ ನಿಮಿರ್ವ ರೋಚಿಃಕಾಂಡಮೋ ನೇಣ ಮು
ಪ್ಪುರಿಯನ್ನಂ ನಡುವಿರ್ದು ಲಂಬಿಸೆ ಕುಮಾರೋಲ್ಲಾಸಿ ಜಂಘಾಯುಗಂ
ಪರಿತಪ್ತೋತ್ತಮಕಾಂಚನಾಭಿರಚಿತಸ್ತಂಭದ್ವಯಾಕಾರಮಂ
ಧರಿಸಲ್ ತೋರ್ದುದಂದು ಲಕ್ಷ್ಮಿ ನಲಿಯುತ್ತಿರ್ಪುಯ್ಯಲೆಂಬಂದದಿಂ ೬೪

ಚಂಪಕಮಾಲೆ

ಸಕಳಜಗಜ್ಜನಂಗಳ ವಿಲೋಚನಮುಂ ಮನಮುಂ ದಲೆಂಬ ಶೌಂ
ಡಕಿತ ಮಹಾಗಜಂಗಳೆರಡಂ ನೆಱೆಕಟ್ಟುವುದಕ್ಕೆ ಮಾಡಿದ
ಪ್ರಕಟಸುವರ್ಣದಿಂ ಸಮೆದ ಚೆಲ್ವಮಳ್ಗಂಬಮಿಂದೆಂಬಿನಂ ಯುವಾ
ಧಿಕನವರೋರುಗಳ್ ಬಿಡದೆ ಮಾಳ್ಪವು ನೋಳ್ಪರ ಕಣ್ಗೆ ಹಬ್ಬಮಂ ೬೫

ಅತಿಶಯರಾಜಸಿಂಹಮೆನೆ ತಜ್ಜನರಾಜಕುಮಾರಸಿಂಹನುಂ
ನುತಪರಿವೃತ್ತಪೀವರವಿಶಾಲಸುರಮ್ಯಕಟೀತಟಂಗಳಂ
ನುತತರಮಾಗಿ ತಾಳ್ದಿದನದಲ್ಲದೊಡೆಂತು ದುರಂತಕರ್ಮನೆಂ
ಬತಿಬಳಕುಂಜರಂ ಕೆಡುವುದಾತನ ದರ್ಶನದಿಂದಮಾಕ್ಷಣಂ ೬೬

ಕುವರನ ರೂಪನೆಂಬ ರಸದಿಂದಮೆ ತುಂಬಿದ ನಾಭಿಕೂಪದೊಳ್
ತವಕದೆ ಬಂದು ಮುಳ್ಗಿದುದು ದಾನಸಮುದ್ಧುರ ಧರ್ಮಸಿಂಧುರಂ
ವಿವರಿಸಲಂತುಮಲ್ಲದೊಡೆ ತನ್ಮದಧಾರೆಯ ಪಜ್ಜೆ ತೀರದೊಳ್
ಪ್ರವಿತತ ರೋಮರಾಜಿಲತಿಕಾಚ್ಛಲದಿಂದಮದೆಂತು ಬಂದುದೋ ೬೭

ಮತ್ತೇಭವಿಕ್ರೀಡಿತ

ಬಿಡದಂತಃಪುರಸಾರಸೌಂದರಿ ಲಸಲ್ಲಕ್ಷ್ಮೀಮಹಾದೇವಿ ಬಂ
ದೆಡೆಗೊಂಡಿರ್ದಪಳಿಲ್ಲಿ ಕಾಪಿನವರಾಗಿರ್ದೋಳ್ಗ ಣೌಘಂಗಳಂ
ತೊಡರ್ದೊಂದಾಗಿಯೆ ಕೂಡಿಕೊಂಡು ಪಲವುಂಕಾಲಂ ದಲಿಂತೆಂದು ನೋ
ಳ್ಪಡೆ ವಕ್ಷಸ್ಥಳಮಂ ವಿಶಾಲತರಮಾಗಂಭೋಜಜಂ ಮಾಡಿದಂ ೬೮

ವಚನ: ಇಂತೆಂಬವೊಲಾ ಕುಮಾರನ ಪೇರುರಮಗಲಮಾಗಿ ಮಿಗೆ ಸೊಗಸನವ
ಗಯಿಸುತ್ತುಮಿರೆ

ಉತ್ಪಲಮಾಲೆ

ಸಾಸಿರ ನೆತ್ತಿಗಳ್ ಬಿರಿವಿನಂ ನೆಲನಂ ಸಲೆ ಪೊತ್ತುಕೊಂಡು ಸಂ
ಕ್ಲೇಶದಿನಿರ್ಪಹೀಂದ್ರನೆಮಗೇಂ ಸರಿಯಾದಪನೆಂಬ ಗರ್ವದಿಂ
ದಾ ಸುಕುಮಾರ ಬಾಹುಗಳವುನ್ನತಿವೆತ್ತಿರೆ ನಾಣ್ಚಿದಂತೆ ತ
ದ್ವಾಸುಕಿ ಪೋಗಿ ಪೊಕ್ಕನೀತ ರಸಾತಳಮಂ ಬಿಡದಿರ್ಪನೀಗಳುಂ ೬೯

ಕಂದ: ಕೆಂದಾವರೆಯುಲರ್ಗಳಿವೆಂ
ಬಂದದೆ ಕುಮರನ ಕರಂಗಳೊಪ್ಪಮನಾಳ್ದವ
ವಂದಂತುಮಲ್ಲದಿರ್ದೊಡೆ
ಸೌಂದರ ಕಂಕಣಧರಂಗಳೆಂತಾದಪುವೋ ೭೦

ವಚನ: ಮತ್ತಮಾ ಕುಮಾರಶಿರೋಮಣಿಯ

ಮತ್ತೇಭವಿಕ್ರೀಡಿತ

ಪರರೇಖಾತ್ರಯದಿಂದೆ ಕೂಡಿ ನೆಱೆ ಬಟ್ಟಿತ್ತಾಗಿ ಚೆಲ್ವಾದ ನು
ಣ್ಗೊರಳಂ ಕಂಡು ವಿಳಾಸದಿಂದೆ ಸರಿಯಾಯ್ತಿಲ್ಲೆಂಬ ಲಜ್ಜಾ ಭರಾ
ತುರದಿಂದಂದೊಳಗೆಯ್ದಿ ಡಿಳ್ಳಿಸಿ ಜಲಂ ಪೊಕ್ಕಿರ್ದುದಂತಲ್ಲದಿಂ
ದಿರದಾ ಕಂಬು ಸಮುದ್ರದಲ್ಲಿ ನೆಲೆಗೊಂಡಿರ್ಪಂದಮಾವಂದಮೋ ೭೧

ಚಂಪಕಮಾಲೆ

ನಿರುಪಮಮಪ್ಪ ತಜ್ಜಿನಕುಮಾರನ ಸನ್ಮುಖಮಂಡಲಕ್ಕೆ ಪೀ
ವರತರಕಾಂತಿಯಿಂದೆ ಸರಿಯಾದಪೆನೆಂಬತಿಪಾಪದಿಂ ಸುಧಾ
ಕರನುಃಱಿ ಶುಕ್ಲ ಕುಷ್ಠಧರನಾದವೊಲೊಪ್ಪಿದನಂತುಮಲ್ಲದಂ
ದುರುಕಳಂಕಾಂಶುವಾಗುದಯಿಸಿರ್ದು ದಲೇಂ ಬಿಳಿದಪ್ಪ ಕಾರಣಂ ೭೨

ವಚನ: ಇಂತಖಿಳಜಗಜ್ಜನಹೃದ್ಯನಿರವದ್ಯಸ್ವಾದ್ವಾದವಿದ್ಯಾವಿಳಾಸಿನಿಯನರ್ತನವೃತ್ತಿಗೆ ಮಂಗಮಂಗಳರಂಗಸ್ಥಳಾಯಮಾನಮಾದ ನಿಜಮುಖಕಮಳದಿಂದಾಧರ್ಮನಾಥಕುಮಾರಂ ಪೊಸಪೊಸತಾದ ವಿಳಸನಮನಪ್ಪುಕೆಯ್ವುದುಂ

ಉತ್ಪಲಮಾಲೆ

ಆತನ ಮಂಡೆಯಲ್ಲಿ ಮಿಗೆಪುಟ್ಟಿದ ಕುಂತಳಜಾಳಮೆಲ್ಲಮುಂ
ನೂತನಸಾರಸೌರಭಮನುಳ್ಳ ವಿಕಾಸಿತಮಾದ ಪಾವನೀ
ಭೂತಮುಖಾಂಬುಜಾತದೊಳಮೆಯ್ದೆ ಮುಸುಂಕಿತನಾದಮಿಲ್ಲದ
ಖ್ಯಾತಮಧುವ್ರತಪ್ರತತಿಯೆಂಬಿನಮಾಳ್ದುದು ಚೆಲ್ವನಾವಗಂ ೭೩

ಚಂಪಕಮಾಲೆ

ಪೊಳೆವಲರ್ಗಣ್ಗಳಂ ಕುವಳಯಂಗಳೆಸಳ್ಗಳಿನೊಳ್ಪುವೆತ್ತ ಪ
ಲ್ಗಳನವನೆಯ್ದೆ ಪೊಲ್ಲೆಯ ಮುಗುಳ್ಗಳಿನಂಘ್ರಿತಳಂಗಳಂ ಸುಕೋ
ಮಳತರಪಲ್ಲವಂಗಳಿನಜಂ ನೆಱೆಮಾಡಿದನೆಂದೊಡಾ ಕುಮಾ
ರಲಲಿತ ಸೌಕುಮಾರ್ಯಗುಣಮಂ ಪೊಗಳಲ್ಕಮಳುಂಬಮಾಗದೇ ೭೪

ವಚನ: ಇಂತು ನೆಗಳ್ತೆಗಂ ಪೊಗಳ್ತೆಗಮಾದ ನಿರತಿಶಯದಿವ್ಯರೂಪವಿಶೇಷದಿಂದಾಧರ್ಮನಾಥಕುಮಾರನತಿರಮಣೀಯಭಾವಮನಪ್ಪುಕೆಯ್ವುದುಂ

ಚಂಪಕಮಾಲೆ

ಅದು ಶುಭಲಕ್ಷಣಾವಳಿಗಳಾಗರಮಂತದು ಹೊನ್ನ ಬಣ್ಣದಂ
ದದು ಕಡುಚೆಲ್ವಮೆಯ್ವೆಳಗಿನೇಳ್ಗೆಯ ಬಾಳ್ಕೆದಲುದ್ಧರೂಪಸಂ
ಪದದ ನಿವಾಸಮಾಗಿಮದು ಕೌತುಕಮಂ ಜಗತೀತ್ರಯಕ್ಕೆ ಮಾ
ಳ್ಪದು ಬಿಡದಾವಗಂ ಚರಮದೇಹದ ಮೆಯ್ಸಿರಿ ಧರ್ಮನಾಥನಾ ೭೫

ಮತ್ತೇಭವಿಕ್ರೀಡಿತ

ಮಳೆಗಂ ಸೋಲದ ಗಾಳಿಗಂ ಸಡಿಲದತ್ಯುಷ್ಣಕ್ಕೆ ಹೆಡ್ಡೈಸದ
ಚ್ಚಳಿಗಂ ಕೋಡದ ಶಸ್ತ್ರಕಂಟಕವಿಪಕ್ಷಂ ತಾನಭೇದ್ಯಂ ದಲಾ
ದಳವಂ ತಾಳ್ದಿದವೊಪ್ಪುದೋಱಿದಿನಿತೊಂದಾಶ್ಚರ್ಯಸಾಮರ್ಥ್ಯಮಂ
ತಳೆದಿರ್ದಾ ಚರಮಾಂಗದುನ್ನತಿಯನಿನ್ನೇನೆಂದದಂ ಬಣ್ಣಿಪೆಂ ೭೬

ಸ್ರಗ್ಧರೆ

ಸಾರೂಪ್ಯಂ ಸೌರಭಂ ನಿರ್ಮಳತೆ ಶುಭಮಹಾಲಕ್ಷಣಂ ಸ್ವಾದನೀಯಾ
ಕಾರಂ ಸುಕ್ಷೀರಗೌರಾತಿಶಯಿತರುಧಿರತ್ವಂ ಗತಸ್ವೇದಭಾವಾ
ಧಾರತ್ವಂ ಸರ್ವಲೋಕಪ್ರಿಯತರಹಿತವಾದಿತ್ವಮತ್ಯಂತವೀರ್ಯಂ
ಸಾರೀಭೂತೋರುಶೋಭಂ ಚರಮತನುಸಹೋತ್ಪನ್ನಮಿಾ ಪತ್ತುಧರ್ಮಂ ೭೭

ವಚನ : ಅಂತುಮಲ್ಲದೆಯುಂ

ಚಂಪಕಮಾಲೆ

ಅತಿಕುಶಲತ್ವದಿಂದೆಱಗಿಯುಂ ಕಡೆದುಂ ಕರುವಿಟ್ಟು ತಿಟ್ಟವಿ
ಟ್ಟತಿಶಯರೂಪಿನೇಳ್ಗೆಗೆ ಸಮಾನತೆಯಂ ಪಡೆಯಲ್ಕೆಬಾರದ
ಪ್ರತಿಮವಿಳಾಸಮಂ ತಳೆದು ಚಾರುಕುಮಾರಕನಂ ನಿತಂಬಿನೀ
ಪ್ರತತಿ ನಿರೀಕ್ಷಿಸುತ್ತುಮೆಳಸಿರ್ದುದು ತೋಳ್ವೆರಗಂ ದಲಾತನ ೭೮

ಭರವಸದಿಂ ಕುಮಾರನ ವಿಳಾಸಮೆ ತೋಳ್ವಲಮಾಗಿ ಮಾಡಿಕೊಂ
ಡರಲಸರಲ್ಗಳಿಂದೆ ಮದನಂ ಬಿಡದೆಚ್ಚಡೆ ತಾಗಿ ನಟ್ಟುವಾ
ತರುಣಿಯುರಂ ಶಿರೀಷಕುಸುಮಾಂಗಿಯರಪ್ಪುದಱಿಂದೆ ಮತ್ತಮಾ
ಚರಮಶರೀರನಂ ನಡವು ವಜ್ರಮಯಾಂಗಕನಪ್ಪ ಕಾರಣಂ ೭೯

ಕುವರನ ರೂಪಿನೊಂದು ಬಲದಿಂದಮೆ ಪೆಂಡಿರ ತಂಡಮಂ ಮನೋ
ಭವನರಲಂಬಿನಿಂದೆ ತಟವುಚ್ಚುವಿನಂ ಬಿಡದೆಚ್ಚನಾ ವಧೂ
ನಿವಹ ಸಹಾಯದಿಂದಮೆಸಲೊಲ್ಲದೆ ಮಾಣ್ದನವಂ ಕುಮಾರನಂ
ಜನದೊಳೆ ಸೋಲ್ವೆನೆಂಬ ಬಗೆಯಿಂದಮದೇಂ ಮದನಂ ವಿವೇಕಿಯೋ ೮೦

ವಚನ: ಮತ್ತಂ

ಶಾರ್ದೂಲವಿಕ್ರೀಡಿತ

ಸಾರ್ಧ ದ್ವಾದಶಲಕ್ಷವರ್ಷಪರಮಾಯುಃಸಂಖ್ಯೆಯಿಂದೆಯ್ದಿ ಸಂ
ಬದ್ಧಂ ಸದ್ಗುಣರಾಜಿರಾಜಿ ಸಲೆನಾಲ್ವತ್ತೈದು ಬಿಲ್ಲುದ್ದದಿಂ
ದಿದ್ಧಂ ಪಾವನಧರ್ಮನಾಥಸುಕುಮಾರೋದಾರಿಕಾಂಗಂ ಸಮಾ
ವಿಧ್ವಸ್ತಾಖಿಳರೋಗಕಂ ಜಗದೊಳಂ ತಾಳ್ದಿತ್ತದಾಶ್ಚರ್ಯಮಂ ೮೧

ವಚನ : ತದನಂತರಂ

*

ಚಂಪಕಮಾಲೆ

ಕಲಿಸುವರಾರೊ ಚಾರುಗತಿಯುಂ ಕಳಹಂಸೆಗೆ ರಮ್ಯನಾದಮಂ
ಕಲಿಸುವರಾರೊ ಕೋಗಿಲೆಗೆ ತಾಂಡವಡಂಬರಮಂ ನವಿಲ್ಗೆ ಮೇಣ್
ಕಲಿಸುವರಾರೊ ಮತ್ತೆ ಸಹಜಾಮಳಬೋಧಮಯಂಗೆ ಶಾಸ್ತ್ರಮಂ
ಕಲಿಸುವರಾರೊ ಲೋಕಗುರುವಿಂಗೆ ಕರಂ ಗುರುವಪ್ಪನಾವನೋ ೮೨

ಮಹಾಸ್ರಗ್ಧರೆ

ಜಗಮೆಲ್ಲಂ ಕೂಡಿಕೊಂಡಾಡುವವಿಮಳಶಾಸ್ತ್ರಾಂಗವಿದ್ಯಾವಿಶೇಷ
ಪ್ರಗುಣಂ ತಾನಾಗಿ ಮತ್ತಂ ಸಕಳವಿವಿಧಶಸ್ತ್ರಾಂಗವಿದ್ಯಾವಿಶೇಷ
ದ್ವಿಗುಣಂ ತಾನಾಗಿ ಮತ್ತಂ ಗಜತುರಗಸಮಾರೋಹವಿದ್ಯಾವಿಶೇಷ
ತ್ರಿಗುಣಂ ತಾನಾಗೆ ಪೆಂಪಂ ತಳೆದನವನಿಯೊಳ್ ಸರ್ವವಿದ್ಯಾಸಮರ್ಥಂ ೮೩

ಮತ್ತೇಭವಿಕ್ರೀಡಿತ

ಸುಚತುಷ್ಷಷ್ಟಿಕಳಾವಿಳಾಸಮಹಿಮಾತಿಪ್ರೌಢಿಮಾಢೌಕಿತೋ
ದ್ವಚನೋಚ್ಚಾರಣಚಾಮರೀಪರಮಸೀಮಾಭೂಮಿಯಪ್ಪಾ ಮಹಾ
ತಿಚಮತ್ಕಾರನ ಮುಂದೆ ಮತ್ತಿನಳಿವಿದ್ಯಾಗರ್ವಿತರ್ ಗರ್ವಮಂ
ಪ್ರಚುರಂ ಸ್ವೇದದ ರೂಪಿನೊಂದುನೆವದಿಂ ಬಿಟ್ಟರ್ದರುದ್ದೈನ್ಯದಿಂ ೮೪

ಚಂಪಕಮಾಲೆ

ಅಱಿಯದ ವಿದ್ಯೆಗಳ್ ಜಗದೊಳಿಲ್ಲವಱಿಪುಪ್ಪುವ ಗೋಷ್ಠಿಗಳ್ಗೆ ಮೇಣ್
ನೆಱೆಯವು ಪೊತ್ತುಗಳ್ ನಿಜಯಶೋವಿಸರಕ್ಕೆ ಸಮಸ್ತದಿಕ್ಕುಗಳ್
ನೆಱೆಯವು ಸದ್ಗುಣಸ್ತವನದೇಳ್ಗೆಗೆ ಶೇಷನಶೇಷಜಿಹ್ವೆಗಳ್
ನೆಱೆಯವು ತತ್ಕುಮಾರನ ನೆಗಳ್ತೆ ಪೊಗಳ್ತೆಗಳುಂಬಮಾಗದೇ ೮೫

ಉತ್ಪಲಮಾಲೆ

ತಾನೆ ಕಳಾವಿಶೇಷನಿಧಿ ತಾನೆ ವಿವೇಕದ ಚಾಗದಾಗರಂ
ತಾನೆ ಸಮಸ್ತಸೌಖ್ಯನಿಧಿ ತಾನೆ ವಿಶೇಷಿತಚಾರುಯೌವನಂ
ತಾನೆ ಜಗತ್ರಯೈಕಗುರು ತಾನೆ ಜಗತ್ರಿತಯಾಧಿನಾಯಕಂ
ಮಾನ್ಯನುಮೆಂದೊಡಾ ಜಿನಕುಮಾರನ ಪುಣ್ಯಮನೇನೊ ಬಣ್ಣಿಪೆಂ ೮೬

ವಚನ : ಇಂತಾ ಧರ್ಮನಾಥಕುಮಾರನಲ್ಲಿ ಸಹಜಮಾದ ಮತಿಶ್ರುತಾವಧಿ ಬೋಧಬೀಜದಿಂ ನಿರವಶೇಷಿತಕಳಾಂಕುರಸಂಕುಳಂ ಬಳೆದು ಸಫಳಮಾಗಿರ್ಪುದುಂ

* ವಿದ್ಯೋತ್ಕರ್ಷಣ (ಗಚ)

ಮಹಾಸ್ರಗ್ಧರೆ

ನಿಜಪಾದಾಕ್ರಾಂತಲೋಕಂ ಕುವಳಯಸುಖದಂ ಪಂಕಜಾತಪ್ರಶೋಷಂ
ತ್ರಿಜಗತ್ಸಂತಾಪಹೋದಕ್ಷನನವೃತಕಪಂ ನೂತ್ನನಕ್ಷತ್ರಕಾಂತಂ
ನಿಜಯಂ ಸನ್ಮಾರ್ಗವೃತ್ತಂ ಪರಸಕಳಕಳಾಸ್ಫೂರ್ತಿಸಂಪೂರ್ಣನಾಗಿ
ದುರ್ಜನಸ್ತುತ್ಯಂ ಕುಮಾರಂ ಶಶಿಯವೊಲೆಸೆದುಂ ಕಪ್ಪುಮಂ ತಾಳ್ದಿತಿಲ್ಲಂ ೮೭

ವಚನ : ಮತ್ತಮಾ ಧನ್ಯನ ತ್ರಿಜಗನ್ಮಾನ್ಯನೆನಿಸಿಪ್ಪ ಪದಾಸ್ಯತಾಗುಣಮಂ ಪೊಗಳ್ವಡೆನ್ನಳವಲ್ತು

ಶಾರ್ದೂಲವಿಕ್ರೀಡಿತ

ಪಾತ್ರಾಪಾತ್ರವಿವೇಕದಿಂ ಜಿನಕುಮಾರಂ ನೂಳ್ಪ ಸದ್ದಾನಮಂ
ಧಾತ್ರೀಸ್ತುತ್ಯಮನಂದು ಕೇಳ್ದು ಪಿರಿದುಂ ಸೋಲ್ತುಮ್ಮಳಂ ಪೆರ್ಚಿ ತ
ಚ್ಚೇತೋವೃತ್ತಿಯನೆಯ್ದೆ ಬಿಟ್ಟು ಮರನಾಯ್ತಾ ಕಲ್ಪವೃಕ್ಷಂ ಮಹಾ
ಚಿಂತಾರತ್ನಮದಾಯ್ತು ಕಲ್ಲು ಪಶುವಾಯ್ತಾ ಕಾಮಧೇನು [1]ಧ್ರುವಂ[1] ೮೮

ವಚನ : ಮತ್ತಮಾ ಕುಮಾರೋತ್ತಮಂ ನಿರವಧಿಚತುರುದಧಿವನನಿಷಣ್ಣ ಕಿನ್ನರೀಜನ ಸಂಗೀಯಮಾನ ಮಾನನೀಯ ವಿಶದತರ ನಿಜಯಶಸ್ತೋಮದಿಂ ಧವಳೀಕೃತನಿಖಿಳ ದಿಕ್ಪಾಳಕನಿಳಯನಪ್ಪುದುಂ

ಚಂಪಕಮಾಲೆ

ಕುವರನ ಕೀರ್ತಿಯೆಂಬ ಸತಿ ತನ್ನ ಪತಿವ್ರತಮಂ ಜಗಕ್ಕೆ ತೋ
ಱುವ ಬಗೆಯಿಂದೆ ಮಿಂದು ಸುರಗಂಗೆಯೊಳಂ ಬಲಸಂದು ದಿಕ್ಕಿನಾ
ರವರರನೇಱುವಾರಿನಿಧಿಮಂಡಳಮಂ ಕಳಿದೊಲ್ದು ಮುಟ್ಟಿದಳ್
ಜವದೊಳೆ ಕೂಡಿ ವಿಷ್ಣುಪದಮಂ ಧರಣೇಂದ್ರಫಣಾಗ್ರಭಾಗಮಂ ೮೯

ವಚನ : ಮತ್ತಮತ್ಯುಜ್ಜ್ವಳ ಪರಿಸ್ಫೂರ್ಜದುರ್ಜಯ ತೇಜೋವಿರಾಜಮಾನನಪ್ಪುದುಂ

*

ಮಹಾಸ್ರಗ್ಧರೆ

ಜಿನದತ್ತೋಗ್ರಪ್ರತಾಪಂ ಪಸರಿಸಿ ಜಗದೊಳ್ ತುಂಬೆ ಶೀತಾಂಶುಬಿಂಬಂ
ದಿನಕೃದ್ಬಿಂಬಂಬೊಲಾಯ್ತಾಗಸಮುಮುದಯರಾಗಾಂಕಮೆಂಬಂತಿರಿರ್ದ
ತ್ತನುರಕ್ತಂಬೆತ್ತುದುರ್ವೀತಳಮನಳಕುಮಾರಂಬೊಲಿರ್ದರ್ ದಿನೇಶರ್
ಜನಮೆಲ್ಲಂ ರಾಗಮುಂ ತಾಳ್ದಿದುದತಿಶಯದಿಂದುದ್ಯದಾದಿತ್ಯನನ್ನಂ ೯೦

1 ಧ್ರುವಮಂ (ಗಜ) * ದೇವರ ಪ್ರತಾಪ (ಗಜ)

[1]ಪರ[1]ದುಸ್ಸಹ್ಯಪ್ರತಾಪಂ ಬುಧಗುರುಕವಿ ಸಂಸೇವ್ಯಮಾನಂ ವಿನೀಲಾಂ
ಬರರಮ್ಯಂ ಲೋಕಮಿತ್ರಂ ಬಹಳತರತಮೋನಾಶನಪ್ರೌಢಿದಕ್ಷಂ
ಕರದಿಗ್ವ್ಯಾಪ್ತಂ ಸಮುದ್ಯತ್ತರುಣತರಣಿಯೆಂಬಂದದಿಂ ಧರ್ಮನಾಥಂ
ನರಪದ್ಮಾನಂದನಂ ದಲ್ ಭುವದೊಳನಿಶಂ ಪೆರ್ಚಿಸುತ್ತಿರ್ದನಾದಂ ೯೧

ವಚನ : ಇಂತತೀವಪ್ರತಾಪಪ್ರಭಾವದಿಂ ಪ್ರವಿಭಾಸನವುನಪ್ಪ ಕೆಯ್ಯುದುಂ

ಚಂಪಕಮಾಲೆ

ಒಡನೊಡನಾ ಕುಮಾರಕನ ಬೆಂಬಳಿಯೊಳ್ ಮಿಗೆ ಪಿಂದುಗೊಂಡು ಸಂ
ಗಡದೊಳೆ ಕೂಡಿಬಂದರಧಿರಾಜಕುಮಾರಕರಂದನೇಕರುಂ
ತಡೆಯದೆ ತಾರಕಾವಿತತಿಗಳ್ ಧ್ರುವತಾರೆಯ ಪಿಂದೆ ಬರ್ಪವೊಲ್
ಬಿಡದೆ ವಿನಿರ್ಮಲಾಂಬರದೊಳೊಪ್ಪಿರೆ ತನ್ಮಯ ಕಾಯಕಾಂತಿಗಳ್ ೯೨

ವಚನ : ಮತ್ತಂ ಪರಿವಾರಕರಾದ ದಿವಿಜಕುಮಾರಕರತೀವಸ್ವೈಕುರ್ವಣವಿಕ್ರಿಯಾವಿಭವದಿಂದುದಯಿಸಿದನೇಕವಿಧರೂಪ ಭಾಷಾವೇಷಾದಿ ವಿನೋದಂಗಳಿಂ ಪಾಡಿಯುಂ ಪಾಡಿಯುಮೋದಿಯುಂ ಬಗೆದ ವಾಹನಂಗಳಾಗಿಯೊಡಂಬಡುವೆಡೆಗೆ ಕೊಂಡುಪೋಗಿಯುಮಾ ಜಿನಕುಮಾರಕನಿಚ್ಛೆಯರಿಂದು ಓಲೈಸಿ ಮೆಚ್ಚಿಸುತ್ತುಮಿರೆ

ಚಂಪಕಮಾಲೆ

ಕೆಲರುರಿಲಿಂಗಮಾಗಿ ಕಡಲಂ ಕಡೆವಂತೆಯೊಲಾಗಿ ಕಾಳದೊಳ್
ಕೆಲಸಿದ ಜೊನ್ನವಾಗಿ ಪಗಲೊಳ್ ತಡವಾಗಿರುಳಾಗಿ ತೋಱಿದರ್
ಕೆಲರುಱಿತಮಲ್ಲರಾಗಿ ಪೊಣರ್ದರ್ ಕೆಲರುಂ ತಗರಾಗಿ ಕಾದಿದರ್
ಕೆಲರಿಭರೂಪರಾಗಿ ಮೊಗವಿಕ್ಕಿದರಾತನ ಮುಂದೆ ಚೋದ್ಯದಿಂ ೯೩

ಕಂದ : ಗಿಳಿಗಳ ರೂಪಂ ಕೈಗೊಂ
ಡೆಳಸುವಿನಂ ಕಾವ್ಯಭರತನಾಟಕಶಾಸ್ತ್ರಂ
ಗಳನೋದಿ ಕುವರನಂ ಬಗೆ
ಗೊಳಿಸಿದರಾ ಸುರಕುಮಾರರತಿಕೌತುಕದಿಂ ೯೪

ವಚನ : ಅಂತುಮಲ್ಲದೆಯುಂ

ಚಂಪಕಮಾಲೆ

ಮಿಗುವ ವಿನೋದವಿದ್ಯೆಗಳಿನಾ ಸುಕುಮಾರನನೆಯ್ದೆ ಮೆಚ್ಚಿಸಲ್
ಬಗೆದು ಕೆಲಂಬರೋಲಗಿಪ ದೇವಕುಮಾರರಂದು ತೋಱೆ ತ
ಜ್ಜಗದೊಳತೀವವಿಸ್ಮಯಮನಾಗಿಪ ಚಾರುಮಹೇಂದ್ರಜಾಲಮುಂ
ನಗಿಸಿದರಾತನಂ ಕೆಲಬರೊಪ್ಪುವನೇಕವಿಕಾರವೇಷದಿಂ ೯೫

---

[1] ಪಿರಿ (ಗ)

ವಚನ: ಇಂತು ಪಲವುತೆಱದ ಲೀಲಾವಿನೋದಂಗಳಿಂ ಪ್ರೊತ್ತಂ ಕಳಿಪುತ್ತುಮಭಿ ನವಯೌವನಾವಸ್ಥೆಯನಪ್ಪುಕೆಯ್ವುದುಂ

ಕಂದ: ದಶವಿಧಭೋಗಂಗಳನಂ
ದೊಸೆದನುಭವಿಸುತ್ತುಮಿರ್ದನಾ ಸುಕುಮಾರಂ
ಪೊಸಪರಿಮಳಂಗಳಿಂ ಸಂ
ತಸದಿಂ ಮುಜುಂದುಂಬಿ ಬಿಡದೆ ಸೇವಿಪ ತೆಱದಿಂ ೯೬

ಮಹಾಸ್ರಗ್ಧರೆ
ಅತಿಚಿತ್ರಂಬೆತ್ತ ನಾನಾಪರಿಪರಿಯ ಸುವಸ್ತ್ರಂಗಳಂ ನೂತ್ನರತ್ನ
ಪ್ರತತಿವ್ಯಾಕೀಲಿತಾಲಂಕರಣತತಿಗಳಂ ಪುಷ್ಪಮಾಲ್ಯಂಗಳಂ ವಿ
ಸ್ತೃತ ಸೌರಭ್ಯಾನುಲೇಪಂಗಳನನತಿಶಯದಿವ್ಯಾನ್ನಪಾನಂಗಳಂ ರಾ
ಜಿತಹಂಸೀತೂಳತಲ್ಪಂಗಳನಿವು ಮೊದಲಾಗಿರ್ದ ಸದ್ವಸ್ತುಗಳಂ ೯೭

ಚಂಪಕಮಾಲೆ
ಕೊಡುವುದು ಕಲ್ಪವೃಕ್ಷಮದು ಕೊಟ್ಟವನೋಲಗಿಪಂ ಪುರಂದರಂ
ತೊಡಿಸುವರಂದನಂ ಕುಶಲದೇವಿಯರೊಳ್ಳಿಸುತ್ತುಮಿರ್ಪರಿಂ
ತೆಡೆವಿಡದಾವಗಂ ಪರಮಭೋಗವಿಭೂತಿಯನೆಯ್ದೆ ತಾಳ್ದಿದಂ
ತಡೆಯದೆ ಧರ್ಮನಾಥನನವದ್ಯಮನೋಹರವಾದಿವಸ್ತುವಿಂ ೯೮

ವಚನ: ಇಂತಾ ಧರ್ಮನಾಥಕುಮಾರಂ ಕುಮಾರಕಾಲದೊಳನೇಕಪ್ರಕಾರ ಮಜ್ಜನಭೋಜನಾದಿ ಭೋಗೋಪಭೋಗಾನುಭವವಿಭವಮನಪ್ಪುಕೆಯ್ದು ಸುಖದಿನಿರುತ್ತುಮಿರೆ

ಚಂಪಕಮಾಲೆ
ಪರಮಕುಮಾರನಂ ದಿವಿಜನಾಯಕನುತ್ತಮಭಕ್ತಿಯಿಂ ಸುರಾ
ಸುರ ನಿಕುರುಂಬಕಂ ಬೆರಸಿಬಂದಭಿಪೂಜಿಸುಮಂ ತ್ರಿಕಾಲದೊಳ್
ಪಿರಿದುಮನರ್ಘ್ಯವಸ್ತು ದೊರೆಕೊಂಡೊಡದಂ ಘನಯತ್ನದಿಂದಮಾ
ದರಿಸಿ ವಿಚಕ್ಷಣಂ ಪ್ರತಿದಿನಂ ಪರಿರಕ್ಷಿಸದಿರ್ಪನಾವನೋ ೯೯

*

ವಚನ: ಮತ್ತಮಾ ಧರ್ಮನಾಥಕುಮಾರಂ ಮುನ್ನಮೆ ಲೋಕತ್ರಯೈಕ ಸ್ವಾಮಿಯಪ್ಪುದನಱಿದಿರ್ದೊಡಮಾ ಮಹಾಸೇನಮಹಾರಾಜಂ ನಿಜತನೂಜನೆಂಬೀ ನುಂದೆನಳದಿಂದೊಂದಿದ ಮೋಹನೀಯೋದ್ರೇಕ ಪರಿಪಾಕದಿಂ ಮೂಱುಂಲೋಕಕ್ಕತೀವ ಕೌತುಕಮಪ್ಪಂತಿರೆ ಯುವರಾಜಪಟ್ಟಬದ್ಧಮಂಗಳೋತ್ಸವಕರಣಮುಖದಿಂ ತನ್ನಯ

* ಯುವರಾಜ ಪಟ್ಟ (ಗಚ)

ಸಂಪನ್ನತಾಪ್ರಭಾವಮನಿಸ್ಸಡಿಯಾಗಿ ಪ್ರಕಟೀಕರಿಸಲ್ವೇಡಿ ಮಹಾಮಹಿಮೋತ್ಸವ ವಿಭೂತಿಯಿಂದಾ ಕುಮಾರವರಂಗೆ ಯುವರಾಜಪಟ್ಟಮಂ ಕಟ್ಟುವುದುಂ

ಉತ್ಪಲಮಾಲೆ

ಮಂಗಳಗೀತಮಂ ಬಿಡದೆ ಪಾಡುವ ಮಂಗಳಗದ್ಯಪದ್ಯಮಂ
ಪಿಂಗದೆಯೋದುತಿರ್ಪ ಬಿಡುಮುತ್ತಿನ ಸೇಸೆಯನಿಕ್ಕುವೋಳಿಯಿಂ
ಮಂಗಳನಾಟ್ಯಮಂ ಮುದದಿನಾಡುವ ಮಂಗಳಹೃದ್ಯವಾದ್ಯಮಂ
ಸಂಗಡದಿಂದೆ ಬಾಜಿಸುವ ಸಂಭ್ರಮಮಾಕ್ಷಣಮುಣ್ಮಿತೆತ್ತಲುಂ ೧೦೦

ಕಂದ: ಪರಸುವ ಕಾಣಿಕೆಯಿಕ್ಕುವ
ಭರದಿಂ ಪೊಡವಡುವ ಬಿನ್ನಹಂ ಮಾಡುವ ಬಂ
ಧುರಸಂಭ್ರಮಕೋಳಾಹಳ
ಮುರವಣಿಸಿತ್ತಾ ನೃಪಾಳಮಣಿಮಂಡಪಮೊಳ್ ೧೦೧

ಶಾರ್ದೂಲವಿಕ್ರೀಡಿತ

ಆಹಾರಾಭಯಶಾಸ್ತ್ರಭೇಷಜ ಮಹಾದಾನಂಗಳಂ ಮಾಳ್ಪ ಚೇ
ತೋಹಾರಿಸ್ತವನೀಯಭರ್ೂಜಿನಪೂಜೋತ್ಸಾಹಮಂ ಮಾಳ್ಪ ಸ
ದ್ವ್ಯಾಹಾರಂಗಳಿನೆಲ್ಲರುಂ ಕುವರನಂ ಕೊಂಡಾಡುವುದ್ಯೋಗದಿಂ
ಗೇಹಂ ಪತ್ತನಮುಂ ಮಹಾಮಹಿಮೆಯಂ ತಾಳ್ದಿತ್ತದಾಶ್ಚರ್ಯಮಂ ೧೦೨

ಉತ್ಪಲಮಾಲೆ

ಯಾಚಕಕೋಟಿಗಳ್ ಬಿಡದೆ ಬೇಡಿದುದಂ ತಡವಿಲ್ಲದೀವ ಕಾ
ಲೋಚಿತದಲ್ಲಿ ಕಲ್ಪತರುವೆಂಬಭಿಶಂಕೆಯನುಂಟುಮಾಡಿದಂ
ಶ್ರೀಚರಿತಂ ತದೀಯಜನಕಂಗೆ ವಿಶೇಷಿತಚಿತ್ರಪತ್ರಕಂ
ಸೂಚಿತವಿಕ್ರಮಂ ಬಹಳಮೂಲಬಳಾನ್ವಿತನಾದಕಾರಣಂ ೧೦೩

ವಚನ: ಇಂತು ಯುವರಾಜರಾಜ್ಯಾಭಿಷೇಕಪುರಸ್ಸರಂ ಪ್ರಾಜ್ಯಪ್ರಭಾವನಾವಿಶೇಷದಿಂದಾ ಧರ್ಮನಾಥಕುಮಾರಂಗೆ ತಂದೆಯಪ್ಪ ಮಹಾಸೇನಮಹಾರಾಜಂ ಯುವರಾಜ ಪಟ್ಟಮಂ ಕಟ್ಟಿ ನಿರಂತರಿತಸಂತೋಷದಂತಮನೆಯ್ದು ಸುಖದಿನಿರ್ಪುದುಂ

ಉತ್ಪಲಮಾಲೆ

ಪುತ್ರಮನಂತಸಂತತಿವಿವರ್ಧನಕಾರಣಮಾಗಿ ತಂದೆತಾ
ಯ್ಗಳ್ತ್ವರಿತಂ ದಲಾ ಜಿನಕುಮಾರವರಂಗೆ ವಿವಾಹಕಾರ್ಯಮಂ
ಬಿತ್ತರದಿಂದೆ ಮಾಳ್ಪ ಬಗೆಯಂ ಬಗೆದಿರ್ದವರಂದು ಕೇಳಿದರ್
ತತ್ತನುಜಾತನಂ ಬಿಡದೊಡಂಬಡಿಸುತ್ತುಮನೂನಮೋಹದಿಂ ೧೦೪

ವಚನ : ಇಂತೆಂತಾನುಮೊಡಂಬಡಿಸಿ ವಿವಾಹಕಲ್ಯಾಣಮನಾತಂಗೆ ಮಾಳ್ಪುಜ್ಜುಗದಿಂ ತದ್ಯೋಗ್ಯಕನ್ಯಾನ್ವೇಷಣಪರಾಯಣರಾದ ಮಹಾಸೇನಮಹಾರಾಜನುಂ ಸುವ್ರತಾಮಹಾದೇವಿಯುಂ ಧರ್ಮನಾಥಕುಮಾರನಂ ನೋಡಿ ಪರಮಾನಂದಸಂದೋಹದೊಳೊಂದುತ್ತುಂ ತ್ಯಾಗಭೋಗಮನಪ್ಪುಕೆಯ್ದು ಸುಖದಿನಿರುತ್ತುಮಿರೆ

ಮಹಾಸ್ರಗ್ಧರೆ

ಕುಮರಂ ಧರ್ಮಪ್ರಭಾಸಸ್ಥಿತಿಯನೆ ಜಗದೊಳ್ ಪೆರ್ಚಿಸುತ್ತಿರ್ದನಾದಂ
ಸುವಿಶೇಷಾಶೇಷವಿದ್ಯಾಜಯನಿಧಿ ವಿಧುಬಿಂಬಾಯಮಾಸಂ ಸದಾನಂ
ಪ್ರವರಾಚಾರೋದ್ಧುರಂ ಬಾಹುಬಲಿಸುಕವಿರಾಜಂ ರವಿಸ್ಫಾರತೇಜಂ
ಭುವನಸ್ತುತ್ಯಂ ಪ್ರಸತ್ಯಂ ನತಬುಧನಿವಹಂ ಚಾತುರೀಜನ್ಮಗೇಹಂ ೧೦೫

ಗದ್ಯ : ಇದು ಸಕಳಭುವನಜನವಿನೂಯಮಾನಾನೂನ ಮಹಿಮಾಮಾನನೀಯ
ಪರಮಜಿನಸಮಯ ಕಮಳಿನೀಕಳಹಂಸಾಯಮಾನ ಶ್ರೀಮನ್ನಯಕೀರ್ತಿ
ದೇವಪ್ರಸಾದಸಂಪಾದಪಾದನಿಧಾನದೀಪವರ್ತಿಯುಭಯಭಾಷಾ
ಕವಿಚಕ್ರವರ್ತಿ ಬಾಹುಬಲಿಪಂಡಿತದೇವ ಪರಿನಿರ್ಮಿತಮಪ್ಪ
ಧರ್ಮನಾಥ ಪುರಾಣದೊಳ್ ಧರ್ಮತೀರ್ಥಂಕರನ
ಬಾಲಕ್ರೀಡಾವಿನೋದಪರಿವ್ಯಾವರ್ಣನಂ

**ನವಮಾಶ್ವಾಸಂ**

# ದಶಮಾಶ್ವಾಸಂ

ಕಂದ: ಶ್ರೀಮಜ್ಜಿನಧರ್ಮಮುನಾ
ಸೋಮಯಶಂ ಪ್ರಕಟಿಸುತ್ತುಮಿರ್ದಂ ಪುದಿಯಲ್
ಪ್ರೇಮೋತ್ಕಟರಸಪಿಶುನಂ
ರೋಮಾಂಚಂ ಸರಸಚತುರಕವಿಕುಳತಿಳಕಂ ೧

ವಚನ: ಮತ್ತಮಾ ಧರ್ಮನಾಥಕುಮಾರನೊಂದುದಿವಸಂ ವಿಕೀರ್ಣನಾನಾವರ್ಣಪರಿವರ್ಣ್ಯಮಾನ ರಮಣೀಯಮಾಣಿಕ್ಯಮಯಂ ಪೂರ್ಣಕಳಶಾಳಾಪಚೂಳಿಕಾಭಾಗಂಗಳಿಂ ಚೋಚುಂಬ್ಯಮಾನಾಂಬರತಳಮೆನಿಪ್ಪನೇಕಜಾತೀಯಚತುರರಚನಾವಿಶೇಷಾತಿಶಯದಿಂದಶೇಷಜನಕ್ಕಾಶ್ಚರ್ಯಕಾರಿಯಾಗಿ ಪುಟಮಿಕ್ಕಿ ಮೆಱುಗುವ ಕಡೆಯಾಣಿಯ ಮಿಸುನಿಯಿಂ ಸಮೆದು ಥಳಥಳಿಸಿ ಪೊಳೆವ ನೆಲೆಮಾಡದ ಮೇಲೆ ಮಂಡಳಿಕ ದಂಡನಾಥ ಸಾಮಂತ ಸೇನಾನಾಯಕ ಪ್ರಧಾನಪಸಾಯಿತರ್ ಮುಖ್ಯಮಾದಖಿಳಪರಿವಾರಂಬೆರಸು ಸರ್ವಾವಸರಸಮಯಮಾಗಿ ಒಡ್ಡೋಲಗಂಗೊಟ್ಟು ಲೀಲೆಯಿಂದಿರ್ಪುದುಂ

ಕಂದ: ತಂದೆಯುಮಾ ಸಭೆಗಾಗಳ್
ಬಂದುಚಿತಸ್ಥಾನದಲ್ಲಿ ಕುಳ್ಳಿರ್ದ ಮಹಾ
ನಂದಮನೆಯ್ದುತ್ತಿರ್ದಂ
ನಂದನನಂ ನೋಡಿನೋಡಿ ಕಣ್ದಣಿವಿನೆಗಂ ೨

ವಚನ: ತದನಂತರಂ

ಚಂಪಕಮಾಲೆ

ಸಕಳನೃಪಾಳಮೌಳಿಮಣಿರಂಜಿತಪಾದನ ತತ್ಸಭಾಪ್ರವೇ
ದಿಕೆಗತಿವೇಗದಿಂ ಧವಳಲಂಬಿತಕೂರ್ಚಧರಂ ಸುಶುಭ್ರಕಂ
ಚುಕ ಪರಿಶೋಭಿತಂ ಪೃಥುಳಕುಕ್ಷಿತಳಂ ಧೃತಚಿತ್ರವೇತ್ರಯ
ಷ್ಟಿಕನಿರದೆಯ್ದೆ ಬಂದನುೞಿ ದೂತನದೊರ್ವನುಪಾತ್ತಲೇಖನಂ ೩

ವಚನ: ಇಂತು ಪಿರಿದುಮನರ್ಘ್ಯಂಗಳಾದ ಪಾಗುಡಂಗಳಂ ಕೊಂಡುಬಂದು ಪ್ರಥಮರಾಜದ್ವಾರೋಪಾಂತದೊಳ್ ನಿಂದ ದೂರದೇಶಾಯಾತಮಾನವನಂ ಕಂಡು

ಪ್ರತಿಹಾರಕಂ ಪೋಗಿ ತದಾಗಮನವಾರ್ತೆಯನರಸಂಗೆ ಬಿನ್ನಪಂಗೆಯ್ಯೆ ಬರವೇಳೆಂಬುದುಮಾ ದೂತಂ ಪೋಗಿ ಸಭಾಸದನದೊಳಗಂ ಪೊಕ್ಕು ನಿರ್ಭರಭಕ್ತಿಯಿಂದೀರ್ವಗಂ ಸಾಷ್ಟಾಂಗವೆರಗಿ ಪೊಡವಂಟು ಭೂಪತಿ ಭ್ರೂಭಂಗಚ್ಛದಪರಿಸಂಜ್ಞೆ ತವುಪ್ಪ ತದುಚಿತಮಾದ ಮುಂದಣ ಬಲದ ಕೆಲದ ಸ್ಥಾನದೊಳ್ ಕುಳ್ಳಿರಲಾ ದೂತನ ಮೊಗಮಂ ಭೂತಳಾಧಿಪತಿ ನೋಡಿ ನೀಂ ಬಂದ ಕಾರಣಮೇನೆಂಬುದುಮಾತಂ ತನ್ನುತ್ತರೀಯಾಂಚಳಮನಧರಪಲ್ಲವಸಮೀಪಕ್ಕೆ ತಂದು ಬಿನ್ನಪಮೆಂದಿಂತೆಂದಂ

*

ಉತ್ಪಲಮಾಲೆ

ಮುಖ್ಯವಿದರ್ಭದೇಶದೊಡೆಯಂ ಕುರುವಂಶಪ್ರತಾಪರಾ
ಜಾಖ್ಯಕನುದ್ಘಕುಂಡಿನಪುರಾಧಿಪನಪ್ಪ ನರಾಧಿನಾಯಕಂ
ಸೌಖ್ಯದ ಜನ್ಮಭೂಮಿಯೆನಿಸಿರ್ಪಳ ತನ್ನ ಕುಮಾರಿಕಾಮಹಾ
ಪ್ರಖ್ಯತರ ಸ್ವಯಂಬರದೆ ನಿಮ್ಮ ಸುತಾನಮನಾರ್ಥಮಟ್ಟಿದಂ ೪

ವಚನ: ಇಂತೆಂದು ಬಿನ್ನಪಂಗೆಯ್ದನಂತರಂ

ಕಂದ: ತಾಂ ತಂದ ಪಾಗುಡಂಗಳ
ಸಂತತಿಯಂ ಕಾಣ್ಕೆಯಾಗಿ ಕೊಟ್ಟ ಬಳಿಕ್ಕಂ
ಸಂತೋಷಕಾರ್ಯಪರಿವೃ
ತ್ತಾಂತದಲೇಕಾರ್ಥಮೊಂದನಾತಂಗಿತ್ತಂ ೫

ಓದಿದನಂದೋಲೆಯುಮನಿಂ
ತಾದರದಿಂದೊರ್ವ ಸೇನಭೋವಂ ಮಿಗೆಸಂ
ಪಾದಿಸುತುಂ ಕಿವಿಗಳ್ಗತಿ
ಮೇದುರಪೀಯೂಷವರ್ಷಮಂ ಭರದಿಂದಂ ೬

ವಚನ: ಸ್ವಸ್ತಿ ಶ್ರೀಮನ್ಮಹಾಸೇನಮಹಾರಾಜಂ ತನ್ನಯ ಧರ್ಮನಾಥಕುಮಾರನನೆನ್ನ ಕುಮಾರಿ ಶೃಂಗಾರವತೀದೇವಿಯ ಸ್ವಯಂಬರವಿವಾಹಕಲ್ಯಾಣೋತ್ಸಾಹಕ್ಕೆ ಬೇಗಂ ಕಳಿಪುವುದೆಂದೋದುವುದುಮಂಗಂ ಕೇಳ್ದು ಸಭಾಜನಮೆಲ್ಲಂ ನಿರಂತರಿತಸಂತೋಷಭಾಜನಮಾಗಿ ಲೇಸುಲೇಸೆಂದು ಮಿಗೆ ಪೊಗಳ್ದು ಕೊಂಡಾಡುತ್ತುಮಿರ್ಪನ್ನೆಗಮಾ ದೂತಂ

ಕಂದ: ಪಡಿಯಂ ತೋಱುಪಡಿಲ್ಲದ
ಕಡುಚೆಲ್ವವಿಳಾಸದಿಂದೆ ಮನ್ಮಥನಂ ಕೈ
ಮಡಗದೆ ಗೆಲ್ದ ಕುಮಾರನ
ನಡಿಗಡಿಗಂ ನೋಡಿ ಬಗೆದು ವರಸಾದೃಶಮಂ ೭

* ಕುಂಡಿನಪುರಾಧಿಪ ಪ್ರತಾಪರಾಜನು ಪಾವುಡವ ಕಳಿಹಿದ ಠಾವು (ಗಚ)

ವಚನ : ಸಮನಂತರಮಿಾ ಕುಮಾರಂಗಾ ಕನ್ಯಾರತ್ನಮನುರೂಪಮೆಂಬಿದಂ ಸಭೆಗಂ ಸಭಾಪತಿಗಂ ತೋಱಿಸಲ್ವೇಡಿ

ಉತ್ಪಲಮಾಲೆ

ಆಕೆಯ ರೂಪಿನೊಂದು ಸುಭಗಾಕೃತಿ ನೋಳ್ಪಡಮೆಂತುಟಂತೆ ನಾ
ನಾಕುಶಲತ್ವಮೊಂದಿರಲದಂ ಪಟದೊಳ್ ಬರೆದು ಪ್ರಯತ್ನದಿಂ
ದೊಯ್ಯನೆಕೊಂಡುಬಂದು ಧರಣೀಪರಿಪಾಲನ ಮುಂದೆ ತೋಱಿದಂ
ಲೋಕಮನಃಪ್ರಲುಂಟನ ವಿಲಂಪಟಮಂ ಪಟಮಂ ವಿಚಿತ್ರಮಂ ೮

*

ವಚನ : ಆಕ್ಷಣಮಲ್ಲಲ್ಲಿಗುಚಿತಮಾಗಿ ಚಂಚತ್ಪಂಚವರ್ಣಕ್ರಮದಿಂದಂ ಬಣ್ಣಮಿಟ್ಟು ಮಿಱಮಿಱಮಿಂಚುವ ನಾನಾಪ್ರಕಾರ ತುಂಗಮಣಿಮಯಶೃಂಗಾರಭಂಗಿಯಿಂ ಬೆಡಂಗುವಡೆದು ಥಳಥಳಿಸಿ ಪೊಳೆಯುತ್ತುಮಿರ್ಪರ ಸಚಿತ್ರಭಾವಚಿತ್ರದಿಂ ವಿಚಿತ್ರಚಿತ್ತಭಾವಿಸ್ವಯಂವರ ವಿವಾಹಕಲ್ಯಾಣಕ್ಕೆ ಯೋಗ್ಯಳಾದ ಶೃಂಗಾರವತೀದೇವಿಯೆಂಬ ನೂತ್ನತರಕನ್ಯಕಾರತ್ನದ ರೂಪಚಿತ್ರಮಂ ಪಟಪರಿಲಿಖಿತಮಂ ಕಂಡು ಮನದಗೊಂಡು ಸಭೆಯುಂ ಸಭಾಪತಿಯುಂ ಬೆಕ್ಕಸಂಬೆಱಗಾಗಿ ಚಿತ್ತದೊಳ್ ಕೌತೂಹಳಂ ಕೈಮಿಕ್ಕು ನೆ[1]ರ್ಚ[1]ತ್ತುಮಿರೆ ಚಿತ್ರಮಯಕನ್ಯಕಾಪ್ರತಿಬಿಂಬರೂಪುಮಂ ನೋಡಿನೋಡಿ ಮುನ್ನೆಂದುಮಿಂತಪ್ಪ ವಿಸ್ಮಾಪಕರೂಪಮಂ ಸ್ವಪ್ನದೊಳಾದೊಡಂ ಕಂಡುದಿಲ್ಲೆಂದು ನಾಡೆಯುಂ ಕೊಂಡಾಡುತ್ತುಮಿರ್ದ ಮೂರ್ಧಾಭಿಷಿಕ್ತಂ ಕೆಲದೊಳ್ ಬರೆದಿರ್ದುದೊಂದು ನಿರವದ್ಯಮಾದ ಹೃದ್ಯಮಯಪದ್ಯಮಂ ಕಂಡು

ಉತ್ಪಲಮಾಲೆ

ಈಕೆಯ ರೂಪನಿರ್ದಪರಿಯಿಂ ಬರೆವನ್ನನದೊರ್ಬನುಂ ಮಹೀ
ಲೋಕದೊಳಿಲ್ಲ ಕೌಶಲವಿರಿಂಚನನಾದೊಡಮಿಾ ಘುಣಾಕ್ಷರ
ಪ್ರಾಕಟದಂದದಿಂ ಸಮೆದ ವಿಸ್ಮಯಕಾರಕಮಂ ತದೀಯ
ರೂಪಾಕೃತಿಯಂ ವಿನಿರ್ಮಿಸುವ ಪೊತ್ತಿನೊಳೆಯ್ದೆ ವಿಮೋಹಿಪಂ ಜಡಂ ೯

ಶಾರ್ದೂಲವಿಕ್ರೀಡಿತ

ಎಂತಕ್ಕೆಂತಕೆ ದೆಪ್ಪ್ರಯೋಗವಶದಿಂದಂ ಜಾಣನೊರ್ವಂ ಕಳಾ
ವಂತಂ ನೂರ್ಮಡಿಮಾದ ರೂಪಕಳೆಯಲ್ಲೊಂದಂದಮಂ ಕೊಂಡು ಮ
ತ್ತೆಂತುಂ ತತ್ಪ್ರತಿರೂಪಮಂ ಬರೆದನೆಲ್ಲಾ ಜೆಲ್ವಿನಂಶಂಗಳುಂ
ಚಿಂತಾಗೋಚರಿಗಳ್ ಸಮಂತು ಬರೆಯಲ್ಕೇಂ ಮೊಗ್ಗೆ ತತ್ಕಾಂತೆಯಾ ೧೦

---

[1] ಚ್ಚು (ಗ)

* ಪಟಮಂ ತೋಱಿದ ಠಾವು (ಗಚ)

ಇಂತೆಂದೋದುವುದುಂ ಸಭಾಜನಮುದೆಲ್ಲಂ ಕೇಳ್ದು ಕೊಂಡಾಡುತಂ
ಸಂತೋಷಂ ಮಿಗೆ ಮೆಚ್ಚಿಮೆಚ್ಚಿ ತಲೆಯಂ ತೂಗುತ್ತುಮಿರ್ದತ್ತು ಭೂ
ಕಾಂತಂ ವಿಸ್ಮಿತಚಿತ್ತನಾಗಿ ಮಗನೊಂದಾಶ್ಚರ್ಯಸೌಂದರ್ಯಮುಂ
ಕಾಂತಾರತ್ನದ ಚೆಲ್ವರೂಪಕಳೆಯಂ ನೋಡುತ್ತುಮಂತಿರ್ಪುದುಂ ೧೧

ವಚನ : ಮತ್ತಮಾ ಮಹೀಕಾಂತಂ ದುರಂತತಮಚಿಂತಾಪರವಶೀಭೂತಸ್ವಾಂತ ನಾಗಿ ತನ್ನೊಳಿಂತೆಂದಂ

ಕಂದ: ಎಲ್ಲಿಯದೀ ಸ್ತ್ರೀರತ್ನಮಿ
ದೆಲ್ಲಿಯನೀ ಚರಮದೇಹಧಾರಿಕುಮಾರಂ
ದುರ್ಲಭಮಿಮಾ ಸಂಬಂಧಂ
ತಲ್ಲಜಪುಣ್ಯಂಗೆ ಲೋಕದಲ್ಲಿರದುಂಟೇ ೧೨

ವಚನ : ಮತ್ತಮಾ ಸರೋತ್ತಮಂ ತನ್ನಿಕ್ಕೆಲದೊಳೆತ್ತಲುಂ ಮೊತ್ತಂಗೊಂಡು ಕುಳ್ಳಿರ್ದ ಕ್ಷತ್ರಿಯ ಕುಮಾರಕರ ನಗೆಮೊಗಂಗಳಂ ನೋಡುತ್ತುಮವರೊಡನಿಂತೆಂದು ನುಡಿದಂ

ಮತ್ತೇಭವಿಕ್ರೀಡಿತ

ಕುಲಮುಂ ಜವ್ವನಮುಂ ಮಹಾವಿಭವಮುಂ ಸತ್ಕೀರ್ತಿಯುಂ ಜಾಣ್ಮೆಯುಂ
ಛಲಮುಂ ಶೀಲಮುಮೆಂಬಿವಲ್ಲಿ ನೆಲಸಿರ್ದೀಕಾರಣಂ ಯೋಗ್ಯತಾ
ಕಳಿತಸ್ಥಾನಮದಾಯ್ತು ಕೊಳ್ಕೊಡೆಗೆ ಲೀಲಾಮಾತ್ರದಿಂ ಧಾರಿಣೀ
ತಳದೊಳ್ ದುರ್ಘಟಕಾರ್ಯಮುಂ ಘಟಿಸುಗುಂ ಪುಣ್ಯಪ್ರಭಾವಂಗಳಿಂ ೧೩

ಉತ್ಪಲಮಾಲೆ

ಎನ್ನ ಕುಮಾರನಲ್ಲದುಳಿದನ್ಯಕುಮಾರಕರಿಂಗೆ ಮಾಲೆಯಂ
ಕನ್ಯಕೆ ತತ್ಸ್ವಯಂಬರದೊಳಿಕ್ಕಳದೆಂದತಿಚಾರುಕೌಮುದೀ
ಪ್ರೋನ್ನತಚಂದ್ರಮಂ ಬಿಸುಟು ತಾರೆಗಳಂ ಸಲೆ ಪೊರ್ದದೆಲ್ಲಿಯುಂ
ಮಾನ್ಯರತೀವಮಾನ್ಯರುಮಮಲ್ಲದೆ ಪೊರ್ದರಿಳಾತಳಾಗ್ರದೊಳ್ ೧೪

ವಚನ : ಇಂತು ನಿರಂತರಿತಸಂತೋಷಮನೆಯ್ದಿ ನುಡಿಯುತ್ತುಮಿರ್ದ ಮೂರ್ಧಾಭಿಷಿಕ್ತಂ ತನ್ನಯ ಮಗನಪ್ಪ ಧರ್ಮನಾಥಕುಮಾರನ ಪ್ರಸನ್ನವದನಾರವಿಂದಮಂ ನೋಳ್ಪಾಗಳ್

ಚಂಪಕಮಾಲೆ

ಅತಿರಮಣೀಯಮಾಗಿ ಪಟದೊಳ್ ಬರೆದಿರ್ದ ನೃಪಾಳಪುತ್ರಿಯೊಂ
ದತಿಶಯಮಪ್ಪ ಚೆಲ್ವನತಿಕೌತುಕದಿಂದಮೆ ನೋಡುತಿರ್ದ ಭೂ
ಸುತಯುವರಾಜಕುಂಜರನ ರಾಗಸಮಾಕುಳಲೋಚನಂಗಳಂ
ಕ್ಷಿತಿಪತಿ ಕಂಡು ಭಾವಿಸಿದನೀಕೆಯೊಳುಂಟಭಿವಾಂಛೆಯೆಂಬಿದಂ ೧೫

ಕಂದ: ಈ ಕನ್ಯಾರತ್ನದ ಮೇ
ಲೀ ಕುಮರನ ಚಿತ್ತಮಾದುದಾಸಕ್ತವಿಡಂ
ದೊಯ್ಯನೆ ಬಗೆದಂ ಭೂಪಂ
ಲೋಕಮನೋವೃತ್ತಿಬೋಧನಮೆ ಬುದ್ಧಿಫಲಂ ೧೬

ವಚನ: ಅಂತಾ ಧರ್ಮನಾಥಕುಮಾರನ ಮನೋಗತ ಮನೋರಥಪರಿಣಾಮಮುಮಂ ತದಾಕಾರ ನಿರೀಕ್ಷಣದಿಂದನುಮಾನಿಸಿ ಸ್ವಯಂಬರಪರಿಣಯನನಿಮಿತ್ತಂ ಕುಂಡಿನಪುರಕ್ಕೆ ಕುಮಾರನಂ ಕಳಿಪುವುಜ್ಜುಗಂ ಮನದೊಳ್ ಕೆಯ್ಕೊಳ್ಕು ನೆರ್ಚುತ್ತುಮಿರೆ ಪ್ರಯಾಣ ಕಾರಣಂ ಸಮಕಟ್ಟಿಕೊಳ್ಳಿಮೆಂದು ಕುಮಾರಂಗಂ ಸಭೆಗಂ ಪೇಳ್ದು ತದುಚಿತ ಪ್ರತ್ಯಗ್ರೋದಗ್ರಸಾಮಗ್ರೀಸಮಗ್ರೀಕರಣಾರ್ಥಂ ಸಭೆಯಿಂದೆಳ್ದು ಪೋಗಿ

ಮತ್ತೇಭವಿಕ್ರೀಡಿತ

ಸಕಳಕ್ಷತ್ರಿಯ ಮಂತ್ರಿ ಮಂಡಳಿಕ ದಂಡಾಧೀಶ ಸಾಮಂತ ಸೈ
ನಿಕ ಸೇನಾಪತಿ ಮುಖ್ಯರಪ್ಪ ಪರಿವಾರಾನೀಕಮಂ ಮತ್ತಹಾ
ಸ್ತಿಕಮುಂ ಜಾತಿತುರಂಗಮಪ್ರಕರಮುಂ ಮೇಳೈಸಿದಂ ಕೂಡೆ ಕೌ
ತುಕಮಪ್ಪಂತೆ ವಿವಾಹಕಾರ್ಯಗಮನಕ್ಕಂ ಯೋಗ್ಯಸಾಮಗ್ರಿಯಂ ೧೭

ಚಂಪಕಮಾಲೆ

ಕುವರನ ಕೂಡೆ ಪೋಪ ಕಡೆಕಟ್ಟುಗಳಂ ಸಮಕಟ್ಟಿಕೊಟ್ಟು ದೂ
ತವರನ ಮಾತಿನಾಗ್ರಹಪರಂಪರೆಯಿಂ ಶುಭಲಗ್ನದಲ್ಲಿ ಮಾ
ನವಪತಿ ಬೇಗದಿಂ ಬಿಡಿಸಿದಂ ಪೊಜವೀಡನತೀವಸಂಭ್ರಮೋ
ದ್ಭವ ಘನಹೃದ್ಯವಾದ್ಯನಿನದಂ ಪುದಿಯಲ್ ದಶದಿಗ್ವಿಭಾಗಮಂ ೧೮

*

ಕಂದ: ಗುಡಿ ಗೂಡಾರಂ ಚೆಲ್ವಂ
ಗಡಿ ಚೌರಿಗೆ ಚಂಪೆ ತಿವುರಿ ದುಮ್ಮಳಮಿಮಜಿಱಂ
ದಡಸಿದ ಪಸುರಿಂ ಕಪ್ಪಿಂ
ಕಡುಗೆಂಪಿಂ ಮೆಱೆದುದನನ ಪೊಜವೀಡು ಕರಂ ೧೯

* ಕುಮಾರಪ್ರಯಾಣವ್ಯಾವರ್ಣನಂ (ಗಚ)

ವಚನ: ಮತ್ತಂ

ಕಂದ: ಪರಿಪರಿಯ ಬಣ್ಣವಣ್ಣಿಗೆ
ಬೆರಸಿದ ಕಡುಸಪುರಸೀರೆಗಳನುಟ್ಟು ಮನೋ
ಹರರತ್ನದ ತೊಡವುಗಳಂ
ಪಿರಿದಾಗಿಯೆ ತೊಟ್ಟು ಬಂದರರಸುಗಳೆಲ್ಲಂ ೨೦

ವಚನ: ಇಂತು ಸುತ್ತಲುಮೊತ್ತಿಪಿಡಿದ ಪಲವುಂತೆಱದ ಪಲ್ಲವಸತ್ತಿಗೆಗಳ ಮೊತ್ತಂಗಳಿಂ ತುಱುಗಿ ತಳ್ತು ಪೊಳೆದು ಬೀಸುವ ಹೇಮಚಾಮರಂಗಳ ಬಳಗಂಗಳಿಂದಳಂಕೃತರಾದ ಸಕಳರಾಜಕರಾಜನ್ಯಕಪ್ರಭೃತಿರಾಜಕುಮಾರರೆಲ್ಲಂ ಪಿರಿದುಮತಿಶಯಮಾಗಿ ಕೆಯ್ಗೆಯ್ದು ತಂತಮ್ಮ ವಾಹನಂಗಳನೇಱಿ ಸಮಸ್ತಹಸ್ತ್ಯಶ್ವರಥಪದಾತಿಲಕ್ಷಣಪ್ರಬಳ ಚಾತುರ್ದಂತಬಲಂಬೆರಸಿ ಬಂದರಮನೆಯ ಮುಂದಣ ವಿಶಾಳರಾಜಾಂಗಣದ ಮಂಗಳಾಯಮಾನಸಮುತ್ತುಂಗರಂಗಸ್ಥಳದೊಳೆತ್ತಲುಂ ಮೊತ್ತಂಗೊಂಡು ನೆರೆದು ಧರ್ಮನಾಥಕುಮಾರನ ನಿರ್ಗಮನಸಮಯದವಸರಮಂ ಪಾರುತ್ತುಂ ನಿಂದಿರ್ಪುದುಂ

ಚಂಪಕಮಾಲೆ

ಪಿರಿದುಮನರ್ಘ್ಯನೂತ್ನನವರತ್ನವಿನಿರ್ಮಿತದಿವ್ಯಭೂಷಣೋ
ತ್ಕರಮನೆ ತೊಟ್ಟು ಸಗ್ಗದೊಳಗಗ್ಗಳಮಾದ ವಿಚಿತ್ರವರ್ಣಬಂ
ಧುರವರವಸ್ತ್ರಮಂ ಮುದದಿನುಟ್ಟು ಮನೋಹರದಿವ್ಯಗಂಧಮಂ
ಭರವಸದಿಂದೆ ಪೂಸಿ ಕುವರಂ ಪರಿಭೂಷಿತನಾದನದ್ಭುತಂ ೨೧

ವಚನ: ಅಂತು ನಾನಾವಿಧ ನವೀನಶೃಂಗಾರಭಂಗಿಯನಂಗೀಕರಿಸಿದ ಧರ್ಮನಾಥಕುಮಾರಂ ನಿಜಕುಲವೃದ್ಧೆಯರ ಜಯಜೀವನಂದೇತ್ಯತ್ಯುಚ್ಚಾಶೀರ್ವಚನೋಚ್ಚಾರಣಸಮುಪಲಕ್ಷಿತಧವಳಮಂಗಳಕಳಮಾಕ್ಷತಂಗಳನಾಂತು ಪರಮಾನಂದಮಯಮೂರ್ತಿಕನಾಗಿ ತುಷ್ಟೀತರೋತ್ಸಾಹವಿರಾಜಮಾನನಿಜರಾಜಾಲಯಮಂ ಪೊಱಮಟ್ಟು ಬಂದು ರಾಜಾಂಗಣದೊಳ್ ನಿಂದಿರ್ದ ಮಸೃಣಮಣಿಮಯಕಿಂಕಿಣೀಗಣ ರಮಣೀಯಮಾಲಾಲಂಬಪಭೂಷಿತಮಾದ ಕನತ್ಕನಕಸ್ಥೂಳಘಂಟಾಜಾಳಜಟಿಳೀಕೃತಮಾಗಿರ್ದ ಚಂಚಚ್ಚಾಮೀಕರ ಚಾರುಚಾಮರಸಂಚಯಸಮಾಲಂಬನದಿಂದೊಪ್ಪಂಬೆತ್ತ ಸಿಂಧೂರಮುದ್ರಾಸಮಾರಂಜನಶೋಭೆಗಾಧಾರಮಾದ ಪೊಸಪೊಸಬಣ್ಣದಿಂದಂಚಿತ ಜಂಜೆಯಂ ಪಣ್ಣಿದ ಪಟ್ಟವರ್ಧನಗಜೇಂದ್ರಮನೇಱಿ ಸುಸ್ಥಳದಿಂ ಕುಳ್ಳಿರ್ದು ಸುತ್ತಲುಂ ಬಳಸಿನಿಂದ ಪರಿವಾರದ ಸಂಭ್ರಮಸಂಭ್ರಮಣಸಂಭೂತಕಳಕಳಕೋಳಾಹಳ ಶೋಭಾಸಮುತ್ಕರ್ಷಮಂ ನೀಡುಂ ನೋಡುತ್ತುಮಿರ್ಪುದುಂ

ಉತ್ಪಲಮಾಲೆ

ಸುತ್ತಲುಮೆಯ್ದೆ ತಳ್ತ ಪರಿವೇಷದೊಳೊಂದಿದ ಚಂದ್ರಮಂಡಳಂ
ಬಿತ್ತರದಿಂದೆ ನಾಲ್ಕುಮುಖಮಾಗಿರದೋಲಯಿಸಲ್ಕೆ ಬಂದವೊ
ಲುತ್ತಮಚಿತ್ರವರ್ಣಮಯಪಲ್ಲಮಶೋಭೆಗಳಾದ ನಾಡೆಯುಂ
ಮುತ್ತಿನ ಚೌಕ ಸತ್ತಿಗೆಗಳಂ ಪಿಡಿದಿರ್ದರತೀವಲೀಲೆಯಿಂ ೨೨

ಕಂದ : ಬೀಸಿದರಂದೊಲವಿಂದಂ
ಲೇಸಾಗಱುವತ್ತುನಾಲ್ಕುಚಮರಂಗಳನಾ
ಭೂಸೇವ್ಯಚರಣಕಂಗಭಿ
ಭಾಸುರಮಣಿದಂಡಮಂಡಿತಂಗಳನಾಗಳ್ ೨೩

ವಚನ : ಆಪೊತ್ತಿನೊಳ್

ಕಂದ : ಥಳಥಳಿಸಿ ಪೊಳೆವ ಮುಕುಟೋ
ಜ್ಜ್ವಳಚೂಡಾಮಣಿಮಯೂಖಮಂಜರಿಯಿಂದಂ
ಬೆಳಯಿಸುತಿರ್ದಂ ಗಗನ
ಸ್ಥಳದಲ್ಲಿ ಸಮಂತು ಶಕ್ರಚಾಪಶ್ರೀಯಂ ೨೪

ಅರುಣಮಣಿಕುಂಡಲಂಗಳ
ಕಿರಣಂ ನಗೆಮೊಗದ ಮೇಲೆ ಪಸರಿಸಲೆಸೆಗುಂ
ತರುಣತರಣಿಪ್ರಭಾವಳಿ
ಬೆರಸಿದ ಕನಕಾಂಬುಜಾತಮೆಂಬಂತೆವೊಲಂ ೨೫

ನವರತ್ನದ ಪದಕಮುಮಾ
ಕುವರನ ಕೊರಳಲ್ಲಿ ಚೆಲ್ವನಾಂತಿರ್ದುದು ತ
ನ್ನ ವಿಶಾಲಲಕ್ಷ್ಮಿಯಾಡುವ
ನವಿಲುಯ್ಯಲಿದೆಂಬ ಶಂಕೆಯಂ ಪುಟ್ಟಿಸುತುಂ ೨೬

ಚಂಪಕಮಾಲೆ

ಕ್ಷಿತಿನುತಧರ್ಮನಾಥನೆರಡುಂಘನಬಾಹುಗಳಗ್ರದಲ್ಲಿ ಮ
ತ್ತತಿರಮಣೀಯಬಾಹುವಳಯಂಗಳುವೊಪ್ಪಮನಾಳ್ದುವಾಕ್ಷಣಂ
ಪತಿಭಜನಾರ್ಥಮಾಗಿರದೆಬಂದು ದಿವಾಕರಚಂದ್ರಬಿಂಬಮು
ನ್ನತಭುಜಮೂಲಮಂ ಬಿಡದೆ ಪೊರ್ದಿ ಬರ್ದುಂಕುತುಮಿರ್ದುದೆಂಬಿನಂ ೨೭

ಕಂದ : ಅಂದು ಕಡುಚೆಲ್ವನಾಂತುವು
ಸೌಂದರಘನಪದ್ಮರಾಗಮಣಿಕಂಕಣದಿಂ
ಸಿಂಧೂರಾರುಣಕರಿಕರ
ದಂದದೆ ಮುಂಗೈಗಳಾ ಕುಮಾರಾಗ್ರಣಿಯಾ ೨೮

ಹರಿನೀಳಖಚಿತರಸನಾ
ಕಿರಣಂ ಕುವರನ ಸುನಾಭಿಕೂಪದೊಳಂ ತುಂ
ಬಿರಲದು ಪೋಲ್ತುದು ಯಮುನೆಯ
ಸಿರಿದೆನಿಸುವ ಸುಳಿಯ ಚೆಲ್ವನತಿರಮಣೀಯಂ ೨೯

ಮಾಣಿಕದ ಕಡೆಯದೊಡನುಱೆ
ಕಾಣಿಕೆಯುಂ ಪಡೆದ ಚೆಲ್ವಪೆಂಡೆಯದ ಮಣಿ
ಶ್ರೇಣಿಕೆ ರಂಜಿಸಿದತ್ತಾ
ಜಾಣನ ಪದದಲ್ಲಿ ರಾಗಮಿಮ್ಮಡಿಸುವಿನಂ ೩೦

ವಚನ: ಇಂತು ತೊಟ್ಟಂತಪ್ಪ ಷೋಡಶಾಭರಣಕಿರಣಂಗಳುಂ ಕಡುನಿಮಿರ್ದು ಕುಡಿಯಡರಿ ತಾಂ ಪೊದೆದಿರ್ದ ಸಪ್ಪುರಸೀರೆಯುಲ್ಲಿ ಪರಿಕಲಿಸಿ ರಂಜಿಸುತ್ತುಮಿರೆ ಪಂಚವರ್ಣ ವಿನ್ಯಾಸಕ್ರಮದಿಂ ಮಂಜಿಷ್ಠಾಶಂಕೆಯಂ ಸಂಕೆಱರಿಸುತ್ತುಮಿರ್ದುದಱ ಸೆಱಂಗ ಬೀಸುವ ಚಾಮರಂಗಳ ಗಾಳಿಯಿಂ ಸಂಚಳಿಸಿದ ಕದಕ್ಕದಿಸುತ್ತುಮಿರೆ

ಕಂದ : ಸಂಪನ್ನನ ರೂಪಂ ಮು
ನ್ನಂ ಪಲವುಂ ಬಾರಿ ಕಂಡೊಡಂ ಪುರನಾರೀ
ಕಂಪಾಕ್ಷಿಗಳುಂ ವಿಕಸನ
ಮುಂ ಪಡೆದವು ರವಿಯ ಕಂಡ ತಾವರೆಗಳವೊಲ್ ೩೧

ವಚನ : ಇಂತು ನಿರಂತರಿತ ಪೌರನಾರೀಜನಾದಿ ಸಮಸ್ತಪರಿಜನ ಪುರಜನಂಗಳ ಕಣ್ಗಳುಂ ಮನಂಗಳುಂ ಕಡುತವಕದಿಂದೊಡನೊಡವೋಗಿಯಾ ಕುವರನ ನಿರುಪಮರೂಪ ಮೆಂಬ ವಿಶ್ರಮಸ್ಥಾನದೊಳ್ ನೆಲಸಿನಿಂದು ತಣ್ಣಗೆ ತಣಿವುತ್ತುಮಿರ್ಪುದುಂ

ಕಂದ : ದೇವಕುಮಾರಿಯರೊಲವಿಂ
ಪೂವಿನ ಮಳೆಯಂ ಸಮಂತು ಕಱೆಯುತ್ತಿರ್ದರ್
ಭೂವಳಯಪಾಲಕನ ಮೇ
ಲೋವದೆ ಮಱುದುಂಬಿಗಳ್ ಕರಂ ಮೊರೆವಿನೆಗಂ ೩೨

ವಚನ: ಅಂತಾಕ್ಷಣಮಾ ಕುಮಾರನ ವಿಳಾಸದೊದವನೆಲ್ಲರುಮಲ್ಲಲ್ಲಿ ನೆರೆದು ನಿಂದು ನೋಡುತ್ತುಂ ಕಿಕ್ಕಿಱಿಂಗಿಱಿದು ಸಂದಣಿಸಿ ತಿಂತಿಣಿಗೊಂಡಿರ್ಪುದುಂ ಅನಂತರಂ

ಮಹಾಸ್ರಗ್ಧರೆ

ಜನತಾಕೋಳಾಹಳಂ ಮತ್ತಪರ ಕರಿಘಟಾಗರ್ಜಿತಂ ವಾಜಿರಾಜಿ
ಸ್ವನಮುಂ ನಿಸ್ಸಂಖ್ಯಶಂಖಪ್ರಪಟುಪಟಹಸತ್ಕಾಹಳಾಭೂರಿಭೇರೀ
ಧ್ವನಿಯುಂ ಭೋರೆಂದು ತಾನೊರ್ವರೊದಲೊಳೆ ಪಿರಿದುಂ ಘೂರ್ಣಿಸಲ್ ಕೂಡೆ ಪೆರ್ಚಲ್
ಮನದುತ್ಸಾಹಂ ಸಮಸ್ತರ್ ಪೊಗಳೆ ತಳರ್ದನಲ್ಲಿಂದಮಾ ಧರ್ಮನಾಥಂ ೩೩

ವಚನ: ಆ ಪ್ರಸ್ಥಾನಶಿಬಿರದಿಂದಂ ತಳರ್ದಾಗಳ್

ಚಂಪಕಮಾಲೆ

ಸಲೆನೆಲನೆಂಬ ಪೆರ್ಮಡದಿಯೆಣ್ದೆಸೆನೋಡಿರದೆಯ್ದೆ ಕೂಡಿಕೊಂ
ಡಲಘುವಿನೋದದಿಂ ಬಿಡದೆ ಪಾಡುತುಮಿರ್ದಪಳೆಂಬ ಮಾಳ್ಕೆಯಿಂ
ಬಲದೊಳಗುಣ್ಮಿಪೊಣ್ಮುವ ಮಹಾಪಟಹಧ್ವನಿ ಲೋಕಮೆಲ್ಲಮಂ
ಬಳಸುತುಮಿರ್ದುದಂದು ಕುವರಂ ನಡೆವಲ್ಲಿ ವಿವಾಹಕಾರಣಂ ೩೪

ನಿರುಪಮಭದ್ರಜಾತಿಗಜಮಂ ಪಡೆದೇಱಿ ಕರಾಗ್ರದಲ್ಲಿ ಭಾ
ಸುರತರಭೂರಿವಜ್ರನಿಶಿತಾಂಕುಶಮಂ ಪಿಡಿದಿರ್ದ ನಾಡೆಯುಂ
ಗುರುವಿನನುಜ್ಞೆಯಿಂದೆ ಪೊಱಮಟ್ಟುಱತಪೋಪ ಕುಮಾರಕಂ ಪುರಂ
ದರನ ವಿಭೂತಿಯಂ ಪಡೆದು ಸಂತಸಮಂ ಸುಮನರ್ಗೆ ಮಾಡಿದಂ ೩೫

ವಚನ: ಆ ಕುಮಾರನಿಕ್ಕೆಲದೊಳ್

ಕಂದ: ಓಜೋಗುಣದೊಡಗೂಡಿದ
ರಾಜದಳಂಕಾರದಿಂದಮೊಪ್ಪುವ ನೃಪರಾ
ರಾಜನ ಬೆಂಬಳಿಸಂದರ್
ಪೂಜ್ಯತರ್ರಾನುಗತ ಸಾಧುಶಬ್ದಂಗಳವೊಲ್ ೩೬

ಆ ಕುವರನ ಬಳಿಸಂದರ್
ಬೇಕೆಂಬ ಸಮಸ್ತಭೂಮಿಪಾಲಕರಾಗಳ
ನೇಕರುಮೆಂತು ಮದಾಳಿಗ
ಳೊಯ್ಕನೆ ಪೂಮಾಲೆಯೊಡನೆ ಪೋಪಂತೆವೊಲಂ ೩೭

ವಚನ : ಮತ್ತಂ

ಉತ್ಪಲಮಾಲೆ

ಆನೆಗಳೊಡ್ಡುಗಳ್ ಪಡೆದು ಕಾರ್ಮುಗಿಲೊಡ್ಡುಗಳೆಂಬ ಶಂಕೆಯಂ
ಮಾನವರ್ಗೀವುತುಂ ನಡೆದುಪೋಗುತಮಿರ್ದವವಂದು ಲೀಲೆಯಿಂ
ದಾನಜಲಂಗಳಂ ಕಱೆಯುತುಂ ಮಿಗೆಮಿಂಚುವ ಪೊನ್ನಚಾಮರಾ
ನೂನತಟಿಲ್ಲತಾವಳಿಗಳಿಂದಭಿರಂಜಿಸುತುಂ ಸಗರ್ಜಿತಂ ೩೮

ಕಂದ : ಪೊಳೆವ ಪರಿವೃತ್ತಕುಂಭಂ
ಗಳಿನೊಪ್ಪಮನಾಂತು ಪಂತಿಗೊಂಡಿಕ್ಕೆಲದೊಳ್
ಬಲದ ಮದಕುಂಜರಂಗಳ
ಬಳಗಂ ಜೆಲ್ವಾಯ್ತು ಮನೆಗಳೋಳಿಯ ತೆಱದಿಂ ೩೯

ವಚನ : ಬಳಿಯಂ

ಚಂಪಕಮಾಲೆ

ಅತಿಶಯವಾಯುವೇಗಯುತ ತುಂಗತುರಂಗಪುಂಗವಂಗಳ
ಪ್ರತತಿಕೆ ಕೂಡೆ ಮುಂದೆ ನಡೆಗೊಂಡುದು ವಾದ್ಯರವಕ್ಕೆ ತಕ್ಕವೊಲ್
ಗತಿಗಳ ಭೇದದಿಂ ಕುಣಿವುತುಂ ಕೆಲವುಂ ಕೆಲವಲ್ಲಿ ಮತ್ತೆ ಸಂ
ಗತಘನಲೀಲೆಯಿಂ ನಡೆವುತಿರ್ದುವು ಮಂದಪದಪ್ರಚಾರದಿಂ ೪೦

ಮತ್ತೇಭವಿಕ್ರೀಡಿತ

ಕಡಿಯಾಣಂಗಳ ಘಾಸಿಯಿಂದೆ ನೊರೆಗಳ್ ತೇರ್ಸೈಸಲುಂ ಬಾಯಿಯೊಳ್
ಕುಡಿವಂತೆ ಪ್ರತಿವೈರಿಕೀರ್ತಿಗಳನೊಪ್ಪುತ್ತಿರ್ದು ಪಾರ್ಶ್ವಂಗಳೊಳ್
ಕಡುಪಿಂ ಬೀಸಿದ ಜೆಲ್ವಹಕ್ಕರಿಕೆಗಳಂ ವ್ಯೋಮಾಧ್ವದೊಳ್ ಪೋಗಲೆಂ
ದಡಸಿಟ್ಟುನ್ನತಪಕ್ಷಕಂಗಳನೆ ತಾಳ್ದಿಯ್ತುಂದವಶ್ವಂಗಳುಂ ೪೧

ಕಂದ : ಭೂದೇವಿಯ ಮೆಯ್ಯೊಳ್ ತುರ
ಗಾದಿಗಳಂದಿಕ್ಕೆ ನಖಮುಖಂಗಳನತ್ಯಾ
ಮೋದದೆ ಪುಳಕಾಂಕುರತತಿ
ಯಾದಂತಿರೆ ನೆಗೆದುದಮಮ ಧೂಳೀಜಾಳಂ ೪೨

ಯುವರಾಜನ ಗುಣಗಣದಿಂ
ದವನೊಪ್ಪಿರೆ ಪೊಗಳ್ವ ಪಾಠಕರ ತೆಱದಿಂದಂ
ತೀವಿದ ರಥಂಗಳ್ ಪೋದವು
ಜವದಿಂ ಚೀತ್ಕಾರರಾವದಿಂದೆಸೆವುತ್ತುಂ ೪೩

ನೇಮಿದಾಹಾರ ಪ್ರತಿಯಿಂ
ದಾ ಮಹಿಯೊಡೆಯಲ್ಕೆಯಲ್ಲಿ ಚೆಲ್ಲಿದ ಮುಕ್ತಾ
ಸ್ತೋಮಂ ಪರಿರಂಜಿಸಿದ
ತ್ತಾ ಮಹಿಪನ ಕೀರ್ತಿಬೀಜಮಂ ಬಿತ್ತುವವೊಲ್ ೪೪

ವರಸೈನ್ಯಪಾದತಾಡನ
ದುರವಣೆಯಿಂ ಪೀಡ್ಯಮಾನಭೂತಳಮಾಗಳ್
ಪರಮರಥಾವಳಿ ಚೀತ್ಕಾ
ರರವಂಗಳ ನೆವದಿನೊದಱುತಿರ್ದವೊಲೆಸೆಗುಂ ೪೫

ವಚನ: ಮತ್ತಂ

ಉತ್ಪಲಮಾಲೆ

ವಂಶಜಮಪ್ಪ ನಾರಿಯೊಡಗೂಡಿ ವಿಶೇಷಿತದಿವ್ಯಬಾಣಸಂ
ದಂಸಮನಾಂತು ಸಂಹರಣಕಾರಣಮಾಗಿ ದಲುಗ್ರಭಾವದಿಂ
ದಂ ಸಮುಪೇತಮಾದುದರಿನೀಶ್ವರನೆಂಬವೊಲಿರ್ದ ಬಿಲ್ಗಳಂ
ಸಂಸನ ಹಸ್ತದೊಳ್ ಪಿಡಿದು ಬಂದುದು [1]ಧನ್ವಿ[1]ಪದಾತಿ ಸುತ್ತಲುಂ ೪೬

ಕಂದ: ನಡೆದುದು ಪದಾತಿಸೈನ್ಯಂ
ಕಡುಗಲಿಯೆನಿಸಿರ್ದ ಧರ್ಮನಾಥಕುಮಾರಕ
ನೆಡಬಲದೊಳೆಲ್ಲಿಯುಂ ಸಂ
ಗಡಿಸಿದ ವಜ್ರಾಂಗಿ ಜೋಡುಗಳಿನೊಪ್ಪುತ್ತುಂ ೪೭

ಮಹಾಸ್ರಗ್ಧರೆ

ಧವಳಚ್ಛತ್ರಂಗಳೆಂಬ ಪ್ರಬಳತರ ಮಹಾಫೇನಪಿಂಡಂಗಳಿಂದಂ
ಪ್ರವಿಭಾಸ್ವತ್ಸಂಚಳ ಚಾಮರವಿತತಿಗಳೆಂಬೂರ್ಮಿವೃಂದಂಗಳಿಂದಂ
ನವರತ್ನಶ್ರೇಣಿಯಂ ಪೇ[2]ಱು[2]ದುರುಕರಿಗಳೆಂಬುದ್ಬಹಿತ್ರಂಗಳಿಂದಂ
ಭವದುದ್ಘೋಷಂಗಳಿಂದಂ ಮಹಿಮೆವಡೆದದೊಪ್ಪಿತ್ತು ಸೇನಾಸಮುದ್ರಂ ೪೮

ಕಂದ: ಕಡುಹೀಲಿಯ ಝಲ್ಲರಿಗಳ
ಗಡಣಮನಾ ನಡೆವ ಕುದುರೆಗಳ ಕೆಲದೊಳ್
ಪಿಡಿಯಲ್ಕೆ ಸೈನ್ಯವಾರ್ಧಿಯೊ
ಳಡಸಿದ ಹಾವಂಚೆಯಂತಿರದು ಕಣ್ಗೆಸೆಗುಂ ೪೯

---

[1] ಧ್ವನಿ (ಕ) [2] ಡಿ (ಗ)

ಅನ್ಯರ ತೇಜಮನೀತಂ
ಮನ್ನಿಪನಲ್ಲೆಂದು ಬಗೆದು ಜಿದಱುದ ತೆಱದಿಂ
ಕೆನ್ನಂ ವಿಜಯಧ್ವಜಸಂ
ಛನ್ನ ಪದಾಪಳಿಯಿನರ್ಯಮನಂ ಮಱಸಿಗೊಂಡರ್ ೫೦

ಬಲಘಟ್ಟನದಿಂ ಪುಟ್ಟಿದ
ಖಳಧೂಳಿಯಿನಾಗಸಂ ಮಲೀಮಸಮಾಗಲ್
ಸಲೆರಜನೀಶಂಕೆಯಿನು
ಜ್ಜ್ವಳಕರಮಂ ಕೆದಱುತಿಲ್ಲ ರವಿ ದಿಕ್ಕುಳದೊಳ್ ೫೧

ವಚನ: ಮತ್ತಮಲ್ಲಿ

ಚಂಪಕಮಾಲೆ

ತುರಗಖುರಾಗ್ರಘಟ್ಟನ ಸಮುತ್ಥಮಹಾಘನಧೂಳಿಜಾಳಕಂ
ಕರಿನಿಕರಂಗಳುತ್ಕಟ ಕಟಸ್ಥಳದಿಂ ಸುರಿಯುತ್ತುಮಿರ್ದ ಸೀ
ವರಮದ[1]ವಾ[1]ರಿಧಾರೆಗಳಿಸಂದುಪಶಾಂತಿಯನೆಯ್ದ ಲಾಕ್ಷಣಂ
ಪರಿಕಿಸಿ ನೋಡಿ ಕಂಡರುಱತೆ ಬಟ್ಟೆಗಳೊಳ್ ನಡೆವಾ ಜನಂಗಳಂ ೫೨

ವಚನ: ಮತ್ತಮೊಂದೆಡೆಯೊಳ್

ಮಹಾಸ್ರಗ್ಧರೆ

ಒದಱುತ್ತುಂ ಗರ್ಘರೋದ್ಘೋಷದಿನುಱತೆ ಕೊರಳಂ ನೀಳಮಾಗೆತ್ತಿ ಮೇಗಂ
ಪದೆಪಿಂ ನೋಡುತ್ತುಮೆಲ್ಲಾ ದೆಸೆಗೆ ಪರಿಯುತುಂ ಪೊತ್ತುಕೊಂಡಿರ್ದ ಪೇಱಂ
ಬೆದಱೀಡಾಡುತ್ತುಮೊಂದೊಟ್ಟೆಯು ಮಱು ಪಿರಿದುಂ ಕಾಡಿಸಾಡುತ್ತುಮಿರ್ದ
ತ್ತ್ರದು ಹಾಸ್ಯಾಶ್ಚರ್ಯಮಂ ನೋಡುವ ಸಕಳಜನಾಸ್ಯಂಗಳೊಳ್ ಚೋದ್ಯದಿಂದಂ

ಉತ್ಪಲಮಾಲೆ ೫೩

ಕಂಡು ಮದೇಭಮಂ ನಡೆವ ಬಟ್ಟೆಯೊಳಾದ ವಿಶೇಷಭೀತಿಯಿಂ
ಭಂಡಿಯ ಹೂಡಿದೆತ್ತುಗಳವುಂ ಪರಿದೋಡುವ ಬೇಗದಲ್ಲಿ ಕೀಲ್
ಖಂಡಿಸಿ ಗಾಲಿ ಬೀಳೆ ಘೃತಪೂರ್ಣಘಟಂಗಳ[2]ವೆ[2]ಯ್ದೆ ಬೀಳ್ದು ಸಾ
ಲ್ಗೊಂಡೆಡದಲ್ಲಿ ಮಾಡಿದುವು ದುಃಖಮನಾ ವ್ಯವಹಾರಿಗಾಕ್ಷಣಂ ೫೪

ಕಂದ: ಕರಿಘೂತ್ಕಾರಮನಿದ್ದಂ
ತಿರೆ ಕೇಳ್ದತಿಭೀತಿಗೊಂಡು ಹಮ್ಮೈಸಿಯೆ ಪಾ
ಮರಿ ಪೊತ್ತ ಮೊಸರ ಮಡಕೆಯ
ನಿರಬೀಳಿಸಿಯೊಡೆದು ತೊಲಗಿದಳ್ ನೃಪಪಥದಿಂ ೫೫

1 ನಾ (ಕ) 2 ನೆ (ಗ)

ವಚನ : ಮತ್ತಮೇಕಪ್ರದೇಶದೊಳ್

ಕಂದ : ಪುರಭಸಕ್ಕಂಜಿದ ವೇ
ಸರಿ ಜೇಗದಿನೋಡಲುಟ್ಟವಸ್ತ್ರಂ ತೊಲಗು
ತ್ತಿರಲವಯವಂಗಳುಂ ತೋ
ಱಿರಲೇಱಿದ ತರುಣಿ ನಗಿಸಿದಳ್ ಸೈನಿಕರಂ ೫೬

ಪಿರಿದಪ್ಪ ಭಾರದಿಂದಂ
ಪರಿಕುಬ್ಜತದೇಹರಾದ ಕಾವಡಿಕಾಱರ್
ಭರದಿಂದ ಮುಂದೆ ಪೋಪರ
ನುರವಣೆಯಿಂ ಪಿಂದೆಮಾಡಿ ಪೋದರ್ ಬೇಗಂ ೫೭

ವಚನ : ಆ ಪ್ರಸ್ತಾವದೊಳ್

ಕಂದ : ಪಳಿಕಿನ ಕುಟ್ಟಿಮ ಧರಣೀ
ತಳದೊಳ್ ಮಾರ್ಪೊಳೆದ ಸೈನ್ಯಮೊಪ್ಪಿತ್ತು ರಸಾ
ತಳದಿಂ ಬರುತ್ತುಮಿರ್ಪು
ಜ್ಜ್ವಳಭವನಾಮರರ ಸೈನ್ಯಮೆಂಬಂತೆವೊಲಂ ೫೮

ತರುಣೀವೃತ್ತಾಂತಮನಾ
ದರದಿಂದಂ ಕೇಳ್ದು ದಕ್ಷಿಣಕ್ಕಭಿಮುಖನಾ
ಗಿರದೆ ಹರಿಸೈನ್ಯಪರಿವೃತ
ನರಸಂ ಶ್ರೀರಾಮನಂತೆ ಪೋಗುತ್ತಿರ್ದಂ ೫೯

ವಚನ: ಇಂತಾ ಕುಮಾರನನೇಕಕೌತುಕಂಬೆತ್ತು ಮಹಿಮೆವೆರಸು ಪರಿಪರಿಯ ಬಹುವಿಧ ನವೀನರಚನಾತಿಶಯದಿಂ ವಿಶೇಷಿತಮಾದ ಪುರಗೋಪುರದ್ವಾರಮಂ ಮುಟ್ಟಿ ವರ್ಪುದುಂ

ಕಂದ : ಎಡೆವಿಡದೆ ಪೋಪ ಸೈನ್ಯದ
ನಡುವಣದಾಗಿರ್ದ ಕೊಡೆ ಪಿಂದುಂ ಮುಂದುಂ
ಕಡುದೊಡ್ಡಿತಾಗಿ ಪೊಱಮಡು
ವೆಡೆಯೊಳ್ ಮಿಗೆ ಮಡದಿಯಂತೆ ಪಡೆದುದು ಚೆಲ್ವಂ ೬೦

ವಚನ : ಅಂದಾ ಸೈನ್ಯಂ ಪುರವಿಭೂತಿಯಿಂ ಪುರದ್ವಾರಮಂ ಪೊಱಮಟ್ಟು ಪಸರಿಸಿ ನಡೆವುದುಂ

ಕಂದ : ಓಲೈಸಲೆಂದು ದಶದಿ
ಕ್ಪಾಲಕರ ಪುರಂಗಳೆಯ್ದಿ ಬಂದಾನಿಸಿದ
ವೊಲೊಪ್ಪುವ ಪೊಱವೊಳಲಂ
ಮೇಲೆನಿಪ ಕುಮಾರಕಂ ನಿರೀಕ್ಷಿಸುತಿರ್ದಂ ೬೧

ವಚನ : ಇಂತುಱುವ ಸಿರಿಯಿಂದಂ ನೆಱೆಸೊಱೆವ ಪೊಱವೊಳಲಂ ಕುಮಾರಕಂ ನೋಡಿ ನೋಡಿ ಕೊಂಡಾಡುತ್ತುಂ ಕಿಱಿದಂತರಂ ಪೋಪುದುಂ

ಕಂದ : ವಿಮಲಾಂಬರಧಾರಿಗಳಂ
ರಮಣೀಯ ವಯೋವಿಶೇಷ ಸಂಶೋಭಿಗಳಂ
ಸಮುಪಾತ್ತಪಯೋಧರ ಸಂ
ಭ್ರಮಿಗಳನಂಗನೆಯರೆಂಬಿನಂ ದಿಕ್ಕುಗಳಂ ೬೨

ನೋಡುತ್ತುಂ ಪೋದರ ಮಿಗೆ
ನಾಡೆಱೆಯುಂ ಮತ್ತೆಮತ್ತೆಯತ್ಯಾದರದಿಂ
ಕೋಡುವ ತೆಂಬೆರಲಾಗಳ್
ತೀಡಿದುದತಿಮಿತ್ರನೆಂಬಿನಂ ನೃಪಸುತನಂ ೬೩

ವಚನ : ಮತ್ತಮಾಗಳ್ ಸಂದಣಿಸಿ ತಿಂತಿಣಿಗೊಂಡು ಪೋಪ ಶಿಬಿಕಾಕದಂಬಂಗಳಿಂ ಪರಿನಿಚಿತಾಂತರಮಾದ ಕಟಕಂ ನೂತನಪೋತಬ್ರಾತಂಗಳಿಂದಂ ತುಂಬಿದಂಬುಧಿಯೆಂಬಿನಂ ಶೋಭಾವಲಂಬಿಯಾಗಲತ್ತಲುಮಿತ್ತಲುಂ ಮೊತ್ತಂಗೊಂಡು ಕಡುವೇಗದಿಂ ಸಂಗಡಿಸಿ ನಡೆವ ಹಸ್ತ್ಯಶ್ವರಥಪದಾತಿಲಕ್ಷಣ ಚಾತುರ್ದಂತಬಲಂಗಳುಂ ಪ್ರವಾಹಂಗಳೆಂಬಂತೆ ಬಹುಮುಖಂಗಳಿಂ ಸುತ್ತಲುಂ ಬಿತ್ತರಿಸಿ ನಡೆವುತ್ತುಮಿರೆ

ಕಂದ : ಒಳಕೊಂಡು ದಲುತ್ತಮರಂ
ಖಳತತಿಯುಂ ಪೊಱಗುಮಾಡಿ ಸಜ್ಜನರೆಂಬಂ
ತಿಳೆಯೊಳ್ ಚೆಲ್ವಂ ತಾಳ್ದಿರ್ದ್ದಗಳ
ಬಳಗಮನರಸು ನೋಡಿ ನಲಿಯುತ್ತಿರ್ದಂ ೬೪

ವಚನ : ಆಗಳ್

ಕಂದ : ತುಂಬೀಫಲಸಂತತಿಗಳ
ಲಂಬನದಿಂ ತಗ್ಗಿದೂರ ಬೇಲಿಯ ಮಱೆಯಿ
ರ್ದಂಬುಜಮುಖಿಯರ್ ಮಿಗೆ ಕ
ಣ್ಣುಂಬಿ ನಿರೀಕ್ಷಿಸುತುಮಿರ್ದರಾ ನೃಪಬಲಮಂ ೬೫

ರಲ್ಲಕರಂಜಿತತನುಗಳ್
ಗೊಲ್ಲರ ಪೊತ್ತಂಗಳೆಯ್ದೆ ಕಾಣಿಕೆಯಂ ತಂ
ದಲ್ಲಿಸಿದ ಪಾಲ್ಗೊಸರಂ
ಸಲ್ಲಲಿತಾಖ್ಯುನನೆ ನೋಡಿ ತಣಿಸಿದನವರಂ ೬೬

ವಚನ: ಮತ್ತಂ ಮೂಡಲ್ ಗಂಗಾಸರಿತ್ತೀರಮೇ ಮೇರೆಯಾಗಿ ಪಡುವಲ್ ಸಿಂಧೂನದೀಪಾರ ಪರ್ಯಂತಂ ಬಡಗಲ್ ವಿಜಯಾರ್ಧಪರ್ವತಮುಪಧಿಯಾಗಿ ತೆಂಕಲ್ ಸಿಂಹಕಾದ್ವೀಪಮೇ ಸೀಮೆಯಾಗಿ ಮಧ್ಯಪ್ರದೇಶಂಗಳೊಳೆಲ್ಲಂ ತುಂಬಿ ಪರಿವರ್ತಿಸುತ್ತು ಮಿರ್ಪ ಬಹಳತರದುರ್ವಹವಾಹಿನೀನಿವಹ ಪರಿಪೂರಿತಮಾದ ಸೈನ್ಯಸಮುದ್ರಂ ಮೇರೆಯಂ ಮೀಱುತ್ತುಮಿರ್ದುದೆಂಬಂತೆತ್ತಲುಂ ಪಸರಿಸಿ

ಉತ್ಪಲಮಾಲೆ

ಜೆಟ್ಟದ ಘಟ್ಟದಿಟ್ಟೆಡೆಯ ಬಟ್ಟೆಗಳಲ್ಲಿ ನದೀನದಂಗಳೊಂ
ದೊಟ್ಟಜೆಯಾದರಳ್ತಡಿಗಳಲ್ಲಿಯುಮೂರ್ಗಳ ಸುತ್ತಲೆಲ್ಲಿಯುಂ
ದಟ್ಟಮುಮಾಗಿ ಕೂಡಿ ನಡೆವುತ್ತುಮದಿರ್ದುದು ಸರ್ವಸೈನ್ಯಕಂ
ಪುಟ್ಟಿಸುತುಂ ನಿರೀಕ್ಷಿಪರ ಚಿತ್ತದೊಳಚ್ಚರಿಯಂ ದಲಾಕ್ಷಣಂ ೬೭

ವಚನ: ಇಂತು ಸದಾಶ್ರಿತನಪ್ಪಾ ಕುಮಾರಂಗಂ ಸದನಾಶ್ರಿತಮಪ್ಪಾ ಪುಷ್ಕಂ ರಮಣೀಯಾನನಶ್ರೀಕನಾದಾ ಯುವರಾಜಂಗಂ ಪರಿಧೃತಕಾನನಶ್ರೀಕಮಾದಾ ನಗರಕ್ಕ ಮಂತರಂ ಪಿರಿದುಂ ದೂರಮಾಗೆ ಮುಂದೊಂದೆಡೆಯೊಳ್

ಚಂಪಕಮಾಲೆ

ನೊರೆಗಳ ಪಿಂಡು ಮಂಡಳಿಸಿ ತಾರೆಗಳಂತಿರೆ ಜೆಲ್ವನಾಸಗಂ
ಧರಿಸೆ ತಟದ್ವಯಸ್ಥ ಹರಿನೀಳಶಿಲಾತಳ ಕಾಂತಿ ಸಂತತ
ಸ್ಫುರಣವಿಶೇಷರಂಜನದೆ ಕೃಷ್ಣತರಚ್ಛವಿಯಾಗೆ ತೋಯಮಂ
ಬರತಳದಂತಿರೊಪ್ಪಿದುದು ಗಂಗೆ ತರಂಗಿಣಿ ತಾಳ್ದಿ ಮಾನಮಂ ೬೮

ಕಂದ: ಎರಡುಂ ತಡಿಯೊಳ್ ಪುಟ್ಟಿದ
ತರುಗಳ್ ಮಾರ್ಪೊಳೆದು ನೀರೊಳೊಪ್ಪಿದವಂದು
ದ್ಧುರರವಿತಾಪಕ್ಕಾಱದೆ
ಭರದಿಂ ಸ್ನಾನಾರ್ಥಮಲ್ಲಿ ಮುಳ್ಗಿದ ತೆಱದಿಂ ೬೯

ಮಕರಂಗಳ ಫೂತ್ಕಾರ
ಪ್ರಕಟನದಿಂ ಮೇಗೆ ನೆಗೆವುತಿರ್ದ ಪಯೋಬಿಂ
ದುಕದಂಬಕದಿಂ ಮಾಳ್ಪುದು
ನಿಕಟದ್ರುಮತತಿಗಳಲ್ಲಿ ಪುಷ್ಪಶ್ರೀಯಂ ೬೦

ವಿಂಧ್ಯಾಚಳವೆಂಬುರು ಧರ
ಣೀಂಧ್ರಂ ಕಳಚಿದೊಡೆಬಿಳ್ದು ಕೆಲದೊಳಗಿದ್ದತಿ
ರುಂದ್ರ ನಿರ್ಮೋಕದಂದದಿ
ನಂದು ಕರಂ ಗಂಗೆ ಕಣ್ಗೆ ಪಡೆದುದಗುರ್ವಂ ೬೧

ವಚನ : ಮತ್ತಮಾ ಗಂಗಾತರಂಗಿಣೀ ತುಂಗವಾತೂಳಿಕಾ ಸಂಗದಿಂದಲ್ಲಾಡುತ್ತುಮಿರ್ದ ತೀರದ್ವಯಪರ್ಯಂತ ಕಾಂತಾರತರುನಿಕರಶಾಖಾಶಿಖಾಪಳಯಾಗ್ರಂಗಳಿಂದುದಿರ್ದು ಬಿಳ್ದು ತೆರೆಮಾಲೆಗಳ ವೇಗವಶದಿಂದೊಂದಾಗಿ ಮಂದೈಸಿ ತೇಂಕುತ್ತುಂತೇರೈಸಿದ ಪೂಗಳ ಬಳಗದಿಂ ಕಡುಬಿಳಿದಾಗಿ ವಿಯದ್ಗಂಗಾಭಂಗಿಯನಂಗೀಕರಿಸುತ್ತುಂ ಮತ್ತಮೊಂದೆಡೆಯಲ್ಲಿ ವನ್ಯಮತ್ತಮಾತಂಗಯೂಥಂಗಳ್ ಬಂದು ಜಳಕೇಳೀವಿನೋದಾರ್ಥಂ ತದವಗಾಹನಂಗೆಯ್ದು ಜಳಮಂ ವಿಲೋಡಿಸಿ ಮುಳ್ಗಿದ ಪದದೊಳಪಾರಮದ ಧಾರಾಪೂರಪರಿವ್ಯಾಪ್ತಿಯಿಂದಂ ಕಪ್ಪಾಗಿ ಕಾಳಿಂದೀನದಿಯ ಶಂಕೆಯನಂಕರಿಸುತ್ತುಂ ಮತ್ತಮೊಂದೆಡೆಯಲ್ಲಿ ಮರಾಳಮರಾಳಿಕಾಲೀಲಾವಿನೋದದಿಂದಾದ ಘಾಸಿಯಿಂದಲ್ಲಾಡುತ್ತುಮಿರ್ದ ಮೃಣಾಳನಾಳಮನುಳ್ಳ ಮರಳ್ದರಳ್ದರವಿಂದವೃಂದಪರಿನಿಷ್ಯಂದಮಾನ ಮಕರಂದಬಿಂದುಸಂದೋಹಮೊಂದಿ ಸುತ್ತಲುಂ ಪರಿಕೀಲಿಸೆ ಪಿಂಗಲವರ್ಣದಿ ಸೌಂದರಮಾಗಿ ಭಂಗಾರದ ಘಟ್ಟಿ ಕರಗಿ ಪರಿವ ಹೇಮರಸರೂಪಪ್ರವಾಹಮೆಂಬಂತೆ ಸೊಗಸನಜನಿಸುತ್ತುಮಿರೆ

ಸ್ರಗ್ಧರೆ

ಗಂಭೀರಾವರ್ತವೃತ್ತಿ ಪ್ರವಲಪಶಲುಟತ್ಪೀನಪಾಠೀನಯೂಥಃ
ಕುಂಭೀರಕ್ಷುದ್ರ ಶಂಖೋಸ್ರಕರ ಕಮಠ ಶಂಭೂಕಭೇಕಪ್ರವೇಕೋ
ಜ್ಜೃಂಭಂ ರಂಗತ್ತರಂಗ ಪ್ರಕಟನಟನರಂಗಂ ಮಹಾಘೋರಘೋಷಾ
ಸಂಭೀಳಂ ಕಣ್ಗಗುರ್ವಂ ಪಡೆದುದು ಪಿರಿದುಂ ತುಂಗಗಂಗಾಪ್ರವಾಹಂ ೬೨

ಶಾರ್ದೂಲವಿಕ್ರೀಡಿತ

ಮತ್ತಂ ನೋಳ್ಪಡೆ ಚೆಲ್ವುವೆತ್ತ ಪುಳಿನಸ್ಥಾನಂಗಳಲ್ಲಿರ್ದು ಲೀ
ಲಾತ್ಯುತ್ಕೃಷ್ಟತೆಯಿಂದೆ ಪಾಡುವ ಪುಳಿಂದೀ ಗೀತರಾಗಂಗಳಿಂ
ಚಿತ್ತಂ ಘೋರೆನುತುಂ ಮನೋಹರತೆಯಂ ತಾಳ್ದಿತ್ತುದಾಕ್ಷ್ಚರ್ಯದಿಂ
ಮತ್ತಾ ಗಂಗೆಯ ಪೋಲ್ವೆಗಿಲ್ಲ ತೊಜಿತಗಳ್ ವಿಶ್ವಂಭರಾ ಭಾಗದೊಳ್ ೬೩

ಕಂದ: ಈ ವಾಹಿನಿಯ ಸಮೀಪ
ಕ್ಕಾ ವಾಹಿನಿ ಬಂದೊಡುಚಿತವಚನಮನದು ಸಂ
ಭಾವಿಸಿ ನುಡಿಸಂತಿರ್ದುದು
ತೀವಿದೆರಕ್ಕಡಿಯ ಪೃಕ್ಷಪಕ್ಷಿಧ್ವನಿಯಿಂ ೭೪

ವಚನ: ಇಂತತ್ಯುತ್ಕಟಮಾದ ತತ್ತಟನೀನಿಕಟತಟನಿಕಟಪ್ರದೇಶಮನಾ ಸೈನ್ಯಂ ತೊಟ್ಟನೆ ಮುಟ್ಟಿಸರ್ಪುದುಂ

*ಮತ್ತೇಭವಿಕ್ರೀಡಿತ
ಪಱಿಗೋಲಂ ಕೆಲರೇಱಿ ಗುಂಡಿಗೆಗಳಿಂದೀಸಾಡಿ ಮತ್ತಂ ಕೆಲರ್
ನೆಱೆ ತೆಪ್ಪಂಗಳನೇಱಿ ಮತ್ತೆ ಕೆಲರುಂ ಮಾತುಂಗಯೂಥಂಗಳಂ
ತಱಿಸಂದೇಱಿ ಕೆಲಂಬರುಂ ತುರಗಮುಂ ಬಂದೇಱಿ ಮತ್ತಂ ಕೆಲರ್
ತೊಱೆಯಂ ಪಾಯ್ದುದಶೇಷ ಸೈನಿಕಜನಂ ಕೌತೂಹಳಂ ತೋರ್ಪಿನಂ ೭೫

ವಚನ: ಆಗಳ್

ಮತ್ತೇಭವಿಕ್ರೀಡಿತ
ವರಶುಂಡಾಲವಿಗಂಡಮಂಡಲ ಗಲದ್ದಾನಾಂಬುಧಾರಾ ನಿರಂ
ತರಪೂರಂಗಳಿನುನ್ನತ ಶ್ರಮತುರಂಗವ್ರಾತ ಕಿಂಚಿಚ್ಚಲೋ
ದ್ಧುರ ವಕ್ತ್ರಂಗಳಿನೆಯ್ದೆ ಬಿಳ್ದ ಘನಫೇನೋತ್ಪಿಂಡಖಂಡಂಗಳಿಂ
ಪಿರಿದುಂ ವಾಹಿನಿ ಪೆರ್ಚಿದತ್ತು ಸಮನಾಮಪ್ರೀತಿಯೆಂದೆಂಬಿನಂ ೭೬

ವಚನ: ಅಂತು ಮುಂಕುಡಿಯ ಸೇನಾಜನಂಗಳೆಲ್ಲಂ ತಂತಮ್ಮಿಚ್ಛಾನುಕೂಲವರ್ತಿಗಳಾಗಿ ತೊಱೆಯಂ ದಾಂಟುತ್ತುಮಿರಲ್ ಮತ್ತಮಾ ಧರ್ಮನಾಥಕುಮಾರಂ ಜಾಹ್ನವೀಜಳನೈರ್ಮಲ್ಯಮಂ ನೋಡಿನೋಡಿ ಕೊಂಡಾಡುತ್ತುಂ ತತ್ತೀರಮನೆಯ್ದೆವರ್ಪುದುಂ

ಕಂದ: ಒಡೆಯಂ ತಡಿಯೊಳ್ ನಿಲೆ ಕೈ
ಮುಡಗದೆ ಪಱಿಗೋಲನಂಬಿಗಂ ಸಾರ್ಚಿದೊಡಾ
ಗಡೆಯುದಱಿಂದಂ ತೊಱೆಯಂ
ಕಡುಬೇಗದೆ ದಾಂಟಿಪೋಗಿಯುಂಡರ್ದಂ ತಡಿಯಂ ೭೭

ವಚನ: ಇಂತು ವಿಜ್ಞಾನನೌಕೆಯಿಂದಂ ತೃಷ್ಣಾನದಿಯನುತ್ತರಿಸುವಂತೆ ಕುಮಾರಂ ತರಣಿಯಿಂ ಗಂಗಾತರಂಗಿಣಿಯನುತ್ತರಿಸುವುದುಂ ಬಳಿಯ ಸಮಸ್ತಸೈನ್ಯ ಜನಸಮೂಹಂಗಳೆಲ್ಲಂ ಪಾಯ್ದು ಪೋಗಿಯಪರತೀರದೊಳ್ ನೆರೆದು ನಿಲಲೊಡಂ

* ಗಂಗಾತರಂಗಿಣಿಗೆ ಬಂದು ದಾಂಟಿದನು (ಗ)

ಕಂದ: ಜಡರೂಪೆ ತ್ರಿಪಥೆಗೆಯ್ದಿದ
ಜಡೋಡಸಿಪುದನುಚಿತಮೆಂದು ತದ್ವಾಹಿನಿಯಂ
ಬಿಡೆ ಬೀಸಾಡಿಯೆ ದೂರಂ
ಗಡ ಪೋದುದಸಂಖ್ಯಪಥಗೆ ವಾಹಿನಿನೃಪನಾ ೭೮

ವಚನ: ಮತ್ತಂ ವರೂಥಿನೀಸನಾಥನಪ್ಪಾ ಧರ್ಮನಾಥಕುಮಾರಂ ಗಂಗೆಯಂತೆ ಸನುಕರಮಾದನೇಕದೇಶಮಂ ದಾಂಟಿ ಕಿಱಿದಂತರಂ ಪೋಪುದುಮುಂದೊಂದೆಡೆಯೊಳ್ ಕಲಿಂಗಿ ಕೆತ್ತಲಿಸು[1]ತ್ತು[1]ಮಿರ್ಪ ವಿಂಧ್ಯಾಟವಿಯೆಂಬಗಣ್ಯಮಹಾರಣ್ಯಸ್ಥಳಮುಂ ಕಣ್ಬೊಲನಾಗೆ

*

ಮತ್ತೇಭವಿಕ್ರೀಡಿತ

ಕಡುನೀಳ್ದದ್ರುಮಷಂಡಮಂಡನ ಮಹಾಶಾಖಾಲೇಖಾಲೇಖೆಯಿಂ
ಕೊಡುತುಂ ಚುಂಬನಮಂ ಮಿಯುನ್ಮುಖಕೆ ಭೂರಿಧ್ವಾಂತದಿಂ ಕೂಡೆ ಭಿ
ನ್ನಿಡುತುಂ ಕ್ರೂರಮೃಗಂಗಳಿಂದೊಡರಿಸುತ್ತಂ ಭೀತಿಯಂ ಸುತ್ತಲುಂ
ಪಡೆದತ್ತದ್ಭುತಮಂ ತಿರೋಹಿತದಿಶಾನೀಕಾಸನಂ ಕಾನನಂ ೭೯

ಕಂದ: ಅತಿವಿಷಮವಿಷಧರಂ ಸಂ
ಯುತ ಭೀಷಣ ವನಚರಪ್ರಚಾರಂ ಪರಿವಿ
ಸ್ತೃತ ವಿದ್ರುಮಮುತ್ಕಳಿಕಾ
ಭೃತಮಾಗಿ ಸಮುದ್ರದಂತೆ ವನಮೆಸೆದಿರ್ಕುಂ ೮೦

ವಚನ: ಮತ್ತಮಾ ವನಂ ಮಹೇಶ್ವರನಂತೆ ವಿಶಾಖಾವಭಾಸಿತಮುಂ ಕ್ಷತ್ರಿಯನಂತೆ ವಿಚಿತ್ರಪತ್ರಸಮಾಲಕ್ಷಿತಮುಂ ನಕ್ಷತ್ರಪ್ರಕರದಂತೆ ಮೂಲಸಮುಲ್ಲಾಲಿತಮುಂ ಚಾಟುಕಾರಪಟುಶಠವಿಟನಂತೆ ಕುಶಲಪಥಸನಾಥಮುಂ ಪಾಂಡವಕುಲದಂತರ್ಜುನಾಡಂಬರಪರಿಮಂಡಿತಮುಂ ಸುದತೀಜನದಂತೆ ಮದನಸಮುಜ್ಜೃಂಭಣ ಸಂಕಳಿತಮುಂ ದೇವೇಂದ್ರನಂತೈರಾವತ ವಿರಾಜಿತಮುಮೆನಿಪುದಂತುಮಲ್ಲದೆಯುಂ

ಉತ್ಪಲಮಾಲೆ

ತಾಳದ ಮೇಳದಿಂದೆಸೆವುತಿರ್ದುದು ನಟ್ಟುವನಂತೆ ತೇಂಗಿನೊಂ
ದೋಳಿಯನೊಪ್ಪಿದತ್ತು ತಣಿವುಂಡವನಂತಿರೆ ಬನ್ನಿಯಿಂ ಸಮು
ಲ್ಲಾಲಿತಮಾಯ್ತು ತಾಂ ಕರೆವನಂತಿರೆ ತಂಡಸದಿಂದೆ ಜೆಲ್ವುಮಂ
ಪಾಲಿಸಿದತ್ತು ಹೇಮಕರನಂತೆ ವನಂ ಸಮುಪಾಶ್ರಿತಾವನಂ ೮೧

---

1 ತ (ಕ)

* ವಿಂಧ್ಯಾಟವೀವ್ಯಾವರ್ಣನೆ (ಗಚ)

ಕಂದ : ಆ ವನದ ವೃಕ್ಷಚಯ ಶಾ
ಖಾವಳಯಾಗ್ರಂಗಳಲ್ಲಿ ಶಶಿರವಿಬಿಂಬಂ
ಪೂವಿನ ಪಣ್ಣಿನ ಗೊಂಚಲ
ಭಾವನುನಾಗಿಸುತುಮಿರ್ದುದಖಿಳಜನಕ್ಕಂ ೮೨

ವಚನ : ಇಂತು ಕಡುಚೋಚಿಗಂಬಡೆದ ಪೇರಡವಿಯಂ ನೀಡುಂನೋಡುತ್ತ ಮೆಡಬಲದವರೊಡನೆಯದಂ ಕೊಂಡಾಡಿನುಡಿಯುತ್ತಮಾ ನಾಡೆಜಂಗುಂ ತಣ್ಣೆಳಲಿಂ ತಿಣ್ಣಮಾದರಣ್ಯಾವನಿಯೊಳಗಂ ಪೊಕ್ಕು ನಡೆವಾಗಳ್

ಚಂಪಕಮಾಲೆ

ಚಮರಿಯ ಕೂದಲಂ ಕರಿಯ ದಂತಮುಮಂ ಕಡುಚೆಲ್ವ ಜೇನತು
ಪ್ಪಮನೆಳೆಸಿಂಗದೊಂದು ಮುಱಿಯಂ ಹೊಸಹೂತಿಯ ಬೆಕ್ಕುಮಂ ಮೃಗ
ಸಮಿತಿಯನೊಲ್ದು ಕಾಣಿಕೆಯನಿತ್ತ ವನೇಚರರಾಜರುಂ ಮಹೀ
ರಮಣಕುಮಾರಕಂ ಪಿರಿದುಮನ್ನಿಸಿ ತುಷ್ಟಿಯನುಂಟುಮಾಡಿದಂ ೮೩

ವಚನ : ಅನಂತರಮಾ ಮಾನವಮಾನಕೇತನವರವರಿಂಗವಂ ಕೊಟ್ಟು ಕಾನನದ ಕಡುಚೆಲ್ವನಡಿಗಡಿಗವಲೋಕಿಸುತ್ತುಂ ಸಡಗರದಿಂದಂ ಮುಂದೆಪೋಗುತ್ತುಮಿಪ್ಪುದುಮಾದ ಆತಿಒಳಿಂಪೆಡೆಯೊಳ್

ಕಂದ : ಹೊನ್ನೆ ಸುರಹೊನ್ನೆ ನೇಱಲ್
ಬನ್ನಿ ಬೆಳ್ಳಂಬೀಡೆ ಹೊಂಗೆ ಹುಱುಗಿಲ್ ತಱಿಯಂ
ಚೆನ್ನತ್ತಿ ಮತ್ತಿ ಹುಣಿಸೆ ಬಿ
ದಿರ್ನೆಲ್ಲಿ ತಮಾಳ ಚಿಲ್ಲಮರನೆಸೆದಿಕ್ಕುಂ ೮೪

ನೆಲ್ಲಿಯ ಮರಂಗಳೋಳಿಗ
ಳಲ್ಲಿ ಕರಂ ತೋರ್ಪ ತೋರಗಾಯ್ಗಳ ಮೊತ್ತಂ
ತಲ್ಲಜಶೋಭಾವಿಭವದಿ
ನೆಲ್ಲರ ಕಣ್ಗೆ ಪುತಿಪ್ಪುದತಿಶಯಸುಖಮಂ ೮೫

ಸುಮನೋವಿಳಾಸಮೇನುಂ
ಸಮನಿಸದುಱಿಕಾಯ್ತ್ರೊಡಂ ದಲತ್ತಿಯ ಮರನು
ತ್ತಮರಿಂಗಸೇವ್ಯಮಾದುದು
ಸುಮನಂ ದೊರೆಕೊಳ್ಳದಿರ್ದೊಡಲ್ತುಪಯೋಗಂ ೮೬

ಕೊಡಜಾಗಿರ್ದೇಳಾಲತೆ
ಪುದಿದು ಕಱಂಗಿರ್ದ ವೇಣಿಸಿರೊಳ್ಪಳ್ಳಿ ತಳಿರ್
ಕೆದಱಿರ್ದ ಮೊಲ್ಲೆಪೂವಿಂ
ಪೊದವಿಸಿದದಿರ್ಪುರ್ತ್ತೆಯಲ್ಲಿ ಕರವೆಸೆದಿರ್ಕುಂ ೮೭

ಉತ್ಪಲಮಾಲೆ

ಕತ್ತಲೆಯೋಡಿಪೋಗಿ ಪುಗಲಾ ಗಹನಾಂತರಮಂ ತನ್ನೋರಿ ಜೆಂ
ಬತ್ತಿಬರುತ್ತುಮಿರ್ದ ಪಿಡಿಯುಲ್ಕನುಗೆಯ್ಯೆ ಘನಾಳಿ ಸಾರ್ದರಾ
ಪತ್ತನಪೋಹಿಸಲ್ ಬಗೆದು ಮಾರ್ಪುಲಿಜೆತ್ತಿದ ಭಲ್ಲೆಯಂಗಳಂ
ತೆತ್ತಲುಮಿರ್ದ ದರ್ಭೆಗಳಿಗಂಜಿದವೋಲ್ ಪುಗಿಸಂ ಕರಂಗಳಂ ೮೮

ಕಂದ: ನೆಱತಬಿಳ್ದ ಬಿದಿರ ಮೊತ್ತಂ
ಬಿಱುಗಾಳಿ ಕಡಂಗಿ ಪೊಯ್ಯಲಳ್ಳಾಡುತ್ತಂ
ದುಱತ ಗೀಕುಗೀಕುಗೀಕೆಂ
ದೊಱಳೆ ಕರಂ ಝುಂಕಿಪಂತಿರಿರ್ದುದು ಬೆಳಗಂ ೮೯

ವಚನ: ಮತ್ತಮಲ್ಲಿ

ಚಂಪಕಮಾಲೆ

ಅತಿಶುಭಪ್ರಜಾತಿಗಜಸಂಕುಳಮೊಂದೆಡೆಯಲ್ಲಿ ಮತ್ತಮು
ನ್ನತಮೃಗಜಾತಿವಾರಣಗಣಂಗಳವೊಂದೆಡೆಯಲ್ಲಿ ಮತ್ತೆಯುಂ
ಕ್ಷಿತಿನುತಮಂಪ್ರಜಾತಿಕರಿವೃಂದಮುದೊಂದೆಡೆಯಲ್ಲಿ ಕೂಡೆ ಸಂ
ಗತಿಯೊಳಮಲ್ಲಿಗಲ್ಲಿಗೆ ಗಜಂಗಳವಿಂಡುಗಳಿರ್ದವೆಲ್ಲಿಯುಂ ೯೦

ಕಂದ: ತನ್ನಯ ಕರಪುಷ್ಕರದಿಂ
ಬೆನ್ನಂ ತೊಡೆದೂಡಿ ಮೊಲೆಯನಿತ್ತೊಲ್ದಳಿರಂ
ಮನ್ನಿಸಿ ಪಿಡಿ ನಿಜಶಿಶುವಂ
ಚೆನ್ನಾಗಿಯೆ ನಡಯಿಸುತ್ತುಮಿರ್ದುದು ನೆಳಲೊಳ್ ೯೧

ಪಿಡಿಯ ಮುಂದೋಡಿ ಪೋದುದು
ಕಡುಪಿಂದರೆಗಚ್ಚಿ ತದುಕಿನೆಳೆದಳಿರಂ ಮೇ
ಗಡರೆತ್ತಿ ಸುಂಡಿಲಂ ಮುಂ
ದಿಡುವನ್ನಂ ತಾಯ್ಗೆ ಮೋಹಮೊಂದಿಭಕಳಮಂ ೯೨

ಮಹಾಸ್ರಗ್ಧರೆ

ನಲವಿಂ ಪೆಣ್ಣಾನೆಯಂ ಕಂಡನುನಯಪರನಾಗೊಯ್ದು ಪದ್ಮಾಕರೋರು
ಸ್ಥಳಿಗಂ ಪೇಳ್ದಲ್ಲಿ ನೀರಂ ಕೊಡೆವಿಡಿದರಳಿರ್ದಂಬುಜಾತಂಗಳಂ ಮಂ
ಜುಳಕುಂಜಕ್ಕೊಯ್ದು ನೀಡುತ್ತರಳಿಯ ತಳಿರಂ ಪೇಚಕೋಚ್ಚುಂಬನಕ್ಕಂ
ದೆಳಸುತ್ತುಂ ವಾಸಿಸುತ್ತುಂ ನಸೆಗನುಪಶನಾಯ್ತುಂಬುದಾಭಂ ಮದೇಭಂ ೯೩

ಕಂದ: ಎರಡುಂ ಪೆರ್ಬಾವುಗಳುಮ
ನೆರಡುಂ ಕೋಡುಗಳ ಮೊನೆಗಳಿಂದಿಱಿದೆತ್ತಲ್
ಪರಿಲಂಬಿಸಲದು ಮೞಿಬಿಂ
ಭರಿಕೈಗಳನುಳ್ಳ ಕರಿಯವೋಲ್ ಕಣ್ಗೆಸೆಗುಂ ೯೪

ಚಂಪಕಮಾಲೆ

ಮದಗಜಮೊಂದು ಮಾರ್ಪೊಳೆಯೆ ತಾಂ ಸ್ಫಟಿಕೋಪಳದೊಳ್ ಪ್ರತೀಭಮಂ
ದದನುಱೆನೋಡಿ ಕೋಪಿಸಿ ರದಂಗಳನೀಡಿಱಿಯಲ್ಕೆ ಕೊಂಬುಗಳ್
ತುದಿಮುಱಿಯಲ್ಕದಂ ಮರಳೆ ಕಂಡಿದು ತಾಂ ಪಿಡಿಯಾನೆಯೆಂದು ಸ
ಮ್ಮದದೊಳೆ ಮುಟ್ಟುತಿರ್ದುದು ಮದಾಭಿಹತಂ ಸುವಿವೇಕಿಯಪ್ಪುದೇ ೯೫

ಉತ್ಪಲಮಾಲೆ

ಪಿಂದಣಭಾಗದಲ್ಲಿ ಮುಱಿಗೊಂಡು ಮದೇಭದ ರೂಪು ತೋರಮಾ
ದೊಂದು ವಿನಿರ್ಮಳಸ್ಫುಟಿಕಕೂಟದೊಳಂ ಪ್ರತಿಬಿಂಬಿಸಲ್ಕದಂ
ಸಂಧಿಸಿ ಸಿಂಹಮಿಕ್ಷಿಸಿ ಕರೀಂದ್ರಮಿದೆಂದಭಿಶಂಕೆಯಿಂದೆ ಸಾ
ರ್ತಂದದು ಪೊಯ್ಯಲಂದುಗುರ್ಗಳುಂ ಮುಱಿಯಲ್ಕದು ನೊಂದುಪೋಪುದುಂ
೯೬

ಕಂದ: ಆನೆಗಳ ಪಿಂಡನೀಕ್ಷಿಸಿ
ತಾನೊಂದುತ್ಕಂಠಕಂಠಕಂಠೀರವಮು
ಧ್ವಾನಿಸಿ ಸೀಳ್ದತ್ತಿನಱಿವ
ಜಾನನದಿಂ ಸುರಿಯಲರುಣಮುಕ್ತಾಜಾಳಂ ೯೭

ಚಂಪಕಮಾಲೆ

ಹರಿಗಳ ಪಿಂಡು ಕಂಡು ಮದದಾನೆಗಳೋಳಿಗಳಂ ಪ್ರಕೋಪಿಸಿ
ತ್ವರಿತದೆ ಬಂದು ಮೇಲೆಮಿಗೆವಾಯ್ದಿ ರದಪ್ಪಳಿಸಲ್ ಶಿರಂಗಳಿಂ
ಸುರಿದ ವಿಮೌಕ್ತಿಕಂಗಳಿಳೆಯೊಳ್ ಪೊಳೆವುತ್ತುಮವಿರ್ದಮೆಲ್ಲಿಯುಂ
ತರುಗಳಮೊತ್ತಮೊತ್ತಿದೊಡೆ ಬೀಳ್ದುಡುಪಂತಿಗಳೆಂಬ ಮಾಳ್ಕೆಯಿಂ ೯೮

ಉತ್ಪಲಮಾಲೆ

ಒಂದೆಡೆಯಲ್ಲಿ ಮೇಘಜವಿಮೌಕ್ತಿಕರಾಶಿಗಳಿರ್ದವಲ್ಲಿ ಮ
ತ್ತೊಂದೆಡೆಯಲ್ಲಿ ಕುಂಜರಜಮೌಕ್ತಿಕವೃಂದಮದೊಪ್ಪಿತಲ್ಲಿ ಮ
ತ್ತೊಂದೆಡೆಯಲ್ಲಿ ಸೂಕರಜಮೌಕ್ತಿಕಸಂತತಿ ತುಂಬಿತಲ್ಲಿ ಮ
ತ್ತೊಂದೆಡೆಯಲ್ಲಿ ವೇಣುಜವಿಮೌಕ್ತಿಕಸಂಕುಳಮಿರ್ದುದೆಲ್ಲಿಯುಂ ೯೯

ವಚನ: ಇಂತತೀವಗಹನಮಾದಾ ಮಹಾಗಹನಾಂತರಾಳದೊಳ್

*

ಮತ್ತೇಭವಿಕ್ರೀಡಿತ

ಬಲೆಯಂ ಕಟ್ಟುವ ಪ್ರಾಸಮಂ ಪೊಸೆವ ಬಲ್ಕಾಲ್ಗಣ್ಣಿಯಂ ಪಣ್ಣುವ
ಗ್ಗಳಬಿಲ್ಗೇಸುವ ಕಲ್ಲಿಯಂ ಸಮೆವ ತೂಣೀರಂಗಳಂ ಮಾಳ್ಪ ಮಂ
ಜುಳಬಾಣಂಗಳನೆಯ್ದೆ ತಿರ್ದಿ ಗಱಂಗಟ್ಟುತ್ತಿರ್ಪ ಗುಂಟಂಗಳಂ
ಬಲುವುದ್ಯೋಗದೊಳಿರ್ದು ಹೆಕ್ಕಳಿಸಿದತ್ತುದ್ಯತ್ಕಣಂ ಪಕ್ಕಣಂ ೧೦೦

ಕಂದ: ಸಣ್ಣಗಾಡಿಗೆಯ ಪುಡಿಯಿಂ
ಪಣ್ಣಿದ ಪುತ್ಥಳಿಕೆಯಂತೆ ಪೊಳಸೇಱಿದ ಮೆ
ಯ್ವಣ್ಣಂ ಪ[1]ರಿ[1]ಕಲಿಸುತ್ತಿರೆ
ತಿಣ್ಣಂ ನೆರೆದಿರ್ದುದಲ್ಲಿ ಶಬರೀನಿವಹಂ ೧೦೧

ವಚನ: ಆ ಶಬರಶಿಬಿರದೊಂದೆಡೆಯೊಳ್

ಉತ್ಪಲಮಾಲೆ

ಚಂದಸದಿಂದೆ ಮಾಡಿದೊರಳೊಳ್ ಬಿದಿರಕ್ಕಿಯನೆಯ್ದೆ ಪೊಯ್ದು ಜಿ
ಲ್ಲೊಂದಿದ ದಂತದೊಂದೊನಕೆಯಂ ಪಿಡಿದೊಳ್ಕಳಿಸುತ್ತುಮಿರ್ದ ಪೌ
ಳಿಂದಿನಿ ಸೂವಿಸೂವಿ ಗಜಮಲ್ಲನೆ ನಲ್ಲನೆ ಸೂವಿಸೂವಿ ಶ
ತ್ರುಂದನು ಬಿಲ್ಲಬಲ್ಲಹನೆ ಸೂವಿಯೆ ಸೂವಿ ದಲೆಂದು ಪಾಡಿದಳ್ ೧೦೨

ಸ್ರಗ್ಧರೆ

ಕಾಯಂ ಕೊಯ್ಯಲ್ ಕೆಲಂಬರ್ ಗೆಳಸನಗೆವ ಕಜ್ಜಂಗಳಿಂದಂ ಕೆಲಂಬರ್
ಬೀಯಂ ತಾನೇನುಮಿಲ್ಲೆಂದಱಿದು ಬಿದಿರ ಜಿಲ್ವಕ್ಕಿಯಂ ಬೇಗದಿಂದಂ
ದಾಯಲ್ಬೇಕೆಂದುಮಲ್ಲಿಂ ಕೆಲರುಱಿತಪೊಱಿಮಟ್ಟತ್ತಲಿತ್ತಲ್ ಪುಳಿಂದ
ಸ್ತ್ರೀಯರ್ ಪೋಗು[2]ತ್ತು[2]ಮಿರ್ದರ್ ಪೊಳೆದು ಮೆಱತಮಿನಂ ಚಂಚಲಾಪಾಂಗಪಾತಂ
೧೦೩

---

[1] ರ (ಗ) [2] ತ್ತ (ಕ)

* ಶಬರ ಶಿಬಿರವರ್ಣನೆ (ಗಚ)

ಚಂಪಕಮಾಲೆ

ರವಿಕರತಾಪತಾಪ್ತರವಿಕಾಂತಶಿಳಾತಳದಲ್ಲಿ ಪೋಗುತಿ
ರ್ಪ ವನಚರೀಜನಂ ಕುಚಯುಗಂಗಳ ಭಾರಮಡೆಯ್ದೆ ತಿಣ್ಣಮಾ
ಗನರತಿವೇಗದಿಂ ನಡೆಯಲ್ಕಾಱದಪಕ್ಕೆ ಕಸಲ್ದು ಬಯ್ವರಿಂ
ತಿವು ಕಡುಚಂದವೇಕೆಮಗೆ ತೋರಿದವಾದುವೆನುತ್ತುಮಾಕ್ಷಣಂ ೧೦೪

ವಚನ : ಮತ್ತಮುದಱಿಂದತ್ತಲೊಂದನೇಕಾನೋಕಹನಿಕರಸಮುದ್ರೇಕದಿಂ ಪರ್ವಿ ಸುರ್ಪುಗೊಂಡ ಬಲ್ಲಡವಿಯಲ್ಲೊಂದುತಾಣದೊಳ್

ಮಹಾಸ್ರಗ್ಧರೆ

ಹಿಡಿಯಂಬಂ ಕಟ್ಟಿ ಬಾರಿಂದುಡೆದೊವಲೆಡೆಯೊಳ್ ಬಿಲ್ಲುಮಂ ಕೌಂಕುಳಲ್ಲಂ
ದಡಸಿಟ್ಟೆಯ್ದೊತ್ತಿಯಂಬಂ ತಿರುಪುತೆ ಬಲಗೈಯಲ್ಲಿ ಪೆಣ್ಣಾಯ್ಗಳಂ ಸಂ
ಗಡದೊಳ್ ಕೊಂಡೊಯ್ಯುತುಂ ಸುತ್ತಲುಮೆಡಬಲನಂ ನೋಡುತುಂ ಪೋದನೊರ್ವಂ
ಕಡುಪಿಂದಂ ಬೇಂಟೆಯ ಕ್ರೀಡೆಗೆ ದರವಿಳಸತ್ಕಿಂಕರಾತಂ ಕಿರಾತಂ ೧೦೫

ವಚನ : ಆಗಳ್

ಚಂಪಕಮಾಲೆ

ತಳಿರ್ಗಳ ತೊಂಗಲಂ ಬಿಗಿದು ಸೀರೆಯ ಮಾಳ್ಕೆಯಿನುಟ್ಟು ಗುಂಜೆಯಿಂ
ದಳನಡೆ ಮಾಡಿದೊಳ್ದೊಡಿಗೆಯಂ ಸಲೆತೊಟ್ಟುಱತಿ ಹೀಲಿದಂಡೆಯಂ
ತಲೆಯೊಳೆ ಸುತ್ತಿಂ ತಾಂ ಬಿದಿರಮುತ್ತಿನ ಹಾರಮನಿಕ್ಕಿ ಗಂಡನಂ
ತೊಲಗದೆ ಪಿಂಪೆ ಬಿಲ್ವಿಡಿದು ಬರ್ಪ ಪುಳಿಂದಿನಿಯೊರ್ವಳೊಪ್ಪಿದಳ್ ೧೦೬

ಉತ್ಪಲಮಾಲೆ

ಕಾಡೊಳೆ ಬೇಂಟೆಗಾಗಿ ಸುಳಿದಾಡುತುಮಿರ್ಪೆಡೆಯಲ್ಲಿ ಬೇಡನಂ
ಬೇಡಿತಿ ಬೇಡೆ ತಂಬುಲಮನಿಕ್ಕುವ ಪೊತ್ತಿನೊಳೆಯ್ದೆ ಘರ್ಜನಂ
ಮಾಡುವ ಸೊಕ್ಕಿದೆಕ್ಕಲನನೀಕ್ಷಿಸಿ ನಾರಿಯೊಳಿಟ್ಟು ಬಾಣಮಂ
ಹೂಡಿದ ಬಿಲ್ಲುಮಂ ಪಿಡಿದೆಸಲ್ಕವನುದ್ಯತನಾಗಲಾಕ್ಷಣಂ ೧೦೭

ಮಹಾಸ್ರಗ್ಧರೆ

ಕಡುಪಿಂ ಮೇಲ್ವಾಯಲೆಂದಪ್ಪಳಿಸಿದಪುದಿದೆಂದಂಜುತಂ ವಾಮಪಾರ್ಶ್ವಂ
ಬಿಡದೆಯ್ತಂದಾತನಂತಚ್ಚ ಬರಿಬರಿಯನಾಲಿಂಗನಂಗೆಯ್ಯಲಾಗಳ್
ಕಡುರಾಗದ್ವೇಷಮೆಂಬೀಯೆರಡುಮೊಡನೆ ಕೂಡಿರ್ದು ತಳ್ತೇಕರೂಪಂ
ಬಡೆದಿರ್ದತ್ತೆಂಬಿನಂ ಕಣ್ಗೆಸೆದನುಪಗತಂ ಸೊಪ್ಪಳಿಂದ ಪುಳಿಂದಂ ೧೦೮

ಮಸೆವುತ್ತಂ ದಾಡೆಯಂ ಕೆಕ್ಕಳಿಸಿ ದೆಸೆಗಳಂ ನೋಡುತುಂ ಬಾಲಮಂ ಲಂ
ಬಿಸುತುಂ ರೋಮಾಂಕುರಂಗಳ್ ನೆಗೆನೆಗೆದು ನಿಲಲ್ ಗರ್ಜಿಸುತ್ತುಂ ಕರಂ ಮಾ
ಮಸಕಂಬೆತ್ತಿರ್ದು ಸುತ್ತಂಬಳಸಿದ ಶಬರವ್ರಾತಮಂ ಮೇಲೆವಾಯ್ದಂ
ಜಿಸಿಯೊಟ್ಟೈಸೋಡಿಪೋದತ್ತದಲಿಕ್ಕುಳೆ ವಿಲಸದ್ದೀರ್ಘದೇಹಂ ವರಾಹಂ ೧೦೯

ವಚನ: ಸಮನಂತರಂ

ಮಹಾಸ್ರಗ್ಧರೆ

ಜಡಿಯುತ್ತುಂ ಬಾಲಮಂ ಗರ್ಜಿಸಿ ಕರತಳದಿಂ ಭೂಮಿಯಂ ಪೊಯ್ದು ಮತ್ತಂ
ಕಡುಸೇಲ್ವಾಯದೋವದಂದಪ್ಪಳಿಸಿ ನಖಮುಖಾಗ್ರಂಗಳಿಂದೌಡೆ ಮೆಯ್ಯಂ
ಕಡುಪಿಂದಂ ಕೀಳ್ತು ಕೂರಿತ್ತೆನಿಪ ಸುರಿಗೆಯಿಂ ಕುತ್ತೆ ರಕ್ತಪ್ರವಾಹಂ
ಬಿಡೆ ಬಾ[1]ಯಂ[1] ಮೂಗಿನಿಂ ಪೆರ್ವುಲಿಯನತಿಬಳಂ ಕೊಂದನೊಂದಂ ಪುಳಿಂದಂ ೧೧೦

ವಚನ: ಬಳಿಯಮಲ್ಲಿಂದಂ ಮುಂದೊಂದು ವಿಕಟವಿಶಾಲವಿಟಪಪ್ರಕಟೀಕೃತ ಸಮುತ್ಕಟಪಟುತರನಿಕಟವಿಟಪಿಪಟಲಿಕಾಸಮುಪಜಟಿಳಿತ ಪರಿಸ್ಫುಟಮಾದಟವಿ ಮಧ್ಯ ಪ್ರದೇಶದೊಳ್

ಚಂಪಕಮಾಲೆ

ಬಿಡುಬಿಡು ನಾಯ್ಗಳಂ ಪರಿದು ಬೆನ್ನೊಳೆ ಮಾಣದೆ ಪೋಗು ಪೋಗು ಸಂ
ಗಡಿಸಿಯೆ ಬೀಸುಬೀಸು ಬಲೆಯಂ ಬಿಡದಾರ್ದೆಸೆಸೆಯ್ದು ಕೊಲ್ಲು ಕೊ
ಲ್ಲಡಸಡಸೆಂಬ ಘೋರತರಘೋಷಮುದುಣ್ಮಿರೆ ಬೇಂಟೆಕಾಱಪೆ
ರ್ವಡೆ ಮೃಗರಾಜಿಗಂತಕನ ಸೇನೆ ಕರಂ ಕವಿದಂತಿರೊಪ್ಪುಗುಂ ೧೧೧

ವಚನ: ಆಪೊತ್ತಿನೊಳ್

ಕಂದ: ಉರವಣಿಪ ಬೇಂಟೆಕಾಱರ
ನೆರವಿಯನವಳೋಕಿಸುತ್ತು ಮಿರ್ದತಿಭಯದಿಂ
ಹರಿಹರಿದುಪೋಯ್ತು ಮಱಕೇ
ಸರಿ ಸರಿದೋಡಿತ್ತು ಹರಿಣಿ ಹರಿಸಿದುದಸುವಂ ೧೧೨

ಚಂಪಕಮಾಲೆ

ಹುಲಿ ಹೊದಱಲ್ಲಿ ತಗ್ಗಿದುದು ಹೇರುಡು ಹುತ್ತದೊಳೋಡಿ ಪೊಕ್ಕುದ
ಗ್ಗಲಿಸಿದ ಕುಂಜದೊಳ್ ಕರಡಿ ಮೆಯ್ಗರೆದಿರ್ದುದು ತಳ್ತ ಕಂತುಜಕ್ಕುಳ್
ಪೊಲಸಡಗಿತ್ತು ಗಹ್ವರದ ಕತ್ತಲೆಯೊಳ್ ಮರೆ ಕುಳ್ಳಿದತ್ತು ಕೀ
ಳ್ಗಿಲದೊಳೆ ಪತ್ತಿದೊಂದುಸಿರದೆಯ್ಯಮೃಗಂ ಜಗುಳ್ದತ್ತು ಜಂಬುಕಂ ೧೧೩

1 ಯಿಂ (ಗ)

ಕಂದ: ಕೆಲವದಱೊಳ್ ಪುಣ್ಬಡೆದವು
ಕೆಲವದಱೊಳ್ ಬಿಳ್ದು ಪೊರೆವುತಿರ್ದವು ಮತ್ತಂ
ಕೆಲವದಱೊಳೋಡಿಪೋದವು
ಕೆಲವದಱೊಳ್ ಸತ್ತುದಾಳ್ದವತಿರೌದ್ರತೆಯಂ ೧೧೪

ವಚನ: ಮತ್ತಮಲ್ಲಿ

ಸ್ರಗ್ಧರೆ
ಬಿಲ್ಲಂ ಬಿಲ್ವೆ ಸ್ವಹಸ್ತಾಗ್ರದೊಳೆ ಪಿಡಿದುಮಾಕರ್ಣಪೂರ್ಣಂ ದಲಾಗಿ
ರ್ದೆಲ್ಲಗ್ರಂ ಜೋದ್ಯಮಪ್ಪಂತಿರೆ ತೆಗೆದೆಸಲಾ ಬಾಣದಿಂ ಮುಂದೆ ಮುಂದಂ
ತಲ್ಲಿಂದತ್ತತ್ತಮೋಡುತ್ತಮೆ ತಿರಿಪಿ ನಿಜಾಗ್ರೀವಮಂ ನೋಡುತುಂ ಮ
ತ್ತಲ್ಲಿಂದಾಳೇಱನೆಂಟಂ ಸರಳಿಸಿದುದು ಭೀತಾಂತರಂಗಂ ಕುರಂಗಂ ೧೧೫

ಉತ್ಪಲಮಾಲೆ
ಜೊಬ್ಬಿಱಿಂದಾಲಿ ಪಿಂದುಮರಿದೋಡುವ ಪುಲ್ಲೆಯನೆಚ್ಚುಕೊಂಡಡಂ
ತುರ್ಮರೆಯಲ್ಲಿ ಬಿಳ್ದಿಗಲದಂ ಬಳಸಿರ್ದು ನಿರೀಕ್ಷಿಸುತ್ತುಮಿ
ರ್ಪುರ್ವಿದ ಸತ್ಪುಳಿಂದಿಯರ ಚಾರುಕಟಾಕ್ಷಮರೀಚಿ ಸುತ್ತಲುಂ
ಪರ್ವಿರೆ ಚಂದ್ರಮಂಡಲದ ಪುಲ್ಲೆಯುಮೋಲೆಸೆದತ್ತದಾಕ್ಷಣಂ ೧೧೬

ವಚನ: ಅಲ್ಲಿಂ ಮುಂದೊಂದು ರಮಣೀಯಮಣಿಮಯವಿಮಳತರ ವಿಪುಳಶಿಲಾ ತಳಪ್ರದೇಶದೊಳ್

ಚಂಪಕಮಾಲೆ
ಕಿರಣಗಣಂಗಳಂ ಕೆದಱುತಿರ್ದ ವಿಶಾಲಸುಪದ್ಮರಾಗವಿ
ಸ್ಫುರಿತಶಿಳಾತಳಾಗ್ರದೊಳೆ ನಿಂದಿರೆ ಪುಲ್ಲೆಯುದಂ ಸಮೀಪದೊಳ್
ತ್ವರಿತದೆ ಕಂಡು ಪೇಡಮಿಗಿಚ್ಚು ಸಮಾಪರಿಸಿತ್ತು ನೋಳ್ಪಡಿಂ
ತಿರದಿದನೆಂದು ತಳ್ಳಳಿಸುತಿರ್ದುದು ತನ್ಮೃಗಶಾಬಮಾಕ್ಷಣಂ ೧೧೭

ಉತ್ಪಲಮಾಲೆ
ಆಗಸದಲ್ಲಿ ಪಾಱಿ ಮಿಗೆಪೋಗುತುಮಿರ್ದ ವಿಹಂಗಮಾಂಗಮಿಂ
ಬಾಗಿರೆ ಚಂದ್ರಕಾಂತಶಿಲೆಯೊಳ್ ಪ್ರತಿಬಿಂಬಿಸಿ ತೋಱುತಿರ್ದುದಂ
ಬೇಗದೆ ಮುತ್ತುತಿರ್ದಡಮಿಜೆಕ್ಕು ನಿರೀಕ್ಷಿಸಿ ಪಕ್ಷಿ ತಪ್ಪದೆಂ
ದಾಗಳದಂ ಕದಕ್ಕದಿಸಿ ಕಚ್ಚುತುಮಿರ್ದುದು ಕೂಡೆ ಪೋಗುತುಂ ೧೧೮

ಚಂಪಕಮಾಲೆ
ತಿಳಿದ ಕೊಳಂಗಳತ್ತಡಿಗಳಲ್ಲಿಯ ನಿರ್ಮಳಚಂದ್ರಕಾಂತ ಮಂ
ಜುಳಶಿಲೆಯಲ್ಲಿ ಲೀಲೆಯೊಳೆ ಕುಳ್ಳಿದ ಬಾಳಮರಾಳಕಂಗಳು
ಜ್ಜ್ವಳಿಸಿ ದಲಲ್ಲಿ ಮಾರ್ಪೊಳದವಿಸ್ಮಡಿಯಾಗಿರೆ ಕಂಡು ತಾಯ್ಗಳುಂ
ತಳೆದುವು ಹರ್ಷಮಂ ಪಲವುಮಕ್ಕಳುಮಾಗಿರಲಾರೊ ಮೋಹಿಸರ್ ೧೧೯

ಫಲತರುಶಾಖೆಗಳ್ ಕೆಲದ ಸುಸ್ಫಟಿಕಾಫಳದಲ್ಲಿ ಕೂಡೆ ಮಾ
ರ್ಪೊಳೆಯಲದಂ ವಿಮುಗ್ಧಕಪಿಗಳ್ ನಡೆನೋಡಿ ದಿಟಂ ದಲೆಂದು ತ
ತ್ಫಳದಭಿಲಾಷೆಯಿಂದವಿರದಲ್ಲಿಗೆ ಲಂಘಿಸಿ ಕಚ್ಚಿಕಚ್ಚಿಯುಂ
ಸೆಳೆದೊಡೆ ನೊಂದು ಪಲ್ ಮುಱಿಯೆ ಬೀಳ್ದುರುಳುತ್ತೊದಱುತ್ತುಮಾಕ್ಷಣಂ ೧೭೦

ಕಂದ : ಗಂಡಭೇರುಂಡನತ್ಯು
ದ್ದಂಡಂ ಸರಭಂಗಳೆರಡುಮಂ ಕಚ್ಚಿ ನಭೋ
ಮಂಡಳದೊಳ್ ತೂಗಿದುದುಱೆ
ತುಂಡತುಳಾದಂಡದಿಂದವೊಂದರೆಜಾವಂ ೧೭೧

ವಚನ : ಇಂತುಗುರ್ವುವಡೆದುರ್ವಿ ಕೊರ್ವಿ ಪರ್ವಿದ ಪೇರಡವಿಯೊಳಗತೀವ ಭಯಂಕರಾಕಾರಂಗಳಪ್ಪ ತಿರ್ಯಗ್ಜೀವಂಗಳ ಗತಿಸ್ವಭಾವವ್ಯಾಮೋಹವಧವೈರಸ್ಯಂಗಳಂ ನೋಡಿನೋಡಿ ಕಡುಚೋದ್ಯಂಬಡುತ್ತುಂ ನಡೆವ ಧರ್ಮನಾಥಕುಮಾರನ ಮುಂದೊಂದೆಡೆಯೊಳ್

*

ಮತ್ತೇಭವಿಕ್ರೀಡಿತ

ವನದೊಳ್ ಕೂಡೆತೊಳಲ್ದು ಬಂದುದಱನಾದಾಯಾಸಮಂ ಮದ್ಯಸೇ
ವನೆಯಿಂದಂ ಕಿಡಿಸಲ್ಕೆವೇಡಿ ಮಿಗೆವೊತ್ತಂಗೊಂಡು ಸುತ್ತಂ ಪುಳಿಂ
ದಿನಿಯರ್ ಸರ್ವಪುಳಿಂದರುಂ ಬಿಡದೆ ಕುಳ್ಳಿರ್ದರ್ ಸುರಾಪೂರ್ಣಭಾ
ಜನಸಂದೋಹಮನಿಟ್ಟು ಮಧ್ಯದೆಡೆಯೊಳ್ ಕೈವಿಕ್ಕ ಸಂತೋಷದಿಂ ೧೭೨

ಕಿವಿಯೊಳ್ [1]ಸೆ[1]ಕ್ಕಿ ತೊಳಪ್ಪ ದಾಸಣದ ಹೂವಂ ಜೆಲ್ವ ದಂತಂಗಳಿಂ
ದನಿಮಾಡಿದರ್ಗರುಕುಂಡಳಂ ಮಣಿಗಳುಂ ತಳ್ತೊಪ್ಪಿರಲ್ಕುಟ್ಟು ನು
ಣ್ಣೊವಲಂ ಬಿಲ್ಗಳನಿಕ್ಕಿಕೊಂಡು ಹೆಗಲೊಳ್ ತದ್ವಾರ್ತೆಗೇಳ್ದಾರ್ತದಿಂ
ದವೆ ಮತ್ತಲ್ಲಿಗೆ ಬೇಡರೆಯ್ದಿ ಬರುತಿರ್ದರ್ ನಾಲ್ಕುದಿಗ್ಭಾಗದಿಂ ೧೭೩

ಉತ್ಪಲಮಾಲೆ

ಹಾವಿನ ಹಾರಮಂ ಕೊರಳೊಳಿಕ್ಕಿ ತೊಡಂಕಿಸಿ ಕಕ್ಕಪಾಳಮಂ
ತೀವಿದ ಜೆಲ್ವನುಳ್ಳ ಪೆಗಲೊಳ್ ಕಡುಹುಂಡಮೆನಿಪ್ಪ ಕಂಥೆಯುಂ
ಭಾವಿಸಿ ತೊಟ್ಟುಕೊಂಡೆರಲೆಗೋಡುಗಳುಂ ಕುಣಿದಾಡೆ ಪಕ್ಷದೊಳ್
ಸಾವಗಿಸುತ್ತೆ ಜೋಗಿಣಿಯುಮಂ ನೆರೆದೆಯ್ದಿದರಲ್ಲಿ ಜೋಗಿಗಳ್ ೧೭೪

---

1 ಸೊ (ಗ) 2 ಳೆ (ಗ)

* ಮದ್ಯಪಾನ (ಗ)

ವಚನ: ಇಂತಾಸವಸೇವನಾಶೆಯಿಂದಂ ಬಂದೊಂದಿ ನಿಂದ ಪುಳಿಂದಿಯರ ಜೋಗಿಗಳಂದನುನಿಂದುಮುಖಿಯುಂದು ನಡೆನೋಡಿ ಕಂಡು ಕರೆದು ಹಿರಿಯರಜಿಂದಲ್ಲಲ್ಲಿ ಕುಳ್ಳಿರಿಸಿದನಂತರಂ ನಡುವೆ²ಣೆ³ಡೆಯೊಳಡಸಿಟ್ಟ ರಂಗವಾಲಿಯ ಮೇಲೆ

ಕಂದ: ವಾಸಂತಿಯ ಕುಸುಮದ ಹೊಸ
ಹಾಸಿನೊಳಂ ಗಂಡಭೈರವನನಿರಿಸಿ ಮಹಾ
ಭಾಸುರಕಿಸಲಯದಿಂ ಸಮೆ
ದಾಸುರ ಹಸೆಗಳೊಳಮಷ್ಟವಿಧದೇವ್ಯರುಮಂ ೧೨೫

ವಚನ: ನೆಲೆಗೊಳಿಸಿ ಬಳಿಯಮವರ ಮುಂದೆ ಮಾಂದಳಿರ ಮಣೆಗಳೊಳ್

ಕಂದ: ಸಿರಿಸಿಂಬಿ ತಂಪುಗಂ ಬ
ಬ್ಬುರಿ ಗಂಗಾಸಾಗರಂ ಸುರಾಳಂ ಸೋಮಂ
ವರವಾಣಿ ಮಾಳವೋದರಿ
ಮುರವಟ್ಟಿಗೆಯೆಂಬ ಕೆಲವು ಪೆಸರಿನ ಕಳ್ಳಂ ೧೨೬

ತುಂಬಿರ್ದನೇಕಘಟನಿಕು
ರುಂಬಮುನನುರಾಗದಿಂದೆ ತಂದಿಳಿಪಿದೊಡಂ
ದಂಬುರುಹಂ ಮೊದಲಾದವ
ಜಿಂ ಬಗೆವುಗೆ ಮಾಡಿದರ್ ಸಮಧಿವಾಸನೆಯಂ ೧೨೭

ವಚನ: ಇಂತು ಕಂಪುವಡೆಯಿಸಿ ಮಂತ್ರವಿಧಿಯಿಂ ಪೂಜಿಸೆನಲೊಡಂ

ಕಂದ: ಪಡೆದು ಭುವನೇಶ್ವರೀಕೋ
ಶದ ವಿವರಮನೆಯ್ದೆ ತಿಳಿದ ಕಾಳೋಜಂ ಬಹು
ವಿಧಬಲಿವಿಧಾನದಿಂದಂ
ಮಧುದೇವತೆಯಂ ಪ್ರಮೋದದಿಂ ಪೂಜಿಸಿದಂ ೧೨೮

ವಚನ: ಇಂತು ಘಟಪೂಜೆಯಂ ಮಾಡಿದಾಗಳ್

ಕಂದ: ಪೆಸರಿಲಿಯ ಬೊಟ್ಟನಿಂದಂ
ದೆಸೆದೆಸೆಗಂ ಮಿಡಿದುಮಿಡಿದು ಕೈಮುಗಿವುತ್ತುಂ
ವಸುಧೆಗೆಂದೊಕ್ಕು ಕಿಜಿಂದಂ
ಮುಸುಜಿತಯೆ ತಲೆಯಲ್ಲಿ ತಳಿದು ಸಲೆಪೊಡೆವಟ್ಟರ್ ೧೨೯

ವಚನ: ತದನಂತರಂ

ಉತ್ಪಲಮಾಲೆ

ಚಟ್ಟಳೆಯಲ್ಲಿ ಬಟ್ಟಸೊರೆಯೊಳ್ ಪೊಸಗಾಜಿನ ಚಾರುಪಾತ್ರೆಯೊಳ್
ಬಟ್ಟಲೊಳಿಂದುಕಾಂತಮಯಭಾಜನದೊಳ್ಪರಲಾವೆಯೋಡಿನೊಳ್
ಘಟ್ಟಿಯೆ ಪೇರಿಸಾಗಿ ತಿಳಿಗಳ್ಳನದಂ ನೆಱತುಂಬಿತಂದು ಪುಂ
ದಿಟ್ಟುದು ಮಾಱಪಗ್ರಜರನುಕ್ರಮಮಂ ಶಬರೀಸಮೂಹಕಂ ೧೩೦

ಕಂದ: ಕೆಲದೊಳ್ ಪಾಸಿದ ಕದಳೀ
ದಳಭಾಜನದಲ್ಲಿ ಪಲವುತೆಱದಡಬಳಮಂ
ಲಲನೆಯರೊಲ್ದಿಕ್ಕಿದರ
ಗ್ಗಲಿಸಿದ ಪರಿಪರಿಯ ಮಾನ ಬಾಡುಮನದಱತೊಳ್ ೧೩೧

ಧಮ್ಮಗಳ್ಳೆಱತವುತುಂ ಘನ
ಸಮ್ಮದದಿಂ ಭಾಗಗಳ್ಳನೆಱತವುತ್ತುಂ ಬಳಿ
ಯಮ್ಮಿಗೆ ಬಿನದದ ಕಳ್ಳೆಱತ
ದರ್ಮಡದಿಯರಂದು ಕಳ್ಳನೀಂಟುವ ಮೊದಲೊಳ್ ೧೩೨

ವಚನ: ಮತ್ತಂ ಮದ್ಯಮನಂಟುಸೂಯರ್ಗಂಗೆ ತೋಱಿ ಪೊಡೆವಟ್ಟು ಕಳ್ಳಂ ಕುಡಿಕುಡಿದು ಬಿಡಲಾಱದೆ ಕಡುತವಕದಿಂದಡಿಗಡಿಗೆ ಕೊರಳೆ ಮೇರೆಯಾಗಿ ಕುಡಿದು ಜೆಲ್ಲಗಾರ್ತಿಯರೊಡನೆ ಸಿರಿಸಿಂಬಿ ಸಾಸನಾಯ್ತು ಕಂಪಿಗಂ ಹಸನಾಯ್ತು ಬಬ್ಬರಿಗೆ ರುಚಿಯಾಯ್ತೆಂದು ಸವಿವೇಳ್ದು ಕೊಂಡಾಡುತ್ತುಂ ನಡುನಡುವೆ ಹುಲ್ಲೆಯೆಸಲೆಯ ಹಂದಿಯ ತುಪ್ಪದಿಂದಂ ತೋಯ್ದುಪ್ಪುಗಂಡಂಗಳಂ ಚಪ್ಪಿಱಿದು ಕಡವಾಯಿಂ ಸೀಂಟಿಯಾಃ ಯೆನುತ್ತುಂ.ಕಡಿಗಳಂ ಕಚ್ಚಿ ಮಡದಿಯರ್ಗೆ ಕೊಡುತ್ತುಂ ಸವಿಸವಿದು

ಉತ್ಪಲಮಾಲೆ

ಚಟ್ಟಳೆಯಲ್ಲಿ ತೀವಿದ ಸುರಾರಸಮಂ ಕುಡಿಯುತ್ತುಮಿರ್ದ ನೇ
ರ್ಪಟ್ಟನಿಯಳ್ಗೆ ನೀಡಿ ಪಿಪಿಪಿಪ್ರಿಯ ಪಿಪ್ರಿಯಬೇಡವೇಡಿದಂ
ಬಿಟ್ಟುಮನೋಹದಿಂ ಬಬಬಬಾಯೊಳೆ ಮುಕ್ಕುಳಿಸಿರ್ದು ಮದ್ಯಮಂ
ಕೊಟ್ಟೆನಗಾಗಿ ಸಾತಣಿವನೆಂಬ ತೊದಲ್ನುಡಿಯಿಂದಮೊಪ್ಪಿದಳ್ ೧೩೩

ವಚನ: ಮತ್ತಮೊರ್ವಳ್ ಕಡುಮುಗ್ಧೆ ಪಳಿಕಿನ ಪಾತ್ರೆಯೊಳ್ ತಿಳಿಗಳ್ಳಂ ತುಂಬಿ ಕುಡಿ[1]ವೆ[1]ಡೆಯೊಳ್

---

[1] ದೆ (ಕ)

ಉತ್ಪಲಮಾಲೆ

ದೇಯದ ನೀಲದಂಗುರದ ಕಾಂತಿಗಳಿಂ ಕರಿದಾಗಿ ಶೋಭೆಯುಂ
ಬೀಯದ ಪಾಣಿಶೋಣಮಣಿಕಂಕಣಸತ್ಕಿರಣಂಗಳಿಂದೆ ಕೆಂ
ಪಾಯತಮಾಗಿ ತೋಱೆಡೊಡೆ ಮಾನಸದೊಳ್ ಪುದಿಯಲ್ಕೆ ಕೌತುಕಂ
ಮಾಯದ ಮದ್ಯಮೆಂದಬಳೆ [1]ಪಿರ[1]ದೆ ನೋಡಿದಳೊಂದುಜಾವಮಂ ೧೩೪

ವಚನ : ಬಳಿಯಂ ಕೆಳದಿಯರ್ಗಿಂದದಱಿಂದನುಂ ತಿಳಿದು ಕುಡಿಯ ಪೊದಲ್ಗೊಂ
ಬುದುಂ

ಮತ್ತೇಭವಿಕ್ರೀಡಿತ

ರವಿಬಿಂಬಂ ಪ್ರತಿಬಿಂಬಿಸಿರ್ದದಱೊಳಂ ತೋಱುತ್ತಿರಲ್ ಕಂಡು ಮ
ದ್ಯಮನಾಸ್ವಾದಿಸುತಿರ್ದವಳ್ ಬೆದಱೆ ಕಂಪಂಗೊಂಡು ನೀನಾರೊ ಮಾ
ನವನೋ ದೈವನೋ ಪೇಳುಪೇಳೆನಗೆನುತ್ತುಂ ಪೋಗುಪೋಗೆಂದು ಡೊಂ
ಗುವ ಕ್ಕೆಯಂ ಮಿಗೆ ನೀಡಿ ಮತ್ತೆ ಬಲಿದೌಡಂ ಕಚ್ಚುತಂ ನೂಂಕಿದಳ್ ೧೩೫

ವಚನ : ಅನಂತರಂ ತಣ್ಗಂಪಿನ ತಮುರ್ಮನೆಯೆನಿಪ ಗಂಗಾಸಾಗರಮಂ ಕುಡಿದು
ಸವಿವೊಗಳ್ದು [2]ಮಗುಳ್ದು ತೇ[2]ಯೆಂದು ಬೇಡುವುದುಂ

ಚಂಪಕಮಾಲೆ

ಮುಗಮುಗಿಸುತ್ತಿರಲ್ ನೊಗಸೆ ತಂದೆಱೆವಾಕೆಯ ಚೆಲ್ವನಪ್ಪ ಮು
ಣ್ಗೆಗಮಪದಱಲ್ಲಿ ಮಾರ್ಪೊಳೆಯಲಾಗಳದಂ ನಡೆನೋಡಿ ಸಿಂಹಮೋ
ಸೊಗಯಿಪ ವಾನೆಯೋ ಗಿಳಿಯೋ ಕೋಗಿಲೆಯೋ ದಲಿದಾವುದೆಂದು ಸಂ
ದೆಗಿಸಿ ಮರುಳ್ಗಳೇನಱೆವರೋ ಕಳಹಂಸೆಯಿಂದೆಂದಳಾಳಿಗಂ ೧೩೬

ವಚನ : ಎಂದು ವಿಕಳತೆಯನೊಳಕೊಂಡು ನುಡಿವುತ್ತುಂ ಕಳ್ಳಂ ಕುಡಿದಡಗಂ
ತಿಂದದಱ ಮಹಿಮೆಯಂ ಮೆಚ್ಚಿಮೆಚ್ಚಿ ಬಿಚ್ಚುತಂ ನಡಿದೊವೊರ್ವರ ನಗೆಮೊಗಮಂ
ನೋಡಿ ತಮ್ಮೊಳಿಂತೆಂದರ್

ಕಂದ : ಕನಸಿನೊಳ್ ಕುಡಿದೊಡಾಗಳೆ
ಮನಸಿನೊಳಂ ಸೊಕ್ಕಿಸುತ್ತು ವಿರ್ಪತಿಸಿತಗಂ
ಘನಮಾಗಿ ಸುಖಮನೀವೊಂ
ದನುವೀ ಮಧುವಿನೊಳನಲ್ಲದುಳಿದಱೊಳುಂಟೇ ೧೩೭

---

[1] ಪಿಂ (ಕ) [2] ತಾ (ಕ)

ಭಾಪಜನ ಮಾಸನಿದು ಲ
ಕ್ಷ್ಮೀಪಧುವಿಂಗಣ್ಣನಿದು ಸುಧಾರಸದನುಜಂ
ಭೂವಳಯದೊಳೀ ಮದ್ಯ
ಕ್ಕಾವನೋ ಮರುಳಾಗಿ ಪಸ್ತುಸಂ ಸಮೆಯದಪಂ ೧೩೮

ಚಂಪಕಮಾಲೆ

ಪೊಸತೆನೆ ತೋಱುವೊಳ್ಪವಿಯು ಸಾರವಿದಂ ಬಿಡುವನ್ನನಾವನೋ
ಪಸುಮತಿಯಲ್ಲಿ ದೇವರಿದು ಕಾರಣಮಾಗಿ ಸುಧಾಂಬುರಾಶಿಯಂ
ಪೊಸೆದಖಿಳರ್ಗೆ ಕೊಟ್ಟರಿದನರ್ಥಿಯೊಳಿಂಪೊಡೆ ಮತ್ತೆ ಲೋಕದೊಳ್
ಬಿಸುಟಿದನಾರ್ಗೂ ಬಾಳುವರಿದಂ ತೊಱೆಯೆಂಬರನಿಕ್ಕು ಕಿಚ್ಚಿನೊಳ್ ೧೩೯

ವಚನ: ಇಂತು ಶೌಂಡಿಕರೆಲ್ಲರುಂ ಶುಂಡಾಸಾಮರ್ಥ್ಯಮಂ ಕೊಂಡಾಡುತ್ತು ಮಿರ್ದನವರತಂ ಮದಿರಾರಸದ ಮದನೇಱೆ ಕಣ್ಗಳ್ ಕೆಂಪು ತಿಣ್ಣಮಾಗಿ ಬಿಣ್ಪು ಮೆಯ್ಯೊಳ್ ಸೊಂಪಾಗಿ ಬಾಸೆ ಬಿಜ್ಜನೆ ಬೀಗಿ ತೋಱೆ ಪೋಗೆಮೇಗೆ ತೇಗುನೆಗೆದು ಬಿಕ್ಕು ಳೊಡನೆ ಪರಿಮಳೆಯಾಡುತ್ತುಮಿರಲಲ್ಲಿಗಲ್ಲಿಗೆ ಮಂಡಲಂಗೊಂಡು ಕಂಡರಂ ದಸರಿದೊಡ ಕಾದ ತೊದಳ್ನುಡಿಯಿಂದಂ ಕರದು ಬಯ್ವುತ್ತುಮುಟ್ಟುದಂ ಬಿಟ್ಟು ತಪ್ಪಣೆಗುಟ್ಟುತಂ ಕುಣಿದು ಮತಿಗೆಟ್ಟು ಕಳವಳಿಸುತ್ತಿರಲದಱೊಳೊರ್ವಂ

ಉತ್ಪಲಮಾಲೆ

ಚಿಂತಿಸುವಂತಿರೊಂದುನಿಮಿಷಂ ತಲೆಗುತ್ತಿ ಬಳಿಕ್ಕೆ ಬೇಗದಿಂ
ದಂ ತೆಱೆದಕ್ಷಿಯಿಂಪಱಿಸುವಂತಿರೆ ನೋಡಿದನಿಕ್ಕೆಲಂಗಳಂ
ಭ್ರಾಂತನಕಾರಣಂ ನಗುತುಮಿರ್ದುಗುಳ್ದಂ ನಸುಮುಚ್ಚಿದೋಷ್ಠದಿಂ
ದಂ ತುಱುಗಿರ್ದ ಮದ್ಯಮಯಬಿಂದುಗಳಂ ಮಧುಪಾನಮತ್ತಕಂ ೧೪೦

ವಚನ: ಬಳಿಯಂ ಹಳೆಗಲಹಮಂ ನೆನೆದು ಕೆರಳ್ದು ಬಯ್ದು ಹುರುಡಿಸಿ ಬಾಯ್ಗೆ ವಂದಂತೆ ಕೈಸಿಱಿದು ಗಳಪುತ್ತುಂ ಪೊತ್ತ ಮಡಕೆಯು ಕಳ್ಪು ನೆತ್ತಿಯಿಂ ಧಾರೆಗಟ್ಟಿ ಸುರಿ ಯುತ್ತುಮಿರ್ಪಿನಂ ನರ್ತಿಸುತ್ತುಂ ತಾರೇಳ್ಪೆಯು ಹಾಡುತ್ತುಂ ತಾಯ ಮೊಗಮಂ ನೋಡಿ ಸಾಯಿ ನೀನಾರೆನುತ್ತುಂ ಕೆಯ್ವೊಯ್ದು ಕಾಡುತ್ತುಮಿರ್ದು

ಕಂದ: ಉಟ್ಟುದನು ಮಱೆದುಬಿಟ್ಟೊಡೆ
ಚಟ್ಟಳೆಯಂ ಬಿಡದೆ ಪಿಡಿದು ಮಱೆಯದೆ ನಿಲ್ವೀ
ನಿಟ್ಟಿಗೆ ನೆಲೆಯಾದುದು ಬಾ
ಯ್ವಿಟ್ಟೊದಱುವ ಮದ್ಯಪಾನಮತ್ತಜನೌಘಂ ೧೪೧

ವಚನ : ಇಂತು ಬೇರ್ವರಿದು ಕೆಯ್ಮಿಕ್ಕು ಸೊರ್ಕಿನಳುರ್ಕೆಯಿಂದುಕ್ಕುತ್ತುಂ ಪಲವು ತೆಱದನನ್ವಿತಮುಂ ಗಳಪುತ್ತುಂ ಱುಕ್ಕಟಂ ಮುಸಗಿ ಕುಣಿದಾಡುತ್ತುಮಿರ್ದ ಮದ್ಯಪಿಗಳ ಬಳಗದ ಮಧುಪಾನಕೇಳೀವಿಜೃಂಭಣ ಬಹಳಕೋಳಾಹಳಕುತೂಹಳಮುಂ ಧರ್ಮನಾಥ ಕುಮಾರಂ ನೋಡಿನೋಡಿ ನಗುತ್ತುಮಿಕ್ಕೆಲದೊಳಿರ್ದ ಮೇಳದವರ [illegible]ಗಮುನವಲೋಕನಂ ಗೆಯ್ದುವರ ವಿಕಾರದ ಗೊಡ್ಡಾಟಮುಂ ಸುಟ್ಟುಂಬೆಯಿಂ ತೋಱಿ ತೋಱಿ ಪೇಳುತ್ತುಂ ಕಿಱಿದಂತರಂ ಪೋಗೆ ತೊಟ್ಟನೆ ಕಟ್ಟಿದಿಱಿತೊಳ್

*

ಮಹಾಸ್ರಗ್ಧರೆ

ಮುಗಿಲಂ ಮುಟ್ಟುತ್ತುಮಿರ್ಪುನ್ನತಶಿಖರಸಮೂಹಂಗಳಿಂ ವಿಸ್ಫುರದ್ಧಾಳಿ
ನಗುಣಕ್ಕಾಧಾರಯೋಗಿಪ್ರವರರನೊಳಕೊಂಡಿರ್ದ ದುರ್ಗಪ್ರವರಶ್ರೇ
ಣಿಗಳಿಂದಂ ನಿರ್ಜರಾಂಭಃಕಣತತಿಗಳಿನಾಕಾಶದಲ್ಲೆಲ್ಲಿಯುಂ ತಾ
ರೆಗಳಂ ಮಾಡುತ್ತುಮೊಪ್ಪಂಬಡೆದುದು ಪಿರಿದುಂ ರುಂದ್ರವಿಂಧ್ಯಾಚಳೇಂದ್ರಂ ೧೪೨

ಕಂದ : ಎನ್ನ ರಥಮೊಂದು ನಡೆಯ
ಲ್ಕುನ್ನತನಿಂ ಮೇಗೆ ಬಟ್ಟೆಯಂ ಕುಡವೇಳ್ಕುಂ
ಬನ್ನಂ ಪಾದಾನತನಾ
ಗಿನ್ನುಂ ಸೇವಿಸುತುಮಿರ್ಪನಿನನಾ ಗಿರಿಯಂ ೧೪೩

ಅದಱ ಘನಮೇಖಲಾವಳ
ಯದೊಳಂ ಕೀಲಿಸಿದ ತೋರಬೆಳ್ಳಿಯ ಗೆಜ್ಜೆಗ
ಳೊದವಿದ ಚೆಲ್ವಂ ಮಾಳ್ಪುದು
ಪದೆಪಿಂ ಬಳಸಿರ್ದ ತಾರಕಾನಿಕುರುಂಬಂ ೧೪೪

ವಚನ : ಮತ್ತಮಾ ಪರ್ವತಂ ಪಾದಂಗಳುಳ್ಳೊಡಂ ಜಂಗಮಮಲ್ತು ವಿಸ್ತೃತ ಪ್ರಸ್ಥಂಗಳುಳ್ಳೊಡಂ ನಿಯತಮಾನಾಭಿಯುತಮಲ್ತು ವಿಪರೀತತೆಯುಳ್ಳೊಡಂ ದೌರ್ಜನ್ಯ ಸಮನ್ವಿತಮಲ್ತು ಚಾಪಮುಳ್ಳೊಡಂ ಧನುರ್ಧರನಲ್ತು ಕಟಕಮುಳ್ಳೊಡಂ ಚಕ್ರವರ್ತಿ ಯಲ್ತು ಗಾಯತ್ರಿಯುಳ್ಳೊಡಂ ಬ್ರಾಹ್ಮಣನಲ್ತು ಅಮೃತಮುಳ್ಳೊಡಂ ಸ್ವರ್ಗಭೂಮಿ ಯಲ್ತು ಚಂದನತಿಲಕಮುಳ್ಳೊಡಂ ಸುದತೀವದನಮಲ್ತು[1]ಮಂ[1]ತುಮಲ್ಲದೆಯುಂ

ಕಂದ : ಮಿಗುವ ದ್ವಿಜಪರಿವಾರಿತ
ಮಗಣಿತ ಪುನ್ನಾಗಸೇವ್ಯಮಾನಂ ವಂಶೋ
ಪಗತಮೆನಿಸಿರ್ದ ಬೆಟ್ಟಂ
ಸೊಗಯಿಸಿದುದು ರಾಜನಂತೆ ಲಕ್ಷ್ಮಿಯ ಪೆರ್ಚಿಂ ೧೪೫

---

[1] ಅಂ (ಕ) * ವಿಂಧ್ಯಾಚಳ ವ್ಯಾವರ್ಣನೆ (ಗ)

ವಚನ : ಆ ಗಿರಿವರಂ ವಟಸಂಕೀರ್ಣಮಾಗಿಯುಮನವಟಸಂಕೀರ್ಣಮುಂ ವನಪರಿಪೂರ್ಣಮಾಗಿಯುಮವನಪರಿಪೂರ್ಣಮುಂ ಭಯೋತ್ಪಾದಕಮಾಗಿಯುಮಭಯೋತ್ಪಾದಕಮುಮೆನಿಪುದಂತುಮಲ್ಲದೆಯುಂ

ಸ್ರಗ್ಧರೆ

ತುಂಗವ್ಯಾಘ್ರಾಂಗವಾನರಶರಭಭೃಗದ್ವೀಪಿಸಿಂಹೋನ್ನತಿ ಧ್ಯಾ
ನಾಂಗಾದಿಪ್ರೌಢಯೋಗೀಶ್ವರಮೃತಪೃಕಮುಂ ತಾಳ್ದಿದೇ ತನ್ನಿಮಿತ್ತಂ
ಶೃಂಗಾರಂ ಹಾಸ್ಯ ರೌದ್ರಂ ಕರುಣಮುರುಭಯಂ ವೀರಮತ್ಯದ್ಭುತಂ ಶಾಂ
ತಂಗಂ ಭೀಭತ್ಸಮೆಂಬೀ ನವರಸಮುಯಮಾಯ್ತುನ್ನಗೇಂದ್ರಂ ನಗೇಂದ್ರಂ ೧೪೬

ಚಂಪಕಮಾಲೆ

ಸುರಮಿಥುನಂಗಳುಂ ಗುಹೆಗಳಲ್ಲಿ ಸುರಸ್ಮೃತಟಂಗಳಲ್ಲಿ ಖೇ
ಚರಮಿಥುನಂಗಳುಂ ಘನಲತಾಭವನಾಳಿಗಳಲ್ಲಿ ಕೂಡೆ ಕಿ
ನ್ನರಮಿಥುನಂಗಳುಂ ನೆಲಸೆ ಕಾಮವಿನೋದನಿಮಿತ್ತಮೆಲ್ಲಿಯುಂ
ವಿರಚಿಸಿದತ್ತು ಶೈಲಮದು ಕಾಮನ ಕೇಳಿಯ ಶೈಲಶಂಕೆಯುಂ ೧೪೭

ವಚನ: ಅದಲ್ಲದೆಯುಂ

ಕಂದ: ಮೂಡಣ ಪಡವಣ ಕಡಲೊಡ
ಗೂಡಿ ಕರಂ ನೀಳ್ದು ನಿಮಿರ್ದ ಬೆಟ್ಟಂ ಚೆಲ್ವಿಂ
ರೂಡಿಸಿತು ನೆಲನನಳೆಯಲ್
ಮಾಡಿರಿಸಿದ ಸುಪ್ರಮಾಣದಂಡದ ತೆಱದಿಂ ೧೪೮

ಮಹಾಸ್ರಗ್ಧರೆ

ವರರತ್ನಚ್ಛಾಯೆಯಿಂದಂ ಸಕಳದಶದಿಶಾಭಿತ್ತಿ ಭಾಗಂಗಳಂ ಕ
ರ್ಬುರಿತಂಮಾಡುತ್ತುಮಾದಂ ವಿಪುಳಕಳಶಚೂಳಾಗ್ರದಿಂ ಚುಂಬಿಸುತ್ತಂ
ಬರಮಂ ನಾನಾಪ್ರಕಾರಾತಿಶಯಿತಜಿನಚೈತ್ಯಾಲಯವ್ರಾತಮುಂ ತ
ದ್ಗಿರಿಸಾನೂದ್ಯಾನದಲ್ಲೊಪ್ಪಿದುದು ಸುರರ ಗೀತಂಗಳಿಂ ಭೋರೆನುತ್ತುಂ ೧೪೯
*

ವಚನ: ಇಂತು ಸುರಾಸುರ ಕಿನ್ನರ ಕಿಂಪುರುಷ ಗರುಡ ಗಂಧರ್ವ ಯಕ್ಷ ರಾಕ್ಷಸ ಸಿದ್ಧ ವಿದ್ಯಾಧರನಿಕರಂಗಳೆಲ್ಲಂ ನೆರೆದು ಪೂಜಿಸುವ ಹೃದ್ಯವಾದ್ಯಂಗಳಂ ಬಾಜಿಸುವ ಪಾಡುವಾಡುವ ವೀಣೆಯಂಬಿಡಿವ ಸಂಭ್ರಮಕೋಳಾಹಳದಿಂ ಪೊಸಪೊಸತಾದ ವಿಳಸನದಿಂ ದೆಸೆವೆತ್ತಿರ್ದ ಬಸದಿಗಳಿಂ ಬಳಸಿದ ಕಾರಣಂ ಮಂದರಗಿರಿಯಂತೆ ಸೌಂದರಮಾದ ವಿಂಧ್ಯಗಿರಿಯಂ ಕಂಡು ಪಿರಿದುಂ ಕೊಂಡಾಡುತ್ತುಂ ಧರ್ಮನಾಥಕುಮಾರಂ ಮುಟ್ಟೆವರ್ಪುದುಂ

* ಧರ್ಮನಾಥಕುಮಾರಂ ಕಿನ್ನರೇಂದ್ರಂ ಪ್ರಾರ್ಥಿಸೆ ಬೀಡಂ ಬಿಟ್ಟನು (ಗಚ)

ಕಂದ: ಉದಿರ್ವ ಸಂಪಗೆಯ ಕುಸುಮಸ
ಮುದಯಂಗಳಿನುದ್ಘನಿರ್ಝರೋದಕದಿಂದಂ
ದಿದಿರಾಗಿ ಧರ್ಮನಾಥಂ
ಗದು ಕೊಡುವಂತಿರ್ದುದರ್ಘ್ಯಪಾದ್ಯಂಗ[1]ಳುಮಂ[1] ೧೫೦

ವಚನ: ಅನಂತರಂ ಕಿನ್ನರೇಂದ್ರನೊರ್ವನಾ ಪರ್ವತಸಾನುವಿಂದಿಳಿದುಬಂದು ದೇವರಿಂಗೆ ವಿನಯವಿನಮಿತೋತ್ತಮಾಂಗನಾಗಿ ಭಕ್ತಿಭರದಿಂ ಕೈಗಳಂ ಮುಗಿದು ಬಿನ್ನಪ ಮೆಂದಿಂತೆಂದಂ

ಕಂದ: ಆವಲ್ಲಿ ನೀವು ನೆಲಸಿದಿ
ರಾ ವಿಷಯಂ ಧನ್ಯಮಾ ನಗಂ ಸೇವ್ಯತರಂ
ಪಾವನಮಾ ವನಮದನುಳಿ
ದಾವುದೊ ಭೂವಳಯದಲ್ಲಿ ತೀರ್ಥಸ್ನಾನಂ ೧೫೧

ಎನ್ನ ಪುರಮಿರ್ಪುದೀ ಸಾ
ನೂನ್ನತಿಯಲ್ಲದಱ ಪಾವನಾರ್ಥಮೆ ನೀಮುಂ
ಮನ್ನಿಸಿ ಬಿಜಯಂಗೆಯ್ದಿ
ರ್ದೆನ್ನಂ ಕೃತಕೃತ್ಯನಾಗಿ ಮಾಡಲ್ವೇಳ್ಕುಂ ೧೫೨

ವಚನ: ಅಂತು ಕಾರಣಮೆಂತೆಂದೊಡಂ ನೀವೀ ಧರಣೀಧರದ ರಮಣೀಯಮಣಿ ಮಯ ಸಾನುಸ್ಥಾನದಲ್ಲಿಗೆ ಮೆಲ್ಲಗೆ ಬಿಜಯಂಗೆಯ್ದಲ್ಲಿ ನೆಲಸಿರ್ದ ದಲೆನ್ನ ಪುರಿಗನುತೀವ ಪವಿತ್ರತೆಯುಮನನಗಗಣ್ಯಪುಣ್ಯಲಾಭಾಭಿವೃದ್ಧಿಯುಮನೊಡರ್ಚಲ್ವೇಳ್ಕುಮೆಂದು ಕಡು ವಿನಯದಿಂ ಬಿನ್ನಪಂಗೆಯ್ದೊಡೆಯರಂ ಬಿಡದೆ ಪ್ರಾರ್ಥಿಸಿ ಬೇಡಿಕೊಂಬುದುಂ

ಮಹಾಸ್ರಗ್ಧರೆ

ಅತಿದೂರಂ ಬಂದು ಸೈನ್ಯಂ ಶ್ರಮವಶಗತಮಾಯ್ತಿಲ್ಲಿ ನಾವಿರ್ಪುದೇ ಸ
ನ್ಮತಮೆಂದಲ್ಲಿಂಗೆ ಪೋಗಲ್ಬಗೆದಿರಲದಱಿಂ ಮುನ್ನಮಾ ಕಿನ್ನರೇಂದ್ರಂ
ದ್ರುತದಿಂದಂ ಪೋಗಿ ತಾಂ ನಿರ್ಮಿಸಿದನುರುಪುರೀರೂಪಮಂ ಮತ್ತಮೊಂದು
ನ್ನತಸಾನುಸ್ಥಾನದೊಳ್ ಕೋಂಟೆಗಳಿನೆಸೆವಿನಂ ಮಾಟಕೂಟಂಗಳಿಂದಂ ೧೫೩

ಕಂದ: ಕುದುರೆಗಳ ಶಾಲೆಯೊಳಮು
ನ್ಮದ ಗಜಶಾಲೆಯೊಳೆ ಕೇರಿಗೇರಿಯೊಳಂ ತೋ
ರಿದುವೆನಿಪ ಪೊನ್ನಕಳಶಸ
ಮುದಯಂಗಳ ಕಿರಣದಿಂದೆ ಧಳಧಳಿಸುವಿನಂ ೧೫೪

---

[1] ಳ್ಗಂ (ಕ)

ವಚನ: ಇಂತು ಕಿನ್ನರೇಂದ್ರಪರಿನಿರ್ಮಿತ ನಿರತಿಶಯಪುರಮನಾ ಧರ್ಮನಾಥ ಕುಮಾರಂ ಚತುರ್ವಿಧಸೈನ್ಯಸಮನ್ವಿತನಾಗಿ ಪುಗುವುದುಂ

ಕಂದ: ಕ್ರಯವಿಕ್ರಯ ಸಂಭ್ರಮ ಜನ
ಚಯದಿಂದಂ ತುಂಬಿದಂಗಡಿಯನೀಕ್ಷಿಸುತುಂ
ಪ್ರಿಯದಿಂ ಪೊಕ್ಕಂ ಕರಮು
ಚ್ಛ್ರಯ ತೋರಣದಿಂದೆ ಮೆಱೆವ ರಾಜಾಲಯಮಂ ೧೫೫

ವಚನ: ಅಂತು ಜಿನ್ನರನ್ನದಿಂ ಸಮೆದರಮನೆಯಂ ಪೊಕ್ಕು ಕೂಡೆ ಬಂದಧಿರಾಜ ಮಹಾರಾಜ ಪ್ರಭೃತಿ ರಾಜಕರಾಜನ್ಯಕಮಂ ತಂತಮಗೆ ಯೋಗ್ಯಂಗಳಾದಾವಾಸಂಗಳ್ಗೆ ಬೀಳ್ಕೊಟ್ಟು ಕಳಿಪುವುದುಂ

ಕಂದ: ಆಕ್ಷಣಮವರವರ ಬಲಂ
ಪ್ರಕ್ಷೋಭಿಸೆ ಸಂಭ್ರಮೋತ್ಥಕಳಕಳರವದಿಂ
ದಕ್ಷೂಣವಾದ್ಯರವದಿಂ
ದೆ ಕ್ಷತ್ರಿಯರೆಯ್ದಿದರ್ ನಿಜೋಚಿತ ಗೃಹಮಂ ೧೫೬

ವಚನ: ಅನಂತರಂ

ಕಂದ: ದೂರಪಥಶ್ರಮವಶದಿಂ
ಧೀರನ ಮೆಯ್ಯಲ್ಲಿ ಘರ್ಮಜಳಬಿಂದು ಲವಂ
ಸಾರಿತ್ತಿಲ್ಲದು ಚರಮಶ
ರೀರದೊಳುದಯಿಸುವುದೆ ಪೊದಳ್ದ ದವಳಲಂ ೧೫೭

**ಚಂಪಕಮಾಲೆ**

ಪಸರಿಸೆ ಮೆಯ್ಗಳಲ್ಲಿ ಬಲದಿಂದಮೆ ಪುಟ್ಟಿದ ಧೂಳಿ ಕಾಂತಿಯಂ
ಮಸುಳಿಸೆ ಪ್ರಸ್ಮಯತ್ನಮುಮನೆಯ್ದಿದುದೆಂಬಿನಮಾಯ್ತು ತಜ್ಜನಂ
ಪೊಸಪೊಸತಾಗಿ ಮತ್ತಮುದಱಿಂ ಬೆಳಗಿರ್ದುರುದರ್ಪಣಂ ದಲೆಂ
ಬೆಸಕಮನೆಯ್ದೆ ಪುಟ್ಟಿಸಿದನಾ ಕುಮರಂ ರಮಣೀಯಮೂರ್ತಿಕಂ ೧೫೮

ವಚನ: ಬಳಿಯಮಾ ಕುಮಾರಶಿರೋಮಣಿ ಯಾತ್ರಾವೇಷ ವಿಶೇಷಮಂ ಪರಿಹರಿಸಿ ಪ್ರವಾಸದಾಯಾಸಂ ಲೇಶಮಾತ್ರಮಿಲ್ಲದಿರ್ದೊಡಂ ಪ್ರಸಿದ್ಧಲೋಕರೂಢವಶ ನಿಮಿತ್ತಂ ಕೃತಮಜ್ಜನನಾಗಿ ಭೋಜನವಿಧಾನಾನಂತರಂ

ಕಂದ: ಬೇಱತೊಂದು ಚೆಲ್ವನಾಂತಂ
ನೀಱಂ ನೋೞ್ಪವರ ಕಣ್ಗಳಿಂಗತಿಶಯಮಂ
ತೋಱುತುಮಿರ್ದುದು ಮಿಗೆ
ಮಿಱುಂದ ಶೃಂಗಾರದಿಂ ಸಮುಜ್ವಳಿಸುವುದುಂ ೧೫೯

ಮಹಾಸ್ರಗ್ಧರೆ
ಮುದದಿಂ ತಾಳ್ದಂ ಕುಮಾರೀಪರಿಣಯನದ ವಾರ್ತೋಕ್ತಿಯಿಂದಂ ಕುಮಾರಂ
ಮದನಾಕಾರಂ ಸುಧೀರಂ ನಿರುಪಮಸುಕೃತಾಧಾರನುತ್ಕೀರ್ತಿಪೂರಂ
ಪದಸಮ್ಯಕ್ಲಾಮ್ಯಭುಜಂ ಬಾಹುಬಲಿಸುಕವಿರಾಜಂ ಗುಣಾಂಭೋಧಿರಾಜಂ
ಸುದಯಾರೂಪಾಹವಂ ಸತ್ಸುರಧರಣಿರುಹಂ ಚಾತುರೀಜನ್ಮಗೇಹಂ ೧೬೦

ಗದ್ಯ: ಇದು ಸಕಳಭುವನಜನವಿಸ್ಮಯಮಾನಾನೂನ ಮಹಿಮಾಮಾನನೀಯ
ಪರಮಜಿನಸಮಯಕಮಳಿನೀಕಳಹಂಸಾಯಮಾನ ಶ್ರೀಮನ್ನೇಮಿಕೀರ್ತಿ
ದೇವಪ್ರಸಾದಸಂಪಾದಪಾದನಿಧಾನದೀಪವರ್ತಿಯುಭಯಭಾಷಾ
ಕವಿಚಕ್ರವರ್ತಿ ಬಾಹುಬಲಿಪಂಡಿತದೇವಪರಿನಿರ್ಮಿತಮಪ್ಪ
ಧರ್ಮನಾಥ ಪುರಾಣದೊಳ್ ಶೃಂಗಾರವತೀದೇವಿಯ
ಸ್ವಯಂವರಕಲ್ಯಾಣಕಾರಣಂ ಧರ್ಮನಾಥ
ಕುಮಾರ ಪ್ರಯಾಣವ್ಯಾವರ್ಣನಂ

**ದಶಮಾಶ್ವಾಸಂ**

# ಏಕಾದಶಾಶ್ವಾಸಂ

ಕಂದ: ಶ್ರೀರಮಣೀರಮಣೀಯುತ
ರೋರುಸ್ಥಳನೆಯ್ದಿದಂ ಮಹಾನಂದಮನು
ದ್ಧಾರಿತಜಗತೀಜನಕಂ
ಚಾರುಗುಣಂ ಸರಸಚತುರಕವಿಕುಳತಿಳಕಂ ೧

ವಚನ: ತಂದನಂತರಮಾ ಧರ್ಮನಾಥಕುಮಾರಂ ಭಾವಿಸ್ವಯಂವರಕಲ್ಯಾಣ ಸಂಭ್ರಮ ಸಂದರ್ಶನೋತ್ಸುಕಚಿತ್ತನಾಗಿ ಮಱುದಿವಸಂ ಪ್ರಯಾಣಭೇರಿಯುಮಂ ಪೊಯ್ಸಿ ನಿರ್ಯಾಣಸಮಯಕ್ಕನುರೂಪಮಾದ ವೇಷಮಂ ಧರಿಸಿ ಕಟಿತಟನಿಕಟನಿರ್ಯನ್ಮದ ಧಾರಾಪೂರಬಂಧುರಗಂಧಕ್ಕೆಳಸಿ ಬಳಸಿ ಕಿವಿಯ ಪೊರೆಯೊಳ್ ಮೊರೆದು ಗುಮುಗುಮೆಂದು ಬಿಡದೆ ಜಿನುಂಗುವಳಿಕುಳಕ್ಕೆ ಕನಲ್ದು ಕೆಕ್ಕಳಿಸಿನೋಡುವ ಪಣ್ಣಿದ ಪಟ್ಟದಾನೆಯನೇಱಿ ಪಲವುಂ ತೆಱದ ಪಱೆಗಳೆಲ್ಲಮೊರ್ಮೊದಲೊಳ್' ಮೊಳಗಲಲ್ಲಿಂದಂ ತಳರ್ದು ನಡೆಗೊಂಬುದುಂ

ಕಂದ: ಚತುರಂಗಸೇನೆಯೆಲ್ಲಂ
ದ್ರುತಮಾಗಿಱೆ ನಾಲ್ಕಡೆಗಳಿಂದಂ ಬಂದಾ
ಚತುರನ ಪಿಂದಂ ಪೋದುದು
ನುತಸುಭಟನ ಮುಂದೆ ಪೋಪ ಜಯಲಕ್ಷ್ಮಿಯವೊಲ್ ೨

ಶಾರ್ದೂಲವಿಕ್ರೀಡಿತ

ಎಮ್ಮಾ ದುರ್ಧರಪಾದವಿನ್ಯಸನಭಾರಾರೋಪದಿಂ ತಗ್ಗಿ ಮ
ತ್ತಂ ಮುಗ್ಗುತ್ತುಮಿದಿರ್ದಪೆಂದು ಮಹಿಗಂ ಕೈಗೊಟ್ಟು ಮೇಲೆತ್ತಿ ಸು
ಸ್ಥಮ್ಮಾಡಲ್ಬಗೆದಂತೆ ಮುಟ್ಟಿ ನೆಲನಂ ಶುಂಡಾಲದಂಡಾಗ್ರದಿಂ
ದಂ ಮಾತಂಗಘಟಾದಿಕೋಟಿ ನಡೆವುತ್ತಿರ್ದತ್ತು ಪಿಂದಾತನಾ ೩

ಕಂದ: ದಾಂಟಲ್ಬಾರದ ಕುಳಿಯುಂ
ಗೆಂಟಱೊಳಂ ಕಂಡು ಪಿರಿದು ಪರಿತಂದು ಮುಮ
ನಾಂಟಿರೆ ಲಂಘಿಸಿ ಪೋದವು
ಬಂಟಂಗಳೆನಿಪ್ಪ ಕುದುರೆಗಳ್ ಕೆಲಮದಱೊಳ್ ೪

ಅತಿಜವದಿಂದೋಡುವ ಹಯ
ವಿತತಿಗಳುಂ ನೋಳ್ಪರಿಂಗೆ ಪುಟ್ಟಿಸಿದುವು ಸ
ನ್ನುತಪವನನ ಪುಲ್ಲೆಗಳಿಂ
ಬತಿಶಂಕೆಯನಾ ಕುಮಾರಕಂ ನಡೆವೆಡೆಯೊಳ್ ೫

ಚಂಪಕಮಾಲೆ

ಚಟುಳತರಂಗಪುಂಗಮಖುರಾಗ್ರವಿಘಟ್ಟನಜಾತಧೂಳಿಕಾ
ಪಟಳಿಕೆ ಸರ್ವದಿಗ್ವಿವರದಲ್ಲಿ ನಭಸ್ಥಳದಲ್ಲಿಯುಂ ಸಮು
ತ್ಕಟತರಮಾಗಿ ತೀವೆ ದೆಸೆಗಳ್ ಭಯದಿಂದಮೆ ಕೂಡಿದಂತೆ ಸಂ
ಘಟಿಸಿದುವಲ್ಲಿ ಬೆಚ್ಚಿ ರವಿ ಬಿಳ್ದವೊಲಾದನದೃಶ್ಯನಾಕ್ಷಣಂ ೬

ಕಂದ : ಪಿರಿದಾದ ಧೂಳಿಯಿಂದಂ
ಪರಿಪೂರಿಸೆ ಪಳ್ಳ ಕೊಳ್ಳ ಕುಳಿಗಳವೆಲ್ಲಂ
ನೆರೆದಲ್ಲಿ ಪಿಂದೆಪೋಪಾ
ನರರ್ಗಾದುದು ಬಳಿಕೆ ಸುಗಮತರಮಾ ಮಾರ್ಗಂ ೭

ಮತ್ತೇಭವಿಕ್ರೀಡಿತ

ಪಡೆಯಂ ಕಂಡುರುಭೀತಿಗೊಂಡು ಶಬರೀಸಂಘಾತಮೋಡುತ್ತುಮಿ
ರ್ಪೆಡೆಯೊಳ್ ಸುತ್ತಲುಮೆಯ್ದೆ ಚಲ್ಲಿದದಿಗುಂಜಾರಾಶಿಗಳ್ ಪುಂಜಿಸಿ
ರ್ದೊಡೆ ಕಾಳ್ಕಿಚ್ಚು ಕರಂ ಸಮುಜ್ಜ್ವಳಿಸಿದತ್ತೆಂಬೊಂದು ಸಂದೇಹದಿಂ
ದೊಡೆಯಂ ಪೋಗುತುಮಿರ್ದರಳ್ಕಿಲನನತ್ಯಾಶ್ಚರ್ಯದಿಂ ನೋಡಿದಂ ೮

ವಚನ: ಇಂತಚ್ಚರಿಯಾಗಿ ಪೆರ್ಚಿದ ಪೇರಡವಿಯುಂ ನೋಡಿನೋಡಿ ಮೆಚ್ಚುತುಂ ಬಳಿಯುಮಾ ಕುಮಾರವರನದಂ ಕಳಿವುದುಂ

ಚಂಪಕಮಾಲೆ

ಮಧುಪಕದಂಬಕಂ ತರುಗಳೆಂಬ ಗೃಹಂಗಳೊಳೆಯ್ದೆ ಕುಳ್ಳಿದಿ
ರ್ದದಿಮುದದಿಂದೆ ಪೂಗುಡಿಗಳೆಂಬ ಸುಪಾತ್ರೆಗಳಲ್ಲಿ ತೀವಿದು
ನ್ಮಧುವನೆ ಸೇವಿಸುತ್ತುಮಿರಲಂತದಱಿಂದಮೆ ತದ್ವನಾಂತರಂ
ಮಧುಪುರಮೆಂಬಿನಂ ಬಗೆಗೆ ಬಂದೊಡದಂ ನೆಱೆಬಿಟ್ಟುಪೋಪುದುಂ ೯

ವಚನ: ಅಂತಾ ಕಾಂತಾರದಪರತೀರಮುಂ ಪಿರಿದುಂ ದೂರಮಾಗಿಯೆ ಬಿಟ್ಟು ನಡೆವೆಡೆಯೊಳ್

ಕಂದ: ಸ್ತ್ರೀರತ್ನಲಾಭವಾಂಛಾ
ಪ್ರೇರಿತಚಿತ್ತಂ ಕುಮಾರಕಂ ಘನವನಮಂ
ಧೀರಂ ಮೀಱಿಯೆ ಪೋದಂ
ಚಾರುಂ ವ್ಯವಹಾರಿಯೆಂಬಿನಂ ಸತ್ವರದಿಂ ೧೦

ವಚನ: ಇಂತು ನೂರ್ಮಡಿಯಾದ ಪೆರ್ಮೆಯಿಂದಾ ಧರ್ಮನಾಥಕುಮಾರಂ ನರ್ಮದಾಪ್ರಭೃತಿ ಬಹುವಿಧನದೀನದಂಗಳಂ ದಾಂಟಿ ಪಲವುಂ ನಾಡುಗಳಂ ಪಿಂದುಮಾಡಿ ಕಡುವೇಗದಿಂ ಪೋಗಿ ನಿರ್ಭರಲಕ್ಷ್ಮೀಶೋಭಾಸಂದರ್ಭಗರ್ಭಿತಮಾದ ವಿದರ್ಭವಿಷಯಮುಂ ಪುಗುವುದುಮಲ್ಲಿ

ಕಂದ: ವನಮೆಲ್ಲಂ ಬಹುರಂಭಾ
ವಿನುತಂ ಸ್ಥಳಮೆಲ್ಲಮುರುತಿಳೋತ್ತಮಮಾ ಮೇ
ದಿನಿಯೆಲ್ಲಮಪ್ಸರೋಗಣ
ಮನಿತಂ ಸ್ವರ್ಗಾದಿಕಂ ದಲೆಂದೀಕ್ಷಿಸಿದಂ ೧೧

ಕಳಮಸ್ಥಳಮೆಲ್ಲಂ ಘನ
ಫಳಮಂಜರಿರಂಜಿತಂ ದಲಾಗಿರ್ದು ಮನಂ
ಗೊಳಿಸುತ್ತಿರ್ಪುದು ಮತ್ತ
ಗ್ಗಳಗೀತಾಧ್ಯಾಯದಂತೆ ರಸಪರಿಪೂರ್ಣಂ ೧೨

ಚಂಪಕಮಾಲೆ
ಬದನೆಯ ಕಾಯ್ಗಳಿಂ ಪಿರಿದುಪಾಗಲಕಾಯ್ಗಳಿನೊಳ್ಪುವೆತ್ತು ತೋ
ಱದವೆನಿಸಿರ್ದ ಕುಂಬಳದಕಾಯ್ಗಳಿನಾದಮೆ ತೊಂಗಲಾಗಿ ಪ
ರ್ವಿದ ಕಡುನೀಳ ಕೂಗುರಿಯಕಾಯ್ಗಳಿನೆಲ್ಲೆಡೆಯಲ್ಲಿ ಕೂಡೆತುಂ
ಬಿದ ಘನಶಾಕವಾಟಿಗಳ ವೀಕ್ಷಣಮುಂ ಸೆಱೆಗೆಯ್ದುವಾಕ್ಷಣಂ ೧೩

ಮತ್ತೇಭವಿಕ್ರೀಡಿತ
ವನಮೆಲ್ಲಂ ಪರಿಪಕ್ವಭೋಜ್ಯಸುಫಳಾಳೀಸಂಯುತಂ ಕೂಡೆ ಮೇ
ದಿನಿಯೆಲ್ಲಂ ಕಣಿಶಾಭಿರಾಮಬಹುಸಸ್ಯೌಘಂಗಳಿಂ ತುಂಬಿ ಪಾ
ವನಮಾಗಿರ್ದುದುಕಾರಣಂ ಪಥಪಥಸ್ಥಾನಂಗಳಲ್ಲೆಲ್ಲಿಯುಂ
ಘನಸೌಖ್ಯಂ ದೊರೆಕೊಂಡುದೆಂದು ಪರಿವಾರಕ್ಕೆಲ್ಲಮಲ್ಲಲ್ಲಿಗಂ ೧೪

ಕಂದ: ಬೀಡಂ ಬಿಡುವೆಡೆಯೆಡೆಯೊಳ್
ಮಾಡುವನಲ್ಲಲ್ಲಿಗೈಳಬಿಳನುರುಪುರಮಂ
ನಾಡು ಬೆಸಕೆಯ್ವ ಸುಖದಿಂ
ಕೂಡದು ಕುಮರಂಗೆ ಬಟ್ಟೆಯಾಯಾಸ ಲವಂ ೧೫

*

ವಚನ : ಇಂತು ಸಮಸ್ತ ಮುನೀಷಿಪರಿಷದಭಿಲಕ್ಷಣೀಯ ವಿಶೇಷಿತಾಶೇಷವಿಪುಳತರ ನಾನಾವಿಧ ನವೀನಫಳಸಂಪತ್ತಿಯಿಂ ಪರಿಭೂಷಿತಮಾದ ಪೇಶಲತದ್ದೇಶದ ಶೋಭಾತಿಶಯಮನಾ ದೇಶಾಧೀಶ್ವರಂ ನೀಡುಂನೋಡಿ ನಾಡೆಯುಂ ಕೊಂಡಾಡುತ್ತುಂ ಕುಂಡಿನಪುರಮರೆಗಾವುದಂತರಮೆನಲ್ ಬಂದು ಮುಂದೆ ತನ್ನ ಗಮನವಾರ್ತಾನಿವೇದನನಿಮಿತ್ತಂ ಪ್ರತಾಪರಾಜನಂತಿಕಕ್ಕೆ ಚರರಂ ಕಳಿಪುವುದುಮವರ್ ಪೋಗಿ ಧರ್ಮಜಿನಾಧಿಪನ ಬರಮನರಸಂಗೆ ಬಿನ್ನಪಂಗೆಯ್ವುದುಮಾಗಳ್

ವಂಶಸ್ಥ

ಪ್ರತಾಪರಾಜಂ ಪುರದಲ್ಲಿಯುತ್ಸವ
ಪ್ರತಾನಮಂ ಮಾಡಿಸಿ ಸರ್ವಸೈನ್ಯಸಂ
ಯುತಂ ಕುಮಾರಂಗಿದಿರಾಗಿಪೋದನಂ
ದು ತೋಷದಿಂ ಮಂಗಳವಾದ್ಯಮುಣ್ಮಲುಂ ೧೬

ಕಂದ : ಮೊದಲಲ್ಲಿ ಸೈನ್ಯರಜದೊಂ
ದೊದವಂ ಕಂಡಂ ಬಳಿಕ್ಕೆ ಭೇರೀರವ ಸಂ
ಪದನುಂ ಕೇಳ್ದಂ ಮತ್ತಂ
ಪದೆದೀಕ್ಷಿಸಿದಂ ನೃಪಂ ಕುಮಾರನ ಬಲಮಂ ೧೭

ವಚನ: ಅಂತತೀವಪ್ರಮೋದಪ್ರಕರ್ಷಣಭಾಜನನಾಗಿ ಪ್ರತಾಪರಾಜಂ ತೊಟ್ಟನೆ ಸಮೀಪಕ್ಕೆನಂದು ಮುಟ್ಟಿದ ಭಕ್ತಿಯಿಂದಾ ಧರ್ಮನಾಥಕುಮಾರನ ಮೆಲ್ಲಡಿಗಳ್ಗೆಱಗಿ ಸಾಷ್ಟಾಂಗಪ್ರಣತನಾಗಿರ್ಪುದುಮಾತನಂ ಕುವರಂ ಸಾತಿಶಯಪ್ರೀತಿಯಿಂ ತೆಗೆದು ತಕ್ಕೈಸಿಕೊಂಡು ಮುಂದೆ ಸಿಂದಿರಿಸುವುದುಮೆನ್ನಮೇಲಗಣ್ಯಕಾರುಣ್ಯಮುಂಟೆಂದು ಬಗೆದರಸಂ ತದೀಯಮುಖಕಮಳಾವಲೋಕನಂಗೆಯ್ದು ಕೈಗಳಂ ಮುಗಿದು ಪ್ರಶ್ರಯಪರಿಮಿಶ್ರಿತಪ್ರಿಯ ಸಂಭಾಷಣದಿಂದಿಂತೆಂದಂ

ಕಂದ : ಒಡೆಯರ್ ಬಿಜಯಂಗೆಯ್ದಾ
ಗಡೆ ವಾಂಛಿತಕಾರ್ಯಸಿದ್ಧಿ ಕೈಗೂಡಿದುದೀ
ಗಡೆ ಕೃತಕೃತ್ಯನುಮಾದೆಂ
ಪಡೆಮಾತೇನಿಂದು ಸಫಲಮಾದುದು ಜನ್ಮಂ ೧೮

ವಚನ : ಎಂದು ಪ್ರಿಯೋಚಿತವಚನಂಗಳಿಂದಂತರಂಗಸಂಗತಭಕ್ತಿಭಾರಮಂ ವ್ಯಕ್ತೀಕರಿಸುತ್ತುಮಿರ್ದ ಪ್ರತಾಪರಾಜಂಗೆ ಚಾರುಕರ್ಪೂರಪರಿಮಿಳಿತಮಾದ ವೀಳಯಮಂ ಕೊಟ್ಟು ತಣಿಪಿಸಿ ಮತ್ತಮಾ ಕುಮಾರನಿಂತೆಂದಂ

---

* ಕುಮಾರನಂ ಪ್ರತಾಪರಾಜನಿದಿರ್ಗೊಂಬ ಠಾವು (ಗಚ)

ಶಾರ್ದೂಲವಿಕ್ರೀಡಿತ

ಎಮ್ಮಾ ರಾಜ್ಯವಿಶೇಷಸಂಪದವಿದಂ ಬೇಱಿತಂಬ ಬುದ್ಧಿಪ್ರಭಾ
ವಂ ಮನ್ಮಾನಸದಲ್ಲಿ ತೋಱಿದಣುಮಾತ್ರಂ ಭೂತ್ರಯಾರಾಧ್ಯರಾ
ದೆಮ್ಮಂತಪ್ಪವರಂ ಸ್ವಯಂವರವಿವಾಹಚ್ಛದ್ಮದಿಂದಿಲ್ಲಿಗಂ
ಸಮ್ಮೋಹಂ ಮಿಗೆ ಕೊಂಡುಬಂದಿರದಱಿಂದಂ ನೀವೇ ಪುಣ್ಯಾತ್ಮರುಂ ೧೯

ವಚನ : ಇಂತೆಂಬ ಪ್ರಿಯಸಂಭಾಷಣದಿಂದಾತನಂ ಸಂತೋಷಂಬಡಿಸುತ್ತುಮಿರ ಲೀರ್ವರುಂದೊರ್ವಿದ ವಾರಣಸಮಾರೋಹಣಂಗೆಯ್ದು ಕೂಡಿ ಕಿಱಿದಂತರಂ ನಡೆಯುತ್ತುಮಿರೆ ಮುಂದೆ ಭೂಮಂಡಲಕುಂಡಲಾನುಕಾರಿ ಸುವರ್ಣಪ್ರಾಕಾರದಿಂ ಪರಿಮಂಡಿತಮಾದ ಕುಂಡಿನಪುರಮುಂ ಕುವರಂ ಕಂಡು ಮನಂಗೊಂಡು ತನ್ನ ಸೇನಾಪತಿಯಪ್ಪ ಕುಬೇರನಂ ಕರೆದು

ಕಂದ : ಈ ಪುರದ ಕೆಲದೊಳೊಂದು ಸ
ಮೀಪಸ್ಥಾನದೊಳೆ ನಮಗೆ ವಿರಚಿಸು ಪುರಮಂ
ನೀಂ ಪೋಗು ಬೇಗಮೆನೆ ಸೇ
ನಾಪತಿ ಬೀಳ್ಕೊಂಡು ನಿಮಿಷದಿಂ ಪೋದನಮಂ ೨೦

*

ವಚನ : ಅನಂತರಂ ವಿಮಳಕಳಿತವಿಶಾಲತರಯೋಗ್ಯಪ್ರದೇಶಸನ್ನಿವೇಶದೊಳ್

ಉತ್ಪಲಮಾಲೆ

ಅಂಗಡಿ ರಾಜಬೀದಿ ಹಯಶಾಲೆ ಗಜಂಗಳಶಾಲೆ ಮಾಟಕೂ
ಟಂಗಳ ಪಂತಿಯುಪ್ಪರಿಗೆಯೊಪ್ಪಮಗುರ್ವಿಸಲಂತರಿಕ್ಷಮಂ
ಪೊಂಗಳಸಂಗಳಳ್ಳಿಱಿಯಲೆಯ್ದೆ ವಿಗುರ್ವಿಸಿದಂ ದಲಾಕ್ಷಣಂ
ಪಿಂಗದ ಜೆಲ್ವನಾಂತುದದು ಕೋಟೆಗಳಿಂ ಪರಿಖಾತಳಂಗಳಿಂ ೨೧

ಕಂದ : ಏಳುಂ ನೆಲೆಮಾಡಂಗಳ
ಮೇಳಮದಿಂ ಚೆಲ್ವನಾಂತ ರಾಜಾಲಯಮುಮು
ಲ್ಲಾಲಿತಬಹುವಿಧರಚನಾ
ಶೀಲಂ ತತ್ಪುರದ ನಡುವೆ ಪಡೆದುದಗುರ್ವಂ ೨೨

ವಚನ : ಇಂತು ಸೇನಾಪತಿಯಪ್ಪ ರಾಜರಾಜಂ ಪಿರಿದಾದ ಸಿರಿಯಿಂ ನಿರ್ಜರ ರಾಜಧಾನಿಯುಂ ಗೆಲ್ದ ನವೀನಶೋಭಾವಿರಾಜಮಾನ ರಾಜಧಾನಿಯಂ ವಿಗುರ್ವಿಸಲದಱಿ ಪೊಜಪೊಳಲೆಂಬಂತಿರಾ ಕುಂಡಿನಪುರಂ ಕಣ್ಗೊಂಡು ಸಮುಜ್ಜ್ವಳಿಸುತ್ತುಮಿರೆ

* ರಾಜರಾಜಂ ರಾಜಧಾನಿಯುಂ ವಿಗುರ್ವಿಸಿದನು (ಗ)

ಸ್ರಗ್ಧರೆ

ನಾನಾತೂರ್ಯಾರವಂ ಪೊಣ್ಮಿರೆ ಜಯಜಯನಿರ್ಘೋಷಣಂ ಪೆರ್ಚಲಿತ್ತಂ
ಪೀನಚ್ಛತ್ರಂಗಳಾಚ್ಛಾದಿಸೆ ಗಗನಮುಮಂ ಚಾಮರಂ ತಳ್ತು ಬೀಸಲ್
ದಾನಸ್ತಂಬೇರಮಾರೂಢನುನ್ನತರಸ್ನೈನ್ಯಾವೃತಂ ಧರ್ಮನಾಥಂ
ತಾನೆಳ್ತಂದಂದು ಪೊಕ್ಕಂ ನಿಜಪುರದೊಳಗತ್ಯಂತ ಸಂತೋಷದಿಂದಂ ೨೨

ಕಂದ: ದ್ವಾರದ್ವಾರದೊಳುದ್ಯ
ತ್ತೋರಣಪಂತಿಗಳ ಶೋಭೆಯಂ ನೋಡುತ್ತಂ
ದೋರಣೆಗೊಂಡಿರ್ದಂಗಡಿ
ಗೇರಿಗಳ ಶ್ರೀಯನೀಕ್ಷಿಸುತ್ತುಂ ನಡೆದಂ ೨೪

ವಚನ: ಇಂತು ಗಾಡಿವಡೆದ ಬೀಡಿನೊಳನಾಡೆಜ೩ಯಂ ಬಿಜಯಂಗೆಯ್ವುತ್ತುಂ ಲೀಲೆಯಿಂದರಮನೆಯೊಳಗಂ ಪುಗುವುದುಂ

ಕಂದ: ಕರ್ಪೂರದ ವೀಳೆಯಮುಮ
ನರ್ಪಿಸಿ ಬಳಿಯಂ ಪ್ರತಾಪರಾಜನನಾಕ್ಷಣ
ವೊಪ್ಪುವ ಕುಂಡಿನಪುರಿಗಂ
ಕೂರ್ಪಿಂ ಬೀಳ್ಕೊಟ್ಟು ಕಳಿಪೆ ಪೋದಂ ಬೇಗಂ ೨೫

ವಚನ: ಮತ್ತಂ ತನ್ನೊಡನೆ ಬಂದ ಮಂಡಳಿಕ ಮಹಾಮಂಡಳಿಕ ಮಕುಟಬದ್ಧರ್ ಮುಂತಾದನೇಕ ರಾಜಕುಮಾರನಿಕರಂಗಳನವರವರ್ಗೆ ತಕ್ಕಂತಪ್ಪ ನಿವಾಸಂಗಳ್ಗೆ ಬೀಳ್ಕೊಟ್ಟು ಕಳಿಪುವುದುಮಾಗಳವರೆಲ್ಲರುಂ ನಿಜನಿಜಬಹಳತರಚತುರಂಗಬಲಂಬೆರಸು ತಂತಮಗೆ ಯೋಗ್ಯಂಗಳಾದಾವಾಸಮಂ ಪೊಕ್ಕು ಸುಖದಿನಿರ್ಪುದುಮಿತ್ತಲಾ ಕುಮಾರಂ ಯಾತ್ರಾವೇಷಕ್ಕುಪಯೋಗಮಾಗಿ ತೊಟ್ಟಂತಪ್ಪ ಭೂಷಣಕಳಾಪಮಂ ಕಳೆದು

ಉತ್ಪಲಮಾಲೆ

ಬರ್ಪಡೆಯಲ್ಲಿ ಬಟ್ಟೆಯ ಪರಿಶ್ರಮಮುಂ ಬೆಮರುಂ ಸುಧೂಳಿಯುಂ
ನೇರ್ಪಡುತಿರ್ಪ ಚಾರುಚರಮಾಂಗಕನಾದುದಱಿಂದಮಾತನೊಂ
ದೊಪ್ಪುವ ದಿವ್ಯದೇಹದೊಳೆ ಪತ್ತದೊಡಂ ಸಲೆಲೌಕಿಕಾರ್ಥಮಂ
ತಪ್ಪದೆ ಮಾಡಿದಂ ತ್ರಿಜಗತೀಪತಿ ಮಜ್ಜನಭೋಜನಾದಿಯಂ ೨೬

ವಚನ: ಅಂತಾ ಧರ್ಮ[1]ನಾಥಕು[1]ಮಾರಂ ಲೋಕವ್ಯವಹಾರನಿಮಿತ್ತಮಾಗಿ ಮಜ್ಜನ ಭೋಜನಾದಿ ಕ್ರಿಯಾವ್ಯಾಪಾರಮಂ ತೀರ್ಚಿ ನಾನಾವಿಧನವೀನಮಾಣಿಕ್ಯಮಯ

---

1 ಕು (ಗ)

ಶೃಂಗಾರಭಂಗಿಯನಂಗೀಕರಿಸಿ ತನ್ನಯ ಮೇಳದ ಕೆಳದಿಯರೊಡಗೂಡಿ ಲೀಲಾವಿನೋದ ದಿಂದಿರ್ಪುದುಂ

**ಚಂಪಕಮಾಲೆ**

ಎಲೆಲೆ ಸಮಸ್ತರಾಜರಿರ ಕೈಗಳನೆತ್ತಿಯೆ ಸಾಱುತಿರ್ದಪೆಂ
ಪೊಲಿದಿಪುದೊಂದನಾಲಿಸಿ ಕುಮಾರಿಯ ವಾರ್ತೆಯ ವೃತ್ತಿಬೇಡವಿ
ನ್ನೆಳಿ ನಿಮಗೀಗಳಿಲ್ಲಿಗೆ ಜಿನೇಶ್ವರನೆಯ್ದಿದನುದ್ಧಪುಣ್ಯದಿಂ
ಜ್ವಲಿತಸುಧಾಕರೋದಯದಿ ಮುಂದೆಸೆದಿರ್ಪುದೆ ತಾರಕಾಕುಳಂ ೨೭

ತರಳ

ಉಳಿದ ರಾಜಕುಮಾರರೆಲ್ಲರುಮಿನ್ನು ಕನ್ನೆಯ ಮಂಬಲಂ
ಕಳೆದು ಪೋಪುದು ಬಂದಬಟ್ಟೆಯೊಳೀಗಳಲ್ಲಿಗೆ ಬಂದನ
ಗ್ಗಳದ ಧರ್ಮಜಿನೇಶನಾತನನೊಲ್ಲದನ್ಯರ್ಗಿಕ್ಕಳೀ
ನಳಿನಲೋಚನೆ ಮಾಲೆಯಂ ದಿಟಮೆಂದರೆಲ್ಲಜನಂಗಳುಂ ೨೮

ವಚನ: ಇಂತು ವಿದರ್ಭಭೂವಲ್ಲಭನ ರಾಜಧಾನಿಯೊಳಂ ತನ್ನಯ ರಾಜಧಾನಿ ಯೊಳಮೆಡೆವಱಿಯದೆ ನಿಬಿಡಮಾಗಲಲ್ಲಿ ನೆರವಿಯಾಗಿ ನಿಂದು ತಂತಮ್ಮೊಳೋರೊರ್ವರ್ ನುಡಿಯುತ್ತುಮಿರ್ದ ಪೌರಜನಂಗಳ ಕನತ್ಕನಕದಂಡಮಂಡಿತಬಾಹುದಂಡಂಗಳಂ ನೆಗಪಿ ಸಾಱುತ್ತುಮಿರ್ದ ದಂಡವಾಸಿಕರ ವಚನಂಗಳೆಂಬ ಸರಪಿಂಗಳೀಶಕುನಂಗಳಂ ಕರ್ಣಾಕರ್ಣಿ ಕೆಯಿಂ ಕೇಳಿಕೇಳಿ ಕುಮಾರಂ ತನ್ನಯ ಕಾರ್ಯಂ ಸಿದ್ಧಮಾದುದೆಂದು ಬಗೆದಂದು ದೃಢ ನಿಶ್ಚಯದಿಂ ತಣ್ಣನೆ ತಣಿವುತ್ತುಮಿರ಼್ುದುಂ

ಕಂದ: ಒಂದೆರಡು ಮೂಱು ನಾಲ್ಕೈ
ದೆಂದೆಣಿಸುತ್ತುಂ ಸ್ವಯಂವರೋತ್ಸವದಿನಮಂ
ಸೌಂದರಕುಮಾರಕಂ ಸುಖ
ದಿಂದಂ ಕೆಲವುಂದಿನಂಗಳಂ ಕಳೆಯಲೊಡಂ ೨೯

*

ವಚನ: ಮತ್ತಮೊಂದುದಿವಸಮಾ ಪ್ರತಾಪರಾಜಂ ತನ್ನಯ ಗೃಹಮಹತ್ತರನಂ ಕರೆದು ನೀಂ ಪೋಗಿ ಸ್ವಯಂವರಗೃಹಮಂ ಪೊಸಪೊಸತಾದ ಚಿತ್ರಗತಿಯ ವೇಷದೆಸಕದಿಂ ವಿಚಿತ್ರಮಪ್ಪಂತು ಸಮೆಯಿಸೆಂದು ಬೆಸಸುವುದುಮಾತನ ಮಾತನಾತಂ ಶಿರದೊಳಾಂತು ತನ್ಮುಂಡಿಸಪುರದ ಮೂಡಣದೆಸೆಯ ಬಹಿರುದ್ಯಾನದ ಕೆಲದೊಳೊಂದು ವಿಶಾಲತರಮಾದ ಪೇಶಲಪ್ರದೇಶದೊಳ್

---

* ಸ್ವಯಂಬರಗೃಹ ವರ್ಣನೆ (ಗಚ)

ಕಂದ: ಕಡೆಯಿಲ್ಲದ ಮಣಿಗಣದಿಂ
ಕಡೆಯಾಣಿಯ ಮಿಸುನಿಯಿಂ ಸ್ವಯಂವರಗೃಹಮಂ
ಪಡಿಯಿಲ್ಲೆನೆ ಮಾಡಿಸಿದಂ
ನಡೆನೋಳ್ಪವರಿಂಗಮಪ್ಪಿನಂ ಕಡುಚೋದ್ಯಂ ೩೦

ಅದು ತೆಂಕಲ್ ಬಡಗಲ್ ನೀ
ಳ್ದುದು ಮೂಡಂ ಪಡುಪಮಗಲಮಾದುದು ಸೋಪಾ
ನದ ಪಂತಿಗಳೊಡಗೂಡಿದ
ಪದಮುಳಚತುರಶ್ರಹೇಮವೇದಿಕೆ ಮೆಱೆಗುಂ ೩೧

ವಚನ: ಅದಱ ಮೇಲೆ ದಕ್ಷಿಣೋತ್ತರಾಭಿಮುಖಂಗಳಾಗಿ ತೋರ್ಕೆವೆತ್ತು

ಕಂದ: ಕರ್ಕೇತನರತ್ನಂಗಳಿ
ನಕ್ಕುಮಿದೆನೆ ಮಾಡಿದೇಳುನೆಲೆಮಾಡಂಗಳ
ಮಿಕ್ಕೆಲದೊಳಿರ್ದು ಕಣ್ಣಂ
ಜಕ್ಕುಲಿಸುತ್ತಿರ್ಪವಾವಗಂ ನೋಳ್ಪವರಂ ೩೨

ವಚನ: ಆಗಳ್ ತಮ್ಮಯ ಕೊರಳೊಳಿಕ್ಕಿದ ಪೊಸಮುತ್ತಿನಕ್ಷತೆಯುಂತಿರುಪಲಕ್ಷಿತಮಾದ ನಕ್ಷತ್ರಮಾಳೆಯೊಳ್ ಪುದಿದು ಪೊಜಪೊಣ್ಮುವ ಬಹಳತರಕಿರಣಗಣಮೆಂಬ ಕಿಸಲಯವಿಸರದಿಂದುಪಗತಮೆನಿಪ ಶಿಖಾಸಮರ್ಪಿತ ಮಂಗಳದರ್ಪಣಾಯಮಾನ ಸೂರ್ಯಮಂಡಳದಿಂದಸದಳಮೆಸೆದ ಮಣಿಕಳಶಕಳಾಪಂಗಳಂ ತಳೆದಾ ನೆಲೆಮಾಡಂಗಳ ಮುಂದೆ ಸುತ್ತಲುಂ ಬಿತ್ತರಂಬೆತ್ತು ಕಡೆದು ಕೆತ್ತಿಸಿದ ಶೋಣಮಾಣಿಕ್ಯಮಯ ಮತ್ತವಾರಣಶ್ರೇಣಿಗಳ ಬಳಸಿಂ ಥಳಥಳಿಪ ಪೊಱಗಳೊಳಗಣ ಪಳಿಕಿನ ಜಗಲಿಗಳನೊಳಕೊಂಡು ಪೊಳೆವ ವೈಡೂರ್ಯದ ಚೌಪಳಿಕೆಗಳೋಳಿ ಕಣ್ಗೊಳಿಸುತ್ತುಮಿರೆ

ಕಂದ: ಪವಳದ ಕಂಭಂಗಳಿನಭಿ
ನವನೀಲದ ಚಾರುಭಿತ್ತಿಗಳ ಬಳಸಿಂದೊ
ಪ್ಪುವ ಪದ್ಮರಾಗರತ್ನ
ಚ್ಛವಿಯಿಂ ಕಣ್ಗೊಳಿಪ ನೆಲೆಯ ಲೋವಿಗಳಿಂದಂ ೩೩

ಉತ್ಪಲಮಾಲೆ

ಮಿಂಚುವ ಹೊನ್ನಪುತ್ಥಳಿಯ ಸಂಚಯದಿಂದವಱಲ್ಲಿ ಕೂಡೆ ಮು
ತ್ತಂಚಿತಮಾಗಿ ಲಂಬಿಸುವ ಮುತ್ತಿನ ಮಾಲೆಗಳೋಳಿಯಿಂದೆ ಸ
ತ್ಕಾಂಚನದಂಡಮಂಡಿತ ಜಯಧ್ವಜರಾಜಿಗಳಿಂದಮಂದು ಕ
ಣ್ಗಂ ಚೆಲುವಾಗಿ ಕೌತುಕಮನಾಗಿಸುತಿರ್ದುದು ತತ್ಸ್ವಯಂವರಂ ೩೪

ವಚನ : ಅದಱ ಮುಂದೆ ಕ್ರೋಶಮಾತ್ರಾಂತರಾಳಪ್ರಮಾಣಪರಿವೇಷ್ಟಿತ ಚಂದ್ರಕಾಂ[1]ತಕಾಂತ[1] ಪರಿಸೂತ್ರಭಿತ್ತಿಭಾಗಾಗ್ರದಲ್ಲಿ

ಕಂದ : ವಿಳಸದುರುಪುಷ್ಯರಾಗಂ
ಗಳಿನಭಿವಿರಚಿಸಿದ ಚೆಲ್ವ ಬಾಗಿಲ್ವಾಡಂ
ಗಳವೇಳುನೆಲೆಗಳಿಂ ಮಂ
ಜುಳಮಾದುವು ಕುಳಿಶಕಳಶಪರಿಕಳಿತಂಗಳ್ ೩೫

ವಚನ : ಅದಱ ಮುಂದಣಮಂದಸೌಂದರ್ಯದೊಳೊಂದಿ ಸಂದಣಿಸಿ ನಿಂದ ನಿರುಪಮ ಮರಕತಮಯಮಕರತೋರಣದೋರಣೆಗಳುಮತಿರಮಣೀಯಂಗಳಾಗಲಿಂತು ಸರ್ವತೋಭದ್ರಭದ್ರಶಾಲಾಪ್ರಾಸಾದಪ್ರಭೃತಿಗಳೆಂಬ ಮತಲ್ಲಿಕಾವಲ್ಲಿಕಾಪ್ರಸರದೆಸಕಂ ಸಮುತ್ತುಂಗಶೃಂಗಾರರಸದಿಂದಚ್ಚರಿಯಾಗಿ ಪೆರ್ಚುತ್ತುಮಿರ್ದುದೆಂಬಂತೆ ತನ್ನಯ ಸಮುದಗ್ರಶಿಖರಾಗ್ರಕದಂಬಕದಿಂ ಚೌಚುಂಬ್ಯಮಾನಾಂಬರಮೆನಿಪ್ಪ ಸ್ವಯಂವರಮಂದಿರಮುಂ ವಿರಚಿಸುವುದುಂ

ಕಂದ : ಮಿಗೆನೆಗೆವ ಕದಿರ ಪೊದಱಿಂ
ಗಗನಾಂಗಣದಲ್ಲಿ ತಳ್ತು ಪೊಳೆವೆಳನುಣ್ಪಿಂ
ಚುಗಳ ಸಂಚಯದ ಚೆಲ್ವಂ
ಮಿಗಿಲಾಗಿಯೆ ಪುಟ್ಟಿಸುತ್ತುಮಿಪ್ಪುದದೆಂದುಂ ೩೬

ವಚನ : ಮತ್ತಮಲ್ಲಿ

ಕಂದ : ಅಲಂಬಿತಮುಕ್ತಾಫಳ
ಮಾಲೆಗಳಂ ಕಂಡು ಭೃಂಗಮಾಳಿಕೆ ಮಲ್ಲೀ
ಮಾಲೆಗಳೆಂದಾಶಂಕಿಸಿ
ಲೀಲೆಯನಂದೆಱಗಿ ಮೊರೆದು ಮುಸುಱಿದುದಾದಂ ೩೭

ಅರುಣಮಣಿಘಂಟಿಕಾಪರಿ
ಕರಮಂ ನಡೆನೋಡಿ ಪಣ್ಗಳಾವಳಿಯೆಂದಾ
ತುರದಿಂ ಕರ್ದುಂಕಿದುವು ಮ
ತ್ತರಗಿಳಿಗಳ್ ಪಕ್ಕಮೊಯ್ಯನೊಯ್ಯನೆ ಗೋಣ್ಮುರಿದು ಕರಂ ೩೮

ವಚನ : ಅಂತುಮಲ್ಲದೆಯುಂ

---

1 ತ (ಕ)

ಶಾರ್ದೂಲವಿಕ್ರೀಡಿತ

ಪುರದ ಸ್ತ್ರೀಜನಮಾ ಸ್ವಯಂವರದ ಚೆಲ್ವಂ ನೋಡವೇಳ್ಕೆಂದು ಬಂ
ದಿರಲಾ ಬಾಗಿಲ ಮುಂದೆ ಪುತ್ಥಳಿಗಳಂ ನಿಂದಿರ್ದುಪಂ ಕಂಡು ಸೌಂ
ದರಿಯರ್ ತಾವಿಪರೆಂದು ಮತ್ತೆ ನುಡಿಸಲ್ ಮಾತಾಡದಂದಿರ್ದೊಡೆ
ಯ್ದರೆಲರ್ ನಕ್ಕಡೆ ನಾಣ್ಚಿಪೋಗಿ ಮಱಗೊಂಡತ್ತೊಂದು ಕೂಟಾಗ್ರಮಂ ೩೯

ಕಂದ: ಮಿಗೆ ಮೇಲ್ಗಟ್ಟಿನ ಬಣ್ಣಂ
ಸೊಗಯಿಪ ಮಣಿಭೂಮಿಯಲ್ಲಿ ಬಿಂಬಿಸಿ ನಾನಾ
ಬಗೆಯಾಗಿ ತೋಱ ಮುಗ್ಧೆಯ
ರಗಲ್ದಲ್ಲಿಂದಂಜಿಪೋಗಿ ಸಾರ್ದರ್ ಕೆಲನಂ ೪೦

ಚಂದನರಸಬಿಂದುಗಳಿಂ
ಸೌಂದರಹರಿನೀಳಕುಟ್ಟಿಮಾಂಗಣದೊಳ್ ಜಾ
ಣಿಂದಂ ಚಳೆಯಂಗೊಟ್ಟುದ
ದಂದ್ಯಾಗಸದಲ್ಲಿ ಪೊಳೆವ ತಾರಗೆಗಳವೊಲ್ ೪೧

ವಚನ: ಇಂತಭಿನವಶೋಭಾವಿಭವವಿಡಂಬನಸಮಾಲಂಬನದಿಂ ಕಣ್ಗೊಂಡು ಮೇದಿನೀಮಂಡಳದೊಳಖಂಡಕೌತೂಹಳಾಡಂಬರಮಾದ ಸ್ವಯಂಬರಮಂದಿರಮಂ ವಿರಚಿಸುವುದುಮಿತ್ತಲಾ ಪ್ರತಾಪರಾಜಂ ಹಿತಪುರೋಹಿತಜನಪರಿಶೋಧಿತಶುಭತರಪಂಚಾಂಗ ಪ್ರಪಂಚನ ಸಮುಂಚಿತಮೆನಿಪ ಶುಭದಿನಾಗ್ರೇಸರವಾಸರದೊಳಶೇಷಪ್ರಧಾನಪುರುಷ ಪುರಸ್ಸರಮಾ ಸ್ವಯಂಬರವಿಹಾರವಿಧಾನಕ್ಕೆ ಸಮುತ್ಸುಕಚಿತ್ತನಾಗಿ ಪೋಗಿ ಸಕಳರು [1]ರ್ವ[1]ರೀಪಾಳಕಕುಮಾರಕನಿಕರಸಮಾಹ್ವಾನನಿಮಿತ್ತಂ ದಂಡವಾಸಿಕರಂ ಕಳಿಪುವುದುಂ

ಸ್ರಗ್ಧರೆ

ನಾನಾದೇವಾಂಗವಸ್ತ್ರಂಗಳನನುನಯದಿಂದುಟ್ಟು ಮಾಣಿಕ್ಯಭಾಸ್ವ
ನ್ನಾನಾಶೃಂಗಾರಸಂಘಂಗಳನತಿಶಯದಿಂ ತೊಟ್ಟು ಕಾಶ್ಮೀರಸಮ್ಮಿ
ಶ್ರಾನೂನೋದ್ಗಂಧಮಂ ಲೇಪಿಸಿ ಕರಿಗಳನಂದೇಱು ಸಂತೋಷದಿಂದಂ
ನಾನಾದೇಶಂಗಳ ಕ್ಷೋಣಿಪರ ತನುಜರೇಕಕ್ಷಣಂ ಬಂದರೆಲ್ಲಂ ೪೨

ವಚನ: ಅಂತನೇಕ ರಾಜಕುಮಾರರೆಲ್ಲಂ ನೆರೆದು ತಂತಮ್ಮ ಚಾತುರ್ದಂತಬಲಂ ಬೆರಸು ಲೆಕ್ಕವಿಲ್ಲದ ಪಲ್ಲವತ್ತಿಗೆಗಳ ಮೊತ್ತಂಗಳ ತಣ್ಣೆಳಲಲ್ಲಿ ಬೀಸುವ ಹೇಮಚಾಮರಂಗಳ ಬಳಗಂಗಳಿಂದಳಂಕೃತರಾಗಿ ಸ್ವಯಂಬರಮಂಡಪಕ್ಕೆ ಬಂದು ನಿಜನಿಜೋಚಿತಸ್ಥಾನಂಗಳೊಳ್ ಕುಳ್ಳಿರ್ಪುದುಂ

---

[1] ಹ್ವ (ಗಚ)

ಕಂದ: ಹರಿವಂಶದುಗ್ರವಂಶದ
ಕುರುವಂಶದ ನಾಥವಂಶದಿಕ್ಷ್ವಾಕುಮಹೋ
ದ್ಧುರವಂಶದ ರವಿವಂಶದ
ನೆರೆದಿರ್ದರ್ ಸೋಮವಂಶದರಸುಗಳೆಲ್ಲಂ ೪೩

ವಚನ: ಆಗಳ್

ಮಹಾಸ್ರಗ್ಧರೆ
ಕೊಳನಂಭೋಜಂಗಳಿಂದಂ ಕನಕಗಿರಿತಟಂ ಕಲ್ಪವೃಕ್ಷಂಗಳಿಂದಂ
ಜಳರಾಶಿಸ್ಥಾನಮತ್ಯುಜ್ವಳಮಣಿಸಮುದಾಯಂಗಳಿಂದಂತು ಚೆಲ್ವಂ
ತಳೆದೊಪ್ಪುತ್ತಿರ್ಪುದಂತಾ ಪರಿಣಯನಗೃಹಂ ರಾಜಪುತ್ರರ್ಕಳಿಂದ
ಗ್ಗಳಚೆಲ್ವಂ ತಾಳ್ದಿ ಕೌತೂಹಳದತಿಶಯಮಂ ಪುಟ್ಟಿಸುತ್ತಿರ್ದುದಾದಂ ೪೪

ವಚನ: ಅನಂತರಂ ಸಗ್ಗದೊಳಗಗ್ಗಳಮಾದ ಪಲವುಂತೆಱದ ಬಣ್ಣವಣ್ಣಿಗೆಯ ಚೆನ್ನರನ್ನದಿಂ ಸಮೆದುತ್ತಂಸಾವತಂಸ ಗ್ರೈವೇಯಕಾಲಂಬನಾಂಗದ ಕೇಯೂರಹಾರ ಕಂಕಣಕಟಿಸೂತ್ರಂಗಳೆಂಬ ಚೆಲ್ವ ಮೆಯ್ದೊಡಿಗೆಗಳಂ ತೊಟ್ಟು ವಿಚಿತ್ರಚಿತ್ರಂಗಳಿಂ ಪರಭಾಗಂಬಡೆದ ಪರಿವಿಸ್ತೃತ ಪ್ರಶಸ್ತವಸ್ತ್ರಂಗಳನುಟ್ಟು ಬಹಳತರ ಪರಿಮಳ ಭರಮನುಗುಳ್ವ ಕುಂಕುಮಕರ್ಪೂರಪರಿಕಳಿತಹರಿಚಂದನಚರ್ಚೆಯನುದ್ವರ್ತನಂಗೆಯ್ದಂತು ಕೆಯ್ಗೆಯ್ದು ಮತ್ತಂ ಕೆಯ್ಮಿಕ್ಕ ಮದದ ಸೊಕ್ಕಿನೆಳುರ್ಕೆಯಿಂದುರ್ಕುತ್ತುಮಿರ್ದ ಪಣ್ಣಿದ ಪಟ್ಟದಾನೆಯ ನೇಱಿ

ಕಂದ: ಎತ್ತಿದ ಚೌಕದ ಪಲ್ಲವ
ಸತ್ತಿಗೆಗಳ ಕೆಳಗೆ ತಳ್ತು ಬೀಸುವ ಮಣಿದಂ
ಡೋತ್ತಮ ಚಾಮರತತಿಗಳ
ಬಿತ್ತರದಿಂದೆಸೆದು ಧರ್ಮನಾಥಂ ಬಂದಂ ೪೫

ವಚನ: ಇಂತು ಪೂರ್ವಸಂತಾನಪರಂಪರಾಸಮಾಯಾತ ಪರಾಕ್ರಮಕ್ರಮಪರಿಸೂಚ[1]ನಾ[1]ನಿರಂತರಿತವೈಜಯಂತೀಸಂತತಿಗಳ್ ನಭೋಂತಮನಾಲಿಂಗಿಸುತ್ತುಮಿರೆ ಮೊತ್ತಂಗೊಂಡೆಡೆಸಱಿಯದೆ ನಿಬಿಡಮಾಗಿ ನಡೆವುತ್ತುಮಿರ್ದ ಪೆರ್ವಡೆಯ ನಟ್ಟನಡುವೆ ಜಯಜೀವನಂದವರ್ಧಸ್ವಮೆಂಬ ಪಟುಪಾಠಕರ ಮಂಗಳವಚನಂಗಳನಾಲಿಸುತ್ತುಮಾ ಧರ್ಮನಾಥಕುಮಾರಂ ಬಂದು ತತ್ಸ್ವಯಂವರಮಂಟಪದೊಳಗಂ ಪೊಕ್ಕು ತನ್ಮಧ್ಯಸಮುದ್ಭಾಸಿತ ನವೀನಮಣಿಮಯಸಿಂಹಾಸನಸಮಾಸೀನನಾಗಿರ್ಪುದುಂ

1 ಕ (ಚ)

ಕಂದ: ಅಂತರಿಕ್ಷದವೊಲೊಪ್ಪುವ
ಕಾಂತಸ್ಫಟಿಕಸ್ವಯಂವರಾಲಯದೊಳ್ ಭೂ
ಕಾಂತಸುತರ್ ತಾರೆಗಳಿಂ
ಬಂತಿರೆ ಚಂದ್ರನವೊಲೆಸೆದನಾ ಧರ್ಮಜಿನಂ ೪೬

ವಚನ: ಅನ್ನೆಗಮಿತ್ತಲನೇಕವಿಧಮಂಗಳವಾದ್ಯನಾದಂಗಳು[1] ಪೊಣ್ಮುತ್ತಮಿರಲಾ ಶೃಂಗಾರವತೀದೇವಿಗೆ ಚಂದ್ರಕಾಂತಮಯರುಂದ್ರತರ ಮಂಗಳಕಳಶ ಪರಿವಿಗಳೆದತೀವ ಸಾಂದ್ರಕಿರಣಪರಂಪರಾರೂಪಧಾರೆಗಳಿಂ ದ್ವಿಗುಣಿಸಿದ ಮಳಯಜರಸಪರಿಷದುಪಕಲಿತ ಬಹಳಪರಿಮಳಮಿಳಿತ ಶೀತಳಜಳಧಾರಾಪೂರಂಗಳಿಂ ವಿವಾಹಕಲ್ಯಾಣಕ್ಕೆ ಮುಖ್ಯಮಾದ ಮಂಗಳಸವನೋತ್ಸವವಿಧಾನಮನೊಡರ್ಚುವುದುಂ

*

ಕಂದ: ತಿಂ[2]ಗಳ[2] ಕದಿರ್ದೋಂಗಲ್ಗಳ್
ಕಂಗೊಳಿಸುವ ನೆಯ್ದಿಲಿಂಗೆ ಬಂದೆಱಗುವವೊಲ್
ಮಂಗಳಜಳಧಾರೆಗಳು
ತ್ತುಂಗಸ್ತನೆಯಂಗದಲ್ಲಿ ಬಂದೆಱಗುವುದುಂ ೪೭

ವಚನ: ಆಸಮಯದೊಳ್

ಕಂದ: ಕ್ಷೀರೋದಲಹರಿ ಮುಸುಕಿದ
ಚಾರುಶ್ರೀದೇವಿಯೆಂಬಿನಂ ಕಣ್ಗೆಸೆದಳ್
ಭೂರಿತರಾಮೃತವಾರಾ
ಪೂರದೊಳಂ ಪೊಳೆವುತಿರ್ದತನುಲತೆಯಿಂದಂ ೪೮

ವಚನ: ಇಂತಾ ಮಂಗಳಸವನಸಮಯಾನಂತರಂ ಕೆಲದೊಳಿಕ್ಕಿದ ಹವಳದ ಹಾವುಗೆಯಂ ಮೆಟ್ಟಿ ನಿಲುವುದುಮಾಗಳಾ ರಾಜೀವಪತ್ರನೇತ್ರೆಗೆ ನೀರಾಜನಾಸಮಾಜವಿರಾಜಮಾನ ರಾಜತಭಾಜನಂಗಳ ರಾಜಿಗಳಂ ನಿವಾಳಿಸುವುದುಂ

ಕಂದ: ತೋರಮುತ್ತುಗಳ ಮೊತ್ತದಿ
ನಾರಮಣಿಯ ಚೆಲ್ವನೆಯ್ದುನಾಕ್ಷಣದೊಳ್ ಶೃಂ
ಗಾರಿಸಿದಂತಿರಲೆಸೆವುದು
ವಾರಿಯ ಬಿಂದುಗಳ ಬಳಗಮೆಲ್ಲೆಡೆಗಳೊಳಂ ೪೯

---

1 ಳ್ಕೆ ಪೊಳ್ಮು (ಗಚ) 2 ಗ (ಗಚ)

* ಶೃಂಗಾರವತೀ ಮಹಾದೇವಿಯ ಶೃಂಗಾರ (ಚ)

ಆಕೆಯ ಮೆಯ್ಯೊಳ್ ತುಂಬಿದ
ವಾಃಕಣಚಯಮಂ ದುಕೂಲಚೇಲಾಂಚಲದಿಂ
ದೊಯ್ಕನೆ ತೊಡೆದರ್ ಮಣಿಯ ಶ
ಲಾಕೆಯನೆಯ್ದೊಪ್ಪವಿಡುವ ತೆಱದಿಂದಾಗಳ್ ೫೦

ವಚನ : ತದನಂತರಂ

ಉತ್ಪಲಮಾಲೆ

ಕುಂತಳಭಾರಮಂ ಪಿಡಿದು ಸಂತಯಿಸುತ್ತು ಸಡಿಲ್ದ ನೀವಿಯಂ
ಕಾಂತಸುವರ್ಣಕಾಂಚಿಯೊಳಮರ್ಚಿ ತೊಡಂಕಿಸುತಂ ವಿಲೋಚನ
ಪ್ರಾಂತದ ಕಾಂತಿಸಂತತಿಗಳಿಂ ಧವಳೀಕರಿಸುತ್ತು ಸುತ್ರನಾ
ಕ್ರಾಂತೆ ಮರಾಳಿಕಾಗಮನದಿಂ ನಡೆದಳ್ ಬಳಿಸುತ್ತೆ ತೋಳ್ಗಳಂ ೫೧

ವಚನ : ಇಂತು ಮನ್ಮಥನ ವಶ್ಯಮಂತ್ರಾಧಿದೇವತೆಯೆ ಮೂರ್ತಿವಡೆದು ನಡೆದು ಬರುತ್ತಿರ್ದುದೆಂಬಂತೆ ಕೇಸಡಿಗಳ ವಿನ್ಯಾಸವಿಳಾಸದಿಂ ಪಳಿಕಿನ ನೆಲಕ್ಕೆ ಮಿಸುಪಪಸುಕೆಯ ಪೊಸಕೆಸುದಳಿರ ರಚನೆಯನೆಸಗುತ್ತುಂ ಬಂದೊಂದು ಮನೋಹಾರಿವಿರಚಿತ ಶೃಂಗಾರದಾಗಾರಮಂ ಪುಗುವುದುಮಾಗಳೊಡವಂದ ಕಡುಜಾಣೆಯರಪ್ಪ ಮಡದಿಯರುಡಿಸುವ ತೊಡಿಸುವ ಬೆಸನಂ ಪಡೆದು

ಕಂದ : ಪಲತೆಱದ ಬಣ್ಣವಣ್ಣಿಗೆ
ಗಳಿನೊಪ್ಪಂಬೆತ್ತು ರಂಜಿಸುವ ಸೀರೆಯನಂ
ದೊಲವಿಂ ನಿಱಿವಿಡಿದುಡಿಸಿದ
ಳೆಳಸುವಿನಂ ನೋೞ್ಪ ಜನದ ಕಣ್ಣುಂ ಮನಮುಂ ೫೨

ಚಂಪಕಮಾಲೆ

ಪೊಳೆವ ಕದಂಪಿನಲ್ಲಿ ಕೊರಳಲ್ಲಿ ಭುಜಾಗ್ರದ ಮೇಲೆ ಪೀನಮಂ
ಜುಳಕುಚಯುಗ್ಮದೊಳ್ ಮಕರಿಕಾದಿವಿಚಿತ್ರಿತಪತ್ರಭಂಗಮಂ
ವಿಳಸಿತಗಂಧಸಾರರಸದಿಂ ಬರೆದಳ್ ಕಡುಜಾಣೆಯೊರ್ವಳ
ಗ್ಗಳದ ಮನೋಜವಶ್ಯಕರಮಂತ್ರಮುಮಂ ಬರೆವಂತಿರಾಕ್ಷಣಂ ೫೩

ಕಂದ : ಕೆಂದಾವರೆಯರಲ್ಗಳನೊ
ಲ್ದಂದೆಳವಿಸಿಲೆಳಸಿ ಬಳಸಿತೆನೆ ಲಾಕ್ಷಾರಸ
ದಿಂದಡಿಗಳನೂಡಿದಳೊಲ
ವಿಂದೀಕ್ಷಿಪರಲ್ಲಿ ರಾಗಮಿಮ್ಮಡಿಸುವಿನಂ ೫೪

ಚರಣನಖಚಂದ್ರಮಂಡಳ
ಪರಿಸರದೊಳ್ ಪೊಳೆವ ತಾರಕಾಮಾಲೆಗಳಂ
ತಿರೆ ಮುಕ್ತಾಫಳಮಯನೂ
ಪುರಂಗಳಂ ಕಾಲ್ಗಳಲ್ಲಿ ತೊಡಿಸಿದಳೊರ್ವಳ್ ೫೫

ಆ ವಧುವಿನ ಕಟಿತಟದೊಳ್
ಪೀವರಮಣಿಕಿಂಕಿಣೀರಣನ್ಮೇಖಳೆಯಂ
ಭಾವಕಿ ತೊಡಿಸಿದಳೊರ್ವಳ್
ಶೀವುವಿನಂ ನೋಳ್ಪರೆರ್ದೆಯೊಳತ್ಯಾಶ್ಚರ್ಯಂ ೫೬

ಬಿಡದ ಪಯೋಧರ ಮಂಡಳ
ದೆಡೆಯೊಳ್ ವರಪಂಚವರ್ಣಪರಿರಂಜನೆ ಮುಂ
ದಿ[1][ಡೆ][1] ರನ್ನದೈಸರಂಗಳ
ನಡಸಿಟ್ಟಳದಿಂದ್ರಚಾಪಮಂ ಬೀಱುವಿನಂ ೫೭

ನಳಿತೋಳ್ಗಳೆಂಬ ಮೃದುಲತೆ
ಗಳ ಬೀಳಲಿವೆಂಬ ಮಾಳ್ಕೆಯಿಂ ನವರತ್ನಂ
ಗಳ ಕಾಂತಿ ಕವಲ್ವರಿವಿನ
ಮಳವಡಿಸಿದಳಂಗದಂಗಳಂ ಬಾಹುಗಳೊಳ್ ೫೮

ಸಿರಿಸದ ಪೂಮಾಲೆಗಳಂ
ದ್ವಿರೇಫಮಾಲೆಗಳ ಬಳಸಿದಂತಿಕ್ಕಿದಳಾ
ತರುಣಿಯ ಮುಂಗೈಗಳೊಳಂ
ಹರಿನೀಲದ ಪಿಂಡುಗಂಕಣಂಗಳನಾಗಳ್ ೫೯

ಚಂಪಕಮಾಲೆ

ಅರಳಸರಳ್ಗಳಿಂಗೆ ರತಿಯುಂ ಗಱಿಗಟ್ಟುವ ಮಾಳ್ಕೆಯಿಂದೆ ಸೌಂ
ದರಿಯ ಲಸತ್ಕರಾಂಗುಳಿಗಳಲ್ಲಿ ಹರಿನ್ಮಣಿಮುದ್ರಿಕಾಪರಂ
ಪರೆಗಳ ಸೆಕ್ಕಿದಳ್ ಕೆಳದಿಯೊರ್ವಳವಾಕ್ಷಣಮಾಕ್ಷಣಂಗಳಿಂ
ಗುರುತರರಾಗಮಂ ಬಿಡದೆ ಪುಟ್ಟಿಸುತಿರ್ದುವು ನೋಳ್ಪಡದ್ಭುತಂ ೬೦

---

1 ಡದೆ (ಕ) ರದೆ (ಗಚ)

ಕಂದ : ಮತ್ತೊರ್ವಳ್ ಕೌಶಲ್ಯಂ
ಬೆತ್ತು ಕುಮಾರಿಕೆಯು ಜೆಲ್ವ ನುಣ್ಗೊರಳೊಳ್ ಮಿಗೆ
ಬಿತ್ತರಿಸಿ ಕಟ್ಟಿದಳ್ ಪೊಳೆ
ವೃತ್ತಿರ್ದುಜಾತ ತೋರಮುತ್ತುಗಳ ಸರಮೇಳಂ ೬೧

ಬೇಕೆಂಬ ಕುಮಾರಕ ಚಿ
ತ್ತಾಕರ್ಷಣಘುಟಿಕೆಯಂತೆ ರಂಜಿಪ ಪರನೂ
ಸ್ತ್ರೋಕಮೌಕ್ತಿಕದಿನೊಪ್ಪುವ
ಮೂಕುತಿಯಂ ಮೂಗಿನಲ್ಲಿ ಸಾರ್ಚಿದಳೊಲವಿಂ ೬೨

ಚಂಪಕಮಾಲೆ

ನಗೆಮೊಗಮೆಂಬ ಚಂದ್ರಮನ ತಣ್ಗದಿರ್ದೊಂಗಲೆ ಘಟ್ಟಿಗೊಂಡೆರ
ಳ್ಗೆಯೊಳೆ ಪುಂಜಿಸಿರ್ದು ಪರಿಲಂಬಿಗಳಾದುವಿವೆಂಬ ಮಾಳ್ಕೆಯಿಂ
ಸೊಗಯಿಪ ಮುತ್ತಿನೋಲೆಗಳನಿಕ್ಕಿ ಮನೋಹರಕರ್ಣಪಾಳಿಕಾ
ಯುಗದೊಳನುರ್ಚಿದಳ್ ಕಡುಕಿನೋಳಿಯನಾತ್ತವಿಮೌಕ್ತಿಕಾಳಿಯಂ ೬೩

ಕಂದ : ನಗೆಗಣ್ಗಳೊಳಂಜನಮಂ
ಬಗೆಗೊಳ್ವನಮೆಚ್ಚಿದಳ್ ವಿಳಾಸಿಯೊರ್ವಳ್
ಮಿಗುವ ಪೊಸಮಸೆಯ ನನೆಯಂ
ಬುಗಳಿಂಗಂ ಪಡೆವ ಮಾಳ್ಕೆಯಿಂ ನುಣ್ಬೊಗರಂ ೬೪

ಶೃಂಗಾರಮೆಂಬ ಲತೆಯು ಮ
ನಂಗೊಳಿಸುವ ತುತ್ತತುದಿಯೊಳೊಗೆದಿರ್ದಲರೊ
ಳ್ದೊಂಗಲವೊಲ್ ಪೆಱತನೊಸಲೊಳ್
ಸಂಗಳಿಸಿದಳಳೆವ ತೋರಮುತ್ತಿನ ಬೊಟ್ಟಂ ೬೫

ತ್ರಿಗುಣಿಸಿದ ಮಲ್ಲಿಕಾಮಾ
ಲೆಗಳಂ ಕಡುತೋರಮಾದ ಮುಡಿಯಲ್ಲಿ ಮನಂ
ಬುಗುವಂತಿರೆ ಮುಡಿಸಿಟ್ಟಳ್
ಮೃಗಧರಕಳೆಗಳನೆ ರಾಹು ಮುಕ್ಕುಳಿಸಿದವೊಲ್ ೬೬

ರನ್ನದ ಮುಂದಂಡೆಗಳಿಂ
ಜೆನ್ನಂಬಡೆದಿರ್ದು ತೋರತೊಂಗಲ್ಗಳಿನೆಸೆ
ವನ್ನಂ ಮುತ್ತಿನ ಮುಡಿಯಂ
ಕನ್ನೆಗೆ ಜಾಣಿಂದೆ ತೊಡಿಸಿದಳ್ ಮತ್ತೊರ್ವಳ್ ೬೭

ವಚನ: ಇಂತು ತತ್ತತ್ಕರ್ಮಕೌಶಲ್ಯನಿರತೆಯರಪ್ಪ ಪರಿಚ್ಛಾರಕಿಯರಾ ಶೃಂಗಾರವತೀದೇವಿಯನತಿಶಯಮಾಗಿ ಕೆಯ್ಗೆಯ್ಸಿದಾಗಳ್

ಚಂಪಕಮಾಲೆ

ಮನದನುರಾಗಮೊಳ್ಗಿಗೆ ದಲಾಗರಮಾಕ್ಷಿರ್ಸೇಕ್ಷಣಂಗಳಿಂ
ಗನಮಧಿಸೌಖ್ಯಕಾರಕಮಶೇಷಜನಪ್ರಿಯಮಾಗಿ ಕೌತುಕಂ
ತನಗಳವಟ್ಟು ತೋಱಿತ ಪರಿಭೂಷಿತಕನ್ನೆಯ ರೂಪು ಲೋಕಮಂ
ಘನಮೆನೆ ಮೋಹಿಸುತ್ತು ಪುಳಕಾಂಕುರಸಂಕುಳಮಾಗಳೆಳ್ವಿನಂ ೬೮

ಕಂದ: ಮನಸಿಜನ ಮಂತ್ರದೇವತೆ
ಯೆನೆ ಮದನನ ವೀರಲಕ್ಷ್ಮಿಯುಂತಿರೆ ರತಿನಾ
ಥನ ಮೋಹನಶಕ್ತಿಯವೊಲ್
ಜನಮಂ ಮೋಹಿಸುತಮಿರ್ದಳಚ್ಚರಿಯಿಂದಂ ೬೯

ವಚನ: ಆಗಳ್

ಕಂದ: ಎಯ್ದೆ ಮೂಲೋಕಮುಂ ಕೆ
ಯ್ಗೆಯ್ದಾಕೆಯ ರೂಪಿದೊಂದೆ ಸಾಲದೆ ಗೆಲಲಿ
ನ್ನೆಯ್ದು ಬಾಣಂಗಳಂ ಪಿಡಿ
ದೆಯ್ದುವ ಸಂಕ್ಲೇಶಮೇವುದೆಂಬಂ ಮದನಂ ೭೦

ವಚನ: ಅನಂತರಮಾ ಪ್ರತಾಪರಾಜನಾದೇಶದಿಂದಂ ಮೌಹೂರ್ತಿಕನೊರ್ಬಂ ಶುಭಮುಹೂರ್ತಮನಿಸಿಮಗ್ನ ಶುಭಲಗ್ನದೊಳನೇಕವಿಧಮಣಿಮಯ ರಚನಾವಿಶೇಷಪರಿರಂಜಿತಮುಂ ಸಂಪೂರ್ಣಮನೋರಥಮುಮೆನಿಪ್ಪ ಸುವರ್ಣರಥಮುಂ ತಂದು ಮುಂದಿರಿಸುವುದುಮಾಗಳಾ ಶೃಂಗಾರವತೀದೇವಿ ತನ್ನಯ ಸೂತ್ನರತ್ನಮಯಸಮುದಾರ ನಾನಾ ಶೃಂಗಾರಸಾರದಂಗೀಕಾರದಿಂ ಚಾರುತೆವಡೆದ ಹಡಪದ ಡವಕೆಯ ಕನ್ನಡಿಯ ಸಂಚದ ಮೇಳದಂಗನೆಯರೊಡಗೂಡಿ ಸಕಳರಾಜಕುಮಾರವಂಶವೀರ್ಯಪರಾಕ್ರ[1]ಮಕ್ರಮಸ್ವರೂಪನಿರೂಪಣಾ[1] ನಿಪುಣೀಕೃತಬುದ್ಧಿಸಮೃದ್ಧಿಯುಪ್ಪ ಶುಭಪ್ರಿಯೆಂಬ ವೃದ್ಧ ಕಂಚುಕಿವೆರಸು ಕಡುಸಲವಿಂದ ಬಂದಾ ರಥಮನೇಱುವುದುಂ

ಮತ್ತೇಭವಿಕ್ರೀಡಿತ

ಪರಿವೇಷಂಬಡೆದಿರ್ದ ಪೂರ್ಣಶಶಿಬಿಂಬಂ ತಾನಿದೆಂಬಂದದಿಂ
ಪರಭಾಗಂಬಡೆದಿರ್ದ ಪಲ್ಲವದಿನೊಪ್ಪಂಬೆತ್ತುದಂ ಛತ್ರಮಂ
ಧರಿಸಿರ್ದಳ್ ಕೆಲದಲ್ಲಿಯೊರ್ವಳೊಲವಿಂ ಮತ್ತಿರ್ವರುಂ ರತ್ನದಾ
ಧುರದಂಡಾಂಚಿತ ಚಾಮರಂಗಳನಿರಲ್ಬಾಗಂಗಳಲ್ಲಿಕ್ಕಿದರ್ ೭೧

---
[1] ಮ (ಗ)

ವಚನ : ಆಪೊತ್ತಿನೊಳ್

ಉತ್ಪಲಮಾಲೆ

ಮಂಗಳಪಾಠಕಪ್ರಕರಮೋದುವ ಪಾವನ[1]ಪದ್ಯಗದ್ಯ[1]ನಾ
ದಂಗಳ ಕೂಡೆ ಸಂಗಣಿಸಿ ಮಂಗಳಗಾಯಕಗಾಯಕೀ ನಿಕಾ
ಯಂಗಳ ಚಾರುಗೀತನಿನದಂಗಳವೆಣ್ದೆಸೆಯಂ ಪಳಂಚಲು
ತ್ತುಂಗಗಭೀರಹೃದ್ಯತರಮಂಗಳವಾದ್ಯರವಂಗಳುಣ್ಮಲುಂ ೭೨

ಕಂದ : ಕುಲವೃದ್ಧೆಯರೆಲ್ಲಂ ನೆರೆ
ದೋಲವಿಂದಂ ಪರಸಿ ಮಂಗಳಾಕ್ಷತಜಯಮಂ
ತಳಿಯಲವಂ ಕೈಕೊಳುತುಂ
ತಳರ್ದಲ್ಲಿಂ ಪೋಗುತಿರ್ದಳತಿಶಯದಿಂದಂ ೭೩

ತುಂಗತರಮಂಗಳದ್ರ
ವ್ಯಂಗಳ ಬಳಗಂಗಳಿಂದೆ ತುಂಬಿದ ಹರಿಯಾ
ಣಂಗಳ ಪಂತಿಗಳಂ ಪಿಡಿ
ದಂಗನೆಯರ್ ನೆರೆದು ಮುಂದೆ ಪೋಗುತ್ತಿರ್ದರ್ ೭೪

ಪರಿವಾರವಾರನಾರೀ
ಪರಿಕರನಿಕರಂಗಳಾ ವರೂಥದ ಸುತ್ತಲ್
ನೆರೆದು ಬರುತ್ತಿರ್ದರ್ ಬಿ
ತ್ತರಿಸುತ್ತುಂ ಕಾಮದೇವಮಹಿಮಾಸ್ಥಿತಿಯಂ ೭೫

ವಚನ : ಇಂತಾಕೆಯೊಡನಾಡಿಗಳಪ್ಪ ಸಾಸಿರ್ವರ್ ಮೋಳದ ಕೆಳದಿಯರ್ ಪಿಂಡುಗೊಂಡು ತದ್ಯೋಗ್ಯ ನಾನಾಪ್ರಕಾರ ನವೀನಮಣಿಮಯಮಂಗಳೋಪಕರಣಂಗಳಂ ಪಿಡಿದಾ ಸ್ಯಂದನದ ಸುತ್ತಲುಂ ಮುಂದೈಸಿ ನಡೆಯೆ

ಉತ್ಪಲಮಾಲೆ

ಉ[2]ರ್ಬಿ[2]ದ ಗರ್ವದಿಂದೆ ಮದನಂ ಗೊಲೆಗೇಱಿಸಿ ಕಬ್ಬುವಿಲ್ಲುಮಂ
ಕೊರ್ಬಿದ ಪೂವಿನಂಬುಗಳನಲ್ಲಿ ತೊಡರ್ಚೆ ವಿಶೇಷಶೌರ್ಯದಿಂ
ಜೊಬ್ಬು ಱಿದಾ[3]ರ್ದು[3] ಮುಂದೆ ನಡೆಯಲ್ ಮುದದಿಂದವೆ ಬಂದುಪೊಕ್ಕಳಾ
ಸರ್ವಸುತ ಸ್ವಯಂವರದ ಚಿತ್ರತರಗೋಪುರ[4]ದಂ[4]ತರಾಳಮಂ ೭೬

1 ಗದ್ಯಪದ್ಯ (ಗ) 2 ಬ್ಬಿ (ಗಚ) 3 ಲ್ದು (ಗಚ) 4 ಮಂ (ಗಚ)

ವಚನ: ಅಂತಾ ಶೃಂಗಾರವತೀದೇವಿಯೆಂಬ ಕನ್ಯಾರತ್ನಂ ಮಹಾಮಹಿಮೆವೆರಸಿ ಬಂದು ತತ್ಸ್ವಯಂವರಮಂದಿರದೊಳಗಂ ಪುಗುವುದುಮಾಗಳಲ್ಲಿರ್ದ ರಾಜನ್ಯಕಮೆಲ್ಲಂ ವಸಂತಲಕ್ಷ್ಮಿಯ ಬರವಿನೊಳವನೀರುಹಂಗಳಂಕುರಸಂಕುಳಂಗಳಂ ತಾಳ್ದುವಂತೆ ವಿಪುಳ ಪುಳಕಂಗಳಂ ತಾಳ್ದಿ ಮತ್ತಮವರ ಕಣ್ಗಳುಂ ಮನಂಗಳುಂ ವಾಸರಶ್ರೀಯ ಪ್ರವೇಶದೊಳ್ ತಾವರೆಯಲರ್ಗಳಲರ್ವಂತೆ ವಿಕಾಶಶ್ರೀಯನಪ್ಪುಕೆಯ್ವುದುಂ

ಕಂದ: ಸೊಗಯಿಪ ಕನ್ಯಾರತ್ನಂ
ಮಿಗೆರಾಜಕುಮಾರರೀಕ್ಷಣಾಕರ್ಷಣಮಂ
ಬಗೆಗಳ್ಗಾಕೃಷ್ಟಿಯುಮಂ ಕೆ
ಯ್ಮಿಗಲೊರ್ಮೊದಲಲ್ಲಿ ಮಾಡಿದಳ್ ಕೌತುಕಮಂ ೭೭

ವಚನ: ಆಗಳಾ ರಾಜಕುಮಾರಿ ಮೆಲ್ಲಮೆಲ್ಲನೆ ಸಲ್ಲೀಲೆಯಿಂದಂ ಬಂದು ತತ್ಸ್ವಯಂವರನುಂಡಪಮಧ್ಯಸ್ಥಳಕ್ಕಳಂಕಾರಮೆನಿಸಿ ಕಣ್ಗೊಳಿಪ ಗೋವೇದವೇದಿಕಾಗ್ರಭಾಗದಲ್ಲಿ ಥಳಥಳಿಸಿ ಪೊಳೆವ ವಿಮಳತರಮುಕ್ತಾಫಳಮಾಲಾಲಂಭೂಷಾದಿ ರಚನಾವಿಶೇಷ ಪರಿಭೂಷಿತರಮಣೀಯ ಹರಿನೀಳ ಶಿಲಾಮಯಸ್ತಂಭಮಂ ಮಲಂಗಿ ನಿರತಿಶಯಮಾಗಿ ನಿಂದಿರ್ಪುದುಂ

ಕಂದ: ತಾರಾವಳಿಗಳ್ ಬಳಸಿದ
ಚಾರುಸುಧಾಕಿರಣಕಳೆಯ ತೆಱದಿಂದೆ ಮನೋ
ಹಾರಿಸ್ತ್ರೀಯರ ಬಳಸಿಂ
ದಾ ರಾಜಕುಮಾರಿ ಮನಕೆ ಪಡೆದಳಗುರ್ವಂ ೭೮

*
ರತಿಯುಂ ಪ್ರತಿಷ್ಠೆಗೆಯ್ದುಂ
ಪಿತಾಮಹಂ ಸಕಳಜನಮನಃಪೀಠದೊಳೆಂ
ಬತಿಶಯಮಮಂ ಪುಟ್ಟಿಸುತುಂ
ಸತಿನೋಡುತ್ತಿರ್ದಳಖಿಳರಾಜನ್ಯಕಮಂ ೭೯

ವಚನ: ಆಗಳಖಿಳಭೂಪಾಳಕುಮಾರಕರ ಕಣ್ಮಲರ್ಗಳೊರ್ಮೊದಲೊಳ್ ಕಡು ತವಕದಿಂ ಋಜುವರ್ಥಋಜುವಕ್ರಮರ್ಥವಕ್ರಾದಿ ಬಹುವಿಧ ಗತಿಭೇದದಿಂ ಪರಿದು ಪೋಗಿಯಾ ರಾಜಕುಮಾರಿಯನೆಳಸಿ ಬಳಸಿಯೋರ್ಬ್ಬೆಸಿಯಟ್ಟೆಮುಟ್ಟೆ ಪತ್ತಿ ಸುತ್ತಿ ಮುತ್ತುತ್ತುಮಿರೆ

* ರಾಜನ್ಯಕ ವಿಕಾರಂ (ಗಚ)

ಕಂದ: ಮಿಕ್ಕ ನಾಲ್ಕಿಂದ್ರಿಯಂಗಳ
ನೊಕ್ಕು ಕರಂ ಬಿಟ್ಟುನುವಱ ವಿಷಯಂಗಳುಮಂ
ಸೊಕ್ಕಿರ್ದ ದೃಗಿಂದ್ರಿಯಮೊಂ
ದಕ್ಕನುವಶರಾಗೆ ನೋಡಿದರ್ ಕನ್ಯಕೆಯಂ ೮೦

ಮತ್ತೊರ್ವಂ ರಾಜಸುತಂ
ಬಿತ್ತರದಿಂ ನೋಡಿನೋಡಿ ಕಣ್ಸೋಲಂ ಮೆ
ಯ್ವೆತ್ತೆಮೆಯಿಕ್ಕದೆ ಬಗೆಗೊಳಿ
ಸುತ್ತಿರ್ದಂ ಸುರಕುಮಾರನೆಂಬಿನಮಾಗಳ್ ೮೧

ಮತ್ತೇಭವಿಕ್ರೀಡಿತ

ಸುವಿಪಂಚೀಕಳನಾದವೆಂಬ ತೆಱದಿಂ ಕರ್ಣಾಮೃತಸ್ಯಂದನೋ
ತ್ಸವಮಂ ಮಾಳ್ಪ ಗಭೀರಸಾರಮೃದುವಪ್ಪೊಳ್ಮಾತುಮಂ ಕನ್ನೆಯು
ನ್ಯವಧೂವಕ್ತ್ರಮನೀಕ್ಷಿಸುತ್ತು ನುಡಿಯಲ್ಕೆನ್ನಂ ದಲೆಂದೊರ್ವನು
ಜ್ಜುಗದಿಂ ಪೋಗಿರೆ ಮುಂದೆ ಲೆಕ್ಕಿಸದಿರಲ್ಕಾದಂ ಸುಹಾಸ್ಯಾಶ್ರಯಂ ೮೨

ಪಿರಿದುಂ ಕೌತುಕಮಾದ ರೂಪಭರಮಂ ಕಣ್ಸೋಲ್ತು ನಟ್ಟಾಲಿಗೊಂ
ಡರೆಬರ್ ನೋಡುವ ಪೊತ್ತಿನಲ್ಲಿ ನಿಜಚೇಷ್ಟಾಭಾವಮಂ ಬಿಟ್ಟು ಮೆ
ಯ್ಗರೆದರ್ ಲೆಪ್ಪದ ಚಿತ್ರಿಸಿರ್ದ ವಿಲಸಚ್ಚಿತ್ರಂಗಳೆಂಬಂದದಿಂ
ಮರವಟ್ಟರ್ ಕರಮಾ ಕುಮಾರಕಿಯ ಸೌಂದರ್ಯಕ್ಕಿದಾಶ್ಚರ್ಯಮೇ ೮೩

ಉತ್ಪಲಮಾಲೆ

ಪೊಂಗಳಸಂಗಳಂತೆಸೆವ ವೃತ್ತಕುಚಂಗಳ ಜೆಲ್ವಿನೇಳ್ಗೆಯುಂ
ಪಿಂಗದೆ ಸೋಲ್ತು ನೋಡುವೆಡೆಯೊಳ್ ಪುಳಕಂಗಳನಪ್ಪುಕೆಯ್ಯಲಂ
ದಂಗಜ ಮೂರ್ಛೆಯಿಂದೆ ಮರವಟ್ಟಿರೆ ರಾಜಕುಮಾರರೆಲ್ಲರುಂ
ತುಂಗಮುದಶ್ರುಧಾರೆಗಳಿನೆಚ್ಚಱುಮಂ ಪಡೆದಿರ್ದರಾಕ್ಷಣಂ ೮೪

ಕಂದ: ಲಲನಾತಿಳಕದ ನಳಿತೋ
ಳೆಳಕುಳಿಗೊಳೆ ಕಾಮಪಾಶದಂತಿರೆ ಮನಮಂ
ಕಳವಳಿದದನೀಕ್ಷಿಸುತುಂ
ತಳವೆಳಗಾದಂ ನೃಪಾಳತನಯನದೊರ್ವಂ ೮೫

ಮಿಸುನಿಯ ಕುಂಡಳಮಂ ಸಂ
ತಸದಿಂದಳವಡಿಸುವೊಂದು ನೆವದಿಂದೊರ್ವಂ
ನಸುಮುರಿದು ಗೋಣನಂದೀ
ಕ್ಷಿಸಿದಂ ನೃಪಸುತೆಯ ಮಿಸುಪ ನಗೆಮೊಗದೊಳ್ಪಂ ೮೬

ನೀಱೆಯ ಪೆಱನೊಸಲೊಳ್ ಬೆ
ಳ್ಪೇಱಿದ ತಿಳಕಂ ಮನೋಜವಶ್ಯದ ತಿಳಕಂ
ತೋಱಿರಲದನೀಕ್ಷಿಸುತಂ
ಬೇಱೊರ್ವಂ ಮಱುಗಿ ನೆಱೆಯೆ ಬೆಱಗಾಗಿರ್ದಂ ೮೭

ವಚನ : ಅಂತು ಕಂತುರಾಜನ ಸಮ್ಮೋಹದೀಪಕಳಿಕೆಯಂತೆ ಕಮನೀಯ ಕಾಯ ಕಾಂತಿಸಂತತಿಯಿಂದುಜ್ಜ್ವಳಿಸುತ್ತುಮಿರ್ದ ಮಂಗಳಮಯಶೃಂಗಾರಭಂಗಿಯನಂಗೀಕರಿಸಿ ಕೆಂಗೊಳಿಪ ಚೆಲ್ವಿಂದಗ್ಗಳಮಾದ ಶೃಂಗಾರವತೀದೇವಿಯುಂ ಕಂಡು ಮನಂಗೊಂಡನೇಕ ರಾಜಕುಮಾರಕಲೋಕಮೆಲ್ಲಂ ನಾನಾಪ್ರಕಾರ ಕಾಮವಿಕಾರ ಪರಿಪಾಕಸಮುದ್ರೇಕ ಸಮಾಕ್ರಾಂತಮನೋವಿಕಾರದೊಡನೊಡನಂಗಂಗಳ ದುಷ್ಟಚೇಷ್ಟಾಪರಂಪರೆಯನವಷ್ಟಂಭಿಸುವುದುಂ

ಕಂದ : ಆಸತಿಯ ಚಾರುಲಾವ
ಣ್ಯಾಸವರಸಸೇವೆಯಿಂದೆ ಸೊಕ್ಕಿತ್ತು ಕರಂ
ಭಾಸುರಕುಮಾರವೃಂದಂ
ಸೂಸುವಿನಂ ಮದನಚೇಷ್ಟೆ ಬಹುಮುಖದಿಂದಂ ೮೮

ಒಂದೊಂದು ನೆವದ ಮಱೆಯಿಂ
ದಂದಾ ನೃಪಸುತೆಗೆ ತಮ್ಮ ಚೆಲ್ವಂ ತೋಱಿಸ
ಲೆಂದು ಮಾಡಿದರನೇಕ
ಚ್ಛಂದದ ಚೇಷ್ಟೆಗಳನಾ ಕುಮಾರಕರರೆಬರ್ ೮೯

ವಚನ : ಅದೆಂತೆನೆ

ವಚನ : ಮುಡಿದ ಪೂಮಾಲೆ ಮತ್ತಿ
ಮ್ಮಡಿಸಲ್ ನಖದೀಪ್ತಿಮಾಲೆಯಿಂ ಯುವನೊರ್ವಂ
ಕಡುತೋರದುಱುಂಬಂ ಸಂ
ಗಡಿಸುವ ನೆವದಿಂದೆ ತನ್ನ ಚೆಲ್ವಂ ಮೆಱೆದಂ ೯೦

ಸುಕುಮಾರಕನೊರ್ವಂ ಮಣಿ
ಮಕುಟಮುಮಂ ತಿರ್ದುವೊಂದು ನೆವದಿಂದೆ ಭುಜಾ
ಧಿಕಶೋಭೆಯನಾಕ್ಷಣದೊಳ್
ಪ್ರಕಟಸಿ ಮೆಱೆದಂ ಸುರೂಪಮಂ ವೈಭವಮಂ ೯೧

ಭಾಸುರಮುಕ್ತಾಹಾರಮ
ನೋಸರಿಸುವ ನೆವದಿನಂದು ಪೇವುರದೊಳ್ಪಂ
ಲೇಸಾಗಿಯೆ ತೋಱಿಸಿದಂ
ಸಾಸಿಗನೊರ್ವಂ ಕುಮಾರಕಂ ಕಡುಸೀಱಂ ೯೨

ಅಂಗದಮಂ ತಿರ್ದುವ ಪರಿ
ಭಂಗಿಯಿನೊರ್ವಂ ಕುಮಾರಕಂ ತೋಱಿಸಿದಂ
ತುಂಗತರ ಬಾಹುದಂಡಾ
ಗ್ರಂಗಳ ಪಿರಿದಾದ ಚೆಲ್ವಿನೊಂದು ಬೆಡಂಗಂ ೯೩

ವರಪಾಣಿಪದ್ಮರಾಗದೆ
ಪರಭಾಗಂಬಡೆದ ಪದ್ಮರಾಗದ ಮುದ್ರೋ
ತ್ಕರಮಂ ತಿರ್ದುವ ನೆವದಿಂ
ಬೆರಳ್ಗಳ ಕಡುಚೆಲ್ವನಂದು ತೋಱಿಸುತಿರ್ದಂ ೯೪

ಲೀಲಾರ್ಥಂ ಪಿಡಿದಿರ್ದಭಿ
ಲಾಲಿತವಿಕಚಾರವಿಂದಮಂ ತಿರಿಗಿಸಿದಂ
ಬಾಲೆಯನೀಕ್ಷಿಸುತುಂ ಭೂ
ಪಾಲಂ ಮನ್ಮಥವಿಕಾರವಶದಿಂದೊರ್ವಂ ೯೫

ವಚನ : ಇಂತನಂಗನೆಂಬ ಖಳಗ್ರಹವಿಕಾರವಿಜೃಂಭಣಾವಶಕ್ತನುಕೊಲರಾಗಿ ರಾಜ ಕೆಲ್ಲರುಮಂಗೋಪಾಂಗವಿಕಾರಭಂಗಿಯನಂಗೀಕರಿಸುತ್ತುಮಿರೆ

ಕಂದ : ಶಿಷ್ಟಕುಮಾರಿಯ ತನುಲತೆ
ಮುಷ್ಟಿಗ್ರಾಹ್ಯೈಕಮಧ್ಯಮಾಗಿರ್ದು ಧನು
ರ್ಯಷ್ಟಿಯ ತೆಱದಿಂ ಚೆಲ್ವನ
ಸಷ್ಟಂಭಿಸೆ ಕಾಮನದಱ ಬಲದಿಂ ಬಲಿದಂ ೯೬

ಮತ್ತೇಭವಿಕ್ರೀಡಿತ
ತನುಮಂ ಬೇಡಿ ಸದಂತರಂಗದೊಳೆ ನೋವಂ ಮಾಳ್ಪ ವೈಚಿತ್ರ್ಯಮೋ
ಘನ ಬಾಣಂ ಪಿಡಿವಾಗಳೊಂದು ತೊಡುವಾಗಳ್ ಮೂಱು ಪೋಪಾಗಳೊ
ಯ್ಯನೆ ಸಾಹಸ್ರಕಮೆಯ್ದೆ ತಾಗುವೆಡೆಯೊಳ್ ಲಕ್ಷಂ ವ್ಯಥಾಪಾದನಾ
ಸನದೊಳ್ ಕೋಟಿ ದಲಾಗಿ ಭೂಪಸುತರಂ ತೊಟ್ಟೆಚ್ಚನಾ ಮನ್ಮಥಂ ೯೭

ಉತ್ಪಲಮಾಲೆ

ಮೋಹನಬಾಣಮುಚ್ಚಿದೊಡೆ ಮಸ್ತಕಕಂಪನಮಾದುದೆಂಬಿನಂ
ಸಾಹಸಿಕರ್ ಕುಮಾರನರರಾಕೆಯ ಚೆಲ್ವನಭೀಕ್ಷಿಸುತ್ತುಮಿ
ರ್ದೂಹಿತಮಚ್ಚಮತ್ಕೃತಿಕರಾಗಿ ಕರಂ ತಲೆದೂಗುತಿರ್ದರು
ತ್ಸಾಹಿಸದಿರ್ಪರೇ ಜಗದೊಳಚ್ಚರಿಯಂ ನೆಱೆಕಂಡ ಮಾನಸರ್ ೯೮

ನೋಡುವ ಕಣ್ಗಳಾವೆಡೆಯೊಳಿರ್ದವವಲ್ಲಿಯ ಕಾಂತಿಯಲ್ಲಿ ತೇಂ
ಕಾಡುತುಮಿರ್ದುಮತ್ತುಳಿದಪಾಂಗವಿಲೋಕನಮಿಲ್ಲದಿರ್ದೊಡಂ
ನಾಡೆಯುಮಿಂದ್ರನಂತಿರೆ ಸಹಸ್ರವಿಲೋಚನಮುಳ್ಳೊಡಂತದಂ
ನೋಡುವ ಸೌಖ್ಯಮಂ ಪಡೆಯಲಕ್ಕೆನುತುಂ ನುಡಿದರ್ ಕುಮಾರಕರ್ ೯೯

ವಚನ: ಇಂತು ಕಡುತಿಣ್ಣಂ ಗಾಡಿವಡೆದ ಪೆಣ್ಣಮೇಲೆ ಕಣ್ಣಾಗಿರ್ದ ರಾಜನ್ಯಕ ಮೆಲ್ಲಂ ತಂತಮ್ಮ ಬಲ್ಲಂತಪ್ಪ ಸ್ತ್ರೀವಶ್ಯದ ಯಂತ್ರಮಂತ್ರತಂತ್ರಂಗಳ ಬಲ್ಪಿಂ ಸ್ವತಂತ್ರಂ ಮಾಡಲ್ವೇಡಿ

ಶಾರ್ದೂಲವಿಕ್ರೀಡಿತ

ಒರ್ವಂ ವಶ್ಯದ ಚೂರ್ಣಮಂ ತಳಿದನೊರ್ವಂ ಧ್ಯಾನಿಸುತ್ತಿರ್ದನೊ
ಲ್ದೊರ್ವಂ ಮಂತ್ರಮನೋದಿದಂ ತಿಳಕಮಂ ಮತ್ತೊರ್ವನಿಟ್ಟಂ ಸಮಂ
ತುರ್ವಿಂದಾ ಸತಿಯಂ ವಶೀಕರಿಸಲೆಂದಿಂತಪ್ಪುಪಾಯಂಗಳಂ
ಸರ್ವರ್ ಮಾಡುತುಮಿರ್ದರುತ್ಸುಕತೆಯಿಂ ಗೆಲ್ವಂತಿರೊರ್ವೊರ್ವರಂ ೧೦೦

ಕಂದ: ಘನಮನುರಾಗಂಬೆತ್ತುದು
ಜನಚಿತ್ತಂ ರಾಗಿಣಿಯೋಪಾದಿಯ ವಶದಿಂ
ವಿನುತಸ್ಫಟಿಕೋಪಳಮು
ತ್ಯನುರಕ್ತಿಯನೆಯ್ದುವಂತುಪಾಧಿಯ ವಶದಿಂ ೧೦೧

*

ವಚನ: ಅನಂತರಮಾ ಶೃಂಗಾರವತೀದೇವಿಗೆ ವೃದ್ಧಕಂಚುಕಿಯೊರ್ವಳವರವರ ವಂಶವೀರ್ಯವಿಭವಪರಾಕ್ರಮಪ್ರಭಾವಮನನುಕ್ರಮದಿಂ ಪೇಳ್ದು ಸುಟ್ಟುಂಬೆಯಿಂ ತೋಱಿತೋಱಿ ಬೇಱೆವೇಱೆ ಪೆಸರ್ಗೊಂಡು ಪರಿವಿಡಿಯಿಂದಂ ತೋಱಿಸುತ್ತುಮಿರ್ದುದಂ

* ಶೃಂಗಾರವತೀ ಮಹಾದೇವಿಗೆ ವೃದ್ಧಕಂಚುಕಿ ಭೂಪರಂ ತೋಱುವ ಠಾವು (ಗಚ)

ಶಾರ್ದೂಲವಿಕ್ರೀಡಿತ

ಈತಂ ಮಾಳವಭೂಮಿಪಾಳವರನೀತಂ ಕುಂತಳಾಧೀಶನಿಂ
ತೀತಂ ಗೂರ್ಜರಭೂಭುಜಂ ಮಗಧದೇಶಾಧೀಶನೀತಂ ಸಮಂ
ತೀತಂ ಚೋಳನರೇಶ್ವರಂ ಬಗೆವೊಡೀತಂ ಪಾಂಡ್ಯಭೂಪಾಳನಿಂ
ತೀತಂ ಕೇರಳಭೂಪನೆಂದುಸಿರ್ದು ತೋಱುತ್ತಿರ್ದಳಂದೆಲ್ಲರಂ ೧೦೨

ಈತಂ ಮತ್ತಕಳಿಂಗದೇಶದೊಡೆಯಂ ನೇಪಾಳಭೂಪಾಳನಿಂ
ತೀತಂ ಸಿಂಹಣನೆಂಬ ನಾಡಿನರಸೀತಂ ವಂಗರಾಜ್ಯೇಶನಿಂ
ತೀತಂ ಕೇರಪನೀತನಿಂದ್ರವಿಷಯಶ್ರೀನಾಥನೀತಂ ಮಹಾ
ಖ್ಯಾತಕ್ಷೋಣಿಪನಾಮಮಂ ತಿಳಿಪುತುಂ ಸಂಟ್ಟುಂಬೆಯಿಂ ತೋಱಿದಳ್ ೧೦೩

ವಚನ: ಇಂತು ತೋಱು ದಟ್ಟಮಾಗಿ ತಳ್ತು ನಿಮಿರ್ದೆಮೆದುಱುಗಲ್ ಕಡುನೀಳ್ದ ಕುಡಿವುರ್ಬುಗಳನೌಂಕೆ ಬಿಂಕದಿಂ ನೀಡುಂನೋಡುವೆಡೆಯೊಳ್ ನಾಡೆಯುಂ ಪೊಗರೇಱಿದ ಮೊಗರಸಮೆಂಬ ಕಡಲ ನಡುವೆ ತಡೆಯಡೆಯಾಡಿ ಪೊಳೆವೆಳವಾಳೆಯುಮಿಾಂಗಳ ಬೆಡಂಗ ನೊಳಕೊಂಡು ರಾಜಕನ್ಯೆಯು ಚಲ್ಲೆಗಣ್ಗಳಂ ಚಳಿಸುತ್ತುಮಿರೆ

ಉತ್ಪಲಮಾಲೆ

ಕಾಮನ ಕೆಯ್ಯ ಮೋಹನ ಸುಬಾಣದ ಮೆಯ್ವೊಳಸೆಂಬ ಮಾಳ್ಕೆಯಿಂ
ಸೋಮನ ತಣ್ಪುವೆತ್ತ ಕಡುಸುಣ್ಣದಿದೊರ್ಂಗಲಿದೆಂಬ ಮಾಳ್ಕೆಯಿಂ
ಪೂಮಳೆಯೆಂಬ ಮಾಳ್ಕೆಯಿನುದಾರಕುಮಾರರ ಮೇಲೆ ಲೀಲೆಯಿಂ
ಭಾಮೆಯಲೋಲಲೋಚನವಿಶಾಲಮರೀಚಿ ನಿಮಿರ್ದುದೆತ್ತಲುಂ ೧೦೪

ವಚನ: ಅಂತಾ ಯುವತೀರತ್ನಂ ಸುತ್ತಲುಂ ಮೊತ್ತಂಗೊಂಡು ಕುಳ್ಳಿರ್ದ ಯುವ ರಾಜಕುಂಜರರಂ ನಿರೀಕ್ಷಣಂಗೆಯ್ವುತ್ತುಂ ನಟ್ಟನಡುವೆ ಕುಳ್ಳಿರ್ದ ಧರ್ಮನಾಥನಂತಿಕಕ್ಕೆವರೆ

ಉತ್ಪಲಮಾಲೆ

ತುಂಬಿಗಳೋಳಿ ಸಂಪಗೆಯ ಪೂಗಳನೊಲ್ಲದೆ ಬಿಟ್ಟುಬಂದು ಮ
ತ್ತೆಂಬಿನ ಕಲ್ಪವೃಕ್ಷಕುಸುಮಸ್ತಬಕಕ್ಕೆಱಗುತ್ತುಮಿರ್ಪವೊ
ಲಂಬುಜಪತ್ರನೇತ್ರೆಯಲರ್ಗಂಗಳವನ್ಯರನೊಲ್ಲದೆಯ್ದೆ ಜೆ
ಲ್ವಂಬಡೆದಿರ್ದ ಧರ್ಮಜಿನಪಂಗೆಱಗಿರ್ದವತೀವ ಹರ್ಷದಿಂ ೧೦೫

ಚಂಪಕಮಾಲೆ

ಸುಳಿಸುಳಿದೆಲ್ಲಿಯುಂ ತಿರಿಗಿಬಂದ ಪರಿಶ್ರಮಮಂ ಕಳಲ್ಚಿ ನಿ
ಶ್ಚಳತೆಯಿನಿಪ್ಪುದೊಂದು ಬಗೆಯಿಂದೆ ಕುಮಾರಿಯ ಲೋಚನಂಗಳುಂ
ನೆಲಸಿದಪಂದು ಧರ್ಮಜಿನನಾಥನ ಮೂರ್ತಿಯೊಳೊಂದಱಲ್ಲಿ ಸಂ
ಗಳಿಸಿದವಲ್ಲಿ ಮತ್ತಮಾದಱಿಂ ಪೆಱಸಿಂಗದೆ ನಟ್ಟವೆಂಬಿನಂ ೧೦೬

ಕಂದ : ಕಣ್ಣಱಿದು ವೃದ್ಧ ಕಂಚುಕಿ
ತಿಣ್ಣಂ ತದ್ಧರ್ಮನಾಥ ಮಹಿಮಾಕ್ರಮಮಂ
ಬಣ್ಣಿಸಲುದ್ಯೋಗಿಸಿದಳ್
ಕಣ್ಣಿಂದಱಿಯಿಂ ವಿವೇಕಿಗಳ್ ಪರಮನಮಂ ೧೦೭

ಸ್ರಗ್ಧರೆ

ಈತಂ ಸಾಮಾನ್ಯನಲ್ಲಂ ತ್ರಿಜಗದಧಿಪ ಸಂಪೂಜ್ಯನಿಕ್ಷ್ವಾಕುವಂಶೋ
ದ್ಭೂತಂ ಸತ್ಯೈಕವಾಕ್ಯಂ ಚರಮತನುಮಹಾಸೇನರಾಜಾತ್ಮಜಂ ವಿ
ಖ್ಯಾತಂ ನಿಷ್ಕರ್ಮಕಂ ಪಂಚದಶಪರಮತೀರ್ಥಂಕರಂ ಕೌಸಳೇಶಂ
ಕ್ಷಿತಾಜ್ಞಾಸ್ಫೂರ್ತಿಕಂ ರತ್ನಪುರಪರಿವೃಢಂ ಧರ್ಮನಾಥಾಭಿಧಾನಂ ೧೦೮

ಕಂದ : ಈತನ ವಧುವಾಗಿಯೆ ನೀಂ
ಭೂತಳಜನವಂದ್ಯೆಯಾಗು ಕಾಮಿನಿ ಕೇಳೆಂ
ದೋತು ಪೇಳಲ್ಕೆ ಕಂಚುಕಿ
ಸಾತಿಶಯಪ್ರೀತಿಯಿಂದಮೋಗೊಂಡಳದಂ ೧೦೯

ಮತ್ತೇಭವಿಕ್ರೀಡಿತ

ಎರಡುಂ ಕಣ್ಗಳಿವೆಯ್ದವೆಂದು ಸುರಪಂ ಚಕ್ಷುಃಸಹಸ್ರಂಗಳಂ
ಧರಿಸಿ ಪ್ರೀತಿಯಿನೀತನೊಂದು ರಮಣೀಯಾಕಾರಸಂಪತ್ತಿಯಂ
ಪಿರಿದುಂ ನೋಡುತುಮಿರ್ದನೆಂದೊಡುಳಿದಲ್ಪರ್ ಬಣ್ಣಿಸಲ್ ಬಲ್ಲರೇ
ವರನಾನಾಶುಭಲಕ್ಷಣಂಬೆರಸಿದತ್ಯಾಶ್ಚರ್ಯಸೌಂದರ್ಯಮಂ ೧೧೦

*

ವಚನ : ಅದುಕಾರಣಂ ನಿನಗೀ ಧರ್ಮನಾಥಕುಮಾರವರನೆ ವರನಾಗಲ್ ತಕ್ಕ ನೆಂದು ಸುಭದ್ರೆಯೆಂಬ ವೃದ್ಧ ಕಂಚುಕಿ ಪೇಳ್ವುದುಮದಂ ಮನದೆಗೊಂಡು ಸಮಾಲೋಕನ ಮಾತ್ರಸಮುದ್ಭೂತರೋಮಾಂಚಸಂಚಯಸಮಂಚಿತ ಶರೀರೆಯಾದ ಶೃಂಗಾರವತೀದೇವಿ ಯೆನಗನುರೂಪನಪ್ಪ ವರನಾದನೆಂದು ಹರ್ಷಸಮುತ್ಕರ್ಷನ್ಯಭೂಷ್ಯಮಾಣಮಾನಸೆ ಯಾಗುತ್ತುಂ ಸಕಳಸುಕುಮಾರಶಿರೋಮಣಿಗೆ ಸ್ವಯಂವರಮಾಲೆಯನಿಕ್ಕಲೆಂದು

ಮತ್ತೇಭವಿಕ್ರೀಡಿತ

ಪಿರಿದುಂ ನಿರ್ಮಳಭಾವಮಂ ಪಡೆದು ಪದ್ಮಾನಂದಮಂ ಕೂಡಿಕೊಂ
ಡುರುಗಂಗಾನದಿಯೆಂಬಿನಂ ರಸಮಯಶ್ರೀಮೂರ್ತಿಯಾಗಿರ್ದ ಸೌಂ
ದರಿ ದುಃಪಲ್ವಲಮೆಂಬವೋಲೆಸೆವ ಧಾತ್ರೀಪಾಳರಂ ಬಿಟ್ಟು ಬಂ
ಧುರರತ್ನಾಕರದಂತೆ ತೋರ್ಪ ಜಿನನಂ ಬಂದೆಯ್ದಿದಳ್ ಪ್ರೀತಿಯಿಂ ೧೧೧

* ಧರ್ಮನಾಥ ಕುಮಾರಂಗೆ ಶೃಂಗಾರವತೀದೇವಿ ಮಾಲೆಯ ಸೂಡಿದಳು (ಗಚ)

ಕಂದ: ರತಿ ಹೂವಿನ ಸರಮುಂ ನಿಜ
ಪತಿಗೆ ಕೊಡಲ್ವೇಡಿ ಬಪ್ಪವೊಲಿದಿರಾಗಿ ಮಹಾ
ಸತಿ ಪುಷ್ಪಮಾಲೆಯುಂ ಪಿಡಿ
ದತಿಶಯದಿಂ ಬಂದಳಾ ಜಿನೇಶಂಗಿದಿರಂ ೧೧೨

ವಚನ: ಅಂತಾತನ ಕಣ್ಗಂ ಮನಕ್ಕಂ ಬಪ್ಪಂತು ಬಂದು ಮುಂದೆನಿಂದು

ಉತ್ಪಲಮಾಲೆ

ದಿಟ್ಟಿಸಿ ಮೋಹದಿಂ ಬಿಡದೆ ನೋಡುವ ಕನ್ನೆಯ ಭಾವಭೇದಮಂ
ನಿಟ್ಟಿಸಿ ಮೇಳದಂಗನೆ ವಿನೋದದಿನಾಕೆಯ ಕೈಮೆರಳ್ಗಳಂ
ಮುಟ್ಟೆ ನೆಗುತ್ತಮೆಲ್ಲಿಡಿದು ಬಾಯೆಸುತುಂ ತೆಗೆಯಲ್ಕೆ ಲಜ್ಜೆಯುಂ
ಬಿಟ್ಟು ಮರಳ್ದುನೋಡಿ ಸೆಳೆದಳ್ ಕಡುಪಿಂದಮೆ ಕೆಯ್ಯನಾಕ್ಷಣಂ ೧೧೩

ಕಂದ: ಒಡೆಯನ ಸರ್ವಾಂಗಂಗಳ
ಸಡರ್ದಪ್ಪುವ ತವಕದೊದವು ತೀವಿರೆ ಮನದೊಳ್
ಪಿಡಿದಿರ್ದ ಮಾಲೆವೂವಂ
ಸಡಗರದಿಂ ಜಿನನ ಕೊರಳೊಳಿಕ್ಕಲ್ ಬಗೆದಳ್ ೧೧೪

ಉತ್ಪಲಮಾಲೆ

ಪೊಂಪುಳಿಸುತ್ತುಮಿರ್ದ ತನಿಗಂಪಿನ ಸೊಂಪು ಕಮಲ್ತು ಸುತ್ತಲುಂ
ಪೆಂಪನೆದಾಳ್ದು ತೋಱಿ ಪೊಸಪೂವಿನ ಮಾಲೆಯುಮಂದು ಲೀಲೆಯಿಂ
ದಂ ಪದೆದಿಕ್ಕಿದಳ್ ಜಿನನ ಮುಣ್ಗೊರಳಲ್ಲಿ ನಖಾಂಶುಮಾಲಿಕಾ
ಸಂಪದದಿಂದೆ ಕೆಂದಳದ ಕೆಂಪುಗಳಿಂದತಿಚಿತ್ರಮಾದುದಂ ೧೧೫

ನೋಡುವ ಸರ್ವಭೂಪಸುತರುಂ ಮನಮಿಕ್ಕುವಿನಂ ಲತಾಂಗಿ ಚೆ
ಲ್ವೋಡದ ಧರ್ಮನಾಥನೃಪಕಂಠದೊಳಿಕ್ಕಿದಳಾ ಸ್ವಯಂಬರಾ
ರೂಢಲತಾಂತಮಾಲೆಯುಮಿದಂ ಹೊಗರೇಱಿದ ತೋಳಮೂಳಮುಂ
ಮಾಡುವಿನಂ ಮನಕ್ಕೆ ವಿಷಮೇಷುವಿಕಾರವಿಶಿಷ್ಟರಾಗಮಂ ೧೧೬

ಮತ್ತೇಭವಿಕ್ರೀಡಿತ

ವರಶೃಂಗಾರಮಹಾರಸಪ್ರಭವದಿಂ ಪೆರ್ಚಿರ್ದ ಸೌಭಾಗ್ಯಸಾ
ಗರದೊಳ್ ತೇಂಕುವ ವೀಚಿಮಾಲೆಯೆನೆ ಕಣ್ಗಿಂಬಾಯ್ತು ಚೆಲ್ವಾದ ಪೇ
ರುರದೊಳ್ ತೋರ್ಪ ಲತಾಂತಮಾಲೆ ಜಗದೊಳ್ ಪೇಳ್ವಂದದಿಂ ಪುಣ್ಯಮೆಂ
ಬುರುಚಂದ್ರೋದಯಮುಂ ವಿವೇಕಯುತನಾರೀರೂಪಕಂದರ್ಪನಾ ೧೧೭

ಉತ್ಪಲಮಾಲೆ

ಆಗಳುದಾತ್ತಧರ್ಮಜಿನಪಂ ವನಮಾಲಿಯವೊಲ್ ಮನಕ್ಕವಿಂ
ಬಾಗಿರೆ ಸೋಂಕಿ ಮೆಯ್ಯನೆಡದಲ್ಲಿ ಕುಮಾರಿಕೆ ಬನ್ನಿ ನಿಂದಿರ
ಲ್ಬೇಗದೆ ಲಕ್ಷ್ಮಿ ಬಂದು ಮಧುಸೂದನನಂತಿಕದಲ್ಲಿ ನಾಡೆಯುಂ
ರಾಗದೊಳೊಂದಿ ನಿಂದ ತೆಱದಿಂದೆ ಜನಂಗಳ ಕಣ್ಗೆ ತೋಱಿದಳ್ ೧೧೮

ವಚನ: ಆಸಮಯದೊಳ್

ಚಂಪಕಮಾಲೆ

ಜಯಜಯನಾದಮೆಯ್ದೆ ಪುದಿಯಲ್ ಬಿಡದೊರ್ಮೊದಲಲ್ಲಿ ದಿಗ್ವಿಭಿ
ತ್ತಿಯನುರುಪಾಠಕಸ್ತವನಮುಂ ಶ್ರವಣಂಗಳಿಗಾಗೆ ಭೂಷಣಂ
ಪ್ರಿಯದೊಳೆ ಪಂಶಪ್ರವೃದ್ಧನಿತಾತತಿ ಮುತ್ತಿನ ಮಂಗಳಾಕ್ಷತೋ
ಚ್ಚಯಮುಮನಿಕ್ಕಿದರ್ ಪರಕೆಯ ಧ್ವನಿ ಪೆರ್ಚಿಯದುಣ್ಮಿ ಪೊಣ್ಮಲುಂ ೧೧೯

ಕಂದ: ಮೊಳಗುವ ಮಂಗಳವಾದ್ಯಂ
ಗಳ ವಿವಿಧಧ್ವನಿವಿಶೇಷಮೆಲ್ಲಂ ದಶದಿ
ಕ್ಪಾಳ ಕೋಣಾಂತರವಿವರಂ
ಗಳೊಳಂ ತುಂಬಿರ್ದುದುತ್ಸವಂ ನೆಗಳುವನ್ನಂ ೧೨೦

ವಚನ: ಮತ್ತಮಾ ವಧೂವರರಂ ಕೆಯ್ಮಿಕ್ಕ ಬೆಕ್ಕಸಮುತ್ತು ನೋಡುತ್ತುಮಿರ್ದ ನಿಖಿಳನಿಖಿಳ ಕ್ಷತ್ರಿಯಪುತ್ರಪೌತ್ರಂಗಳೆಲ್ಲಂ ಮಿತ್ರನಂ ಕಂಡ ನಕ್ಷತ್ರಂಗಳಂತಿರತ್ತಲು ಮಿತ್ತಲುಂ ತಾಱುಂತೀಱಾಗಿ ಕೆದಱಿ ಕಿತ್ತಿತ್ತಿ ಪರೆದು ಪಾಱಿಪೋಗಿ ನಿಜನಿಜನಿವಾಸಂಗಳಂ ಪೊಕ್ಕಿರ್ಪುದುಂ

ಕಂದ: ಬಳಿಯಂ ಪ್ರತಾಪರಾಜಂ
ಕುಲಪುತ್ರಿಯನುದ್ಧಧರ್ಮತೀರ್ಥಂಕರನಂ
ಸಲೆನುಂದಿರ್ದೊಡಗೊಂಡ
ಗ್ಗಳಿಕೆಯ ಕುಂಡಿನಪುರಕ್ಕೆ ಪೋಗಲ್ ಬಗೆದಂ ೧೨೧

*
ಉತ್ಪಲಮಾಲೆ

ಪಣ್ಣಿದ ಪಟ್ಟದಾನೆಯುಮನೇಱಿ ವಧೂವರರಿರ್ಬರುಂ ಜಗಂ
ಬಣ್ಣಿಸೆ ಕುಂಡಿನಕ್ಕಭಿಮುಖಪ್ರವೃದೆದಾಗಿಯೆ ಬಂದರಂದು ಮೆ
ಯ್ವಣ್ಣದೊಳಂಬುದಂಬರದ ಕದಿರ್ ಪುದಿದೊಪ್ಪಿರೆ ತಂದೆತಾಯ್ಗಳುಂ
ಪೂರ್ಣಮನೋರಥರ್ ನಡೆದರೇಱಿ ಗಜಂಗಳನಿಕ್ಕೆಲಂಗಳೊಳ್ ೧೨೨

* ಕುಮಾರನುಂ ಶೃಂಗಾರವತೀಮಹಾದೇವಿಯುಂ ಕುಂಡಿನ ಪುರಮಂ ಪುಗುವ ಠಾವು (ಗ)

ಮಹಾಸ್ರಗ್ಧರೆ

ಅಱುವತ್ತೊಳ್ಚಾಮರಶ್ರೇಣಿಗಳನಬಳೆಯರ್ ಬಿಂಕದಿಂದಿಕ್ಕಿದರ್ ಮ
ತ್ತಱುವ ಶ್ವೇತಾತಪತ್ರಂಗಳ ಬಳಗಮನೊಲ್ದೆತ್ತಿ ತಾಳ್ದಿರ್ದರೆಲ್ಲಂ
ತುಱುಗಿತ್ತು ವ್ಯೋಮದೊಳ್ ಪೀವರವಿಜಯಪತಾಕಾಕುಳಂ ಕಣ್ಗ ಗುರ್ವಂ
ಕಱೆವುತ್ತಂ ಪೆರ್ಚಿದತ್ಯದ್ಭುತವಿಭವದಿನೆಳ್ತಂದನಾ ಧರ್ಮನಾಥಂ ೧೨೩

ವಚನ: ಇಂತು ದೇವೇಂದ್ರನುಮಿಂದ್ರಾಣಿಯುಮೈರಾವಣ ಸಮಾರೋಹಣಂಗೆಯ್ದು ಕೆಯ್ಗೆಯ್ದು ಬರ್ಪಂತೆ ನಾನಾಪ್ರಕಾರ ಪುಣ್ಯಪಾಠಕಪ್ರಕರಮಾಂಗಳಿಕಪದ್ಯಪಠನ ಪರಂಪರಾಪಟುರವಂ ಪರಕಲಿಸಿ ಕಿವಿ ಶಬ್ದಂಗಿಡುಮವೊಲಗ್ಗಳಮಾದುದಱೊಡನೆ ಪಡೆದು ಪುದಿದ ವಿಲಸದಭಿನವ ದುಂದುಭಿಸಂದೋಹಗಭೀರಭೂರಿಧ್ವಾನಂ ಸಕಳದಿಗಂತರಾಳಮುಮಂ ಮೂವಳಸಾಗಿ ಬಳಸುತ್ತುಮಿರೆ ಸಮಸ್ತಚಾತುರ್ದಂತಸೈನ್ಯಂಬೆರಸು ಧರ್ಮನಾಥ ಕುಮಾರನುಂ ಶೃಂಗಾರವತೀದೇವಿಯುಂ ಪುರಸ್ಸರಮಾಗಿ ಪ್ರತಾಪರಾಜಂ ಸಂತೋಷ ಸರ್ವಸ್ವ ಕರಂಡಕಮಾದ ಕುಂಡಿನಪುರದ ಗೋಪುರದ್ವಾರಮಂ ಮಹಾಮಹಿಮೆಯಿಂ ಮುಟ್ಟೆವರ್ಪುದುಂ

ಉತ್ಪಲಮಾಲೆ

ಭೋಂಕನೆ ಕೇಳ್ದು ವಾದ್ಯರವಮಂ ಪುರದಲ್ಲಿಯ ಸರ್ವಕಾಮಿನೀ
ಸಂಕುಳಮುಂ ಸಮಸ್ತಜನಮೆಯ್ದೆ ವಧೂವರರಂ ನಿರೀಕ್ಷಿಪಾ
ಶಂಕೆಯಿನೆಯ್ದಿ ಬಂದು ಪುರಗೋಪುರಮಂ ನೆಲೆಮಾಡದೋಳಿಯಂ
ಬಿಂಕದ ಕೋಂಟೆಯಂ ತೆನೆಗಳಂ ಪರಿದೇಱಿದರುತ್ಸುಕತ್ವದಿಂ ೧೨೪

ಕಂದ: ಅಟ್ಟಳೆಗಳನೇಱಿ ಕೆಲರ್
ಮೆಟ್ಟಿ ಸುಧಾವಳಯಕೂಟಕೋಟಿಗಳಂ ಕೆಲ
ರೊಟ್ಟೈಸಿ ದೇವಗೃಹಮಂ
ನೆಟ್ಟನೆ ನೋಡುತ್ತುಮಿರ್ದುದಾ ಪೌರಜನಂ ೧೨೫

ಸ್ರಗ್ಧರೆ

ಇತ್ತಿತ್ತಂ ಬನ್ನಿಬನ್ನಿ ಪ್ರವರಪರಿಣಯೋತ್ಸಾಹಮಂ ನೋಡಿ ನೋಡಿ
ನ್ನತ್ತತ್ತಂ ಪೋಗಿ ಪೋಗೆಂದೆನುತ ಕರೆದು ತಂತಮ್ಮವರ್ಗಾಕ್ಷಣಂ ಪೇ
ಳುತ್ತುಂ ತಾಂ ತೋಱುಸುತ್ತಿರ್ಪವಿರಳಕಳಕೋಳಾಹಳೋದ್ರೇಕದಿಂದಂ
ಮತ್ತಂ ಪ್ರಕ್ಷೋಭಿಸುತ್ತಿರ್ದುದು ಪುರಮನಿತುಂ ಸಂಭ್ರಮಾವೇಷ್ಟ್ಯಮಾನಂ ೧೨೬

ಕಂದ: ಮಿಕ್ಕು ಕದಕ್ಕದಿಸೆ ಕುಚಂ
ಜೆಕ್ಕನೆ ಕುರುಳೋಳಿ ಕೆದಱೆ ಕೆತ್ತೆ ನಿತಂಬಂ
ಸೊಕ್ಕಿಂ ದಿಂಕಿಡೆ ಪರಿದುದ
ಳುರ್ಕಿಂದಬಳಾಜನಂ ನಿರೀಕ್ಷಾತುರದಿಂ ೧೨೭

ವಚನ: ಮತ್ತಮಾ ಪತ್ತನಂ ಪ್ರಜಾಮಯಮಾದುದೆಂಬಂತೆ ಸುತ್ತಲುಂ ಪೌರ ನಾರೀಜನಂಗಳೆಲ್ಲಂ ನೆರೆದಲ್ಲಲ್ಲಿ ಪೊತ್ತಂಗೊಂಡು ಮಂದೈಸಿಯೊಂದಾಗಿ ನಿಂದು ಸಮುಪ ಕಂಠದೊಳ್ ಬರುತ್ತುಮಿರ್ದ ಮದುವೆಯ ಸಂಭ್ರಮವಿಭ್ರಮಮನುತ್ಕಂಠತಾವಗುಂಠಿತ ಸಮುನ್ನತಕಂಠರಾಗಿ ನೋಡುತ್ತುಮಿರ್ಪುದುಮೊರ್ವಳಾ ಪೊತ್ತಿನೊಳ್

ಕಂದ: ಅಂದುಗೆಯಂ ಮುಂಗೈಯೊಳ್
ಸೌಂದರಕಂಕಣಮನಂಘ್ರಿಯೊಳ್ ಸಾರ್ಚಿದಳಂ
ದಿಂದುಲಲಾಟದೊಳಂಜನ
ಮಂ ದೃಷ್ಟಿಯೊಳೊರ್ವಳಿಕ್ಕಿದಳ್ ಕತ್ತುರಿಯಂ ೧೨೮

ಉತ್ಪಲಮಾಲೆ

ನೋಡುವ ವಾಂಛೆಯಿಂದ ಪರಿದೋಡುತುಮಿಪ್ಪೆಡೆಯಲ್ಲಿ ಪೆಂಡಿರಂ
ಜೇಡೆನೆ ಗಂಡನಂ ಬಗೆಯದೋಡುವಳಂ ಪಿಡಿದೊಂದು ದಂಭದಿಂ
ಗಾಡಿಕೆಯಿಂದೆ ತಕ್ಕಿಸಿದೊಡಾ ಸುಖದಿಂದಮೆ ಮೂರ್ಛೆವೋಗಿ ಮು
ಮ್ಮಾಡಿದವೋಲದಚ್ಚಳಿಯದಿರ್ದೊಡೆ ಜಾಱದಳೊಯ್ಯನಾಕ್ಷಣಂ ೧೨೯

ಮತ್ತೇಭವಿಕ್ರೀಡಿತ

ಎಡಗಣ್ಣೊಂದಱೊಳೆಚ್ಚೆಯಂಜನಮುಮಂ ವಾಮಸ್ತನಾಭಾಗದೊಂ
ದೆಡೆಯಂ ತೋಱಿಸುವಂದು ವಾಮಕರಮಂ ಶೃಂಗಾರಿತಂಮಾಡಿ ಮ
ತ್ತೆಡಗಾಲೊಂದಱೊಳಿಕ್ಕಿ ಸುಂದುಗೆಯುಮಂ ನೋಳ್ಪುತ್ಸವಂ ಪೆರ್ಚಿಯಾ
ಗಡೆಬಂದಿರ್ದಳದರ್ಧನಾರಿ ಶಿವನೆಂಬೀ ಶಂಕೆಯಂ ಮಾಡುತಂ ೧೩೦

ವಚನ: ಇಂತು ಸಮಂತು ತಿಂತಿಣಿಯಾದ ಸೀಮಂತಿನೀ ಸಂತತಿಯೊಳೊರ್ವಳ್

ಕಂದ: ಗುಣಯುಕ್ತಂ ಮುಕ್ತಾಮಯ
ನೆಣೆಯಿಲ್ಲದ ಚಚ್ಚರುಚಿ ದಲೆನ್ನಂತೆ ನೃಪಾ
ಗ್ರಣಿ ಹೃದಯದೊಳಿರ್ಪನೆಂ
ಬೆಣಿಕೆಯನೆಸೆ ಪಱಿದುಬೀಳ್ದುದುರದಿಂ ಹಾರಂ ೧೩೧

ವಚನ: ಅಲ್ಲಿಯೊರ್ವಳ್ ಕಡುವಿದಗ್ಧೆ

ಕಂದ: ತರ್ಕಯಿಸಿಕೊಂಡು ಮಗನನ
ಳುರ್ಕಿಂದೆ ಮೆಲುತ್ತುಮಿರ್ದ ತಂಬುಲಮಂ ಬಿಡ
ದಿಕ್ಕಿ ಬಾಯಿಂದೆ ಬಾಯೊಳ್
ತಕ್ಕಿಂ ಚುಂಬನವಿನೋದಮಂ ತೋಱಿಸಿದಳ್ ೧೩೨

ಉತ್ಪಲಮಾಲೆ

ಮಾಲೆಯನೀ ಸ್ವಯಂವರದೊಳಿಕ್ಕಿದೊಡಾದ ವರಂ ದಲೀತನು
ಲ್ಲಾಲಿತಧರ್ಮನಾಥನೆನಿಪಂ ಪೆಸರಿಂದಮೆ ಪಿಂದಣಾಕೆ ಮು
ತ್ತೀ ಲಲನಾಶಿರೋಮಣಿ ಕುಮಾರಿಕೆಯಾಕೆ ಸುರೂಪೆಯೆಂದು ತ
ದ್ವಾಲೆಯುನೆಲ್ಲರುಂ ನುಡಿವುತುಂ ಬೆರಳಿಂದಮೆ ತೋಱಿ ನೋಡಿದರ್ ೧೩೩

ಕಂದ: ಬಲೆವೀಸಿದಂದದಿಂ ಪರ
ಕಲಿಸುವ ಮೆಯ್ವಣ್ಣದಲ್ಲಿ ನೋಳ್ಪರ ಕಣ್ಗಳ್
ತೊಲಗದೆ ನಿಂದವು ಮೀಂಗಳ
ಬಳಗಂಗಳಿವೆಂಬ ಮಾಳ್ಕೆಯಿಂ ಬರ್ಪಾಗಳ್ ೧೩೪

ಅವರಿರ್ಬರ ರೂಪಂ ನೋ
ಡುವ ತರುಣಿಯರೆಯ್ದೆ ಮೆಚ್ಚಿ ತಲೆದೂಗಿದರತಿ
ಜವದಿಂ ಪೋಗಲ್ವೇಡೆಂ
ದನರಂ ತಲೆಸನ್ನೆಗೆಯ್ದು ನಿಲಿಸುವ ತೆಱದಿಂ ೧೩೫

ವಚನ: ಇಂತಾ ಪಟ್ಟಣದ ಪೆಣ್ಗೂಸುಗಳ ಪಿಂಡುಗಳೆಲ್ಲಮುಂ ಪರಿಜನಂಗಳುಂ ಪುರಜನಂಗಳುಮವರವರಂ ಸುಟ್ಟುಂಬೆಯಿಂ ತೋಱಿತೋಱಿ ಸಟ್ಟದಿಟ್ಟಿಯಿಂ ನಾಡೆಯುಂ ನೋಡಿ ತಂತಮ್ಮೊಳ್ ಕೊಂಡಾಡುತ್ತುಮಿರ್ಪುದುಮಿತ್ತಲತ್ಯದ್ಭುತವಿಭವದಿಂದಾ ಧರ್ಮನಾಥಕುಮಾರಂ ಪ್ರತಾಪರಾಜನರಮನೆಯಂ ಪೊಕ್ಕು ಕರುಮಾಡದ ಮುಂದಣ ಮಣಿಮಯರಮಣೀಯಪರಿಣಯನಭವನಂ ಬೆಸೆಬೆಸೆಗೆ ಕೆದಱಿ ತೆರೆಮಸಗಿ ಪರಿವನಣುತರ ಕಿರಣಗಣಂಗಳಿಂದಾಗಸದೊಳಿಂದ್ರಚಾಪಶ್ರೀಯುಮಂ ಜನಿಸುತ್ತುಮಿರ್ಪುದುಂ

ಕಂದ: ಗಗನಮನಳ್ಳಿಱಿದುದು ಮಿಗೆ
ನೆಗೆದ ಪಟಧ್ವಜಸಮೂಹಕಂ ಮದುವೆಯ ಜೋ
ಜಿಗಮಂ ನೋಡುವ ದಿವಿಜಾ
ಳಿಗಳಿಂಗುಡಕೊಡುವ ವಸ್ತ್ರಚಯಮೆಂಬಿನೆಗಂ ೧೩೬

ಸ್ರಗ್ಧರೆ

ನಾನಾರತ್ನಸ್ಫುರತ್ತೋರಣಗಣರಚನಾಶ್ಚರ್ಯದಿಂ ಕಣ್ಗಗುರ್ವಂ
ತಾನೀವುತ್ತಿರ್ದ ಕರ್ಕೇತನಮಯವಿಲಸದ್ದ್ವಾರಶಾಲಾಭಿಶೋಭಾ
ಸ್ಥಾನಂ ವೈವಾಹಗೇಹಂ ಪಡೆದುದು ಸೊಗಸಂ ಚಂದ್ರಕಾಂತೋಜ್ವಲೀ ಭೂ
ತಾನೂನಸ್ತಂಭಸಂದೋಹಕಪರಿಕಳಿತಂ ಪದ್ಮರಾಗೋರುಕೀಲಂ ೧೩೭

---

* ವಿವಾಹಗೃಹ ವ್ಯಾವರ್ಣನೆ (ಗ)

ಚಂಪಕಮಾಲೆ

ಪುರುಜಿನರಾದಿಯಾದ ಜಿನನಾಥ ಚರಿತ್ರಕಥಾಪ್ರಪಂಚಮಂ
ಪರಭರತಾದಿ ಚಕ್ರಧರವರ್ತನೆಯೊಂದು ಕಥಾಪ್ರಪಂಚಮಂ
ಸುರಮಿಥುನಂಗಳಿಪ್ಪ ತೆಱನಂ ಸುವಿಚಿತ್ರಿತಚಿತ್ರರೂಪದಿಂ
ಬರೆದ ವಿನೀಲಭಿತ್ತಿಗಳ ಮೊತ್ತಮದೊಪ್ಪುತುಮಿರ್ದುದೆತ್ತಲುಂ ೧೩೮

ವಚನ: ಮತ್ತಂ ಪಟ್ಟಾವಳಿಯ ಮೇಲ್ಗಟ್ಟಂ ಕಟ್ಟುವ ಸಾದಿನ ಸಾರಣೆಯುಮೆಸೆವ ಘುಸೃಣ ಕುಂಕುಮಪಂಕದಿಂ ಕಾರಣೆಗೊಳ್ವ ಪನ್ನೀರ ಸಿಂಪಣೆಯುಂ ಕೊಡುವ ಮುತ್ತಿನ ರಂಗವಾಲಿಯುಮಿಕ್ಕುವ ಮಂದಾರದ ಪೂವಲಿಯುಂ ಕೆದಱುವ ಪರಿಪರಿಯ ಕುಶಲವೃತ್ತಿಯ ಕೆಲಸದೊಳು ಸಂದಣಿಗೊಳ್ವ ಸೌಂದರಿಯರ ಸಂದೋಹದ ಪೊಂದುಡಿಗೆಯ ಕಡುರವದ ಗಡಣದಿಂದಡಿಗಡಿಗೆಯೊಡನೊಡನೆ ನುಡಿವಂದದಿಂ ಚೆಲ್ವಂಪಡೆದ ಮದುವೆಯ ಮನೆಯ ಸಂಭ್ರಮದ ಸಿರಿಯನೊಳಗೊಂಡಿರ್ಪುದುಮಲ್ಲಿ

ಕಂದ: ಪುಗುವ ಪೊಱಮಡುವ ಮೆಯ್ಯೊಡ
ವುಗಳಂ ನೆಱತೊಡುವ ಮಡದಿಯರ ಸಡಗರದಿಂ
ಬಗೆಗೊಳಿಸುತ್ತಿರ್ದುದು ಜೋ
ಜಿಗಮಪ್ಪಿನಮಾ ವಿವಾಹಮಣಿಮಂಡಪಕಂ ೧೩೯

ವಚನ: ಇಂತು ವಿಚಿತ್ರಶೋಭಾವಹಮಾದ ವಿವಾಹಗೇಹದ ವಿಳಾಸಾವಳೋಕನಂಗೆಯ್ವುತ್ತುಂ ಬಂದು ತಂತಮ್ಮ ವಾಹನಂಗಳಿನಿಳಿದು ಲಾವಣ್ಯರಸವರೇಣ್ಯಪುಣ್ಯ ಪಣ್ಯಾಂಗನಾ ನಿಕರಂಗಳ್ ಪರಮಾಶೀರ್ವಾದನಾದಂಗಳಿಂ ಪರಸಿ ತಳಿವ ವಿಮಳತರವಿಪುಳ ಮುಕ್ತಾಫಳಮಯವಿಳಸದ್ಧವಳಮಂಗಳಾಕ್ಷತಂಗಳ ಬಳಗಂಗಳಿಂದಂ ದಂಪತಿಗಳ್ ತಮ್ಮಯ ಕುಂತಳಪಲ್ಲವಿಯುಂ ಕುಸುಮಿಸುತ್ತುಮಱಱೊಳಗಂ ಪುಗುವುದುಮಾಗಳಲ್ಲಿ

ಕಂದ: ಮಸುರ್ಗರಲ ಜಗಲಿ ಮರಿರಂ
ಜಿಸಿದುದು ರಮಣೀಯ ಧರಣಿರಮಣಿಯ ಮುಂಡೆಯೊ
ಳೆಸೆವ ಕೇಶಂಬೊಲೊಪ್ಪಿತು
ಪೊಸಮುತ್ತಿನ ತೊಡಿಗೆಯಂತೆ ರಂಗಾವಲಿಯುಂ ೧೪೦

ವಚನ: ಆ ವಿಶಾಲತರಮಾದ ವೇದಿಕಾಂತರಾಳದೇಕೈಕಪ್ರದೇಶದೊಳ್

ಕಂದ: ಬಾಳೆಯ ಪಣ್ಗೊನೆಗಳ್ ಪೊಂ
ಬಾಳೆಯ ಪೆರ್ಮಡಲ್ಗಡಕೆಯೊಳ್ಗೊಂಚಲ್ಗಳ್
ಮೇಲೆಸೆದವು ಚೆಂದೆಂಗಿನ
ಮೇಲೆಸಿಪೆಳನೀರ ತೋರಗಾಯ್ಗಳ್ ಪಲವುಂ ೧೪೧

ಉತ್ಪಲಮಾಲೆ

ಒಂದೆಡೆಯಲ್ಲಿ ಸಾದುಮಿಗೆ ತುಂಬಿದ ಕಾಂಚನ ಭಾಜನಂಗಳಂ
ತೊಂದೆಡೆಯಲ್ಲಿ ಚಾರುಹರಿಚಂದನಕರ್ದಮಮೆಯ್ದೆ ತೀವಿ ಜೆ
ಲ್ವೊಂದಿದ ರಾಜತೋರುತರ ಭಾಜನರಾಜಿಗಳಿರ್ದವಲ್ಲಿ ಮ
ತ್ತೊಂದೆಡೆಯಲ್ಲಿ ಮಂಗಳಸದಕ್ಷತೆತೀವಿದ ಭಾಜನಂಗಳುಂ ೧೪೨

ಕಂದ: ಪಳಿಕಿನ ಕಂಬದೊಳಂ ಮಾ
ರ್ಪೊಳೆದಜ್ಯೋತ್ತಿದವೊಲಿರ್ದ ಜಾಗರವೆಸೆಗುಂ
ವಿಳಸಿತ ಪುಣ್ಯಾಂಕುರಸಂ
ಕುಳಮಾಗಳ್ ಬಳೆದು ನಿಮಿರ್ದು ಪೋಗಡರ್ಪನ್ನಂ ೧೪೩

ಪೊಳೆವ ವೈಡೂರ್ಯಕುಡ್ಯಂ
ಗಳೊಳಂ ಪ್ರತಿಬಿಂಬಿಸಿರ್ದು ಥಳಥಳಿಸುವ ಮಂ
ಗಳದೀಪಂಗಳ ಬಳಗಂ
ಜ್ವಳಿಸಿದವಗೆವೊಯ್ದು ಸುತ್ತಲಿಱಿಸಿದ ತೆಱದಿಂ ೧೪೪

ವಚನ: ಇಂತನೇಕವಿಧ ಮಂಗಳಸುಗಂಧಿ ದ್ರವ್ಯಸಂಬಂಧಬಂಧುರಂಗಳಪ್ಪ ಕೆಲಕೆಲವು ಭಾಜನಂಗಳಂ ಮಿಗೆಬೆಳಗನುಗುಳ್ವ ತದ್ಯೋಗ್ಯಂಗಳಾದುಪಕರಣಂಗಳ ಬಳಗಮನೊಳಕೊಂಡ ವಿತರ್ದಿಕಾಂತರ್ಭಾಗಂ ಬಗೆಗೊಳಿಸುತ್ತುಮಿರೆ

ಕಂದ: ಸುರಚಿರಮಪ್ಪಾ ವೇದಿಯ
ಪರಮಚತುಃಕೋಣಶೋಣಮಾಣಿಕ್ಯಮಯೋ
ದ್ಧುರಮಂಗಳಕಳಶಂಗಳ್
ಪಿರಿದುಂ ಕೌತುಕಮನಿತ್ತುವಖಿಳಜನಕ್ಕಂ ೧೪೫

ವಚನ: ಇಂತಷ್ಟಮಂಗಳಸಮಾವೇಷ್ಟಿತಂಗಳಾಗಿ ಸಮುತ್ತುಂಗಭೃಂಗಾರಸಂಘಾತಮುದಂಗೀಕರಿಸಿ ಬೆಡಂಗುವಡೆದ ತದ್ವೇದಿಕಾಚತುಃಕೋಣಮಂಗಳಕಳಶಂಗಳಾನಂದಮನಜನಿಸುತ್ತುಮಿರಲಡಱ ನಟ್ಟನಡುವೆ

ಮತ್ತೇಭವಿಕ್ರೀಡಿತ

ವರಸರ್ವೌಷಧಿಸಂಚರತ್ನ ಕನಕಶ್ರೀಗಂಧಸತ್ಪುಷ್ಪಬಂ
ಧುರಸಮ್ಮಿಶ್ರಿತ ತೀರ್ಥವಾರಿಪರಿಪೂರ್ಣಂ ಶ್ವೇತಸೂತ್ರಾವೃತಂ
ಪರಭಾಗಂಬಡೆದಿರ್ದ ಹೇಮಮಯಭಾಸ್ವತ್ಪೂರ್ಣಕುಂಭಂ ಪರಿ
ಸ್ಫುರಿಸುತ್ತಿರ್ದುದು ರತ್ನದರ್ಪಣಸುದೂರ್ವಾಪಲ್ಲವೋಲ್ಲಾಸಿತಂ ೧೪೬

ವಚನ: ಮತ್ತಂ ಪಾರಿಜಾತಪ್ರಸೂನಮಾಲಾಜಾಲಸಮಾಲಂಬನರಚನಾವಿಶೇಷಂಗಳಿಂದಲಂಕೃತಮುಂ ಸ್ವಸ್ತಿಕೋಪಲಕ್ಷಿತಂ ಸರ್ವಧಾನ್ಯಪ್ರಸ್ತರಣದಿಂ ರಮಣೀಯತರಮಾದ ತಳಪ್ರದೇಶಮುಂ ದಿವ್ಯವಸ್ತ್ರಸಮಾವರಣದಿಂ ಪ್ರಶಸ್ತಮಾದ ಗಳಸ್ಥಾನಮುಮಾಗಿ ಥಳಥಳಿಸಿ ಪೊಳೆಯುತ್ತುಮಿರಲಲ್ಲಿಯೊರ್ವಳ್

ಉತ್ಪಲಮಾಲೆ

ಮಂಗಳಪೂರ್ಣಕುಂಭಮುಖದೊಳ್ ಮಣಿದರ್ಪಣಮುಂ ತಗುಳ್ಚಿಯು
ತ್ತುಂಗ ಸುವೇದಿಕಾಗ್ರದೊಳಗರ್ಚಿಸಿರಲ್ ಕೆಲದಲ್ಲಿ ತೋರ್ಪ ನೇ
ಪಿಂಗಡೆಯಾದ ರತ್ನಮಯಭಿತ್ತಿಯೊಳಂ ಪ್ರತಿಬಿಂಬಿಸುತ್ತಿರ
ಲ್ಕಂಗನೆಯಲ್ಲಿ ಕೆಂದಳಿರನಿಕ್ಕಿಯೆ ಮಾಡಿದಳಂದು ಹಾಸ್ಯಮಂ ೧೪೭

ವಚನ: ಇಂತನಂತಮಂಗಳದ್ರವ್ಯಸಂಗದಿಂ ಬೆಡಂಗುವಡೆದ ವೇದಿಕಾಸಮಧಿಕಶೋಭೆಯಂ ನೀಡುಂ ನೋಡುತ್ತುಂ ನಡೆತಂದು ತನ್ಮಧ್ಯಸಮುದ್ಭಾಸಿತಮಹಾರಜತಮಯವಿರಾಜಮಾನಭಾಜನಂಗಳೊಳ್ ತುಂಬಿ ತುಳುಂಕಾಡುತ್ತುಮಿರ್ದ ಬಿಡುಮುತ್ತಿನ ಸೆಟ್ಟಿಕ್ಕೆಯಿಂ ಸೆಟ್ಟಿ ಚಂದ್ರಮನುಂ ರೋಹಿಣಿಯುಮಿರ್ಪಂದದಿಂ ದಂಪತಿಗಳಿರ್ದರಲ್ಲಿ ಪ್ರತಾಪರಾಜನನೇಕಮುಕುಟಬದ್ಧಪರಿವೃತನಾಗಿ ಲಕ್ಷ್ಮೀಪತಿಯೆಂಬಂತೆ ಮುಂದೆ ಕುಳ್ಳಿರ್ಪುದುಮಾತನ ಪಟ್ಟದರಸಿಯಪ್ಪ ಸತ್ಯವತೀಮಹಾದೇವಿಯುಂ ಮಹಾಲಕ್ಷ್ಮಿಯಂತೆ ನಿರವಶೇಷರಾಜಕುಮಾರಿಕಾನಿಕರಂಬೆರಸು ಪಿಂದೆ ಕುಳ್ಳಿರ್ಪುದುಂ

ಕಂದ: ಕೆಂದಾವರೆಯಲರ್ಗಳೊಳಂ
ನಿಂದಿರ್ದ ಸುರಾಜಹಂಸಮಿಥುನದ ತೆಱದಿಂ
ದಂದಾ ಮಿಥುನಂ ಕಣ್ಗಾ
ನಂದಮನೊದವಿಸುತುಮಿರ್ದುದತಿರಮಣೀಯಂ ೧೪೮

ವಚನ: ಇಂತು ನಿಲಲೊಡಂ ಸಕಳಜನದ ಕಳಕಳಕೋಳಾಹಳಮಂ ನಿಲಿಸಿ ಶುಭಮುಹೂರ್ತಪ್ರಸ್ತಾವನಿರೀಕ್ಷಣೋನ್ಮುಖರಾಗಿರ್ಪುದುಮಾಗಳ್

ಕಂದ: ಆ ಕುವರನ ರೂಪ ಸಮಾ
ಲೋಕನಮುತ್ಸುಕತೆಯಿಂದೆ ರಾಜಾತ್ಮಜೆ ಮು
ತ್ತೀಕಾಂಡಪಟಂ ಮಧ್ಯದೊ
ಳೀಕಿರ್ದುದೆನುತ್ತೆ ನೋಡಿದಳ್ ಕಿಸುಗಣ್ಣಿಂ ೧೪೯

ವಚನ: ಇಂತು ಶುಭಲಗ್ನವಿನಿಮಗ್ನಸಮಯಂ ದೊರೆಕೊಳೆ ತೆರೆಸೀರೆಯುಂ ತೆಗೆವುದುಂ

ಕಂದ: ಆಗಳ್ ಪ್ರತಾಪರಾಜಂ
ಕೈಗೆಯ್ದಭಿಜನ ಸನಾಭಿಜನ ಸಚಿವದ್ವಿಜ
ಪೂಗಂ ಬಳಸಿರೆ ಬಂದಂ
ರಾಗರಸಂ ಮೂರ್ತಿವಡೆದು ಬರ್ಪಂತಿವೊಲಂ ೧೫೦

ವಚನ: ಅಂತುಬಂದು

ಮಹಾಸ್ರಗ್ಧರೆ
ಸಿರಿದಂ ಮಾಂಗಲ್ಯತೂರ್ಯಧ್ವನಿಗಳೊಡನೆ ಮಾಂಗಲ್ಯಗೀತಸ್ವರಂಗಳ್
ಕರಮಾಶಾದೇಶಮಂದಿಂ ಕಿಡಿಸೆ ಸುರುಚಿರಾಗಣ್ಯಪುಣ್ಯಾಂಗನಾಸ
ತ್ಪರಮಾಶೀರ್ವಾದನಾದೋಚ್ಚರಣದೊಡನೆ ಪುಣ್ಯಾಹಪುಣ್ಯಾಹಮಂತ್ರೋ
ಚ್ಚರಣಂ ಪೆರ್ಚುತ್ತಿರಲ್ ಕಾಂಚನಕಳಶಮನಂದೆತ್ತಿದಂ ಕುಂದಿನೇಶಂ ೧೫೧

ವಚನ: ಅಂತಿಕ್ಷ್ವಾಕುವಂಶನಂಬರಮನೆಗೆ ಪೂರ್ಣಕಳಶಮನೆತ್ತುವಂತೆ ಸುರಭಿ ಶುಚಿಸಲಿಲಪರಿಪೂರ್ಣಸುವರ್ಣಮಯಪೂರ್ಣಕಳಶಮನೆತ್ತಿ

ಮತ್ತೇಭವಿಕ್ರೀಡಿತ
ಭುಜಶಾಖಾಗ್ರದೊಳೊಪ್ಪೆ ಹೇಮಕಳಶಂ ಕೆಯ್ವಂದ ಮಂದಾರದಂ
ತೆ ಜಿನೇಶಂ ರಮಣೀಯತಾವಿಭವಮಂ ತಾಳ್ದಂ ಮಹಾನಂದದಿಂ
ನಿಜಸಂತಾನ ಸಮೃದ್ಧಿಕಾರಣಮೆ ಪೊಯ್ಯೀರೆಂಬಿನಂ ಬಣ್ಣಸಲ್
ಪ್ರಜೆ ಕೈನೀರೆಱೆದಂ ದಲಿಮ್ಮಡಿಸುಮಂ ರುಮ್ಯನ್ನಖಚ್ಛಾಯೆಯಿಂ ೧೫೨ *

ಕಂದ: ಧಾರಾಪೂರ್ವಕಮಾಗಿ ಕು
ಮಾರಿಯನಂದೊಪ್ಪುಗೊಟ್ಟು ಪಾಣಿಗ್ರಹಣಮ
ನೋರಂತಿರೆ ಮಾಡಿಸಿದಂ
ಭೂರಮಣಂ ಲೋಕಮೆಯ್ದೆ ಕೊಂಡಾಡುವಿನಂ ೧೫೩

ಚೂತಲತೆ ದಕ್ಷಿಣಾಶಾ
ವಾತಸ್ಪರ್ಶನದಿನಂಕುರಾಂಕಿತೆಯಪ್ಪಂ
ತಾ ತನುಮಧ್ಯ ಕುಮಾರನ
ನೂತ್ನಕರಸ್ಪರ್ಶದಿಂದೆ ಪುಳಕಿತೆಯಾದಳ್ ೧೫೪

ವಚನ: ಮತ್ತಂ

* ವಿವಾಹ (ಗ)

ಕಂದ: ಸೌಂದರಿ ಪಿಡಿಯಲ್ ತನ್ನಯ
ಕೆಂದಳದಿಂದಂ ಕುಮಾರಕರತಳವಂ ಚೆ
ಲ್ವಿಂಪೆಳವಿಸಿಲಾವರಿಸಿದ
ಕೆಂದಾವರೆವೂವಿನಂತದೊಪ್ಪಿತ್ತು ಕರಂ ೧೫೫

ಅತಿಮಹಿಮೆವೆತ್ತ ಸೊಬಗಂ
ಸುತವಿಭವಮನಾಂತು ಕುಸುಮಶರನುಂ ರತಿಯುಂ
ಕ್ಷಿತಿಯೊಳೊಡನಿರ್ಪ ತೆಱದಿಂ
ದತಿಶಯದಂಪತಿಗಳಿರ್ದರತಿಕೌತುಕದಿಂ ೧೫೬

ಅಂತೊಪ್ಪುವ ದಂಪತಿಗಳ್
ಮಂತಣಿವಣಮಿಲ್ಲದೆಯ್ದೆ ನೋಡುತ್ತಿರ್ದರ್
ಸಂತೊಸದಿಂ ನೆರೆದೆಲ್ಲರ್
ಕಾಂತೆಯರುಂ ಪರಿಜನಂಗಳುಂ ಪುರಜನಮುಂ ೧೫೭

ಮತ್ತೇಭವಿಕ್ರೀಡಿತ
ಪಲಕಾಲಂ ನೆರೆಪಿರ್ದ ರೂಪಮದನಂ ಬಿಟ್ಟಂ ಮನೋಜಾತನಾ
ಗಳೆ ಮತ್ತಂ ದಲಪೂರ್ವಸೃಷ್ಟಿಯೆನಿಪೀ ಲಾವಣ್ಯಲಾಭಕ್ಕೆ ಮೂ
ಜಗದೊಳ್ ನೋಂತವರಾರೊ ಭಾವಿಸುವೊಡೀ ಪುಣ್ಯಾತ್ಮನಂತೆಂದು ಮಂ
ಗಳನಂ ಪಿಂಗದೆ ನೋಡುತಿರ್ದುದು ಪುರಸ್ತ್ರೀವೃಂದಮೌತ್ಸುಕ್ಯದಿಂ ೧೫೮

ಮದನಂ ನೋಡಲನಂಗನೀಶನೆ ವಿರೂಪಾಕ್ಷಂ ಮಹಾನಾಕಲೋ
ಕದನಾಥಂ ಬಲನಾಶಕಂ ಮುರಹರಂ ಕೃಷ್ಣಂ ಕಳಂಕಾಂಕಿತಂ
ಪದೆಪಿಂ ಚಂದ್ರಮನಿಂತಿವರ್ ಸರಿಯೆ ಮತ್ತೀ ಧರ್ಮನಾಥಂಗೆ ಪೆ
ರ್ಚಿದ ಚೆಲ್ವಿಂಗೆ ದಲೆಂದು ಪೌರರೆನುತುಂ ಕಣ್ಣೋಲದಿಂ ನೋಡಿದರ್ ೧೫೯

ವಚನ: ಮತ್ತಂ

ಉತ್ಪಲಮಾಲೆ
ದೇವಕುಮಾರಿಯರ್ ದಿವಿಜಲೋಕದೊಳಂತವರಿಕ್ಕೆ ನಾಗಕ
ನ್ಯಾವಳಿ ನಾಗಲೋಕದೊಳಗಂತವರಿಕ್ಕೆ ವಿಳಾಸನಿರ್ಜಿತೋ
ದ್ಭಾವಜಕಾಂತೆಗೀ ಧರಣಿಪಾಳತನೂಜೆಗೆ ಮತ್ತಿನನ್ಯಕ
ನ್ಯಾವಳಿಗಳ್ ಸಮಾನತೆಯನೆಯ್ದುವರಾರೊ ಸಮಸ್ತಲೋಕದೊಳ್ ೧೬೦

ಶಾರ್ದೂಲವಿಕ್ರೀಡಿತ

ಭಾಸ್ವತ್ಕೋಮಳದೇಹಕಾಂತಿಚಯದಿಂದಂ ಭೂಷಣಂಗಳ್ ಕರಂ
ಲೇಸಾಗಿರ್ದುವು ಮತ್ತಮೀಕೆಗವಱಿಂ ಚೆಲ್ವೇನುಮಿಲ್ಲೆಂದು ತಾಂ
ಸೂಸುತ್ತುಂ ಪ್ರಮದಾಶ್ರುವಂ ನಯನದಿಂ ಪೌರರ್ ಮನಂಸೋಲ್ತು ಮ
ತ್ತಾ ಶೃಂಗಾರವತೀಕುಮಾರಿಯನತೀವಸ್ನೇಹದಿಂ ನೋಡಿದರ್ ೧೬೧

ವಚನ : ಎಂದು ಪುರಜನಂಗಳತೀವಕುತೂಹಳದಿಂ ಪರಸ್ಪರಂ ಮಾತಾಡುತ್ತುಂ ಮಂಗಳಕಾರಣಮಾಗಿ ರಮಣೀಯಮಣಿಭೂಷಣಕಳಾಪಮಂ ತೊಟ್ಟಂತಪ್ಪ ವಧೂವರರ ನವಳೋಕಿಸುತ್ತುಮಿರ್ಪುದುಂ

ಉತ್ಪಲಮಾಲೆ

ಇಟ್ಟ ಕಿರೀಟಮೂಲದುರುರತ್ನದ ದಂಡೆಯ ಮುಂದೆ ಶೋಭೆಯಿಂ
ಕಟ್ಟಿದ ಚೆಲ್ವ ಬಾಸಿಗದ ದೇಸೆಗೆ ತಾಂ ನೆಲಗಟ್ಟದೆಂಬಿನಂ
ಪಟ್ಟಮನಾ ವಿದರ್ಭದೊಡೆಯಂ ಸುಕುಮಾರನ ಭಾಳಪಟ್ಟದೊಳ್
ಕಟ್ಟಿದನಾಕ್ಷಣಂ ಪರಸುತುಂ ಮಣಿಕೇವಣಚಿತ್ರಮಾದುದುಂ ೧೬೨

ವಚನ : ಇಂತು ವಿವಾಹಕಲ್ಯಾಣಕ್ಕೆ ಮುಖ್ಯಕಾರಣಮಾಗಿ ಮಂಗಳಪಟ್ಟಮಂ ನಿಟ್ಟಿಗೊಳಿಸಿದಿಂಬಳಿಯಂ

ಕಂದ : ಚೆಂಬೊನ್ನ ಪಟ್ಟವಣಿ ಕ
ಣ್ಗೆಂಬಾದುದು ಪಚ್ಚೆವರಲ ಜಗುಲಿಯ ನಡುವೆ ಮ
ನಂಬುಗುವೆಲೆಗಳ ಮೇಲೆ ಕ
ರಂಬಿತಮಾಗರಳ್ದ ಮರಳ್ದ ಪೊಂದಾವರೆಯೊಲ್ ೧೬೩

ವಚನ : ಅದನಾ ಪಾರ್ಥಿವಮಿಥುನ ಮಳಂಕರಿಸಿ ಬಾಳಮರಾಳಮಿಥುನವೆಂಬಂತೆ ಲೀಲೆವಡೆದಿರ್ಪುದುಂ

ಕಂದ : ಲಲನಾರತ್ನಂ ಕುವರನ
ಬಲದಿಂದಮೆಡಕ್ಕೆಬಂದು ನಿಂದಿರಲಾಗಲ್
ಬಲಗೊಂಡರಾ ವಧೂವರ
ರೊಲವಿಂದಂ ಹೋಮವಗ್ನಿಯುಂ ಕ್ರಮಯುಕ್ತರ್ ೧೬೪

ಮತ್ತೇಭವಿಕ್ರೀಡಿತ

ಸುಳಿವುತ್ತುಂ ಬಲದಲ್ಲಿ ಪೋಗೆ ಸೆಗೆವ ಜ್ವಾಲಾಕಲಾಪಂಗಳ
ನ್ನಳಿಸಲ್ ಪಾವನಹೋಮಕೊಂಡದೊಳಗೆ ತ್ರೇತಾಗ್ನಿಯಂ ದರ್ಭಸ
ತ್ಫಳನೈವೇದ್ಯಸದಕ್ಷತಾರ್ಚಿತಮನುತ್ತೂರ್ಣಾಹುತಿವ್ಯಾಪ್ತಮಂ
ಬಲಗೊಂಡರ್ ಮುದದಿಂದೆ ದಂಪತಿಗಳಾ ರತ್ನತ್ರಯಾಕಾರಮಂ ೧೬೫

ವಚನ : ಅಂತು ಮಂತ್ರೋಚ್ಚಾರರಾವಂ ದೆಸೆಯಂ ಪಳಂಚಲೆಯೆ ರತ್ನತ್ರಯ ಜ್ಯೋತಿಸ್ವರೂಪಮಾದಗ್ನಿತ್ರಯ ಜ್ಯೋತಿಯಂ ದಂಪತಿಗಳಿರ್ವರುಂ ಪ್ರದಕ್ಷಿಣೀಕರಿಸಿ ವಿಧಿಪೂರ್ವಕಮಗ್ನಿಕುಮಾರನಂ ಸಾಕ್ಷೀಕರಿಸಿ ತದನಂತರಮಾ ಶೃಂಗಾರವತೀಕುಮಾರಿಯ ಪೆತ್ತ ತಾಯಪ್ಪ ಸತ್ಯವತೀಮಹಾದೇವಿಯೆಂಬಳಾ ಪ್ರತಾಪರಾಜನ ಪಟ್ಟದರಸಿ ಬಾಯಿನಮಂ ಕೊಡಲ್ವೇಡಿ ಬಹುವಿಧಮಂಗಳರಚನಾವಿಶೇಷಮನಂಗೀಕರಿಸಿದ ಚಾರುಚೈತ್ಯಾಲಯಕ್ಕೆ

ಉತ್ಪಲಮಾಲೆ

ಕಾಲ ಪಳಂಚಿಸುಂಗುರದ ಪೆಲ್ಲುಲಿ ನೂಪುರದಿಂಚರಂ ಸಮು
ಲ್ಲಾಲಿತ ಮೇಖಳಾವಳಯದೊಳ್ ಧ್ವನಿ ಮನ್ಮಥನಿಕ್ಷುಚಾಪದ
ಜ್ಯಾಲತಿಕಾ ಪ್ರತಾಡನಸಮುತ್ಥಿತ ಟಂಕೃತಿಯಂತೆ ಲೀಲೆಯಿಂ
ಪಾಳಿಸೆ ಬಂದಳಂದು ಕಡೆಗಣ್ ಕುಡಿಮಿಂಚಿನ ಗೊಂಚಲೆಂಬಿನಂ ೧೬೬

ವಚನ : ಮತ್ತಂ ಪೆಂಡವಾಸದ ವಿಳಾಸಿನೀಜನಂಗಳ್ ನೂರ್ವರ್ ಗಡಣಂಗೊಂಡು ವಿವಿಧೋಪಾಯನ ರತ್ನಪಟಲಿಕೆಗಳಂ ಪಿಡಿದೊಡನೆ ಬರೆ ಬಸದಿಗೆ ಬಂದು

ಮತ್ತೇಭವಿಕ್ರೀಡಿತ

ಎಳನೀರಿಂ ಸಿತದಿಂ ಸಿತೇಕ್ಷುರಸದಿಂ ಪ್ರಾಜ್ಯಾಜ್ಯದಿಂ ಕ್ಷೀರದಿಂ
ಪೊಳಪಾದಂ ದಧಿಯಿಂ ಸುಗಂಧಿಜಳದಿಂ ಶ್ರೀಮಜ್ಜಿನಾಧೀಶ್ವರಂ
ಗೊಲವಿಂ ಮಾಡಿಸಿದಂ ಮಹಾಭಿಷವರುಂದ್ರೋತ್ಸಾಹಮಂ ಭೂಪನು
ಜ್ವಳಚೈತ್ಯಾಲಯದಲ್ಲಿ ದಿಕ್ಕುಹರಮಂ ತಳ್ಪೊಯ್ಯೆ ವಾದ್ಯಸ್ವನಂ ೧೬೭

ಮಹಾಸ್ರಗ್ಧರೆ

ಜಳದಿಂದಂ ಗಂಧದಿಂದಂ ಸರಳಶತಕದಿಂದಂ ಸುಪುಷ್ಪಂಗಳಿಂದಂ
ವಿಳಸತ್ಸಾನ್ನಾಯ್ಯದಿಂದಂ ಥಳಥಳಿಸುವ ದೀಪಂಗಳಿಂ ಧೂಪದಿಂದಂ
ಫಳದಿಂದಂ ಪೂತನೂತಾಷ್ಟವಿಧ ನಿರುಪಮದ್ರವ್ಯದಿಂದಂ ಜಿನೇಶೋ
ಜ್ಜ್ವಳಪಾದದ್ವಂದ್ವಮಂ ಪೂಜಿಸಿದನೊಸೆದು ಭೂಪಾಳನಾನಂದದಿಂದಂ ೧೬೮

ವಚನ : ಇಂತು ಸಕಳಕಲ್ಯಾಣಕಾರ್ಯಕ್ಕಂ ಮುಖ್ಯಮಂಗಳಮಪ್ಪ ಜಿನೇಶ್ವರಾಭಿಷೇಕಪೂಜೆಯನಾದಿ ಮಧ್ಯಾವಸಾನದೊಳ್ ಮಹಾಮಹಿಮೆಯಿಂ ಮಾಡಿಸಿ ಪ್ರತಾಪ

ರಾಜಂ ತನ್ನಯ ಪೆರ್ಚಿದ ಪೆಂಪಿನ ಸಂಪದನುಂ ನಿರ್ಮಿರ್ಚುವುದುಮನಂತರಮಾ ವಿವಾಹ ಮಂಗಳೋತ್ಸಾಹದೊಳ್

ಉತ್ಪಲಮಾಲೆ

ಇಟ್ಟು ಲಲಾಟದೊಳ್ ತಿಲಕಮಂ ಕಳಮಾಕ್ಷತಮಂ ತಗುಳ್ಚಿ ನೇ
ರ್ಪಟ್ಟ ತುಱುಂಬಿನೊಳ್ ಕುಸುಮಮಾಳೆಯನೊಪ್ಪಿರೆ ಸೂಡಿ ಚೆಲ್ವಮುಂ
ದಿಟ್ಟ ಸುವರ್ಣಭಾಜನದ ಬಾಯಿನಮಂ ಕುಲನಾರಿಯರ್ಗೆ ತಾಂ
ಕೊಟ್ಟು ಮನಕ್ಕೆ ಪುಟ್ಟಿಸಿದಳಾಕ್ಷಣದೊಳ್ ಪರಮಾನುರಾಗಮಂ ೧೬೯

ವಚನ: ಅಂತಾ ಸತ್ಯವತೀಮಹಾದೇವಿ ವಿಚಿತ್ರವಸ್ತ್ರಾಭರಣಾದಿ ವಸ್ತುಗಳಿಂ ತುಂಬಿದ ಬಾಯಿನಂಗಳನಿತ್ತು ಸಂತುಷ್ಟಿಯನೆಯ್ದಿಸಿದಿಂಬಳಿಯಂ

ಉತ್ಪಲಮಾಲೆ

ಜಂಗಮಕಲ್ಪವೃಕ್ಷಮೊ ಸುಚಿಂತನರತ್ನಮೊ ಕಾಮಧೇನುವೋ
ಪಿಂಗದೆ ಪೇಳಿ ಪೇಳಿಯೆನುತಂ ಜಗತೀಜನಮೆಯ್ದೆ ಬಣ್ಣಿಸಲ್
ತುಂಗಮನಂ ದಲೀಯೊಸಗೆಗಂ ಪೊಱಗಾದವರಾರುಮಿಲ್ಲೆನಲ್
ಪೊಂಗಳನಿತ್ತು ಮನ್ನಿಸಿ ನೃಪಂ ಮೆಱೆದಂ ವಿಭವಪ್ರಭಾವಮಂ ೧೭೦

ಮತ್ತೇಭವಿಕ್ರೀಡಿತ

ಪಲವುಂ ಚಂದದ ಬಣ್ಣವಣ್ಣಿಗೆಯ ಲೇಸಾಗಿರ್ದ ವಸ್ತ್ರಂಗಳಂ
ಸಲೆಮಾಣಿಕ್ಯವಿಭೂಷಣಾವಳಿಗಳಂ ನಾಡೂರ್ಗಳಂ ಕುಂಜರಂ
ಗಳನಶ್ವಂಗಳಿವಾದಿಯಾದ ವರನಾನಾವಸ್ತುಸಂದೋಹಕಂ
ಗಳನೆಯ್ದಿತ್ತು ನಿಮಿರ್ಚಿದಂ ತ್ರಿಜಗದೊಳ್ ಸತ್ಕೀರ್ತಿಯ ಸ್ಫೂರ್ತಿಯಂ ೧೭೧

ವಚನ: ಇಂತೆನ್ನವರ್ ತನ್ನವರೆನ್ನದೆ ಪೀನಸನ್ಮಾನಪುರಸ್ಸರಮಾದನೂನದಾನ ವಿಧಾನದ ಬೀಯದ ಚಾಗದ ಪೆರ್ಮೆಯನಾ ಪ್ರತಾಪರಾಜಂ ಮೆಱೆವುದುಮದಂ ಧರ್ಮನಾಥಕುಮಾರಂ ಕಂಡು ಮನಂಗೊಂಡು ಚಂದ್ರೋದಯಮಂ ಕಂಡ ಸಮುದ್ರದಂತೆ ಪೆಟ್ಟು ಪೆರ್ಚಿ ಸಂತುಷ್ಟಿಯನಾಂತಿರ್ಪುದುಮನಂತರಂ

ಕಂದ: ಬೂವಕ್ಕವಸರಮಾಗಲ್
ಪಾವನತರಮಾದುದೊಂದು ಮಣಿಭಾಜನಮಂ
ಪೀವರಮಂ ತಂದಿರಿಸೆ ವ
ಧೂವರರೊಂದಾಗಿ ಕುಳ್ಳಿದರ್ ಮುದದಿಂದಂ ೧೭೨

ಸಣ್ಣ ಸರವಳಿಗೆಯುಂ ಮಿಗೆ
ಬಣ್ಣಂಬಡೆದಿರ್ದ ಪರಡಿಯುಂ ಸೊಜ್ಜಿಗೆಯುಂ
ತಿಣ್ಣಂ ಸವಿಪಡೆದುದನಾ
ಪುಣ್ಯಸ್ತ್ರೀಯರ್ಕಳಿಕ್ಕಿದರ್ ಪಾಯಸಮಂ ೧೭೩

[1]ಪೂ[1]ರಿಗೆಯುಂ ಮಂಡಗೆಯುಂ
ಘಾರಿಗೆಯುಂ ಹೂಸಣಂಬುಮಂ ವಡೆಯುಂ ಘೃತ
ಪೂರಮನಿಡ್ಡಲಿಗೆಯುಮಂ
ದೋರಣಿಯುಂ ಬೇಱಬೇಱ ಬಡಿಸಿದರೊಲವಿಂ ೧೭೪

ವಚನ : ಇಂತು ಪಿರಿದಾದ ಪರಿಮಳಭರಮಂ ದೆಸೆದೆಸೆಗೆ ಪಸರಿಸುವ ಪ್ರಾಜ್ಯಾಜ್ಯದಿಂ ಸಮಾರಜ್ಯಮಾನ ಶರ್ಕರಾಸಮ್ಮಿಶ್ರಿತಂಗಳಾಗಿ ಪರಮಾಮೃತದೊಡನೆ ಪುರುಡಿಸುವ ಪಕ್ವಾನ್ನಂಗಳಂ ಸವಿಯೆ

ಕಂದ : ಕಡುಸಣ್ಣಮಾದ ನುಣ್ಪಂ
ಪಡೆದ ಸುರಾಜಾನ್ನದೋಗರಂ ಭಾಜನದೊಳ್
ತಡೆಯದಿರುವಂತಿಯಲರ್ಗಳ
ಗಡಣಂ ಪುಂಜಿಸಿದುದೆಂಬಿನಂ ರಂಜಿಸುಗುಂ ೧೭೫

ಹೊಂಬೆಸಱ ಸೂಪಮುದಱಳ
ಗಿಂಬಾದುದು ಕರಗಿ ನಿಂದ ಪೊಸಮಿಸುನಿಯ ರಸ
ಮೆಂಬಂತೆ ಕಣ್ಗೆ ಕಡುಸೊಗ
ಸಂ ಬಯಕೆಯನಂತರಂಗದೊಳ್ ಪುಟ್ಟಿಸುಗುಂ ೧೭೬

ಮತ್ತೇಭವಿಕ್ರೀಡಿತ

ಪಲವುಂ ಛಂದದ ತಾಳದಂಗಳನತೀವಸ್ನಿಗ್ಧಶಾಕಂಗಳಂ
ವಿಳಸತ್ತೇಮನಕಂಗಳಂ ಮಧುರಸತ್ಪಾನಂಗಳಂ ಸರ್ಪಪಾ
ವಿಳಕರ್ಪೂರ ಪರಾಗಮಿಶ್ರಿತ ಮಹಾಸ್ವಾದೂಪದಂಶಂಗಳಂ
ಕುಲಯೋಷಿಜ್ಜನಮೆಯ್ದೆ ಬಡ್ಡಿಸಿದುದಾ ಸ್ಥಾಳಾಗ್ರದೊಳ್ ಪ್ರೀತಿಯಿಂ ೧೭೭

ವಚನ : ಮತ್ತಮಿಂದ್ರನುಮಿಂದ್ರಾಣಿಯುಮೊಂದಾಗಿಯಮೃತಾಹಾರಮನೆಂತುಣ್ಬರಂತಿರಾ ಧರ್ಮನಾಥಕುಮಾರನುಂ ಶೃಂಗಾರವತೀ ಮಹಾದೇವಿಯುಮೊಂದಾಗಿ ಪರಮಾಮೋದ ಪರಿಕಳಿತ ಮಧುರತರ ದಿವ್ಯಾಹಾರಮನಾರೋಗಿಸಿ ತದನಂತರಂ ಗಂಧಸಾರರಸದಿಂ ಕೈಘಟ್ಟಿಗೊಂಡು ಹಸ್ತಪ್ರಕ್ಷಾಲನಂಗೆಯ್ವುದುಂ

[1] ಹೂ (ಗಚ)

ಉತ್ಪಲಮಾಲೆ

ನಿಪ್ಪೊಸತಪ್ಪ ಕಪ್ಪುರದ ವೀಳೆಯಮಂ ಮಿಗೆಕೊಟ್ಟು ತಾನುಮೆ
ಯ್ದೊಪ್ಪುವ ಪೂಗಭಾಗಚಯಮಂ ಸಲೆಕೊಂಡು ವಿಶೇಷಹರ್ಷಮುಂ
ನೇರ್ಪಡೆ ಸರ್ವಭೋಗಮುಪಭೋಗಮುಮಂ ನೆಱೆಭೋಗಿಸುತ್ತುಮು
ತ್ತರ್ಪಣಚಿತ್ತನಿರ್ದನೊಸೆದಲ್ಲಿ ಪಲರ್ ಪೊಗಳಲ್ ಸುಕೀರ್ತಿಯಂ ೧೭೮

ವಚನ: ಇಂತಾ ಧರ್ಮನಾಥಕುಮಾರನುಂ ಶೃಂಗಾರವತೀ ಮಹಾದೇವಿಯುಂ ಮನ್ಯೋನ್ಯಶಕ್ತಿಯಿಂ ರತಿಕ್ರೀಡಾಸುಖಸಮಾಸ್ವಾದನಪಟುಲಂಪಟರಾಗಿ ಕಾಮನುಂ ರತಿಯುಮೆಂಬಂತೆ ನಿರಂತರಿತ ಪರಮಾನಂದಸಂದೋಹದೊಳೊಂದಿ ತಣ್ಣನೆ ತಣಿವುತ್ತುಮಿರ್ಪುದುಂ

ಮಹಾಸ್ರಗ್ಧರೆ

ಮಿಗೆ ಕೊಡಾಡುತ್ತುಮಿರ್ದಂ ಜಿನಸಮಯದ ಮಾಹಾತ್ಮ್ಯಮಂ ಧರ್ಮನಾಥಂ
ಜಗದಾರಾಧ್ಯಾಂಘ್ರಿಯುಗ್ಮಂ ಪರಸಮಯಮಹಾವಾದಿ ನಿರ್ದಾಟತಿಗ್ಮಂ
ನಗರಾಜಸ್ಥೈರ್ಯಕಂ ಬಾಹುಬಲಿಸುಕವಿರಾಜಂ ಕಳಾಂಭೋಜಸೂರ್ಯಂ
ಪ್ರಗುಣಂ ವಿದ್ವಿದ್ವಿಮೋಹಂ ನರಪಕೃತಮಹಂ ಚಾತುರೀಜನ್ಮಗೇಹಂ ೧೭೯

ಗದ್ಯ: ಇದು ಸಕಳಭುವನಜನವಿನೂಯಮಾನಾನೂನ ಮಹಿಮಾಮಾನನೀಯ ಪರಮಜಿನಸಮಯ ಕಮಳಿನೀಕಳಹಂಸಾಯಮಾನ ಶ್ರೀಮನ್ನಯಕೀರ್ತಿ ದೇವ ಪ್ರಸಾದಸಂಪಾದ ಪಾದನಿಧಾನದೀಪವರ್ತಿಯುಭಯಭಾಷಾ ಕವಿಚಕ್ರವರ್ತಿ ಬಾಹುಬಲಿಪಂಡಿತದೇವ ಪರಿನಿರ್ಮಿತಮಪ್ಪ ಧರ್ಮನಾಥಪುರಾಣದೊಳ್ ಶೃಂಗಾರವತೀದೇವಿಯ ಸ್ವಯಂವರ ಕಲ್ಯಾಣಪರಿವ್ಯಾವರ್ಣನಂ

**ಏಕಾದಶಾಶ್ವಾಸಂ**

# ದ್ವಾದಶಾಶ್ವಾಸಂ

ಕಂದ : ಶ್ರೀಯಂ ಕೂರಿಸಿ ತಾಳ್ದಂ
ಶ್ರೇಯೋನಿಧಿ ಧರ್ಮವೃತ್ತಿಯಂ ಪೆರ್ಚಿಸುತಂ
ಬೀಯದೆ ಪೆಂಪಿಂದೆಸೆದನ
ವೇಯಗುಣಂ ಸರಸಚತುರಕವಿಕುಳತಿಳಕಂ ೧

ವಚನ : ಅಂತು ನಿರ್ವರ್ತಿತ ವಿವಾಹಮಹೋತ್ಸವಾನಂತರಂ ಕತಿಪಯದಿನಂಗಳಂ ಪ್ರತಿದಿನಂ ಪ್ರವರ್ಧಮಾನ ನವಪ್ರಣಯಪ್ರಸ್ತುತವಿನೋದಕೇಳಿಗಳಿಂ ಕಳಿಪುತ್ತುಮಿರ ಲೊಂದು ದಿವಸಮಾ ಧರ್ಮನಾಥಕುಮಾರನುಂ ಶೃಂಗಾರವತೀಮಹಾದೇವಿಯುಮೊಂದಾಗಿ ನಿಸ್ಸೀಮಧಾಮಸ್ತೋಮಸಮಾವೃತ ಹೇಮಮಯಸಿಂಹಾಸನಮನಳಂಕರಿಸಿ ಪ್ರತಾಪ ರಾಜಂಬೆರಸು ಸಭಾ[1]ನಿವಾಸವಾ[1]ಸಿಗಳಾಗಿರ್ಪುದುಮಾಗಳ್

ಕಂದ : ಪೂಜ್ಯಮಹಾಹಾಸೇನಮಹಾ
ರಾಜಂ ಕಳಿಪಿದೊಡೆ ರತ್ನಪುರದಿಂ ಬಂದಂ
ರಾಜಿತಸಿತತರಕೂರ್ಚಸ
ಮಾಜಂ ಧವಳೋತ್ತರೀಯನೊರ್ವಂ ದೂತಂ ೨

ವಚನ : ಬಂದು ಬಾಗಿಲೊಳ್ ನಿಂದು ನಿಜಾಗಮನವಾರ್ತೆಯಂ ದ್ವಾರಪಾಲಕಂ ಗಱಿಪುವುದುಮಾತಂ ಪೋಗಿ ನಿಮ್ಮಯ ಪಿತೃಪ್ರೇಷಿತದೂತಂ ಬಾಗಿಲೊಳಿರ್ದಪನೆಂದು ಬಿನ್ನಪಂಗೆಯ್ಯೆ ಬರವೇಳೆಂಬುದುಂ

ಕಂದ : ಅತಿವೇಗದಿಂದೆ ಬಂದಾ
ನತನಾಗಿ ಕುವರನ ಮುಂದೆ ಕುಳ್ಳಿರ್ದು ಚರಂ
ಪಿತೃಕುಶಲವಾರ್ತೆಯಂ ಪೇ
ಳ್ದು ತೋಷಲೇಖಮನದೊಂದನಾತಂಗಿತ್ತಂ ೩

ವಚನ : ಅನಂತರಂ

[1] ನಿವಾ (ಗ)

ಮಹಾಸ್ರಗ್ಧರೆ

ನಡೆವೋದುತ್ಕ್ರೋಲೆಯುಂ ಬರ್ಪುದು ತಡೆಯದೆ ಬೇಗಂ ದಲಿಂದೋದಲೆಂದ್ದಾ
ಗಡೆ ತನ್ನ ಸ್ಥಾನಮಪ್ಪಾ ಪುರಿಗತಿಜವದಿಂ ಪೋಗಲುದ್ಯೋಗಿಸಲ್ಕಂ
ಪೊಡೆಯುಂ ತಾಂ ತನ್ನ ಸೇನಾಪತಿಯೆನಿಪ ಸುಷೇಣಂಗೆ ಪೇಳ್ದಿಲ್ಲಮುಂ ಪೆ
ರ್ಪಡೆಯುಂ ನೀಂ ಕೂಡಿಕೊಂಡೊಯ್ಯನೆ ಗತಿವಶದಿಂ ಪಿಂದೆಬಾಯೆಂದು ಪೇಳ್ದಂ ೪

ವಚನ: ಅಂತು ನಿಖಿಳರಾಜಕಾರ್ಯಕಾರಣನಿರ್ವಹಣಧುರೀಣನಪ್ಪ ಸುಷೇಣನೆಂಬ ಸೇನಾಪತಿಗೆ ಬುದ್ಧಿಗಲಿಸಿ ಸಮಸ್ತಸೈನ್ಯಸಮೇತಂ ಗಪ್ಪಯಿಸುವುದದಂ ಕಂಡು ಪ್ರತಾಪಮಹಾಮಂಡಳೇಶ್ವರಂ ಧರ್ಮನಾಥಕುಮಾರನಭಿಪ್ರಾಯಂ ನಿಜಜನನೀಜನಕ ಸಂದರ್ಶನೋತ್ಸುಕತೆಯಿಂದಂ ಮುಂದೆ ತನ್ನಯ ರತ್ನಪುರಗಮನಕ್ಕಭಿಮುಖನಾಗಿರ್ದುದೆಂದಱಿದು ಬಳಿಯುಂ ಬಳುವಳಿಯಾಗಿ ತನ್ನ ಮಗಳಪ್ಪ ಶೃಂಗಾರವತೀದೇವಿವೊಡವೋಪಂತು ಕುಂಚವಡಪದ ಡವಕೆಯ ಕನ್ನಡಿಯ ಬೋನದ ಪರಿಯಾಣದ ಕಡಿಗದ ಪಾವುಗೆಯ ಪಲವುಂತೆಱದ ಬಾಹತ್ತರನಿಯೋಗಯೋಗ್ಯಕಾಮಿನೀ ನಿಕಾಯಮುಮಂ ನಿಯಾಮಿಸಿ

ಮಹಾಸ್ರಗ್ಧರೆ

ಕಡುರಾಗಂಬೆತ್ತು ತೋರ್ಪಗ್ಗಳದ ವಿವಿಧದೇವಾಂಗವಸ್ತ್ರಂಗಳಂ ನೇ
ರ್ಪಡಿಸುತ್ತುಂ ಮಾಣಿಕಂ ಕೇವಣಿಸಿದ ಸದಲಂಕಾರಸಾರಂಗಳಂ ಚೆ
ಲ್ವೊಡಲಿಂದಾಶ್ಚರ್ಯಮಂ ಪುಟ್ಟಿಸುವ ಕರಿಗಳಂ ಲಕ್ಷಣಂ ಶಿಕ್ಷಣಂ ಬ
ಲ್ನಡೆಯೆಂಬೀ ಸಂಪನಾಂತೊಪ್ಪುವ ಕುದುರೆಗಳಂ ದೇಶಮಂ ಪುತ್ರಿಗಿತ್ತಂ ೫

ಕಂದ: ಸಮಕಟ್ಟಿಕೊಟ್ಟನಾ ಭೂ
ರಮಣಂ ಪಾಡುವರನಾಡುವರನೇಡಿಸುವಂ
ಕ್ರಮಮಱಿವ ವಾದಕರನಾ
ದಮೆ ನಗಿಸುವರಾದಿಯಾದ ತರುಣೀಜನಮಂ ೬

ವಚನ: ಇಂತಿವು ಮುಂತಾದ ಸಮಸ್ತವಸ್ತುವಿಶೇಷಮಂ ಬಳುವಳಿಯುಂ ಕೊಟ್ಟು ವಿಶಿಷ್ಟವಾರವಾಸರತಾರಾಕರಣಯೋಗಸಂಯೋಗಮನುಳ್ಳ ಶುಭಮುಹೂರ್ತದೊಳ್

ಕಂದ: ಬರಿಸಿ ವಧೂವರರಂ ವಿ
ಷ್ಟರದೊಳ್ ಕುಳ್ಳಿರಿಸಿ ಮತ್ತಮುಡಲುಂ ತುಡಲುಂ
ಪಿರಿದಾಗಿ ಕೊಟ್ಟು ಮಗಳಂ
ಪರಿರಕ್ಷಿಸಿ ಸುಖದಿನೆಂದು ಕೈಲಡೆಗೊಟ್ಟಂ ೭

ವಚನ: ತದನಂತರಂ ಬಹಳಕಾಹಳನಿಸ್ಸಾಳಭೇರೀಮೃದಂಗಾದಿ ಸಮುತ್ತುಂಗ ಮಂಗಳಾನಕಂಗಳ ಮಾಂಗಳಿಕ ಸಂಗೀತಂಗಳ ಪರಮಾಶೀರ್ವಾದ ನಾದಂಗಳ ಪಟುಪಾಠ

ಕರ ನಿರಸಧಿರಸಂಗಳ ಕೋಳಾಹಳವೆಲ್ಲಮೊರ್ಮೊದಲೊಳ್ ಭೋರೆಂದು ನೆಗೆದು ದೆಸೆಯಂ ಮುಸುಂಕಿ ದಿಂಕಿಡಿಸುತ್ತುಮಿರೆ ಪರಸಿ ತಳಿಪ ಮುಕ್ತಾಫಳಮಯ ವಿಮಳಾಕ್ಷತಂಗಳ ಸಾನುತ್ತುಂ ದಂಪತಿಗಳ್ ಪಿರಿದಾದ ಸಂಭ್ರಮದಿಂದರಮನೆಯುಂ ಪುರಮುಮಂ ಪೊಱಮಟ್ಟು ಕಿಱಿದಂತರಂ ಪೋದಿಂಬಳಿಯಮಾ ಪ್ರತಾಪರಾಜಂ ಧರ್ಮನಾಥಕುಮಾರನ ಮೊಗಮಂ ನೋಡಿ

ಉತ್ಪಲಮಾಲೆ

ಎಮ್ಮಯ ಪಂಬಲಂ ಮಱಿವವೊಲ್ ಪ್ರತಿಪಾಳಿಸಿ ತಪ್ಪುಗಂಡೊಡಂ
ತೆಮ್ಮನೆ ನೋಡಿ ಸೈರಿಸಿ ವಿಶೇಷಿತಕಾರ್ಯದೊಳೋಜೆವೇಳ್ದು ಮ
ತ್ತಿಮ್ಮಡಿಬುದ್ಧಿಯಂ ಕಲಿಸಿ ಮನ್ನಿಸಿ ಚಿತ್ತದೊಳೇನುಮಾಗದಂ
ತುಮ್ಮಳಮಾಕೆಯಂ ನಡಸಿಯೊಂದನೆ ಕೈಮುಗಿದಿರ್ದು ಬೇಡಿದೆಂ ೮

ವಚನ: ಎಂದರಸಂ ಕುವರನ ಕೈವಿಡಿದು ಕಡುದೈನ್ಯದಿಂ ಪೇಳ್ದು ಬೇಡಿಕೊಂಡು ಕುಮಾರಂಗೆ ವಿನಯವಿನಮಿತೋತ್ತಮಾಂಗನಾಗಿ ಬೀಳ್ಕೊಂಡು ಮತ್ತಂ ತಾನುಂ ಸತ್ಯವತೀಮಹಾದೇವಿಯುಂ ಶೃಂಗಾರವತೀದೇವಿಯ ಸಮೀಪಕ್ಕೆ ಬಂದು ಪ್ರೇಮರಸವಿಸರಮೊಸರ್ದು ಪರಸಿ ಪರಕಲಿಸುವ ವಿಲೋಚನಗಳಿಂದಾಕೆಯ ಮೊಗಮಂ ನೋಡಿ

ಉತ್ಪಲಮಾಲೆ

ಮಕ್ಕಳ ಮಾಳ್ಕೆಯಿಂದಿರದೆ ನಿನ್ನಯ ಗಂಡನ ಚಿತ್ತವೃತ್ತಿಗಂ
ತಕ್ಕವೊಲಂಜಿ ಬೆಚ್ಚಿ ಬೆಸಕೆಯ್ವುದು ಮಾವನುಮತ್ತೆಯುಂ ಪೊಗ
ಳ್ದಕ್ಕುಮೆನಲ್ಕೆ ವರ್ತಿಸುವುದುತ್ತಮೆ ನಿನ್ನೊಡನಂದರೆಲ್ಲರಂ
ಮಿಕ್ಕೊಲವಿಂದೆ ಮನ್ನಿಸುವುದೇಳಿಸದಿರ್ಪುದು ಭಾವಮೈದರಂ ೯

ಕಂದ: ಬುದ್ಧಿವತಿಯಾಗಿ ನಡೆವುದು
ಸದ್ಧರ್ಮಮನೆಯ್ದೆ ಮಾಳ್ಪುದೆಮ್ಮಯ ಚಿತ್ತ
ಕ್ಕುದ್ಧರಸಂತೋಷಮನಿ
ತ್ತುದ್ಧರಿಪುದು ನಿನ್ನ ಕುಲದ ಪೆಂಪಂ ಮಗಳೇ ೧೦

ವಚನ: ಎಂದು ತಾಯುಂ ತಂದೆಯುಂ ಮಗಳ ಚಿಬುಕಮಂ ಪಿಡಿದು ಬುದ್ಧಿವೇಳ್ದು ಕಡುಮೋಹದಿಂ ಪ್ರಕೃಷ್ಟಪ್ರಮದಾಶ್ರುಬಿಂದುಸಂದೋಹಂ ಮೇಲೆವೇಲೆ ತೇಂಕುತ್ತುಮಿರೆ ನುಡಿನುಡಿಗೊರ್ಮೆ ತೆಗೆತೆಗೆದು ಮುಂಡಾಡುತ್ತುಮಪ್ಪಿಕೊಳ್ಳುತ್ತುಂ ಕಿಱಿದಂತರಮಾ ಶೃಂಗಾರವತೀದೇವಿಯುಂ ಕಳಿಪಿ ಮರಳಲಾಱದಲ್ಲಿ ನಿಂದು ನೋಡುತ್ತುಮೆಂತಕ್ಕೆಂತಕೆ ಮರಳ್ದು ಪೋಗಿ ಕುಂಡಿನಪುರಮಂ ಪೊಕ್ಕು ಮಗಳ ಮುದ್ದಾಟಮನೊರ್ವೊರ್ವರೊಡನೆ ನುಡಿನುಡಿದು ಕೊಂಡಾಡುತ್ತುಂ ಸುಖದಿನಿರ್ಪುದುಮಿತ್ತಲ್

ಉತ್ಪಲಮಾಲೆ

ತನ್ನಯ ದೀಧಿತಿಪ್ರಸರಮೆಯ್ದೆ ಕವಲ್ವರಿದಲ್ಲಿಗಲ್ಲಿಗಂ
ಚೆನ್ನಸುರೇಂದ್ರಚಾಪತತಿ ಮೂಡಿದುದೆಂಬಿನಮೊಪ್ಪಿತೋಱುತಲ್
ಕಿನ್ನರನಾಯಕಂ ಮಣಿವಿಮಾನಮನಾ ಕುಮರಂಗೆ ತಂದುಕೊ
ಟ್ಟಂ ಸಲವಿಂದಮಂಬರದ ಪುಷ್ಪದವೊಲ್ ಪರಿರಂಜಿಸಿರ್ಪುದುಂ ೧೧

ಕಂದ : ಇಂದ್ರಾಣಿಯೊಳೊಂದಿದ ದೇ
ವೇಂದ್ರಂ ಬಂದೇಱುವಂತೆ ರತ್ನವಿಮಾನಮ
ನಂದು ಶೃಂಗಾರವತಿಯುಂ
ಸೌಂದರಯುವರಾಜನುಂ ದಲೇಱಿದರೊಲವಿಂ ೧೨

ವಚನ : ಮತ್ತಂ

ನಿರ್ಮುಕ್ತದಕ್ಷಿಣಾಶಂ
ಶರ್ಮಪರಾಯಣಕನುತ್ತರಾಶಾಭಿಮುಖಂ
ನರ್ಮದೆ ಸನ್ಮಾರ್ಗದೊಳಂ
ಧರ್ಮಜಿನಂ ಪವನನುತ್ತಮನವೊಲ್ ಪೋದಂ ೧೩

ವಚನ : ಆಸಮಯದೊಳ್

ಚಂಪಕಮಾಲೆ

ಅತಿರಮಣೀಯಪರ್ವತನಿತಂಬವನಂಗಳೊಳಂ ಮಹಾನದೀ
ಪ್ರತಿತಟನಂದನಂಗಳೊಳೆ ಕೆಂದಳಿರ್ವೊಂಗಲಪಾಸಿನಲ್ಲಿ ಮ
ತ್ತತಿಶಯಪುಷ್ಪಕಲ್ಪಿತಸುತಲ್ಪದೊಳಂ ರತಿಕೇಳಿಕಾರಣಂ
ಸುತಯುವರಾಜನುಂ ಯುವತಿಯುಂ ಕಳಿದರ್ ಕೆಲವುಂ ಕ್ಷಣಂಗಳಂ ೧೪

ವಚನ : ಇಂತಲ್ಲಲ್ಲಿ ಲೀಲಾವಿನೋದಂಗಳಿಂ ಪೊತ್ತಂ ಕಳಿವುತ್ತುಂ ಮೆಲ್ಲಮೆಲ್ಲನೆ ನಿಜಾನ್ವಯರಾಜಧಾನಿಯೊಂದುಕ್ರೋಶಮಾತ್ರಮೆನಲ್ ಬಂದುನಿಂದು ಮುಂದೆ ವಾರ್ತಾಹರರಂ ಕಳಿಪಲವರ್ ಪೋಗಿಯೋಲಗದೊಳಿರ್ದ ಮಹಾಸೇನಮಹಾರಾಜಂಗೆ ಯುವರಾಜನಾಗಮನವಾರ್ತೆಯಂ ಪೇಳ್ವುದುಂ

ಮತ್ತೇಭವಿಕ್ರೀಡಿತ

ಪರಮಾನಂದಮನಪ್ಪುಕೆಯ್ಯೆ ಹೃದಯಂ ರೋಮಾಂಚಸಂದೋಹವಾ
ವರಿಸಲ್ ಕೋಮಳದೇಹಮಂ ನಯನದೊಳ್ ಬಾಷ್ಪಾಂಬು ಕೆಯ್ಮಿಕ್ಕು ಪೊ
ಣ್ಮಿರೆ ಸಂತೋಷಮಯಸ್ವರೂಪಮನದಂ ಪೆತ್ತಂತಿರಿರ್ದಂ ನೃಪಂ
ಧರಣೀಚಕ್ರದೊಳಾರ್ಗೆ ಪುಟ್ಟಿಸದು ಸತ್ಪುತ್ರಾಗಮಂ ರಾಗಮಂ ೧೫

ವಚನ : ಅನಂತರಮಾ ಸುವ್ರತಾಮಹಾದೇವಿಯುಂ ಧಾರಾಧರವಿರಾವಮಂ ಕೇಳ್ದ ಮಯೂರನಾರಿಯಂತೆ ನಿರವಧಿಪರಿತೋಷಭರಮನಾಂತು ಭೂಕಾಂತನಂತಿಕಕ್ಕೆ ಬಂದು ಮನಃಪ್ರಮೋದಸೂಚನಪರವಚನಂಗಳಂ ನುಡಿದು ಬಂದ ಚರರಿಂಗಂಗಚಿತ್ತ್ರಮನಿತ್ತು ಪುರದೊಳರಮನೆಯೊಳಂ ಪಿರಿದುಮೊಸಗೆಯನೆಸಗಲ್ವೇಳ್ದು

ಮಹಾಸ್ರಗ್ಧರೆ

ನೆಲದೊಳ್ ಬೆಟ್ಟಂಗಳೆಲ್ಲಂ ಚರಿಸುವ ತೆಱದಿಂದಿರ್ದ ಮಾತಂಗಯೂಥಂ
ಗಳಿನೇಟುಂ ದಿಗ್ವಿಭಾಗಂಗಳೊಳುದದಧಿತರಂಗಂಗಳೆಲ್ಲಂ ಸಮಂತ
ಗ್ಗಳಮಾಗಲ್ ತುಂಬಿಕೊಂಡಿರ್ದವೊಲೆಸೆವ ಮಹಾವಾಜಿವರ್ಗಂಗಳಿಂದಂ
ಸಲವಿಂದಲ್ಲಾಡುವೊಳ್ಪಾಗುಡಿಗಳೆನೆ ಚಲಚ್ಚಾಮರೌಘಂಗಳಿಂದಂ ೧೬

ಉತ್ಪಲಮಾಲೆ

ಆಗಸದಲ್ಲಿ ಶಾರದಪಯೋಧರಸಂತತಿ ತುಂಬಿದಂತೆ ಜೆ
ಲ್ವಾಗಿರಲೊತ್ತಿಯೆತ್ತಿದ ಲಸದ್ಧವಳಾತಪವಾರಣಂಗಳಿಂ
ದಾಗಳಗುರ್ವನೆತ್ತು ಕುಮರಂಗಿದಿರ್ವಂದರನೇಕಸಂಭ್ರಮಂ
ಭೋಗದಳುರ್ಕೆಯಿಂದೆ ಪಿತೃಮಾತೃಗಳಾನಕನಾದಮುಣ್ಮಲುಂ ೧೭

ವಚನ : ಅಂತಿದಿರ್ವಂದು

ಉತ್ಪಲಮಾಲೆ

ಬಂದ ಕುಮಾರಕಂಗೆ ಬಿಡುಮುತ್ತಿನ ಸೇಸೆಯನಿಕ್ಕಿ ಮತ್ತೆ ಮು
ತ್ತಂದು ಪಲರ್ಮೆಯಿಂ ಪರಸುತುಂ ತೆಗೆದಪ್ಪಿ ಬಿಡಲ್ಕಮಾಱದಿ
ರ್ದಂ ದಲಮೊಂದು ಜಾವಮರೆಗಂ ಧರಣೀಪತಿ ಮತ್ತೆ ಸುವ್ರತಾ
ಸೌಂದರಿಯುಂ ವಿಮೋಹವಶದಿಂ ಬಿಗಿದಪ್ಪಿದಳಾ ತನೂಜನಂ ೧೮

ಕಂದ : ಈಗಳ್ ಮನೋರಥಂ ಕೈ
ವಾಗಿದುದೆಯ್ದೆನ್ನ ತಂದೆ ಬಂದ ನಿಮಿತ್ತಂ
ರಾಗದಿನಾ ತಾಯಿ ಮಹಾ
ಭಾಗನನಿಂತೆಂದು ಪೊಗಳ್ದು ಪುಳಕಿತೆಯಾದಳ್ ೧೯

ವಚನ : ಅನಂತರಂ ಕಡುವಿನಯದಿಂ ಪೊಡಮಂಟ ಶೃಂಗಾರವತೀದೇವಿಯುಮನಭಂಗಿತ ಕರ್ಣಪತ್ರಿಯಾಗಿ ಸುಖದಿಂ ಬಾಳೆಂದು ಪಲಮಾಶೀರ್ವಾದದಿಂ ಪರಸಿ ಗಾಢಾಲಿಂಗನಂಗೆಯ್ದಂಬಳಿಯಂ ಮಗನುಮಂ ಸೊಸೆಯುಮನೊಡಗೊಂಡಭಿನವವಿಭವದಿಂ ಮಹಾಸೇನ ಮಹಾರಾಜನುಂ ಸುವ್ರತಾಮಹಾದೇವಿಯುಂ ನಿಜರಾಜಧಾನಿಗಭಿಮುಖರಾಗಿ ಬರ್ಪಾಗಳ್

ಕಂದ : ಕಡುಬೆಮರುಂ ಮೆಯ್ಯಾಱಲ್ದಿ
ದೆಡೆಯೊಳ್ ತಂಗಾಳಿ ಬಪ್ಪ ತೆಱದಿಂ ಬಡಸಂ
ಗೊಡವೆ ಬರ್ಪಂತೆ ಬಂದಂ
ಸಡಗರದಿಂ ನಾವು ಬಯಸುವೆಡೆಯೊಳ್ ಕುಸರಂ ೨೦

ವಚನ : ಎಂದು ಪಣ್ಣಿದ ಪಕ್ಕದ ಪಟ್ಟದಾನೆಗಳನೇಱಿ ಬರ್ಪ ಪಾರ್ಥಿವಪುತ್ರ ಸಾರ್ಥದೊಡನೆ ನುಡಿಯುತ್ತುಮರಸಂ ಬಂದನೇಕಪ್ರಾಕಾರಮಾಣಿಕ್ಯಮಯಮಕರತೋರಣಶ್ರೇಣಿಗಳೆಂಬ ಮನೋಹಾರಿಹಾರಂಗಳಿಂದೊಪ್ಪಂಬೆತ್ತತ್ಯುಚ್ಛ್ರಾಸ ನಕ್ಟೂಟರಮಣೀಯತರಮುಮವಿರಳಹರಿಚಂದನರಸಪರಿಕಳಿತ ಕುಂಕುಮಕರ್ದಮಸ್ಥಾಪಕಸ್ಥಗಿತ ಸಮಸ್ತಪ್ರದೇಶಪೇಶಲಮುಂ ಕುಸುಮವಿಸರವಿರಚಿತ ರಚನಾವಿಶೇಷರುಚಿರಮಾಮತಿಶಯಿತಪ್ರಾಕಾರವಿರಾಜಿತಮುಮಾಗಿ ಕೆಯ್ಗೆಯ್ದ ಕಾಮಿನಿಯಂತೆ ಕಮನೀಯತೆವಡೆದ ಪುರಲಕ್ಷ್ಮಿ ಪಿರಿದಾದ ಸಂಭ್ರಮಮನೊಳಕೊಂಡ ಧ್ವಜಾದಂಡಂಗಳೆಂಬ ಭುಜಾದಂಡಂಗಳಂ ನೆಗಪಿ ಪವನಪರಿಸಂಚಳ ಸಮೀಚೀನಚೀನಮಹಾಚೀನಾದಿಸೀಪರಚೀನರಂಗಳೆಂಬ ಕರತಳಂಗಳಿಂ ಕೆಯ್ವೀಸಿ ಮಂಗಳಪಟಹಪಟುರವಂಗಳಿಂ ನುಡಿದು ಕುಮಾರಸಂ ಕರೆವಂತಿರ್ಪುದುಮಾಗಂ ಮುಟ್ಟೆನಂದೊಳಗಂ ಪೊಗುವಾಗಳ್

ಕಂದ : ಪಾಡುವರಪ್ರತಿರವದಿಂ
ಪಾಡುಪವೋಲಾಡುತಿಪ್ಪರಪ್ರತಿಬಿಂಬದ
ಗಾಡಿಯನೊಲ್ದೋಡುಪವೊಲ್
ನಾಡೆಯುಮೊಳಕೊಂಡುದಾ ಪುರಂ ಸಂಭ್ರಮಮಂ ೨೧

ವಚನ : ಆಪೊತ್ತಿನೊಳತೀವನೂತ್ನಪ್ರಭಾವನಾಪ್ರಭವಪ್ರಯತ್ನಮಾದ ತದ್ರತ್ನಪುರದಲ್ಲಿ

ಚಂಪಕಮಾಲೆ

ಕಳಶಕುಚಂ ಕದಕ್ಕದಿಸೆ ಚಂಚಳಲೋಚನಕಾಂತಿ ಸುತ್ತಲುಂ
ಪೊಳೆಯೆ ಕುಮ್ತಳಂ ಕೆದಱೆ ಪಾದತಳಂ ತಳಿರೇಳಿಸಲ್ ಧರಾ
ತಳದೊಳವೇಕ್ಷಣಾತುರಜಸಂಭ್ರಮಸಂಭೃತಚಿತ್ತವೃತ್ತಿಕಂ
ಥಳಥಳಿಸುತ್ತೆ ಬಂದುದು ಪುರೀತರುಣೀಜನಮಂದು ಲೀಲೆಯಿಂ ೨೨

ವಚನ : ಅಂತುಬಂದು ವಧೂವರಾವಳೋಕನಸಮಾಕುಳಜನಜನಿತಸಮ್ಮರ್ದಕೋಳಾಹಳ ಸನಾಥಮಪ್ಪ ರಾಜವೀಥಿಕಾಪ್ರದೇಶದ ಕೆಲದೊಳ್ ನಿಂದು

ಸ್ರಗ್ಧರೆ

ಮಾತಂಗಾರೂಢನೀತಂ ನಿರತಿಶಯಕುಮಾರಂ ದಲೀ ಪಿಂದೆರತ್ನ
ಬ್ರಾತಪ್ರೋತಸ್ಫುರತ್ಪಾನಸತರ ಶಿಬಿಕಾರೂಢೆಯಾಗೆಯ್ದೆ ಬರ್ಪ
ಖ್ಯಾತಸ್ತ್ರೀಯಾಕೆ ಶೃಂಗಾರವತಿಪೆಸರ ಮಾದೇವಿಯಿಂತೆಂದು ತಮ್ಮೊಳ್
ಮಾತನಾಡುತ್ತುಂ ಕರಂ ನೋಡಿಪುದು ಮದುವೆಯಾಗಿಂತು ಬರ್ಪೊಂದು ಚೆಲ್ವಂ ೨೩

ವಚನ: ಎಂದು ಗಡಣಂಗೊಂಡು ತಮ್ಮೊಳೋರೊರ್ವರೊಡನೆ ನುಡಿವ ಮಡದಿಯರ ಸಡಗರದ ಕಡುನುಡಿಯೊಳ್ ತಡಂಗಲಿಸಿದಗಣ್ಯಪುಣ್ಯಪಾಠಕಜನಂಗಳಾಶೀರ್ವಾದನಾದಂಗಳನಾಕರ್ಣಿಸುತ್ತುಂ ಕುಲವೃದ್ಧಾಂಗನಾಸಂಘಾತಂಗಳ್ ಪರಸಿ ತಳಿವ ಮಂಗಳಶೇಷಾಕ್ಷತಂಗಳನಾಂತುಕೊಳುತ್ತುಂ ಬಂದು ರಾಜಮಂದಿರದೊಳಗಂ ಪೊಕ್ಕು

ಕಂದ: ತನ್ನೊಡವಂದರಸುಗಳಂ
ಮನ್ನಿಸಿಬೀಳ್ಕೊಟ್ಟು ಕಳಿಸಿ ಕರುಮಾಡದ ಪೊದ
ಲುನ್ನತಮೆನಿಸುವ ನೆಲೆಯೊಳ್
ಬಿನ್ನವಿಸಿಕ್ಕಿದ ಸುವರ್ಣಸಿಂಹಾಸನದೊಳ್ ೨೪

ಶೃಂಗಾರವತೀದೇವಿಯು
ಮಂಗಜಸನ್ನಿಭಕುಮಾರನುಂ ಕುಳ್ಳಿರ್ದರ್
ಸಂಗಡದಿಂ ಸಂತಸಮಂ
ಪಿಂಗದೆ ಕುಳ್ಳಿರಿಸುತುಂ ಸಮಸ್ತರ ಮನದೊಳ್ ೨೫

ವಚನ: ಸಮನಂತರಮಾ ಮಹಾಸೇನಮಹಾರಾಜನುಂ ಸುಪ್ರಭಾಮಹಾದೇವಿಯುಂ ಮತ್ತಂ ಪುರದೊಳಂ ಮನೆಯೊಳಂ ಮಹೋತ್ಸಾಹಮಂ ಕೊಂಡಾಡಿ ಯಥೋಚಿತವಾಸರವ್ಯಾಪಾರಮಂ ತೀರ್ಚಿ ಮದುವೆಯಾದ್ಯಂತವೃತ್ತಾಂತಮಂ ತಿಳಿದು ಬಳಿಯಂ ಜಳನಿಧಿಯುಮಂ ಪೇಳಿಯುಮಂ ನಿಜತನೂಜನಪ್ಪ ಪರಿಪೂರ್ಣಕಳಾಧರನುಂ ರೋಹಿಣಿಯುಮೊಂದಿರ್ಪುದಂ ಕಂಡು ಪೆರ್ಚುವೆರ್ಚರ್ಮಸಂತರಸನುಮರಸಿಯುಂ ತಮ್ಮಯ ಮಗನುಂ ಸೊಸೆಯುಮಪ್ಪ ಧರ್ಮನಾಥಕುಮಾರನುಂ ಶೃಂಗಾರವತೀದೇವಿಯುಮೊಂದಾಗಿ ಕೂಡಿ ಸುಖದಿಂ ಬಾಳ್ವುದಂ ಕಂಡು ಕಡುನಲಿದು

ಚಂಪಕಮಾಲೆ

ಅತಿಶಯಸಿಜರಾಂಗನೆಯರೋಲಗದಿಂದಭಿರಂಜಿಸಿರ್ದ ಭೂ
ಪತಿಸುರಾಗನಂದನವಿಲೋಕನಲೀಲೆಯನೆಯ್ದೆ ತಾಳ್ದಿ ಸ
ನ್ನುತಪಿತೃಮಾತೃಗಳ್ ಗುಣಿಪಧೂಸರರಂ ನಡೆನೋಡಿ ನಿರ್ನಿಮೇ
ಷತೆಯನಲರ್ಚಿತುಂ ಶಚಿಶಚೀಶರವೊಲ್ ತಣಿದರ್ ಸುಸೌಖ್ಯದಿಂ ೨೬

ಕಂದ: ಅನ್ಯರಾರಿಂಗಮಿಲ್ಲದ
ನುನ್ನೆಂದುಂ ಕಿಱಿವನಾದೊಡನುಭವಿಸದ ಸುಖ
ಮುಂ ನೆಱೆಸವನಿಸಿದುದು ಪು
ಣ್ಯೋನ್ನತಪಿತೃಮಾತೃಗಳ್ಗೆ ಸುತದರ್ಶನದಿಂ ೨೭

ವಚನ: ಇಂತು ನಿರಂತರಿತ ಪರಮಪ್ರಮೋದಸರಂಪರೆಯನಪ್ಪುಕೆಯ್ದಿರ್ಪುದು ನೊಂದುದಿವಸಮಾ ಮಹಾಸೇನಮಹಾರಾಜಂ ನಿಜತನೂಜನಪ್ಪ ಧರ್ಮನಾಥಕುಮಾರಂ ಬೆರಸು ಪರಿಭಾಸ್ವರಸ್ವರುದಳಪ್ರಾಸಾದಿತ ಕಾರ್ತಸ್ವರಮಯಪ್ರಾಸಾದ ಶಿಖರೀಭೂತಶಿಖರಿನಿರ್ಯೂಹಪರ್ಯಂಕಮಂಡಳದೊಳುದ್ದಂಡಮಂಡಳಿಕ ದಂಡನಾಥಮಕುಟಬದ್ಧಾದಿ ನಿರವಶೇಷಪರಿವಾರದೊಡಗೂಡಿ ಒಡ್ಡೋಲಗಂಗೊಟ್ಟು ಲೀಲಾವಿನೋದದಿಂದಿರುತ್ತುಮಿರಲಾತನ ಸಂತೋಷಮೆಂಬ ಸಸ್ಯಸಮೃದ್ಧಿಯುಂ ಸಫಲಂ ಮಾಡಲವಸರಂಬಡೆದಂತೆ

*ಮಹಾಸ್ರಗ್ಧರೆ
ಪಡೆಪಿಂದಂ ಧರ್ಮನಾಥಂ ನಿರುಪಮಪರಮೈಶ್ವರ್ಯಕಾರ್ಹಂತ್ಯಲಕ್ಷ್ಮೀ
ಪದಮಂ ತಾಳ್ದಂದು ನಮ್ಮಂ ಬಳಿಕೆ ಬಗೆಯನಾತಂಗೆ ನವ್ಮೋಲಗಂ ಪ
ತ್ತದು ಮತ್ತಿಂತೆಂದು ಸೇವಾಸಮಯಮಱಿದು ಬರ್ಪಂತಿರಾಶ್ಚರ್ಯದಿಂ ಬಂ
ದುದು ಕಾರ್ಗಾಲಂ ವಿನೀಲಂ ತಟಿದುದಯವಿಲೋಲಂ ಧ್ವನನ್ಮೇಘಜಾಲಂ ೨೮

ಕಂದ: ಮಿಗುವ ದ್ವಿಜರಾಜಕಳಾ
ಳಿಗಳಂ ಕಿಡಿಸುತ್ತುಮೆಯ್ದೆ ಮಿತ್ರನ ತೇಜಮ
ನಗಿಯದೆ ಕುಂದಿಸುತುಂ ಬಿಡ
ದೊಗೆದಂ ಕಾರೆಂಬ ದುರ್ಜನಂ ಗರ್ಜಿಸುತುಂ ೨೯

ವಚನ: ಆಗಳ್

ಚಂಪಕಮಾಲೆ
ಪಡುವಣಗಾಳಿಯೆಂಬ ಕಡುನಲ್ಲನ ಸೋಂಕಿನೊಳುಬ್ಬಿ ರಾಗವಿ
ಸ್ಫುಡಿಸೆ ಧರಿತ್ರಿಯೆಂಬಬಳೆಗೊರ್ಮೊದಲೊಳ್ ಪರಿತಾಪದೇಳ್ಗೆ ತಾ
ನಡಗಿದುದೆಯ್ದೆ ಧೂಳಿಗಣಮೆಂಬ ಲಸತ್ಪುಳಕಾಂಕುರಾಳಿ ಮ
ತ್ತೊಡನೊಡನೆಳ್ದುದದೃಭಯಮೆಂಬ ಕುರುಳ್ ಕುಣಿದತ್ತು ನಾಡೆಯುಂ ೩೦

ವಚನ: ಇಂತು ವಿರಹಿಜನಂಗಳೆಂಬ ತರುನಿಕರಂಗಳಂ ಸುಡುವ ವಿರಹಾಗ್ನಿಯ ವಿಜೃಂಭಣಕ್ಕೆ ನೆರಮಾಗಿ ಕರ್ಪೂರಂ ಬಂದಂತೆ ಗಭೀರಂ ಪಶ್ಚಿಮಾಶಾಸಮೀರಂ ಬಂದು ತೀಡಲೊಡಂ

* ಮಳೆಗಾಲವ್ಯಾವರ್ಣನೆ (ಗ)

ಉತ್ಪಲಮಾಲೆ

ತೊಟ್ಟನೆ ಬಿಟ್ಟ ಬೇಸಗೆಯು ನಟ್ಟ ಬಿಸಿಲ್ಗಳನಟ್ಟ ತಣ್ಣಸಂ
ಪುಟ್ಟಿದುದಲ್ಲಿ ಪಟ್ಟುದು ಮರಾಳಕುಳಂ ಗಮನಾತುರಕ್ಕೆ ಸೇ
ರ್ಪಟ್ಟುದು ಚಾತಕಪ್ರತತಿಗಂ ಪ್ರಮದಂ ನವಿಲೋಳಿಗಳ್ಗೆ ಮುಂ
ದಿಟ್ಟುದು ನರ್ತನಂ ಮಿಸುಪ ಪಣ್ಗೊನೆವೆತ್ತುದು ಜಂಬುನೇಜಾಲಂ ೩೧

ಕಂದ : ಮೊಲ್ಲೆ ಮುಗುಳ್ಗಳನಾಂತುದು
ಚಿಲ್ಲಂ ಪಸಲೊತ್ತಿ ತೋರ್ಕೆವೆತ್ತುದು ತದುಕುಂ
ಪಲ್ಲವಿಸಿರ್ದುದ ಕೇದಗೆ
ಮೆಲ್ಲನೆ ಗಜಾಗಟ್ಟೆ ತಳೆದುದದು ಬೆಳ್ನಳಿಯಂ ೩೨

ಚಂಪಕಮಾಲೆ

ಅನಜ ವಿಳಾಸಮಂ ಗಹನಲಕ್ಷ್ಮಿ ನಿರೀಕ್ಷಿಸಲೆಂದು ನಾಡೆಯುಂ
ತನಕಿಸಿ ಬೋದ್ಧದಿಂ ಪಲವುಕಣ್ದೆರೆದಿರ್ದಪಳೆಂಬ ಮಾಳ್ಕೆಯಿಂ
ದನೆ ಕೆದಱಿರ್ದವೆಲ್ಲೆಡೆಯೊಳಂ ಪರಿರಂಜಿಪ ಕಣ್ಣ ಪೀಲಿಗಳ್
ನನನುತಿಯಂತಿರೊಪ್ಪಿದುದು ಕೇಗುವ ಸೋಗೆನವಿಲ್ಗಳ ಸ್ವರಂ ೩೩

ವಚನ : ಅಂತು ಘನಸಮಯಪ್ರವೇಶಮಖಿಳಜನಮನೋವಿಕಾಸಕ್ಕವಕಾಶಮಾಗೆ

ಮಹಾಸ್ರಗ್ಧರೆ

ಬಡವಾಗ್ನಿಜ್ವಾಲಿಕಾಭೀತಿಯಿನಸರಸಂಭೋರಾಶಿನೀಳಾಪನಂ ಮೇ
ಗಡರ್ದ ವ್ಯೋಮಾಂತರಾಳಸ್ಥಳಮನುರಿಶರಣ್ಬೊಕ್ಕುದೆಂಬಂದದಿಂ ಮೇಣ್
ಸಿಡಿಲಗ್ನಿಪ್ರೋದ್ಯದತ್ಯದ್ಭುತಹಳತಳಮೋದ್ಧೂತಧೂಮಪ್ರತಾನಂ
ಗಡಣಂಗೊಂಡಿರ್ದುದೆಂಬಂದದೆ ಪಸರಿಸಿತುತ್ತಾಳಮಂಭೋದಜಾಳಂ ೩೪

ಉತ್ಪಲಮಾಲೆ

ಪೊತ್ತುವ ಬಾಡವಾಗ್ನಿಯ ಪೊಡರ್ ಪೊಗೆಸುತ್ತಿದೊಡುಬ್ಬೆಗಂ ಪೊದ
ಳ್ದತ್ತೆ ಸಮಂತು ನಿತ್ತರಿಸಲಾಱದೆ ಪತ್ತಿದ ವಾರ್ಧಿಯಿಂದೆ ಮೇ
ಲ್ವೆತ್ತುವ ವಾರಣೇಂದ್ರಘಟೆಯಂತೆ ಪಯೋಧಘಟೆ ದ್ಯುಕಕ್ಷದೊಳ್
ಸುತ್ತಿದುದರ್ಕಸತ್ಕಿರಣಪಲ್ಲವಮಂ ತಿನಬಿಂಬ ಮಾಳ್ಕೆಯಿಂ ೩೫

ನೀರದಸಂಕುಳಂ ನೆರದುಬಂದು ಘನಾತುರದಿಂ ಪ್ರತೀಚಿಕಾ
ನೀರಧಿ ನೀರ್ನಿರಂಬುಗೆಯೊಳ್ ಬಡವಾಗ್ನಿಯನೀಂಟಿ ಪೋಗಿ ತ
ನ್ನೀರ್ದಮಾರ್ಗದೊಳ್ ಪಸರಿಸಿರ್ದುದಲ್ಲದೊಡೆಂತು ಬಂದುದೋ
ಭೂರಿಕೃಶಾನುಕಾಂತಿಯೆನಲುಣ್ಮುವ ಮಿಂಚಿನ ಗೊಂಚಲೆತ್ತಲುಂ ೩೬

ಕಂದ : ಜಗನುಂ ತಾಪಿಸುವರ್ಕಂ
ಜಗುಳ್ದೋಡಿದನೆಲ್ಲಿಗೆಂದು ಮಿಂಚೆಂಬೀ ದೀ
ವಿಗೆವಿಡಿದು ತೋರ್ಪ ತೆಱದಿಂ
ಗಗನದೊಳಂ ಪರ್ಸಿಸಿತ್ತು ಕಾರ್ಮುಗಿಲೆತ್ತಂ ೩೭

ಚಂಪಕಮಾಲೆ
ದ್ರುತಜಲಗರ್ಭದಿಗ್ವಧುಗೆ ಗೆಂಟಿಗೆಗಟ್ಟುವ ಪೊತ್ತಿನೊಳ್ ತಟಿ
ಲ್ಲತೆ ಕಡುಪಾಗಿ ಪೊಯ್ವುತಿರೆ ಕಾರ್ಮುಗಿಲೆಂಬ ಗಭೀರಭೇರಿಯಿಂ
ದತಿಶಯರಾವಮುಣ್ಮೆ ನೆಱೆಪೊಣ್ಮುದುದೆಂಬಿನಮುರ್ವಿಕೊರ್ವಿ ಪ
ರ್ವಿತು ದಶದಿಕ್ತಟೀವಿಸರದಲ್ಲಿ ನಿರಂತರಮೇಘಗರ್ಜನಂ ೩೮

ಕಂದ : ಜಳಧರಲಕ್ಷ್ಮಿಯ ಕಟಿಯೊಳ್
ವಿಳಸನಮಂ ತಳೆದ ಪೊನ್ನಮೇಖಳೆಯೆಂಬಂ
ತೆಳಮಿಂಚಿನ ಬಳಗಂ ಥಳ
ಥಳಿಸುತ್ತುಂ ನಿಮಿರ್ದು ನೀಳ್ದು ಪೊಳೆದುದು ಸುತ್ತಂ ೩೯

ಚಂಪಕಮಾಲೆ
ಕೞಿದುದು ಮುನ್ನಮೆಯ್ದೆ ಕಡುಗತ್ತಲೆಯೋಳಿಯುದೊಂದು ತಂದಲಂ
ಕೞಿದುದು ಮತ್ತೆ ಮಿಂಚುಗಳ ಪಿಂಡಿನ ಬಲ್ಸರಿಯಂ ಬಳಿಕ್ಕದುಂ
ಕೞಿದುದು ಮಾಣದೆಲ್ಲೆಡೆಯೊಳಾಲಿವರಲ್ಗಳ ಸಟ್ಟಸೋನೆಯಂ
ಕೞಿದುದನಂತರಂ ಪಿರಿದುವಾರಿಯ ಪೆರ್ಮಳೆಯಂ ಪಯೋಧರಂ ೪೦

ಮತ್ತೇಭವಿಕ್ರೀಡಿತ
ಗಗನಶ್ರೀಘನಕಾಲಮೆಂಬ ವಿಟನೊಳ್ ಸಂಭೋಗಮಂ ಮಾಡುತುಂ
ಬಿಗಿದಪ್ಪಲ್ಕೆ ಪಯೋಧರಾಗ್ರದೆಡೆಯೊಳ್ ನಿಂದಿರ್ದ ಹಾರಂಗಳೋ
ಳಿಗಳೆಲ್ಲಂ ಪಱಿದೆಯ್ದೆ ಬಿಳ್ದ ತೆಱದಿಂ ಮುನ್ನಂ ಮಹಾನೀರಧಾ
ರೆಗಳಂ ಬೀೞುತಿರ್ದು ಪುಟ್ಟಿದಪುದೆಲ್ಲರ್ಗಮಾಶ್ಚರ್ಯಮಂ ೪೧

ಕಂದ : ಪಡುವಣ ಗಾಳಿಯ ಪೊಯ್ಲಿನ
ಕಡುಪಳನಡೆ ಕಾರಮೇಘಮೆಂಬವ ನಿಜದಿಂ
ಬಿಡದುದಿರ್ವ ಪೂಗಳೆಂಬಂ
ತೆಡೆಯುಡುಗದೆ ಬೀೞ್ದವಾಲಿಕಲ್ಗಳವೆತ್ತಂ ೪೨

ಸ್ಮರಚಾಪದೆ ಶರವರ್ಷಂ
ಸುರಿವಂತಿರೆ ನೀಲನೀರ[1]ಧ[1]ರದಿಂ ಬಿಡುತಂ
ದುರವಣಿಸಿ ಸುರಿದದೆತ್ತಂ
ಶರಷರ್ವಂ ಪುಟ್ಟುವಂತಿರುತ್ಕಳಿಕೌಘಂ ೪೩

ಮತ್ತೇಭವಿಕ್ರೀಡಿತ

ಧರಣೀಮಂಡಲವೆಂಬ ಭಾಜನಮಿದೆಲ್ಲಂ ತುಂಬಿತುಳ್ಕಾಡುವಂ
ತಿರೆ ಭೋರ್ಭೋರೆನುತುಂ ಸುಪೀವರಪಯೋಧಾರಾಪ್ರವಾಹಂಗಳಂ
ಪಿರಿದುಂ ವಾರಿದವೆಂಬ ಚಿಲ್ವ ಪಶುವಂ ಸೌಧಾಮಿನೀದಾಮದಿಂ
ಕೊರಡುಂ ನೀಳ್ದಿರಲಲ್ಲಿ ಕಟ್ಟಿ ಕಱೆದಂ ಕಾರೆಂಬ ಗೋಪಾಳಕಂ ೪೪

ಕಂದ: ಪಾಱುತ್ತಿರ್ದವು ಕೆಲವುಂ
ತೂಱುತ್ತಿರ್ದವು ಸಮಂತು ಕೆಲವುಂ ಕೆಲವುಂ
ಮಿಾಱುತ್ತಿರ್ದವು ಮೇರೆಯ
ನೇಱಿದ ಜಲಬಿಂದುಗಳ್ ಸಮಿಾರಣವಶದಿಂ ೪೫

ವಚನ: ಆಸಮಯದೊಳ್

ಉತ್ಪಲಮಾಲೆ

ಪಕ್ಕಮನೆಯ್ದೆ ಬಿರ್ಚಿ ಗಱಿಮಿಳ್ಳಿಸಿ ನೀಡಿ ಸುಕಂಠನಾಳಮಂ
ಮಿಕ್ಕು ಮಿಕ್ಕು ವಿಯತ್ತಳಕ್ಕೆ ನಿಜಚಂಚುಪುಟಂದೆಱೆದಾರ್ತಮೆಯ್ದೆ ಕೆ
ಯ್ಮಿಕ್ಕಿರೆ ತೋರ ಕಾರ್ಮುಗಿಲ ನೀರ್ವನಿಯಂ ತವೆಪೀರ್ದು ಪೀರ್ದು ತಾಂ
ಸೊಕ್ಕಿನಳುರ್ಕೆಯಿಂ ನಲಿದುದಂದುರುಸಾತಕಮೊಂದು ಚಾತಕಂ ೪೬

ಸ್ರಗ್ಧರೆ

ಒಂದೊಂದಂ ನೋಡಲೆಂದಾ ಚತುರುದಧಿಗಳೆಳ್ತಂದು ಭೂಭಾಗದೊಳ್ ತಾ
ವೊಂದಾಗಿರ್ದಂದದಿಂ ಕಾಳ್ಪುರಮೆಸಗಿದುದಲ್ಲಲ್ಲಿಗಂ ಕೊರ್ಬಿ ಪರ್ವ
ಲ್ಕಂದಾರಣ್ಯೇಭವೃಂದಂ ಜಲಗಜಚಯಮೆಂಬಂದದಿಂ ಪತ್ತನೌಘಂ
ಸಂದಂತದ್ವೀಪಮೆಂಬಂದದೆ ಮಳೆ ಕಱೆದತ್ತದ್ಭುತಂ ಪುಟ್ಟುವನ್ನಂ ೪೭

ವಚನ: ಇಂತಗ್ಗಳಮಾಗಿ ಕೌತೂಹಳಂ ಕೆಯ್ಮಿಗುವಂತು ಪೆರ್ಮಳೆಕೊಂಡು ಮಾಣಲೊಡಂ ಲೋಕಮೆಲ್ಲಮೇಕಾರ್ಣವಮಾದುದೆಂಬಂತೆ ಸುತ್ತಲುಂ ಬೆಳ್ಳಂ ಕವಿದು ಪರಕಲಿಸಿ ನೋಳ್ಪರ ಕಣ್ಗಳಿಂಗಗುರ್ವನೀವುತ್ತುಮಿರೆ

1 ದ (ಗಚ)

ಉತ್ಪಲಮಾಲೆ

ಕಾಳೆಗದಂತತಿಕ್ಷುಭಿತವಾಹಿನಿಯೊಳ್ ಪಿರಿದಾದ ಘೋಷಮಂ
ಮೇಳಿಸಿದತ್ತು ಗರ್ಭವತಿಯಂದದಿನೆಯ್ದೆ ರಜೋವಿಕಾರನಿ
ಮೂರ್ಛನಮಂ ಸಮಂತೊಡರಿಸಿತ್ತು ದುರಾತ್ಮಕನಂತೆ ಕೂಡೆ ಪರಿ
ಕಾಳಿಮನೆಯ್ದಿಸಿತ್ತಿಳೆಯೊಳೇಂ ಮಳೆಗಾಲಮುಳಂಬಮಾದುದೋ ೪೮

ಕಂದ : ಪ್ರತಿಕೂಲವೃತ್ತಿಯಂ ಮಾ
ಡುತುಮಭ್ಯಂತರಮನೆಯ್ದೆ ಕದಡುತ್ತುಂ ಮಾ
ಱುತಮಿರ್ದುದು ಮೇರೆಯನಂ
ದತಿಶಯದೆ ಜಡಾಶಯಂ ಜಡಾಶಯನನ್ನಂ ೪೯

ಉತ್ಪಲಮಾಲೆ

ನಟ್ಟೆಱಗುತ್ತುಮಿರ್ಪ ಕಡುಸೋನೆಯ ಧಾರೆಗಳಲ್ಲಿ ಸಿಲ್ಕಿ ಮೆ
ಯ್ಪಟ್ಟು ಕಱಾಗಿಪೋದನೊ ಸಿಡಿಲ್ದನಿಗೊಟ್ಟೊಡೆ ಕೇಳ್ದು ಬೆರ್ಚಿ ಕ
ಣ್ಗೆಟ್ಟು ರಥಾಗ್ರದಿಂ ನೆಲಕೆ ಬಿದ್ದನೊ ಹಾ ರವಿ ಕಾಣೆನೆಂದು ಬಾ
ಯ್ವಿಟ್ಟು ಪಲುಂಬುವಂತೆಸೆದುದಬ್ಜಿನಿ ಮಂಗಳಭೃಂಗರಾವದಿಂ ೫೦

ಪೂಗಳ ಗೊಂಚಲಿಂ ಪುದಿದ ಜಾದಿಗಳೊಳ್ ನಲಿದಾಡಿ ಪೂತ ಪು
ನ್ನಾಗದ ಬಂಡನುಂಡು ಕುಮುದಂಗಳೆಸಳ್ಗಳ ಪಾಸಿನಲ್ಲಿ ಚೆ
ಲ್ವಾಗಿಯೆ ಕುಳ್ಳಿರ್ದಳಿಸಧೂಮೃದುಗೀತಮನಾಲಿಸುತ್ತದೇಂ
ರಾಗಿಸಿದತ್ತೊ ತುಂಬಿಗಳ ಪಿಂಡು ಕರಂ ನೆಲೆಗೊಂಡ ಸೌಖ್ಯದಿಂ ೫೧

ಚಂಪಕಮಾಲೆ

ಅಱಸಿದೆವಿನ್ನೆಗಂ ಬಿಡದೆ ಕಾಣದೆ ನಿಮ್ಮನದೆಲ್ಲಿಯುಂ ಮನಂ
ಮಱುಗಿದುದೆಂದು ತಾಯೆನಿಪ ವಾರಿಗೆ ಮುದ್ದಿಸಿ ತಮ್ಮ ದಾಹಮಂ
ನೋಱಿಯಿಡುವಂತೆ ಟಱ್ರ ಟಱಟಱ್ರ ಟಟಱ್ರ ಟಟಱ್ರ ಟಱ್ರಯೆಂ
ದೊಱಲುತುಮಿರ್ದುದಾಗಳಧಿಕಂ ಸಲಿಲಾಶಯಭೇಕಶಾಬಕಂ ೫೨

ಉತ್ಪಲಮಾಲೆ

ಕಾಮನ ಬಿಲ್ಲಿನೊಳ್ ತೊಡರ್ದುದಂ ಶರಮಂ ಬಿಡದೆಚ್ಚು ಗೆಲ್ದನೀ
ಭೂಮಿಯೊಳುಳ್ಳರಂ ಮದನನೆಂದು ಜಯೋತ್ಸವಮಾದುದೆಂಬಿನಂ
ವ್ಯೋಮದೊಳೆಯ್ದೆ ಮಿಂಚು ಗುಡಿ ಬದ್ದವಣಂ ಮೊಳಗಾಗಿಸುತ್ತಲು
ದ್ದಾಮಮೆನಿಪ್ಪ ಸಂಭ್ರಮಮನಾಂತು ವಿಘೂರ್ಣಿಸುತಿರ್ದುದಾಕ್ಷಣಂ ೫೩

ವಚನ : ಬಳಿಯಂ ಪಡುವಣ ಪವಮಾನಪರಿಪ್ರೇರಣಾಪ್ರಾಬಲ್ಯವಶದಿಂ ಪಯೋಧರಪ್ರಸರಂ ಪರೆದು ಪಾಱಿಪೋಗಲೊಡಂ ಪಳಚ್ಚನೆ ಬಿಸಿಲೊಳ್ ಪೊಳೆದು ದೆಸೆಗಳತಿವಿಶದಂಗಳಾಗೆ

ಮಹಾಸ್ರಗ್ಧರೆ

ಕಡುಸೀತಂ ಪತ್ರಿ ಸರ್ವಾಂಗದೊಳುದಲನಕಂ ಬೆನ್ನೊಳಂ ತುಂಬೆ ತನ್ನೊ
ಳ್ದೊದೆಂಬೊಳ್ಪಾಲಾಗ್ರಕಂ ಪತಿಸಿದವೊಲಿರೆ ಸಂಕೋಚಮುಂ ತಾಳ್ದಿ ತಗ್ಗಿ
ರ್ದೊಡಲುಂ ತಂತಮ್ಮೊಳೊಂದೊಂದಡಸಿಡುಕುಱಿಱೊಳೊತ್ತೊತ್ತುಮುಂ ಸಾರ್ದು ಮತ್ತಂ
ನಡುಗುತ್ತುಂ ಬಿಂದು ಮೆಯ್ಯಂ ಬಿದಿರ್ದು ಮೃಗಮೃಗೀಸಂಕುಳಂ ಪೋಯ್ತುದೆತ್ತಂ ೫೪

ಚಂಪಕಮಾಲೆ

ಮಱಿಗಳನಪ್ಪಿಕೊಂಡು ಪೊಱಮಟ್ಟುದು ಕೋಡಗೆಯೋಳಿಪೋಳಲಿಂ
ತುಱುಗಿದ ಕೂದಲಂ ಬಿದಿರ್ದು ಜೊಂಪಿಸುತುಂ ಪೊಱಮಟ್ಟುದೆಯ್ದೆ ಕು
ಕ್ಕುಱಿಸಿ ದಲಿರ್ದ ಪಕ್ಕರಡಿಯುಂ ಮೆಳೆಯಿಂ ಕಟವಾಯ ನಕ್ಕುತುಂ
ಕಿಱುವುಲಿ ಸುರ್ಬುಗೊಂಡ ಪೊದಱಿಂ ಪೊಱಮಟ್ಟುದು ಮೆಲ್ಲನಾಕ್ಷಣಂ ೫೫

ಪೊಸಪೊನಲೊತ್ತಿಬಂದು ಪುಗೆ ಪುತ್ತದ ಬಾಯೊಳಮಲ್ಲಿ ಪಾವುಗಳ್
ಬಸಮುಳಿದಿಕ್ಕೆಲಕ್ಕೆ ಬಿಡದವ್ವಳಿಸುತ್ತವು ಮೇಗೆ ಪಾಯ್ದು ಲಂ
ಘಿಸಿ ಪೊಱಮಟ್ಟುಬಂದು ಸಲೆ ಭೊಸ್ಸನೆ ಭೊಸ್ಸನೆ ಸುಯ್ದು ಬಳ್ದದೆ
ನ್ಮುಸುಮೆನುತಂ ಕಡಂಗಿ ಪೆಡೆಯೆತ್ತಿ ದಲಾಡುತುಮಿರ್ದವರ್ಥಿಯಿಂ ೫೬.

ಕಂದ: ಕರಿಯೂಥಂ ನಿಜಕರಪು
ಷ್ಕರದಿಂದಂ ತುಂಬಿ ತೆಗೆದು ಪೊಸಪೊಸನೀರಂ
ಕರಿಣೀಯೂಥದ ಕರಪು
ಷ್ಕರದೊಳ್ ಪೂತ್ಕರಿಸೆ ಚಲ್ಲಿ ನಲಿದವು ತಮ್ಮೊಳ್ ೫೭

ಮಹಾಸ್ರಗ್ಧರೆ

ಎಳವುಲ್ಲಂ ಮೇದು ಮುಂಗಾಲ್ಗಡಿಯೆನೆ ಬಿರಿವನ್ನಂ ಕರಂ ಬೀಗಿ ಬೆನ್ನಂ
ತಿಳಿನೀರಂ ಪೀರ್ದು ಕೊರ್ಬುಬ್ಬರಿಸಿ ಸುರಿಯೆ ಪಾಲ್ಕೆಚ್ಚಲಿಂದೂಡಿ ವತ್ಸಂ
ಗಿಳೆಯೊಳ್ ನಿಂದಿರ್ದುದೆತ್ತಂ ವನಚರಮಹಿಷೀರಾಜಿ ಮೆಲ್ಕೊತ್ತುತುಂ ಕ
ಣ್ಗಳನರ್ಧಂಮುಚ್ಚಿ ಸಾರ್ತಂದುಗೆ ನೊರೆ ಕಟವಾಯಿಂದಮುಳ್ಳಾಡೆ ಬಾಲಂ ೫೮

ಕಂದ: ಮಲ್ಲಿಗೆಯ ಪೂವಿನಂಬಂ
ಫುಲ್ಲಶರಂ ತೊಟ್ಟನೋಡಿ ವಿರಹಿಗಳೆನುತಂ
ಸೋಲಿಪ ತೆಱದಿಂ ಸೋಗೆಗ
ಳೆಲ್ಲಂ ಕೇಗಿದವು ಕೆದಱಿ ಕಡುವೀಲಿಗಳಂ ೫೯

ವಚನ: ಇಂತತಿ ಪ್ರಬಳವಾಗಿ ಬಂದಳವಿಗಳೆದು ಕಱಿಿದು ಪೂಣ್ದ ಕಾರ್ಗಾಲದ ಪೆರ್ಮೞಿಯ ಕೋಳಾಹಳಮಂ ಕಂಡು ಕೌತುಕಮುತ್ತು ಕೊಂಡಾಡಿ ನುಡಿಯುತ್ತುಮಿರ್ದ ಮಹಾಸೇನ ಮಹಾಜನದಯಶಿಖರಿಶಿಖರಮುಖರಮುಖಶೇಖರೀಭೂತಖರಮಯೂಖನೆಂಬಂತೆ ಪ್ರಾಸಾದಶಿಖರಸಂಸ್ಥಿತಸಭಾಮಂಡಳಮಧ್ಯದೊಳ್ ಕುಳ್ಳಿರ್ದು ದಿಶಾಶೋಭಾವಳೋಕನಂಗೆಯ್ಯುತ್ತುಮಿರ್ಪಿನಂ ಪೂರ್ವದಿಗ್ಭಾಗದಲ್ಲಿ

ಚಂಪಕಮಾಲೆ

ಘನಸಮಯಂ ದಲೆಂಬ ಸತಿ ಬಂದೊಡಮಾಗಸಮೆಂಬ ಲಕ್ಷ್ಮಿ ತ
ನ್ನನುಪಮಮಾಪ ಪೀವರಪಯೋಧರಮಂಡಳಮಧ್ಯದಲ್ಲಿ ಪಾ
ವನತರ ಪಂಚರತ್ನಮಯಹಾರಮನಿಕ್ಕಿದಳೆಂಬ ಮಾಳ್ಕೆಯಿಂ
ಕನದುರುಶಕ್ರಚಾಪಮಭಿರಂಜಿಸಿದತ್ತು ವಿಚಿತ್ರವರ್ಣದಿಂ ೬೦

ವಚನ: ಅಂತಿಂದ್ರಚಾಪಮಂದಂಬಡೆದು ಥಳಥಳಿಸಿ ಪೊಳೆಯುತ್ತುಮಿರಲದಂ ಕಂಡು ನರೇಂದ್ರಕುಂಜರಂ ಮನಂಗೊಂಡು ಮತ್ತಮದಱ ಚೆಲ್ವಿಂಗೆ ಮೆಚ್ಚಿಮೆಚ್ಚಿಯವತಂಸಭಾರದಿನೋಸರಮಾದಂತೆ ತಲೆದೂಗುವ ವಿಳಾಸಂ ಮೆಱೆಯಲೆಮಗೊಡದೆ ಕಡುತವಕದಿಂದದಂ ನಡೆನೋಡುವಾಗಳ್

ಮತ್ತೇಭವಿಕ್ರೀಡಿತ

ಧನಮುಂ ಜವ್ವನಮುಂ ಸುಖಾನುಭವಮುಂ ಸಂಪತ್ತಿಯುಂ ಮೂರ್ತಿಯುಂ
ಮನುಜರ್ಗೆಯ್ದವು ನೋಡೆನೋಡೆ ಕಿಡುಗುಂತಿಂತೆಂದು ತೋರ್ಪಂದದಿಂ
ಘನದೇವೇಂದ್ರಶರಾಸನಂ ನೃಪತಿ ನೋಡಲ್ ನೋಡಲಾ ವ್ಯೋಮದ
ಲ್ಲಿನಿತುಂ ನಿಲ್ಲದೆ ಪಾಱಿಪೋಗಿ ಬಯಲಾಗಿರ್ದತ್ತು ನಿಶ್ಯೋಭಕಂ ೬೧

ಚಂಪಕಮಾಲೆ

ಕರಗಿದುದೀಗಳೀಗಳೆ ಸುರೇಂದ್ರಶರಾಸನಮಯ್ಯೊ ಅಯ್ಯೋ ಮುಂ
ಜಿರಸಿದ ಚೆಲ್ವಿನೊಡ್ಡು ಬಯಲಾದುದು ರಾಜ್ಯವಿಭೂತಿಯೊಡ್ಡುಮಾ
ಪರಿಯೊಳೆ ನೋಡೆನೋಡೆ ಬಯಲಾಗದೆ ಮಾಣದಿದೆಂದು ನಾಡೆಯುಂ
ನರಪತಿ ಚಿತ್ತದೊಳ್ ನಿಱಿಸಿದಂ ನೆಲೆಗೊಂಡ ಮಹಾವಿರಕ್ತಿಯುಂ ೬೨

ವಚನ: ಇಂತು ಸಂಸಾರಶರೀರಭೋಗನಿರ್ವಿಣ್ಣನಾ ರಾಜಾಧಿರಾಜಂ ಪರಮವೈರಾಗ್ಯಸೌಭಾಗ್ಯ ಸಮಾಕ್ರಾಂತಸ್ವಾಂತನಾಗಿ ತನ್ನಂತರಂಗದೊಳಿಂತೆಂದಂ

ಉತ್ಪಲಮಾಲೆ

ಇನ್ನೆವರಂ ದುರಿಂದ್ರಿಯಸುಖಂಗಳ ಸೇವನೆಯಿಂದೆ ಸೊಕ್ಕಿ ಮ
ತ್ತೆನ್ನಯ ಲೇಸನಿಂತಱಿಯದಿರ್ದೆನುದಾರತನೂಜನಪ್ಪದ
ತ್ಯುನ್ನತವಿಕ್ರಮೈಕನಿಳಯಂ ಖಳಸಂಸರಣಕ್ಕೆ ಪೇಸದಾ
ನಿನ್ನುಮಿರಲ್ಕಯೋಗ್ಯಮದಱಿಂ ತೊಱೆವೆಂ ವಿಷಯಾಭಿಲಾಷೆಯಂ ೬೩

*

ಕಂದ : ತನುವೆನ್ನದು ಧನವೆನ್ನದು
ವನಿತಾಚಯಮೆನ್ನದೆಂಬವಂ ಕಡುಮೂರ್ಖಂ
ತನುವೆನ್ನದು ಧನವೆನ್ನದು
ವನಿತಾಚಯಮಲ್ಲದೆಂಬವಂ ಕಡುಜಾಣಂ ೬೪

ಚಂಪಕಮಾಲೆ

ಕೆಡುವೊಡಲಿಂಗಿದಕ್ಕೆ ಪಡೆದೆನ್ನದಿದೆಂಬ ವಿಮೋಹಭಾವದಿಂ
ದುಡಿಸಿಯುಮೂಡಿಯುಂ ತೊಡಿಸಿಯುಂ ಪೊರೆದೋವುತುಮಿರ್ಪ ಮೂಢರೆ
ಯ್ದ್ದಡಸಿದ ದೋಷಕಾರಣದೆ ಶೂಲಮನೇಱುವವಂಗೆ ತುಯ್ಯಲಂ
ಬಡಿಸಿರದೂಡಿ ಮೋಹಿಸುವ ದುರ್ಮನುಜಂಗೆಣೆಯಾಗದಿರ್ಪನೇ ೬೫

ಮತ್ತೇಭವಿಕ್ರೀಡಿತ

ಬಲದೊಳ್ ಕಿಚ್ಚಿಡದಲ್ಲಿ ರಕ್ಕಸನತಿಕ್ರೂರಾಂತಕಂ ಮಧ್ಯದೊಳ್
ನೆಲಸಿರ್ದುಗ್ರತೆ ಮತ್ತೆ ಮುಪ್ಪುರಿಯದಾಯ್ತೆಂಬಂದದಿಂದಂ ಜವಂ
ಕೊಲುತಿರ್ಪಂ ಜಗಮೆಲ್ಲಮಂ ದಲನಿಶಂ ಕೈಹೇಸದಿಂದಾವನೀ
ನೆಲದಲ್ಲಿಂ ನೆರೆಯರ್ ಕೊಲಲ್ಕೆ ಪಿರಿದುಂ ಹಿಂಸಾಪಮಂ ಕೊಲ್ಲದಂ ೬೬

ಶಾರ್ದೂಲವಿಕ್ರೀಡಿತ

ಎಂತುಂ ನೋಳ್ಪಡತೀವದುಃಖದೊದವಿಂ ಬಕ್ಕುಂ ಧನಂ ಬಂದೊಡಂ
ಸಂತಂ ನಿಲ್ಲದು ಸಿಂದೊಡಂ ಪುಡಗಿರಲ್ಕೊಂದುಗ್ರಹಂ ಪೊರ್ದಿ ಮ
ತ್ತಂತುಂ ತಾಂ ಕೊಡದಿರ್ಪುದಿರ್ದೊಡಮವಂಗಕ್ಕಾರ್ತಮೆಯ್ವಾರ್ತದಿಂ
ಸಂತಾಪಂ ದೊರೆಕೊಂಡು ದುರ್ಗತಿಯೊಳಾಳ್ಗಿಂತಾಗಿ ಕಷ್ಟಂ ಧನಂ ೬೭

ಉತ್ಪಲಮಾಲೆ

ಈ ಜಗಮೆಂಬ ಪೆರ್ಮಡುವಿನೊಳ್ ನೆಱತೀವಿದ ಧರ್ಮಮೆಂಬ ಭೂ
ಯೋಜಲದಲ್ಲಿ ಸಂತಸದಿನಾಡುತುಮಿರ್ದ ಶರೀರಮೀನಕ
ವ್ರಾಜಮನಂಗನಾನಿಕರಮೆಂಬುರುಜಾಲಮನೆಯ್ದೆ ಬೀಸಿ ಜೀ
ತೋಜಪುಳಿಂದಕಂ ತೆಗೆದು ತಾಂ ಸುಡುವಂ ರತಿಯೆಂಬ ಕಿಚ್ಚಿನೊಳ್ ೬೮

---

* ಮಹಾಸೇನ ಮಹಾರಾಜನ ವೈರಾಗ್ಯದ ಠಾವು (ಗ)

ಚಂಪಕಮಾಲೆ

ಪರಿಕಿಸೆ ರಾಜ್ಯಲಕ್ಷ್ಮಿ ಕಡುಕಷ್ಟೆ ಸಹೋದರರಲ್ಲಿ ಮಿತ್ರರೊಳ್
ಬೆರಸಿದ ತಂದೆಮಕ್ಕಳೊಳಗಿಕ್ಕಿ ಪರಸ್ಪರವೈರಭಾವಮಂ
ನೆರೆಯಿಸಿಯುಂ ವಿನಾಶದೊಳಮೆಲ್ಲಿಯುಂ ನಿಲ್ಲದೆ ಸುತ್ತುತಿರ್ಪಳಾ
ಮರುಳಿಗೆ ಕೂರ್ಪ ಭೂಮಿವರನೆಗ್ಗರೊಳಗ್ಗಳನಾಗದಿರ್ಪನೇ ೯೯

ಸಿರಿ ಸುರಚಾಪದಂತೆ ಕರಿಗಳ್ ಮುಗಿಲೊಡ್ಡುಗಳಂತೆ ವಾಜಿಗಳ್
ನೆರವಿಯ ಮಂಜಿನಂತೆ ಮಿಗೆಪಾಱುವ ಪಕ್ಕಿಗಳಂತೆ ಬಂಟರುಂ
ಬೆರಸಿದ ನಂಟರುಂ ಮಯಿಮೆಯುಂ ಕಡುಗಾಳಿಯವೊಲ್ ವಿಚಾರಿಸ
ಲ್ಕುರುತರರಾಜ್ಯಸಂಪದಮಿದಭ್ರದವೊಲ್ ಬಯಲಾಗಿ ತೋಱುಗುಂ ೧೦೦

ವಚನ : ಇಂತಾ ಮೂರ್ಧಾಭಿಷಿಕ್ತಂ ಸಂಸಾರಸ್ವರೂಪಮಂ ನಿಜಸ್ವಾಂತದೊಳಭಿಚಿಂತಿಸಿ ಪ್ರಾಜ್ಯಸಾಮ್ರಾಜ್ಯಸುಖವಿರಕ್ತಿ ಸಮಾಸಕ್ತನುಂ ಪರಿಪೂಜ್ಯತಪೋರಾಜ್ಯಸುಖಾನುರಕ್ತಿಪ್ರವ್ಯಕ್ತನುಮಾಗಿ ಪರಿಚ್ಛೇದಿಸಿ ಸಭೆಯುಮನಭಿವರ್ಜಿಸಿ ಸಿಂಹಾಸನದಿನೆಳ್ದು ಪೋಗಿ ಸಂಧ್ಯಾಸಮಯ ಸಮಾರಭ್ಯಮಾಣ ಬಂಧುಜಿನದೇವಾರ್ಚನಾ ಪ್ರಬಂಧಸಂಬಂಧವಿನಿತ್ಯನಿತ್ಯನಿಯಮಕ್ರಿಯಾವ್ಯಾಪಾರಮನೊಡರ್ಚಿ ಬಳಿಯಮನಲ್ಪತರ ಮರಾಳಿಕಾತೂಳಪರಿಕಲ್ಪಿತ ತಳ್ಪತಳದೊಳೊಯ್ಯನೆ ಮೆಯ್ಯನೀಡಾಡಲೊಡಂ

ಕಂದ : ಪರಮವೈರಾಗ್ಯಚಿಂತಾ
ತರುಣಿಯುಮನಮರ್ದಪ್ಪಿಕೊಂಡು ಬಿಡದಿರ್ದೊಡೆ ಮ
ತ್ಸರದಿಂದೆಂಬಂತೆ ವಿಭಾ
ವರಿಯೊಳ್ ನಿದ್ರಾವಧೂಟಿ ಪೊರ್ದಳ್ ನೃಪನಂ ೧೦೧

ಮತ್ತೇಭವಿಕ್ರೀಡಿತ

ಪೊಸಬೀಡಾರದೊಳಿರ್ದ ಬಟ್ಟಗನವೊಲ್ ಮೋಹಾಭಿವೇಶೋದಯಂ
ವಸುಧಾಧೀಶನ ಚಿತ್ತದಲ್ಲಿ ಕಿಱಿದುಂ ಮೆಯ್ದೋಱುತಿಲ್ಲಾಗಿ ಪೋ
ಗಿಸಿದಂ ಸಾರದನಾಗದಂದಿನಿರುಳಂ ಪಾಸಿಂದಮೆಳ್ದಂ ದಲಾ
ಲಿಸುತುಂ ಮಂಗಳಪಾಠಕಪ್ರಕರಮೋದುತ್ತಿರ್ದ ಪದ್ಯಂಗಳಂ ೧೦೨

ವಚನ : ಮತ್ತಂ ನಿತ್ಯಂ ಪ್ರಾತಃಕಾಲದೊಳವಶ್ಯಂ ಕರಣೀಯಮಾದರ್ಹತ್ಪರಮೇಶ್ವರ ಪೂಜಾವಿಧಾನ ಗುರುಪಾದಾರ್ಚನಸ್ವಾಧ್ಯಾಯ ಸಂಯಮತಪಸ್ಸತ್ಪಾತ್ರದಾನಲಕ್ಷಣ ಷಟ್ಕರ್ಮಮಂ ನಿರ್ವಹಿಸಿದನಂತರಮಾ ಪ್ರತಾಪರಾಜಂ ಮುನ್ನಮೆಂತು ಯುವರಾಜಂಗೆ ಶೃಂಗಾರವತೀದೇವಿಯ ಕರಗ್ರಹಣಮಂ ಮಾಡಿಸಿದನಂತೆ ತಾನುಮಾತಂಗೆ ಮೇದಿನಿಯ ಕರಗ್ರಹಣಂಗೆಯಿಸುವ ಕಜ್ಜದುಜ್ಜಗಂ ಮನದೊಳ್ಪೆಟ್ಟುವೆರ್ಚಿ

ಉತ್ಪಲಮಾಲೆ

ಇಟ್ಟ ಕಿರೀಟಕೋಟಿಘಟಿತಸ್ಫುಟರತ್ನಮರೀಚಿ ಮೇಲೆ ನೇ
ರ್ಪಟ್ಟರುಣಾತಪತ್ರಕಮನೆತ್ತಿದವೋಲಭಿರಂಜಿಸುತ್ತಿರಲ್
ತೊಟ್ಟ ವಿಮೌಕ್ತಿಕಾಭರಣ ಪೀವರಕಾಂತಿ ಕವಲ್ತು ಸುತ್ತಲುಂ
ದಟ್ಟಮದಾಗಿ ತೋಱಿ ನೃಪನೋಲಗಸಾಲೆಗೆ ಬಂದನಾಕ್ಷಣಂ ೭೩

ವಚನ: ಅಂತಾ ಮಹಾಸೇನ ಮಹಾರಾಜಂ ಸರ್ವಾವಸರಸಮಯಮಾದಭಿನವ ಶೋಭಾವಿಭವ ಭಾಭಾಸ್ಯಮಾನ ಸಭಾಮಂಡಪಕ್ಕೆ ದಂಡವಾಸಿಕಪುರಸ್ಸರಂ ಬಂದೊಳಗಂ ಪೊಕ್ಕು ಗರಿಷ್ಠಪ್ರತಿಷ್ಠಾಧಿಷ್ಠಿತ ನಿಖಿಳವಿಷ್ಟಪಾಧೀಶ್ವರ ಪ್ರಸಿದ್ಧಾನೇಕಮಕುಟಬದ್ಧ ಮಹಾಮಕುಟವರ್ಧನಪ್ರಧಾನ ಪರಿಜನ ಬಂಧುಜನೇಷ್ಟಜನಪರಿವೇಷ್ಟಿತನುಮನುಳತರ ಮಣಿಗಣಸಮುಪಜುಷ್ಟನಿಷ್ಟಪ್ರಾಷ್ಟಪದಸಮಯ ವಿಶಿಷ್ಟಸಿಂಹವಿಷ್ಟನಿವಿಷ್ಟನಾಗಿ

ಕಂದ: ಎನ್ನ ಸಾಮ್ರಾಜ್ಯದುರು ಸೌ
ಖ್ಯೋನ್ನತಿಗಿದೆ ಸೀಮೆಯೆಂದು ತೋಱುವ ತೆಱದಿಂ
ಹೊನ್ನ ಸೀಗುರಿಗಳಿಂದಂ
ಚೆನ್ನಂಬಡೆದರಸು ಚೋದ್ಯಮಂ ಪುಟ್ಟಿಸಿದಂ ೭೪

ವಚನ: ಆ ಮಹಾರಾಜಂ ತನ್ನಯ ಮಗನಪ್ಪ ಧರ್ಮನಾಥಕುಮಾರನಂ ಬರ ವೇಳ್ದು ಕಟ್ಟಿಗೆಕಾಱರನಟ್ಟುವುದುಮವರ್ ಪೋಗಿ ಕರೆಯೆ

ಮಹಾಸ್ರಗ್ಧರೆ

ಪಸರಂಬೆತ್ತಿರ್ದ ಸೂಕ್ಷ್ಮಚ್ಛವಿಳಗು ಪೊದೆದ ದೇವಾಂಗವಸ್ತ್ರಂಗಳೊಳ್ ವ್ಯಾ
ಪಿಸಿ ಸುತ್ತಂ ತೀವೆ ರಂಗಂಬಡೆದು ಹಳದಿಯೆಂಬೊಂದು ಸಂದೇಹಮಂ ಪು
ಟ್ಟಿಸುತುಂ ಕೌತೂಹಳಕ್ಕಂಡೆಡೆಯೆನಿಪಮಱಿಂದೊಪ್ಪುತುಂ ಬಂದು ಪೊಕ್ಕಂ
ಪೊಸತಾದಾಸ್ಥಾನಮಂ ನೂತನಮಣಿಸದಳಂಕಾರಸಾರಂ ಕುಮಾರಂ ೭೫

ವಚನ: ಅಂತುಬಂದ ಧರ್ಮನಾಥಕುಮಾರಂಗೆ ಸಭೆಯೆಲ್ಲಮಿದಿರೆಳ್ದು ಕೆಯ್ಗಳಂ ಮುಗಿದು ವಿನಯವೃತ್ತಿಯುಂ ಮೆಱೆವುದುಮಾತಂ ತನ್ಮಧ್ಯಸ್ಥಿತ ಸಿಂಹಾಸನಮನಲಂಕರಿಸಿ ಪ್ರಮುದಮಾಗಳಾನಂದಜಳಲುಭಿತ ವಿಲೋಚನನಾಗಿ

ಮತ್ತೇಭವಿಕ್ರೀಡಿತ

ಧರಣೀಪಾಳಕನಾ ಕುಮಾರಕನ ವಕ್ತ್ರಾಲೋಕನಂಗೆಯ್ದು ಮೋ
ಹರಸಾರ್ದ್ರೀಕೃತವಾಕ್ಯದಿಂ ನುಡಿದನಂದಿಂತೆಂದೆಲೇದೇವ ಪೀ
ವರಭೂರಕ್ಷಣದಕ್ಷದಕ್ಷಿಣಭುಜಾದಂಡ ಪ್ರಚಂಡಪ್ರಭೋ
ದ್ಧುರ ನಿನ್ನನ್ನನಿರುತ್ತಿರಲ್ ಭವದೊಳಾಳ್ ತಾನಿರ್ದದೇಂ ತಕ್ಕುದೇ ೭೬

ಕಂದ : ಪಡೆದೆಂ ನೊಸಲೊಳ್ ಕಣ್ಣಂ
ಪಡೆದಂತಿರೆ ನಿನ್ನನಖಿಳಜನಪೂಜಿತನಂ
ಕಡುಪಿಂದೆ ತಂದೆಯಿಚ್ಛೆಯ
ನೊಡರಿಸಿಯನುಕೂಲನಪ್ಪವಂ ಸತ್ಪುತ್ರಂ ೭೮

ಪತನವುನಾಗಿಸದುನ್ನತ
ಗತಿಗೊಯ್ವುದಱಿಂದಪತ್ಯಮೆಂಬೀ ಪೆಸರಂ
ಮತಿಸಂತರಿಟ್ಟರೀ ಸಂ
ಸೃತಿಯೊಳ್ ಪತಿಸುವುದಪತ್ಯ ನಿನಗುಚಿತಮೆ ಪೇಳ್ ೭೯

ಸ್ರಗ್ಧರೆ
ನಿನ್ನಿಂದಾದೆಂ ಕೃತಾರ್ಥಂ ತ್ರಿಜಗದೊಳಿಸೆದತ್ತೆನ್ನ ಕೀರ್ತಿಪ್ರಭಾವಂ
ನಿನ್ನಿಂ ನಿನ್ನಿಂದಮಿಾಗಳ್ ಪಡೆದೆನಖಿಳಧರ್ಮಾರ್ಥಕಾಮಂಗಳಂ ಮ
ತ್ತಿನ್ನುಂ ಮನ್ಮಾನಸಂ ಮೋಕ್ಷದ ಸುಖಪದಮುಂ ಕಾಂಕ್ಷಿಸುತ್ತಿರ್ದುದಾದಂ
ಸನ್ನುತ್ಯಾದೀಕ್ಷೆಯಿಂದಲ್ಲದೆ ಫಲಿಸದದಕ್ಕಾಗು ನೀಂ ಮತ್ಸಹಾಯಂ ೮೦

ಉತ್ಪಲಮಾಲೆ
ನೂತನರಾಜನೀತಿಗಳಮೆಲ್ಲಮನೋದುವುದೊಲ್ದು ಬಾಲ್ಯದೊಳ್
ಪ್ರೀತಿಯಿನೆಯ್ದೆ ಸೇವಿಸುವುದೊಪ್ಪುವ ಜವ್ವನದಲ್ಲಿ ರಾಜ್ಯಸೌ
ಖ್ಯಾತತಭೋಗಮಂ ನೆಱೆಯೆ ಮುಪ್ಪಿನೊಳಂ ತಱಿಸಂದು ಮಾಳ್ಪುದು
ಖ್ಯಾತಮೆನಿಪ್ಪ ಸತ್ತಪಮನಿಂತಿದು ವರ್ತನೆ ಭೂಪರಪ್ಪರಾ ೮೧

ನಮ್ಮ ಕುಲಕ್ರಮಂಬಿಡಿದು ಬಂದ ಪುರಾತನ ಭೂಪರಪ್ಪರೀ
ಸಮ್ಮತದಲ್ಲಿ ವರ್ತಿಸಿದರಾನುಮದಂ ಸಲೆಮಿಾಱಿ ಬಂದೊಡೆಂ
ದಂ ಮಹಿಯಲ್ಲಿ ಹಾಸ್ಯರಸಭಾಜನನಾಗದೆ ಮಾಣೆನೀ ನಿಮಿ
ತ್ತಂ ಮನಮಿಾಕ್ಷಣಂ ಬಿಡದಪೇಕ್ಷಿಸುತಿರ್ದುದು ಜೈನದೀಕ್ಷೆಯಂ ೮೨

ಕಂದ : ಸಕಳಸಾಮ್ರಾಜ್ಯಭಾರ
ಪ್ರಕರ್ಷದಿಂದೆನ್ನ ಬಾಹುಪರಿಘಂ ಕಡುದುಃ
ಖಕಳಿತಮಾಗಿರ್ದಧಿಕಂ
ಪ್ರಕಟಿಸುತಿರ್ದಪುದುಮಿಾಗಳೆನ್ನೊಳ್ ನೋವಂ ೮೩

ಮತ್ತೇಭವಿಕ್ರೀಡಿತ
ವಸುಧಾಭಾರಮನೊಪ್ಪುಗೊಂಡು ಘನದೋರ್ದಂಡಾಗ್ರದೊಳ್ ತಾಳ್ದಿ ಮಾ
ಣಿಸಿ ನೋವಂ ನಿಲಿಸೆನ್ನನುತ್ತಮತಪಸ್ಸಾಮ್ರಾಜ್ಯದೊಳ್ ಕೂಡೆ ಸಾ
ಧಿಸುವೀ ದಾರುಣಕರ್ಮಕಂಟಕರ ಬೇರಂ ಕಿಳ್ತು ಮತ್ತೆತ್ತಿ ಭೋ
ಗಿಸುತಿರ್ಪೆಂ ಕೆಡದಿರ್ಪ ಮುಕ್ತಿಸುಖಮಂ ನಶ್ಯತ್ಪರಾಪೇಕ್ಷಮಂ ೮೪

ಎನಗೆಂತೆನ್ನಯ ತಂದೆ ಮುನ್ನಮಖಿಳಕ್ಷೋಣೀಮಹಾಭಾರಮಂ
ಮನವೊಲ್ದಿತ್ತು ತಪೋವನಕ್ಕೆ ನಡೆದಂ ಮತ್ತಂತೆ ನೀನೆನ್ನ ಮೇ
ದಿನಿಯತ್ಯುನ್ನತಭಾರಮಂ ಧರಿಸಿ ರುಂದ್ರಾನಂದದಿಂದಂ ತಪೋ
ವನಕೆನ್ನಂ ಕಳಿಪಿಂತು ಪಾಲಿಸು ಕುಲಾಯಾತಕ್ರಮಾಭಾರಮಂ ೮೫

ವಚನ : ಎಂದು ನುಡಿದ ತಪೋಲಕ್ಷ್ಮೀವಕ್ಷಸ್ಥಲಾಲಿಂಗನಸಮಾಕಾಂಕ್ಷಾಪರಿಲಕ್ಷಿತನೆ ರಾಜ್ಯಸುಖನಿಷ್ಕಾಂಕ್ಷವ್ಯಾಹಾರಚಾತುರ್ಯಮಂ ಕೇಳ್ದು ಕುಮಾರಂ ಕಾರ್ಮುಗಿಲ ಕಳಗರ್ಜನೆಯಂ ಕೇಳ್ದ ಮರಾಳದಂತೆ ಕಳವಳಿದು ದರಹಾಸವಿಳಾಸಪರಿಸ್ಫುರಣಸ್ಮೇರಚಾರುವದನಾರವಿಂದನಾಗಿ ಭೂರಿವಿನಯದಿಂ ನಯಂಬಡೆದ ಮಧುರಗಭೀರವಿರಾವದಿಂದಿಂತೆಂದಂ

ಚಂಪಕಮಾಲೆ

ಕೆಡದ ವಿಶೇಷಮುಕ್ತಿಸುಖಸೇವನೆಗಾಟಿಸಿ ಸತ್ತ್ವಸಂಗಳೊಳ್
ತೊಡರ್ದ ಮುನೀಷೆಯಿಂ ತೃಣಸಮಾನಮಿದೆಂದು ಸಮಸ್ತರಾಜ್ಯಮಂ
ಕೆಡುವುದನೊಪ್ಪುಗೊಟ್ಟೆನಗೆ ಪೋದಪೆನೆಂಬುದು ಲೇಸು ಪುತ್ರರೊಳ್
ಕಿಡುವುದನಿತ್ತು ದುಃಖಮನೊಡರ್ಚುವುದುಂ ಪಿತೃಗಳ್ಗೆ ಯೋಗ್ಯಮೇ ೮೬

ಉತ್ಪಲಮಾಲೆ

ತಂದೆಗಳಂತೆ ಮಕ್ಕಳುಗಳಾಚರಿಸಲ್ ನೆಱೆವೇಳ್ಕುಮಾ ನಿಮಿ
ತ್ತಂ ದಮಯುಕ್ತ ನಿಮ್ಮೊಡನೆ ಸಾಧಿಸೆನಕ್ಷಯಮೋಕ್ಷಸೌಖ್ಯಮಂ
ಸೌಂದರಜೈನದೀಕ್ಷೆಯನದಲ್ಲದೆ ಬೇಱಿಳಿರಾಜ್ಯಭಾರದೊಳ್
ಸಂದು ಸಮಂತು ಸೇದೆವಡುತಿರ್ಪುದು ಕಜ್ಜಮದಲ್ತು ಭೂಪತೀ ೮೭

ವಚನ : ಇಂತು ನುಡಿದ ಕುಮಾರಶಿರೋಮಣಿಯ ನಿರೀಹಸಮುದೀರಣಮಂ ಕೇಳ್ದು ಧಾರಿಣೀರಮಣಂ ಮನಂದಣಿದು ಮತ್ತಮಿಂತೆಂದಂ

ಮತ್ತೇಭವಿಕ್ರೀಡಿತ

ಪೊರೆಯಂ ಪೊತ್ತು ಕೊರಲ್ ಕರಂ ಕುಸಿದು ಪೋಗುತ್ತಿರ್ದ ತನ್ನಿಷ್ಟನಂ
ಮಱುಗುತ್ತೀಕ್ಷಿಸಿ ನಂಟನಪ್ಪವನುದಾಸೀನತ್ವಮಂ ಮಾಡದಾ
ಪೊರೆಯಂ ತಾಳ್ದುವನೆಂತದಂತದು ಜನಕಂ ಪೊತ್ತಿರ್ದ ಭೂಭಾರಮಂ
ನೆಱೆದಾಶ್ಮೋದ್ಭವನಾನದಿರ್ದೊಡಮಂ ಸತ್ಪುತ್ರನೆಂತಪ್ಪನೋ ೮೮

ವಚನ : ಎನೆ ಕುಮಾರನದಕ್ಕಿಂತೆಂದಂ

ಚಂಪಕಮಾಲೆ

ಎಲೆ ನರನಾಥ ನೀಂ ತಳೆದ ಭಾರಮನಾಂ ತಳೆಯಲ್ಕೆ ಶಕ್ತನೇ
ನೆಲನಿದನೆಲ್ಲಮಂ ನಮದ ದಿಕ್ಕರಿ ಮಾಣದೆ ಪೊತ್ತು ನಿಲ್ವವೊಲ್
ಕಳಭಮುಮೆತ್ತಿಪೊತ್ತು ನಿಲಲಾರ್ತಪುದೇ ಪಿರಿದಾದ ಲೀಲೆಯಿಂ
ನಲಿನವನಲ್ಲಿ ಭಾರಮುಮನರ್ಪಿಸೆ ದುಃಖಿತನಾಗದಿರ್ಪನೇ ೮೯

ಕಂದ: ಇಳೆಗೀಶ ನಿನ್ನ ರಾಜ್ಯಮ
ನೊಳಕೊಳಲಾಂ ಬಾಳಕಂ ಸಮರ್ಥನೆ ಜಗದೊಳ್
ಕುಲನದಿಗಳ ಜಳಭರಮಂ
ಜಳನಿಧಿಯೊಳಕೊಳ್ವ ತೆಱದೆ ಕೊಳನಾಂತಪುದೇ ೯೦

ವಚನ: ಎನಲರಸನಾ ಯುವರಾಜಂಗಿಂತೆಂದನನಂತವೀರ್ಯನುಂ ಚರಮಾಂಗನುಮಪ್ಪ ನಿನಗೆ ಧಾರಿಣೀಧರಣಂ ಭಾರಮಲ್ತಿದು ನಿನ್ನ ವಿನಯವೃತ್ತಿಗುಚಿತಮಪ್ಪುದಾದೊಡಂ

ಕಂದ: ಸಿರಿಯುಂ ಕಿಱಿಯನುಮೆಂಬೀ
ಪರಿಭೇದಂ ಹೇತುದಲ್ತು ನೆಱೆರಾಜ್ಯೋ (?)
ದ್ಧರಣಕ್ಕೆ ನೀನೆ ಕಿಱಿದುಂ
ಪಿರಿದೆಂಬುದು ಯುಕ್ತಮಲ್ತು ಚಿಂತಾಮಣಿಯುಂ ೯೧

ಅನುರಾಗದೇಳ್ಗೆ ಸರಸಿಜ
ವನಕ್ಕೆ ದಿನಪತಿಯಿನಲ್ಲದಕ್ಕುಮೆ ಪೆಱರಿಂ
ಜನನಿಚಯಕ್ಕನುರಾಗಂ
ಜಿನಪತಿ ನಿನ್ನಿಂದಮಲ್ಲದಕ್ಕುಮೆ ಪೆಱರಿಂ ೯೨

ವಚನ: ಆವಾಮಧೂಕಂ ನಯಸಂಪಾದಕವಾಕ್ಯಮಂ ನುಡಿದು ಮತ್ತಂ ತನ್ನಿಯಾಮುಕವಚನದಿಂದಿಂತೆಂದಂ

ಶಾರ್ದೂಲವಿಕ್ರೀಡಿತ

ಮಕ್ಕಳ್ಗಿತ್ತು ಸಮಸ್ತರಾಜ್ಯಪದಮಂ ಕೊಳ್ವರ್ ತಪೋರಾಜ್ಯಮಂ
ತಕ್ಕಿಂ ಮುನ್ನಿನ ಭೂಮಿಪರ್ ಬಿಡದೆ ನಮ್ಮಿಕ್ಷ್ವಾಕುವಂಶೋದ್ಭವರ್
ಮಿಕ್ಕೀ ಪದ್ಧತಿಗಾಗಿ ನಿನ್ನ ನೆರೆಯಲ್ವೇಡಣ್ಣಯೆನ್ನಾಣೆ ಮ
ದ್ವಾಕ್ಯೋಲ್ಲಂಘನಮಲ್ತು ಯುಕ್ತಮುದಱಿಂ ಕೈಕೊಳ್ ಧರಾಭಾರಮಂ ೯೩

ವಚನ: ಎಂದು ಮುಖ್ಯಮಾತಿಂಗೆಡೆಗುಡದಂತೆ ತಾನುಮೊಡಂಬಡಿಸಿ ಧರ್ಮನಾಥಕುಮಾರಂ ರಾಜ್ಯಪದಸ್ಥನಪ್ಪಂತುಮಾಡಿ ಹರ್ಷಪ್ರಕರ್ಷದೊಳ್ ಕೂಡಿ ಬಳಿಯಂ ಕನಕಪುಷ್ಪೂರ್ಣರಥಾರಾಮರ್ಷಂ ತನ್ನಿಕ್ಷ್ಟೆಲದೊಳ್ ಕುಳ್ಳಿರ್ದ ಪಾರ್ಥಿವಪುತ್ರರ ನಗೆಮೊಗಂಗಳಂ ನೋಡಿ ನಿಮಗೀತಂ ಜಗತ್ರಿತಯೈಕಮಿತ್ರನುಂ ಜ್ಞಾನತ್ರಯಪಾತ್ರನುಂ ಕೋಪಪ್ರಸಾದಸ್ವತಂತ್ರನುಂ ಪರಿರಂಜಿತನಿಜತಂತ್ರನುಮಪ್ಪುದು ಕಾರಣಮೆನ್ನಿಂ ಮಿಗಿಲಾಗಿ ಸಮರ್ಮಡಿ ಮಹೀಮೋಹಭೂಮಿಯುಮಂ ಕುಲಸ್ವಾಮಿಯುಮಾಗಲ್ ತಕ್ಕಂ ನೀವೀತನನೋಲಯಿಸಿಯಿಹಿಕಾಮುತ್ರಿಕ ಸುಖಾನುಭೋಗಭಾಗಿಗಳಾಗಿಮೆಂದು ನುಡಿಯುತ್ತುಮಿರೆ

ಚಂಪಕಮಾಲೆ

ವಿದಿತಜಿನಾಗಮಸ್ಥಿತಿಕರುಸ್ನತ ಚಾರುಚರಿತ್ರಸಂಪದಾ
ಸ್ಪದರೆನಿಸನ್ವಯಾಗತಮಹಾಪುರುಷರ್ ನಡೆತಂದು ದೀಕ್ಷೆಗೊ
ಳ್ಳದನೆಸಗಿರ್ದ ಕಾರಣದೆ ನೀವೆ ಕೃತಾರ್ಥರೆನುತ್ತುಮುದ್ಭವ
ಪ್ರದಕರವಾಕ್ಯದಿಂ ನೃಪನ ಚಿತ್ತವಿಕಾಸಮನುಂಟುಮಾಡಿದರ್ ೯೪

ಉತ್ಪಲಮಾಲೆ

ಉತ್ತಮಜೈನದೀಕ್ಷೆ ದೊರೆಕೊಳ್ಗು ಕರಂ ಲಘುಕರ್ಮಿಯಾದ ರ
ತ್ನತ್ರಯಭೂಷಣಂಬಡೆದ ನಿಮ್ಮವೊಲಿರ್ದ ಸುಭವ್ಯರಿಂಗೆ ತ
ನ್ಮಾತ್ರಮೆನಿಸಿಪ್ಪರಿಂಗೆ ದೊರೆಕೊಳ್ಳದದೀ ಬಗೆಯಿಂದೆ ನೀವು ಲೋ
ಕತ್ರಯಪೂಜ್ಯರಾದಿರೆನುತಂ ಸಲೆ ಸಂಸ್ತುತಿಗೆಯ್ದರಾಕ್ಷಣಂ ೯೫

ವಚನ: ಇಂತರಸನೊಡರ್ಚಿದ ತಪಶ್ಚರಣೋದ್ಯಕ್ಕಾನುಕೂಲ್ಯಮನಲರ್ಚುವ ನುಡಿಯುಂ ಮನಮನುಲ್ಲಾಸಿಸುತ್ತುಮಿರ್ದ ಕುಲವೃದ್ಧರಂ ಕರ್ಪೂರತಾಂಬೂಲಸಮರ್ಪಣದಿಂ ತಣಿಸಿಸಿ ಬೀಳ್ಕೊಟ್ಟು ಕಳಿಪಿ ತದನಂತರಂ

ಮಹಾಸ್ರಗ್ಧರೆ

ಅವನೀಚಕ್ರಾಧಿನಾಥಂ ಕರಸಿ ಬೆಸಸಿದಂ ತನ್ನ ಸೇನಾಧಿಪಂಗೊ
ಪ್ಪುವಿನಂ ಶ್ರೀಧರ್ಮನಾಥಸ್ಥಿರತರವರ ಸಾಮ್ರಾಜ್ಯಪಟ್ಟಾಭಿಷೇಕೋ
ತ್ಸವಮಂ ಮಾಡಲ್ಕೆ ನೀಂ ನಿರ್ಮಿಸು ನಿರತಿಶಯಸ್ಥೂಳಮಾಣಿಕ್ಯಜಾಳ
ಚ್ಛವಿಭಾಸ್ವನ್ಮಂಡಪಸ್ಥಾನಮನಭಿನವ ಕೌಶಲ್ಯಸಾಕಲ್ಯದಿಂದಂ ೯೬

ವಚನ: ಎಂದು ನಿರೂಪಂಗೆಯ್ವುದುಮಾತಂ ಪೋಗಿ ರಾಜಮಂದಿರವರ್ತಿಮಾ ಮಧ್ಯಮಾದೊಂದು ಮಧ್ಯಪ್ರದೇಶದೊಳ್ ಕರುಮಾಡದ ಮುಂದೆ

ಮತ್ತೇಭವಿಕ್ರೀಡಿತ

ಸಿರಿದುಂ ಚಿತ್ರಿಸಿದಿಂದ್ರನೀಲಮಯ ನಾನಾಭಿತ್ತಿಯಿಂ ತೋರಣೋ
ತ್ಕರದಿಂದಂ ಕಳಶಂಗಳಿಂ ಜಯಪತಾಕಾನೀಕದಿಂ ರಂಜಿತಂ
ವರಮುಕ್ತಾಫಳಮಾಳಿಕಾಕೃತಮಹಾಲಂಭೂಷ ಸಂಭೂಷಿತಂ
ಕರಮೊಪ್ಪಿತ್ತು ಚಮೂವರಾಭಿರಚಿತಂ ಪಟ್ಟಾಭಿಷೇಕಸ್ಥಳಂ ೯೭

ಕಳಶಂ ಕನ್ನಡಿ ಸುಪ್ರತಿಷ್ಠೆ ಗುಡಿ ಭೃಂಗಾರಂ ಮಹಾಚಾಮರಂ
ವಿಳಸದ್ವೀಜನಮೆಯ್ದೆ ಬೆಳ್ಗೊಡೆಯುಮೆಂಬೀ ಚೆಲ್ವನಾದಷ್ಟಮಂ
ಗಳಮುಂ ತಾಳ್ದಿದ ವೇದಿಕಾವಳೆಯದಿಂ ಮಾಣಿಕ್ಯಸತ್ತೋರಣೋ
ಜ್ಜ್ವಳ ನಾನಾವಿಧ ಶಸ್ತವಸ್ತುಚಯದಿಂ ಕಣ್ಗೊಂಡುದಾ ಮಂಡಪಂ ೯೮

ಕಂದ : ಕನದುರುಮಣಿಮಯಮಂಡಪ
ಮನುಪಮಸಾಮ್ರಾಜ್ಯಲಕ್ಷ್ಮಿಯೊಳ್ ಮದುವೆಯ ಶೋ
ಭನಮಂಡಪಮೆಂಬಂತಿರೆ
ಜನಕ್ಕೆ ಮೋಹನಮನಿತ್ತುದಚ್ಚರಿಯಿಂದಂ ೯೯

ವಚನ : ಇಂತು ಗೀರ್ವಾಣವಿಗುರ್ವಿತಮೆಂಬಂತಿರಿಂಬುವೆತ್ತು ನಿರ್ಮಿಸಿದ ಸಾಮ್ರಾಜ್ಯಪಟ್ಟಾಭಿಷೇಕಮಂಡಪದ ನಟ್ಟನಡುವೆ ಪಟ್ಟಮಯಬಂಧಸಮಯಸಮುಚಿತ ಮಂಗಳೋಪಕರಣಂಗಳಿಂ ತುಂಬಿದ ಮಧುರಮಾದ ಗೋಮೇಧವೇದೀವಳೆಯದ ಮೇಲೆ

ಕಂದ : ಪಟ್ಟದ ಸಿಂಹಾಸನಮಳ
ವಟ್ಟದು ಪರಿಪರಿಯ ಮಾಣಿಕದ ಪೊಳೆಪಿಂದಂ
ದಿಟ್ಟಿಗೆ ಕಡುಚೋಜಿಗಮಂ
ಪುಟ್ಟಿಸುತುಂ ಬಹಳಕಿರಣಜಾಳನಿಮಗ್ನಂ ೧೦೦

ಅದಱ ನಾಲ್ದೆಸೆಯೊಳಂ ಚೆ
ಲ್ವೊದವಿದ ಸಲತೆಱದ ಪಲ್ಲವಂಗಳ ಬಳಸಿಂ
ಪುದಿದ ಘನಚ್ಛತ್ರಂಗಳ್
ಸದಮಳಮುಕ್ತಾಮಯಂಗಳೆಸೆದವು ನಾಲ್ಕುಂ ೧೦೧

ನವಕುಳಿಶಕುಳವಿಕೀಲಿತ
ಸುವರ್ಣಮಯದಂಡಮಂಡಿತಸ್ಥೂಳಮಹಾ
ಧವಳತರ ಚಾರುಚಾಮರ
ನಿವಹಂ ಪೊಳೆಯುತ್ತುಮಿರ್ದುದದಱಿದ್ದೆಸೆಯೊಳ್ ೧೦೨

ಕೆಲದಲ್ಲಿ ಖಳ್ಗರತ್ನಂ
ನಿಲಿಸಿರ್ದುದು ಪೂಜೆವೆರಸು ಥಳಥಳಿಸುತ್ತುಂ
ಸಲೆವಿಜಯಲಕ್ಷ್ಮಿ ಕನ್ನೆ
ಯ್ದಲಮಾಲೆಯನಿರಿಸಿದಂತೆ ಕುಮರಂಗೀಯಲ್ ೧೦೩

ವಚನ : ಆ ಸಿಂಹವಿಷ್ಟರದ ಮುಂದಣ ಸನ್ನಿಕೃಷ್ಟದೆಡೆಯೊಳ್ ಮಂಜುಳಮಾಗಿ ಪುಂಜಿಸಿದ ಚಂಚತ್ಪಂಚರತ್ನಚಯೋಪರಿ ಪ್ರಪಂಚಿತ ಸ್ವಸ್ತಿಕವಿಸ್ತಾರಸಂಸ್ಥಾಪಿತ ಪಾಂಡುರ ಪಂಚತಂತುಪರಿವೇಷ್ಟನ ನಿಯಂತ್ರಿತ ಸರ್ವೌಷಧಿಸಾರಸಮ್ಮಿಶ್ರಿತ ಸರಿತ್ಸಲಿಲಸಂಪೂರ್ಣ ಮಣಿದರ್ಪಣಸಮರ್ಪಣ ಸುಮನೋಮಹೀರುಹ ಸುಮನೋಮಾಲಾಸಮಾಲಂಬನಾದಿ ನಾನಾವಿಧ ರಚನಾವಿಶೇಷಪರಿಭೂಷಿತ ಚತುಃಕೋಣಕಳಶವಿಳಾಸ ಪರಿಕಳಿತವರ್ಣಿಜನಾಭಿನಂದ್ಯಮಾನ ಸೌವರ್ಣಪೂರ್ಣಕಳಶಂ ಮನಂಗೊಳಿಸುತ್ತುಮಿರೆ

ಕಂದ : ಬೆಳಗಿನ ಬಳಗಂ ಬಿಡವ
ಗ್ಗಳಿಸಿ ಕನಲ್ತಲ್ಲಿಗಲ್ಲಿಗಂ ಮಡುಗೊಂಡು
ಜ್ವಳಿಸುತ್ತುಮಿರ್ದುದದಱಕೂಳ್
ಮಳಿನಜನಗೆವೊಯ್ದು ಬೆಳಗನಲ್ಲಿರಿಸುವವೊಲ್ ೧೦೪

ವಚನ : ಇಂತು ಸ್ವಪಧಾನಮಾಗಿ ಸಂಗಳಿಸಿದ ನವ್ಯಮಾದ ಸಮುತ್ತುಂಗ ಮಂಗಳವಿಧಾನಮಸಂಗೀಕರಿಸಿದ ರಾಜ್ಯಾಭಿಷವಣಮಂಡಪಮಗುರ್ವಪಡೆಯೆ

ಚಂಪಕಮಾಲೆ

ನೆರೆದಧಿರಾಜರುಂ ಮಕುಟಬದ್ಧರುಮಾಪ್ತಜನಂಗಳುಂ ಮಹ
ತ್ತರರುಮಶೇಷ ಮಂಡಳಿಕರುಂ ನೃಪರುಂ ವರದಂಡನಾಥರುಂ
ಗುರುಗುಣರುಂ ಮಹಾಮಕುಟಬದ್ಧರುಮಾಶ್ರಿತರುಂ ಪ್ರಧಾನರುಂ
ವಿರಚಿಸಲೆಂದು ಬಂದರಿರಮಾ ಕುಮರಂಗುರುಪಟ್ಟಬಂಧಮಂ ೧೦೫

ವಚನ : ಇಂತು ಬಾಹತ್ತರನಿಯೋಗನಿಯುಕ್ತರೆಲ್ಲಂ ಕೂಡಿ ಬಂದು ಮೊತ್ತಂಗೊಂಡಲ್ಲಿ ತಿಂತಿಣಿವೋಗುತ್ತುಮಿರ್ಪುದುಮದಂ ಕೇಳ್ದು ಮಹಾಸೇನ ಮಹಾರಾಜನಾಸ್ಥಾನ ಮಂಡಪದಿಂದೇಳಲೊಡಂ

ಉತ್ಸಾಹ

ಒಡನೆ ತಡೆಯದೇಳ್ವ ಭಟರ ತೊಡರ ಕಡೆಯುದುಲಿಗಳಿಂ
ಬಿಡದೆ ಜಡಿದು ನುಡಿದು ನಿಲಿಪ ಪಡಿಯರುರುದ್ಘೋಷದಿಂ
ಪೊಡೆಯುಮಡರ್ದ ಸಿರಿಯ ಪೆಂಪನಡಿಗಡಿಗುಗ್ಗಡಿಸುವಂ
ದೆದೆವಿಡದೊಳಕೊಂಡುದಾಗಳದು ಸಡಗರದೇಳ್ಗೆಯಂ ೧೦೬

ವಚನ: ಇಂತು ಸೂರ್ಯಡಿಯಾಗಿ ಪೆರ್ಗಡೆವು ನಾಡೆಜಿತ್ರಯುನೆಲ್ಲರುಂ ಕೂಡಿಕೊಂಡು ಸೀಜಿಂ ನಿಜಭ-ಜನಿವಾಸಿಯಾದ ವಿಜಯಲಕ್ಷ್ಮಿಯುಂ ರಕ್ಷಿಸೆಂದು ಸಮರ್ಪಿಸುವಂತೆ ತನ್ನಯ ಬಲದ ಕೆಲದೊಳ್ ಬರುತ್ತಮಿರ್ದ ಧರ್ಮನಾಥಕುಮಾರನ ಕೆಯ್ಯಂ ಪಿಡಿದು ಪ್ರಾಲಿಯ ಪೇಲೆ ಕೆಂದಳಿರ ಗೊಂದಳಮುಂ ಪಸರಿಸುವಂತೆ ಪಳಿಕಿನ ನೆಲದೊಳ್ ಕೇಸಡಿಗಳ ಕೆಂಪಿನ ಸೊಂಪುಂ ಸಂಪಾದಿಸುತ್ತುಂ ನಡೆತಪ್ಪೆಡೆಯೊಳಿಡಬಲದಲ್ಲಿ ಪೊಸಪೊಸತಾದಮುತ್ತು ಮಾಣಿಕಂಗಳನೆಡೆಗೆಡೆಗೆ ತಡಂಗಲಿಸಿ ನಿಬಿಡಮಾಗಿ ಕೊಯಿದುಬೆಡಂಗುವಡೆದ ತೊಡವುಗಳಂ ತೊಟ್ಟು ನುಡಿದಿರ್ಪರ್ ಕೆಲಸಂಗಜಜಂಗಮಲತೆಗಳಂತೆ ಸ್ವಯ್ಯರಚನಾಸಜ್ಜೀಕೃತಮಜ್ಜನೋಪಕರಣದ್ರವ್ಯಂಗಳಂ ತರಿಸಿ ಕೆಲಂಬರ್ ಸಿತಂಬಿನಿಯರ್ ವನಲಕ್ಷ್ಮೀದೇವಿಯರೆಂಬಂತಿರೆಂಬುವೆತ್ತು ಜಂಬೀರ ಜಂಬೂ ನಾರಂಗ ನಾಳಿಕೇರ ಮಾತುಳಂಗ ಧವಳೇಕ್ಷುದಂಡ ಕ್ರಮುಕ ಮುಖ್ಯಫಳಕುಳಂಗಳಿಂ ತೋರ್ಕೆವೆತ್ತ ವಿಚಿತ್ರವಸ್ತ್ರಜಟಿಳೀಕೃತ ಪಟಳಿಕಾಪರಂಪರೆಗಳಂ ತಾಳ್ದಿ ಕೆಲಬರಬಲೆಯರ್ ಮಾಲ್ಯಾಂಗಮಂದಾರಶಾಖೆಗಳೆಂಬಿನಮನಲ್ಪತರ ಪುಷ್ಪಮಾಲಿಕಾಜಾಲಮನಪ್ಪುಕೆಯ್ದು ನೂಪುರಕಳಾಪಝಣಝಣಝಣತ್ಕಾರ ಸ್ವರೂಪಸಮಾಳಾಪಮೇಳಾಪದೊಡನೆ ನಿರೂಪಣಂಗೆಯ್ವಂತಿರ್ದ ಕಾಲ ಪಳಂಚಿನುಂಗುರಗಳಿಂಚರಂಗಳಿಂ ಭೂದೇವಿ ನಿಜಪತಿಯಪ್ಪ ಕುವರನ ಪುಣ್ಯಾದೇಳ್ಗೆಯುಂ ಪೊಗಳುತ್ತಮಿರ್ದಪಳೆಂಬಂತೆ ಬಗೆಗೊಳಿಸುತ್ತುಮಿರೆ ಗಡಣಿಸಿ ಮುಂದೆನಡೆಯಲಭಿನವ ವಿಭವದಿಂ ಮುತ್ತಿ ಚೌಕಪತ್ತಿಗೆಗಳ ತಣ್ಣೆಳಲೊಳಮುಚಳಿಸುವ ಪೊನ್ನಸೀಗುರಿಗಳ ಬಳಗಂಗಳಿಂದಳಂಕೃತನಾಗಿ ಬಂದು ತನ್ಮಂಡಪದೊಳಗೆ ಪೊಕ್ಕು

**ಮತ್ತೇಭವಿಕ್ರೀಡಿತ**

ವರಸಿಂಹಾಸನದಲ್ಲಿ ಕುಳ್ಳಿದನಧೀಶಂ ಮಂತ್ರಿಸಾಮಂತ ಮೌ
ಲಿ ರಸಾಧಾರಿಗಳೆಲ್ಲರುಂ ನೆಲಸಿದರ್ ಮತ್ತಂ ಸುವರ್ಣಾದ್ರಿಯುಂ
ಸಿರಿದುಂ ಸೇವಿಸಲೆಂದು ಬಂದ ಕುಲಶೈಲೌಘಂಗಳೆಂಬಂದದಿಂ
ಧರಿಸಿರ್ದತ್ತುರುಮಂಗಳೋಪಕರಣದ್ರವ್ಯಂಗಳಂ ಸ್ತ್ರೀಜನಂ ೧೦೭

ವಚನ: ಅಂತು ಚಂದ್ರಸೂರ್ಯರುಮೊಂದಾಗಿರ್ದಂದದಿಂದರಸನುಂ ಕುವರನುಮೊಂದಾಗಿ ಕುಳ್ಳಿರ್ದ ಸಮಯದೊಳ್ ಮೌಹೂರ್ತಿಕನೊರ್ವಂ ಬಂದು ದೇವಶುಭಮುಹೂರ್ತಮಾಸನ್ನಮಾದುದೆಂದು ಬಿನ್ನಪಂಗೆಯ್ವುದುಂ ಸಾರ್ವಭೌಮನನುಜ್ಞೆಯಿಂ ಕುಮಾರಂ ಸ್ನಪನಸ್ಥಳಕ್ಕೆ ಬಿಜಯಂಗೆಯ್ದು ಪಳಿಕಿನ ಫಳಕಮನಳಂಕರಿಸಿದಾಗಳ್

ಕಂದ: ಗುರುಜನಮುಮಾಪ್ತಜನಮುಂ
ಬೆರಸಿ ಧರಾಧೀಶನಂದು ಬಂದೆತ್ತಿದನು
ದ್ಧುರಪೂರ್ಣಕಳಶಮುಂ ಪೀ
ವರರಾಜ್ಯಶ್ರೀಗೆ ಕಳಶಮಿಡುವವೊಲಾದಂ ೧೦೮

ಉತ್ಪಲಮಾಲೆ

ಕೆಂದಳಿರ್ದೊಂಗಲೊಳ್ ಪುದಿದು ಕಣ್ಗೊಳಿಪೊಳ್ನಿಸಣ್ಣನಾಂತು ಜೆ
ಲ್ವೊಂದಿದ ಕಲ್ಪಭೂರುಹದೆರಳ್ತುದಿಕೊಂಬುಗಳೆಯ್ದೆ ಮುಟ್ಟೆ ಸೀ
ಳ್ದಂದದಿ ಭೂಪಬಾಹುಲತಿಕಾಗ್ರದ ಕೆಂದಳದಲ್ಲಿ ತೋರ್ಪ ಭಾ
ಸೌಂದರಶಾತಕುಂಭಕಳಶಂ ರಮಣೀಯತೆನೆತ್ತು ದಾಕ್ಷಣಂ ೧೦೯

ವಚನ : ಅಂತು ಪೊಂಗಳಶಮುಂ ನೆಗಪಿ

ಮಹಾಸ್ರಗ್ಧರೆ

ಪಲವುಂ ಛತ್ರಂಗಳಂ ತಾಳ್ದೊಸಗೆವಜಿಗಳುತ್ತಾಳಸಿರ್ಘೋಷಣಂ ಮಾಂ
ಗಳಿಕಾಶೀರ್ವಾದನಾದೋದಯದೊಡನೆ ಪುದುಂಗೊಂಡು ತೀವ್ರತ್ತಿರಲ್ ದಿ
ಕ್ಕುಳಮುಂ ರಾಜ್ಯಾಭಿಷೇಕೋತ್ಸವಮನೆಸಗಿದಂ ಧರ್ಮನಾಥಂಗೆ ಗಂಧಾ
ವಿಕನೀರಸ್ಫಾರಧಾರಾವಿರಳವಿಮಳಿನಾಪೂರಸಾರಂಗಳಿಂದಂ ೧೧೦

ಕಂದ : ಪತ್ತುನಖಕಾಂತಿಗಳಿನೊಂ|
ಭತ್ತುಮಹಾರತ್ನರುಚಿಗಳಿಂದುದಧಾರಾ
ವೃತ್ತಿ ಕಳಶಾಂಶುಬಿಂದಿ
ಪ್ಪತ್ತೊಂದನುರೂಪಮಾಗಿಯೆಜಗಿದುದಾಗಳ್ ೧೧೧

ಮೇರುಗಿರಿಶಿಖರಮುಂ ಚಂ
ದ್ರೋರುಕಳಾಮಾಳೆ ಬಳಸಿದಂದದೆ ಘನವಾ
ರ್ಧಾರಾಪೂರಂ ಬಂದು ಕು
ಮಾರನ ಮೆಯ್ಯಂ ಸಮಂತು ಬಳಸಿದುದಾದಂ ೧೧೨

ವಚನ : ಬಳಿಯಂ ವಿಳಾಸಿನೀಕುಳಂ ಕುಚಕಳಶನಿಗಳಿತವಿಳಾಸರಸವಿಶೇಷದೊಡನೊಡನೆ ಸಂಗಳಿಸಿದ ಪೊಂಗಳಸಂಗಳಿಂದುಗುತಪ್ಪ ಪರಿಮಳಜಳಧಾರೆಗಳಿನಭಿಷವಣಮಂ ಮಾಳ್ಪವಸರದೊಳ್

ಕಂದ : ಕಡೆಗಣ್ಣ ಕಾಂತಿಯುಂ ನೊಲೆ
ಯೆಡೆ ಚಳಿಸುವ ಮುತ್ತಿನೆಸೆವ ಹಾರಪ್ರಭೆಯುಂ
ಕಡುನೀರಧಾರೆಯುಂ ನೂ
ರ್ಮಡಿಯಾಗಿಯೆ ತುಂಬಿದತ್ತು ಕುಮರನ ಮೆಯ್ಯೊಳ್ ೧೧೩

ವಚನ : ಆ ಪೊತ್ತಿನೊಳ್

ಸ್ರಗ್ಧರೆ

ಮುನ್ನಂ ದೇವೇಂದ್ರಸತ್ಯಾದರದೊಳೆಸಗಿದಾಶ್ಚರ್ಯ ಜನ್ಮಾಭಿಷೇಕಂ
ಕೆನ್ನಂ ಸಾಮ್ರಾಜ್ಯಪಟ್ಟಾಭಿಷವಮುಮದೆ ಮತ್ತಿನ್ನವೇಕಂದು ಶೋಭಾ
ಚ್ಛನ್ನಾಶಾಕಾಮಿನೀಸಂತತಿಯುಮುರುನಭಶ್ರೀಯುಮುಂಪಟ್ಟಹಾಸಾ
ಸನ್ನಾಸ್ಯಂಬೆತ್ತವೊಲೊಪ್ಪಿದುದು ಕುಸುಮವೃಷ್ಟಿಧ್ವನಿಚ್ಛದ್ಮದಿಂದಂ ೧೪

ವಚನ : ತದನಂತರಮಲ್ಲಿಂ ಪೊಱಮಟ್ಟು ಪವಳದ ಪಾವುಗೆಯಂ ಮೆಟ್ಟಿಸಿಲ್ವುದು ಮಂಗದಟ್ಟಿಮುಸಿಕ್ಕಿ ನವ್ಯರಚನಾವಿಚಿತ್ರಿತದಿವ್ಯವಸ್ತ್ರಂಗಳನುಡಿಸಿಯುಂ ಮೆಯ್ವಣ್ಣದ ಬೆರಕೆವೆಳಗಿಂ ತಿಣ್ಣಂ ಕಾಣಿಕೆವೆತ್ತ ಪೊಸಪೊಸಮಾಣಿಕಂಗಳ ಜಾಣೇಱಿದ ಕೇವಣದಿಂದು ಜ್ಜ್ವಳಿಸುತ್ತುಮಿರ್ದ ಷೋಡಶಾಭರಣಂಗಳಂ ತೊಡಿಸಿಯುಂ ಗಳಸ್ಥಾನವಿಲುಳಿತ ಮಂದಾರ ಮಾಲಾಸಮಾಲಂಬನದೊಳೊಂದಿಸಿಯುಮಿಂತತಿಶಯಮಾಗೆಯ್ದೆ ಕೆಯ್ಗೆಯ್ದು ಕುಮಾರ ನನೊಡಗೊಂಡು ಬಂದು ಮಂಗಳವೇದಿಕಾಮಧ್ಯಮನಳಂಕರಿಸಿರ್ದ ಪಟ್ಟದ ಸಿಂಹಾಸನ ದೊಳ್ ಕುಳ್ಳಿರಿಸಿ ಪರಿಪರಿಯ ನವರತ್ನಂಗಳಾರತಿಗಳಂ ನಿವಾಳಿಸಿ ಪಟಳಿಕಾಪಟಲಕರಿ ಪುಂಜಿತ ಮಾತುಳಂಗ ನಾಳಿಕೇರಾದಿ ನಾನಾವಿಧ ಫಳಾವತರಣಮುಂ ನಿರ್ವರ್ತಿಸಿ

ಕಂದ : ಪೊಳೆವ ನವರತ್ನಪುಂಜಂ
ಗಳಿನೊಪ್ಪುವ ಮಾತುಳಂಗಫಳಮಂಜರಿಯಂ
ವಿಳಸತ್ಕುಮಾರರಚಿತಾಂ
ಜಳಿಪುಟದೊಳ್ ತುಂಬಿದಂ ಸುಮಂತ್ರೋಚ್ಚರಣಂ ೧೧೫

ಮತ್ತೇಭವಿಕ್ರೀಡಿತ

ದೆಸೆಯಂ ದಿಂಕಿಡಿಸುತ್ತಿರಲ್ ಬಹುವಿಧಾತೋದ್ಯತ್ತ್ರಣಾದಂ ವಿಘೂ
ರ್ಣಿಸೆ ವಿದ್ವಜ್ಜನಸಂಸ್ತವಧ್ವನಿಮಹಾಸಂಗೀತರಾವಂ ವಿರಾ
ಜಿಸೆ ಪೆರ್ಚುತ್ತಿರೆ ಪುಣ್ಯಪಾಠಕರವಂ ಪುತ್ರೋತ್ತಮಾಂಗಾಗ್ರದೊಳ್
ವಸುಧಾನಾಯಕನಿಕ್ಕಿದಂ ಮಕುಟಮಂ ದೇದೀಪ್ಯಮಾ[1]ನಾಂ[1]ಶುಮಂ ೧೧೬

ವಚನ : ಆ ಮಣಿಮಕುಟ ಶೋಭೆಗೆ ನೆಲಗಟ್ಟಂ ಕಟ್ಟುವಂತೆ

ಉತ್ಪಲಮಾಲೆ

ನೆಟ್ಟನೆ ರಾಜ್ಯಲಕ್ಷ್ಮಿಯ ವಶೀಕರಣಕ್ಕೊಲವಿಂದೆ ರಕ್ಷೆಯಂ
ಕಟ್ಟುವ ಮಾಳ್ಕೆಯಿಂ ವಿಭವವೆಂಬಮೃತಂ ನೆಲಸಲ್ಕೆ ಕಟ್ಟೆಯುಂ
ಕಟ್ಟುವ ಮಾಳ್ಕೆಯಿಂ ಕುಮಾರನುನ್ನತಚಾರುಲಲಾಟಪಟ್ಟದೊಳ್
ಕಟ್ಟಿದನಾ ನೃಪಂ ಪರಸುತುಂ ಚತುರರ್ಣವರಾಜ್ಯಪಟ್ಟಮಂ ೧೧೭

[1] ನಾ (ಗಚ)

ವಚನ: ಇಂತಾ ಮಹಾಸೇನಮಹಾರಾಜಂ ತನ್ನಯ ತನಯನಪ್ಪ ಧರ್ಮನಾಥ ಕುಮಾರಂಗೆ ಸಕಳಸಾಮ್ರಾಜ್ಯಪಟ್ಟಮಂ ಕಟ್ಟಿ

ಮಹಾಸ್ರಗ್ಧರೆ

ಸ್ಥಿರಮಕ್ಕೀ ಪಟ್ಟಮೀ ನಿನ್ನಯ ನೊಸಲೊಳಮೀ ನಿನ್ನ ದೋರ್ದಂಡದೊಳ್ ಸೀ
ಪರಧಾತ್ರೀಚಕ್ರಮೆಂದುಂ ನೆಲಸುಗೆ ಧವಳಚ್ಛತ್ರಮೀ ನಿನ್ನ ಮೌಳಿ
ಸ್ಫುರದುದ್ಯದ್ದೀಪ್ತಿಯಂ ಚಿತ್ರಿಸುಗೆ ತಡೆಯದಿಂತೆಂದು ಸತ್ಪುತ್ರನಂ ಬಂ
ಧುರತೇಜಃಪಾತ್ರನಂ ತಾನೊಸೆದು ಪರಸಿದಂ ಭೂಮಿಪಾಲತ್ರಿಣೇತ್ರಂ ೧೧೮

ನೆಲಸಂ ತಾಳಲ್ಕೆ ನೀಂ ನಿನ್ನಯ ವಿಜಯಭುಜಾದಂಡದೊಳ್ ಧರ್ಮನಾಥಾ
ಪಲಕಾಲಂ ಪೊತ್ತಿಕೊಂಡಿರ್ದುರಗಪತಿಗೆ ಭಾರಂ ಕರಂ ಸಿಂಗಿಸೋಕುಂ
ಬಳಿಯಂ ಪದ್ಮಾವತೀಸಂಗತಸುಖಭರಮಂ ಪೆತ್ತು ನಿಶ್ಚಿಂತಮಿರ್ಕುಂ
ಸಲೆಸಿದ್ರಾಮುದ್ರೆಯೊಳ್ಪಂಪಡೆದು ಕಮಠನಿರ್ಕುಂ ನಿರಾತಂಕದಿಂದಂ ೧೧೯

ವಚನ: ಇಂತೆಂದು ಪಲವಪ್ಪಾಶೀರ್ವಾದಂಗಳಿಂ ಪರಸಿ

ಕಂದ: ಪಟ್ಟದ ಕುದುರೆಯನೊಪ್ಪುವ
ಪಟ್ಟದ ಮದದಾನೆಯುಂ ಮಹಾಖಡ್ಗಮುಮಂ
ಪಟ್ಟದ ಗದ್ದಿಗೆಯುಂ ನೆಱೆ
ಕೊಟ್ಟಂ ಧವಳಾತಪತ್ರಮಂ ಚಾಮರಮಂ ೧೨೦

ನವರತ್ನದ ಭಂಡಾರಮ
ನವನೀಶ್ವರನಿತ್ತು ಮತ್ತೆ ಸದ್ಧರ್ಮಮನು
ತ್ಸವದಿಂ ಪ್ರತಿಪಾಲಿಸುತುಂ
ಭುವನಮನಾಳೆಂದು ತಂದೆ ಮೋಹದಿನುಸಿರ್ದಂ ೧೨೧

ಪರಿವಾರದ ಕೆಯ್ಯಂ ಪಿಡಿ
ದಿರದಿತ್ತಂ ಮಂತ್ರಿಮಂಡಳಿಕ ಹಿತಸಾಮಂ
ತರನಪ್ಪೈಸಿದನಾಪ್ತನಿ
ಕರಮಂ ಬಂಧುಗಳನಂದು ಕೈಲಡೆಗೊಟ್ಟಂ ೧೨೨

ಉತ್ಪಲಮಾಲೆ

ಮಾಳವಭೂಪನಂ ಬಿಡದೆ ಮನ್ನಿಸು ಗುರ್ಜರರಾಜನಿಚ್ಛೆಯಂ
ಪಾಲಿಸು ಕುಂತಳಕ್ಷಿತಿಪನಂ ಮಿಗೆ ಸಂತಯಿಸಿಂದ್ರಭೂಪನಂ
ಲಾಲಿಸು ಚೋಳಭೂವರನನೇಳಿಸದಿರ್ ಸಲಹೆಂದು ನಾಮುಮಂ
ಪೇಳಿಯೆ ಸುಟ್ಟಿತೋಱೆ ಕುವರಂಗುಸಿರ್ದಂ ಧರಣೀತಳಾಧಿಪಂ ೧೨೩

ಮುಂದೆ ಕರಂಗಳಂ ಮುಗಿದು ನಿಂದವನೀತನವಂತಿವಲ್ಲಭಂ
ಪಿಂದೆ ಸಿತಾತಪತ್ರಮನಿವಂ ಪಿಡಿದಂ ಮಗಧಾಧಿನಾಯಕಂ
ಸೌಂದರಚಾಮರಂಬಿಡಿದು ನಿಂದರಿವರ್ ಸಲೆ ಕೀರ ಕೇರಳರ್
ಬಂದವಧಾನಕಾಣಿಕೆಯನೆಂಬವನೀತನುಗಾತ್ರನೈಷಧಂ ೧೨೪

ಕಂದ: ಇವರಾದಿಯಾದ ನೆಲೆಂನಿ
ನ್ನವರಂ ಪೋಷಿಸುವುದೆಂಬ ತಂದೆಯ ನುಡಿ ಕಡು
ಸವಿಯಾದೊಡಮಾ ಕುವರನ
ಕಿವಿಗಿನಿಸುಂ ಸೊಗಸನಿತ್ತುದಿಲ್ಲಾ ಕ್ಷಣದೊಳ್ ೧೨೫

ವಚನ: ಇಂತು ಸಮಸ್ತಮುಮೊಪ್ಪುಗೊಟ್ಟ ಬಳಿಯಂ ಮಹಾಸೇನಮಹಾರಾಜಂ ತತ್ಸಮಯಕ್ಕುಚಿತಮಾದ ರಾಜನೀತಿಸಮಾಕಥನಾಭಿಮುಚ್ಯಮಾನಮಾನಸನಾಗಿ ಮತ್ತಮಿಂತೆಂದಂ

ಕಂದ: ಎಲೆ ಧರ್ಮನಾಥ ನೀನು
ಜ್ಜ್ವಳಬೋಧತ್ರಯಮನಾಂತೊಡಂ ಮಗನೆಂಬ
ಗ್ಗಳನುಂ ದೇವಳದೊಳೊಂದಿ
ನಲವಿಂದಂ ರಾಜನೀತಿಯಂ ನಿನಗುಸಿರ್ವೆಂ ೧೨೬

ದಿನಕರನ ಮುಂದೆ ದೀವಿಗೆ
ಯನೆ ತೋಱುವ ಮಾಳ್ಕೆಯಾದೊಡಂ ಕಿಱಿದಂ ಬ
ಲ್ಲನಿತಂ ಪೇಳ್ದಪೆನದು ಮ
ತ್ತೆನಸುಂ ಘನತೀಕ್ಷ್ಣಕ್ಕೆ ಕಾರಣಮಲ್ತೇ ೧೨೭

ವಚನ: ಅದೆಂತೆನೆ

ಮತ್ತೇಭವಿಕ್ರೀಡಿತ

ಅರಿಷಡ್ವರ್ಗ ಜಿಗೀಷುವಪ್ಪುದು ಲಸತ್ಪಂಚಾಂಗಮಂತ್ರಾದಿ ತ
ತ್ಪರನಾಗಿರ್ಪುದು ಸರ್ವಸಾಧನವಿಶೇಷಾಭ್ಯಾಸಿಯಾಗಿರ್ಪುದು
ದ್ಧುರಶಕ್ತಿತ್ರಯಧಾರಿಯಪ್ಪುದು ಮಹಾಸಪ್ತಾಂಗಸಂವರ್ಧನ
ಸ್ಥಿತನಾಗಿರ್ಪುದು ಸತ್ರಿವರ್ಗಧರನಾಗಿಂತಿರ್ಪುದು ಕ್ಷತ್ರಿಯಂ ೧೨೮

ಚಂಪಕಮಾಲೆ

ಪದುಳಿದನಪ್ಪುದೋಜೆವೆರಸಿರ್ಪುದು ಸಾಮವಿಭೇದದಾನದಂ
ಡದೊಳತಿವಿಜ್ಞನಪ್ಪುದು ಸುಶಿಕ್ಷಿತನಪ್ಪುದು ರಾಜನೀತಿಗಾ
ಸ್ಪದನೆನಿಸಿರ್ಪುದುನ್ನತವಿಚಾರವಿವೇಕ ನಿಧಾನನಪ್ಪುದು
ನ್ಮದಹರನಪ್ಪುದುದ್ಧನಮವೇದಿಯೆನಿಪ್ಪುದು ರಾಜನಪ್ಪನಂ ೧೨೯

ನುಡಿವುದು ಸತ್ಯಮಂ ಬಿಡದೆ ಬೇಡಿದರ್ಗೀವುದು [1]ಭಾ[1]ಗನುಂ ಮನಂ
ಗೆಡದಿಹುದೆಯ್ದೆ ಮುಟ್ಟಿದೆಡೆಯೊಳ್ ಮುಱಿವೊಕ್ಕರನೊಲ್ದು ಕಾಯ್ವುದಾಂ
ತೊಡೆ ಕದನಕ್ಕೊಡರ್ಚುವುದು ದಾನದ ಧರ್ಮದ ಶೀಲದೇಳ್ಗೆಯುಂ
ನಡಸುವುದೊಳ್ಗುಣಂಗಳನೆ ತಾಳ್ದುವುದಿಂತಿದು ರಾಜಲಕ್ಷಣಂ ೧೩೦

ವಿನಯಮನೆಯ್ದೆ ಮಾಳ್ಪುದಖಿಳಪ್ರಜೆಗಳ್ಗನುಯೋಗ್ಯಮಾಗಿಯಾ
ವಿನಯದಿನೆಲ್ಲಮಂ ಮಿಗೆ ಸುರಾಗಸಮಾಕುಳರಪ್ಪರಾ ಸುರಾ
ಗ ನಿಯತಿಯಿಂದಮಕ್ಕು ನಿನಗರ್ಥವಿಶೇಷದ ಲಾಭಮೆಂತು ವಾ
ರನಿಧಿಸುರಾಗಸಂಗತದಿನಿತ್ತುದು ಲಕ್ಷ್ಮಿಯನಶ್ವನಾಗಮುಂ ೧೩೧

*

ಸ್ರಗ್ಧರೆ

ತನ್ನೊಳ್ ಸಾಮ್ರಾಜ್ಯಮಿರ್ದುಂ ಪರನ ನೆಲಸನಾಕಾಂಕ್ಷಿಸುತ್ತಿರ್ಪ ಭೂಪಾ
ಲಂ ನಾಡೊಳ್ ನಾಡೆಯುಂ ಲಾಘವಮನೆ ಪಡೆಗುಂ ವಿಷ್ಣು ಮೂಲೋಕಮಂ ಸಂ
ಪನ್ನಂ ತಾಳ್ದಿರ್ದೊಡಂ ಕುಕ್ಷಿಯೊಳುೞಿ ಬಲಿಯಂ ಭೂಮಿಯಂ ಬೇಡುವಾಗಳ್
ಕೆನ್ನಂ ತಾನಾಗನೇ ವಾಮನ ಲಸದವತಾರಂ ಘನಾಕಾಂಕ್ಷೆ ಬೇಡೈ ೧೩೨

ಮಹಾಸ್ರಗ್ಧರೆ

ಸಿರಿದುಂ ಭಂಡಾರಮಂ ಸಂಗ್ರಹಿಸುವುದು ವಿಪತ್ಕಾಲದೊಳ್ ತನ್ನ ರಕ್ಷಾ
ಕರಣಾರ್ಥಂ ಕೋಶಮುಳ್ಳಂಬುಜವನಮನದೇನಾಕ್ರಮಂಗೆಯ್ಗುವೇ ಷ
ಟ್ಚರಣಂ ನಿಷ್ಕೋಶಮಾಗಿದ್ದರಳಿದುದಮನಾಕ್ರಾಮಣಂಗೆಯ್ದುವೊಲ್ ತ್ರ
ತ್ಪರಸಾರ್ಥಂ ಲೌಕಿಕಂ ಸಿದ್ಧ್ಯತಿ ನಧನ ವ್ಯತೀಯೆಂಬ ಸನ್ನೀತಿಯಿಂದಂ ೧೩೩

ಕಂದ : ಗುಣಿಯೆನಿಪ ಯೋಗ್ಯನಂ ಮ
ತ್ತೆಣಿಸದೆ ದುಷ್ಕಾರ್ಯದಲ್ಲಿ ಯೋಜಿಸುವರಸಂ
ಮಣಿಯಂ ಕಬ್ಬುನದೊಳ್ ಕೇ
ವಣಿಸುವನಂ ಪೋಲ್ಕು ಯುಕ್ತಿಶೂನ್ಯನೆನಿಕ್ಕುಂ ೧೩೪

ಮತ್ತೇಭವಿಕ್ರೀಡಿತ

ಪ್ರಜೆಯಂ ಪಾಲಿಸದಂ ಸ್ವಬಂಧುಚಯಮಂ ತನ್ನಂದದಿಂ ಮಾಡದಂ
ನಿಜಭೃತ್ಯೌಘಮನೆಯ್ದೆ ಪೋಷಿಸದವಂ ಷಾಡ್ಗುಣ್ಯಸಂಪತ್ತಿಸಂ
ಭಜನಂಗೆಯ್ಯದವಂ ಕೃತಜ್ಞತೆಗನಾಧಾರಂ ದಲಾಗಿರ್ಪವಂ
ವಿಜಯಶ್ರೀಪ್ರಿಯನಲ್ಲದಂ ನರಪನೆಂಬೀ ನಾಮಕೆಂತೊಪ್ಪುವಂ ೧೩೫

---

[1] ಚಾ (ಗ)

* ರಾಜನೀತಿ (ಗ)

ಮತ್ತೇಭವಿಕ್ರೀಡಿತ

ಧರೆಯಂ ರಾಜರನೇಕರಾಳ್ದೊಡಮುದಾರೊಂದಾಗಿಯುಂ ಪೋದುದಿ
ಲ್ಲೆರವಾಗಿರ್ದುದುಕಾರಣಂ ನೆಲಸಿನಿಂದಿರ್ದಲ್ಲಿಯೆಲ್ಲರ್ಗೆ ಬಂ
ಧುರಸೌಖ್ಯೋನ್ನತಿಯೆಂಬ ತತ್ಫಲಮನಿತ್ತಿಂತುಂ ದಿಶಾಭಾಗದೊಳ್
ಪರಿಪಂಥಿಪ್ರಜನಿರ್ಜಯೋರ್ಜಿತ ಮಹಾಪ್ರಖ್ಯಾತಿಯುಂ ಬಿತ್ತು ನೀಂ ೧೩೬

ವಚನ : ಇಂತೆಂದಸಂತರಾಜನೀತಿಕಥನದ ಸಮನಂತರಮರಸಂ ನಿರಂತರಿತ ಸಂತೋಷದಿಂದಶೇಷಮನೊಪ್ಪುಗೊಡುವುದುಂ

ಮಹಾಸ್ರಗ್ಧರೆ

ಪೊಱೆಯುಂ ಪೊತ್ತಿರ್ದುದಂ ತಂದಿಳಿಪಿದ ತೆಱದಿಂ ತನ್ನ ಸಾಮ್ರಾಜ್ಯಮಂ ನಾ
ಡೆಱೆಯಂ ಮುಂಕೊಟ್ಟು ಸಂಸಗ್ರಹದೊಳಖಿಳಮಂ ಬಿಟ್ಟು ನಿಶ್ಚಿಂತಮಿರ್ದಂ
ನೆಱೆತೇಜಂಬೆತ್ತು ಪುತ್ರಂ ಘನಪರಿಕರಮಂ ಕೂಡಿಕೊಂಡಿರ್ದು ಪೆರ್ಚಂ
ಮೆಱೆದಂ ಪೂರ್ವಾಹ್ಣದೊಳ್ ಮೂಡುವ ದಿನಕರನುಂ ಚಂದ್ರನುಂ ಕೂಡಿದನ್ನಂ ೧೩೭

ವಚನ : ಮತ್ತಂ ಪಟ್ಟಬದ್ಧೋತ್ಸವದೊಳತೀವಮುಖ್ಯಮಂಗಳಮಾದ ಜಿನಪೂಜೋತ್ಸವಮನಭಿಪ್ರಖ್ಯಾತಮಾಗಿಸಲ್ವೇಡಿ ವಸುಧಾನಾಯಕಂ ಸಕಳಪರಿವಾರಂಬೆರಸಿ ವಿಪುಳಕಿರಣಾವಳಿತಮಣಿತೋರಣಪೌಳಿಗಳಿಂ ರಮಣೀಯತೆವೆತ್ತ ವಿಚಿತ್ರಚೈತ್ಯಾಲಯಕ್ಕೆ ಬಂದೊಳಗಂ ಪುಗುವುದುಮಲ್ಲಿ

ಮತ್ತೇಭವಿಕ್ರೀಡಿತ

ಪೊಳೆವತ್ಯುಸ್ರಖರಸ್ರಮೂಖಚಿತಬಿಕಾಲೇಖಾವಲಿಜ್ಯೋತ್ಸ್ನಮಂ
ಗಳ ಮಾಣಿಕ್ಯಮಯಪ್ರದೀಪತತಿಗಳ್ ಚೆಲ್ವಾದವಲ್ಲಲ್ಲಿಗಂ
ಕಳಕಾಳಾಗರು ಧೂಪಧೂಮಲತಿಕಾದಿ ಶ್ಯಾಮಳಸ್ಫೂಳಸ
ತ್ಕಳಧೌತೋಜ್ವಳ ಪೀನಧೂಪಘಟಿಕಾಪೇಟಂಗಳುಂ ರಂಜಿಕುಂ ೧೩೮

ಕಂದ : ಸುರಭಿಮಳಯರುಹರಸಭೃತ
ಮರಕತಶುಕ್ತಿಗಳುಮಮಳಕಳಮಾಕ್ಷತಮುಂ
ಹರಿನೀಲದ ಕರಡಗೆಗಳು
ಮುಮಮರ ಮಂದಾರಮಾಲೆಗಳುಮಿರದೆಸೆಗುಂ ೧೩೯

ವಚನ : ಇಂತು ಮನಂಗೊಂಡ ಮಂಡಪದ ನಡುವೆ ಕುಳಸರಿದಮಳಸಲಿಲಸಮ್ಮಿಶ್ರೀಕೃತ ಕರ್ಪೂರರಜ ಬಹಳಕಾಂತಿದಂತುರಿತ ಚಂದ್ರಕಾಂತಕಾಂತಕಳಶಸಹಸ್ರಂಗಳ ವಿಳಾಸಮಂ ನೋಡುತ್ತುಂ ಹರ್ಷಪುಳಕಿತನರ್ಷನಾನಂದಬಾಷ್ಪಜಳವಿಲುಳಿತ ವಿಲೋಚನನಾಗಿ ದರ್ಶನಸ್ತವನಮಂ ವಿಸ್ತರಿಸಿ ಪಂಚಪರಮೇಷ್ಠಿಗಳ ಚರಣಕಮಳಂಗಳಿಂಗರ್ಘ್ಯಪಾದ್ಯಮನೆತ್ತಿ ಭೂರಿಕ್ಷೀರಸಂಭೃತಗಂಭೀರ ಶಾತಕುಂಭೀಯ ಶುಂಭದ್ಭೃಂಗಾರಮಂ ಪಿಡಿದು

ಉತ್ಪಲಮಾಲೆ

ಸರ್ಕರೆಯಿಂದಮಿಕ್ಷುರಸದಿಂದೆಳನೀರ್ಗಳಿನೊಳ್ಪು ಕೂಡೆ ಕೈ
ಮಿಕ್ಕೆ ಭಿರಂಜಿಸಿರ್ಪ ಪೊಸತುಪ್ಪದಿನೊಪ್ಪುವ ಪಾಲಧಾರೆಯಿಂ
ದುಕ್ಕುವ ಚೆಲ್ವು ಘಟ್ಟಿವೊಸರಿಂದಭಿಷೇಕಮನಂದುಮಾಡಿದಂ
ದಿಕ್ಕುಗಳದಲ್ಲಿ ಪಂಚವಿಧವಾದ್ಯರವಂ ಬಿಡದುಣ್ಮಿಪೊಣ್ಮಲುಂ ೧೪೦

ವಚನ : ಸಮನಂತರಂ

ಕಂದ : ಅಷ್ಟವಿಧದರ್ಚನೆಗಳಿಂ
ದಷ್ಟಮಹಾಪ್ರಾತಿಹಾರ್ಯಯುತನಂ ಹರ್ಷೋ
ತ್ಕೃಷ್ಟತೆಯಿಂದರ್ಚಿಸಿದಂ
ಶಿಷ್ಟಜನಂಬೆರಸಿ ಭವ್ಯಚೂಡಾರತ್ನಂ ೧೪೧

ವಚನ : ಇಂತು ಮಹಾಮಹಿಮೆಯಿಂ ಮಹೀತ್ರಯಮಹನೀಯ ಜಿನನಾಥಂಗಭಿಷೇಕ ಪೂಜೆಗಳಂ ಶಾಸ್ತ್ರಕ್ರಮಮನತಿಕ್ರಮಿಸದೆ ಮಾಡಿ ಪರಿಲಟಹನಿಟಿಳತಟಕುಟ್ಮಳಿತಾಂಜಳೀಪುಟಘಟನಾಪ್ರಕಟೀಕೃತವಿನಯವಿನಮಿತೋತ್ತಮಾಂಗಂ ಗಂಧೋದಕಸಿದ್ಧಶೇಷಾಕ್ಷತ ಸಮುಲಕ್ಷಿತ ಧಮ್ಮಿಲ್ಲಭಾರಸಮುಲ್ಲಸಿತಂ ಜಿನವರಚರಣಯುಗಳಪರಿಕಳಿತ ಮಳಯರುಹತಿಳಕವಿಳಸಿತ ವಿಕಚಮುಖಕಮಳಂ ಕ್ಷಿತಿಪತಿತಿಳಕನಾ ಬಸದಿಯ ಮೊಗಸಾಲೆಯೊಳಿಕ್ಕಿದ ಮುತ್ತಿನ ಗದ್ದಿಗೆಯ ಮೇಲೆ ಕುಮರಂಬೆರಸಿ ಕುಳ್ಳಿರ್ದು

ಕಂದ : ಲೋಕದೊಳಗುಳ್ಳ ಪಾತ್ರಾ
ನೀಕಂ ನೆಱೆಯದು ವಿಶಿಷ್ಟದಾನಕ್ಕೆನೆ ಭೂ
ಲೋಕಂ ಕೊಂಡಾಡುವಿನಂ
ಸಾಕೆಂಬನ್ನೆವರಮಿತ್ತನೆಲ್ಲರ್ಗರಸಂ ೧೪೨

ವಚನ : ಇಂತತಿಶಯಮಾಗಿಯೊಸಗೆಗೆ ಪೂಜಿಗಾದರಾರುಮಿಲ್ಲೆಂಬಿನಂ ತನ್ನಯ ಬಂಧುಸಂದೋಹಕ್ಕೆ ಕಣ್ಮೊಗಂ ನೋಡದೆ ತೊಡಲುಮುಡಲುಮುಣಲುಂ ಕೊಟ್ಟು ಸರ್ವರ್ಗೆ ಸಂತುಷ್ಟಿಯಂ ಪುಟ್ಟಿಸಿದನಂತರಂ ಜಿನಾಯತನಮಂ ಪೂಜಿಮಟ್ಟು ನಿಜನಿವಾಸಕ್ಕೆ ಬಿಜಯಂಗೆಯ್ದು ಜಗದೊಡಗೂಡಿಯಮೃತಾಹಾರಮನಾರೋಗಿಸಿ ಕೈಘಟ್ಟಿಗೊಂಡು ಹಸ್ತಪ್ರಕ್ಷಾಲನಂಗೆಯ್ದು ಕರ್ಪೂರತಾಂಬೂಳಚರ್ವಣದಿಂದಂತರಂಗದೊಳೊಂದಿದ ರಾಗರಸಪೂರಮಂ ಪೊಱಸೂಸುವಂತಿರಧರ ಪ್ರದೇಶಮಂ ರಾಗರಂಜಿತಂ ಮಾಡುತ್ತುಂ ಪಳಿಕಿನ ನೆಲದೊಳ್ ಮೆಲ್ಲಮೆಲ್ಲನೆ ಲೀಲೆಯಿಂ ನಡಪಾಡಿ ಕಳಮರಾಳಿಕಾತೂಳಜಾಳಪರಿಕಲ್ಪಿತ ಸಪ್ತತಳ್ಪತಳದೊಳೊಪ್ಪದಿಂ ಮಲಂಗಿ ಸುಖದಿಂದಿರುತ್ತಿರೆ

ಕಂದ: ಸೆಱೆಯಾಗಿರ್ದರಿನ್ನೃಪರಂ
ಸೆಱೆಬಿಡಿಸಿದನಂದು ಕುಂಜರಂಗಳೊಳಂ ಮ
ತ್ತುಱೆ ಸಿಕ್ಕಿದ ಪಕ್ಕಿಗಳಂ
ಪೊಱಮಡಿಸಿದನಾಕ್ಷಣಂ ಮಹೀಪತಿತಿಳಕಂ ೧೪೩

ವಚನ: ಆ ಪೊತ್ತಿನೊಳ್

ಕಂದ: ಬಾಜಿಸುವ ಬದ್ದವಣದಿಂ
ರಾಜಿಸಿ ಕಡುನಿಮಿರ್ವ ಕುಡಿಗಳಿಂ ಠಾಯೆಗಳಂ
ಯೋಜಿಸಿ ಪಾಡುವರಿಂ ವಿ
ಭ್ರಾಜಿಸುಗುಂ ನಾಟ್ಯರಚನೆಯಿಂದಾ ನಗರಂ ೧೪೪

ವಚನ: ಇಂತತ್ಯಂತಸಂಭ್ರಮಮನೊಳಕೊಂಡು ಮಂಗಳಮಯಸ್ವರೂಪಮಾದುದೆಂಬಂತೆ ಕಣ್ಗೊಂಡ ರತ್ನಪುರದೊಳರಸನಿರ್ದು ಕತಿಪಯದಿನಂಗಳಂ ಕಳಿದೊಂದು ದಿವಸಂ ಸುತನನುಮತದಿಂ ತಪಶ್ಚರಣಗ್ರಹಣಕಾರಣಂ ತಪೋವನಕ್ಕೆ ಪೋಗಲುದ್ಯುಕ್ತನಾಗಿರ್ಪುದುಂ

ಕಂದ: ಒರ್ವಂ ವನಪಾಲಕನಂ
ದುರ್ವಿದ ಮನದಿಂದ ಪಿಡಿದು ಕೆಯ್ಯೊಳ್ ಕುಡಿಯುಮ
ನುರ್ವೀಶನ ಗೃಹಧಾರಾ
ಖರ್ವಸ್ಥಾನಕ್ಕೆ ಬೇಗದಿಂದಂ ಬಂದಂ ೧೪೫

ವಚನ: ಬರೆ ದೌವಾರಿಕಂ ಪೋಗಿ ನರವರಂಗೆ ಬಿನ್ನಪಂಗೆಯ್ಯೆ ಬರವೇಳೆನಲಾತನ ಮನೋರಥರಥಕ್ಕೆ ಸಾರಥಿಯಾಗಿ ಬರ್ಪಂತು ಬಂದು ವಿನಯವಿನಮಿತೋತ್ತಮಾಂಗನಕಾಲಸಂಜಾತಪುಷ್ಪಪಲ್ಲವಂಗಳಂ ಕಾಣಿಕೆಯಂ ಕೊಟ್ಟು ಬಿನ್ನಪಮೆಂದಿಂತೆಂದಂ

ಕಂದ: ಯಮಧರಭಟ್ಟಾರಕರು
ತ್ತಮಮುನಿಸಮುದಾಯಸಹಿತರೆಳ್ತಂದೀ ನ
ಮ್ಮಮಿತವನವೆಂಬ ವನದೊಳ್
ಸಮಭಾವದಿನಿರ್ದರಾಗಮಕ್ರಮದಿಂದಂ ೧೪೬

ವಚನ: ಎಂದು ಬಿನ್ನೈಸಲೊಡಮಾಸನದಿನೆಳ್ದು ತದ್ದಿಶಾಮುಖಕ್ಕಭಿಮುಖನಾಗಿಯಾ ಭೂಮಿಾಶಂ ಮೂಮೆ ಪೊಡಮಟ್ಟು ಬಂದನಂಗಂಗಚಿತ್ತಮನಿತ್ತು ತನ್ನ ಬಗೆಗನುಕೂಲಮಪ್ಪ ಕಾರ್ಯಮಾದುದೆಂದು ಪರಮಾನಂದಪರಿಕಳಿತನಾಗಿ

ಮತ್ತೇಭವಿಕ್ರೀಡಿತ

ಸೆಱೆಯೊಳ್ ಜೇಸಱುತಿರ್ದ ಮತ್ತಗಜಮೆಂತಾಲಾನಮಂ ಕಿಳ್ತು ಮ
ತ್ತುಱೆ ಸುತ್ತಿರ್ದ ತೊಡರ್ಪುಮಂ ಪಱಿದು ಸೌಖ್ಯೇಚ್ಛೆಂಬನಕ್ಕಾಗಿ ತಾಂ
ತಱಿಸಂದೋಪದ ಪೋಪವೊಲ್ ನರಪನುಂ ದುರ್ಮೋಹಪಾಶಂಗಳಂ
ಪಱಿದೀಡಾಡಿ ತಪೋವನಕ್ಕೆ ನಡೆದಂ ವೈರಾಗ್ಯಪಾರಾಯಣಂ ೧೪೭

ವಚನ: ಆ ಸಮಯದೊಳ್

ಕಂದ: ಮಾತಂಗಸ್ಪರ್ಶನಮು[ದ]
ಪ್ರಾತರ್ಗಮಯೋಗ್ಯಮೆಂದು ನರಪತಿ ಬಿಟ್ಟಂ
ನೂತಗಜಾರೋಹಣಮುಂ
ಸಾತಿಶಯರ್ಗುಚಿತಮಲ್ತು ನೀಚಸ್ಪರ್ಶಂ ೧೪೮

ಕೀಳಂ ಕೂಡಿದ ಕುದುರೆಯ
ಮೇಲೇಱುವುದುಚಿತಮಲ್ತು ಸತ್ಪುರುಷಂಗೆಂ
ದಾಳೋಚಿಸಿ ಸಕಳೋರ್ವೀ
ಪಾಳಂ ಬಿಟ್ಟಂ ತುರಂಗಮಾರೋಹಣಮುಂ ೧೪೯

ವಚನ: ಇಂತೆಲ್ಲಾ ವಾಹನಂಗಳನೊಲ್ಲದೆ ಪಾದಮಾರ್ಗದಿಂ ನಡೆದುಪೋಗುತ್ತುಮಿರ್ದ ಜನಕನಂ ಭೂಮಂಡಳಾಖಂಡಳಂ ಕಂಡು

ಉತ್ಪಲಮಾಲೆ

ತಂದೆಯಗಲ್ಕೆಯೆಂಬ ತಱಿಕೆಂಡದ ಪಿಂಡು ಕುಮಾರಚಿತ್ತದೊಳ್
ಸಂಧಿಸಿ ಕೂಡೆ ತಂದಿರಿಸಿದಂತೆ ಕರಂ ಕನಲುತ್ತಿರಲ್ ಮನಂ
ಬೆಂದವೊಲಾಗಿ ನೊಂದು ಮಱುಗುತ್ತುಮಿರಲ್ ಕಱೆದಂ ವಿವೇಕದೊಂ
ದಂದಮನೆಯ್ದೆ ತೋಱದಱಿವುಂ ಕಡುದುಃಖಿತನಾದನಾಕ್ಷಣಂ ೧೫೦

ವಚನ: ಇಂತು ಸಂತಾಪಂಬಡುತ್ತುಂ ತಂದೆಯ ಪಿಂದುಗೊಂಡು ಪೋಗುತ್ತುಮಿರ್ದ ಧರ್ಮನಾಥಕುಮಾರನಂ ಸಾಂತವಚನದಿಂದಿಳಾಕಾಂತಂ ಸಂತಯಿಸಲೊಡಂ

ಉತ್ಪಲಮಾಲೆ

ತುಂಬಿದ ಕಣ್ಣನೀರ್ಬಿಡಿದು ಪಾಯ್ವಿರ್ದೆ ಪೊಣ್ಮುವ ಗಗ್ಗರಿಕ್ಕೆ ಹಾ
ಯೆಂಬ ನಿನಾದಮುಂದು ಮಿಗಲಿನ್ನೆಮಗಾರ್ ಶರಣೆಮ್ಮನಿತ್ತಬಾ
ಯೆಂಬವರಾರೊಯೆಂದು ಸಲೆಬಾಯ್ವಿಡುತುಂ ನಡೆತಂದರಾ ಗುಣಾ
ಲಂಬನ ಪಿಂದೆ ಸಂಗಡಿಸಿ ಪೆಂಡಿರ ಪಿಂಡುಗಳುಂ ಪ್ರಧಾನರುಂ ೧೫೧

ಕಂದ : ನೆನೆನೆನೆದಾಳ್ದನ ಗುಣಮಂ
ಜನಮನಿಶಂ ಮನದೊಳಳಲನೆಯ್ದುತ್ತಿರ್ದ
ತ್ತನಲನೊಳಗಳುರ್ದ ಹತ್ತಿಯ
ಘನರಾಶಿಯ ತೆಜದಿನಾ ನೃಪಂ ಪೋಪಾಗಳ್ ೧೫೫

ವಚನ : ಇಂತು ಪಲುಂಬಿ ಪಂಬಲಿಸಿ ಬಿನ್ನನೆ ಬರುತ್ತುಮಿರ್ದ ಸಕಳಪರಿಜನ ಪುರಜನ ನಿಯೋಗಿಜನ ಬಂಧುಜನಂಗಳನುಪಲಾಲಿಸಿ ಲೋಕತ್ರಯೈಕಸ್ವಾಮಿಯಪ್ಪ ಧರ್ಮನಾಥಕುಮಾರಂ ನಿಮ್ಮಂ ಪಾಲನಂಗೆಯ್ದಪನವಕ್ಕುಮ್ಮಳಿಸಲ್ವೇಡೆಂದು ಪೇಳುತ್ತುಂ ನಿಲ್ಲಿ ನಿಲ್ಲಿಯೆಂದು ನಿಲಿಸಿದೊಡಂ ನಿಲ್ಲದೆ ಕಿಱಿದಂತರಂ ಪೋಗಿ ತಪೋವನಮಂ ಪೊಕ್ಕದಱೊಳತಿಪಾವನಮನುಜಂತುಕಮುಮಾದ ರಮಣೀಯಮಣಿಶಿಲಾಮಯಪ್ರದೇಶದೊಳ್

ಕಂದ : ಸಮತೆಯೊಳೊಂದಿದ ಜಿನಮುನಿ
ಸಮುದಾಯದ ನಟ್ಟನಡುವೆ ಭಟ್ಟಾರಕರಂ
ರಮಣೀಯಗುಣಾಕರರಂ
ಪ್ರಮಾಣಪುರುಷಂ ನಿರೀಕ್ಷಿಸಿದನತಿಮುದದಿಂ ೧೫೬

ವಚನ : ಆಕ್ಷಣಂ ಕೈಗಳಂ ಮುಗಿದು ಜಯಜಯಯೆಂದುಚ್ಚರಿಸುತ್ತುಂ ಮುಟ್ಟಿದ ಮೋಹದಿಂ ಮುಟ್ಟಿವಂದು

ಚಂಪಕಮಾಲೆ

ವಿನಯದ ಭಾರದಿಂದೆಱಗುವಂತೆ ಮುನೀಶ್ವರಪಾದಪಂಕಜ
ಕ್ಕನುಪಮಭಕ್ತಿಯಿಂದೆಱಗಿದಂ ಧರಣೀಪತಿ ಪಂಚಮುಷ್ಟಿಯಿಂ
ದನವಧಿಧರ್ಮವೃದ್ಧಿರಮಮುಣ್ಮಿ ಕರಂ ಪೊಱಪೊಣ್ಮಿದತ್ತು ಪಾ
ವನಕರುಣಾಂಬುರಾಶಿಯ ಗಭೀರಸುಘೋಷಣವೆಂಬ ಮಾಳ್ಕೆಯಿಂ ೧೫೭

ವಚನ : ಮತ್ತಮಾ ನೃಪೋತ್ತಮಂ ಭಕ್ತಿಮಯಮೂರ್ತಿವೆತ್ತನೆಂಬಂತೆ ಬಿತ್ತರದಿಂ ಧರಿತ್ರಿಯೊಳ್ ಮುಂದೆ ಕುಳ್ಳಿರ್ದು ಮುಕುಳಿತಕರಸರೋಜನಾಗಿ ಬಿನ್ನಪಮೆಂದಿಂತೆಂದಂ

ಕಂದ : ಎತ್ತಾನುಮೊರ್ಮೆ ಪುಣ್ಯಾ
ಯತ್ತತೆಯಿಂದಾವನೊರ್ವನುಂ ನಿಮ್ಮನೆ ನೆನೆ
ವೃತ್ತಿರ್ದಡಕ್ಕುಮಿಗೆ ಕೃತ
ಕೃತ್ಯಂ ಕಂಡೆಱಗಿ ಸೇವಿಪನನೇವೇಳ್ವೆಂ ೧೫೮

ಚಂಪಕಮಾಲೆ

ಕರುಣಿಗಳೆತ್ತುವರ್ ಕೆಳಗೆ ಬಿಳ್ದವರಂ ಮುನಿನಾಥ ನೀಂ ಕೃಪಾ
ಶರನಿಧಿಚಂದ್ರ ನಾಂ ಭವಸಮುದ್ರದ ಮಧ್ಯದೊಳೆಯ್ದೆ ಬಿಳ್ದು ಪೀ
ವರತರದುಃಖದಿಂ ನವೆವುತಿರ್ದೆನಗಿತ್ತು ಜಿನೇಂದ್ರದೀಕ್ಷೆಯೆಂ
ಬುರು ಸುಬಹಿತ್ರಮಂ ಕಡೆಗೆ ದಾಂಟಿಸಿ ಸತ್ಸುಖನೆನ್ನನಾಗಿಸಾ ೧೫೯

ಕಂದ: ಶುದ್ಧ ಜಿನದೀಕ್ಷೆಯಂ ಕೊ
ಟ್ಟುದ್ಧರಿಸುವುದೆನ್ನನೀ ಮಹಾಸಂಸೃತಿಯಿಂ
ವೃದ್ಧ ಕಾರುಣ್ಯಬುದ್ಧಿಯಿ
ಸಿದ್ಧ ವಿಬೋಧಪ್ರಕಾಶ ಮುನಿಕುಳತಿಳಕಾ ೧೬೦

ವಚನ: ಎಂದು ನುಡಿವ ಧರಣೀರಮಣ ವಿನಯೋದೀರಣಮಂ ತಪೋರಮಣಂ ಕೇಳ್ದು ಕಡುನಲಿದು ಮತ್ತಮಿಂತೆಂದಂ

ಕಂದ: ಮದಮನೊದವಿಸುವ ಸಾಮ್ರಾ
ಜ್ಯದೊಳಿರ್ದೊಡಮಿಾ ವಿಶೇಷವಿನಯಂ ದೊರೆಕೊಂ
ಡುದುಮಿಾ ನೃಪಂಗೆ ಪುಣ್ಯಾ
ಸ್ಪದನಾಗಿರ್ದಂಗೆ ಕೂಡುಗುಂ ಕಡುವಿನಯಂ ೧೬೧

ತಪದುಗ್ರಪರೀಷಹಮುಂ
ನೃಪವರಕೋಮಳಶರೀರಮುಂ ಸೈರಿಸಲಾ
ರ್ಪವುದೆ ಜಿನಧರ್ಮಮಂ ಪೆ
ರ್ಚಿಪುದಂ ಜನತಾಪ್ರಪಾಲನಮೆ ತಪಮಲ್ತೇ ೧೬೨

ವಚನ: ಅದುಕಾರಣಂ ತಪದ ಗೊಡವೆ ಬೇಡೆಂದು ಬಿಡೆ ಜಡಿದು ನುಡಿವ ಸಂಯಮಿಗಳೊಡೆಯನ ಮಾತಿಂಗೆಡೆಗುಡದೆ ನಾಡೊಡೆಯಂ ತಪಶ್ಚರಣಗ್ರಹಣಕಾರಣಂ ಕಟ್ಟಾಗ್ರಹಂಗೆಯ್ದು ಭಟ್ಟಾರಕರಂ ಪ್ರಾರ್ಥಿಸಿ

ಕಂದ: ಪಱಿದಿಕ್ಕಿದನಾಗಳ್ ನಾ
ಡೆಱತಯಂ ಘನಕೇಶಪಾಶಮಂ ಮುನಿಪದದೊಳ್
ನೆಱತಸಂಸಾರದ ಬೇರಂ
ಪಱಿದಿಕ್ಕುವ ಮಾಳ್ಕೆಯಿಂ ದೃಢೀಕೃತಚಿತ್ತಂ ೧೬೩

ವಚನ : ಇಂತು ಮಹಾಸೇನಮಹಾರಾಜಂ ಮಹಾಬ್ರತಧಾರಿಯಾಗಲೊಡನೊಡನೆ ಬಂದ ಸುತಯುವತೀಜ್ಞಾತಿಪ್ರಕೃತಿಪ್ರಜಾಪ್ರಭೃತಿ ಸಮಸ್ತಜನಂಗಳ್ ಮಱುಗುತ್ತುಂ ಮಗುಳ್ದು ಪೋಪುದುಮಿತ್ತಲ್

ಕಂದ : ಅಂಬರಮುಂ ಬಿಟ್ಟಂ ಸಂ
ಧ್ಯಾಂಬುಜಸಖಸಂತೆ ಶಿಶಿರಋತುವಿನ ತೆಱದಿಂ
ದಿಂಬಿನೊಳೊಳಕೊಂಡಂ ತಪ
ನಂ ಬಿರಯಿಯ ಮಾಳ್ಕೆಯಿಂದೆ ಮುಕ್ತಾಭರಣಂ ೧೬೪

ಪರಮಾರ್ಥಮನಾದಂ ಸಾ
ವರಿಸುತ್ತುಂ ವಿಷಯಬಾಧೆಯಂ ಮಾಣಿಸುತಂ
ನೆರೆದರಿಯಂ ಕೆಡಿಸುತ್ತುಂ
ಸರಿಯಾದಂ ನೃಪತಿಗಾ ಮುನೀಶಂ ತಪದೊಳ್ ೧೬೫

ಮತ್ತೇಭವಿಕ್ರೀಡಿತ
ಬಿಡದೀರಾಱುತಪಃಪ್ರಭಾವದೊಪಮಂ ತಾಳ್ದಂ ಷಡಾವಶ್ಯಕ
ಕ್ಕೆಡೆಗೊಟ್ಟಂ ದಶಧರ್ಮಮಂ ತಳೆದನೈದಾಚಾರಮಂ ತಾಳ್ದಿದಂ
ಪಡೆದಂ ಮೂಱರ ಗುಪ್ತಿಯಂ ಪಡೆದು ಮೂವತ್ತಾಱು ಭಾಸ್ವದ್ಗುಣ
ಕ್ಕೊಡೆಯಂ ಯೋಗಿಸರಂ ನಿಮಿರ್ಚಿದನಿದಂ ಕರ್ಮಕ್ಷಯೋಪಾಯಮಂ ೧೬೬

ವಚನ: ಇಂತು ಸಕಳಗುಣಗಣಮಣಿಮಯಾಭರಣಕಿರಣರಮಣೀಯತನು ತನ್ಮುನೀಶ್ವರರ ಜಿನಮಾರ್ಗೋಕ್ತ ಪರಮತಪಃಪ್ರಭಾವಕ್ರಮಮನನುಕ್ರಮದಿಂದನುಷ್ಠಿಸಿ ಗರಿಷ್ಠಧರ್ಮಶುಕ್ಲಧ್ಯಾನನಿಷ್ಠಾಧಿಷ್ಠಿತನಾಗಿ ಕಡೆಯೊಳಖಿಳಕರ್ಮಮಳನುಂ ನಿರ್ಮೂಳನಂಗೆಯ್ದು ಮುಕ್ತ್ಯಂಗನಾಸಮಾಲಿಂಗನಭಂಗಿಯನಂಗೀಕರಿಸುವುದುಮಿತ್ತಲ್

ಉತ್ಪಲಮಾಲೆ
ತಂದೆಯುಗಳ್ಕೆಯಿಂದೊದವುತಿರ್ದ ಮನಃಪರಿತಾಪದಾಹಮಂ
ನಂದಿಸಿದಂ ಮಹೋಪಶಮಭಾವಲಸತ್ಪರಿಣಾಮವಾರಿಯಿಂ
ಬಂದ ಚತುರ್ಗತಿಪ್ರಕೃತಿಸಂಸ್ಥಿತಿವೇದಿಯೆನಿಪ್ಪ ಧರ್ಮನಾ
ಥಂ ದಲಪಾಸ್ತಮಾನಸಸಮುದ್ಧತಮೋವಿಕೃತಿಭ್ರಮಾಧಿಕಂ ೧೬೭

ಕಂದ : ಭೇದಜ್ಞಾನನಿಧಾನಂ
ಬೋಧತ್ರಯಧಾರಿಯೆನಿಪ ಕುವರನ ಹೃದಯದೊ
ಳಾದಪುದೇ ಶೋಕಂ ಪರಿ
ಶೋಧಿತನಿರ್ಮಳಸುವಸ್ತುವೇಂ ಕದಡುಗುಮೇ ೧೬೮

ಧರೆಯೆಂಬ ತರುಣಿ ನರಪನ
ವಿರಹದ ಸಂತಾಪದೇಳ್ಗೆಯುಂ ಮಳ್ಗಿಸಿದಳ್
ಸಿರಿದಾದ ದಾನಧಾರಾ
ಪರಿಷೇಕ ನಿಷೇಪೆಯಿಂ ಕುಮಾರಾಗ್ರಣಿಯಾ ೧೯೯

ವಚನ : ಬಳಿಯಮಾ ಧರ್ಮನಾಥಕುಮಾರಂ ದಿನಮುಖಸರೋಜಾಕರದಂತೆ ವಿಕಚಿತಾಶಯನಾಗಿ ದುಷ್ಟನಿಗ್ರಹಶಿಷ್ಟಪ್ರತಿಪಾಲನವಿಧಾನದಿಂ ರಾಜ್ಯಂಗೆಯ್ಯುತ್ತುಮಿರೆ

ಮಹಾಸ್ರಗ್ಧರೆ

ಬಱಸೆಂತುಂ ತೋಱದನ್ಯಾಯದ ನಡೆನುಡಿ ಮತ್ತಿಲ್ಲ ಕೇಡೆಂಬುದಂತಾಂ
ಕಿಱುವಾನುಂ ಪೊರ್ದದಾರ್ತಂ ಪೊರೆಯದು ರುಜೆಯುಂ ಕಾಡದಾಪತ್ತಿದೂರಂ
ಸೆಱೆಕೊಳ್ ಬೆರ್ಚಿಂಬಿದಿಲ್ಲಂ ಪರನೃಪಬಲಸಂಘಟ್ಟದಿಂದಪ್ಪಪಾಯಂ
ಮಱೆದುಂ ಕೈಗೂಡದೆಂದುಂ ನಿಜಜನಪದಮಂ ಪಾಲಿಸಲ್ ಧರ್ಮನಾಥಂ ೧೭೦

ಮತ್ತೇಭವಿಕ್ರೀಡಿತ

ಅನುರಾಗಂ ಪ್ರಜೆಗಳ್ಗೆ ಪುಟ್ಟಿದುದು ಸದ್ಧರ್ಮಕ್ಕೆ ಮತ್ತೆತ್ತರಂ
ಘನಮಾಗಿರ್ದುದು ಸರ್ವದೇಶದೊಳಮೆಲ್ಲಾ ಧಾನ್ಯಸಂಪತ್ತಿಪ
ರ್ದನಮಾಯ್ತುತ್ಕಟಮಾಗಿ ಧರ್ಮಜಿನನಾಥಂ ಪ್ರೀತಿಯಿಂ ರಾಜ್ಯಪಾ
ಲನಮಂ ಮಾಡುವ ಪೊತ್ತಿನಲ್ಲಿ ಸಿರಿದೇನುತ್ಸಾಹಮಂ ಪೆರ್ಚದೋ ೧೭೧

ಕಂದ : ನೀತಿಯುತನಾಗಿಯುಂ ದಲ
ನೀತಿಸಮನ್ವಿತಮುಮಾಯ್ತು ಸುಖಭಾಜನಕಂ
ಭೂತಿಯುತನಾಗಿಯುಂ ತದ
ಭೂತಿಸಮನ್ವಿತಮುಮಾಯ್ತು ಧರ್ಮನ ರಾಜ್ಯಂ ೧೭೨

ಮತ್ತೇಭವಿಕ್ರೀಡಿತ

ಗುಣದಿಂ ಕಟ್ಟಿದನಾ ನೃಪಂ ನಿಜಭುಜಾಸ್ತಂಭಾಗ್ರದೊಳ್ ಸರ್ವಧಾ
ರಿಣಿಯಂ ಮಾಡಿ ಸುಲೀಲೆಯಿಂ ಕರಿಣಿಯಂ ಸಾರಕ್ಷಣಂಗೆಯ್ದನಂ
ದಣುಗಿಂದಲ್ಲದೊಡಂತು ಭೂಪರ ಮತ್ತೇಭಂಗಳೆಲ್ಲಾ ದಿಶಾಂ
ಗಣದಿಂ ಪಾಗುಡಮೆಂಬಿದೊಂದು ನೆಪದಿಂದಿಂತೆಂದು ಬಂದಿರ್ದುವೋ ೧೭೩

ಕಂದ : ಪಿಡಿದು ಕರವಾಳಮಂ ಮು
ಕ್ಕೊಡರಿಸದ ಪರಾಗನುಂ ಪರೋರುಸ್ಥಳದೊಳ್
ಮಡಗಿ ಸುಕೋಮಳಕರಮಂ
ಪುಡದಿಯುಮೊಲ್ ಭೂಮಿಯುಂ ನೃಪಂ ಭೋಗಿಸಿದಂ ೧೭೪

ವಚನ : ಇಂತು ಜಗತ್ತ್ರಯಜನತಾಸಂಪೂಜ್ಯಮಾನ ಧರ್ಮಜಿನರಾಜಂ ಪ್ರಾಜ್ಯಮಾದ ಸಕಳಸಾಮ್ರಾಜ್ಯಮಂ ನಿಷ್ಕಂಟಕಮಾಗಿಯಾಳುತ್ತುಮಿರ್ಪ ಪೊತ್ತಿನೊಳ್

ಮತ್ತೇಭವಿಕ್ರೀಡಿತ

ಸುರಕಾಂತಾಜನಮಿಂದ್ರನೊಂದು ಬೆಸದಿಂದಂ ಬಂದು ಸಂಧ್ಯಾತ್ರಯಾಂ
ತರದೊಳ್ ಪಾಡಿಯುಮಾಡಿಯುಂ ಮಣಿಮಯಾಳಂಕಾರಸಂದೋಹದಿಂ
ಪಿರಿದುಂ ಭೂಷಿಸಿಯುಂ ವಿನೋದಿಪುದಜಂಂದಾನಂದನಂ ತಾಳ್ದಿದಂ
ಪರಿರಾಜನ್ಮಣಿಕುಂಡಳಂ ವಿಶದಕೀರ್ತಿವ್ಯಾಪ್ತದಿಙ್ಮಂಡಳಂ ೧೭೫

ವಚನ : ಅಂತುಮಲ್ಲದೆಯುಂ

ಮಹಾಸ್ರಗ್ಧರೆ

ತಣಿವುತ್ತಿರ್ದಂ ಸುಸೌಖ್ಯೋದಯದ ಮಹಿಮೆಯಿಂ ಸಂತತಂ ಧರ್ಮನಾಥಂ
ಗುಣಮಾಣಿಕ್ಯಾಕರಂ ಸತ್ಪುರುಷಪರಿಷದಾಸೇವ್ಯಮಾನಾಂಘ್ರಿಯುಗ್ಮಂ
ಪ್ರಣುತೋದ್ಯದ್ಧ್ವಾನಕಂ ಬಾಹುಬಲಿಸುಕವಿರಾಜಂ ಕಳಾವತ್ಸಮಾಜಾ
ಗ್ರಣಿ ಸಮ್ಯಕ್ತ್ವಪ್ರಭಾವಾನ್ವಿತಚರಿತವಹಂ ಚಾತುರೀಜನ್ಮಗೇಹಂ ೧೭೬

ಗದ್ಯ : ಇದು ಸಕಳಭುವನಜನವಿನೂಯಮಾನಾನೂನ ಮಹಿಮಾಮಾನನೀಯ
ಪರಮಜಿನಸಮಯಕಮಳಿನೀಕಳಹಂಸಾಯಮಾನ ಶ್ರೀಮನ್ನಯಕೀರ್ತಿ
ದೇವಪ್ರಸಾದಸಂಪಾದಪಾದನಿಧಾನದೀಪವರ್ತಿಯುಭಯಭಾಷಾ
ಕವಿಚಕ್ರವರ್ತಿ ಬಾಹುಬಲಿಪಂಡಿತದೇವ ಪರಿನಿರ್ಮಿತಮಪ್ಪ
ಧರ್ಮನಾಥಪುರಾಣದೊಳ್ ಧರ್ಮನಾಥಕುಮಾರ
ಪಟ್ಟಬದ್ಧೋತ್ಸವಪರಿವ್ಯಾವರ್ಣನಂ

**ದ್ವಾದಶಾಶ್ವಾಸಂ**

# ತ್ರಯೋದಶಾಶ್ವಾಸಂ

ಕಂದ : ಶ್ರೀರಾಮಾರಮಣಂ ಧ
ರ್ಮಾರಾಮವಸಂತನೆಯ್ದಿದಂ ಸಂತಸಮಂ
ಕಾರುಣ್ಯದ ಕಣಿ ಜನಸುರ
ಭೂರುಹಕಂ ಸರಸಚತುರಕವಿಕುಳತಿಳಕಂ ೧

ವಚನ : ಮತ್ತಮೊಂದುದಿವಸಮಾ ಧರ್ಮನಾಥಮಹಾರಾಜಂ ಸಮಸ್ತ ಸೌವಸ್ತಿಕಪ್ರಸ್ತೂಯಮಾನ ಬಿರುದಾವಳೀಸಮನ್ವಿತನನ್ವಿತರಾಜನ್ಯಕಮುಕುಟವರ್ಧನ ಪ್ರಧಾನಪುರುಷಪುರಸ್ಸರಮಾಸ್ಥಾನಮಂಡಪಕೆಳ್ತಂದದಱ ನಟ್ಟನಡುವೊಪ್ಪವಿಟ್ಟ ಮಾಣಿಕದ ಬೊಟ್ಟಿಂಬಂತೆ ನೇಸರ್ಪಟ್ಟು ಥಳಥಳಿಸಿ ಪೊಳೆವ ಮಣಿಮಯಸಿಂಹಾಸನಮನಳಂಕರಿಸಿ ನೋಳ್ಪರ ಕಣ್ಗಳಿಂಗೆಡ್ಡಮಾಗಿ[1]ರ್ದೋ[1]ಡ್ಡೋಲಗಂಗೊಟ್ಟು ಲೀಲೆಯಿಂದಿರ್ಪುದುಂ

ಕಂದ : ಅಸಮಸುಷೇಣಚಮೂಪನ
ಬೆಸದಿಂದಂ ಬಂದು ದೂತನೊರ್ವಂ ಬಾಗಿಲೊ
ಳೆಸೆದಿರ್ದಂ ಕುಡಿಯಂ ಪಿಡಿ
ದೆಸದಿರೆ ಮೊಗದಲ್ಲಿ ರಾಗರಸಮತಿಶಯದಿಂ ೨

ವಚನ : ಅನೇಕರಾಜನಿಕರಪ್ರವರ್ತಿತಸಂಗ್ರಾಮವಾರ್ತಾಕಥನಾತುರೀಭೂತನುಂ ಮಹಾಸಚಿವಸಮುಚಿತವೇಷವಿಶೇಷವಿನೂತನುಮಪ್ಪ ಪೂತಮತಿಯೆಂಬ ದೂತಮುಖ್ಯನ ಬರವಂ ದೌವಾರಿಕವಿಜ್ಞಾಪನಪರಿಜ್ಞಾತವೃತ್ತಾಂತಸ್ವರೂಪನಾದ ದೇವನವಸರಂಗೊಟ್ಟು ಬರಿಸಿ ಕಾಣಿಸಿಕೊಳಲೊಡಮಾತನತೀವಪ್ರಶ್ರಯಪರಿಮಿಶ್ರಿತನಿರ್ಭರಭಕ್ತಿಯಿಂ ಸಾಷ್ಟಾಂಗ ಪ್ರಣತನಾದಿಂಬಳಿಯಂ ಪ್ರತಿಹಸ್ತಂ ಸ್ವಹಸ್ತದೊಳ್ ಪಿಡಿದಿರ್ದ ಪಾಗುಡಂಗಳಂ ಕಾಣಿಕೆಯಂ ಕೊಟ್ಟು ಚಾಮುಕರ್ಪೂರಪಾಳಿಪರಿಕಳಿತತಾಂಬೂಳಮಂ ಕಳೆದುಕೊಂಡು ದೇವರಾಜವಲ್ಲಭಭ್ರೂವಲ್ಲರೀಸಮಾಲೋಲಸಭೇದಸಂಜ್ಞಿತತದ್ಯೋಗ್ಯಸ್ಥಾನದೊಳ್ ಕುಳ್ಳಿರ್ದು ತಾಂ ತಂದ ಬಿನ್ನಪತ್ತ್ರಳಿಯಂ ಸಂಧಿವಿಗ್ರಹಿಯ ಕೈಗೆ ನೀಡಲವನದನೋದೆ ತತ್ಪತ್ತ್ರಲೇಖಾರ್ಥಮನತಿವ್ಯಕ್ತಮಾಗಱಿದು ಮತ್ತೆ ಕೆಲದ ಮಹತ್ತರನೊರ್ವಂ ಬಿತ್ತರಂಬೆತ್ತು ಮುಖ

1 ಒ (ಗಚ)

ವಾರ್ತೆಯಂ ಪೇಳ್ದು ಸಭೆಯನಭಿರಂಜಿಸೆನಲೊಡಮಂ ತನ್ನ ಸೀರೆಯ ಸೆಱಂಗನಧರಪಲ್ಲವ ದಂತಿಕಕ್ಕೆ ಮೆಲ್ಲನೆ ತಂದು ಬಿನ್ನಪವೆಂದಿಂತೆಂದಂ

*

ಚಂಪಕಮಾಲೆ

ಒಡೆಯರನುಜ್ಞೆಯಂ ಪಡೆದು ದೂತವರಂ ಕ್ರಮದಿಂದೆ ಪೇಳ್ದನೊ
ಳ್ಪಡಿಗಳನೆಯ್ದೆ ಕಾಳೆಗದ ಸಂಸ್ಥಿತಿಯಂ ಮೊದಲಿಂದೆ ನಾಡೆಯುಂ
ಕಡೆವರಮಂದು ಕೇಳ್ವ ಪರಿಷಜ್ಜನದಿಂದ್ರಿಯಮೆಲ್ಲಮಂ ಸಮಂ
ತೊಡರಿಸಿದತ್ತು ಕರ್ಣಮಯಮೊಂದೆ ದಲಿಂದ್ರಿಯಮೆಂಬ ಶಂಕೆಯಂ ೩

ಕಂದ: ವೀರರಸಪ್ರಸರಂ ಪರಿ
ವಾರಶ್ರುತಿಪಥದೆ ಪೋಗಿ ಪೊಕ್ಕಾಶಯದೊಳ್
ಪೂರೈಸಿ ನಟ್ಟುನಿಲುವಂ
ತೋರಂತಭಿವರ್ಣಿಸಲ್ಕುಪಕ್ರಮಿಸುವುದುಂ ೪

ವಚನ: ಆಗಳಾ ಸಭಾಜನಮೆಲ್ಲಂ ಸಂಗ್ರಾಮರಂಗಾಡಂಬರವಿಸ್ತರಣಶ್ರವಣದತ್ತಾವಧಾನಮಾಗಿ ಏಕಾಗ್ರನಿಷ್ಠೆಯಿಂದಿರುತ್ತುಮಿರೆ ಸಮೀಚೀನವಚನರಚನಾತಿಚತುರನೆನಿಪ ಚರವರನಿಂತೆಂದಂ

ಕಂದ: ಅವಧಾನ ದೇವ ಚಿತ್ತೈ
ಸುವುದೆನ್ನಯ ಬಿನ್ನಪಂಗಳಂ ಕೃಪೆಯಿಂದಂ
ಭವದೀಯಚಮೂನಾಥಂ
ತವಿಸಿದನಲ್ಲಿರ್ದು ಸಕಳಕಾರ್ಯಂಗಳುಮಂ ೫

ವಚನ: ಅಂತಖಿಳರಾಜಕಾರ್ಯಕಾರಣಕರಣಾನಂತರಮಾ ಸುಷೇಣನೆಂಬ ಸೇನಾಪತಿಮುಖ್ಯಂ ಪ್ರತಾಪರಾಜನಂತಿಕಕ್ಕೆ ಬಂದು ಪ್ರಯಾಣೋತ್ಸುಕ ವಚನಂಗಳಂ ನುಡಿಯಲೊಡಮಾತನಾತಂಗೆ ತೊಡಲುಮುಡಲುಂ ಪಿರಿದಾಗಿತ್ತು ಮನ್ನಿಸಿ ಬೀಳ್ಕೊಟ್ಟು ಕಳಿಪುವುದುಂ

ಕಂದ: ಮತ್ತೊಂದತಿಶಯದಿವಸದೊ
ಳುತ್ತಮಸುಮುಹೂರ್ತದೊಳ್ ಸುಷೇಣಚಮೂಪಂ
ಬಿತ್ತರದಿಂ ಪೊಱಮಟ್ಟಂ
ಸುತ್ತಿಬರಲ್ ತನ್ನಸಖಿಳಚತುರಂಗಬಲಂ ೬

---

* ಧರ್ಮನಾಥನೊಡ್ಡೋಲಗಕ್ಕೆ ಚರಂ ಬಂದು ಕಾಳಗವೆಂದು ಪೇಳಲಾಗಿ ರಣರಸೋದ್ರೇಕವಾದ ಠಾವು (ಗಚ)

ವಚನ : ಪಿರಿದುಂ ಪೆರ್ಚಿದ ಪೆಂಪಿನ ಸಂಪದದಿಂ ಸೊಂಪುವಡೆದ ಸಮಸ್ತ ಸೈನ್ಯಂ ಬೆರಸು ಪುರುಹೂತನೆಂಬಂತಭಿನವವಿಭವದಿಂ ನಿಚ್ಚಪಯಣಂಬಂದು ವಿದರ್ಭವಿಷಯದ ಗಡಿಯುಂ ದಾಂಟಿ ಭೂರಿವಾರಿಪ್ರವಾಹದಿಂ ಸಾರಸೂದ ಸರಿತ್ತೀರದೊತ್ತುಗೊಂಡು ಬೀಡಂ ಬಿಟ್ಟಿರ್ಪುದುಮನ್ನೆಗಮಿತ್ತಲ್

ಕಂದ : ಮುಂದೆ ನಿಮ್ಮಡಿಗಳ್[1]ಲ್ಲಿಗೆ
ಬಂದಿರ್ದುದನಱಿಯದಾ ಸುಶೃಂಗಾರವತೀ
ಸೌಂದರಿಯ ಕೂಡೆ ನೀವಾ
ನಂದದಿನಲ್ಲಿರ್ದರೆಂದು ಬಗೆದಂದು ಕರಂ ೭

ವಚನ : ಅಲ್ಲಿರ್ದಖಿಳ ರಾಜಕುಮಾರಪ್ರಕರಮೆಲ್ಲಂ ನಿಧಾನಂಬಡೆಯ ಬಡವ್ಯಂತರ ಸಂತತಿಯಂತೆ ಕಡುಕನಲ್ದು ಪೋಪೆಡೆಯುಲ್ಲಿ ತಳ್ತಿಱಿದು ಪಗೆವನ ಪಡೆಯಂ ಪಡಲ್ವಡಿಸಿ ಕನ್ಯಾರತ್ನಮುಂ ಪಿಡಿದು ಬಲ್ಪಿಂ ತಪ್ಪುದನೆ ಬಗೆದು ಮಾಮಸಕಂಮಸಗಿ

ಉತ್ಪಲಮಾಲೆ

ಆಗಳನೇಕ ರಾಜಸುಕುಮಾರರೊಳಂ ನೆರೆದೊಂದು ತಾಣದೊಳ್
ಬೇಗದೆ ಕೂಡಿ ಕಾರ್ಯದ ವಿಚಾರನಿಮಿತ್ತಮೆ ಮಂತ್ರಶಾಲೆಯಂ
ರಾಗದೆ ಪೋಗಿ ಪೊಕ್ಕುದು ನಿರಸ್ತಗವಾಕ್ಷಕಮುಂ ಪ್ರತಿಧ್ವನಿ
ತ್ಯಾಗಕಮಂತ್ಯಪೇತಶಿಶುಕೀರಕಮುಂ ಪರಿಮುಕ್ತಕೋಣಮುಂ ೮

ವಚನ : ಇಂತಪ್ಪ ಮಂತಣದ ಮನೆಯೊಳ್ ಕುಳ್ಳಿರ್ದು

ಉತ್ಪಲಮಾಲೆ

ತನ್ನ ಮನಕ್ಕೆ ಬಂದ ಯುವರಾಜಕರಿಂಗೆ ಲತಾಂತಮಾಲೆಯುಂ
ಕನ್ನಕಿ ತತ್ಸ್ವಯಂಬರದೊಳಿಕ್ಕುವ ಬೇವಸದಿಂದೆ ಬಂದಳಂ
ದುರ್ನಯದಿಂದಮೊರ್ವನೆಳಮುಯ್ವುದನೀಕ್ಷಿಸಿ ಸುಮ್ಮನಿರ್ದೊಡಂ
ಬನ್ನಮುದಕ್ಕು ನಮ್ಮಯ ನೆಗಳ್ತೆಗೆ ಮೊಕ್ಕಳಮೆಂದರೆಲ್ಲರುಂ ೯

ವಚನ : ಮತ್ತಮವರೊಳೊರ್ಬಂ ರಾಜನೀತಿನಿಪುಣನಿಂತೆಂದಂ

*

ಶಾರ್ದೂಲವಿಕ್ರೀಡಿತ

ನಂಟಿಂ ಕಾರ್ಯಮನುಂಟುಮಾಳ್ಪುದದು ಸಾಮಂ ಬೇಳ್ಪ ಸದ್ವಸ್ತುವಂ
ಬಂಟರ್ಗಿಟ್ಟು ವಿಭೇದಿಸಿರ್ಪುದದು ಭೇದಂ ಕಪ್ಪಮುಂ ಬಲ್ಲಿದರ್
ಗಂಟಂಟಿತ್ತೊಳಗಾಗಿ ಮಾಳ್ಪುದದು ದಾನಂ ಮೂಱುಪಾಯಂಗಳುಂ
ಗೆಂಟಾಗಿರ್ದೆಡೆಯಲ್ಲಿದಿರ್ಚುವುದು ದಂಡಂ ನಾಲ್ಕನುಳ್ಳಂ ನೃಪಂ ೧೦

---

1 ಳ (ಗಚ) * ಮಂತ್ರಾಲೋಚನೆ (ಗಚ)

ಮತ್ತೇಭವಿಕ್ರೀಡಿತ

ನಯದಿಂ ಬೇಡುವನಂತುಮಾಯದೊಡೆ ಬಲ್ಪಂ ಮಾಡುವಂ ಬಲ್ಪನೊ
ಟ್ಟೈಯಿಸುತ್ತಿರ್ದೊಡಿದಿರ್ಚಿ ಕಾದಿ ಮೊನೆಯೊಳ್ ಕೊಂದಿಕ್ಕಿ ಮಾಱಾಂತ ಸೇ
ನೆಯುಮಂ ಮತ್ತಿರದಾಕೆಯಂ ಪಿಡಿದು ತಪ್ಪಂತಂದು ನಂನಮ್ಮ ಬ
ಲ್ಮೆಯುಮಂ ಪೆರ್ಚಿಸಿ ಕೀರ್ತಿಯಂ ಪಡೆವವಿಂತೆಲ್ಲರ್ಗಿದೇಮಂತಣಂ ೧೧

ತಡವಂ ಮಾಡದಿದಕ್ಕೆ ತಕ್ಕುದನೊಡರ್ಚಲ್ವೇಳ್ಕುಮಿಂತೀಕ್ಷಣಂ
ಗಡಿಯಂ ಪೋಗದ ಮುನ್ನಮೇ ಪೊಣರ್ದು ಕನ್ಯಾರತ್ನಮಂ ತಪ್ಪೆ ಪಿ
ನ್ನಡೆಯಿಂ ಕಾಲವಿಲಂಬನಕ್ಕವಸರಂ ತಾನಲ್ತು ಮತ್ತಿಂದು ನಾ
ಡೊಡೆಯಂ ನಿಶ್ಚಯಿಸಿರ್ದವರ್ ತಳರ್ದರಲ್ಲಿಂದಂ ಮನೋರಾಗದಿಂ ೧೨

ಲಲಿತವೃತ್ತ

ಸಿಂಗದೆ ಮದಂ ಸುರಿವ ಮಂಗಳಕಪೋಳದ ಬೆ
ಡಂಗಿನೊಳಕೊಂಡುರುಮತಂಗಬಳದಿಂದಂ
ತುಂಗಶುಭಲಕ್ಷಣಸುಸಂಗತಸಮಸ್ತಹೃದ
ಯಂಗಕ ಸದಂಗನು ತುರಂಗಬಳದಿಂದಂ ೧೩

ಸಂಗಳಿಸಿ ವೀರಭಟಪುಂಗನಬಲಂಬೆರಸು
ವಂಗ ಮರು ಕುಂತಳ ಕಳಿಂಗ ವಿಳಸದ್ದೇ
ಶಂಗಳೊಡೆಯರ್ ನೆರೆದು ಪಿಂಗಿ ಪೊಱಮಟ್ಟರುಱ೩
ಸಂಗರಕೆ ವಾದ್ಯರುತಿ ನುಂಗೆ ದೆಸೆಯೆಂಟಂ ೧೪

ವಚನ: ಅಂತು ಪೊಱಮಟ್ಟು ಕಡುವೇಗದಿಂ ಪೋಗಿ ಸುಷೇಣಂ ಬಿಟ್ಟ ಬೀಡಿನೆಡೆಯಂ ಮುಟ್ಟೆವಂದು ಪೊಣರ್ವುದಕ್ಕೆ ಯೋಜನತ್ರಯಪರಿಯಂತಮಂತರಾಳಸ್ಥಳಮಂ ಬಿಟ್ಟು ದುರ್ವಹಮಾದಖರ್ವಸೈನ್ಯಮಂ ಪರ್ವತದರ್ವಾಕ್ತೀರದೊತ್ತುಗೊಂಡು ಬಿಡಿಸಿ ಮಱು[1]ದೆ[1]ವಸಮಪಾರ ರಾಜಕುಮಾರದೋರಣಿಗಳೆಲ್ಲಮೊಂದಾಗಿ ಕೂಡಿ ಕಾರ್ಯಪರ್ಯಾಲೋಚನಂಗೆಯ್ದು ತದ್ವೃತ್ತಾಂತಸೂಚನನಿಮಿತ್ತಂ ಸುಷೇಣನಂತಿಕಕ್ಕೆ ವಿತ್ತನಪ್ಪ ಮಹತ್ತರನೊರ್ವನಂ ಕಳಿಪಲವಂ ಮನೋವೇಗದಿಂ ಪೋಗಿಯರಮನೆಯ ಬಾಗಿಲೊಳ್ ನಿಂದು ತನ್ನಯ ಬರವಂ ಪಡಿಯಱಂಗಱುಪುವುದುಮರಸನಾದೇಶದಿಂದವನನೊಡಗೊಂಡು ಪೋಗಿ ಕಾಣಿಸುವುದುಂ ಸಾಷ್ಟಾಂಗಪ್ರಣತನಾಗಿ ಬಿನ್ನಪಕ್ಕವಸರಂಬಡೆದಿಂತೆಂದು ನುಡಿದಂ

---

[1] ದಿ (ಕ)

ಕಂದ: ನೆರೆದೆಲ್ಲಾ ರಾಜತನೂ
ಜರ ಮೊತ್ತಂ ಬುದ್ಧಿಗಲಿಸಿ ನಿಮ್ಮ ಸಮೀಪ
ಕ್ಕೆಕರುಮುದದಿಂದಟ್ಟಿದ
ಪರಿವಾರ್ತೆಯು ತೆಜನಸಜಂಪುನೆಂ ಕೇಳಿಯುದಂ ೧೫

ಪೃಥ್ವಿ

ಪ್ರಿಯಂಬಡೆದು ಬಂದು ಕೂಡಿದ ಸುರಾಜಪುತ್ರರ್ಕಳೋ
ಳಿಯಂ ಬಿಸುಟು ಧರ್ಮನಾಥಸುಕುಮಾರಕಂಗಿಕ್ಕಿದಳ್
ಸ್ವಯಂಬರದೊಳಾ ಪ್ರತಾಪನೃಪಪುತ್ರಿ ಸತ್ಪುಷ್ಪಮಾ
ಲೆಯಂ ತರುಣಿಮುಗ್ಧೆಯಾಕ್ಷಣಮೆ ಪೋಗಿ ಮತ್ತೆಲ್ಲರುಂ ೧೬

ಕಂದ: ಮಧ್ಯಸ್ಥವೃತ್ತಿಯಿಂ ಬಂ
ದಿರ್ದ ತಸೂದರಿಯನೆಲ್ಲರುಂ ನೋಡುವಿನಂ
ಪ್ರೋದ್ಧತನೊರ್ವಂ ಪಿಡಿದೊ
ಯ್ಯುದ್ಯೋಗಮನೆಂತು ನೋಡಿ ಸೈರಿಸಲಕ್ಕುಂ ೧೭

ವಚನ: ಎಂದು ಪ್ರಕ್ಷೋಭಿಸಿಯಾ ಶೃಂಗಾರವತೀದೇವಿಯಂ ಬೇಡಿಯಟ್ಟಿದರೆಂದು ಬಿನ್ನಪಂಗೆಯ್ದು ಮತ್ತಮಾ ದೂತಂ ಸಾಮಸಂಪಾದಕವಚನಮನಿಂತೆಂದಂ

ಶಾರ್ದೂಲವಿಕ್ರೀಡಿತ

ಲೇಸಂ ಮಾಳ್ಪುದು ಹಾನಿವೃದ್ಧಿಯೊಳಮೇಕಪ್ರಾಣನಾಗಿರ್ಪುದು
ದ್ಭಾಸಂಗೆಯ್ಯದೆ ಪೊಲ್ಲದಂ ನಡೆವುದಿಚ್ಛಾವಸ್ತುವಂ ಕೊಟ್ಟು ಮ
ತ್ತಾಶಾಪೂರ್ತಿಯನುಂಟುಮಾಳ್ಪುದು ಕರಂ ಬೇಳ್ಪರ್ಥಮಂ ಕೊಳ್ವುದಿಂ
ತೀ ಸಂಸಾರದೊಳಿಪ್ಪ ಸಜ್ಜನರ ಮಿತ್ರತ್ವಕ್ಕಿದೇ ಲಕ್ಷಣಂ ೧೮

ವಚನ: ಅಂತುಮಲ್ಲದೆಯುಂ

ಉತ್ಪಲಮಾಲೆ

ಕೂಡಿದಿಱುಂಪೆಗಳ್ ಪಲವುಮಾದಮೆ ಕೊಂದ[ವು] ಪ್ರಾವನೊಂದನೆಂ
ದಾಡುವ ಗಾದೆಯುಂಟದು ನಿಮಿತ್ತಮೆ ಧೀ[1]ಪ[1]ನ ಸೈನ್ಯನಾಥ ಕೇಳ್
ಬೇಡಂ ಪಲಂಬರೊಳ್ ಪಗೆತನಂ ನೃಪಪುತ್ರಿಯನೊಪ್ಪುಗೊಟ್ಟು ಪೆಂ
ಪೋಡದ ಸಂಪದಂಬೆರಸು ಪೋಪುದು ಲೇಸು ವಿವಾದದಿಂದಮೇಂ ೧೯

ವಚನ: ಇಂತೆಂದ ದೂತನ ದುರ್ಭಾಷಣಮಂ ಕೇಳ್ದು ಸರ್ವಂಸಹಾಧಿನಾಥಂ ನಿರ್ಭರಿತರೋಷನುಂ ಗರ್ಭೀಕರಿಸಿ ತಲೆಯಂ ತೂಗುತ್ತುಮಿಂತೆಂದಂ

---

[1] ದ (ಗ)

ಸ್ರಗ್ಧರೆ

ಆ ಮಾತಂತಿಕ್ಕೆಯನ್ಯಾಯದ ನುಡಿಯನಿದಂ ಜೇಡ ಮಾತಾಡಲೆಮ್ಮು
ದ್ದಾಮೋದ್ಯತ್ಪುಣ್ಯದಿಂದಂ ನೃಪತಿತನುಜೆ ಕೈಸಾರ್ದಳೆಯ್ತಂದದಕ್ಕಂ
ನೀಮುಂ ನಿರ್ಭಾಗ್ಯರಾದರ್ ಮಱುಗಿ ಕುದಿದೊಡಂ ಬಕ್ಕುಮೇ ಲೋಕದೊಳ್ ಮ
ತ್ತೀಮಾತೋ ಪುಣ್ಯದೊಳ್ ಪೇಳ್ ಪರಿಕಿಸೆ ಪುರುಡುಂಟೇ ಕರಂ ಸೊಕ್ಕಬೇಡೈ ೨೦

ಕಂದ : ಉರಿಯ ನಾಲಗೆಯ ತೆಱದಿಂ
ಪಿರಿದುಂ ಪಟುವೆನಿಪ ನಿನ್ನ ನಾಲಗೆ ನಿನ್ನಾ
ಳ್ದರ ಸಿರಿಯುಂ ಸುಡದಿರ್ಪುದೆ
ಪರನಾರಿಯ ಬಯಕೆಯಿಂದೆ ಕೆಡನೆ ದಶಾಸ್ಯಂ ೨೧

ವಚನ : ಎಂದು ಮುಳಿಸಂ ಮುಕ್ಕುಳಿಸಿದ ತರ್ಜನೋಕ್ತಿಗಳಿಂ ಸಿಂಗದ ಗರ್ಜನೆಯಂತೆ ದಂಡಮನೆ ಗಂಡುಗೆದಱಿ ಮತ್ತಂ ತನ್ನಯ ದುರ್ಜಯಪ್ರತಾಪಲೇಪಮನೆ ತೋಱುತ್ತುಮಿಂತೆಂದಂ

ಮಹಾಸ್ರಗ್ಧರೆ

ಬಳಸಿದರ್ಗಾಳೋಕಿಸುತ್ತಿರ್ಪಖಿಳದಿವಿಜರಿಂಗಪ್ಪಿನಂ ಭೂರಿಕೌತೂ
ಹಳ[1]ಮಂ[1] ಮಾಱಾಂತ ನಿನ್ನಾಳ್ದರ ಪಡೆಯನಿತಂ ಕೊಂದು ಕೈಪೇಸದೀಗಳ್
ಕಳಿಪೆಂ ಕೂರ್ವಾಳ ಬಾಯೊಳ್ ನೆಲಸಿದ ಬಱಸಂ ಮತ್ತೆ ವೀರಾವತಾರೋ
ಜ್ಜ್ವಳಸತ್ಕೀರ್ತಿಪ್ರಭಾವಂ ಸಕಳಭುವನದೊಳ್ ತೀವುವಂತಾಗಿ ಮಾಳ್ಪೆಂ ೨೨

ಕೆಡುಗಾಲಂ ಬಂದುದಕ್ಕಂ ತ್ವದಧಿಪತಿಗಿಂತಪ್ಪ ದುರ್ನೀತಿಯಂ ಸಂ
ಗಡಿಸುತ್ತಿರ್ದೀ ನಿಮಿತ್ತಂ ನುಡಿಯಡಕಿಗಡೇನುತ್ತರಂಗೊಟ್ಟಪೆಂ ನಿ
ನ್ನೊಡೆಯರ್ ಕಾದಲ್ಕೆ ಬಲ್ಪಂ ಪಡೆದೊಡೆ ಬರವೇಳಿಲ್ಲದಿರ್ದಂದು ನಮ್ಮಂ
ಬಿಡದೋಲ್ಪೆಸಾಳ್ಪೆಸಂಗೆಯುತುಮೊಡನಿರವೇಳೆಂದು ಪೇಳ್ದಂ ಚಮೂಪಂ ೨೩

ವಚನ : ವಿನಾಶಕಾಲೇ ವಿಪರೀತಬುದ್ಧಿಯೆಂಬ ನಾಣ್ನುಡಿಯಂ ಸನ್ನಿಮಾಡಿದಿರೆಂದು ಪ್ರಗಲ್ಭಂಗಳಪ್ಪುತ್ತರಂಗಳಿಂ ದೂತನ ಮುಖಕ್ಕೆ ಮುದ್ರೆಯನುದ್ಧರಿಸುವುದುಂ

ಕಂದ : ಕಟ್ಟಾಳಾಗಿಯೆ ಬರವೇಳ್
ನೆಟ್ಟನೆ ನೀ ಪೋಗು ನಾಳೆ ಕಾಳೆಗಮೆನುತುಂ
ಕೊಟ್ಟು ಬೀಳ್ಪರ್ಥಮಂ ಬೀ
ಳ್ಕೊಟ್ಟನಂ ಕಳಿಸಿದಂ ಸುಷೇಣನುದಾರಂ ೨೪

---

[1] ಮುಂ (ಚ)

ವಚನ : ಅನಂತರಂ

ಮಹಾಸ್ರಗ್ಧರೆ

ಚರನಾಗಳ್ ಪೋಗಿ ಬೇಗಂ ತಡೆಯದೊಡೆಯರಂ ಕಂಡು ತಾಂ ಪೋಗಿ ಬಂದಾ
ಪರಿಯಂ ತದ್ವಾರ್ತೆಯಂ ಬಿನ್ನಯಿಸಿದನಜಿತ ತನ್ನಾಳ್ದರಿಂಗಂದು ತತ್ಸೌಂ
ದರಿಯಂ ತಾನೀಯನಿತ್ತಂ ಕದನಮನದಟಂ ನಾಳೆ ರುಪ್ಪೆತ್ತಿ ಬಪ್ಪಂ
ಭರದಿಂದಂ ಕಾಳಗಕ್ಕೆಂದಿರದುಸಿರ್ದೊಡೆ ಸನ್ನದ್ಧರಾಗಿದ್ದರೆಲ್ಲಂ ೨೫

ವಚನ: ಅನ್ನೆಗಮಿತ್ತಲಾ ಸುಷೇಣಚಮೂನಾಥನಾಕ್ಷಣಮೆ ಬಲಾಧ್ಯಕ್ಷನಂ ಕರಸಿ ನಾಳೆ ಕಾಳೆಗಮೆಂದು ನಮ್ಮಾ ವಿಜಯಶಿಬಿರದ ಪೆರ್ವಡೆಗೆಲ್ಲಂ ಡಂಗುರಂಬೊಯ್ದು ಸಾಱಿಸೆಂದು ಬೆಸಸುವುದುಮಾತನಾತನಾಜ್ಞೆಯಂ ನೆತ್ತಿಯೊಳ್ ಪೊತ್ತುಕೊಂಡು ಪೋಗಿಯಂತೆಗೆಯ್ವುದುಮಾಗಳ್

*

ಚಂಪಕಮಾಲೆ

ಉದಯಗಿರೀಂದ್ರದಿಂದೆ ಪೊಱಮಟ್ಟನಂತಪಥಪ್ರಯಾಣದಿಂ
ದೊದವಿದ ಸೇದೆಯಂ ಜಲವಿಲೋಡನದಿಂ ತವಿಪೊಂದುಬುದ್ಧಿ ಚಿ
ತ್ತದೊಳಿರದುಣ್ಮೆ ಪೊಣ್ಮೆ ನಡೆತಪ್ಪವೊಲಂದು ದಿವಾಕರಂ ಸುಶೀ
ಘ್ರದಿ ನಡೆತಂದು ಪಶ್ಚಿಮಸಮುದ್ರದ ಮಧ್ಯದೊಳೆಯ್ದೆ ಮುಳ್ಗಿದಂ ೨೬

ವಚನ : ಅಂತು ನೇಸರ್ಪಡಲೊಡಂ

ಮತ್ತೇಭವಿಕ್ರೀಡಿತ

ರಣಸಂನ್ಯಾಸಮನಪ್ಪುಕೆಯ್ವ ಮಿಗೆ ವೀರಾಳಾಪಮಂ ಕೇಳ್ವ ವಾ
ರಣಮುಂ ವಾಜಿಯುಮಂ ಸಮರ್ಚಿಸುವ ನಾನಾಶಸ್ತ್ರಮಂ
ಪೂಣೆಪ್ಪ ಪ್ರವಿತೋದ್ಯೋಗದಿನಿದ್ದು ಮಂದಿನಿರುಳಂ ಪೋಗಾಡಿದರ್ ವೀರರ
ಗ್ರಣಿಗಳ್ ತಾವೆರಡುಂಬಲಂಗಳ ವಿನೂತ್ನೈಕಾಂಗಸೂರರ್ ಭಟರ್ ೨೭

ವಚನ: ಬಳಿಯಂ ನೇಸರ್ಮೂಡುವುದುಮಾ ಸುಷೇಣನೆಂಬ ಸೇನಾಧಿಪತಿ ಪ್ರಭಾತಕಾಲದೊಳವಶ್ಯಂ ಪ್ರಭಾವನೀಯಮಾದ ಜಿನಪೂಜೋತ್ಸಾಹಮಂ ಮಹಾಪ್ರಭಾವನಾ ವಿಭವದಿಂ ಪ್ರಭಾವಿಸಿ ಮತ್ತಂ ಪ್ರತಿಪಕ್ಷ ಕ್ಷತ್ರಿಯಕುಮಾರ ಪಕ್ಷವಿಕ್ಷೇಪಣೋದ್ಯುಕ್ತಚಿತ್ತನಾಗಿ ಸಮರಸಮಾರಂಭಸಂರಂಭನಿಬಂಧನೀಭೂತ ನಿಜವಿಜಯಪ್ರಸ್ಥಾನ ಸೂಚಕಸನ್ನಾಹಭೇರಿಯಂ ಪೊಯಿಸಿದಾಗಳ್

* ವಸುಷೇಣ ಚಮೂನಾಥ ಕಾಳೆಗಕ್ಕೆ ಪೊಱಮಡುವಲ್ಲಿ ಸೂರ್ಯಾಸ್ತಮಾನ (ಗಚ)

ಮಹಾಸ್ರಗ್ಧರೆ

ದೆಸೆಯೆಂಟುಂ ವಾರ್ಧಿಯೇಳುಂ ಕುಲಗಿರಿಗಳವಾಱುಂ ಸುವರ್ಣಾದ್ರಿಯೈದುಂ
ಶಶಿಭಾಸ್ವದ್ಬಿಂಬನಾಲ್ಕುಂ ಭುವನವಳಯಿಮೂಱುಂ ಪರಿಕ್ಷೋಭದಿಂ ಮೂ
ಮುಸಕಂಬೆತ್ತಿರ್ದ ಧಾತ್ರೀಗಗನಕವೆರಡುಂ ತನ್ನೊಳೊಂದಾಗಿ ತಾಂ ಮು
ದ್ರಿಸಿದತ್ತೆಂಬಿನಂ ತುಂಬಿದುದಭಿನವಸನ್ನಾಹಭೇರಿಪ್ರಣಾದಂ ೨೮

ವಚನ: ಎಂತು ಮಂತ್ರವಾದಿಯ ಸಮಾಕರ್ಷಣಮಂತ್ರೋಚ್ಚರಣಧ್ವನಿಯ ಶ್ರವಣದಿಂ ವ್ಯಂತರಸಂತತಿ ನೆರೆದು ಬರ್ಪುದಂತಿರಾ ತಂತ್ರಾಧಿನಾಥನ ಪೂರ್ಣಮಾನವಿಜಯ ಭೇರೀಧ್ವನಿಯ ಪರಿಪೂರ್ಣಸಮಾಕರ್ಣದಿಂದಶೇಷಪರಿವಾರಂ ಪೂರ್ಣಮಾಗಿ ನೆರೆದು ಬರಲೊಡಂ
*

†ಉತ್ಪಲಮಾಲೆ

ಪೊಂಗವಚಂಗಳಂ ಕುಡೆ ಚಮೂಪತಿ ವೀರಭಟರ್ಗೆ ರಾಗದಿಂ
ಪಿಂಗದೆ ತೊಟ್ಟುಕೊಳ್ವ ಪದದಲ್ಲಿ ರಣೋತ್ಸವ ಲಾಭಮಾದುದೆಂ
ದಂಗಮತೀವ ಪುಷ್ಟತೆಯನಾಂತೊಡೆ ಸೆಲ್ಲದಿರಲ್ಕಮಲ್ಲಿಯು
ತ್ತುಂಗಮನರ್ ಭಟರ್ ಕಿಱಿಯುವೆಂದವನರ್ಥಿಗೆ ಕೊಟ್ಟರಾಕ್ಷಣಂ ೨೯

ವಚನ: ಆಸಮಯದೊಳ್

ಚಂಪಕಮಾಲೆ

ಕುದುರೆಯನೆಯ್ದೆ ಹಲ್ಲಣಿಪ ಹಕ್ಕರಿಯಿಕ್ಕುವ ಜಂಜೆಯುಂ ಮಹಾ
ಮದಕರಿಗೊಲ್ದು ಪಣ್ಣುವ ರಥಾಗ್ರಿಮದಲ್ಲಿ ಶರಂಗಳಂ ಸಮಂ
ತೊದವಿಪ ಜೋಡುಮಂ ತೊಡುವ ಸೀಸಕಮಿಕ್ಕುವ ಯೋಧಕೋಶಮಂ
ಪದುಳಿಸುವಂಗರಕ್ಷಕರನಾಗಿ ಸಸಂಭ್ರಮಮುಣ್ಮಿತೆತ್ತಲುಂ ೩೦

ವಚನ: ಅಂತುಮಲ್ಲದೆಯುಂ

ಕಂದ: ಇನಿತುಂ ಕಾಲಕ್ಕಾದ
ತ್ತನುವರಮಿಂದೆಮ್ಮ ಬಾಹುದಂಡದ ಕಂಡೂ
ಯನಮುಂ ಕಳಲ್ಚುವೆಡೆಯಾ
ಯ್ತೆನುತುಂ ಕೊರ್ವುತ್ತುಮಿರ್ದುದಾ ಸುಭಟಜನಂ ೩೧

ವಚನ: ಸಮನಂತರಮಾ ಸುಷೇಣನೆಂಬ ಸೇನಾನಾಥಂ ಥಳಥಳಿಪ ಮಾಣಿಕ್ಯ ಮಯೂಖ ಸನಾಥನವೀನನೇಪಥ್ಯರಚನಾವಿಶೇಷ ಪೃಥುಳೀಕೃತ ಸಹಜಸೌಂದರ್ಯಸಮುಪ

* ವೀರಾಳಾಪ (ಗ) † (ಚ) ಪ್ರತಿಯಲ್ಲಿ ೨೯ ರಿಂದ ೩೪ ಪದ್ಯಗಳಿಲ್ಲ.

ಗೂಢನುಂ ರಣಕೇಳೀಕಳಾವಿಳಾಸಪ್ರೌಢನುಂ ಪ್ರವರ್ಧಮಾನಮದಪ್ರರೂಢಪಟ್ಟವರ್ಧನ ಗಂಧಸಿಂಧುರಬಂಧುರಸ್ಕಂಧಸಮಾರೂಢನುಮಾಗಿ ಸಂಭ್ರಮಪ್ರಾಪ್ತನಿಜಾಪ್ತಬಲಂಬೆರಸು ಹಿತಪುರೋಹಿತಸಮುಪದಿಷ್ಟ ವಿಶಿಷ್ಟಶುಭಮುಹೂರ್ತಂ ನಿಜವಿಜಯಶಿಬಿರಮಂ ಪೊಱ ಮಟ್ಟು ರಾಜಮಾರ್ಗದಿಂ ಸಂಗ್ರಾಮರಂಗಕ್ಕೆ ನಡೆವಾಗಳ್

ಕಂದ : ಸಲಹಿದುರುಮೂಲಬಲಮಂ
ಕೆಲದೊಳ್ ಬರವೇಳಿ ನಡುವೆ ಮಿತ್ರರ ಬಲಮಂ
ಸಲೆಯೋಜಿಸಿಯಾಟವಿಕರ
ಬಲಮಂ ಕಡೆಯೊಳ್ ನಿಯಾಮಿಸಿದನಾ ಭೂಪಂ ೩೨

ಚಂಪಕಮಾಲೆ

ಬಿರುದಿನ ತೋರ ಹೊನ್ನಕಡೆಯಂಗಳ ಬಾವುಲಿಯೋಳಿಯೋಳಿಯು
ದ್ಧುರತರ ಝುಂ ಝುಣಂ ಝುಣ ಝುಣ ಝುಣ ಝುಂ ಝುಣಮೆಂಬ ರಾವದಿಂ
ಹರಿದಧಿಪರ್ಗೆ ತನ್ನ ಜಯಮಂ ಸಲೆ ಸಾಱುತುಮಿರ್ದುದೆಂಬಿನಂ
ಪರಕಲಿಸೆತ್ತಲುಂ ನಡೆದುಬಂದುದು ಶೂರಪದಾತಿಸೈನ್ಯಕಂ ೩೩

ಕಂದ : ಕೂಡೆ ತೊಟ್ಟಿರ್ದ ವಜ್ರದ
ಜೋಡುಗಳ ಕವಲ್ತು ಪೊಳೆವ ಜೆಳಗಿನ ಬಳಗಂ
ನಾಡೆಯುಮಿನ್ಮಡಿಸಿತ್ತೊ
ಕ್ಕೊಪ್ಪಿಡೆದ ಪಲತೆಱದ ಕೈದುಗಳ ಪೊಳೆಪಿಂದಂ ೩೪

ವಚನ : ಇಂತು ಸಕಳಚಾತುರ್ದಂತಬಲಂ ನೆರೆದು ಸಮರಸನ್ನದ್ಧಮಾಗಿ ದೆಸೆ ಬೆಸಲೆಯಾದಂತೆ ಸುತ್ತಲುಂ ಪಸರಿಸಿ ನಿಬಿಡಮಾಗಿ ಮೋಹರಿಸಿ ನಡೆವೆಡೆಯೊಳ್

ಉತ್ಪಲಮಾಲೆ

ಪಿಂಗಲಿ ಶಾಂತದಲ್ಲಿ ಕಡುಬಿಂಕಮನಾಂತದು ನಿಂದು ಸುಸ್ವರಂ
ಸಂಗಳಿಸುತ್ತಿರಲ್ ಬಳಿದು ಬಾಯ್ಕ್ಕೊಳುತಿರ್ದುದು ಕೃಷ್ಣಪಕ್ಷಿ ತ
ನ್ನಂಗನೆಯಂ ಪುರಸ್ಸರಿಸಿ ತಮ್ಮೆರಡುಂ ಬಲಜೇಷ್ಟೆಗೆಯ್ವುತುಂ
ಪಿಂಗದೆ ತಾಱನಿತ್ತು ಬೆಳೆಗೆಯ್ಯೊಳಗಿರ್ದುವು ತಮ್ಮೊಳೊಲ್ಮೆಯಿಂ ೩೫

ವಚನ : ಅದಂ ಕಂಡು ಸುಷೇಣನೆಂಬ ಸೇನಾಧಿರಾಜಂಗೆ ವಿಜಯಸೂಚಿಪಿಶುನಂಗ ಳಾದ ಮಂಗಳಶಕುನಂಗಳನಾಲಿಸುತ್ತುಮವಳೋಕಿಸುತ್ತುಮಿರ್ದ ಸೈನಿಕರೆಲ್ಲಂ ಜಯಜಯ ಯೆಂದುದ್ಘೋಷಿಸಿ ಲೇಸುಲೇಸೆಂದು ಮಿಗೆಪೊಗಳ್ವುದನಿಳಾತಳಾಧಿಪಂ ಕೇಳ್ದು ವಿಪುಳಪುಳಕ ಕಳಿಕಾಜಾಳಪರಿಕಳಿತಕಳೇವರನಾಗಿ ಪರಮಾನಂದಮನಪ್ಪುಕೆಯ್ದಿ ಕೈಲನಂ ನೋಡುತ್ತುಂ ಸಡಗರದಿಂ ನಡೆಯೆ

ಮಹಾಸ್ರಗ್ಧರೆ

ಅತಿಚಿತ್ರಂಬೆತ್ತ ಸೊಕ್ಕಾನೆಗಳ ನೊಸಲ ಸಿಂಧೂರರಾಗಪ್ರಭಾ ಸಂ
ತತಿಯುಂ ಸನ್ನದ್ಧಘೋಟಪ್ರಕಟವಿಕಟಪರ್ಯಾಣ ನಾನಾಪ್ರಕಾರ
ದ್ಯುತಿಯುಂ ಕೆಂಧೂಳಿಯೊಳ್ ಸಂಗಳಿಸಿ ಪುದಿದು ಜೆಲ್ವಾಯ್ತು ಪೋಪಲ್ಲಿ ಸೇನಾ
ದ್ಭುತದೊಡ್ಡಿಂಗಂದು ಕೆಂಬಟ್ಟೆಯ ಪಸಿಪ ಮೇಲ್ಗಟ್ಟುಮಂ ಕಟ್ಟಿದನ್ನಂ ೩೬

ವಚನ: ಅದಲ್ಲದೆಯುಂ

ಕಂದ: ಕೆಂಧೂಳಿ ಮುಸಗಿ ಸೈನ್ಯಮ
ನಂದುಱಿ ಮೂವಳಸುವಳಸಿ ಸುತ್ತಲುಮೆಲ್ಲಂ
ಮುಂದ್ಯೆಸಿ ನಿಂದು ಕಱಿದುದು
ಕುಂದದ ನಡೆಗೋಟೆಯೆಂಬ ಶಂಕಾರಸಮಂ ೩೭

ಉತ್ಪಲಮಾಲೆ

ಬಟ್ಟೆಯೊಳಿರ್ದ ಭಾವಿ ಕೆಱಿ ಪಳ್ಳ ಕೊಳಂಗಳ ನೀರನೆಲ್ಲಮಂ
ತೊಟ್ಟನೆ ಪೀರಿ ಬತ್ತಿಸಿದುದಾಕ್ಷಣಮಾ ಘನಸೈನ್ಯಪಾದಸಂ
ಘಟ್ಟನದಿಂದೆ ಪುಟ್ಟಿದ ರಜೋಬ್ರಜಮಾಗಳೆ ದಾನವಾರಿಯಿಂ
ದಿಟ್ಟಳವಾಗಿ ತುಂಬಿಸಿದುದಾನೆಗಳಾವಳಿ ಪಿಂದೆಪೋಗುತುಂ ೩೮

ಕಂದ: ಆ ರಜದಿಂ ಪೆರ್ಚಿದ ತನು
ವೋರಂತಿರೆ ಕಿಡಿಸಿದತ್ತು ರಿಪುಸತ್ತ್ವಮನೇಂ
ಕ್ರೂರಮ ಪೆರ್ಚಿರ್ದೊಡೆ ಸಂ
ಹಾರಿಸನೆ ನಿಜಾಗ್ರಜಾತರಾದೊಡಮಾರಂ ೩೯

ಮಿಕ್ಕು ಗಗನದೊಳ್ [1]ಪಾ[1]ಱುವ
ಪಕ್ಕಿಯುಮಾ ಸೇನೆಯಳವಿಯಂ ಕಾಣದೆ ತೇಂ
ಕಿಕ್ಕಿ ಪತಾಕಾಗ್ರದೊಳಂ
ದಿಕ್ಕೆಂದೊಡೆ ದಳದ ಪವಣನಱಿವವನಾವೊಂ ೪೦

ಉತ್ಪಲಮಾಲೆ

ತೋಱುಕೆವೆತ್ತ ಭೂರಿತರ ಬಾಡವ ಸಂಸ್ಥಿತಿಯಿಂದಮೊಪ್ಪಿ ಕೂ
ರ್ಪೇಱುದ ತೀರದಂಬಗಳನೆಯ್ದೆ ಳಕೊಂಡು ಗಭೀರಘೋಷಮಂ
ಬೀಱು ಮಹಾಬಲಂ ಪ್ರಳಯಕಾಲಸಮುದ್ರಮೆ ತನ್ನ ಮೇರೆಯಂ
ಮಿಾಱುಬರುತ್ತುಮಿರ್ದ ತೆಱದಿಂದಮುಗುರ್ವನದಿತ್ತುದಾಕ್ಷಣಂ ೪೧

[1] ಸಾ (ಗ)

ಕಂದ : ಜನನ ವಿಜೃಂಭಣನುಂ ತೋ
ಱುವ ಮಹಿಮೆಯನಾಂತಕಾರಣಂ ತೆಂಕಣದಿ
ಗ್ವಿವರದ ತೆಱದಿಂದಿರ್ದುದು
ವಿವಿಧಾಳಂಕಾರಸನ್ಯಮಾ ಭಟಸೈನ್ಯಂ ೪೨

ಚಂಪಕಮಾಲೆ

ಘನತರವಾರಿಯಿಂ ಪಡೆದುದದ್ಭುತಮಂ ಮಳೆಗಾಲಮೆಂಬಿನಂ
ಕನದುರುಮಂಡಳಾಗ್ರರುಚಿ ಭಾಸಿತದಿಙ್ಮುಖಮಾಯ್ತು ತೀವ್ರತೇ
ಜನುದಯಮೆಂಬಿನಂ ಪ್ರಬಳವಾಹಿನಿಯೆಂಬಿನಮಾಯ್ತು ರಾಜಹಂ
ಸ ನಮವಿಹಾರಕಂ ಬಹಳಸೇವೆಯದಾವರಿಸಿತ್ತು ಜೋದ್ಯಮಂ ೪೩

*

ವಚನ : ಇಂತುರ್ಬಿ ಕೊರ್ಬಿ ಬರುತ್ತುಮಿರ್ದ ಪೆರ್ವಡೆಯ ನಟ್ಟನಡುವೆ

ಉತ್ಪಲಮಾಲೆ

ಪಣ್ಣಿದ ಱಂಚೆಯಿಂದೆಸೆವ ಮಿಕ್ಕುಱಿತ ಸೊಕ್ಕಿದ ಪಟ್ಟದಾನೆಯಂ
ಬಣ್ಣಿಸಲೇಱಿ ಕೂರಿತೆನಿಪಾಯುಧಮಂ ಪಿಡಿದುದ್ಘವಜ್ರಸಂ
ಕೀರ್ಣಮೆನಿಪ್ಪ ಜೋಡನಿರದಿಕ್ಕಿಯನೇಕ ರಣಾನಕಸ್ವನಂ
ಘೂರ್ಣಿಸೆ ಬಂದನಂದು ರಣಭೂಮಿಗೆ ಶೂರಸುಷೇಣಸೈನ್ಯಪಂ ೪೪

ಎತ್ತಿದ ಜೆಲ್ಪ ಬೆಳ್ಗೊಡೆ ಸುಧಾಕರಬಿಂಬಮಿದೆಂಬ ಶಂಕೆಯಂ
ಬಿತ್ತರಿಸಲ್ ಸುವರ್ಣಮಯದಂಡವಿಮಂಡಿತಚಾರುಚಾಮರಂ
ಸುತ್ತಲುಮೆಲ್ಲಿಯುಂ ಪೊಳೆದು ಸಂಚಳಿಸುತ್ತುಮಿರಲ್ ಸುಷೇಣನೆಂ
ಬುತ್ತಮಸೈನ್ಯನಾಥನುಱದಾಹವಭೂಮಿಯೊಳೊಡ್ಡಿ ನಿಲ್ವುದುಂ ೪೫

ರಕ್ಕಸರಂತೆ ಕಿಚ್ಚಿನುರಿಯಂತೆ ದಲುಗ್ರತೆವೆತ್ತ ವೀರರಂ
ದಿಕ್ಕಲದಲ್ಲಿ ಮತ್ತಮಿರದೊಡ್ಡಿದರೆಯ್ದೆ ವಿರೋಧಿವರ್ಗಮಂ
ತೆಕ್ಕದೆ ಕೊಂದು ಬಿರ್ದುಣಿಸನಿಕ್ಕುವ ಬೇವಸದಿಂ ಜವಂಗೆ ಕೈ
ಮಿಕ್ಕವರಾತ ನಿನ್ನೆರೆಯೊಳಿರ್ದವರಿಂಗೆಣೆಯಾದಕಾರಣಂ ೪೬

ಮತ್ತೇಭವಿಕ್ರೀಡಿತ

ಮೊನೆಯಲ್ಲೆಮ್ಮೊಡನಾರೊ ತಳ್ತಿಱುವ ಗಂಡರ್ ನಮ್ಮವೊಲ್ ಕಾದುವೊಂ
ದನುವಂ ಬಲ್ಲವರಾರೊ ಮುಯ್ಗಲಿಗಳುಂ ನಾವಲ್ಲದಿನ್ನಾರೊ ಪೇ
ಳೆನುತುಂ ಮುಖ್ಯಸಮಸ್ತನಾಯಕರಸಂಖ್ಯಾತೋರುಸೈನ್ಯಾವೃತರ್
ಘನಬಾಹಾಬಳರೊಡ್ಡಿ ನಿಂದರುಱದಾ ಸಂಗ್ರಾಮಸಂರಂಭದೊಳ್ ೪೭

* ಕಾಳೆಗ (ಗಚ)

ವಚನ : ಮತ್ತಂ ರಿಪುಬಲತಿಮಿರಸಂಹಾರಣಪ್ರವೀಣನೆನಿಪ ಸೂರ್ಯಪ್ರಭನುಂ ಪರಿಪಂಥಿಕರಿಘಟಾವಿಘಟನಪಟುವೆನಿಪ ಸಿಂಹರಥನುಂ ಪರತುರಗದಳವಿದಳನವಿಳಸಿತಕದನ ಕೇಳೀನಿಪುಣನೆನಿಪ ಕೃತಾಂತವಕ್ತ್ರನುಂ ವೈರಿವರೂಥಿನೀರಥಯೂಥನಿರ್ಮಥನಗ್ರಥಿತ ಮನೋರಥನೆನಿಪ ಮಹಾರಥನುಮಭಿಮಾತಿಪಾತಿಯಾತನಾಸಮುಪಜಾತಿಸಾತಿಶಯ ನಿರತನೆನಿಪ ವಿಜಯರಥನುಂ ವಿಪಕ್ಷಪಕ್ಷಪರಿಕ್ಷೇಪಣದಕ್ಷನಪ್ಪ ದುಷ್ಪ್ರೇಕ್ಷನುಂ ವಿರೋಧಿ ಸಮುದ್ದಂಡದಂಡನಾಥಪ್ರಬಳಬಳಕುಳಕುಧರಪರಿಖಂಡನ ಪ್ರಚಂಡದಂಭೋಳಿದಂಡನಿಭ ಬಾಹುದಂಡಕಾಂಡಮಂಡಿತನೆನಿಪ ದಂಡಧರನುಮೆಂಬ ಪೆಸರಪೆಸರ ಮೊನೆಯನಾಯ್ಕರುಂ ರಣರಸಿಕರಪ್ಪಧಿರಾಜ ಮಹಾರಾಜಮಂಡಳಿಕಪ್ರಮುಖ ನಿಖಿಳರಾಜಕುಮಾರಕರುಂ ಶರಭನುಂ ಮಹಾಬಳನುಂ ಪ್ರಿಯವಿಗ್ರಹನುಂ ಮಹೇಂದ್ರನುಂ ಮೊದಲಾದ ಸಕಳಘೋಳಾಯಲರುಂ ತಂತಮ್ಮ ಚಾತುರ್ದಂತಬಲಂಬೆರಸು ಕರಿತುರಗರಥಾರೂಢರಾಗಿ ಸಂದಣಿಸಿ ಮುಂದೆನಿಂದ ಪಲವುಂ ಚಂದದ ಪೆಸರ ಪಳಯಿಗೆಗಳುಂಬರಮನಳ್ಳಿಱಿದು ಮಿಳಿರ್ದು ಮಿಳ್ಳಿಸುತ್ತುಮಿರೆ ಚತುರಂಗಬಲದ ವಿದ್ಯಾಬಲದ ಭುಜಬಲದೆಸಕದಿಂ ಮಾನಸಕಂಮಸಗಿ ಮುಳಿಸಂ ಮುಂದಿಟ್ಟು ಸಂಗ್ರಾಮಭೂಮಿಗೆಬಂದು ಸುಷೇಣನಿಯಮಿತಸ್ಥಾನದೊಳೊಡ್ಡಿ ನಿಲ್ವುದುಂ

ಉತ್ಪಲಮಾಲೆ

ಒಂದೆಡೆಯಲ್ಲಿ ಭೀಮರಥನೊಡ್ಡಿದನೊಂದೆಡೆಯಲ್ಲಿ ಸಿಂಹಣಂ
ಬಂದಿರದೊಡ್ಡಿದಂ ಯಮಮುಖಂ ಬಿಡದೊಂದೆಡೆಯಲ್ಲಿಯೊಡ್ಡಿದಂ
ಮಂದರಧೀರನೊಡ್ಡಿದನದೊಂದೆಡೆಯಲ್ಲಿ ದಲಿಂತು ಕೂಡೆ ಸಾ
ರ್ತಂದಿರದೊಡ್ಡಿನಿಂದರಧಿನಾಯಕರಾಹವಭೂಮಿಯೊಳ್ ಕರಂ ೪೮

ವಚನ: ಅಂತೆಡ್ಡಮಾಗೊಡ್ಡಿನಿಂದ ಪೆರ್ವಡೆಯೆಂಬಿಂಗಡಲ ನಟ್ಟನಡುವೆ ಮದಸಮುದಿತ ಮಾತಂಗಜದ ಮೇಲೆ ಕುಳ್ಳಿರ್ದು

ಕಂದ : ಅರುಣಮಣಿಭೂಷಣಪ್ರಭೆ
ಪರಕಲಿಸಿರೆ ಸುತ್ತಲುಂ ಸುಷೇಣಚಮೂಪಂ
ಶರನಿಧಿಯ ನಡುವೆ ಕುಳ್ಳಿದ
ವರುಣನ ರೂಪೆಂಬ ಶಂಕೆಯುಂ ಪುಟ್ಟಿಸಿದಂ ೪೯

ವಚನ : ಇಂತು ಸುಷೇಣಂ ಬಂದೊಡ್ಡಿನಿಂದುದನಾಗಳಖಿಳರಾಜಕುಮಾರಕರೆಲ್ಲಂ ಕೇಳ್ದು ಪರ್ಜನ್ಯದ ಗರ್ಜನಮಂ ಕೇಳ್ದ ಕಿಶೋರಕೇಸರಿಗಳಂತೆ ಕಿಸುಱಿ ತಾಮುಂ ಸಮರ ಸನ್ನದ್ಧರಾಗಿ ವಿಪುಳಕಳಕಳರವಂ ದಿಕ್ಕುಳಂ ಮುಕ್ಕಳಿಸುವಂತು ನಿಸ್ಸಾಳಮಂ ಸೊಯ್ಸಿ ತತ್ಸಮಯಕ್ಕುಚಿತ ಸಮುದಗ್ರಸಮಗ್ರಪ್ರಸಾದನ ಸಾಮಗ್ರೀಪ್ರಸಾದಿತಮುಮಾದ

ತಂತಮ್ಮ ಚಾತುರ್ದಂತಬಲಮುಂ ಕೂಡಿಕೊಂಡು ನಿಜಶಿಬಿರಮಂ ಪೊಱಮಟ್ಟುದಿರದಿದಿರೆತ್ತಿ ಪೋಪಾಗಳ್

ಮತ್ತೇಭವಿಕ್ರೀಡಿತ

ಪ್ರತಿಕೂಲಾನಳನಿಂ ಪುರಂ ಮುಱಿವುದಂ ದೇವಾಲಯಂ ಬೀಳ್ವುದುಂ
ಸುತಘೋಟಂಗಳ ಕಣ್ಗಳಿಂ ಜಲಕಣಂ ಬೀಳ್ತಪ್ಪುದಂ ಕಂಡೊಡಂ
ಪ್ರತಿಪಕ್ಷಂ ಮುಱಿದಪ್ಪುದೆಂದುಱದಮಂ ನಿಶ್ಶೇಷಭೂಪಾಲರು
ದ್ಧತಿಯಿಂ ದುರ್ನಯಮುಂ ಕರಂ ಸುನಯಮೆಂದೊಳ್ದರ್ ಮಹಾಮೂರ್ಖರುಂ ೫೦

ವಚನ: ಮತ್ತಮರ್ಥೀದೋಷಂ ನಪಶ್ಯತಿಯೆಂಬೀ ನಾಣ್ಣುಡಿಯುಂ ವ್ಯಕ್ತೀಕರಿಸುತ್ತುಮಪಶಕುನಂಗಳಂ ಬಗೆಯದೆ ವಿಗ್ರಹದಾಗ್ರಹಮನೆ ಮುಂದಿಟ್ಟು

ಮಹಾಸ್ರಗ್ಧರೆ

ಮದಧಾರಾಪೂರದಿಂದಂ ಧರಣಿತಳಮುಮಂ ಕೂಡೆ ಜೋಗೇಳುವನ್ನಂ
ಮುದದೆತ್ತಿರ್ದಾತಪತ್ರಂಗಳ ಬಳಗದಿನಾಕಾಶಮುಂ ತೀವುವನ್ನಂ
ಪಡೆದುತ್ಫುಳ್ಳಪ್ರಭಾಮಂಡಳದಿನಖಿಳದಿಗ್ಭಾಗಮುಂ ತುಂಬುವನ್ನಂ
ಪದುಳಂಬಂದತ್ತು ನಾನಾನೃಪತನಯಕದಂಬಂ ಪ್ರತಾಪಾವಳಂಬಂ ೫೧

ವಚನ: ಅಂತು ಮಹಾಮಹಿಮೆಯಿಂ ಸಮರಮಹೀವಳಯಕ್ಕವಿಳಂಬನದಿಂದೆಳ್ತರದಿಳಿಜೆಳೆದಂತಿರಾ ವ್ಯೂಹಕ್ಕೆ ಪ್ರತಿವ್ಯೂಹಮಾಗೊಡ್ಡಿನಿಲ್ವುದುಮಾಗಳೆರಡುಂದಳದೊಳ್

ಮಹಾಸ್ರಗ್ಧರೆ

ರಣಭೇರೀಭೂರಿಭಾಂಕಾರರುತಿ ಬಹಳನಿಸ್ಸಾಳಧಾಂಕಾರಘೋರ
ಕ್ಷಣನಂ ಕೋದಂಡಟಂಕಾರವಿಪುಳನಿನದಂ ಕಾಹಳೋತ್ತಾಳಸಂಭೀ
ಷಣಪೂತ್ಕಾರಪ್ರಣಾದಂ ಬಱದನಿ ಗಡ ಝುಣ್ಕಾರನಿರ್ಘೋಷಣಂ ದಾ
ರುಣಹೇಷಾಸ್ಫಾರಿಮತ್ತಂ ಪಸರಿಸೆ ಘನಕೋಳಾಹಳಂ ಪೊಣ್ಮಿತ್ತೆತ್ತಂ ೫೨

ಮತ್ತೇಭವಿಕ್ರೀಡಿತ

ಎಡಮುಂ ಸೇಸೆಯು ಪಣ್ಣಿದಾನೆಗಳನಾ ಕಾಲಾಳ್ಗಳಂ ತೇರ್ಗಳಂ
ಪರಮಾಶ್ವಂಗಳ ಲೆಕ್ಕದೊಂದು ಪವಣಂ ಬಲ್ಲನ್ನನಾವಂ ದಲೀ
ಧರಣೀಮಂಡಳದಲ್ಲಿ ಮತ್ತೆ ಚತುರಾಸ್ಯಂಗಾದೊಡಂ ಸಂಖ್ಯೆಯೊಳ್
ದೊರೆಕೊಳ್ಗುಂ ಭ್ರಮೆಯುದ್ದಲೆಂದೊಡದನೇನೆಂಬೆ ಬಾಹಲ್ಯಮಂ ೫೩

ವಚನ: ಇಂತುಭಯಬಲಮುಂ ನೆಲನೆಡೆನೆಱಿಯದಂತು ಸಮರಸಮುಚಿತವ್ಯೂಹಪ್ರತಿವ್ಯೂಹಸ್ಥಾಪನೆಗಳಿಂ ಕ್ರಮಮನತಿಕ್ರಮಿಸದೊಡ್ಡಿನಿಲ್ವುದುಮಾಗಳಲ್ಲಿ

ಚಂಪಕಮಾಲೆ

ನೆಲನೊಡೆವಂತಿರಂಬರತಳಂ ಮುಱಿವಂತಿರಲೆಂಟುದಿಕ್ಕುಮಂ
ತೊಲಗದೆ ನುಂಗುವಂತೆ ಕುಲಪರ್ವತಮುಮಂ ಚಳಿಪಂತೆ ಸೈನ್ಯಸಂ
ಕುಳದೊಳಗುಣ್ಮಿ ಪೊಣ್ಮುವ ಮಹಾಧ್ವನಿಯೊರ್ಮೊದಲಲ್ಲಿ ಭೋರೆನಲ್
ಕಲಿಭಟರುರ್ವಿದರ್ ಪಳಿಂಚುಪುಣ್ಗಲೆಗಳ್ ಬಿರಿವನ್ನಮಾಕ್ಷಣಂ ೫೪

ವಚನ : ಅಂತು ಪ್ರಳಯಕಾಲಪ್ರಕ್ಷುಭಿತಜಳನಿಧಿಧ್ವಾನಮೆಂಬಂತಿರದ್ಭುತಂಬೆತ್ತಿರಡುಂ ಪಡೆಯ ರಣಾನಕಸ್ವನಂ ಕಿವಿ ಸದ್ದಂಗಿಡುವಿನಂ ಪರಿಪೂರ್ಣಿಸುತ್ತುಮಿರಲೆರಡುಂ ಬಲದ ದೊರೆಗಳ್ ಕಡುಕನಲ್ದೊನಲ್ದು ಕದನಕೇಳೀಕುತೂಹಳವಿಳೋಕನಸಮಾಕುಳಿತರಾಗಿ ಕಡೆಗಾಲದ ನಂಜಿನ ಪ್ರಭಂಜನಂ ಬೀಸುವಂತೆ ಕೈವೀಸುವುದುಂ

ಮಹಾಸ್ರಗ್ಧರೆ

ಪಿರಿದುಂ ಕೈಮಿಕ್ಕ ಕೋಪಿಂ ಕುಬುಬುಬುಬುಬುಬುಮೆಂದಾಲುತಂ ಬೊಬ್ಬೆಯೊಂದ
ಬ್ಬರಮುಬ್ಬಿದ್ದೆಯ್ದೆ ಪರ್ವಲ್ ಬಿಡವೆರಡುಂಬಲಂ ತಮ್ಮೊಳೊಂದಾಗಿಕೂಡಿ
ತ್ತೆರಡುಂ ತಾಳಂಗಳುಂ ಕೂಡುವವೊಲುಲಿಯುತುಂ ಮತ್ತಮಾ ಪೊತ್ತಿನಲ್ಲ
ಚ್ಚರಿಯಿಂ ಪೂರ್ವಾಬ್ಧಿಯುಂ ಪಶ್ಚಿಮಜಲನಿಧಿಯುಂ ಕೂಡುವಂತಾಯ್ತು
ಚೋದ್ಯಂ ೫೫

ವಚನ: ಆಗಳ್

ಕಂದ : ಬಳಯುಗಳದಿಂದೆ ಪುಟ್ಟಿದ
ಖಳಧೂಳೀಜಾಳಕಂ ಮುಸುಂಕಲ್ ದೆಸೆಯಂ
ಕುಲಗಿರಿಗಳ್ ಗೆಲೆವಂದವು
ನೆಲದೊಳಗರೆಪೂಳ್ದ ಗುಂಡುಗಲ್ಗಳ ಚೆಲ್ವಂ ೫೬

ವಚನ: ಮತ್ತಂ

ಕಂದ: ಕುದುರೆಗಳೊಳ್ ಕುದುರೆಗಳು
ನ್ಮದದಾನೆಗಳೊಡನೆಯಾನೆಗಳ್ ತೇರ್ಗಳೊಳ
ಗ್ಗದ ತೇರ್ಗಳ್ ಕಾಲಾಳ್ಗಳೊ
ಳೊದವಿದ ಕಾಲಾಳ್ಗಳನುಮ ತಾಗಿದರಾಗಳ್ ೫೭

ವಚನ: ಇಂತೆರಡು ಪಡೆಗಳುರವಣಿಸಿ ತಾಗಿ ತಳ್ತಿಱಿವ ಪೊತ್ತಿನೊಳ್

ಚಂಪಕಮಾಲೆ

ಪಗಲಿರುಳಾಗಸಂ ನೆಲನಿದೆಂಬ ವಿಕಲ್ಪದನಲ್ಪಕಲ್ಪನಂ
ಬಗೆವೊಡದಾರಚಿತ್ತದೊಳಮಾಗದವೊಲ್ ಶರಪಂಜರಂಗಳಂ
ಮಿಗೆರಚಿಸುತ್ತುಮಚ್ಚರಿಯನೆಚ್ಚುಱಿ ಬಿಲ್ಪಡೆ ಕಾದುತಿರ್ದುದೀ
ಜಗಮುರುತೀಕ್ಷ್ಣಬಾಣಮಯಮೆಂಬಭಿಶಂಕೆಯನುಂಟುಮಾಡುತುಂ ೫೮

ಪಱಿತಗಳ ಘೋಷಣಂ ಮೊಳಗು ಕೈದುಗಳ ಪ್ರಭೆ ಮಿಂಚು ಜ್ಯೋಡಿಸೊಳ್
ಮೆಱಿವುರುಪಂಚರತ್ನಕಿರಣಪ್ರಸರಂ ದಿವಿಜೇಂದ್ರಚಾಪಮೆಂ
ತುಱಿಪೆರಡುಂಬಲಂ ಕಱಿವುತಿರ್ದುದದಂಬಿನ ನಟ್ಟ ಸೋನೆಯಂ
ನೆಱಿನುಳೆಗಾಲಮೆಂಬ ತೆಱದಿಂದಮೆ ಕತ್ತಲಿಸುತ್ತುಮೆತ್ತಲುಂ ೫೯

ಶಾರ್ದೂಲವಿಕ್ರೀಡಿತ

ಅಂಬಂ ಹೂಡಿದರೀಗಳೀಗಳೆನೆಪೆರ್ಚರ್ ಬಂದುದಿಂತೀಗಳೆಂ
ದೆಂಬೀ ಖೇದದ ನಿಟ್ಟೆ ಸುತ್ತರಿದೆಸಲ್ ಪುಂಖಾನುಪುಂಖಂ ಸಮಂ
ತಂಬಂಬಟ್ಟುವಿಸಂ ದಲೆಚ್ಚು ಮೆಱಿದರ್ ಬಿಲ್ವಿದ್ಯೆಯಂ ಜೋದರಾ
ದಂ ಬಾಣಂ ತಟವುಚ್ಚಿಪೋಗಿ ತನುಸಂ ಜೆನ್ನಲ್ಲಿ ತೋರ್ಪಂದದಿಂ ೬೦

ಒಂದಂಬಾಗಿಯೆ ಬಂದು ತಾಗುವೆಡೆಯೊಳ್ ಸೂಱಾಗಿ ತಟ್ಟುಚ್ಚಿ ಬೆ
ನ್ನಿಂದಂ ತಾಂ ಪೊಱಮಟ್ಟುಪೋಗಿ ಸೆಣಸಂ ಸಾಲಿಟ್ಟು ಪೊಣ್ಮೆಸುವಾ
ಪಿಂದಂ ಮಾಯದ ಬಾಣಮಲ್ಲದಿದು ಮತ್ತೊಂದಲ್ತು ನಟ್ಟಾಕ್ಷಣಂ
ಕೊಂದೇ ತೋರ್ಪುದು ನಂಜಿನಂಬಿದು ದಿಟಂ ತಾನೆಂದು ಕೊಂಡಾಡಿದರ್ ೬೧

ಚಂಪಕಮಾಲೆ

ಸಲೆ ಚತುರಂಗಸೈನ್ಯಪದಘಟ್ಟನದಿಂದೊಡೆದಿರ್ದ ಸಂಗರ
ಸ್ಥಳದೊಳೆ ರಕ್ತವೃಷ್ಟಿಸುರಿದೆಲ್ಲೆಡೆಯುಂ ಪದನಾಗೆ ಬಾಣಮೊ
ಕ್ಕಲಿಗನವೊಲ್ವೆಣಂಗಳನೆ ಸಾಲಿಡುತುಂ ಪರಿತರ್ಪ ಬೀಜಮಂ
ಕುಳಮನೆ ಬಿತ್ತಿದತ್ತು ರಿಪುಮರ್ಮಭಿಘಾಗ್ನಿಕಣಾಳಿ ದಂಭದಿಂ ೬೨

ಕಂದ : ಸೊಗಯಿಪ ಧರ್ಮಗುಣಂಗಳ
ನಗಲಿದೊಡಾಕ್ಷಣದೊಳನ್ಯರಂ ಕೊಂದಪನಂ
ಬುಗಳೆಂದಡೆ ವಿರಹಿತಧ
ರ್ಮಗುಣರ್ ಪೆಱರಂ ವಿಘಾತಿಸುವುದದ್ಭುತಮೇ ೬೩

ಉತ್ಪಲಮಾಲೆ

ಹೂಣಿಗರೆಲ್ಲರುಂ ನೆರೆದು ಹೂಣಿಸಿಯಾರ್ದೆಸಲಂಬುಗಳ್ ಪರ
ಶ್ರೇಣಿಯನೆಯ್ದೆ ತಾಗೆ ಕರುಳೊಕ್ಕುದು ಕಣ್ಕಳೆದತ್ತು ಪಣ್ಗಳಿಂ
ಶೋಣಿತಪೂರಮುಣ್ಮಿದುದು ಕಾಲ್ಕಡಿಖಂಡಮುಮಾಯ್ತು ಪಾಣಿಯುಂ
ಮಾಣದೆ ಖಂಡಿಸಿತ್ತು ಕಿವಿ ಕಿತ್ತುದು ಕತ್ತರಿಸಿತ್ತು ನಾಸಿಕಂ ೬೪

ವಚನ : ಅಂತಾಸುರಮಾಗಿ ನಿಂದು ಕಾದುವೆಡೆಯೊಳ್

ಕಂದ: ಬಿಲ್ಲಬಿತ್ತಿಗರ ಮೆಯ್ಯೊಳೊ
ಳೆಲ್ಲಂ ಗಜಱಿಕೋಱುಪಂತೆ ಕೀಲಿಸಿನಿಲೆ ಕಡೆ
ಯಿಲ್ಲದ ಶರಂಗಳಾವಳಿ
ಸಲ್ಲಕಿಯಂಕುರಿಸಿಪಂತಿರವರೆಸೆದಿರ್ದರ್ ೬೫

ವಚನ: ಮತ್ತಂ

ಕಂದ: ಶರಜಾಳಂಗಳ್ ತೀರಲ್
ತಿರುಗಳ್ ಪಱಿಯಲ್ ಶರಾಸನಂಗಳ್ ಮುಱಿಯು
ಲ್ಕುರವಣೆಯಿಂ ಬಿಲ್ಲಾಳ್ಗಳ್
ಸುರಿಗೆಗಳಂ ಕಿಳ್ತು ತಿವಿದು ಕಾದುತ್ತಿರ್ದರ್ ೬೬

ವಚನ: ಬಳಿಯು ಮುಕ್ಕ್ಕಡಿಯ ಭೇಪಜನಶದಿಂದವುಂ ಜೆಕ್ಕನೆ ಮುಱಿಯೆ ಗೋಣ್ಮುರಿಗೆ ತಲೆವೊತ್ತು ಬಿತ್ತರಿಸಿ ಕಾದುತ್ತುಮಿರ್ಪಾಗಳ್

ಶಾರ್ದೂಲವಿಕ್ರೀಡಿತ

ಮುಷ್ಟಾಮುಷ್ಟಿ ಕಚಾಕಚಿ ಪ್ರಕಟದಂಡಾದಂಡಿ ದೀರ್ಘೀಭವ
ದ್ಯಷ್ಟ್ಯಾಯಷ್ಟಿ ರಥಾರಥಿ ಪ್ರವರಪಾದಾಪಾದಿಯಾಗಿಂತು ಸಂ
ತುಷ್ಟರ್ ವೀರಭಟರ್ ಪರಸ್ಪರಮತೀವೋಗ್ರತ್ವದಿಂ ಕಾದಿದರ್
ಧಾಷ್ಟ್ಯಂ ಚಿತ್ತದೊಳುಣ್ಮಿ ಪೊಣ್ಮೆ ಕುತುಕಂ ನೋಳ್ಪರ್ಗೆ ತೋರ್ಪಂದದಿಂ ೬೭

ವಚನ: ಆ ಪೊತ್ತಿನೊಳ್

ಮಹಾಸ್ರಗ್ಧರೆ

ತಿರಿಪುತ್ತಂ ಲೌಡಿಯಂ ಬಂಡಡಸಿ ಬಱಸಿಡಿಲ್ ತಾಗಿ ಪೊಯ್ವಂದಮಂ ಬಿ
ತ್ತರಿಸುತ್ತುಂ ಪೊಯ್ಯಲಾಗಳ್ ನಡು ಮುಱಿದು ಕೊರಲ್ ಕುಗ್ಗಿ ಮೆಯ್ ತಗ್ಗಿ
ಮತ್ತಂ
ಚರಣಂ ನುಗ್ಗಾಗಿ ಕೆಯ್ಯುಂ ಕಡಿದುಡಿದು ಬೆರಲ್ಕೂಡೆ ಬೆನ್ನೆತ್ತರೆತ್ತಂ
ಸುರಿವನ್ನಂ ಪೂಣ್ಕೆಯಿಂದೆಕ್ಕಟಿಗರ ಗಡಣಂ ಕಾದುತಿರ್ದತ್ತು ಚೋದ್ಯಂ ೬೮

ವಚನ: ಅದಲ್ಲದೆಯುಂ

ಚಂಪಕಮಾಲೆ

ಗಡಣಿಸಿದೊಡ್ಡಿ ಹಡ್ಡಣದಗುರ್ವಿಸುವೊಡ್ಡಣಮೊಡ್ಡಮಾಗಿ ಸಂ
ಗಡಿಸಿದ ಕೂ[1]ರಿ[1]ದಾಯುಧದ ನುಣ್ಪೆಳಗಿಂ ಪೊಳಪೇಱಿ ಕೂರ್ಪಮುಂ
ದಿಡೆ ತೊಡೆಸಾಟಿಯಂ ಕೊಡುವ ಬಲ್ಲುಲಿಯಂ ಪರಿಘೂರ್ಣಿಸುತ್ತುಮಿ
ರ್ದೊಡನೆ ಪಣಂಚಿದತ್ತು ಪೊಸಕಾಮುರ್ಗಿಲೊಡ್ಡು ಪಳಂಚುಪಂದದಿಂ ೬೯

---

1 ರ (ಗಚ)

ಕಂದ : ಕಡಿತಲೆಯುಂ ಜಡಿಯುತ್ತುಂ
ಕಡಿತಲೆಕಾಱರ್ ಕಡಂಗಿಬಂದುಱೆ ತಪ್ಪೊಳ್
ಕಡಿಖಂಡಮಪ್ಪಿನಂ ಕೈ
ಮಡಗದೆ ಪೊಯ್ದಾಡುತಿರ್ದರಚ್ಚರಿಯಿಂದಂ ೭೦

ನೆತ್ತಿಯ ಚಿಪ್ಪೊಡೆದು ಸಿಡಿ
ಲ್ದತ್ತಿರ್ದಯುಂ ಜನ್ನಿವಾರ ಗಟ್ಟಾಗಿಯೆ ಸೀ
ಳ್ದತ್ತುಱೆ ಕುದುರೆಯ ಬೆನ್ನಂ
ಕತ್ತರಿಸಿಯೆ ಪೋದುದೊಂದೆ ಘಾಯದ ವಶದಿಂ ೭೧

ಕಡಿತಲೆಯಿಂದಂ ತಲೆಯುಂ
ಪೊಡೆಯಲ್ ಪಱಿದುರುಳುತಿರ್ದುದಂ ಬಲ್ಪಿಂದಂ
ಸಿಡಿದೆತ್ತಿ ಮುಂಡದೊಳ್ ಮ
ತ್ತಡಸಿಟ್ಟಂ ಕಳಶಮಿಡುವವೊಲ್ ಬೀರಕ್ಕಂ ೭೨

ಪಱಿದುಬಿದ್ದುರುಳ್ವ ತಲೆ ಬೊ
ಬ್ಬಿಱಿವುತ್ತುಂ ಮರಳೆ ಪಗೆಯನಿದಿರಟ್ಟಿಯೆ ಬಂ
ದುಱೆ ಮೇಲೆವಾಯ್ದು ಮೂಗಂ
ನೆಱೆಕಚ್ಚುತ್ತಿರ್ದು ಪಡೆದುದದ್ಭುತರಸಮಂ ೭೩

ತಲೆ ಪಱಿದೊಡಮಾ ಮುಂಡಂ
ಕಲಿತನದಿಂ ಸುರಿಗೆಗಿಳ್ತು ತಳ್ತಿಱಿವುತ್ತುಂ ಕೆಲ
ಬಲದ ಸುಭಟರೆರ್ದೆಯೊಳ್
ನೆಲೆಗೊಳಿಸಿತ್ತಂದು ಬೀರಸಿರಿಯಚ್ಚರಿಯಂ ೭೪

ಬಸಿಱಿಂದೊಕ್ಕಕರುಳ್
ಮಿಸುಪೆರಡುಂ ತೊಡೆಯ ನಡುವೆ ತೊಡದಿರ್ದವಲಂ
ಬಿಸುತಿರೆ ಮೆಱೆದಂ ಬೀರಂ
ಪೊಸವೀರಶ್ರೀಗೆ ತೋರಣಂಗಟ್ಟಿದವೊಲ್ ೭೫

ಕೆಂಬಲಗೆಗಳೊಡ್ಡುಗಳಾ
ಡಂಬರಮುಂ ಸಂಜೆಗೆಂಪು ಪಸರಿಸಿತೊಪ್ಪಂ
ತಿಂಬಾದುದದಱೊಳೆಸೆದುದು
ಕೆಂಬಿಸಿಲೆನೆ ರುಧಿರಮಿಶ್ರಖಳ್ಗಮಯೂಖಂ ೭೬

ವಚನ: ಮತ್ತಂ

ಉತ್ಪಲಮಾಲೆ

ಇರ್ಮೊನೆಗಾಣ್ಬ ಕಕ್ಕಡೆಗವಿಕ್ಕಡಿಯಾಗಿಯೆ ಪೊಯ್ವ ಕತ್ತಿಗಂ
ಘರ್ಮನೆ ಜೀವಮಂ ಕೊಳ್ವ ಪಿಂಡಿವಳಕ್ಕಮನೇಕರಂ ತಗು
ಳ್ದೊರ್ಮೊದಲಲ್ಲಿ ಬೀಳಿಸುವ ಕುಂತಗಣಕ್ಕಮಡುರ್ತು ಪೊಯ್ವ ಬ
ಲ್ಬಿರ್ಸಟಿಕಾಚಯಕ್ಕೆ ಪವಣಿಲ್ಲದಱಿಂದತಿಭೀಷಣಂ ರಣಂ ೭೭

ವಚನ: ಇಂತಗುರ್ವುವಡೆದಿರ್ದಲದ ಪಾಯ್ದಳವೆಲ್ಲಮುಲಗಲಗಿನೊಳ್ ಪಳಂಚಿ ತಾಗಿ ಪಲವುಂ ತೆಱದಿನಿಱಿಪ ಬಿನ್ನಣದೊಳ್ ಮೆಱೆದು ಕೃತಾಂತನ ಕೋಣಂಗಳೆಂಬಂತೆ ತಮ್ಮೊಳೊರ್ವೊರ್ವರ್ ಮುಮ್ಮುಳಿಯಾಗಿ ಪೋರುತ್ತುಮೆಚ್ಚುಮಿಱಿದುಂ ಕುಱಿಗಳಂ ತಱಿವಂತೆ ತತ್ತಱಿಂದಱಿಯೆ ದೆಸೆದೆಸೆಗೆ ಮಸಗಿ ಪಾಱುವ ಪಣ್ದಲೆಗಳಿಂದಂ ಸುತ್ತಲುಂ ಸೂಸಿ ತೋಱುವ ಕಣ್ಣಾಲಿಗಳಿಂದಂ ಕಡಿಖಂಡಂಗಳಾದ ಮೆಯ್ಗಳಿಂದಂ ಪಿಂಡುಗೊಂಡು ಬಿಳ್ದು ಕೀಳ್ತುವ ತನಿಗಂಡಂಗಳಿಂದಂ ತಂಡುಮುಂಡಾಗಿ ಮುಱಿದುಬಿಳ್ದ ಮೂಳೆಗಳ ಬಳಗದಿಂದಂ ಕಡುರೌದ್ರಮಾಗಿ ಕಾದಿ ಸಕಳರಾಜಕುಮಾರಕರ ಪದಾತಿಬಲಮೆಲ್ಲಂ ಪಡಲ್ವಟ್ಟಂ ಬಳಿಯಂ ತೆಱಪುವಡೆದೀರೊಡ್ಡಿನ ತೇರೊಡ್ಡುಗಳ್ ಸಾರಥಿ ಪರಿಪ್ರೇರಣವಶದಿಂ ದೊಂದೊಂದಂ ಪತ್ತಿಸಾರ್ಚಿ ಪೆಟ್ಟುವೆರ್ಚಿದಿರ್ಚಿ ತಾಗಿವಾಗಳ್

ಕಂದ: ರಥಿಗಳೊಡನೆಯ್ದೆ ರಥಿಗಳ್
ಪೃಥುತರಸಾರಥಿಗಳೊಡನೆ ಸಾರಥಿಗಳ್ ಪರಿ
ಮಥನದೆ ಪಳಂಚಿದರ್ ನೆಱೆ
ಪೃಥುವೀಜನಮುಂದು ಮೆಚ್ಚಿಕೊಂಡಾಡುವಿನಂ ೭೮

ಚಂಪಕಮಾಲೆ

ಅತಿರಥರುಂ ಮಹಾರಥ ಸಮಾನರಥಾರ್ಧರಥರ್ ಪರಸ್ಪರಂ
ಕ್ಷತಕಡೆ ತಾಗಿ ತಳ್ತಿಸೆ ರಥಾಂಗಮುರುಳ್ದುದು ಕೀಳ್ ಕಳಲ್ದುದು
ನ್ನತ ಜಯಕೇತುಗಳ್ ಮುಱಿದುವಚ್ಚು ಸಡಿಲ್ದುದು ವಾಜಿ ಬೀಳ್ದುದೆ
ಯ್ದತಿಶಯಚೋದಕಂ ಮಡಿದನಾಕ್ಷಣದೊಳ್ ಶರಜಾಳಘಾತದಿಂ ೭೯

ಕಂದ: ಸಾರಥಿ ಸತ್ತೊಡಮೊರ್ವನ
ತೇರಂ ಚೋದಿಸುತುಮುರ್ಬಿ ಕಾದುತ್ತುಂ ರಥಿ
ಮಾರಣಮನೆಯ್ದಿಸಿದನಂ
ದಾರಯೆ ಪಗೆವನುಮನಶ್ವಮುಂ ಸಾರಥಿಯುಂ ೮೦

ಶಾರ್ದೂಲವಿಕ್ರೀಡಿತ

ಎಚ್ಚಂಬಂ ಕಡುವೇಗದಿಂದೆ ಪೆಱಗೆಚ್ಚಂಬೆಯ್ದಿ ತಾಗುತ್ತಿರಲ್
ಪಚ್ಚಂತಾಗಿಯೆ ಪಿಳ್ಕಿನಿಂ ಪೊಸೆವರಂ ಸೀಳ್ತಂದು ಸರ್ವಾಂಗಮುಂ
ಚುಚ್ಚಿಂತಿಸ್ಸುಡಿಯಾಗಿ ನಟ್ಟು ಕಡೆಗಣ್ಣಿಂದಿರ್ದುದಂ ಕೀಳ್ತು ಮು
ತ್ತೆಚ್ಚಂ ತನ್ನ ಸರಲ್ಗಳುಂ ತವೆ ಮಹಾವೀರಂ ರಥಾರೂಢಕಂ ೮೧

ಕಂದ: ನೊಸಲಲ್ಲಿ ನಟ್ಟ ಶರಮಂ
ಮಿಸುಗದೆ ನಾಂ ಕೀಳೆ ಕೂಡೆ ರಕ್ತಪ್ರಸರಂ
ಮಸಗಿ ಕೆಂಪಾಗಿ ತೋಱಲ್
ಸೊಸಲುರಿಗಣ್ದೆಗೆದ ಶಿವನವೊಲ್ ಭಟನಿರ್ದಂ ೮೨

ವಚನ: ಇಂತು ರೋಷಮುಂ ರೋಷಮುಂದಪ್ಪದೆ ಸರಳ್ಗಳ್ ನಾಂಟುವಂತೆಚ್ಚಾಡಿ ರಥಾರೂಢರೆಲ್ಲಂ ಪರಿಪೂರ್ಣಕಥನ ಮನೋರಥರಾಗೆ ರಾಜಕುಮಾರರ ತೇರೊಡ್ಡುಗಳ್ ಗಾಳಿಗೊಡ್ಡಿದ ಮುಗಿಲೊಡ್ಡುಗಳಂತೆ ತಾಱುಂತೀರಾಗಿ ಪರಿದುಪೋಗಲೊಡಂ

ಮಹಾಸ್ರಗ್ಧರೆ

ರಣಕೇಳೀದೋಹಳಕ್ಕರ್ಥಿಗರೆನಿಸುವ ರಾವುತ್ತರೇಕೈಕವೀರಾ
ಗ್ರಣಿಗಳ್ ತಾವೇಱೆ ಪೊಂಬಕ್ಕರಿಗಳಿನೆಸೆವಶ್ವಂಗಳಂ ಬಿಟ್ಟೊಡಂದಾ
ಕ್ಷಣದೊಳ್ ಸಂಗ್ರಾಮವಾರಾಶಿಯ ತೆರೆಗಳಿವೆಂದೆಂಬಿನಂ ಬೇಗದಿಂದಂ
ಕುಣಿವುತ್ತುಂ ಕೂಡೆ ಸಂಚಾರಿಸಿಯೊಡನೊಡನೋಡುತ್ತುಮೆಯ್ದಿರ್ದುವೆತ್ತಂ ೮೩

ವಚನ: ರೌದ್ರರಸಮಮೆ ಮೇರೆದಪ್ಪಿ ಕವಿತಪ್ಪಂತುಭಯಬಲತುರಂಗಿಗಳ್ ಕವಿತಪ್ಪುದುಂ

ಕಂದ: ಶಿಕ್ಷಿತ ವೀರತುರಂಗಮ
ಲಕ್ಷಂ ಮೋಹರಿಸಿ ನಿಂದು ಪಸರಿಸಿ ಸಂಗ್ರಾ
ಮಕ್ಷಮೆಯೊಳ್ ಸಂಚಾರಿಸು
ವಾಕ್ಷಣಮಾ ಧರೆ ತುರಂಗಮಯಮಾಯ್ತು ಕರಂ ೮೪

ವಚನ: ಇಂತೆರಡುಂ ಪಡೆಯು ದೊಡ್ಡಂಗಳಾದ ಕೂರಡ್ಡಣಂಗಳ ಪೊಳೆಸಿಂದೆಡ್ಡಮಾದ ಪಡ್ಡರಾವುತ್ತರ ಪೊತ್ತಪೊಡ್ಡುಗೊಂಡು ಮಮ್ಮಳಿಯಾಗಿ ಕಾದುವ ಬೇವಸದೆಸಕದಿಂ ಮಾಮಸಕಂ ಮಸಗಿ ತಮ್ಮೊಳ್ಪೊರ್ವರ ದುರ್ವಹದೋರ್ವಲದಗುರ್ವಂ ಮೆಱೆವುದಕ್ಕರ್ಥಿವೆಟ್ಟು ಮೂದಲೆಯುಂ ಮುಂದಿಟ್ಟು ಮರಳೆ ಮರಳೆ ಬಿಡಿತವಂ ಬಿಟ್ಟು ಪೊಯ್ವಾಗಳ್

ಸ್ರಗ್ಧರೆ

ಒರ್ವಂ ರಾವುತ್ತರಾಯುಂ ಕುನಿದು ಕುದುರೆಯುಂ ಬಿಟ್ಟು ಸಂಗ್ರಾಮಕೇಳೀ
ಗರ್ವಾವಷ್ಟಂಭಕಂ ಜೊಬ್ಬಿಱಿದು ರಭಸದಿಂ ಕೀಳ್ತ ಕೂರ್ವಾಳ ಬಾಯಿಂ
ದುರ್ವಿಂ ಮೇಲ್ವಾಯ್ದು ಪೊಯ್ಯಲ್ ತಲೆಯೊಡೆದು ಮಿದುಳ್ ಚಲ್ಲಿ ವಕ್ಷಸ್ಥಲಂ ಸೀ
ಳ್ದಿ ಭಾಗಂಬೆತ್ತುದೆಯ್ದಿಕ್ಕಡಿವಡೆದೊಡನೇಕಕ್ಷಣಂ ಬಿಳ್ದದಶ್ವಂ ೮೫

ವಚನ: ಇಂತು ಪಣಿದಂ ಪೊಯ್ವಂತೆ ಪೊಯ್ದಾಡುತ್ತುಮಿರ್ಪುದುಂ

ಮತ್ತೇಭವಿಕ್ರೀಡಿತ

ಕರವಾಳೊಳ್ ಕರವಾಳ್ ಪಣಂಚಿ ವಿಕರಾಳಂಬೆತ್ತು ಪೊಯ್ದಾಡಲುಂ
ದೊರಸಿಂದಂ ಕಿಡಿಗಳ್ ತಗುಳ್ದು ಸುರಿಯಲ್ ಘೋರೆಂದು ಸಂಗ್ರಾಮಮದು
ರ್ವರೆಯೊಳ್ ಕಂಡದ ಸೃಷ್ಟಿ ತಾಂ ಪ್ರಳಯದೊಳ್ ಪೊಯ್ವುತ್ತುಮಿರ್ದಂದದಿಂ
ಪಿರಿದೊಂದದ್ಭುತಮಾಯ್ತಿರಳ್ಪಡೆಯ ವಾಹವ್ಯೂಹದುಗ್ರಾಹವಂ ೮೬

ವಚನ: ಅಂತು ಖಳ್ಗಾಖಳ್ಗಿಯಾಗಿ ಖಳ್ಗಗಳದ್ಭುತಂಬೆತ್ತು ಕಾದುತ್ತು
ಮಿರ್ಪುದುಂ

ಉತ್ಪಲಮಾಲೆ

ಪಾಯಿಸೆ ಪೊಯ್ದಡೊಳ್ಕುದುರೆ ಜಾಣತಮೋತ್ತಮತೀವಶಿಕ್ಷಣೋ
ಪಾಯವಿಶೇಷದಿಂ ಪೆಮಸೆಮುಟ್ಟಿದವೊಲ್ ತನಗಂ ಸ್ವವಾಜಿಗಂ
ಘಾಯಮನೆಯ್ದೆ ಕಾಯ್ದು ಭಟರಟ್ಟಿಗಳಾವಳಿಯಾಡುತಿರ್ಪಿನಂ
ಭೀಯುಮನೀವ ಪಣ್ಡಲೆಗಳುಂ ನೆಱೆಬಿಳ್ದವು ಯುದ್ಧಭೂಮಿಯೊಳ್ ೮೭

ಕಂದ: ಲೆಕ್ಕಮಣಮಿಲ್ಲ ತಾಗುವ
ಚಕ್ರಂಗಳ್ಗೆ ಯುದ್ಧಮಮು ಸಬಳಂಗಳ್ಗಂ
ಮಿಕ್ಕು ಕೊಳ್ವಟ್ಟೆಗಳ್ಗಂ
ಕರ್ಕಶದಿಂ ಸುತ್ತಿಕೊಳ್ವ ಪಾಶಂಗಳ್ಗಂ ೮೮

ವಚನ: ಮತ್ತಂ

ಮಹಾಸ್ರಗ್ಧರೆ

ಧರಣೀಶಾದೇಶದಿಂ ಬಂದಧಿಕರೆನಿಪ ರಾವುತ್ತರುಗ್ರತ್ವಮಂ ಪೆ
ತ್ತರರೇ ಕಾಯ್ ಕಾಯೆನುತ್ತುಂ ಮಿಗೆ ಕುದುರೆಗಳಂ ಬಿಟ್ಟು ಪೊಯ್ವಲ್ಲಿ ಶೌರ್ಯೋ
ದ್ಧುರನೊರ್ವಂ ಕಾಯ್ವುದೆಂಬೀ ಬಿರುದೆನಗೆ ನಿಜಂ ತಪ್ಪದೆಂದಾ ತುರುಷ್ಕೋ
ತ್ಕರ ಶೂರಾಶ್ವಂಗಳಂ ತಾಂ ಪಿಡಿದಿರಪವರಂ ಬಿಟ್ಟು ಕೀರ್ತೀಸನಾದಂ ೮೯

ವಚನ: ಆ ತುರಂಗಸುಸಂಗ್ರಾಮಸಮಯದೊಳರಸುಮಕ್ಕಳ ತುರಂಗಿಗಳೆಲ್ಲಂ ಭಂಗಂಬಡೆ ವಾರಣಾರೋಹಕರೆಲ್ಲಂದೋರಣೆಗೊಂಡೀರೊಡ್ಡಿನಾನೆಗಳಂ ಚೋದಿಸುವುದುಂ

ಕಂದ: ಅಂಜೆಗಳಂ ಪಣ್ಣಿದ ಮದೆ
ಸಂಚಯದಿಂದೆಸೆವ ಬಿರುದಿನಾನೆಗಳವಜಿಯೊಳ್
ಸಂಚಾರಿಸುವೆಡೆಯೊಳ್ ಸಮು
ದಂಚಿತ ಗಜಮಯಮುಮಾಯ್ತು ಸಂಗರರಂಗಂ ೬೦

ಚಂಪಕಮಾಲೆ

ಸೊಗಯಿಸ ವಜ್ರದಂಕುಶದಿಸೊತ್ತಿ ಕುಕಿಲ್ದಿದಿರಾಗಿ ನೂಂಕೆ ವಾ
ಯುಗೆ ಗಜಿಯಮೂಡಿದಂತೆ ಪರಿತಂದೆರಡುಂ ಪಡೆಯಾನೆಗಳ್ ಮದಂ
ಮಿಗುತಿರಲಟ್ಟಿಸುಟ್ಟಿ ಬಿಡದೊಂದಜಿಯೊಳೊಂದುಜಿ ಕೀಜಿ ತಾಗಿ ಕೆ
ಯ್ಮಿಗೆ ಮೊಗಮಿಕ್ಕಿ ನಿಂದು ತಲೆಸುಟ್ಟವು ತಮ್ಮೊಳತೀವರೌದ್ರದಿಂ ೬೧

ವಚನ: ಆಪೊತ್ತಿನೊಳ್ ನಿಷಾದಿಗಳೆಲ್ಲಂ ಸಮೀಪವಶದಿಂ ಬಿಲ್ಗಳ್ ಸಲ್ಲದೊಡೆ ತಕ್ಕಿನೆಕ್ಕತುಳದಿಂ ಕೀಳ್ತ ಕಟಾರ ಸುರಿಗೆ ಹಿಡಿಯಂಬುಗಳಿಂ ಕುತ್ತಿಯುಂ ಖಡ್ಗ ಮುದ್ಗರ ವಜ್ರ ಮುಷ್ಟಿ ಪರಶು ಪಾಶಾಂಕುಶಾದಿ ಸಿಶಿತಶಸ್ತ್ರಂಗಳಿಂದಂ ಪೊಯ್ದು ಭಯಂಕರಾಕಾರಮಾಗಿ ಕಾದುವಾಗಳ್

ಮತ್ತೇಭವಿಕ್ರೀಡಿತ

ಮಿಗೆಬೆಂಬತ್ತುವ ಕೂಡೆ ಪೇಯ್ದುಗೆವ ಬಲ್ಪಂತೋರ್ಪ ಕಾಯ್ದೊತ್ತು
ಬ್ಬೆಗಮಂ ಮಾಳ್ಪರದಟ್ಟೆಯುಪ್ಪಳಿಸುವ ವ್ಯಾಘಾತಮಂ ವಂಚಿಪು
ಜ್ಜುಗದಿಂ ಮಾರ್ಮಲೆಯುತ್ತುಮಿರ್ಪ ತೆಱಮಂ ಕಂಡಾಂಪ ಜಾಣ್ ತಮ್ಮೊಳೆ
ಯ್ದೊಗೆಯಲ್ಕಿರ್ಬಲದಂಕದಾನೆಗಳ ಪೊತ್ತಂ ಕಾದಿದತ್ತದ್ಭುತಂ ೬೨

ಕಂದ: ದಿಕ್ಕರಿಗಳ್ ದಿಕ್ಕರಿಗಳೊ
ಳಿಕ್ಕೆಕ್ಕೆಯಿ ಮೊಗಮನಿಕ್ಕಿ ಕಾದುವ ತೆಱದಿಂ
ಸೊಕ್ಕಾನೆಗಳಚ್ಚರಿಯಿಂ
ಸೊಕ್ಕಾನೆಗಳೊಳ್ ಪಣಂಚಿ ಕಾದುತ್ತಿರ್ದವ್ ೬೩

ಉತ್ಪಲಮಾಲೆ

ಕೋಡುಗಳಗ್ರದಿಂದಿಱಿಯೆ ಮಸ್ತಕಪಿಂಡದ ಶೋಣಮೌಕ್ತಿಕಂ
ಗೂಡಿದ ಕೊಳ್ಮಿದುಳ್ ಕವಿದು ಸೂಸುತಿರಲ್ ಭರಿಕೆಯ್ಯ ಖಡ್ಗದಿಂ
ಕೋಡಿಡುವಂತು ಪೊಯ್ಯೆ ಕರಿಣೀಪರಿಶಂಕೆಯಿನೆಂದು ಕೋಪಮಂ
ಮಾಡದೆ ಲಾಲನಕ್ಕುವಸಂ ಬಿಡದಾದುದದೊಂದು ಸಿಂಧುರಂ ೬೪

ಮಹಾಸ್ರಗ್ಧರೆ

ಕುಡಿವಿಂಚಂ ದಂತಕಾಂತಿಪ್ರಸರವೆಸಗೆ ದುರ್ಗರ್ಜನಸ್ಫೂರ್ತಿಯಿಂ ನುಂ
ದಿಡೆ ಭೂಯೋಬೃಂಹಿತಂ ಪೆರ್ಮುಗಿಲೆಯನುರುರಥಾನ್ಯೋನ್ಯಸಂಘಟ್ಟದಿಂ ಬ
ಲ್ಸಿಡಿಗಳ್ ಬೀಳ್ತಪ್ಪುವಂದೆಯ್ದೆ ಡರಿಸೆ ಭಯಮಂ ರಾಜಹಂಸಾಶಯಂ ತ
ಳ್ತಡರಲ್ ಸೊಕ್ಕಾನೆಗಳ್ ತಾಗಿದುವು ವಿಳಯಕಾಲಾಂಬುವಾಹಂಗಳನ್ನಂ ೯೫

ವಚನ : ಅಂತು ದಂತಿಘಟೆ ದಂತಿಘಟೆಗಳೊಳಾಂತು ತಿಂತಿಣಿಗೊಂಡು ದಂತಾದಂತಿ ಯಾಗಿ ದುರಂತತನುಯುದ್ಧಂಗೆಯ್ವುತ್ತುಮಿರ್ಪುದುಮಾ ಸೊಕ್ಕಾನೆಗಳಮೇಲೆ ಕುಳ್ಳಿರ್ದು

ಮತ್ತೇಭವಿಕ್ರೀಡಿತ

ಮೊನೆಯಂಬಂ ದೊಣೆಯಿಂದಮುರ್ಚಿ ತಿರುವಾಯೊಳ್ ಬೇಗದಿಂ ಸಾರ್ಚಿ ತ
ನ್ಮನಮುಂ ದಿಟ್ಟಿಯುಮೊಂದುಗೂಡಿ ಗುಱಿಯೊಳ್ ಮೆಯ್ವೆರ್ಚಿರಲ್ ಜೋದರಂ
ಪೆನಸುಂ ತಮ್ಮೊಳಗೊರ್ವರೊರ್ವರುಱದೆಯ್ದೆ ಚ್ಚಾಡಿದರ್ ಕೊಂಡು ತೊ
ಟ್ಟನೆ ಬೆನ್ನಿಂ ಪೊಱಮಟ್ಟು ಪೋಪ ಸರಲಿಂ ಪುಂಪೋಪಿನಂ ಜೀವನಂ ೯೬

ವಚನ : ಆಗಳ್

ಕಂದ : ಕವಲಂಬುಗಳಿಂದೆಚ್ಚಡೆ
ತವೆಪಱಿದುಱಿ ಸೀಸಕಂಗಳಿಕ್ಕಿದ ತಲೆಗಳ್
ಕವಿದವು ರಾಹುಸಮಾವೃತ
ರವಿಮಂಡಳಿಗ[ಳ]ವೊಲಿಳೆಗೆ ಗಗನಸ್ಥಳದಿಂ ೯೭

ವಚನ : ಮತ್ತಮಾಹವಕ್ಕೆ ರಕ್ಕಸರೆನಿಪಂಗರಕ್ಕರ ಪಡೆ ಕಡಿಕೆಯ್ದು ಕಟ್ಟಾಳ್ತನಂ ಕೈಮಿಕ್ಕು ಕೆಕ್ಕಟಗೆಱೆ ತೆಕ್ಕದೆ ನಿಂದು ಕಾದುತ್ತುಮಿರೆ

ಕಂದ : ಕರಿಘಟೆಗಳ ಕಾಲ್ಗಾಪಿನ
ನರರಿಕ್ಕೆಲದಲ್ಲಿ ನಿಂದು ಕೂರ್ಕೈದುಗಳಂ
ತಿರಿಪುತ್ತುಂ ತಳ್ತಿಱಿದರ್
ಕುರುಳ ಪಿಣಿಲ್ ತೆಪ್ಪಮಾಗೆ ನೆತ್ತರ ತೊಱೆಯೊಳ್ ೯೮

ವಚನ : ಆಸಮಯದೊಳ್

ಕಂದ : ಭರಿಕೈಗಳ್ ಪಱಿದುರುಳಲ್
ಪರಿರಂಜಿಸಿದವು ಮಹಾಸರಾಹಂಗಳವೊಲ್
ಕರಿಣಿಗಳಂತಾದವು ಕೋ
ಡೆರಡುಂ ನೆಱೆಮುಱಿದು ಬೀಳೆ ಕೆಲವು ಗಜಂಗಳ್ ೯೯

ಕಡುಕೆಯ್ದು ಪಿಂದಣೆರಡುಂ
ತೊಡೆಗಳ್ ಕತ್ತರಿಸಿ ಕುಕ್ಕುಱಿಸಿ ಕುಳ್ಳಿರ್ದಾ
ಗಡೆ ಪಡೆದನೇಕದಂತನ
ಕಡುಚೆಲ್ವುಮನಾನೆಗಾಳೆಗಂ ಚಿತ್ರತರಂ ೧೦೦

ವಚನ: ಇಂತಸಂತಮಹೀಕಾಂತರ ಚಾತುರ್ದಂತಬಲಮೆಲ್ಲಮಂತಕಂಗಾಹಾರಮಪ್ಪಂತೆಚ್ಚುಮಿಱಿದುಂ ಮುನ್ನೆಂದುಮಿಂತಪ್ಪ ಕಾಳೆಗದ ಕೋಳಾಹಳಮಂ ವಿದ್ಯಾಧರದ್ಯುಮರ್ತ್ಯರೊಳಾದೊಡಂ ಕಂಡುದಿಲ್ಲೆಂಬಂತತೀವಕೌತೂಹಳಂ ಕೈಮಿಗೆ ಕಾದುವುದುಂ

ಮತ್ತೇಭವಿಕ್ರೀಡಿತ

ಜವದೇವಂ ತಣಿಯುಂಡು ಪೇಸಿ ರಣಮಂ ಮತ್ತಕ್ಕೆ ಸಲ್ಲಾಱದು
ಜವದಿಂ ಕಾಱಿದ ಮೂಳ್ಕೆಯಿಂದದು ಕರಂ ಭೀಭತ್ಸಮಂ ತಾಳ್ದಿ ನೋ
ಳ್ಪವರಿಂಗಂದತಿರೌದ್ರಮಾಯ್ತು ರಣರಂಗಂ ಶಾಕಿನೀಡಾಕಿನೀ
ನಿವಹಂ ಭೂತಪಿಶಾಚರಾಕ್ಷಸಗಣಂ ಸಂತೃಪ್ತಮಾಯ್ತಾಕ್ಷಣಂ ೧೦೧

ವಚನ: ಇಂತಗುರ್ವುವಡೆದ ಸಂಗ್ರಾಮದುರ್ವಿಯೊಳ್

ಉತ್ಪಲಮಾಲೆ

ಒಂದೆಡೆಯಲ್ಲಿ ಪರ್ದುಗಳ ಪಿಂಡುಗಳಾಡುತುಮಿರ್ದವಲ್ಲಿ ಮ
ತ್ತೊಂದೆಡೆಯಲ್ಲಿ ವೀರಭಟರಟ್ಟೆಗಳಾಂತುರಗಂಗಳಟ್ಟೆಗಳ್
ಕುಂದದಿಭಂಗಳಟ್ಟೆಗಳವಾಡುತುಮಿರ್ದುವು ತಮ್ಮ ಲೀಲೆಯಿಂ
ದಂದು ಪೆಣಂಗಳಿಂದೆ ರಣಮಂಡಳಮಾದುದು ರೌದ್ರಮಂಡಳಂ ೧೦೨

ವಚನ: ತದನಂತರಮಖಿಳರಾಜಕುಮಾರಕರ ಪಡೆ ಪಡಲ್ವಟ್ಟು ಸೊಡರ್ಗುಡಿಯೊಳೆಱಗಿದ ಪತಂಗದಂತೆ ವಿನಾಶಮನೆಯ್ದೆ ಕುದುರೆಗಳ್ ಬಿಸಿಲ್ಗುದುರೆಗಳಂತೆ ಮಾಯಮಾಗಿ ದ್ವಿಪದಂಗಳ್ ನಿದಾಘಸಮಯದ ನೀರದಂಗಳಂತೆ ಪರೆದುಪೋಗಿ ಬೆದಱಿ ಬೆಂಗೊಟ್ಟು ಕಟ್ಟೋಡುವುದಂ ಕಂಡು ನಿಜಸೈನ್ಯಮೆಲ್ಲಂ ಶೂನ್ಯಮಾದುದಱಿಂ ಮನ್ಯುಮಿಕ್ಕು ಕಳಿಂಗದೇಶಾಧೀಶ್ವರಂ ಪ್ರತಿಜ್ಞಾರೂಢನುಂ ಮದಗಜಾರೂಢನುಮಾಗಿ ಕರಿಸಮಾರೂಢಸಕಳರಾಜಕುಮಾರಕರ್ ಬೆರಸಿ ಬರ್ಪುದುಂ ಸುಷೇಣನೆಂಬ ಸೇನಾಧಿಪತಿಕಂಡು ಬಿರುದಿನಪಾಳಿಕೇತನಂಗಳಿಂದಿವಂ ಕಳಿಂಗಭೂಪಾಳಕನೆಂದಱಿದು ಸುಟ್ಟಿಸಿತೋಱಿ ತಾನುಮಿನ್ನೆನ್ನಯ ಕೂರ್ಪನಿಲ್ಲಿ ತೋರ್ಪೆನೆಂದು ಮುಂದಣ ತಂತ್ರಮಂ ಕೆಲಕ್ಕೆ ತೊಲಗಿಸಿ ದರ್ಪದಿಂದಿದಿರಾಗಿ ವಾರಣಮನಣೆದುನೂಂಕಲೊಡಂ

ಕಂದ: ಕೆಲರೆಚ್ಚರ್ ಕೆಲರಿಱಿದರ್
ಕೆಲರಿಟ್ಟರ್ ಕೆಲಬರಸುಮ ಮೇಲ್ವಾಯ್ದುದುಱಿ[1]ಸು[1]
ವ್ಮಳಿಯಾಗಿ ತಾಗಿ ಪೊಯ್ದರ್
ಬಲದೊಡೆಯನ ಪಡೆಯನಾ ಕುಮಾರಕರರೆಬರ್ ೧೦೩

ಮಹಾಸ್ರಗ್ಧರೆ
ಘನಬಾಹಾಸಾಹಸಂಗುಂದದೆ ಭಟಸಟಳಂ ಕೋಪದಾಟೋಪದಿಂದೊಂ
ದಿನಿಸುಂ ಮುಂಗಾಣದಾಲ್ದುಬ್ಬರಿಸಿಯೊಡನೆ ಮೇಲ್ವಾಯ್ದು ಕಾ[2]ದು[2]ತ್ತುಮಿರ್ದ
ತ್ತನುವಾಗೆಂದೆಂದು ಮುಮ್ಮಾಡಲಿಸಿ ನುಡಿಯುತುಂ ಮತ್ತಮಾತಂಗಯೂಥಂ
ಕುನಿದುರ್ವುತ್ತಿರ್ದ ಪಂಚಾಸ್ಯನ ಪದನದ ಮೇಲ್ವಾಯ್ದು ತಾಂ ಕಾದುವನ್ನಂ ೧೦೪

ಕಂದ: ಹೂಣ ಹೊಕ್ಕಿಱಿವುತಿರ್ದ
ಕ್ಷೋಣೀಶಕುಮಾರರೆಲ್ಲರುಂ ತಂತಮ್ಮ
ಕ್ಷೂಣ ಚತುರಂಗಸೈನ್ಯ
ಶ್ರೇಣಿಕೆವೆರಸಾ ಚಮೂಪಬಲದೊಡನದಟಂ ೧೦೫

ವಚನ: ಆಗಳಾ ಪತಾಕಿನೀಪತಿ ಪ್ರಕ್ಷೋಭಿಸಿ ಕಲ್ಪಾಂತಕಾಲಕೃತಾಂತನೆಂದು ಕರಾಳಲುಲಾಯಮನೇಱಿ ವಿಸಟಂಬರಿಯಿಸುವನಂತೆ ತಾನುಂ ನಿಜಾರೂಢವ್ಯಾಳ ಶುಂಡಾಳಮಂ ಕೂರಂಕುಶದಿಂದಣೆದೊತ್ತಿನೂಂಕಿ ಕೀಱಿ ಬಿಟ್ಟು ವಿಸಟಂಬರಿಯಿಸೆ ನೀಡಿಮೆಟ್ಟಿಯೆಂಟುಂದೆಸೆಯೊಳ್ ತನ್ನ ಮಯಮಾಗಿಯೆ ಪರಿದು

ಉತ್ಪಲಮಾಲೆ
ಮೆಟ್ಟಿ ಕೆಲಂಬರಂ ಕೆಲಬರಂ ತುಳಿದಗ್ರನಖಂಗಳಿಂದೆ ಸೀ
ಳ್ದೊಟ್ಟಿ ಕೆಲಂಬರಂ ಕೆಲಬರಂ ಕರದಿಂ ಪಿಡಿದೆತ್ತಿ ಹಾಯ್ಕಿಯೆ
ಬ್ಬಟ್ಟಿ ಕೆಲಂಬರಂ ಕೆಲಬರಂ ಕಡೆವಾಯೊಳವುಂಕಿ ನಿಂದರಂ
ಘಟ್ಟಿಸಿ ಕೋಳ್ಗಳಿಂದಿಱಿದು ಕೊಂದುದು ಶೂರಸುಷೇಣವಾರಣಂ ೧೦೬

ವಚನ: ಮತ್ತಂ ಕಾಲನ ಕೆಯ್ಯ ಪ್ರಚಂಡಕಾಳದಂಡದಂತಿರುಗ್ರತೆವೆತ್ತ ಭರಿ ಕೆಯ್ಯ ಖಳ್ಗದಿಂ ಪೊಯ್ದು ತಟ್ಟಂತಾಱಂಗೆಡಪಿ ಪರಿಪಂಥಿಗಳ ಪೃಥುಳಪೃತನಾ ಪ್ರತಾನಮುಂ ಕಲ್ಲಗಾಣದ ದೋಣೆಯೊಳಾಡುವ ಕಣೆಯ ಬಾಯ್ಗೆ ಸಂದ ಜೋಳದ ಕಳಿಕೆಯಂತೆ ನುಗ್ಗುನುಱಿಮಾಡುತ್ತುಮಿರ್ಪೆಡೆಯೊಳ್

1 ಮು (ಕ) 2 ಡು (ಕ)

ಕಂದ: ಅರಿದೆನಿಪ ಪಲವು ಶಸ್ತ್ರೀ
ಕ್ಕರವಿದ್ಯಾಪ್ರೌಢಿಯಂ ನಿಮಿರ್ಚುತ್ತಿರ್ದಂ
ನೆರೆದುನೋಡುವ ಸುರಾಸುರ
ರರೆಬರ್ ಬಾಪ್ಪೆಂದು ಮೆಚ್ಚಿ ಕೊಂಡಾಡುವಿನಂ ೧೦೭

ಚಂಪಕಮಾಲೆ

ಇಱಿದು ಕೆಲಂಬರಂ ತಡೆಯದೆಚ್ಚು ಕೆಲಂಬರನೆಯ್ದೆ ತತ್ತಱಿಂ
ದಱಿದು ಕೆಲಂಬರಂ ಜವದಿನಿಟ್ಟು ಕೆಲಂಬರನಂದು ಕೊಂದು ನಾ
ಡೆಱೆಯರ ಮಕ್ಕಳಂ ತವಿಸಿ ತನ್ನಯ ದೋರ್ವಲದೊಂದುಗರ್ವಮಂ
ಮೆಱೆದನದೇನುದಾತ್ತನೋ ಸುಷೇಣಚಮೂಪನವಾರ್ಯ[1]ವೀ[1]ರ್ಯಕಂ ೧೦೮

ವಚನ: ಆ ಸಮಯದೊಳ್

ಚಂಪಕಮಾಲೆ

ಮಿಗೆ ಪೊಸಪುಣ್ಗಳಿಂದುಗುವ ನೆತ್ತರ ಪೂರಮುದುರ್ವಿ ಭುಗ್ಭುಗಿಲ್
ಭುಗಿಲೆನಲುಣ್ಮಿ ಪೊಣ್ಮಿ ಸಮರಾಂಗಣಭೂಮಿಯೊಳೆಯ್ದೆ ತೀವಿರಲ್
ಬಗೆಗೊಳಿಸಿತ್ತು ಕೆಂಗೆಱೆಯ ಪೋಲದೆಱೆಯೊಳ್ ಮುಱಿದಾಯುಧಾಳಿ ಶೋ
ಭೆಗೆ ನೆಲೆಯಾಯ್ತು ಮೇಗೆಪೊಳೆದಾಡುವ ಮಿಾಂಗಳ ಪಿಂಡಿಮೆಂಬಿನಂ ೧೦೯

ವಚನ: ಇಂತು ಕಟ್ಟಾಸುರಮಾಗಿ ಕಾದುವ ಕಳದೊಳ್ ಕಡಿಖಂಡವಾಗಿ ಪೊಯ್ದಾಡಿ ಬಸವಳಿದು ಕೋಡಮುಱಿ ಕೆಡೆದು ಸತ್ತ ಕೂರಾನೆಗಳಾವಳಿ ಕಾಳ್ಕಿಚ್ಚಿನ ದಳ್ಳುರಿ ಸುತ್ತಿಮುತ್ತಿ ಪತ್ತಿದ ಬೆಟ್ಟುಗಳಟ್ಟಳಮೆಂಬಂತಿರ್ದುದು ಸರ್ವಾಂಗದೊಳೆಡೆವಿಡಿಸಿಲ್ಲದೆ ಕೊಂಡುತೋಱುವ ಬಲ್ಲೆಱುಗಳ ನೆಱಿಮಣೆಯಿಂ ತಾಱುಂತೀಱಾಗಿ ಬೀಳ್ದು ಸತ್ತ ಕುದುರೆಗಳ ಬಳಗಂ ವಹ್ನಿಜ್ವಾಲಾಕಲಾಪಂ ಬಳಸಿ ಸುಡುವ ಕೇಸಿಟ್ಟಗೆಯೊಟ್ಟ[1]ಲೋ[1]ಳಿಯೆಂಬಂತಿರ್ದುದು ಕೊಂಡ ನೆಲನಂ ಕೊಡೆನೆಂಬ ಚಲದಿಂ ಬಲಿದಿರ್ದ ತೊಡೆಸಂಕಲೆಯ ಬಿರುದಿಂದೆಸೆವ ತುಳಿಲಾಳ್ಗಳ್ ಮುಮ್ಮಳಿಯಾಗಿ ಕಾದಿ ಪಲವುಬಲುಘಾಯಂಗಳ ಮೇಳದಿಂದತ್ತಲುಮಿತ್ತಲುಂ ತಾಳುಂತಟ್ಟಾಗಿ ಬಿಳ್ದುಸತ್ತ ಪಾಯದಳಮೆಲ್ಲಂ ಜೋಳದ ಬೆಳೆಯುಂ [2]ತಾಳಿ[2]ಕ್ಕಿದಂತಿರ್ದುದೀ ತೆಱದಿಂದುಭಯಬಲದ ಬಲ್ಲಣಿಯ ನೆತ್ತರ ನೆಣದ ಬಣಬೆಗಲಸಿದ ಕರಿತುರಗನರಭಟಕೋಟಿಗಳ ಗಣನೆಯಿಲ್ಲದ ಪೆಣಂಗಳ ಗಣಂಗಳಿಂ ತಿಂತಿಣಿಗೊಂಡು ಪಡಲಿಟ್ಟ ರಣಾಂಗಣಂ ಧರಣಿಯೆಂಬ ರಕ್ಕಸಿ ತಿಂದು ಮುಗುಳ್ದುಗುಳ್ದಳೆಂಬಂತೆ ಕಡುರೌದ್ರಮಪ್ಪಿನಂ ಕಡಿಕೆಯ್ದು ಕಾದುತುಮಿರೆ

[1] ಪ (ಗಚ) [2] ಲಲೋ (ಗಚ) [3] ಸಾಲಿ (ಚ)

ಚಂಪಕಮಾಲೆ

ಸುಭಟ ಸುಷೇಣಸೈನ್ಯಪತಿ ಶಸ್ತ್ರಸಮಾಹತಿಗಳ್ಕಿಬಳ್ಕಿ ತಾ
ನಭಿನವಭಾಸಮುಂ ಪಡೆದು ಬಾಯಸೆ ಬಿಟ್ಟು ಕುಮಾರಸಂಕುಳಂ
ಪ್ರಭಯದಿನೋಡಿದತ್ತು ಕಿಱಿದುಂ ಕಿಱಿದಂ ಶರಣೆಂದು ಸಾರ್ದುದೆ
ಯ್ದಭಿನವದರ್ಪದಿಂ ಕಿಱಿದು ಸತ್ತುದು ಸಿಕ್ಕಿದುದಿತ್ತು ಸೂಱೆಯುಂ ೧೧೦

ವಚನ: ಇಂತು ಸಕಳಕುಮಾರಕರ ಚತುರಂಗಬಲಮೆಲ್ಲಂ ಕಡೆಗಾಲದೊಳಡಸಿದ ಬಱಸಿಡಲ ಗಡಣದ ಕಡುಪಿನೊಳ್ ತೊಡರ್ದ ನಂಜಿನ ಗಾಳಿ ಸುಟ್ಟುರಿತ್ತಿ ಬೀಸಿ ಪೊಯ್ದಡೆ ಸಾಲಿಟ್ಟು ಸತ್ತುದೆಂಬಂತೆ ಪೆಣಮಯಮಾದುದಂ ಕಂಡು ಕಳಿಂಗಭೂಪಾಳಕಂ ಕಿಡಿಕಿಡಿವೋಗುತ್ತುಂ ತಾಂ ಪೊರೆದ ತನ್ನ ನಚ್ಚಿನ ಮೆಚ್ಚಿನ ಲಕ್ಕಲೆಕ್ಕದ ಮೊನೆಯನಾಯಕರ್ ಸುತ್ತಿರ್ದೊಡವರಸೆಕ್ಕೆಕ್ಕೆಯಿಂ ಬೇಱೆ[1]ವೇ[1]ಱೆ ಪೆಸರ್ಗೊಂಡು ಮೂದಲಿಸಿ ಬೆಸಸಿಬಿಡಲ ವರಂ ಪೋಗಿ ಪೊಣರ್ದು ಸುಷೇಣನ ಕೈಯ ಕೈದುಗಳ ಮೊನೆಯ ಕೋಳಿಗಳ್ಕೋಡಿ ಬಲ್ಪಡಂಗಿ ಸಮುದ್ದಂಡಗಂಡಭೇರುಂಡನ ಪೆಂಡಿನೊಳ್ ಕಡಂಗಿದಿರ್ಚಿದ ಶರಭದ ನೆರವಿಯಂತೆ ಪರೆದುಬಿಗುತ್ತೋಡುವುದುಂ

ಕಂದ: ಗಂಡುಗಲಿ ಬೂದಿಪಾಱಿದ
ಕೆಂಡದ ತೆಱದಿಂದಮಿರ್ದು ಕಗ್ಗನೆಗನಿದಂ
ಚಂಡಮನಂ ಪಡೆಯಳಿಪಂ
ಕಂಡುಂ ಕಡುಗಾಯ್ಪುಗುಂದಿ ತೋರ್ಪನೆ ಜಗದೊಳ್ ೧೧೧

ವಚನ: ಅಂತತ್ಯುಗ್ರಮೂರ್ತಿಕನಾಗಿ ನಿಂದು ತನ್ನಂಗವಟ್ಟದೊಳ್ ತೊಟ್ಟು ಮೆಱೆವ ಬಿನ್ನಣದಿಂ ನಮೆದ ಚೆನ್ನ ಪೊನ್ನ ರನ್ನದ ಪನ್ನಣದ ಬೆಳಗಿನೊಳ್ ಬೆರಸಿ ಪುದಿದ ಖಂಡವಾದ ಕೋದಂಡದ ಪ್ರಭಾಮಂಡಳದಿಂ ಥಳಥಳಿಸಿ ಪೊಳೆಯುತ್ತುಂ ಮಾರ್ತಂಡನಂತೆ ತೀವ್ರತೇಜಂಬಡೆದು ಸುಷೇಣನಂ ನೋಡಿ ತನ್ನೊಳಿಂತೆಂದಂ

ಕಂದ: ಕ್ಷುಲ್ಲಕಮೃಗಂಗಳಂ ತಳು
ವಿಲ್ಲದೆ ಗೆಲ್ದನಿತಱಿಂದೆ ಗೆಲಲಾರ್ತಪುದೇ
ಬಲ್ಲಿದ ಕೇಸರಿಯುಂ ಗಜ
ಮೆಲ್ಲರನಾಂತನಿತಱಿಂದಮೆನಗಾಂತಪನೇ ೧೧೨

ವಚನ: ಎಂದು ಸಾಹಸಮಂ ಪೂಣ್ದು ಸಾವಂಗೆ ಸಂಗಡಮೇಕೆಂಬಂತೆ ಮಾಣ ದೊಂದಮೊಯ್ಯೊಳೆ ನಿಜಮತಂಗಜಮನಣೆದುಪೋಕೆ ನಿಶ್ಶಂಕವೃತ್ತಿಯಿಂ ನಡೆದು ಸಾರೆ ಗೆಯ್ತುಪ್ಪುದುಮಾಗಳವನಂ ಸುಷೇಣಂ ಕಂಡು ತಾನುಮೇಕಾಂಗದಿಂದವಂಗಿದಿರಾಗಿ ಮದ

1 ನೇ (ಗಚ)

ಜಳದ ಕದಡುಕೆದಱುವ ಕಾಳಗತ್ತಲೆಯ ಪೊತ್ತಮನೊತ್ತರಿಸಿ ಬೆಳ್ದಿಂಗಳ ಬಿಸಿಲ ಪಸರವಂ ಪತ್ತಿಸುವ ಮುತ್ತಿನ ಮಾಣಿಕದ ಜೋಡಿನ ಪೊಳೆಪಿಂದಸದಳವೆಸೆವ ಮುದಕಳಮನಣೆದು ಸೂಂಕೆ ಮೆಟ್ಟುವ ಚರಣದುರವಣೆಗೆ ಧರಣೀವಳಯಮೊರ್ಗುಡಿಸಿ ಕಡುಸೆಡೆದಳ್ಳಾಡಿ ತಳ್ಳಂಕಗೊಳ್ಳಿಸಂ ಹಗೆವನ ಹರಣಮಂ ಕಬಳಂಗೊಳಲೆಂದು ಬರ್ಪ ಮಿಳ್ತುದೇವತೆ ಯೆಂಬಂತೆ ಬಂದು ಪ್ರಸಕ್ತವಾಶಮಾತ್ರದಳವಿಯೊಳಾಂತುನಿಂದಪಹಾಸವಚನದಿಂದಾ ಸುಷೇಣನಿಂತೆಂದಂ

ಕಂದ: ಭಂಡತನದಿಂದ ಲೋಗರ
ಪೆಂಡತಿಯಂ ಬೇಡಿ ದೂತನಿಂ ನುಡಿಯಿಸುವು
ದ್ದಂಡಿಕೆಯಲ್ಲಿದು ಖಳರಣ
ಮಂಡಳಮಿನ್ನಱಿಯಲಕ್ಕುಮೆನಗಂ ನಿನಗಂ ೧೧೩

ವಚನ: ಎಂದು ಮೂದಲಿಸಿ ಮಾರ್ಕೊಂಡರಾತಿಯನಾಂಕೆಗೊಂಡು

ಚಂಪಕಮಾಲೆ

ಧರೆ ನಡುಗಿತ್ತು ಸಪ್ತಜಳರಾಶಿಗಳುಂ ಕದಡೆದ್ದವೆಂಟುದಿ
ಕ್ಕರಿಗಳ ಸೊಕ್ಕಡಂಗಿದುದು ದಿಕ್ಪತಿಗಳ್ ದೆಸೆಗೆಟ್ಟು ಭೀತಿಯಂ
ಧರಿಸಿದರಿರ್ವರುಂ ನೃಪತಿಗಳ್ ತಿರುವಂ ತಿರುವಾಯೊಳಿಟ್ಟು ಕೋ
ಪರಸದೆ ನೀವಿ ಜೇವೊಡೆದ ಚಾಪದ ಟಂಕೃತಿ ತೀವೆ ಲೋಕಮಂ ೧೧೪

ವಚನ: ಇಂತು ಸಮರಾವಷ್ಟಂಭದಾಡಂಬರಮನಪ್ಪುಕೆಯ್ದು

ಮತ್ತೇಭವಿಕ್ರೀಡಿತ

ಇವರೇಸಚ್ಚರಿ ನಿಟ್ಟಿಸಲ್ಕರಿದು ತೋಡುಬೀಡನಂತಾದೊಡಂ
ಜವದಿಂ ತಪ್ಪಿಸಿಕೊಳ್ವ ಬಿನ್ನಣಮನಾರುಂ ಕಂಡರಿಲ್ಲೀ ಮಹೀ
ಭುವನಾಭ್ಯಂತರದಲ್ಲಿ ಮುನ್ನಮೆನುತುಂ ಕೊಂಡಾಡಿ ಭಾಪೆಂದು ಮು
ಚ್ಚುವಿನಂ ನೋಡುವ ಪಾಡಿಗಳ್ ವಿವಿಧಶಸ್ತ್ರಾಭ್ಯಾಸಮಂ ತೋಱಿದರ್ ೧೧೫

ವಚನ: ಅದಲ್ಲದೆಯುಂ

ಮತ್ತೇಭವಿಕ್ರೀಡಿತ

ಪರವೆಣ್ಗಾಟಿಸಿ ಬೇಡಿ ಬಾಯ್ಬಿಡುವ ಬಾಯಂ ಸೀಳ್ವ ತಕ್ಕಿಂಗಮಿಾ
ಸರಮೆನ್ನೊಳ್ ಕದನಕ್ಕೊಡರ್ಚಿ ಜಯಮಂ ಕೈಕೊಂಬೆನೆಂಬೀ ಪರಿ
ಸ್ಮರಣಕ್ಕಾಶ್ರಯಮಾದ ನಿನ್ನೆರ್ದೆಯನಿರ್ಭಾಗಂಗೆಯಲ್ ತಕ್ಕುದೀ
ಸರಮಿನ್ನೇನೆಲೊ ಕೊಳ್ ಕೊಳೆಂದು ನೃಪನಂ ತೊಟ್ಟೆಚ್ಚನಾ ಸೈನ್ಯಪಂ ೧೧೬

ವಚನ: ಆಗಳ್ ಬಪ್ಪ ಬಾಣಂಗಳಂ ಖಂಡಿಸುವ ತಾಗುವಂಬುಗಳ ನಿವಾರಿಸುವ ಪ್ರೌಢಿಯಂ ಮೆಸೆಯುಟ್ಟೆಚ್ಚಾಡುತ್ತಂ ಬಂದು ಸನ್ನಿದನಾದಕಾರಣಂ ಬಿಲ್ಗಾಳಿಗಮಂ ಬಿಟ್ಟು

ಕಂದ: ಮುಟ್ಟೆವಂದಿರ್ವರುಂ ಕಡು
ದಿಟ್ಟೆಸಿನೋಡುತ್ತು ಶಸ್ತ್ರವಿದ್ಯೆಯ ಜಾಣಂ
ಕಟ್ಟೆದಿರೊಳ್ ತೋಱಿಸಿದರ್
ಪುಟ್ಟುವಿಸಂ ಕೈದು ಜಾಣರೋಳಿಗೆ ಜೋದ್ಯಂ ೧೧೭

ವಚನ: ಮತ್ತಂ

ಕಂದ: ಪರನಿಟ್ಟ ಕುಂತಮಂ ನಿಜ
ಕರತಳಕುಂತದೆ ನಿಶಾತಶೋಮರಮಂ ತೋ
ಮರದಿಂದೆ ನುಗ್ಗುಗುಟ್ಟದ
ನರನರಿಪರ ಮನದ ಸಂದೆಗಂ ಪೋಪಿನೆಗಂ ೧೧೮

ವಚನ: ಇಂತು ಪಗೆವನ ಕರಮುಕ್ತವಿವಿಧಾಯುಧಂಗಳಿಂ ತನ್ನಯ ಕರತಳ ದಿವ್ಯಾಯುಧಂಗಳಿಂ ಖಂಡಿಸಿ ತದನಂತರಂ ಖಳನಂ ಕೊಂಡಾಡಲೇಕೆಂದು

ಕಂದ: ಇನ್ನಾದೊಡಮೆಲೆ ಭೂಪತಿ
ಯೆನ್ನಂ ಶರಣೆಂದು ಪೊಕ್ಕು ಸಾಯದೆ ಪೋಗೈ
ನಿನ್ನಯ ಸತಿಯರ ಮೊಗ
ಮನ್ನೋಡು ಪ್ರಾಣದಾನಮಂ ನಿನಗೀವೆಂ ೧೧೯

ಬೇಡಿಕೊಳ್ಳಭಯದಾನಮ
ನಾಡದಿರುದ್ದಂಡವೃತ್ತಿಯುಂ ದಾಸತ್ವಂ
ಗೂಡಿಯೋಲಯಿಸೆ ನಿನ್ನಯ
ನಾಡೊಳ್ ಸುಖಮಿರು ದಲೆಯ್ದು ಮೃತ್ಯುಂಜಯಮಂ ೧೨೦

ವಚನ: ಎನಲೊಡಂ ಕಡುಕನಲ್ದು ಕೆಡುವ ಸೊಡಗರ್ುಡಿಯಂತುದ್ದಮುರಿದು ಶಕ್ತಿಯಂ ಪಿಡಿದಿಡಲೊಡಮುದಂ ವಂಚಿಸಿ

ಉತ್ಪಲಮಾಲೆ

ಸಿಂಗದ ನಾದದಿಂ ಗಜಜಂ ಗರ್ಜಿಸಿ ವೀರಸುಷೇಣಸೈನ್ಯನಾ
ಥಂ ಗುರುಭಕ್ತಿಯಂ ಪಿಡಿದು ಹೂಣಿಸಿಡಲ್ಕೆ ಕಳಿಂಗಭೂಮಿಪಾ
ಳಂಗಮನುರ್ಚಿ ಪೋಗಲಸನಾಕ್ಷಣದೊಳ್ ಗತಜೀವನಾಗಿ ಮಾ
ತಂಗದಮೇಲೆ ತಾಂ ಮಲಗಿದಂ ಪಗೆಗೀಯೆನು ಬೆನ್ನನೆಂಬಿನಂ ೧೨೧

ವಚನ : ಅಂತು ಸತ್ತೊಡಂ ಶತ್ರುವಿಂಗೆ ಬೆಂದೋಱೆನೆಂಬೀ ಪ್ರತಿಜ್ಞೆಯಂ ವ್ಯಕ್ತೀಕರಿಸುವಂತೆ ಕಳಿಂಗಭೂಪಾಳಕನ ಕುಣಪಂ ಮೆಲ್ಲನೆ ಮಲಂಗುವುದುಂ

ಕಂದ : ಆಸಮಯದೊಳೊಗೆದುದು ದೇ
ವಾಸುರರೆಲೆ ವೀರ ಭಾಪುಭಾಪುರೆ ಸರಿಯಿ
ಲ್ಲೀಶಬ್ದಂ ಸುರತರುಕುಸು
ಮಾಸಾರಂ ಸುರಿದುದೊಡನೆ ತತ್ಕರವುಕ್ತಂ ೧೨೨

ವಚನ : ಅದಂ ಕಂಡು ವೀರರಸೋತ್ಸಾಹಪರಿವರ್ಧನದಿಂದುದ್ಧತನಾದ ಸುಷೇಣಚಮೂಪಂ ಮನದೊಳ್ ಪೆಟ್ಟುವೆರ್ಚೆ ಬಳಿಯಮುಭಯಘೋಷಣಮುಂ ಮಾಡಲ್ವೇಳ್ದು ಸುತ್ತಂ ನೋಡುತ್ತುಮಿರ್ಪುದುಂ

ಕಂದ : ರಕ್ತಾಪಗಾಪ್ರವಾಹಸು
ಯುಕ್ತಂ ಘನಪುಷ್ಕರಾರ್ಧಪರಿರಂಜಿತಮು
[1]ಭ್ಯು[1]ಕ್ತೇಷ್ಟಮಾನುಷೋತ್ಕರ
ಸಕ್ತಂ ನರಲೋಕದಂತಿರೆಸೆದುದು ಸಮರಂ ೧೨೩

ವಚನ : ಅಲ್ಲಿ

ಕಂದ : ಉದಯಾಚಳ[2]ದಂತಿ[2]ರ್ದುದು
ಮದಗಜಮುಂದದಱ ಮೇಲೆ ಘನತರತೇಜಂ
ಪುದಿದಿರ್ದುದಯಿಪ ರವಿಯಂ
ದದಿನೊಪ್ಪಿದನಾ ಸುಷೇಣನುನ್ನತರಾಗಂ ೧೨೪

ವಚನ : ಆಗಳಿಷ್ಟಜನಸುಖಕಮುಳವಿಳಾಸಮುಂ ವಿದ್ವಿಷ್ಟಜನಲಪನಕುವಳಯಸಂಕೋಚಮುಂ ಮಾಡುತ್ತುಂ ಸಂಗ್ರಾಮಭೂಮಿಯಂ ಪೊಱಮಟ್ಟು ತತ್ಸಮೀಪದೊಳೊಂದುನ್ನತಸ್ಥಾನದೊಳ್ ನಿಂದಿರ್ದು ಘಾಯಂಬಡೆದಾಳ್ಗಳಂ ಸನ್ಮಾನವಾಹನದಾನಪೂರ್ವಕಂ ಬೀಡಿಂಗೆ ಕಳಿಪಿ ಸ್ವೀಕೃತನಿಜಜೀವಿತ ಋಣನಿರ್ಣಯನಿಮಿತ್ತಂ ಸತ್ತ ತನ್ನಯ ಶರೀರಸಂಬಂಧಾದಿಗಳ ಬೇಕಾದ ಭೂಕಾಂತರ ಶರೀರದಹನಲೌಕಿಕಕ್ರಿಯಾವ್ಯಾಪಾರಮುಂ ನಿರ್ವರ್ತಿಸಿ ಪಿಡಿಸೆತ್ತಾನೆಕುದುರೆಗಳನವರವರ ವಶಕ್ಕೆ ಕೊಟ್ಟು

ಕಂದ : ಕಡುಚೆಲ್ವೆಳವೆಂಡಿರ್ಗಳ
ಗಡಣಮುಮಂ ಪಿಡಿದು ತಂದು ತನ್ನರಮನೆಯೊಳ್
ಮಡಗಿಟ್ಟಂ ಶರಣಂಬೊ
ಕ್ಕಡಮುಮಂ ಕಾದು ತಮ್ಮ ಪದಮಂ ಕೊಟ್ಟಂ ೧೨೫

---

1 ಚ್ಯು (ಗ) 2 ದಿಂದಿ (ಗ)

ವಚನ: ಸೂಜಿತಸಿಕ್ಕಿದ ಮುತ್ತಿನ ಮಾಣಿಕ ಪಚ್ಚೆಮರಲ ಪರಿಪರಿಯ ಬಿನ್ನಣವೆಸೆವ ಜೋಡುಹಕ್ಕರಿಕೆ ಪಂಜೊಡವು ಮುಂತಾದ ಸಮಸ್ತಂಗಳೆಲ್ಲಮನವರವರ್ಗೆ ಯೋಗ್ಯತೆಯನತಿಕ್ರಮಿಸದಿತ್ತು ರಣಮನೊಡಲ್ವೇಳ್ದು ಬಳಿಯಮಲ್ಲಿಂ ತಳರ್ದು

ಚಂಪಕಮಾಲೆ

ವಿಜಯಪತಾಕೆಗಳ್ ನಭಮನಳ್ಕಿಱಿಯಲ್ ಜಯಪದ್ಯಪಾಠಕ
ಪ್ರಜನಿನದಂ ಮಹಾವಿಜಯವಾದ್ಯನಿನಾದದೊಳೊಂದಿ ದಿಕ್ಕಿನೊಳ್
ಗಜಬಜಿಸುತ್ತಿರಲ್ ಬಹಳಸೈನ್ಯಸಮಾವೃತನಾಗಿ ಬೇಗದಿಂ
ನಿಜಶಿಬಿರಕ್ಕೆ ಪೋದನತಿಲೀಲೆಯಿನಂದು ಸುಷೇಣಸೈನ್ಯಪಂ ೧೨೬

ವಚನ: ಕಾಳೆಗಮಂ ಗೆಲ್ದು ವಿಜಯಲಕ್ಷ್ಮೀಭುಜಲತಾಸಮಾಲಿಂಗನಸಂಚಿತರೋಮಾಂಚನಾಗಿ ದೇವೇಂದ್ರವಿಭವದಿಂದಂ ಬರುತ್ತುಮಿರ್ದ ಸುಷೇಣನೆಂಬ ಸೇನಾಧಿಪತಿಯನಿದಿರ್ಗೊಳಲ್ ಪೊಱಮಡುವ ಕಳಶಕನ್ನಡಿಯ ಪುಣ್ಯವನಿತಾಜನದ ಮಂಗಳಾಚಾರದ ಸಂಗೀತನರ್ತನದ ತಿಂತಿಣಿ ಮುಂತಾದ ವಿಜಯೋತ್ಸಾಹ ಸಂಭ್ರಮಮಾಡಂಬರದಿಂ ವಿಡಂಬಿತಮಾದ ತನ್ನಯ ಬೀಡಂ ಪೊಕ್ಕು ತುಱುಗಿ ತಳ್ತು ಮಿಳಿರ್ದು ಮಿಳ್ಳಿಸುವ ಪರಿಪರಿಯ ಗುಡಿಗಳ ಗಡಣದಿಂ ಕೇರಿಗೇರಿಯೊಳ್ ಬಿತ್ತರಂಬೆತ್ತಿ ಚಿತ್ತರದೊಳಿಕ್ಕಿದ ಮುತ್ತಿನ ರಂಗಾವಲಿಗಳ ಸಾಲ್ಗಳಿಂದೆಲ್ಲೆಡೆಯೊಳಂ ನಿಲ್ಲದೆ ಬಾಜಿಸುವ ಬದ್ದವಣಂಗಳಿಂ ಚಂದ್ರೋದಯದೊಳಭಿವೃದ್ಧಿಯನೆಯ್ದಿದ ವಾರ್ಧಿಯಂತೆ ಬೆಡಂಗುವಡೆದು ಅಂಗಡಿಗೇರಿಗಳಂ ನೋಡುತ್ತುಮರಮನೆಗೆವಂದೊಳಗಂ ಪೊಕ್ಕು ತನ್ನೊಡನೆಬಂದ ರಾಜತನೂಜಸಮಾಜಮಂ ನಿಜನಿಜನಿವಾಸಕ್ಕೆ ಬೀಳ್ಕೊಟ್ಟು ಕಳಿಪಿ ತಾನುಂ ಮಜ್ಜನಭೋಜನವ್ಯಾಪಾರಪರನಾಗಿ ಮೇಳದ ಕೆಳದಿಯರೊಡನೆ ಸಂಜಾತಸಂಗ್ರಾಮ ಚರ್ಚಾಸಂಸ್ಥಿತಿಯಂ ನುಡಿಯುತ್ತುಮಂದಿನಿರುಳಂ ಕಳಿದು ಮಱುದಿನದೊಳ್

ಚಂಪಕಮಾಲೆ

ಪಿಡಿವಡೆದಿರ್ದ ರಾಜಸುತರಂ ಕರಸಿನ್ನುಱಿ ನಾವು ಪೇಳ್ದುದಂ
ತಡೆಯದೆ ಮಾಡುತುಂ ಸುಖದೆ ನೀವಿರಿಯೆಂದು ನಿಯಾಮಿಸುತ್ತುಮಾ
ಗ[1][ಡೆ][1] ರಣದಲ್ಲಿ ಸಿಕ್ಕಿದ ತುರಂಗಮ ವಾರಣಸಂಚಯಂಗಳಂ
ಸಡಗರದಿಂದೆ ತಾಂ ತರಿಸಿ ನೋಡುತುಮಿರ್ದನುಪಾತ್ತಕೌತುಕಂ ೧೨೭

ವಚನ: ಮತ್ತಮನೇಕರಾಜಕುಮಾರಕರಂ ಘನಪ್ರತಿಷ್ಠಾಧಿಷ್ಠಿತರಂ ಮಾಡುತ್ತುಮಾ ಸುಷೇಣನೆಂಬ ಸೇನಾಧಿಪತಿ ಕತಿಪಯದಿನಮಲ್ಲಿರ್ದು ಸಮಸ್ತ ರಾಜಕಾರ್ಯಕಾರಣಕರಣಾನಂತರಂ ತನ್ನಯ ಸ್ವಾಮಿಯಪ್ಪ ಧರ್ಮನಾಥನ ಶ್ರೀಚರಣಸಮಾಲೋಕನದೊಳ್ ಕಡುತವಕಮನಪ್ಪುಕೆಯ್ದು ನಿಜಪುರಗಮನೇಚ್ಛೆಯಿಂ ಶುಭದಿವಸಾಗ್ರೇಸರಮಾದೊಂದು

1 ಳೆ (ಕಗಚ)

ವಾಸರದೊಳ್ ಬೀಡನೆತ್ತಿಸಿ ಸತ್ವರದಿಂ ನಿಚ್ಚಪಯಣಂಬಂದು ರತ್ನಪುರಮರೆಗಾವುದಧರ್ಮ ತರದೆನಲ್ ಬೀಡಂಬಿಟ್ಟಪುದುಮನ್ನೆಗಮಿತ್ತಲ್

ಸ್ರಗ್ಧರೆ

ದೂತಂ ಸಂಗ್ರಾಮವೃತ್ತಾಂತದ ವಿಸರಮದೆಂತಿರ್ದುದಂತೆಲ್ಲಮಂ ವಿ
ಖ್ಯಾತಂ ನೀತಂ ಸುಷೇಣಂ ಧುರದೊಳಹಿತರಂ ಕಾದಿ ಕೊಂದಂದಮಂ ಪೆ
ರ್ಮಾತಿಂದಿಂತೆಂದು ಪೇಳ್ದಂ ಸಭೆಯುಮರಸನುಂ ಮೆಯ್ವೆರ್ಚೆ ಕೇಳ್ದಂ
ದಾತಂಗೆಯ್ದಿತ್ತು ಬೇಳ್ಪರ್ಥಮನುಜೆ೩ತಲೆಯುಂ ತೂಗಿ ಕೊಂಡಾಡುವನ್ನಂ ೧೨೮

ವಚನ: ಇಂತಾ ದೂತಂ ಧರ್ಮನಾಥನ ಮುಂದೆ ಕಾಳಗದ ವಾರ್ತೆಯಂ ಸವಿಸ್ತರಂ ಪೇಳೆ ಕೇಳ್ದೆಲ್ಲರುಂ ಕೊಂಡಾಡುವಪೆಡೆಯೊಳಾಗಳೊರ್ವನಾ ಸುಷೇಣಪ್ರೇರಿತವಾರ್ತಾಹರಂ ಬಂದು ದೇವ ಸುಷೇಣಚಮೂಪಂ ಬಂದನೆಂದು ಬಿನ್ನಪಂಗೆಯ್ಯೆ ಬರವೇಳೆಂಬುದುಂ

ಮಹಾಸ್ರಗ್ಧರೆ

ದೆಸೆಯಂ ಭೂಷಾಂಶುಜಾಳಂ ಬೆಳಗೆ ಗಗನಮಂ ಪಲ್ಲವಚ್ಛತ್ರಮೆಯ್ದು
ರ್ವಿಸೆ ಚಂಚಚ್ಚಾಮರಂಗಳ್ ಪೊಳೆದು ಪವನನಂ ಪೆರ್ಚಿಸಲ್ ವಾದ್ಯಮುಂ ಘೂ
ರ್ಣಿಸೆ ನಾನಾಚಾತುರಂಗಂ ಬಳಸಿ ಬರುತಿರಲ್ ಸುತ್ತಲುಂ ಭಟ್ಟರುಂ ಕೀ
ರ್ತಿಸೆ ತನ್ನಂ ಬಂದುಪೊಕ್ಕಂ ನಿಜನಗರಮನಾನಂದದಿಂದಂ ಸುಷೇಣಂ ೧೨೯

ಕಂದ: ಸಿರಿದಾದತಿಸಂಭ್ರಮದಿಂ
ಕರಮೊಪ್ಪಂಬಡೆದ ರತ್ನಪುರದೊಳಗಂ ಬಿಡ
ದರಸಂ ನೋಡುತ್ತುಂ ಬಂ
ದರಮನೆಯನ್ನೆಯ್ದೆ ಮೊದಲಬಾಗಿಲೊಳಿರ್ದಂ ೧೩೦

ವಚನ: ಮತ್ತಂ ಸೇವಾಲಕ್ಷಣವಿಚಕ್ಷಣನಪ್ಪಾ ಸುಷೇಣಂ ತನ್ನೊಡನೆ ಬಂದ ಸಮಸ್ತಚಾತುರಂಗಬಲಮೆಲ್ಲಮನಲ್ಲಿರಿಸಿ ಸಭಾಪ್ರವೇಶಪ್ರಾಪ್ತ ಕತಿಪಯಾಪ್ತಜನಂಬೆರಸು ತನ್ನೆರಡುಂ ಕೈಗಳೊಳನರ್ಘ್ಯರತ್ನಂಗಳ ಕಾಣಿಕೆಯಂ ಪಿಡಿದು

ಚಂಪಕಮಾಲೆ

ಸಕಳಸಭಾಜನಂಗಳ ವಿಲೋಲವಿಲೋಚನ ಕೈರವಂಗಳಂ
ವಿಕಚಿಸುತಂ ವಿರಾಜದವನತಂಸವಿಕೀಲಿತಸೀನಚಾರುಮೌ
ಕ್ತಿಕಕಿರಣಾಳಿ ಬಿತ್ತರಿಸೆ ನುಣ್ಬೆಳದಿಂಗಳ ಜೆಲ್ವನಾ ಸಭಾ
ಧಿಕಗೃಹವಲ್ಲಿ ಪೊಕ್ಕನಿರದಂಬುದದೊಳ್ ಪುಗುವಿಂದುವೆಂಬಿನಂ ೧೩೧

ವಚನ: ಅಂತುಪೊಕ್ಕು ತತ್ಸಭಾಮಂಡಳಮಧ್ಯಸ್ಥ ಮಣಿಮಯಸಿಂಹಾಸನ ಸಮಾಸೀನನಾದ ಧರ್ಮಜಿನನಾಥನ ಶ್ರೀಪಾದದಂತಿಕಕ್ಕೆ ಸಂದು ಮುಟ್ಟಿದ ಭಕ್ತಿಯಿಂ ಕಾಣಿಕೆಯಂಕೊಟ್ಟು ಸಾಷ್ಟಾಂಗಪ್ರಣತನಾಗಿರ್ದೇಳೆಸಲೊಡಮೆಳ್ದು ಕೈಗಳಂ ಮುಗಿದು ನೊಸಲ್ಗೆ

ತಂದು ಜಯಜಯಯೆಂದು ನಿಜಪತಿ ಭ್ರೂಲತಾಚಾಲನಭೇದಪರಿಸಂಜ್ಞಿತಸ್ಥಾನದೊಳ್ ಕುಳ್ಳಿರ್ದು

ಕಂದ: ಚಾರುಕರ್ಪೂರಪಾರೀ
ಪೂರಂಬೆರಸಿರ್ದ ಚೆಲ್ವವೀಳೆಯುಮಂ ಜಗ
ದಾರಾಧ್ಯಂ ಕುಡೆ ಕೊಂಡಂ
ಕಾರುಣ್ಯೆಕಸ್ಥಿಕಪಾತ್ರನಪ್ಪ ಸುಷೇಣಂ ೧೩೨

ವಚನ: ಮತ್ತಂ ತಾಂ ತಂದನರ್ಘ್ಯಂಗಳುಮಪೂರ್ವಂಗಳುಮಾದುಪಾಯನಂಗಳನಾ ಧರ್ಮನಾಥನ ಶ್ರೀಚರಣೋಪಾಂತದೊಳರ್ಚಿಸಿ ಬಳಿಯಂ ಕಾಳೆಗದ ಕೋಳಾಹಳಂ ಮೊದಲ್ಗೊಂಡು ಕಡೆವರಂ ಪೇಳ್ದು ಭವದೀಯ ಶ್ರೀಪಾದಪ್ರಸಾದದಿಂದಂ ವಿಜಯಿಯಾಗಿ ಬಂದೆನೆಂದು ಬಿನ್ನಪಂಗೆಯ್ವುದುಂ

ಉತ್ಪಲಮಾಲೆ

ತನ್ನಯ ಸೈನ್ಯನಾಯಕನೆನಿಪ್ಪ ಸುಷೇಣಚಮೂಪನಂ ಕರಂ
ಮನ್ನಿಸಿ ಮೆಚ್ಚಿಮೆಚ್ಚಿ ಪೊಗಳ್ದಾತನ ಬುದ್ಧಿಸಮೃದ್ಧಶೌರ್ಯಮಂ
ಸನ್ನುತನಾದ ಧರ್ಮಜಿನನಾಥನಮಂಗಿರದಿತ್ತನರ್ಘಿಯಿಂ
ಪೊನ್ನನನರ್ಘ್ಯರತ್ನಮಯಭೂಷಣವಸ್ತ್ರಸುವಾಹನಂಗಳಂ ೧೩೩

ವಚನ: ಇಂತು ತಣಿವೆ ಮೇರೆಯಾಗಿ ಸುಷೇಣಂಗೆ ಬೇಳ್ಪರ್ಥಮನಿತ್ತು ಮತ್ತಂ ಕರ್ಪೂರತಾಂಬೂಳಸಮರ್ಪಣಾನಂತರಂ ನಿಜನಿವಾಸಕ್ಕೆ ಪೋಗೆಂದು ಬೀಳ್ಕೊಟ್ಟು ಕಳಿಪಲೊಡಂ

ಕಂದ: ಒಡೆಯನರಮನೆಯ ಬಾಗಿಲೊ
ಳಡಸಿರ್ದ ಸಮಸ್ತಸೇನೆವೆರಸು ಸುಷೇಣಂ
ಕಡುಚೆಲ್ವ ತನ್ನ ಮನೆಯಂ
ಸಡಗರದಿಂ ಪೋಗಿ ಪೊಕ್ಕು ಸುಖದಿಂದಿರ್ದಂ ೧೩೪

ವಚನ: ತದನಂತರಂ ಕೈಮಿಕ್ಕು ಪೆರ್ಮೆಗೆ ಪೆರ್ಮನೆಯಾದ ಧರ್ಮಜಿನನಾಥನೋಲಗದ ಸಾಲೆಯೊಳ್

ಮಹಾಸ್ರಗ್ಧರೆ

ಪಲವುಂ ದೀಪಂಗಳಿಂ ಬಂದತಿಶಯಘನವಸ್ತ್ರಂಗಳಂ ಚೆಲ್ವರತ್ನಂ
ಗಳನುನ್ಮತ್ತೇಭವೃಂದಂಗಳನುರುತರಘೋಟಂಗಳಂ ತತ್ಪ್ರಧಾನರ್
ನಲವಿಂ ತೋಱುತ್ತುಮಿರ್ದರ್ ಪೆಸರನುಸುರ್ದೆಲೆಸ್ವಾಮಿ ಕೊಟ್ಟಟ್ಟಿದಂ ಕುಂ
ತಳರಾಜಂ ಗೂರ್ಜರೇಶಂ ಕಳಿಸಿದನಿರದಿತ್ತಂ ಮಹಾಮಾಳವೇಂದ್ರಂ ೧೩೫

ಕಂದ: ಓಲೈಸಿದನಂಧ್ರಮಹೀ
ಪಾಲಂ ಚಿತ್ತೈಸು ಪಾಗುಡಂಗೊಟ್ಟನಿವಂ.
ಚೋಳನರಾಧೀಶ್ವರನಭಿ
ವೋಳಿಸಿದಂ ಪಲವಧಾನ ಸಿಂಹಣಭೂಪಂ ೧೩೬

ವಚನ: ಇಂತೆಂದು ತಂದ ತಂತಮ್ಮ ಕಪ್ಪಂಗಳಂ ಬೇಱಬೇಱವೇಳ್ದು ಕುಡೆ ತತ್ತನ್ನಿಯೋಗದೊಳಧಿಕೃತರಪ್ಪರನೊಪ್ಪುಗೊಳಲ್ವೇಳ್ದಪ್ಪಯಿಸಿ ಬಳಿಯುಮವರವರಸುಚಿತ ಸನ್ಮಾನದಾನಂಗಳಿಂ ಮನ್ನಿಸಿ ಬೀಡಿಂಗೆ ಕಳಿಪಿದನಂತರಮಪೂರ್ವಸಾರ್ವಭೌಮಶ್ರೀ ಯೊಳ್ ನೆರೆದಾ ಧರ್ಮನಾಥಮಹಾರಾಜನಪರಿಮಿತಪರಮಾನಂದ ಪರಂಪರೆಯನಪ್ಪು ಕೆಯ್ದು ನಿಜಸಭೆಯುಂ ವಿಸರ್ಜಿಸಿ ಸಿಂಹಾಸನದಿಂದೆಳ್ದುಪೋಗಿ ಮಜ್ಜನಭೋಜನಮಂ ಮಾಡಿ ಸುಖದಿಂದಿರ್ದಂ

ಕಂದ: ಕ್ಷಿತಿಯುಂ ರಾಜಂ ರಾಜ
ನ್ವತಿಯಾಗಿಯೆ ಮಾಡಿ ನಾಡೆಯುಂ ರಕ್ಷಿಸಿದಂ
ಸತತಂ ಕಮಳಿನಿಯುಂ ಶ್ರೀ
ಮತಿಯಾಗಿಯೆ ಮಾಡಿ ರಕ್ಷಿಪಂತೆ ದಿನೇಶಂ ೧೩೭

ವಚನ: ಅಂತುಮಲ್ಲದೆಯುಂ ಸಪ್ತಜನಶರ್ಮಕರನಪ್ಪಾ ಧರ್ಮನಾಥನೆಂಬ ಮಹಾಪೃಥ್ವೀನಾಥಂ

ಮತ್ತೇಭವಿಕ್ರೀಡಿತ

ಕೆಲರಂ ರಾಜಕುಮಾರರಂ ಮಗಳೆ ತಂತಮ್ಮಾಳ್ವ ರಾಜ್ಯಂಗಳೊಳ್
ನಿಲಿಸುತ್ತುಂ ನೃಪರಂ ಬಳಿಕ್ಕೆ ಕೆಲರಂ ತನ್ನಂ ದಲೋಲೈಸುವ
ಗ್ಗಳದುದ್ಯೋಗದೊಳಂ ನಿಯಾಮಿಸಿರಿಸುತ್ತುಂ ಪೇಳ್ದುದಂ ಮಾಳ್ಪವೊಲ್
ಕೆಲರಂ ಯೋಜಿಸುತುಂ ಕರಂ ಸಲಹಿದಂ ನಿಶ್ಶೇಷಭೂಪಾಳಕಂ ೧೩೮

ವಚನ: ಮತ್ತಂ

ಕಂದ: ನೂತನಕ್ಷತ್ರಪರೀವೃತ
ನಾತತಕುಮುದಾಳಿಪೋಷಕಂ ಚಂದ್ರನವೊಲ್
ಪೂತಕಳೆಯೊಡನೆ ಕೂಡಿ
ಪ್ರೀತಂ ಸುಖದಲ್ಲಿ ನೃಪತಿ ತಣ್ಣನೆ ತಣಿದಂ ೧೩೯

ವಚನ: ಇಂತಖಿಳಭೂತಳಾಂತರ್ವರ್ತಿ ಚಕ್ರವರ್ತಿಪರಿಸ್ಫೂರ್ತಿ ಮತ್ಕಿರೀಟ ಕೋಟಿಕೀಲಿತಹರಿನೀಲಮಾಣಿಕ್ಯಮಾಲಿಕಾ ಸಮುನ್ಮೀಲದುಲ್ಲೋಲಮರೀಚಿಕಾಲೋಲಂಬ

ಲೇಖಾಲೇಲಿಹ್ಯಮಾನ ಲಾಲನೀಯ ಚಲನಕಮಲಯುಗಲ ಸನಾಥನಪ್ಪ ಧರ್ಮನಾಥನೆಂಬ ಮಹಾಪೃಥಿವೀತಳಾಧಿನಾಥನುಂ ಸಕಳಾಂಗನಾಕುಲಮಂಗಲತಿಲಕಾಯಮಾನ ಶೃಂಗಾರವತೀದೇವಿಯುಮೊಂದಾಗಿ ಸಂಭೋಗಸುಖೋನ್ಮುಖರಾಗಿ ಪರಮಪ್ರಮೋದ ಪರಂಪರೆಯನಪ್ಪುಕೆಯ್ದು ಪ್ರಾಜ್ಯರಾಜ್ಯಾಭಿರಕ್ಷಣಂಗೆಯ್ವುತ್ತುಮಿರೆ

ಮಹಾಸ್ರಗ್ಧರೆ

ಸತತಂ ಧರ್ಮಪ್ರಭಾವಂ ಜಗದೊಳೆಸೆವಿನಂ ಮಾಡಿದಂ ಧರ್ಮನಾಥಂ
ಕೃತಕೃತ್ಯಂ ತರ್ಕತಂತ್ರಾತ್ರಿಶಯಿತ ಕುಶಲ ಸ್ತುತ್ಯನುದ್ದಾಮಸತ್ಯಂ
ನುತಚಾರಿತ್ರಪ್ರಜಂ ಬಾಹುಬಲಿಸುಕವಿರಾಜಂ ದಯಾಂಬೋಧಿಚಂದ್ರಂ
ಕೃತಸಮ್ಯಗ್ದೃಷ್ಟಿಮೋಹಂ ಘನಸುಕೃತವಹಂ ಚಾತುರೀಜನ್ಮಗೇಹಂ ೧೪೦

ಗದ್ಯ : ಇದು ಸಕಳಭುವನಜನವಿನೂಯಮಾನಾನೂನ ಮಹಿಮಾಮಾನನೀಯ
ಪರಮಜಿನಸಮಯಕಮಳಿನೀಕಳಹಂಸಾಯಮಾನ ಶ್ರೀಮನ್ನಯಕೀರ್ತಿ
ದೇವ ಪ್ರಸಾದಸಂಪಾದಪಾದನಿಧಾನದೀಪವರ್ತಿಯುಭಯಭಾಷಾ
ಕವಿಚಕ್ರವರ್ತಿ ಬಾಹುಬಲಿಪಂಡಿತದೇವ ಪರಿನಿರ್ಮಿತಮಪ್ಪ
ಧರ್ಮನಾಥಪುರಾಣದೊಳ್ ಸಂಗ್ರಾಮಾಡಂಬರ
ಪರಿವ್ಯಾವರ್ಣನಂ

**ತ್ರಯೋದಶಾಶ್ವಾಸಂ**

328

# ಚತುರ್ದಶಾಶ್ವಾಸಂ

ಕಂದ : ಶ್ರೀಗೆ ನೆಲೆಯೆನಿಸಿ ವಿದ್ಯಾ
ಶ್ರೀಗಾಶ್ರಯಮೆನಿಸಿ ಸಕಳಜನನುತಕೀರ್ತಿ
ಶ್ರೀಗೆ ಗೃಹಮೆನಿಸಿ ನೆಗಳ್ದಂ
ಭೂಗಧಿಪಂ ಸರಸಚತುರಕವಿಕುಳತಿಳಕಂ ೧

ವಚನ : ಅಂತಾ ಧರ್ಮನಾಥಮಹಾರಾಜನಪಾರ ಚಾರು ಮುಖ್ಯ ಸಾರಸರ್ವಸ್ವ ಸಮಾಸ್ವಾದನಕರಣಪರಿಣತಾಂತಃಕರಣಂ ಕರಣತ್ರಯಶುದ್ಧಿ ಸಮೃದ್ಧ ನಭಿವರ್ಧಿತಪ್ರಸಿದ್ಧ ಸದ್ಧರ್ಮಪ್ರಭಾವಂ ಪ್ರಭಾವಶಾವಗುಂಠಿತ ಕಂಠೀರವಪೀಠಸಮುಪಕಂಠಸೇವಾಸಮುತ್ಕಂಠಾಕುಂಠಿತ ನಿಖಿಳವಿಷ್ಟಪಪ್ರತಿಪಾಳಕ ಪಾಪಠ್ಯಮಾನ ಮಹಿಮಾಸಮುಪಲಕ್ಷಿತವದಕ್ಷೂಣ ಪ್ರಾಜ್ಯಸಾಮ್ರಾಜ್ಯರಾಜ್ಯಲಕ್ಷ್ಮೀಪ್ರಮದೆಗೆ ಮೊಗಮಿತ್ತು ಭೋಗೋಪಭೋಗಾನುಭವನ ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯುತ್ತುಮಿರ್ಪಲ್ಲಿ

ಉತ್ಪಲಮಾಲೆ

ಆತನ [1]ಪಜ್ಜ[1]ಳಿಪ್ಪ ಜಸದೇಳ್ಗೆಯೆ ಪಾಲ್ಗಡಲೆಂಬಿನಂ ದಿಶಾ
ಬ್ರಾತಕಮುಂ ಮುಸುಂಕಲದಱಿಲ್ಲಿ ಪವಳ್ಗುಡಿ ಬಳ್ಳಿಗೊಂಡವೊಲ್
ನೂತನತೇಜಮೊಪ್ಪಿದುದು ಮೂಜಗಮುಂ ಘನಫೇನಪಿಂಡದಂ
ತಾತತಶೋಭೆವೆತ್ತುದುರುಪುಷ್ಕರದಂತೆಸೆದತ್ತು ಪುಷ್ಕರಂ ೨

ವಚನ : ಅಂತಾ ನೃಪಾಳತಿಳಕನಪೂರ್ವಸಾರ್ವಭೌಮಲಕ್ಷ್ಮೀಸಪ್ತಾಂಗಸಮಾಲಿಂಗನ ಸಂಗತಿಯನಂಗೀಕರಿಸಿರ್ಪುದುಂ

ಮಹಾಸ್ರಗ್ಧರೆ

ಪರಮಶ್ರೀಧರ್ಮನಾಥಂಗಿಳೆಗಭಿಸವ ಸತ್ಕಾಮದೇವಾವತಾರಂ
ಗುರು ನಾನಾಕೇಳಿಕೌತೂಹಳದೊಳಧಿಸಹಾಯಂ ನೃಪಂ ತಾನೆ ಬಪ್ಪಂ
ತಿರೆ ಬಂದತ್ತಂದು ಪುಷ್ಪಸ್ತಬಕಚಮರವಾಂತ ದ್ವಿರೇಫೋದ್ಭಟಾಂತಂ
ಪರಪುಷ್ಟಾತೋದ್ಯತಾಂತಂ ಕಿಸಲಯಿತತರುಚ್ಛತ್ರಕಾಂತಂ ವಸಂತಂ ೩

[1] ಪುಜ್ಜ (ಕ)

ಚಂಪಕಮಾಲೆ

ಅದು ಕಲಿಕಾಲದಂತೆಸೆದುದಾಱಡಿಗೇಳ್ಗೆಯನಾಗಿಸುತ್ತವಂ
ತದು ವಿರಹಾರ್ಥನಂತೆಸೆದುದುತ್ಕಳಿಕಾಳಿಯನುಂಟುಮಾಡುತುಂ
ಮದನವಿಕಾರನಂ ಬಿಡದೆ ಪೆರ್ಚಿಸುತುಂ ಪರಿಪೂರ್ಣಚಂದ್ರನಂ
ತದು ಮೆಱೆದತ್ತು ಚೈತ್ರಸಮಯಾಗಮನಂ ಜಗದೊಳ್ ವಿಚಿತ್ರಕಂ ೪

ವಚನ : ಅಂತು ಬಂದ ವಸಂತಕಾಲದೊಳ್

ಮಹಾಸ್ರಗ್ಧರೆ

ಹಿಮಸಾರಂ ಮಂದಚಾರಂ ಧೃತಪರಿಮಳಪೂರಂ [1]ಶ್ಲಥೀಭೂತ ನೀವೀ
ಕ್ರಮಚಾರಂ ಚಾಲಿತೋರಃಸ್ಥಳಮಣಿಮಯಹಾರಂ ಮಹಾನಂದಕಾರಂ
ಸಮುಪಾತ್ತಸ್ತ್ರೀವಿಕಾರಂ ರತಿಸುಖಸಹಕಾರಂ ಯಮಾಶಾವಿಹಾರಂ
ಶ್ರಮಜಸ್ವೇದಾಪಹಾರಂ ಮಿಗೆ ಸುಳಿದುದು ಧೀರಂ ಗಭೀರಂ ಸಮೀರಂ ೫

ಮತ್ತೇಭವಿಕ್ರೀಡಿತ

ಮಳಯಾದ್ರಿಸ್ಥಳದಲ್ಲಿ ಪುಟ್ಟಿದ ಮಹಾಶ್ರೀಗಂಧವೃಕ್ಷಂಗಳಂ
ಬಳಸಿರ್ದಗ್ರಫಣಿಪ್ರತಾನಪೊಲವಿಂದಂ ಪೀರ್ದು ಪೀರ್ದಾರ್ತ ದೋ
ರ್ವಳದಿಂ ಮೆಯ್ಯಿಕ್ಕಱದಾದ ತೆಂಕಣನಿಲಂ ತನ್ನಂದನಶ್ರೀಯ ಮಂ
ಗಳವನ್ನಂದನನಂತೆ ದಟ್ಟಡಿಯಿಡುತ್ತಿರ್ದತ್ತು ಕೆಂಗೊಂಬಿನೊಳ್ ೬

ವಚನ : ಆಗಳ್

ಚಂಪಕಮಾಲೆ

ಬಿಡಪದಿಗಂತೆಯುಗ್ಗಳದ ಮೊಗ್ಗೆಗಳಾವಳಿಯೆಂಬ ತೋರ ಜೆ
ಲ್ವೊಡೆ ಮಣಿಗಟ್ಟಿ ಕೋಗಿಲೆಯ ಸುಣ್ದನಿಯಿಂದಮೆ ಮುದ್ದುಮಾತುಮಂ
ನುಡಿದು ಮುಗುಳ್ತ ಮಲ್ಲಿಗೆಯ ಬಲ್ನಸೆಯೆಂಬ ತೊಳಪ್ಪ ಪಲ್ಗಳಂ
ಪಡೆಯದೆ ತೋಱುತುಂ ನಗುವವೊಲ್ ಮೆಱೆದತ್ತು ಪಯೋಜವಕ್ತ್ರದಿಂ ೭

ವಚನ : ಇಂತು ಮನಂಗೊಳ್ವಿನಂ ಪಿಂಗದೆ ತೆಂಗಾಳಿ ಸಂಗಳಿಸಿ ಬೀಸುವುದುಂ

ಉತ್ಪಲಮಾಲೆ

ಆಂ ಸಹಕಾರಿಯಾಗದೊಡಮೇಕೆನಗೀ ಸಹಕಾರನಾಮಮೆಂ
ದಾ ಸಹಕಾರಕಂ ಕೊನರ್ಗಳೋಳಿಯ ಕೂರ್ಮೊನೆದೋಱಲಾಗಳಂ
ತಾಶಯಸಂಭವಂ ಸಕಳದಿಗ್ವಿಜಯೋದ್ಯತನಾಗಿ ತೀಕ್ಷ್ಣಬಾ
ಣಾಸನದೊಳ್ ತೊಡರ್ಚೆ ಪೊಳೆಸಂಬಿನ ಕೂರ್ಮೊನೆದೋಱೆ ಕೊರ್ವಿದಂ ೮

---

[1] ಶ್ಲಿ (ಕಚ)

ಮತ್ತೇಭವಿಕ್ರೀಡಿತ

ಒಸೆದೆನ್ನಲ್ಲಿಗೆ ಬಂದಪಂ ಸುರಭಿಕಾಲಂ ವಲ್ಲಭಂ ತಳ್ತ ಸಂ
ತಸದಿಂದುರ್ವಿ ತದಾಶಯಂಬಡೆಪೆನೆಂಬೀ ತನ್ನ ಸಂಕಲ್ಪದಿಂ
ಪೊಸಕೆಂಬಟ್ಟೆಯನುಟ್ಟು ಮೌಕ್ತಿಕಮಯಾಲಂಕಾರಮಂ ತೊಟ್ಟವೋ
ಲೆ ನಿವೃತ್ತಿರ್ದುದು ಮಾಮರಂ ತಳಿರ್ಗಳಿಂದಂ ಪೂಗಳೊಂದೋಳಿಯಿಂ ೯

ಎನಸುಂ ಕೆಂದಳಿರೆಂಬ ಜೆಲ್ವಪೊಸಧೋತ್ರಂ ರಂಜಿಸಲ್ ಕೋಕಿಳ
ಧ್ವನಿಯಿಂದಂ ಪ್ರಣವೋತ್ಥಿತ ಶ್ರುತಿಯನೆಯ್ದುಚ್ಚಾರಣಂಗೆಯ್ವುತುಂ
ಸನೆಯೆಂಬಕ್ಷತಪುಂಜಮಂ ಪಿಡಿದ ಶಾಖಾಹಸ್ತಮಂ ನೀಳ್ದು ಕಾ
ಮನ ಸದ್ಬ್ರಾಹ್ಮಣನೆಂಬಿನಂ ಪಡೆದುದತ್ಯಾಶ್ಚರ್ಯಮಂ ಮಾಮರಂ ೧೦

ಕಂದ: ಕೆಯ್ವಂದೀ ಮಾಕಂದಂ
ಕೆಯ್ವಾರಂ ಬಂದುದೆನಗೆ ತೀರದುದಿಲ್ಲಾಂ
ಕೆಯ್ವಾರಲಾಗದೆಂದುಱೆ
ಮುಯ್ವಂ ನೋಡುತ್ತು ಕಬ್ಬುವಿಲ್ಲಂ ಬಲಿದಂ ೧೧

ವಚನ: ಇಂತು ನಂದನವನದೊಳಂದಂಬಡೆದು ಸಾಲ್ಗೊಂಡು ನಿಂದ ಮಾಕಂದ ಸಂದೋಹದೊಳ್

ಉತ್ಪಲಮಾಲೆ

ಕೂಡೆ ಮನೋಜನೊರ್ವನೆ ಜಗಂಗಳನಂಡಲೆವಂ ವಸಂತನೆ
ದ್ದಾಡುತುವೆಯ್ದಿ ಬಂದು ನೆರಮಾದೊಡೆ ದಂಡಿಸದಿರ್ಪನಲ್ಲ ನೀ
ವೋಡಿಯೆಪೋಗಿ ಪೋಗಿ ಪುಗದಿರ್ ಪುಗದಿರ್ ಬನಮಂ ದಲೆಂದು ಮಾ
ತಾಡಿ ವಿಯೋಗಿಗಳ್ಗೆ ಸಿರ್ದವೋಲುಲಿದತ್ತು ಸಮಂತು ಕೋಕಿಳಂ ೧೨

ಕಂದ: ಗಿಳಿಗಳ್ ಮಾವಿನ ತನಿವ
ಣ್ಗಳ ರಸಮಂ ಪೀರ್ದು ಪೀರ್ದು ಸವಿಯಾದೊಡೆ ಪೆ
ಣ್ಗಿಳಿಗಳ್ಗೆತ್ತೆನೆ ಮಱಂಗ
ಳ್ಗೊಲವಿಂ ಮುಕ್ಕುಳಿಸಿ ಬಾಯೊಳಿಱಿದವು ಮತ್ತಂ ೧೩

ವಚನ: ಅದಲ್ಲದೆಯುಂ ಪ್ರಫುಲ್ಲಮತಲ್ಲಿಕಾನೇಕ ಕುಸುಮವಲ್ಲರೀಸಮುಲ್ಲಸಿತ ಮಲ್ಲಿಕಾವಲ್ಲೀವನಪ್ರಸರದೊಳ್

ಕಂದ: ಘನಮಾದ ಕಂಪಿನುಜ್ಜೀ
ವನಕರವೋಗರದ ಕಂಪಿನಾಗರವೆತ್ತಂ
ತನಿಗಂಪಿನ ನೆಲೆವನೆ ತಾ
ನೆನಿಸಿದುದಿರುವಂತಿಯಲರ್ದ ಕುಸುಮಪ್ರಸರಂ ೧೪

ಮಲ್ಲಿಗೆ ಕಡುಗೆಳೆಯನ್ನಂ
ಮಲ್ಲಿಗೆ ಸಂಪಗೆ ಬಿಸುಟ್ಟದಿಸಿಸಂಪಗೆಯುಂ
ಗೆಲ್ಲವೆನಗಾದುದೆಂದುಱತ
ಸೊಲ್ಲುತ್ತುಂ ಮದನನುದಿತಮದಭರನಾದಂ ೧೫

ಮಹಾಸ್ರಗ್ಧರೆ
ನೆಲಸಿರ್ದಳ್ ಮಾಣದೇ ನೋಳ್ಪರ ಮತನು ಮಹಾಲಕ್ಷ್ಮಿಯೆಂಬೀ ಮದವ್ಯಾ
ಕುಳಿತಂ ತಾನಾಗಿ ಸೊಕ್ಕಿಮ್ಮಡಿಸಿ ಮಧುಪಸಂದೋಹಮಂ ಕೂಡಿಕೊಂಡಿ
ರ್ದಲರ್ದು ಕೀಳ್ಮಾಡಿ ಭಾಸ್ವದ್ಗುಣಮನಿಳೆಯೊಳುದ್ದಂಡಮಾಯ್ತಬ್ಜಷಂಡಂ
ಖಳಲಕ್ಷ್ಮೀಸಂಗದಿಂದಾವನೊ ಘನಮದದಿಂ ಸೊಕ್ಕಿಯುದ್ದಂಡನಾಗಂ ೧೬

ಕಂದ: ಪಱಿಮೆಗಳ ಕಿಱಿಯ ಮಱಿಗಳ್
ನೆಱೆತಮಡುಗೊಂಡಿರ್ದ ಬಂದಿನಿಡುಕುಱೆತೂಳಂ ಬಂ
ದೆಱಗಿ ತಂತಮ್ಮೊಳುಱೆ ಪರಿ
ಮಱಿಯಾಡುತ್ತಿರ್ದು ನೆಱೆಪಿದವು ತಾಯ್ಗುಣಕಂ ೧೭

ವಿರಹಿಜನಹೃದಯವಿದಳನ
ಸರದರುಣಜಳಾಭಿರಂಜಿತಂ ಕಾಮನ ಕೂ
ರ್ಗರವಾಳ ಳೋಳಿಯೆಂಬಂ
ತಿರಲಸುಕೆಯ್ಯೊಳೆಸೆದುದಲಘುಪಲ್ಲವ ನಿವಹಂ ೧೮

ತರುಗಳ ತುದಿಕೊಂಬುಗಳೊಳ್
ಬೆರಸಿರ್ದೆಳಲತೆಗಳೊಂದನೊಂದಂ ತಾಗು
ತ್ತಿರೆ ಸುಳಿವೆಲರಿಂ ಪೋಲ್ತುದು
ತರದಿಂ ಕೋಲ್ವೊಯ್ದು ಕುಣಿವ ಪೆಂಡಿರ ಜೆಲುವಂ ೧೯

ಅಗೆವೊಯ್ದು ಪೊತ್ತಿಸಿದ ದೀ
ವಿಗೆಗಳ್ ಕಾಮಾಧಿರಾಜನರಮನೆಯೊಳ್ ಕೈ
ಮಿಗೆ ಪಜ್ಜಳಿಸುವವೊಲ್ ಮೊ
ಗ್ಗೆಗಳೆತ್ತಂ ತೊಳಗಿ ಬೆಳಗಿದವು ಸಂಪಗೆಯೊಳ್ ೨೦

ಚಂಪಕಮಾಲೆ

ಸೊಗಯಿಪ ಗುಚ್ಛಮೆಂಬ ಮೊಲೆ ಮಿಳ್ಳಿಸೆ ತೆಂಬೆಲರೆಂಬ ಮುಯ್ಯೈಲರ್
ಮಿಗೆ ಪೊಸಗಂಪಿನೇಳ್ಗೆ ಪಸರಂಬಡೆಮೊಪ್ಪಿರೆ ಕಂಟಕಂ ಸನಂ
ತೊಗೆದಿರೆ ಪೂತಪಾದರಿಯೊಳಂ ನೆರೆದತ್ತು ಮಧುವ್ರತಂ ಮನಂ
ಬುಗುವ ವಿಟಂ ಕರಂ ನಲಿದು ಪಾದರಿಯೊಳ್ ನೆರೆಸಂತೆ ನಾಡೆಯುಂ ೨೦

ಕಳಪಿಕಹಸ್ತಿಯುಂ ಬಹಳಕೀರತುರಂಗಮುಮಂ ರಥಾಂಗಸಂ
ಕುಳರಥಮುಂ ಮಧುವ್ರತಪದಾತಿಕೆಯುಂ ನೆಱೆಕೂಡಿಯಾಳ್ಗಳಂ
ಕಲೆಯಿಳಿವಾಗಳೆಂದೆಸೆ ವಸಂತಚಮೂಪತಿ ಕಾಮದೇವನೆಂ
ಬಿಳೆಗಧಿಪಂಗೆ ಸಪ್ವರಣೆದೋಱಿಸಿದಂ ವನರಾಜಗೇಹದೊಳ್ ೨೧

ಎಲೆ ಸಹಕಾರ ನೀಂ ಸೊನೆಯ ಸೋನೆಗಳಂ ಕಱೆದಾಱಿಸೀಗಳ
ಗ್ಗಲಿಸಿದ ರುದ್ರನೊಳ್ ನೊಸಲ ಕಣ್ಣುರಿಯಿಂ ಕಡುಕೆಯ್ದುಶೋಕ ನೀಂ
ಸಲೆ ತಳಿರೆಂಬ ಕೂರಲಗಿನಿಂ ಹರನಂ ಕೆಡೆ ಕುತ್ತು ನೂಂಕೆನು
ತ್ತುಲಘುಪರಾಕ್ರಮಂ ಮದನನೀಕ್ಷಿಸಿದಂ ಮಿಗೆ ತನ್ನ ಸೈನ್ಯಮಂ ೨೨

ವಚನ: ಆಗಳ್

ಉತ್ಪಲಮಾಲೆ

ಎನ್ನಯ ವೈರಿಯಪ್ಪ ಮದನಂಗೆ ಬಲಂ ನೆಱೆಕೂಡಿದತ್ತು ಮು
ತ್ತಿನ್ನೆನಗೇನಪಾಯಮನೊಡರ್ಚುವನೆಂದಱಿಯಲ್ಕೆ ಬಾರದೆಂ
ಬುನ್ನತಚಿಂತೆಯಿಂದೆ ಗಿರಿಶಂ ಮರುಳಾಗಿ ತೊಳಲ್ದು ಶೂಲಿಯಾ
ದಂ ನರನಾಮನೋ ಪಗೆಯ ಪೆರ್ಚುಗೆಯಂ ನಡೆನೋಡಿ ಸೈರಿಪಂ ೨೪

ವಚನ: ಇಂತು ವಸಂತಸಮಯಂ ನಂದನವನದೊಳಾನಂದದಿಂ ವಿಹಾರಿಸಿ ವನಶಬ್ದಸಮಭಿದೇಯಮುಪ್ಪುದಱಿಂ ಪಥಿಕಜನಮೃಗಮೃಗಯಾವಿನೋದಾರ್ಥಮೆನ್ನಲ್ಲಿಗೆ ಬಂದಪನೆಂದು ಕಾಂತಾರಕಾಂತೆ ಕಂಚನಾರದ ಚಂಪೆಯುಮಂ ತಿಳಕದ ತಿವುರಿಯುಂ ಸರಳದ ಚಾರಿಯುಂ ಬಕುಳದ ಗುಡಿಯುಂ ನಿರ್ಮಿಸಿದ ಪೊಸಸಿಬಿರಮೆಂಬಂತಿರಿಂಬುವಡೆದ ಮಹಾವಿಪಿನಪ್ರದೇಶದೊಳ್

ಕಂದ: ಸೊಂಪೇಱತ್ತು ಕುಜಾತಿಗೆ
ಪೆಂಪೋಡಿತ್ತಮುಸು ಜಾತಿಗದವೆಯರೆರ್ದೆ ಗದ
ಗಂಪಂಗೊಂಡುದು ಮಧುಮಾ
ಸಂ ಪುಗೆ ದುರ್ನೀತನೃಪನ ರಾಜ್ಯದ ತೆಱದಿಂ ೨೫

ವಚನ : ಅದಱಿಂ ಕೂಳ್

ಮಹಾಸ್ರಗ್ಧರೆ

ಸ್ಮರಚಕ್ರಾಧೀಶ್ವರಂ ದಿಗ್ವಿಜಯವಿರಚನಾಕಾರಣಂ ಬಾಹ್ಯದೇಶಾಂ
ತರದೊಳ್ ಪೊಯ್ಸಿಟ್ಟ ಕೆಂಬಟ್ಟೆಯ ಪೊಸಗುಡಿಯೆಂಬಂತೆ ಪತ್ತಂ ವಿಯೋಗಾ
ತುರರೆಂಬೇಣಂಗಳಿಂದಂ ದವದಹನದ ಭಾಸ್ವನ್ಮಹೋಜ್ವಾಲಿಕಾ ಮಂ
ಜರಿಯೆಂಬಂತೆಯ್ದೆ ಪೂತಿರ್ದುದು ಬಹಲವಿಶಾಲೋತ್ಪಲಾಶಂ ಪಲಾಶಂ ೨೬

ಕಂದ : ತುಂಬಿಗಳ ಬಳಗಮುಱಿಂ ಬಂ
ಡುಂಬಿಡೆಯೊಳ್ ತೋರಪೊನ್ನಹರಿಯಾಣಂಗಳ
ನಿಂಬಾಗಿರಿಸಿದ ತೆಱದಿಂ
ದಂ ಬಗೆಗೊಳಿಸಿದವು ಕೊಸಗಿನಲರ್ಗಳ್ ಪಿರಿದುಂ ೨೭

ಮತ್ತೇಭವಿಕ್ರೀಡಿತ

ನನೆವೊತ್ತಿತ್ತದಿರ್ಗಂತೆ ಪಲ್ಲವಿಸಿದತ್ತುದ್ವೃತ್ತಮಾಳಂ ಕರಂ
ಕೊನರೇಱತ್ತುರು ಸಿಪ್ಪಳಂ ಮುಕುಳಮಂ ತಾಳ್ದಿತ್ತು ಪುನ್ನಾಗಮು
ಯ್ದೆ ನಯಂಬೆತ್ತುದು ಪೊನ್ನೆ ಪೂಗುಡಿಗಳಂ ಪೇಱತ್ತು ಸತ್ಕೇಸರಂ
ಘನತಾರಾಂಕುರಭಾರಮಂ ಕುರವಕಂ ಪೆತ್ತಿತ್ತು ಕಣ್ಗೊಪ್ಪದಿಂ ೨೮

ವಚನ : ಅಂತು ನಿರವಶೇಷ ನರನಾರೀಜನಂಗಳಿಂಗೆ ಸಮಾಹಿತಸುಖಮೆಂಬಮೃತದ ಪೂರಮಂ ನೆಱಕೆಱದು ತಣಿವನೀವುತ್ತುಮಿರ್ದ ಸುರಭಿಯೆಂಬಂತೆ ಬಂದ ನಿರತಿಶಯ ಸುರಭಿಸಮಯಶ್ರೀಯ ವಿಜೃಂಭಣಮೆಲ್ಲೆಡೆಯೊಳಂ ಪರಕಲಿಸಿ ನಿಬಿಡಮಾಗಿ ಪಸರಿಸುವುದುಂ

ಸ್ರಗ್ಧರೆ

ಪೆರ್ಚೀ ಪೆರ್ಚಾಗಿ ಬಾಳ್ವಿನ್ಮಯ ಕಮಳತನೂಜಂಗಮಾ ರಾಜನಿಂದಂ
ಪೆರ್ಚುತ್ತಿಕ್ಕಟ್ಟಿಗಂ ನೋಳ್ಪನಿತು ಸಮನಿಸಿತ್ತೆಂಬ ಸಂತಾಪಮುಮಂ ಮು
ಯ್ವೆಚ್ಚಲ್ ತಟ್ಟಾಱುತಿರ್ದತ್ತೆನೆ ಪ್ರಥುಳಸರಸ್ಸಂಕುಳಂ ಕಂಠದಘ್ನಂ
ಬಿಟ್ಟಿತ್ತಾ ನಾಭಿದಘ್ನಂ ತಡೆಯದೆ ಕಟಿದಘ್ನಂ ಕರಂ ಜಾನುದಘ್ನಂ ೨೯

ಚಂಪಕಮಾಲೆ

ವನಜಳಕೇಳಿಸೆಯ್ದೆ ತೆಱಪಂ ಕುಡಲೆಂಬಿನಮಾಕ್ಷಣಂ ಪಗಲ್
ಘನತರಮಾದಿದಂದಿನಿರುಳುಂ ಕಿಱದಾದುದು ಪದ್ಮಿನೀವಿಕ
ರ್ತನನ ವಿಯೋಗದುಃಖಮನಡಂಗಿಸಲೆಂಬಿನಮುತ್ತರಾಯಣಂ
ದಿನಪತಿಗಾದುದಂದೊಲಿದುದೆಂಬಿನೆಗಂ ಮಳಯಾದ್ರಿವಾಯುವಿಂ ೩೦

ಅವಿರಳಮಾದ ಬೆಳ್ಪನೊಳಕೊಂಡು ವಿಜೃಂಭಿಸಿದತ್ತು ಚಂದ್ರಿಕಾ
ನಿಸಹಮುಗಲ್ದ ನಲ್ಲಳನಪೇಕ್ಷಿಪ ಕಾಮುಕವಕ್ತ್ರದಂತೆ ತೀ
ಪ್ರಮನವಳಂಬಿಸಿರ್ದ ಬಿಸಿಲಪ್ರಸರಂ ಕಡುಗಾಯ್ಪುವೆತ್ತುದೀ
ಭುವನದೊಳಿಂದ್ರಿಯಂಗಳದಿದರ್ಪ ವಿಸರ್ಪಣದಂತೆ ಚೈತ್ರದೊಳ್ ೩೧

ಪೊಸಮುಸೆಯೇಜಂ ಪುಷ್ಪಸರಮಾದುದು ಕೂರಿತು ಕರ್ಮವಿಲ್ಲುಮು
ಬ್ಬಸಮೆನಿಸಿರ್ದ ಬಲ್ಪನೊಳಕೊಂಡುದು ತುಂಬಿಯ ನಾರಿ ತೀಕ್ಷ್ಣದಿಂ
ದಸದಳಮಾಯ್ತು ಸರ್ವಬಲಸೇವಿತನಾಗಿ ಮನೋಜರಾಜನ
ರ್ದಿಸಿ ಬಿಡದೆರ್ದು ಸೋಲಿಸಿ ಜಗತ್ರಯಮಂ ವಶಮಾಗಿ ಮಾಡಿದಂ ೩೨

ವಚನ: ಇಂತು ನಿರಂತರಿತ ಸಂತೋಷಸಂತಾನಮನೆಲ್ಲರ್ಗೆ ಸಂಪಾದಿಸುತ್ತುಂ ಬಂದ ವಸಂತಸಮಯದೊಳ್ ಪಿರಿಯ ಸಿರಿಗೆ ಕರುವೆನಿಪ ಕರುಮಾಡದ ಪಿಂದಣಭಾಗಕ್ಕೆ ಪರಭಾಗಮಾಗಿ ನಳನಳಿಸುವ ಶಿವಂಕರೋದ್ಯಾನದ ನಟ್ಟನಡುವಣ ದಿಶಾವಲೋಕನ ಪ್ರಾಸಾದಮಾದ ಸರ್ವತೋಭದ್ರಮೆಂಬೇಳನೆಯ ನೆಲೆಯ ಮಣಿಮಾಡದ ಮಧ್ಯವೇದಿಕೆಯ ಮೇಲಣ ಬಿತ್ತರಂಬೆತ್ತ ಮುತ್ತಿನ ಮಂಡಪದಲ್ಲಿ ಪರಿಹಾಸಕರ ನರ್ಮಸಚಿವರ ಕಬ್ಬಿಗರ ಕಳಾವತಿಯರ ಸುರಭಿಸಮಯ ಸಮುತ್ಕರ್ಷಸಮುಚಿತ ಚತುರವಚನರಚನಾಪ್ರಸಂಗ ಮೆಸೆವ ಪರಿಮಿತಮಾದ ವಿಳಾಸವತಿಯರೋಲಗದೊಳ್ ಶೃಂಗಾರವತೀದೇವಿ,ಕುಳ್ಳಿರ್ದ ಪಟ್ಟಗದ್ದುಗೆಯರ್ಧದೊಳಾಕೆಯಸೌಂಕಿ ಸೋಂಕಿ ಕುಳ್ಳಿರ್ದ ಧರ್ಮನಾಥಮಹಾರಾಜಂ ಕಡುನಿಮಿರ್ದ ನೀಳ್ದ ತನ್ನಯ ನಿಕಾಮಕೋಮಳವಾಮತರಬಾಹುದಂಡಕಾಂಡಮನರಸಿ ಯೆಡದ ಪೆಗಲೊಳ್ ಮಡಂಗಿ ವಿಸ್ತೃತಹಸ್ತತಳದಿಂ ವೃತ್ತಸ್ತನಮಂಡಳದೆಡೆಯಂ ಕುಪ್ಪಳಿಸುತ್ತುಮಿರ್ಪ ಪೊತ್ತಿನೊಳ್

ಕಂದ: ಆದೇವಿ ನುಡಿದು ನೀಡುವ
ಮೇದುರತಾಂಬೂಳದಳಸ್ಪೃಣಾ[1]ಳ[1]ಶಕ[2][ಲ][2]ಮಂ
ಕ್ಕಾದಲನ ದುತಹಂಸಮ
ದಾದರಿಸಿ ಕರ್ದುಂಕೆ ಕಬಳಿಸಿತ್ತಾಕ್ಷಣದೊಳ್ ೩೩

ವಚನ: ಮತ್ತಮಾ ಪಟ್ಟಮಹಾದೇವಿಯ ಬಲದ ನೆಲೆಮೊಲೆಯ ಪರಿಸ್ಪರ್ಶಹರ್ಷ ಪುಳಕಿತಮಾದ ಕ್ಷತ್ರಿಯಕುಳತಿಳಕನ ವಕ್ಷಸ್ಥಳಂ ಕುಂಕುಮಕರ್ಪೂರಂ ಬೆರಸಿದ ಚಾರುಹರಿ ಚಂದನ ಚರ್ಚೆಯೊಳೊಂದಿ ತಣ್ಪಿನ ಪೊಂಪುಳಿಯ ಸುಖದ ಸುಗ್ಗಿಯ ಹರವರಿಯಾಗಿ ರ್ಪುದುಮಾಗಳ್

---

[1] ಣ (ಚ) [2] ಕ (ಕಗಚ)

ಸ್ರಗ್ಧರೆ

ಕಸ್ತೂರೀಸಾರದಿಂದಂ ಬರೆದ ಮಕರಿಕಾಪತ್ರಮೆಂಬಂಕದಿಂದಂ
ವಿಸ್ತಾರಂಬೆತ್ತ ತದ್ದೇವಿಯ ನಗೆಮೊಗಮೆಂಬಿಂದುಬಿಂಬಂ ಪಳಚ್ಚಲ್
ವಿಸ್ತೀರ್ಣಾಪಾಂಗಮೆಂಬುರ್ವೊದವಿದಜ ಚೆಳ್ದಿಂಗಳಂ ಪೀರ್ದು ಪೀರ್ದುಂ
ಪ್ರಸ್ತುತ್ಯೋತ್ತೃಪ್ತಿಯಿಂದಾತನ ನಯನಚಕೋರಂಗಳೊಲ್ದಿರ್ದವಾದಂ ೩೪

ವಚನ: ಅಂತು ಚರಾಚರಜಗದ್ವಲ್ಲಭಂ ನಿಜಪ್ರಾಣವಲ್ಲಭೆಯ ಕೆಲದೊಳಿರ್ದು ದಿಶಾಶೋಭಾವಳೋಕನಂಗೆಯ್ವಾಗಳ್ ತನ್ನಯ ಕಣ್ಬೊಣರಿನಿಂಬುವಡೆದು ಸನ್ನಿದವಾದ ನಂದನಶ್ರೀಯುಂ ಮನ್ನಿಸುವಂತೆ ನೀಡುಂನೋಡುತ್ತುಮಿರ್ಪುದುಮಾ ಪೊತ್ತಿನೊಳೋಲಗದ ಮಾಲಾಕಾರಕರ ವನಪಾಲಕರ ಕುಮಾರಿಕಾನಿಕರಂ ಪೊಸಗಂಪನುಗುಳ್ವ ಕುಸುಮಮಾಲಾ ವಿಸರದ ಶೃಂಗಾರದ ಬೆಡಂಗನಂಗೀಕರಿಸಿ ವನಲಕ್ಷ್ಮಿ ಶಂಕೆಯನಂಕುರಿಸುತ್ತುಂ ಬಂದು ಸುರಭಿಪರಿಮಳವಿಳಾಸಮನೆಸಗುತ್ತುಮಿರ್ದ ಸುರಭಿಸಮಯದ ಪಲತೆಱದ ಪೂಮಾಲೆಗಳಂ ತಂದು ಕಾಣಿಕೆಗೊಟ್ಟು ಪೊಡವಟ್ಟು ಭೂಪಾಲಭ್ರೂಲತಿಕಾಚಾಲನದಿಂ ಸಂಕೇತಿತಸ್ಥಾನ ದೊಳ್ ಕುಳ್ಳಿರ್ದು ಬಳಿಯುಮಾ ಕುಮಾರಿಕಾ ನಿಕರದೊಳಗೆ ಮುಖ್ಯರಪ್ಪ ವಸಂತಮಾಲೆ ಯುಂ ಕಾಮಲತೆಯುಮೆಂಬ ಮೇಳದ ವಿಳಾಸಿನಿಯರ್ ತಜ್ಜಾತಿಯಾದ ಚತುಷ್ಪದೀ ಭೂತಖಂಡೋವೃತ್ತಪಠನಮುಖದಿಂ ವಸಂತಕಾಲದ ಬರವಂ ಜಾಣಶಿರೋಮಣಿಗಱಿಪಿ ಮನಂಬಡೆವ ಬಗೆಯಿಂದೆಳ್ದು ತತ್ಪಾದಪೀಠೋಪಕಂಠಮನೆಯ್ದಿ ಮಾವಿನ ತನಿವಣ್ಣಂತೆ ರಸಂಬಡೆದು ತಾವು ವಿರಚಿಸಿದ ವಸಂತವಿಹರಣಮೆಂಬ ನಾಟಕದೊಳಗೆ

ಮತ್ತೇಭವಿಕ್ರೀಡಿತ

ಕಿವಿಗಿಂಬಾಗೆ ವಸಂತರಾಗದೆಸೆವೊಂದಾಳಾಪಮುತ್ಪ್ರೇಕ್ಷೆಯು
ತ್ಸವಮಂ ಪುಟ್ಟಿಸೆ ಬಂದು ಮುಂದೆ ನಲವಿಂ ನಿಂದಿರ್ದು ಬೇಱಿಱೊಂದು ಸು
ಚ್ಚವಿಯಿಂದೋದಿದರಿರ್ಬರುಂ ಪುಳಕಮೆಲ್ಲರ್ಗೇಳ್ವಿನಂ ಮೆಯ್ಯೊಳು
ಕ್ತ ವಸಂತಾಗಮನಪ್ರವೇಶಪರಿಶೋಭಾಪದ್ಯಮುಂ ಪದ್ಯಮುಂ ೩೫

ಮಹಾಸ್ರಗ್ಧರೆ

ತಳಿರಿಂ ಕೆಂಪಾಗಿ ಪೂವಿಂದಮೆ ಕಡುಬಿಳಿದಾಗಿ ಭ್ರಮನ್ಮತ್ತಭೃಂಗೀ
ಕುಳದಿಂ ಕಪ್ಪಾಗಿ ಪತ್ರಾವಳಿಯಿನಱಿ ಪಸುರಾಗಿ ಪ್ರಪಕ್ವೋರುಹೃದ್ಯೋ
ತ್ಪಳದಿಂ ಪೊಂಬಣ್ಣಮಾಗಿರ್ದೆಸೆದುದಸದಳಂ ನಂದನಂ ಚೈತ್ರನೆಂಬ
ಗ್ಗಳಜಾಣಂ ಚಿತ್ರಿಕಂ ಚಿತ್ರಿಸಿದ ಮದನಚಕ್ರೇಶನಾಸ್ಥಾನದನ್ನಂ ೩೬

ವಚನ: ಇಂತುಬಂದ ಬಸಂತಕಾಲದೊಳ್ ಪರಮಾನಂದಮನಪ್ಪುಕೆಯ್ದು ಕೆಯ್ಗಿಯ್ದ ವನಲಕ್ಷ್ಮಿಯೆಂತಿರ್ದಳೆಂದೊಡೆ

ಮಹಾಸ್ರಗ್ಧರೆ

ತ್ರಿಕಕಂ ಕಾಂತಾಕಟಾಕ್ಷೇಕ್ಷಣಮನಸುಕೆ ನಾಟಿಪದಾಘಾತಮಂ ಮಂ
ಜುಳಯೋಷಿದ್ಮುಗ್ಧಗಂಡೂಷಸಮುನುರುಚಾಂಪೇಯಕಂ ಕಾವಿನೀಮಂ
ಗಳಪಕ್ಷೋಜಾತದಾಲಿಂಗನಮನೆ ಕುರಬಂ ಕಾಂಕ್ಷಿಸುತ್ತಿರ್ದುದೆಂದ
ಗ್ಗಳದುದ್ಯಾನಂ ಪಿಕೋದ್ಘೋಷಣದೆ ಕರೆವವೋಲ್ ಬಿನ್ನಪಂಗೆಯ್ದು ನಿಮ್ಮಂ ೩೭

ವಚನ: ಎಂದು ವನವಿಹರಣವಿನೋದಕಾರಣ ನಿಮ್ಮಡಿಗಳ್ ಬಿಜಯಂಗೆಯ್ಯಲ್ ಬೇಕೆಂದು ಕಿವಿಗೆ ಸವಿಯನೊದಯಿಸುವ ಮಧುಮಾಸವ್ಯಾವರ್ಣನಮಂ ಪೇಳ್ವ ನಿರವದ್ಯ ಪದ್ಯಮನೋದುವ ವ್ಯಂಗ್ಯೋಕ್ತಿಯ ನೆವದಿಂ ವ್ಯಂಗ್ಯಂ ಭಂಗಿಸಿಧಾನಂಗೆ ಬಿನ್ನಪಂಗೆಯ್ಯೆ ಕೌತುಕಾಯಮಾನಮಾನಸನಾಗಿ

ಮತ್ತೇಭವಿಕ್ರೀಡಿತ

ಪಿರಿದುಂ ರೀತಿ ವಿನೂತಮಾಯ್ತು ಸದಳಂಕಾರಂ ಮನಂಗೊಂಡುದು
ದ್ಧುರವಿಶ್ರಾಮದೊಳೆಯ್ದೆ ಶಾಯೆ ಸೊಗಸಿತ್ತೊಳ್ಮಾತು ಸೇರಿತ್ತು ಭಾ
ವರಸನ್ನೂತನಮಾದುದೆಂದು ತಲೆದೂಗುತ್ತುಂ ಪೊಗಳ್ದಿತ್ತನಾ
ದರದಿಂ ಮೆಚ್ಚಿ ಪಸಾಯಮಂ ತಣಿವವೋಲಿರ್ಬರ್ಗಮಾ ಪಾರ್ಥಿವಂ ೩೮

ವಚನ: ಬಳಿಯಮಾ ಸಭಾವಾಸಿಗಳೆಲ್ಲಂ ಕರಾಂಗುಳಿಚಾಳನಕ್ರಿಯಾವಿಳಾಸಂ ದೆಸೆವಡೆಯೆ ಲೇಸುಲೇಸೆಂದು ಕೊಂಡಾಡಿ ವನಕ್ರೀಡೆಗುನ್ಮುಖೀಕರಣವಚನಂಗಳಿಂದಭಿಮುಖಂಮಾಡಿದಾಗಳಾ ಸಭಾಮಾಣಿಕ್ಯದೀಪಾಂಕುರಂ ಕಡುನಲವಿಂದಾ ಲಲನಾಕುಲ ಲಲಾಮೆಯ ನಗೆಮೊಗಮಂ ನೋಡಿ ಮಿಸುಪ ಪೊಸಮಿಸುನಿಯಂ ಸಮೆದು ಮಸೃಣಮಣಿ ಕೇವಣದಿನಸದಳಮೆಸೆವ ದಂಡಕಾಂಡಪರಿಮಂಡನವಿಡಂಬಿತಮಾತ ಧವಳಚಳಚ್ಚಾಮರ ಸಮಾಜಕೋಮಳ ಪವನಪರ್ಯಟನವಶದಿಂ ಪರಕಲಿಸಿಯೊಪ್ಪುವಾಕೆಯ ಸುಳಿಗುರುಳಂ ತನ್ನಯ ಸೆಳ್ಳುಗುರಿಂ ಲಲಾಟಪಟ್ಟದೊಳ್ ಮೆಯ್ವಳಿಯಿಂ ತಿರ್ದುತ್ತುಮಿಂತೆಂದಂ

ಮತ್ತೇಭವಿಕ್ರೀಡಿತ

ಲಲಿತಚ್ಛಾಯೆಯೊಳೊಂದಿ ವಿಭ್ರಮದಗುರ್ವಂ ತಾಳ್ದಿ ಸತ್ಕಂಟಕಾ
ವಳಿಯಿಂದೊಪ್ಪಿ ಲಸತ್ಪ್ರವಾಳಚಯದಿಂ ಚೆಲ್ವಾಗಿ ನಿನ್ನಂತೆ ರೂ
ಪಳವಟ್ಟಾ ವನಲಕ್ಷ್ಮಿ ತನ್ನ ಸಿರಿಯಂ ನೋಡಲ್ಕೆಲೇದೇವಿ ಕೋ
ಕಿಳಸಂರಾವದಿನೊಪ್ಪುತಿರ್ದುದು ಕರಂ ನಿನ್ನಂ ಬರಲ್ವೇಳ್ವವೋಲ್ ೩೯

ಉತ್ಪಲಮಾಲೆ

ನಿನ್ನ ಕಟಾಕ್ಷವೀಕ್ಷಣದ ನುಣ್ಬೆಳಗಿಂ ಕಿಡಿಸಂಧಕಾರದೊಂ
ದುನ್ನತಿಯಂ ಮರಂಗಳೆಡೆಯಲ್ಲಿ ಕರಂ ತೆಜಪಾದ ತಾಣಮಂ
ನಿನ್ನಯ ಪಾದಪಲ್ಲವದ ಕೆಂಬೆಳಗಿಂ ತಳಿರೇಳಿಸಿಂತು ಸಂ
ಪನ್ನತೆ ನಂದನಕ್ಕೆ ಪರಿಪೂರ್ಣಮೆನಿಕ್ಕು ಬಳಿಕ್ಕಮೋಪಳೇ ೪೦

ಕಂದ : ನುಡಿಯಿಂ ಮುಡಿಯಿಂ ನಡೆಯಿಂ
ತಡೆಯದೆ ಕೋಗಿಲೆಗೆ ತುಂಬಿಗಂಚೆಗೆ ಮದಮಂ
ಕಿಡಿಸಿ ಸಡಗರಮನೆನಗೆ
ಯೊಡ್ಡರಿಸು ನಡೆ ನಂದನಕ್ಕೆ ಪಂಕಜವದನೇ ೪೧

ವಚನ : ಎಂದು ಶ್ರವಣರಮಣೀಯಮಪ್ಪ ನುಡಿಯಂ ಧರಣೀರಮಣಂ ನುಡಿಯಲೊಡಮಾ ರಮಣಿಯುಮುಪಚಿತ ಪರಿಹಾಸವಚನಲೀಲಾದ್ಯನುಭಾವಂಗಳಿಂದೊಡಂಬಟ್ಟುದಂ ನಿಟ್ಟಿಗೊಳಿಸಲಾಕೆ ತನ್ನಯ ಭಂಗುರಾಪಾಂಗರೋಚಿಃಕಳಿಕೆಯೆಂಬ ಸಮಾಚೀನ ಚೀನ ಚೇಳಮನಾ ಪ್ರಿಯಸಂಭಾಷಣಭೂಷಣಂಗಂಗಚಿತ್ತಮನೀಯಲೊಡಂ

ಮತ್ತೇಭವಿಕ್ರೀಡಿತ

ಪೊಸಗಂಪಂ ಕೆದಱುತ್ತುಮಿರ್ದ ವರಮಲ್ಲೀಮಾಲೆಯಿಂದಂ ವಿರಾ
ಜಿಸಿ ಮೂಲೋಕದೊಳತ್ಯಪೂರ್ವತಮರೂಪಂ ತಾಳ್ದಿ ಸದ್ಗಂಧದಿಂ
ಪೆಸೆಯಲ್ ತಣ್ಪು ವಸಂತನುಂ ಮದನನುಂ ಶೀತಾಂಶುವುಂ ಕೂಡಿ ಸಂ
ತಸದಿಂದಂ ವನಕೇಳಿಗೇಳ್ವ ತೆಱದಿಂದೆಳ್ದಂ ಮಹೀಮಂಡನಂ ೪೨

ವಚನ : ಅಂತಾ ದೇವಿಯುರೋಲಗದ ಮಂಡಪದಿನೆಳ್ದು ನೆಲೆಮಾಡದಿಂದಿಳಿದು ಪೋಗಿ ಲಕ್ಷ್ಮೀಮಂಡಪದ ಮುಂದಣ ಮೊಗಸಾಲೆಯೊಳ್ ನಿಂದು ವನವಿಹರಣಕೇಳೀವಿನೋದಯಾತ್ರಾನಿಮಿತ್ತಮಾನಂದಭೇರಿಯಂ ಪೊಯ್ಸಿದಾಗಳ್

ಮತ್ತೇಭವಿಕ್ರೀಡಿತ

ಎಸೆವಿಂ ಮನ್ಮಥಚಕ್ರವರ್ತಿ ಬನದೊಳ್ ಬಿಟ್ಟಿರ್ದನಾತಂಗಮಾ
ಳ್ವೆಸನಂಗೆಯ್ದು ಬರ್ದುಂಕಿ ಕಾಣ್ಬುದು ನಿಮಿತ್ತಂ ಪೋಗಿ ಮಾಣ್ದಿರ್ದೊಡು
ಬ್ಬಸಮಂ ಮಾಡದೆ ಮಾಣನೆಂದು ನಡೆತಂದೆಲ್ಲರ್ಗೆ ಪೇಳ್ವಂದದಿಂ
ಪಸರಂಬೆತ್ತುದು ಧರ್ಮನಾಥಗಮನಪ್ರಸ್ಥಾನಭೇರೀರವಂ ೪೩

ವಚನ : ಆ ಭೇರಿಯ ಭೂರಿವಿರಾವಂ ದಶದಿಶಾವಿವರಾಂತರಾಳಮನಾವರಿಸುತ್ತುಮಿರಲಾಗಳಾ ರತ್ನಪುರದ ನಿರವಶೇಷಪುರುಷಪರಿಷದನಂತಸೀಮಂತಿನೀಸಂತತಿಗಳೆಲ್ಲ ಪರಿಪರಿಯ ಬಣ್ಣ ಪಣ್ಣಿಗೆಯಿಂ ರಂಗಂಬಡೆದ ಕಡುಬೆಲೆಯಿಂ ತಿಣ್ಣಮಾದ ಸಣ್ಣ ಸೀರೆಗಳನ್ನುಟ್ಟು ನವವಿಧಮಣಿಕೇವಣದಿಂ ರಮಣೀಯಮಾಗಿ ಥಳಥಳಿಸಿ ಪೊಳೆವ ನವೀನಾಭರಣಂಗಳಂ ತೊಟ್ಟು ಕಂಪಿನ ಕರಂಡಕಮಾದ ರಾಗಾವಿಳವಿಳಸದಂಗರಾಗಾನುಲೇಪನಂಗೆಯ್ದು ಪೊಸತಾಗಿ ಕೈಗೆಯ್ದು ಬಂದರಮನೆಯ ರಾಜಾಂಗಣದೊಳ್ ನಿಂದಿರ್ಪುದುಂ

ಉತ್ಪಲಮಾಲೆ

ಪಣ್ಣಿದ ಪಟ್ಟವರ್ಧನಮದೇಭಮನೇಱಿ ನರೇಂದ್ರಕುಂಜರಂ
ಬಣ್ಣಿಸೆ ಪಿಂದೆ ಬಂದೊಡನೆ ಪಟ್ಟದರಾಣಿಯುಮಾಗಳೇಱಿದಳ್
ಪೆಣ್ಣುಗಳೆತ್ತಲುಂ ಪರಸೆ ರೋಹಿಣಿಚಂದ್ರನ ಪಿಂದೆ ಮೇಘಮಂ
ತಿಣ್ಣಮೆನಿಪ್ಪುದಂ ತಡೆಯದೇಱುವವೋಲೊಳಕೊಂಡು ರಾಗಮಂ ೪೪

ವಚನ : ಆಗಳ್

ಉತ್ಪಲಮಾಲೆ

ಆನೆಯ ಮೇಲೆ ನಾಲ್ಕುಕೆಲದೊಳ್ ನೆಲಸಿರ್ದೊಲವಿಂದೆ ಬೀಸಿದರ್
ಮಾನಿನಿಯರ್ ಕನತ್ಕನಕದಂಡ ಚತುಸ್ಸಿತಚಾಮರಂಗಳಂ
ಪೀನತರಂಗಳಾದ ಪೊಸಮುತ್ತುಗಳಿಂ ಸಮೆದಿರ್ದ ಪಲ್ಲವೋ
ತ್ಥಾನದ ಚೌಕಸತ್ತಿಗೆಗಳಂ ಪಿಡಿದಿರ್ದರಿನಂಗೆ ಲೀಲೆಯಿಂ ೪೫

ವಚನ : ಸಮನಂತರಂ

ಉತ್ಪಲಮಾಲೆ

ರಾಜಕುಮಾರರಾನೆಗಳನೇಱಿ ರಥಂಗಳನೇಱಿ ಸೂಳೆಯರ್
ವಾಜಿಗಳುಂ ಪ್ರಧಾನರಿರದೇಱಿ ಪುರಂಧ್ರಿಯರೇಱಿ ಕೇಸರಿ
ವ್ರಾಜಮನುದ್ಧೃತಂ ಪಿಡಿಯ ಪಿಂಡುಗಳಂ ಪಿಡಿದೇಱಿ ರಾಣಿಯರ್
ಪೂಜಿತರಾಗಿ ನಿಂದರಧಿರಾಜನ ಸುತ್ತಲುಮುಣ್ಮೆ ಸಂಭ್ರಮಂ ೪೬

ಕಂದ : ಮಂಗಳ ನಾನಾವಿಧ ತೂ
ರ್ಯಂಗಳ ರವಮುಣ್ಮೆ ಪೊಣ್ಮೆ ಪತ್ತುಂದೆಸೆಯುಂ
ಪಿಂಗದೆ ದಿಂಕಿಡಿಸುತ್ತಿರೆ
ತುಂಗಮನಂ ಧರ್ಮನಾಥನಲ್ಲಿಂ ತಳರ್ದಂ ೪೭

ಎಳೆವೆಱೆಯಂತಿರೆ ಜೊಲ್ವಂ
ತಳೆದುಜ್ವಳಿಸುತ್ತುಮಿರ್ದ ವಜ್ರಾಂಕುಶದಿಂ
ದಿಳೆಗಧಿಪನೊತ್ತಿ ನೂಂಕಿದ
ನಳಿಗಳ ಬಳಸಿಂದಮೆಸೆವ ಪಟ್ಟದ ಗಜಮಂ ೪೮

ವಚನ : ಅಂತು ತಳರ್ವುದುಂ ತಾವೇಱಿದ ವಾಹನಂಗಳಂ ತಿರಿಪಿ ರಾಜಾಂಗಣದೊಳ್ ಸಂದಣಿಸಿ ನಡೆವ ಮಹಾರಾಯರ ಮಕ್ಕಳ್ಗಳ ಸಿವಿಗೆಗಳ ಬಳಗಂಗಳುಂ ಪಡಿಯಱರ ಪರಿಹಾಸಕರ ಕಬ್ಬಿಗರ ಕಳಾವಲ್ಲಭರಂದಣಂಗಳ ಗೊಂದಣಂಗಳ್ ಮುಂದೈಸಿ ನೆರೆದರ

ಮನೆಯ ಬಾಗಿಲ್ವಾಡದೊಳ್ ತಿಂತಿಣಿಗೊಂಡು ಮೆಲ್ಲಮೆಲ್ಲನೊರಸೊರಸಿಂ ಪೊಱಮಟ್ಟಂ ಗಡಿಗೇರಿಯೊಳ್ ನಡೆವಾಗಳ್

ಉತ್ಪಲಮಾಲೆ

ಪಿಂಗದೆ ಜೆಲ್ವ ಪೀಲಿದಳೆಯೊಡ್ಡುಗಳಿಂ ಪಸುರಾಗಿ ಪುಲ್ಲಿಯೊ
ಳ್ದೊಂಗಲ ಶೋಭೆಯಿಂದೆ ತಳಿರಾಗಿ ಪ್ರಘೂಸದಪಾಂಗರೋಚಿಯಿಂ
ಮಂಗಳಮಾದ ಪೂಗುಡಿಗಳಾಗಿ ನೃಪಂ ನಡೆವಲ್ಲಿ ಕೂಡೆ ತ
ಳ್ತಂಗಡಿವೀಧಿ ಜೈತ್ರವನಮೆಂಬಿನಮಾಂತುದಗುರ್ವನಾಕ್ಷಣಂ ೪೯

ವಚನ: ಆ ನೃಪಾಳೋತ್ತಮಂ ಸುತ್ತಲುಮೊತ್ತುವ ತುಷಾರಸೀಕರಾಸಾರದ ಸಿಂಪಿಣಿಯ ಪೊಂಪುಳಿಯುಂ ನಿಲ್ಲದೆಲ್ಲಿಯುಂ ಸುಳಿವ ಗರಗವಳ್ಳರ ಕೆಯ್ಯ ಪೀಲಿಗರಗಂಗಳ ಕಂಪಿನ ತಣ್ಪಿನಣ್ಪನೊಳ್ಗೊಂಡ ಜಳಧಾರಾವರ್ಷಣವಿಜೃಂಭಣಮನೊಪ್ಪಂಬಡೆದುಪ್ಪರ ಗುಡಿಗಳ ವಿಸರ್ಪಣಮುಂ ನೀಡುಂನೋಡಿ ನಗುತ್ತುಂ ಪೋಪೆಡೆಯೊಳ್

ಕಂದ: ಪಿಂದೆ ಕುಳ್ಳಿರ್ದ ದೇವಿಯು –
ನಂದು ನೃಪಾಳಂ ಮಲಂಗೆ ಕಳಶಕುಚಂಗಳ್
ಸಂಧಿಸೆ ಬೆನ್ನಂ ಸೋಂಕಲ್
ಕುಂದದ ಸುಖದಿಂದಮೊಂದಿ ತಣ್ಣನೆ ತಣಿದಂ ೫೦

ಉತ್ಪಲಮಾಲೆ

ಪೇರುರದಲ್ಲಿ ಪಜ್ಜಳಿಪ ಹಾರಮರೀಚಿಗಳುಂ ಕಪೋಳವಿ
ಸ್ತಾರದೊಳೆಯ್ದೆ ರಂಜಿಸುವ ಕುಂಡಳವಜ್ರಮಯೂಖಮಾಳೆಯುಂ
ಚಾರುಕಿರೀಟರತ್ನಘನಕಾಂತಿಗಳುಂ ಬೆರಸಿರ್ದು ಸುತ್ತಲುಂ
ಮಾರನ ಬಿಲ್ಗಳಂ ರಚಿಸಲಂಗಜನೆಂಬಿದನುಂಟುಮಾಡಿದಂ ೫೧

ವಚನ: ಮತ್ತಮುಪರವರ್ಗೆ ಪಿಡಿದ ಝಲ್ಲರಿಗಳ ಪಲ್ಲವಸತ್ತಿಗೆಗಳ ಬೆಳ್ಗೊಡೆಗಳ ತಳಿಗಳ ತಣ್ಣೆಳಲೊಳ್ ಬಪ್ಪಂತಃಪುರಕಾಂತೆಯರ ಸಕಳಕಳಾಸಂಪನ್ನೆಯರಪ್ಪ ಕನ್ನೆಯರ ಗಾಯಕ ವಾದಕ ನರ್ತಕಾದಿ ಕಳಾಕೋವಿದರ ನಟ್ಟನಡುವೆ ಬರುತ್ತುಮಿರ್ದ ಮರ್ತ್ಯಪತಿಯುಂ ಮೊತ್ತಂಗೊಂಡು ಬಳಸಿ ಪಾದಮಾರ್ಗದಿಂದ ಮೋಹರಿಸಿ ಬರ್ಪ ಖಳ್ಗವ್ಯಗ್ರ ಹಸ್ತಾಗ್ರಭಟಸ್ತೋಟಕದ ಸಂದಣಿಯುಮೆಸೆಯೆ

ಮತ್ತೇಭವಿಕ್ರೀಡಿತ

ಬಿಡಮಂದಂಬಡೆಮೊಡ್ಡುಗೊಂಡಮರ ಮೇಘಾಡಂಬರಚ್ಛತ್ರದಿಂ
ಗಡಣಂಗೊಂಡ ಮತಂಗಜಪ್ರಬಳದಾನಾಸಾರದಿಂ ಚಾಳಸಂ
ಬಡೆಮುದ್ಯಚ್ಚಮರೀಜವೀಜನ ಬಳಾಕಶ್ರೇಣಿಯಿಂ ಜೆಲ್ವಮುಂ
ದಿಡೆ ಕಾರ್ಗಾಲಮೆ ನಂದನಕ್ಕೆ ನಲವಿಂ ಬರ್ಪಂತೆ ಬಂದಂ ನೃಪಂ ೫೨

ವಚನ : ಇಂತಭಿನವಶೋಭಾವಿಭವಪರಿಭೂಷಿತನಾಗಿಯಾ ಮೂರ್ಧಾಭಿಷಿಕ್ತಂ ಮೇಳದ ಕಡುಚದುರೆಯರಪ್ಪ ಚಲ್ಲಗಾರ್ತಿಯರೊಡನೆ ವಸಂತಸಮಯದ ಪೊಸಸುಗ್ಗಿಯ ಸೆಂಪಂ ನುಡಿದು ಕೊಂಡಾಡುತ್ತುಂ ಪುರಗೋಪುರದ್ವಾರಮಂ ಪೊಱಮಟ್ಟು ಬಂದು ನಂದನವನೋಪಾಂತಂಬರಂ ನೀಡಿ ಮೆಟ್ಟಿ ಪಟ್ಟದಾನೆಯಂ ಹೋಯೆಂದಪ್ಪಳಿಸೆ ಮುಂದೆ ಪರಿವ ಕೊಲ್ಲಣಿಗೆಯ ಭಲ್ಲೆಯದ ಪಡಪಳಗಟ್ಟಿಗೆಯ ಬಿರುದಿನ ಸಿಂಪದ ಸಂದಣಿಯ ಕೋಳಾಹಳದ ರಭಸಮೆಸೆಯೆ ಕುಸುಮಾಕರೋದ್ಯಾನದ ಪರಿಸರಕ್ಕೆ ಬರ್ಪಾಗಳ್

ಕಂದ : ಜೆಲ್ಲಿಕೊಳುತ್ತುಂ ನೀರಂ
ಫುಲ್ಲಾಂಬುಜಧೂಳಿಯಿಂದಲೊಟ್ಟಿಕೊಳುತ್ತುಂ
ಸಿಲ್ಲದೆ ಮಳಯಾಚಳದೊಳ್
ಮೆಲ್ಲನೆ ಬಂದತ್ತನಂಗಗಜದಂತನಿಳಂ ೫೩

ಕೋಗಿಲೆ ಗಿಳಿ ತುಂಬಿ ಮನೋ
ರಾಗದಿನೆಳೆಮಾವಿನಲ್ಲಿ ಕೊನರಂ ಪಣ್ಣಂ
ಪೂಗುಡಿಯಂ ಸೇವಿಸಿ ಕಿವಿ
ಗಾಗಿಸಿದುರುತಾರಮಂದ್ರಮಧ್ಯಸ್ವರಮಂ ೫೪

ಕಟ್ಟಿದಿಱಿಕಿಲಾ ವನಂ ನೆಱೆ
ದಿಟ್ಟಿಗೆ ಪೊಲನಾದುದಮಮ ಬಾಸಣಿಗೆಯುಮಂ
ತೊಟ್ಟನೋಸರಿಸಿ ಸಲೆಮುಂ
ದಿಟ್ಟುಱೆ ಪಚ್ಚೆಯ ಸುಚಿತ್ರಪಟಮೆಂಬಿನೆಗಂ ೫೫

ವಚನ : ಆ ವನಮಂ ಮುಟ್ಟೆವರ್ಪುದುಂ

ಉತ್ಪಲಮಾಲೆ

ಅಂಕುಶದಿಂದಮೊತ್ತಿ ಗಜಮಂ ಪೆಱಗಿರ್ದನಿಯಳ್ಗೆ ಕೈಗೊಡು
ತ್ತುಂ ಕರಮೊಯ್ಯನೊಯ್ಯನಿಳಿಪಿ ಸ್ಫುಟಕುಂಭಮನಂಟುನೋಡಿ ನಿ
ಶ್ಶಂಕತೆಯಿಂದೆ ಮೆಟ್ಟಿ ರದನಾಗ್ರಮುಮಂ ಭರಿಕ್ಕೆಯ ಸಂಧಿಯಿಂ
ಭೋಂಕನೆ ತಾಂ ಕೆಲಕ್ಕೆ ಪರಿಲಂಘಿಸಿದಂಗಜಶಿಕ್ಷಣೋತ್ತಮಂ ೫೬

ವಚನ : ಅಂತು ಸಿಂಧುರಸ್ಕಂಧದಿಂದಿಳಿದು ಕೂಡೆಬಂದ ಚಾತುರ್ದಂತಬಲಮೆಲ್ಲ ಮನಲ್ಲಿರಿಸಲ್ವೇಳ್ದು ವನಜಳಕೇಳಿಗುಪಯೋಗ್ಯ ಕತಿಪಯಾಪ್ತಪರಿವಾರಂಬೆರಸು ವನ ಪ್ರತೋಳಿಕಾ ಪ್ರದೇಶದವಸರದೊಳ್

ಕಂದ : ವನವಿನೋದಕ್ಕೆ ತಕ್ಕವ
ರನಿಬರವೇಳಲ್ಕೆ ನೃಪತಿ ತಜ್ಞನಮೆಲ್ಲಂ
ಬಿನದಿಗರಾಗಿಯೆ ನುಡಿದರ್
ಘನವಿಭವದ ಮಹಿಮೆಯನುವು ಪೊಗಳಲಳುಂಬಂ ೫೭

ವಚನ : ವೇತ್ರಧರಪರಿಶೋಧಿತ ವನದೊಳಗಂ ವನಮಹತ್ತರಪುರಸ್ಸರಂ ಪುಗುವುದುಂ

ಕಂದ : ಮುನ್ನಂ ಕತ್ತಲೆಯಿಂ ಸಂ
ಛನ್ನಂ ವನಮಾಯ್ತು ಪಡೆ ಮುಸುಂಕಲ್ ದೆಸೆಯುಂ
ಸನ್ನುತಮಣಿಭೂಷಣಕಿರ
ಣೋನ್ನತಿಯಿಂ ತೋಱಿಸಿತ್ತು ಪುತ್ತೆಳೆವಿಸಿಲಂ ೫೮

ಎಲರಿಂದುದಿರ್ವಲರ್ದಲರಂ
ಸಲೆ ಕಾಣಿಕೆಗೊಟ್ಟು ನುಡಿದು ಹಿತವಂ ಕೋಗಿಲೆ
ಯುಲಿಯಿಂ ಬಿದ್ದಿನನೆಂಬಂ
ತಿಳೆಗಿನನಂ ಮನ್ನಿಸಿತ್ತು ನಂದನಮೊಲವಿಂ ೫೯

ವಚನ : ಅದಲ್ಲದೆಯುಂ

ಉತ್ಪಲಮಾಲೆ

ಪೊಂದೊಡವಿಂ ಬೆಡಂಗನುರ್ದ ರಾಣಿಯರುಂ ಪಿರಿಯಂದಣಂಗಳಿಂ
ದಂದಿಳಿದಿರ್ಪ ರಾಗಪರಿರಂಜಿತ ರಾಜಮರಾಳಿಗಳ್ ಮುದಂ
ಸಂಧಿಸೆ ವಾರಿಜಾವಳಿಗಳಿಂದಿಳಿಪಂತಿರೆ ಪಾದರಾಗದಿಂ
ದೊಂದಿ ತಳಿರ್ತಪೋಲೆಸೆದುವಂದಣದೆಯ್ದೆ ಣಗಿರ್ದ ಕೊಂಬುಗಳ್ ೬೦

ಕಂದ : ಕುಂಭಸ್ಥಳಮಂ ನಿಜಕುಚ
ಕುಂಭದೆ ಗತಿಯಂ ತದಲಸಗತಿಯಿಂ ಗೆಲ್ದಲ್
ರಂಭೋರುಪೆಂಡವಾಸಂ
ಕುಂಭಿಯನಿಳಿದುದು ದಲಿಕ್ಕಿ ಮೆಟ್ಟುವ ತೆಱದಿಂ ೬೧

ಪಲತೆಱದ ವಾಹನಂಗಳೆ
ನಿಳಿದರ್ ಲಾವಣ್ಯವತಿಯರೆಳೆಮಾವಿನ ಗೊಂ
ದ[1][ಳೆ][1]ಸಿದ ಕೊಂಬುಗಳಿಂದಂ
ಗಿಳಿವಿಂಡುಗಳಿಳಿದು ಬರ್ಪ ತೆಱದಿಂದಾಗಳ್ ೬೨

1 ರ (ಕಗಚ)

ವಚನ : ಅಂತಿಳಿವ್ರುದುಂ

ಕಂದ : ಅಡಸಿರ್ದ ಕೊಂಬುಗೋಲಂ
ಬುಗಳೆಡೆಯೊಳ್ಕುಡೆ ನಿಲಿಸಿ ತೆತ್ತಿಸಿ ಸುತ್ತಂ (?)
ಮಡಗಿಟ್ಟರ್ ಸತ್ತಿಗೆಗಳ
ಗಡಣಮನಗೆವೊಯ್ದ ಚಂದ್ರಮಂಡಳಿಗಳವೊಲ್ ೬೩

ಕೃತಕಾಚಳವುಂ ನೋಡುವ
ರತಿಯಿಂ ಬಂದಿರ್ದ ಬೆಟ್ಟುಗಳವೋಲ್ ಸುತ್ತಂ
ಕ್ಷಿತಿಜಂಗಳಲ್ಲಿ ಕಟ್ಟಿದ
ಮತಂಗಜಾವಳಿಗಳತ್ತ ವಕ್ಷಿಗಗುರ್ವಂ ೬೪

ವಚನ : ಮತ್ತಂ

ಚಂಪಕಮಾಲೆ

ನಡೆ ನುಡಿ ತೋಳ್ಮೊಗಂ ತೊಡೆ ಕುಚಂ ಮುಡಿ ಕೊಂಡೆಯುಮಂ ವಧೂಜನ
ಕ್ಕಡಿಗಡಿಗೂಳ್ದು ಮಚ್ಚರಮನಾಗಿಸೆ ಹಂಸ ಪಿಕೀಲತಾಬ್ಜಮುಂ
ಕಡುಕದಳೀರಥಾಂಗಮಧುಪಾಳಿಯುಮೊಲ್ದೊಳಕೊಂಡಕಾರಣಂ
ತಡೆಯದೆ ಮುತ್ತುಮಂತೆ ಬನಮುಂ ನಡೆತಂದುದು ಸೌಂದರೀಜನಂ ೬೫

ವಚನ : ಅಂತು ಬಂದ ರಾಣಿವಾಸದ ಪೆಂಡವಾಸದ ವಾರನಾರಿಯರ ನರ್ಮಸಚಿವರ ನಟ್ಟನಡುವೆ ಮೋಹನವಿದ್ಯಾದೇವತೆಯರ್ ಬಳಸಿದ ಕರ್ಬುವಿಲ್ಲಿನಂತೆ ಜಗದ್ವಲ್ಲಭಂ ಮಹಾಪ್ರತೀಹಾರಕೋದ್ಘುಷ್ಯಮಾಣ ದೇವಾವಧಾನಧ್ವಾನಪೂರಿತ ದಿಗಂತರಾಳನುಂ ವಾಮಪಾರ್ಶ್ವಾನುಗತಶೃಂಗಾರವತೀ ಪಟ್ಟಮಹಾದೇವಿ ಕೋಮಳಕರತಳಪಲ್ಲವ ಪರಿಷ್ವಂಗ ಭಂಗುರ ಸವ್ಯಪಾಣಿಪ್ರಕೋಷ್ಠಕಾಂಡನುಮಾಗಿ ನಿಂದಿರ್ಪುದುಂ ವನಪಾಳಕ ವಿನಿರ್ದಿಷ್ಟ ನಾರಂಗ ಮಾತುಳಂಗ ಪೂಗ ಪುನ್ನಾಗ ಜಂಬೀರ ನಾಳಿಕೇರಮಾಳಿಕೆಗಳಂ ನೋಡುತ್ತುಂ ನಡೆತಪ್ಪೆಡೆಯೊಳ್

ಚಂಪಕಮಾಲೆ

ಹಿಡಿಯೊಳಡಂಗಿ ತೋರ್ಪ ನಡು ವೃತ್ತಕುಚಂಗಳ ಭಾರದಿಂ ಕರಂ
ನಡುಗೆ ನಿತಂಬಭಾಗ ಘನಭಾರದೆ ಮೆಲ್ಲನೆ ಗುಜ್ಜುಮೆಟ್ಟುತಂ
ನಡೆವಡಿಗಳ್ ಪರಿಸ್ಖಳಿಸಿ ಭೂತಳಪಾಲನ ಪಿಂದುಗೊಂಡು ಕೈ
ವಿಡಿದು ಪರಸ್ಪರಂ ನಡೆದು ಬಂದುದು ವಿಶ್ವವಿಳಾಸಿನೀಕುಳಂ ೬೬

ಕಂದ: ಮ್ಣಾಣಿಕದತುಳಾಕೋಟಿ
ಶ್ರೇಣಿಕೆಯ ವಿರಾವದೊಡನೆ ಕಳಕಾಂಚೀದಾ
ಮ್ಣಾಣನಮುದುಣ್ಮಿ ಪೊಣ್ಮಲ್
ಮಾಣಿಕ್ಯಂ ಬಳಸಿ ನಿಂದ ತದನಂತರದೊಳ್ ೬೭

ಇದು ನಾಗಕೇಸರದ ಸಾ
ಲಿದು ಜಂಬೂಕುಜದ ಪಂತಿಯಿದು ಚಂದನವೃ
ಕ್ಷದ ರಾಜಿಯಿದು ಲವಂಗದ
ಪೊದಱಿಂತೆಂದುಸಿರ್ದು ತೋಱಿದಂ ವನಪಾಳಂ ೬೮

ವಚನ: ಮತ್ತಮಾ ಪ್ರತೋಳಿಕೆಯ ಬಲದ ಕೆಲದೊಂದು ತಾಣದೊಳ್ ಪಾಸಿದ ಪಾಸಿನಂತೆ ಪೆಸೆವಡೆದ ನುಣ್ಬೆಳಂತಿಗೆ ಮಣಲ ತಣ್ಪುಳಿಲ ಮುಂದೆ ನಿಂದು ಸೊಳೆತನದ ಗಾಡಿಯಿಂ ಬೆಡಂಗುವುರ್ದು ಕ್ಕೆವಂದ ಬಾಳಮಾಕಂದಲತೆಯುಂ ಕಂಡು ರಸಿಕರತ್ನಾಕರನೆಂಬ ನಾಗರಕಂ ನರಪಾಲಶಿರೋಮಣಿಯ ಮೊಗಮಂ ನೋಡಿ ದೇವರಿತ್ತ ಚಿತ್ತೈಸುವುದೆಂದು ಸುಟ್ಟಿದೋಱಿಯುತ್ಪ್ರೇಕ್ಷಾವಚನದಿಂದಿಂತೆಂದಂ

ಸ್ರಗ್ಧರೆ
ಶೃಂಗಾರಂಜೆತ್ತ ಭೂತೀಗಣಿಕೆ ವನಗೃಹದ್ವಾರದೊಳ್ ನಿಂದೊಡಾದಂ
ಪಾಂಗಿಂದಂ ನೋಡಿ ಚಿತ್ತಂಬರಿದು ಸುರಭಿಕಾಲಂ ವಿಟಂ ಪೂಗಳೆಂಬು
ತ್ತುಂಗಾತಿಸ್ಥೂಳಮುಕ್ತಾಫಳತತಿಗಳನೊಲ್ದೊತ್ತಿಗೊಟ್ಟು ಪ್ರಮೋದಾ
ಭಂಗಂ ಕೂಡಲ್ಕೆ ರೋಮಾಂಚದವೊಲೊಗೆದುದೆಯ್ದುಂಕುರಶ್ರೇಣಿ ಸುತ್ತಂ ೬೯

ವಚನ: ಆ ನುಡಿಗೆ ಮುಗುಳ್ನಗೆನಗುತ್ತಮಿರೆ ಮತ್ತೊಂದೆಡೆಯೊಳತಿಸೌರಭಂ ತನ್ನಯ ಲತಾಂತಪರಿಮಳಾಲೋಲನಾಗಿ ಬಂದ ರೋಲಂಬಮಂ ಮನ್ನಿಸಿ ಕೋಕಿಲ ಲಲನಾಲಾಪನಮುಖದಿಂದಿಂತೆಂದದಕ್ಕುಸಿರ್ವಂತಿರ್ದುದೆಂದುತ್ಪ್ರೇಕ್ಷಿಸಿದಂ

ಕಂದ: ಎನಗೆ ಪುಟ್ಟಿರ್ದ ಸುಮನೋ
ಘನಮಂಜರಿ ನಿನಗೆ ನಲ್ಲಳಾದುದಱಿಂ ಮೇ
ದಿನಿಯೊಳನುಮಾನಿಸದನಾ
ವನೊ ಮಾವಂ ಮಾವನಳಿಯನಳಿಯುಂ ದಿಟದಿಂ ೭೦

ವಚನ: ಇಂತೆಂಬಂತಿರ್ದುದೆಂಬ ವಚನದರ್ಥದೃಷ್ಟಿತ್ವಕ್ಕನುರೂಪಮಾದುದೆ ಮತ್ತಂ ಬರ್ಪನ್ನೆಗಂ ಶಿಶಿರಸ್ಥಾನಮಾಗಿ ಸುರ್ವುಗೊಂಡ ಮಾವಿನ ಜಾಳ್ಗೊಂಪದೊಳ್

ಉತ್ಪಲಮಾಲೆ

ಇನ್ನೆಗಮೆನ್ನ ನಾಲಗೆಗಳಂ ಸೆಱೆಗೆಯ್ದು ಭಿಮುದ್ರಿಸಿಟ್ಟನೀ
ತಂ ನೆರೆಯಂ ಖಳಂ ಶಿಶಿರನೆಲ್ಲಿದನೆಲ್ಲಿದನೀಗಳೆಂದು ಕೋ
ಪೋನ್ನತಿಯಿಂದೆ ಮೂದಲಿಸಿ ಪೋ ಪುಗಿಲೆಂಬತಿ ತರ್ಜನೋಕ್ತಿಯಿಂ
ದಂ ಸೆಱೆಕೋಕಿಳಂ ಕದುಬುಪಂತಲೆದತ್ತೆಳೆಗೊಂಬಿನಾಪ್ರದೊಳ್ ೭೧

ವಚನ: ಅದಂ ವಿಸ್ಮಯಸ್ಮೇರಮುಖಾರವಿಂದನಾಗಿ ನೋಡುತ್ತುಂ ನಡೆಯೆ ಮುಂದೊಂದೆಡೆಯೊಳ್ ನೂತನಮಾಗಿ ಪೂತ ಮಲ್ಲಿಕಾವಲ್ಲರಿಯಂ ಕಂಡರಸಿ ವಿನೋದ ವಿಳಾಸಿನಿಯೆಂಬ ತನ್ನಯ ಪರಿಚಾರಕಿಯ ಕಿವಿಯಂ ಪಚ್ಚುವುದುಮಾಕೆ ದೇವಿಯೆಂದಳೆಂದಿಂ ತೆಂದಳ್

ಚಂಪಕಮಾಲೆ

ಎಡೆವಿಡದೆಲ್ಲಿಯುಂ ನಿಬಿಡಮಾಗಿ ಕರಂ ತುಱುಗಿರ್ದ ಪೂಗಳಿಂ
ದಿಡಿದು ಪೊದಳ್ದ ಮಲ್ಲಿಗೆ ಮಹಾಸಹಕಾರಕುಮಾರನಂ ಸಮಂ
ತಡರ್ದಮರ್ದಪ್ಪಿ ನಿಂದು ಮೆಱೆದತ್ತು ದುಕೂಲಮನುಟ್ಟ ನಲ್ಲಳೋ
ಗಡಿಸಡೆ ತನ್ನ ಕೇಳಿ ಸಹಕಾರ ಕುಮಾರನನಪ್ಪಿ ನಿಂದವೊಲ್ ೭೨

ವಚನ: ಎಂಬುದುಮರಸನದಕ್ಕೆ ಮೆಚ್ಚಿ ಮೆಚ್ಚುಗೊಟ್ಟು ಮಂದಸ್ಮಿತಪ್ರಸಾದಮಂ ಹೇಳಾವಾಗ್ವಿಳಾಸದಿಂ ಪಡೆದು ನಡೆಯಲೊಂದೊಂದು ತಾಣದೊಳ್ ಫಳಿತ ಪನಸಮಂ ಫುಲ್ಲಿತ ಮಲ್ಲಿಕೆಯುಂ ಪಲ್ಲವಿತ ಕಂಕೆಲ್ಲಮಂ ಕಂಡು ಭೂಪಾಳತಿಳಕನನಿಮಿಷದಾನತವದನೆ ಯಾಡೋಪಳಿಂಗೆ ದರ್ಪಕನ ದರ್ಪಪ್ರಭಾವಕ್ಕಭಿವ್ಯಂಜಕಂಗಳಾಗಿರ್ದಪ್ಪುವೆಂದು ವಾಮ ಕೋಮಳ ಸೂಚೀಹಸ್ತದಿಂ ಸೂಚಿಸಿ ತೋಱೆ

ಕಂದ: ಕಡುನೀಳ್ದ ತೋರವಣ್ಗಳ್
ಪಡೆಯೆ ಸ್ಕಂಧಾವಳಂಬಮಾ ಪಲಸುಗಳಂ
ದೊಡರಿಸುತಿರ್ದುವು ಕಾಮನ
ಹಡಪಿಗರೆಂಬೊಂದು ಶಂಕೆಯಂ ನೋಳ್ಪರ್ಗಂ ೭೩

ಬಳ್ಳಿಯ ಮಲ್ಲಿಗೆಯ ಮೊಗ್ಗೆಗಳ್
ಉಳ್ಳಲರಲ್ ಮೇಲೆ ತುಂಬಿ ದುಱುದುಂಬಿ ಕರಂ
ಕುಳ್ಳಿರ್ದ ಮೊರೆಯೆ ಶಂಖಮ
ನೊಳ್ಳಿತ್ತಾಗೂದುಪವನವೊಲ್ ಕಣ್ಗೆಸೆಗುಂ ೭೪

ಮಾರಂ ವಿರಹಿಜನಕ್ಕಂ
ಮಾರಣಹೋಮಮನೊಡರ್ಚುವೆಡೆಯೊಳ್ ಮಿಳ್ಳಿ[1][ಪ][1]
ಧಾರಾಗ್ನಿಜ್ವಾಲೆಗಳಂ
ತೋರಂತಸುಕೆಗಳೊಳಿಸೆದವಲರ್ಗಳ್ ಪಲವುಂ ೭೫

ವಚನ: ಎಂದು ವಾಗ್ಭಾಮಿನೀಭೂಷಣಸುತ್ರೈಕ್ಷ್ನಾಭಾಷಣಮಂ ನುಡಿದು ಮಾಣಲೊಡಮೊಡೆಯನನೊಸಯಿಸುವ ಬೆಸಸೆಯಿಂ ಪರಿಹಾಸವಾಸವನೆಂಬ ನರ್ಮಸಚಿವನಿಂತೆಂದಂ

ಕಂದ: ಅಮುನು ಪಣೆಮುಟ್ಟೆ ಕೈವಂ
ದ ಮರಂ ಪೊಡಪಡುವ ತೆಜದಿನಿರ್ದುದು ನಿಗಮಂ
ಸುಮನೋವೃತ್ತಿಯನಾಂತರ್
ಸುಮನೋವೃತ್ತಿಕರಪದ್ಧತಿಯನಱಯರೆ ಪೇಳ್ ೭೬

ವಚನ: ಆಗಳಾ ಪೊಸನಾತಿಂಗೆ ವಸುಧಾವಲ್ಲಭಂ ಮೆಚ್ಚಿ ಪಸಾಯದಾನಂಗೊಟ್ಟು ಮುಂದೆ ನಡೆಯೆ ನಡೆಯೆ

ಉತ್ಪಲಮಾಲೆ

[2]ಕಾಳನುರಾ[2]ಳಿಗೊಳ್ಪುರುತಮಾಳಮನುರ್ಬಿದಮ್ಮೆಂದವಾಳಿಯೊಂ
ದೋಳಿಯನೆಯ್ದೆ ಕಾಯ್ತು ಜಡಿವೀಳೆಯನಿಕ್ಕೆಲದಲ್ಲಿ ಜೆಲ್ವ[3]ಪೊಂ[3]
ಬಾಳೆಯನಾಂತು ಸಾಲ್ವಿಡಿದು ನಿಂದೆಳೆಗೌಂಗುಮನಳ್ತಿವಟ್ಟು ಭೂ
ಪಾಳಲಲಾಮನೀಕ್ಷಿಸಿದನಾ ವನಭೂರುಹಭೂರಿಶೋಭೆಯಂ ೭೭

ವಚನ: ಮತ್ತಂ ಮೆಲ್ಲಮೆಲ್ಲನಲ್ಲಿಂ ತಳರ್ದು ವನಶ್ರೀಯ ವಿಳಾಸಮಂ ಭಾವಿಸಿ ನೋಡಿ ಕೊಂಡಾಡುತ್ತುಂ ಪೋಗಿ ಮುಂದೊಂಡೆಡೆಯ ವನದ ನಡುವಣ ತೆಱಪಿನೊಳ್

ಉತ್ಪಲಮಾಲೆ

ಬಾಳದ ಬೇರ್ಗಳಿಂ ಸಮೆದ ಕೇರ್ಗಳಿನೊಪ್ಪಳವಟ್ಟುನಿಂದ ಪೊಂ
ಬಾಳೆಯ ಕಂಬದಿಂ ತಳಿರ್ಗಳೋವರಿಯೊಳ್ ಪೊಸಗಪ್ಪುರಂಗಳಿಂ
ಪೋಳಿಸಿ ತೋರ್ಪ ನುಣ್ಣಗಲಿಯಿಂ ನವಚಂಪಕಕುಟ್ಮಳಂಗಳೊಂ
ದೋಳಿಯ ಕೀಲ್ಗಳಿಂ ರಚಿಸಿ ಕಣ್ಗೊಳಿಸಿತ್ತು ವಸಂತಮಂಡಪಂ ೭೮

ವಚನ: ಮತ್ತಮೋರಂದಮಾದ ಕೆಂದಾವರೆ[4][ವೂ][4]ಗಳ ಸಂದೋಹಮನಲ್ಲಿಗಲ್ಲಿಗೆ ಬಂದಕ್ರಮದಿಂ ಸಂಧಿಸಿ ಬಣ್ಣವಿಟ್ಟು ತಿಣ್ಣಂ ಸಮೆದೆಳೆವಾಳೆಯ ಸುಳಿಯೆಲೆಯ ನಳನಳಿಪ

[1] ಪು (ಕಗಚ) [2] ಕೋಳಮನಾ (ಗ) [3] ಪುಂ (ಕಗ) [4] ಖಾ (ಕಗಚ)

ಮೇಲ್ಗಟ್ಟುಗಳಿಂದಂ ಸೇವಂತಿಗೆಯರಲ ನಂದನಮಾಲೆಗಳನಿಸೆಡೆಯೆಡೆಯೊಳ್ ತಡಂಗಲಿಸಿ ಬಿಟ್ಟ ಜೆಂಗಣಿಗಿಲೆಯ ಪೊಚ್ಚಪೊಸನನೆಯ ಸೂಸಕದ ತೋರತೊಂಗಲ ಸಮಾಲಂಬನದಿಂದಳುಂಬಮಾದ ರಚನಾವಿಶೇಷಂಗಳಿಂದಂ ಕೊಸಗಿನ ಕುಸುಮಂಗಳಂ ಪಿಣಿಲಿಜುಂದು ಪೆಣೆದು ಪಸರಿಸಿ ಬಿಗಿದು ಮಾಧವೀಲತೆಯ ಮುಗುಳ ಮೊಳೆಗಳಂ ಸುತ್ತಲುಂ ತೆತ್ತಿಸಿ ಚೆಲ್ವುವಡೆದ ಜಮಳಿವಡಿಗಳಿಂದಂ ಪನ್ನೀರಚಳಂಪದಿ ವಿಳಸನಮಂ ತಳೆದ ಸಮುತ್ತುಂಗರಂಗಸ್ಥಳದಾಳೋಕನಸಮಾಕಳಿತವಿಲೋಚನಚಯಕ್ಕಾಸುರಮಾದ ಭಾಸುರನಾಗಕೇಸರದ ಪರಾಗಪೂಗದಿಂದಿಕ್ಕಿದ ಮಂಗಳರಂಗಾವಳಿ ಭಂಗಿಯಿಂ ಬೆಡಂಗುವಡೆದುದಂತುಮಲ್ಲದೆಯುಂ

ಕಂದ: ಅತಿಶೈತ್ಯದ ನೃತ್ಯಗೃಹಂ
ಸುತತರಶೃಂಗಾರದೊಂದು ಕಾರಾಗಾರಂ
ಕ್ಷಿತಿಪಂಗಚ್ಚರಿಯಂ ಮಾ
ಡುತುಮಿರ್ದುದು ಸುರಭಿಕುಸುಮಮಯಮಂಡಪಕಂ ೭೯

ವಚನ: ಅಂತು ಕಂತುವಿನ ರತಿಯ ಮದುವೆಗೆಂದು ಸಮೆದ ಪಸುರ್ವಂದಲೆಂಬಂತಿರಸದಳವೆಸೆವ ವಸಂತಮಂಡಪಮನೆಯ್ದೆವಂದು ಕ್ರೀಡಾವಿನೋದಪ್ರಸಂಗಪ್ರಗಲ್ಭ ಕತಿಪಯಾಪ್ತಪರಿವಾರಪರೀತಂ ಭೂಕಾಂತಂ ಶೃಂಗಾರಸತೀಮಹಾದೇವಿವೆರಸು ತನ್ಮಧುಮಂಡಪಕ್ಕೆ ಮಂಡನಮಾದ ಸಿಪ್ಪೊಸತಪ್ಪ ಕಪ್ಪುರದ ಘಟ್ಟಿಯಿಂ ನೇರ್ಪಟ್ಟು ಕಟ್ಟಿದ ಜಗಲಿಯ ಮೇಲೆ ಪಾಸಿದ ಬಹಳತರ ಪರಿಮಳಭರಮಂ ಪರಕಲಿಸುತುಮಿರ್ದ ಕುಸುಮದೆಸಳ ಪಸೆಯನಳಂಕರಿಸಿರ್ಪುದುಂ

ಚಂಪಕಮಾಲೆ

ಪದಪದದಲ್ಲಿ ಷಾಳ್ಪ ಪೊಸತಾಯೆಯ ರಾಗದನೇಕಭೇದಮಿಂ
ಬೊದವಿದ ಕೈಯ ಬೀಣೆಯ ನಿನಾದದೊಳೋಯರಮಾಗೆ ತೋರ್ಪಿನಂ
ಹೃದಯದೊಳಂ ಚಮತ್ಕೃತಿ ನೃಪಾಳನ ಮುಂದೆ ವಸಂತರಾಗದಿಂ
ಪದುಳಿಸಿ ಪಾಡಿ ಮೆಚ್ಚಿಸಿದನೆಕ್ಕಲಗಾಣನದೊಂದು ಗೀತಮಂ ೮೦

ವಚನ: ಕೇಳುತ್ತುಮಿರ್ದನನ್ನೆಗಮಿತ್ತ ಸೌಗಂಧ್ಯಬಂಧುರಮಂದಗಂಧವಹನ ತೀಟದಿಂ ಪುಷ್ಪಾಪಚಯದ ಬಯಕೆ ಬಗೆಯೊಳೊಗೆಯಲಲ್ಲಿಂ ತಳರ್ವ ತರಳಲೋಚನೆಯರ ಚರಣತಳದರುಣಕಿರಣವಿಸರಪ್ರಸರಂ ತರುಲತಾಗುಲ್ಮಂಗಳ ಸಾಲ್ಗಳೆಡೆಯೆಡೆಯೊಳ್ ತಳಿರ್ದೊಂಗಲ ಚೆಲ್ವನೆಸಗುವಿನಂ ಕಂಕಣಕಿಂಕಿಣೀಝಣತ್ಕಾರದಿಂದಂಕಿತಮಾದ ಕರತಳಂ ಗಮನಾಗಮಸ್ಖಲನಕರನಿತಂಬಬಿಂಬದೊಡನೆ ಕಲಹಮನೊಡರ್ಚುವಿನಂ ಮಂಜುಳ ಮಂಜೀರಪುಂಜಶಿಂಜಾನರಂಜನೆ ಪೀವರಪಯೋಧರಭಾರದಿಂದುಡಿವಪ್ಪುದು ಬಡನಡು ಮೆಲ್ಲನೆ ನಡೆಯಿಮೆಂದು ನುಡಿವಿನಂ ಬಂದು ಮಡದಿಯರ ಗಡಣಂ ಪಾಸುಂಪೊಕ್ಕಾಗಿ ಪರೆವುದುಂ

ಚಂಪಕಮಾಲೆ

ತರುಣಿಯರೆಲ್ಲರುಂ ತಳರ್ದರುತ್ಕುಸುಮಾಪಚಯಾರ್ಥಿಯಿಂ ಮಹಾ
ಪರಿಮಳಭಾರವಾಂತ ಘನಕಾಂತಲತಾಂತ ಲತಾಪ್ರತಾನಮಂ
ನೆರೆದು ಮುಸುಂಕಿದರ್ ನಿಜಕಚಾಳಿಗೆ ಮಚ್ಚರಿಪ ದ್ವಿರೇಫಮಂ
ಕರಮನೆ ಕೂಡಿಕೊಂಡು ಪರಿರಕ್ಷಿಸುತಿರ್ದುದಿದೆಂಬ ಮಾಳ್ಕೆಯಿಂ ೮೧

ವಚನ: ಆಗಳ್ ಅಂತರಂಗಭವನ ಜಂಗಮಕಲ್ಪಲತಿಕಾವಿತಾನಂ ಕವಿವಂತಿರಂಗ ನಾಜನಂ ಮೊದಲ್ಪಿಡಿದಡರ್ದಲ್ಲಿರ್ದುಡಿ ಗಿಡುಗಳ ಗಡಣಮನಿವೆಮಗೆ ತಮಗೆಂಬ ಸಡಗರದ ಕಡುನುಡಿ ಬಿಡದುಣ್ಮಿ ಪೊಣ್ಮುತ್ತುಮಿರೆ ಕವಿತಪ್ಪುದುಂ

ಕಂದ: ಕೆಲರಸುಕೆಗೆ ಕೆಲರಾಮ್ರ
ಕ್ಕೊಲವಿಂ ಸಂಪಗೆಗೆ ಕೆಲಬರುಂ ಪರಿತಂದರ್
ತಳಿರ್ಗುಡಿಯುಂ ಪಣ್ಗೊನೆಯುಮ
ನಲಗೊಂಚಲನಾಗಳೆಯ್ದೆ ಕೊಯ್ವುಜ್ಜುಗದಿಂ ೮೨

ಕೆಂದಳದಿಂದಂ ಭಂಗಂ
ಸಂಧಿಸಿತೆನಗೆಂದು ನಾಣ್ಚಿ ತಲೆಯೆಱಗಿದವೋ
ಲಂದು ಜೋಲ್ದಸುಕೆಯೊಳ್ದಳಿರ್
ಗೊಂದಣಮಂ ತಿಱುವುತಿರ್ದಳಬಳೆಯಮೊರ್ವಳ್ ೮೩

ಉತ್ಪಲಮಾಲೆ

ಎಮ್ಮ ಕುರುಳ್ಗಳೊಳ್ ಕೆಳೆಮನೆಯ್ದೆ ಸಮಾನತೆವೆತ್ತು ಬಾಳ್ವ ಪೆಂ
ಪಂ ಮಿಗೆತಾಳ್ದ ತುಂಬಿಗಳ ವೈರಿಗಳೆಂದೆಳೆಪೆಂಡಿರಾಕ್ಷಣಂ
ಸಮ್ಮದದಿಂದೆ ಸಂಪಗೆಯ ಜೆಲ್ವಲರ್ಗೊಯ್ದುಂ ತುಱುಂಬುತಿರ್ದರಾ
ದಂ ಮುಡಿಯಲ್ಲಿ ಮತ್ತಿರದಮುಕ್ಕಮುಮಂ ಪಿಡಿದೊಪ್ಪಿಸೀವವೊಲ್ ೮೪

ವಚನ: ಮತ್ತಮಾ ಸಂಪಗೆಯುದ್ದಗೊಂಬಿನೊಳಿರ್ದ ಗೊಂಚಲ ಪೂವಂ ಕೊಯ್ಯಲೆಂದು ಪತ್ತೆಸಾರ್ದು

ಮತ್ತೇಭವಿಕ್ರೀಡಿತ

ಉರದೊಳ್ ಪೆರ್ಮೊಲೆ ಸಿಂದುಱುಳ್ಳಿಸೆ ಭುಜಾಮೂಲಂಗಳ ಸ್ಥಾನದೊಳ್
ಬೆರಸಲ್ ಪೆರ್ದೊಡೆ ನೀಳ್ದು ಕೂಡೆ ನಿಮಿರಲ್ ದೂಟಕ್ಕೆ ತಾಂ ನೀಳ್ಕೆ ಸೌಂ
ದರಿಯೊರ್ವಳ್ ಕಡುನೀಡಿ ಮೇಲೆ ಸಳತೋಳಂ ಚಂಚಳಂಬೆತ್ತ ನು
ಣ್ಬೆರಳಿಂ ಪೂದಿಱುವುತ್ತಮಿರ್ದಳೊಲವಿಂದೊಂದುಚ್ಚಶಾಖಾಗ್ರದೊಳ್ ೮೫

ವಚನ: ಆಪೊತ್ತಿನೊಳ್

ಮತ್ತೇಭವಿಕ್ರೀಡಿತ

ಕಡುಬಲ್ಪಿಂ ಸೆಳೆದಡ್ಡವಾಗಿ ನಿವಿಱದಿರ್ದೊಂದುಚ್ಚಶಾಖಾಗ್ರಮಂ
ಪಿಡಿಯಲ್ಕಾಕ್ಷಣಮೆತ್ತಿಕೊಂಡು ನೆಗೆಯಲ್ ನೇಲುತ್ತುಮಿರ್ದಾಕೆಯೊ
ಳ್ದೊಡೆಯಿಂದಂ ನಿಱಂ ಜೋಲ್ದು ಬೀಳೆ ನಗಿಸುತ್ತುಂ ನೋೞ್ಪ ಮಿಂಡರ್ಕಳಂ
ಪಡೆದಳ್ ಕಾಮಿನಿ ಪೊನ್ನ ಪುತ್ಥಳಿಯ ಚೆಲ್ವಂ ನಗ್ನಮಾಗಿರ್ದುದಂ ೮೬

ವಚನ : ಆ ವಿಳಾಸವತಿಯಲ್ಲದೆ ಮತ್ತೊರ್ವಳೊಂದೆಡೆಯೊಳಲಗೊಯ್ವಲ್ಲಿ

ಕಂದ : ಮುಡಿಗಿಕ್ಕಿದೆನೆನ್ನಯ ಪೂ
ಗುಡಿಯೆಲ್ಲಮನೆಂದು ನಾಗಸಂಪಗೆಯಮರಂ
ಮುಡಿಗಿಕ್ಕುವವೋಲೆಳೆಗೊಂ
ಬುಡಿದುಱೞಬೀೞ್ದತ್ತು ಮುಂದೆ ಸತಿ ಸೆಳೆಯಲೊಡಂ ೮೭

ವಚನ : ಅದಲ್ಲದೆಯುಮೊಂದು ತಣ್ಪಳಿಲೊಳ್ ಬಳ್ಳಂ ಬಳೆದ ಸುರಹೊನ್ನೆಯ ಮರದ ಮೇಲ್ಗೊಂಬಿನೊಳ್ ತೋರ್ಪ ಪೂಗಳಂ ಕೊಯ್ಯಲೆಂದೊರ್ವಳ್ ತರಳನೇತ್ರೆ

ಮತ್ತೇಭವಿಕ್ರೀಡಿತ

ಅಲಗೊಂಬಂ ಸೆಳೆದಾಯ್ದು ಕೊಯ್ದು ನನೆಯಂ ಮತ್ತಂ ಬಿಡಲ್ಮೇಲೆ ತ
ನ್ನಲರಂ ಮಾಣದೆ ಸೂಱೆಗೊಂಡುದಱಿನಾದುಬ್ಬೇಗದಿಂ ಸೊಪ್ಪನೆ
ತ್ತಿ ಲಸದ್ಭೃಂಗನಿನಾದದಿಂ ಮೊಱೆಯಿಡುತ್ತಿರ್ದಂತೆ ಕಣ್ಗಾಯ್ತು ಭೂ
ತಳದೊಳ್ ಕೇಡಡಸಿರ್ದಡಾವನೊ ಮಹಾದುಃಖಕ್ಕೆ ಪಕ್ಕಾಗದಂ ೮೮

ವಚನ : ಆ [1][ಮು]ಹಾ[1]ಗೊಂಬಿಂ ಬಳ್ಚಿಬಂದ ತುಂಬಿ ದುಱುದುಂಬಿ ತಾಂ ಸೇವಿಸುವ ಕುಸುಮಮಂ ಕೊಂಡಳೆಂಬ ಕೋಪದಿನೆಂಬಂತಿರಾಕೆಯ ಮೇಲ್ವಾಯ್ದು

ಕಂದ : ನೆಱೆಗುರುಳ ಕಪ್ಪಿನೊಪ್ಪದ
ತೆಱನೆನ್ನಯದೆಂದು ಬಂದು ತಳೆವಿಡುವಂತೆಳೆ
ಪಱಿಮೆ ತಲೆವಿಡುವುತಿರ್ದುದು
ನಱುಗಂಪಿನ ಸೊಂಪನಾಳ್ದ ನಳಿನಾನನೆಯಾ ೮೯

ಕೆಂದಾವರೆಯರಲೊಳ್ ಬಿಡ
ದಿಂದಿಂದಿರಮಿರ್ದವೊಲ್ ತಮಾಳದ ಕುಸುಮಂ
ಕೆಂದಳದೊಳ್ ಪತ್ತಿರ್ದು ದ
ಲಂದೆಸೆದುದು ಸೌಂದರಾಂಗಿ ಪೂಗೊಯ್ವೆಡೆಯೊಳ್ ೯೦

[1] ಹಾ (ಕಗಚ)

ಚಂಪಕಮಾಲೆ

ಧವಳಕಟಾಕ್ಷವೀಕ್ಷಣದ ನುಣ್ಬೆಳಗಿಂ ಬಿಳಿದಾದಶೋಕಪ
ಲ್ಲವಕುಸುಮಂಗಳಂ ತರುಣಿಯರ್ ಕಡುಚೋಜಿಗಮೆಂದು ನೋಡುತಿ
ರ್ಪನಸರದಲ್ಲಿ ಮೆಯ್ಗರೆದು ಕೋಡಗಮುಪ್ಪಳಿಸಲ್ಕೆ ಬೆರ್ಚಿ ತ
ಮ್ಮ ವಿಟರನಪ್ಪಿಕೊಂಡು ನಡುಗುತ್ತಮವರ್ ಬಿಡದಿರ್ದರಾಕ್ಷಣಂ ೯೧

ಕಂದ : ಕತ್ತಲೆಯುಂ ತಲೆವಿಡಿವದಿ
ಮುರ್ತ್ತೆಯ ಬಾಳ್ಜೊಂಪದಲ್ಲಿ ಕಣ್ಬೆಳಗದಱಿತೊಳ್
ಬಿತ್ತರಿಸೆ ಕೆಳದಿಯರ್ ತೂ
ಗುತ್ತಿರಲಾಡುತ್ತುಮಿರ್ದಳುಯ್ಯಲನೊರ್ವಳ್ ೯೨

ವಚನ : ಮತ್ತಮೊಂದೆಡೆಯೊಳ್ ಉತ್ತುಂಗಪೀನಪಯೋಧರೆಯೊರ್ವಳುತ್ಕಟಮಾಗಿ ಪಟಳಂಗೊಂಡ ವಿಕಟಕುಟ್ಮಳಕುಳಕ್ಕನುಗ್ಗಳಿಸಿದ ಮೊಗ್ಗೆಯ ಮೊಗ್ಗರಕಂ ಸುಗ್ಗಿಯಾದ ಮಲ್ಲಿಗೆಯರಳ್ಗಳನಾಯ್ವಲ್ಲಿ

ಚಂಪಕಮಾಲೆ

ಪುದಿದಲರ್ಗೊಯ್ಯಲೆಂದಬಳೆ ಮಲ್ಲಿಗೆಯೊಳ್ ಸಲೆ ಕೈಯನಿಕ್ಕಲೊ
ರ್ಮೊದಲೊಳೆ ತನ್ನ ಕೆಂದಳದ ಕೆಂಪು ಸಮಾವರಿಸಲ್ಕೆ ಪೂಗಳುಂ
ಪಡೆದರುಣಂಗಳಾಗಿ ನೆಱತೋಱರೆ ಮಲ್ಲಿಗೆಯಲ್ಲಿದೊಂದು ಮಾ
ಯದ ಗಿಡಮೆಂದು ಪೂದಿಱಿಯಲೊಲ್ಲದೆ ಮುಗ್ಧೆ ಮರಳ್ದಳಾಕ್ಷಣಂ ೯೩

ಕಂದ : ಮುತ್ತಿಲೆಯ ಮೇಲೆ ಪಸರಿಸಿ
ಸುತ್ತಂ ಕರತಳದ ಕೆಂಪು ರಂಜಿಸೆ ತಳಿರಿಂ
ದುತ್ತರಳನೇತ್ರೆ ಕೊಯ್ವಳ್
ಬಿತ್ತರಿಸಲ್ ನಗೆಯುನಂದು ಕೆಳದಿಯರನಿತುಂ ೯೪

ವಚನ : ಆಗಳ್

ಚಂಪಕಮಾಲೆ

ತರುಣಿಯರೀಕ್ಷಿಸಲ್ ತಿಲಕಮಂಕುರಿಸಿತ್ತೊಡೆಯಲ್ಕಶೋಕಮುಂ
ಪರಕಲಿಸಿತ್ತು ಪಲ್ಲವಮನೊಲ್ದಮರ್ದಪ್ಪಿದೊಡಾಯ್ತು ಪುಷ್ಪಿತಂ
ಕುರವಕಮೆಯ್ದೆ ಮುಕ್ಕುಳಿಸಿ ಮೇಲುಗುಳಲ್ ಮಧುಮಂ ಫಲಂಗಳಂ
ಧರಿಸಿ ವಿರಾಜಿಸಿತ್ತು ವಕುಳಂ ಸಲವಾಯ್ತು ಮರಕ್ಕಮಾದೊಡಂ ೯೫

ವಚನ : ಇಂತು ಕಾಂತೆ ತಿಂತಿಣಿಗೊಂಡು ತಂತಮಗೆ ಕೊನರ್ತಳಿರ್ಪೂಗುಡಿಗಳ ಬಳಗಮನಾಯ್ದಾಯ್ದು ಕೊಯ್ದು ಪುಷ್ಪಾಪಚಯವಿನೋದಮಂ ತೀರ್ಚಲೊಡಂ

ಮತ್ತೇಭವಿಕ್ರೀಡಿತ

ಅಳಿಬಂಡುಂಬೊಡಮೊಂದುಮಿಲ್ಲ ಕುಸುಮಂ ಪಣ್ಗೊಂಚಲೊಂದಾದೊಡಂ
ಗಿಳಿ ಚಂಚೂಪುಟದಿಂ ಕರ್ದುಂಕುವೊಡಮಿ[1]ಲ್ಲಂ ಕೋ[1]ಕಿಳಂ ಕಚ್ಚಲೆಂ
ದೆಳಸಲ್ ನುಣ್ಗೊನರೊಂದುಮಿಲ್ಲ ನೊಸಲೊಳ್ ಬೊಟ್ಟಾಗಿಡಲ್ವೇಡಿ ಕಂ
ದಳಿರಂ ನೋಳ್ಪಡಮೊಂದುಮಿಲ್ಲ ಬಱಿದಾಗಿದ್ದತ್ತು ತನ್ನಂದನಂ ೯೬

ವಚನ : ಅನಂತರಂ

ಮಹಾಸ್ರಗ್ಧರೆ

ಸೊಗಸಂ ಕಣ್ಗಿತ್ತೊಡಂ ಪೊಂದೊಡವುಗಳತಿಭಾರಂಗಳೊಳ್ಗೊಂಪಿನೊಂದೇ
ಳ್ಗೆಗೆ ಕಾರಾಗಾರಮಾ ಪೂದೊಡವಿನ ತೆಱದಿಂ ಕೂಡೆ ಪಂಚೇಂದ್ರಿಯಕ್ಕಂ
ಮಿಗಿಲಾದಾನಂದಮಂ ಮಾಳ್ಪವೆ ಮೃದುತೆಯಸಂಗಕ್ಕೆ ಮಾಧುರ್ಯದಿಂ ನಾ
ಲಗೆಗಂ ಮೂಗಿಂಗೆ ಕಂಪಿಂ ಕಿವಿಗಳಿರವದಿಂ ಲೋಚನಕ್ಕೆಯ್ದೆ ಚೆಲ್ವಿಂ ೯೭

ವಚನ : ಎಂದು ತರುಣಹರಿಣನೇತ್ರೆಯರ್ ತಂತಮ್ಮ ಕೋಮಳ ತನುಲತೆಗಳಂ ನವೀನಪುಷ್ಪಮಾಲಾಮಯಾಲಂಕಾರಸಾರದಿಂ ಯಥೋಚಿತಮಾಗಿಯಳಂಕರಿಪಲಂಪು ಬಗೆಯೊಳ್ ಪೊಂಪುಳಿಯೋಗುತ್ತುಮಿರಲಂಬಿಂಗಂ ಬಿಲ್ಗಮರಲ್ಗಳನೀಯಲೆಂದು ಬನದ ದೇವಿಯರಲರ್ವಿಲ್ಲಬಲ್ಲಹನನಱಸಿ ಪುಗುಮಂತೆ ಸಂಪಗೆಯ ಪೊದಱ ಜೊಂಪಮಂ ಶ್ರೀಖಂಡ ಷಂಡದ ಮಂಡಪಮಂ ಮಾಧವೀಲತೆಯ ಮನೆಯುಮಂ ಪೊಳೆವೇಳಾಲತೆಯ ನೀಳಮಂ ರಂಜಿಸದ್ರಾಕ್ಷಾಲತೆಯ ಕುಂಜಮಂ ಪೊಕ್ಕು

ಕಂದ : ಬಾಳೆಯ ನಾರಿಂ ಕಟ್ಟಿದ
ಳಾಳಿಸಿ ಮಲ್ಲಿಗೆಯ ತೋರಮೊಗ್ಗೆಗಳಂ ಕಂ
ಪೇಳಿಪ ಮುತ್ತಿನ ಸರಮಂ
ಬಾಳೋಚಮೆ ಬಂದು ಮುಗ್ಧೆಯರ್ ನೋಡುವಿನಂ ೯೮

ಇರುವಂತಿಯಲರ್ಗಳಂ ಸರ
ಸಿರುಹದ ನೂಲಿಂದೆ ಕಟ್ಟಿ ಪಂಚಶರಂಗೆ
ಯ್ದು ರಮಣಿ ಕೀಳ್ಪಡಿಸಿದಳಂ
ದುರವಣಿಸುವ ಪಂಚಶರನ ಶರಪಂಚಕಮಂ ೯೯

1 ಲಕ್ಕೋ (ಗಚ)

ಗೊಜ್ಜಗೆಯ ಜೆಲ್ವ ಮುಗುಳ್ಗಳ
ಗೆಜ್ಜೆಗಳಿಂದೆಸೆವ ಕಂಚನಾರದ ಕುಸುಮಾ
ತ್ಯುಜ್ವಳ ಕಾಂಚೀದಾಮಮ
ನುಜ್ಜೆವಿಸಿದಳ್ ಕುತೂಹಳಂ ಕೋರ್ಪನ್ನಂ ೯೦೦

ಬಂದುಗೆಯಲರ್ಗಳಿನೆಸಗಿದ
ಕಂದುಗೆಗಳನೆಸೆವ ನಂದಿವಟ್ಟದ ಪೊಸಪೂ
ವಿಂದೊಲ್ದು ಪಾಯವಟ್ಟವ
ನಂದೊರ್ವಳ್ ಕಟ್ಟಿದಳ್ ಚಮತ್ಕೃತಿಯಿಂದಂ ೧೦೧

ವಚನ : ಮತ್ತಮದಿರ್ಪುತ್ತೆಯ ಕುತ್ತುಂಗಱಿಯುಮಂ ಸುರಹೊನ್ನೆಯ ಜೆಲ್ವ ಹೆಱಿಯುಮಂ ಕರ್ಣಿಕಾರದ ಕರ್ಣಾವತಂಸಮಂ ನಾಗಕೇಸರದ ಕೇಯೂರಮಂ ವಕುಳದ ಮುಕುಟಮುಮಂ ಕುರವಕದ ಕರಮಳಯಮುಮಂ ತಿಳಕದಪ್ಪದಳಮುಮಂ ಚಂಪಕದ ಚಳಿಕೆಗೆಯುಮಂ ತಮಾಳಪತ್ರದ ಕರ್ಣಪತ್ರಮುಮಂ ಮೆಲ್ಪಂ ಬಲ್ಪುಮೆಸೆದು ಮನೋಹರಮೆನಿಸುವಿನಂ ಸಮೆದು ತಮತಮಗೆ ಪೊಸಪೊಸತಾದ ಕುಸುಮದ ಪಸದನಂಗೊಂಡು

ಉತ್ಪಲಮಾಲೆ

ಪೂವಿನ ಪಿಂಡುಗಂಕಣಮುಮಂ ಪೊಸಪೂವಿನ ತೋಳಬಂದಿಯುಂ
ಪೂವಿನ ತೋರಮುದ್ರಿಕೆಗಳಂ ಸಲೆಪೂವಿನ ಕಂಠಮಾಲೆಯುಂ
ಪೂವಿನ ಜೋಳಿಯುಂ ಪೊಳೆವ ಪೂವಿನ ಚೌಕಳಿಯುಂ ವಧೂಜನಂ
ಪೂವಿನ ಜೆಲ್ವಪಟ್ಟಿಕೆಗಳಿಂಬಲರ್ವಚ್ಚಮನಾಂತುದರ್ಥಿಯಿಂ ೧೦೨

ಕಂದ : ಅಚ್ಚರಿಯುಂ ಪುಟ್ಟಿಸುವಲ
ರ್ವಚ್ಚಂಗಳನೆಯ್ದೆ ತೊಟ್ಟು ವಧುಗಳ್ ಪೋಲ್ತರ್
ಪೆರ್ಚಿದ ಶರಮಂ ಪೇಱಿದ
ನಚ್ಚಿನ ದೀವದ ಮೃಗಂಗಳಂ ಮನಸಿಜನಾ ೧೦೩

ವಚನ : ಇಂತು ಕೈಗೆಯ್ದು ತಂತಮ್ಮ ತಾಣದಿಂ ಪೊಱಮಟ್ಟು ಮರಳ್ದರಳ್ದ ಪೂಗುಡಿಗಳ ಬಳಗಂಗಳಿಂದುದಿರ್ಪ ಧೂಳೀಜಾಳಪೇಳಾಪಕದಿಂ ಮೃದುಳಮಾದ ಸಮಸ್ಥಳದೊಳ್ ಗುಜ್ಜು ಮೆಟ್ಟುವ ಪಜ್ಜೆಯ ಮಡಂಗಳಳ್ದು ಬರೆ ಲೀಲಾಗಮನವಿನೋದಮಂ ಮೆಱಿ ವುತ್ತುಂ ನೃಪಾಳನೋಲಗದ ಮಂಡಪಮಂ ಮುಟ್ಟಿವರ್ಪುದುಂ

ಚಂಪಕಮಾಲೆ

ಪಲತೆಱನಾದ ಪುಷ್ಪಫಳಕೋರಕಪಲ್ಲವ ಭೂಷಣಂಗಳಂ
ತಳೆದು ವಧೂಜನಂ ನಿಜವಿಳಾಸಸುಧಾರಸದಿಂದೆ ಪೆರ್ಚಿಯು
ಜ್ವಳಲತಿಕಾಳಿ ಬಪ್ಪ ತೆಱದಿಂದಮೆ ಬಂದಿದಿರಾಗಿ ನಿಲ್ವುದುಂ
ನೆಲೆಸಿದವಲ್ಲಿ ಭೂಪತಿಯ ದೃಷ್ಟಿಗಳೆಂಬ ಮಧುವ್ರತಂಗಳುಂ ೧೦೪

ಉತ್ಪಲಮಾಲೆ

ಪೂವಿನ ಬಿಲ್ಗಳಂ ನನೆಯ ಬಾಣಗಣಂಗಳನಾಂತು ನಿಂದರಿಂ
ದೀವರನೇತ್ರೆಯರ್ ಕೆಲರರಲ್ಗಳ ಖೇಟಮುಮಂ ಕೃಪಾಣಮಂ
ಭಾವಕಿಯರ್ ಕೆಲರ್ ಪಿಡಿದು ನಿಂದರನಂಗಮಹೀಶಸೈನ್ಯಮಾ
ದಾಸರಿಸಿರ್ದವೋಲ್ ಬಳಸಿ ನಿಂದುದು ಸುತ್ತಲುಮಂಗನಾಜನಂ ೧೦೫

ಮತ್ತೇಭವಿಕ್ರೀಡಿತ

ವನಲಕ್ಷ್ಮೀನಿವಹಂ ಪ್ರಸೂನಶರಸಂಘಾತಂಗಳಂ ಕೊಂಡುಬಂ
ದಿನಸಪ್ಪಂಗಭಸಂಗಮಾದ ತೆಱದಿಂದಾ ವಾರನಾರೀಜನಂ
ಜನಪಂಗಿತ್ತುದು ಕಾಣ್ಕೆಯಾಗಿ ಸುಮನೋಮಾಲ್ಯಂಗಳಂ ಪುಷ್ಪವೀ
ಜನಮಂ ಬಾಣಮೃಣಾಳಹಾರಲತೆಯಂ ಪಣ್ಗೊಂಚಲಂ ಪ್ರೀತಿಯಿಂ ೧೦೬

ವಚನ : ಅನಂತರಮುರಸಿಜೆರಸರಸನುಮುಲದೋಡವಂ ತೊಟ್ಟು ತುಂಬಿಯ ನಾರಿಯನಿಂಬುವಡೆದ ಕಬ್ಬುವಿಲ್ಲುಮಂ ಕುಸುಮಸರಮುಮಂ ಪಿಡಿದು ಕಾಮನುಂ ರತಿಯುಮೆಂಬಂತೆ ಜಗನ್ಮೋಹನಮನೊಡರ್ಚುತ್ತುಂ ಹೂವಿನ ಹರಿಗೆಗಳ ನಡುವೆ ಸಡಗರದಿ ನಿಂದಿರ್ಪುದುಂ

ಚಂಪಕಮಾಲೆ

ಘನಸುಮನೋವಿಭೂಷಣಭರಕ್ಕೆನಿತಳ್ಕಿ ಬಳಲ್ದರೆಲ್ಲರುಂ
ವನಿತೆಯರೀಗಳುದ್ಧಸುಕುಮಾರೆಯರೆಂದು ನೃಪಂಗೆ ಪೇಳ್ವವೋಲ್
ಜನಿಸಿದವೊಂದೆರಳ್ ಬೆಮರಬಿಂದುಗಳುತ್ಕುಚದೊತ್ತಿನೊಳ್ ಪ್ರಭಾ
ವಿನುತಕಪೋಳದೊಳ್ ತ್ರಿವಳಿಯೊಳ್ ನೊಸಲೊಳ್ ನಳಿತೋಳಮೂಳದೊಳ್ ೧೦೭

ವಚನ : ಅಂತು ನಿಷ್ಪನ್ನ ಪುಷ್ಪಮಯಭೂಷಾವೇಷಮಂ ಘರ್ಮಜ[1][ಲ][1] ಬಿಂದುಗಳಿಮ್ಮಡಿಸಲದಂ ನೋಡಿ ದೇವರದೇವಂ ವನಕ್ರೀಡಾಪರಿಶ್ರಮಮಂ ಜಳಕ್ರೀಡಾನುಕ್ರಮದಿಂ ಕಳೆಯಲ್ವೇಡಿ ಬಗೆದಂದಲ್ಲಿಂದೆಳ್ದು ಪೂಗೊಳದಂತಿಕಕ್ಕೆ ಮೆಲ್ಲನೆ ತಳರ್ವುದುಮಾಗಳ್

---

1 ನ (ಕಗಚ)

ಉತ್ಪಲಮಾಲೆ

ಮುನ್ನೆಱಕೊಯ್ದು ತೀರ್ಚಿದೊಡೆ ಬೀತವೊಲಿರ್ದ ಲತಾಳಿಗಳ್ಗೆ ಮ
ತ್ತಂ ನಳಿನಾಕ್ಷಿಯರ್ ನಿಜಕಟಾಕ್ಷನಿಪಾತದ ಮೂಱುಬಣ್ಣದಿಂ
ಚೆನ್ನಮೆನಿಪ್ಪ ಪೂಗುಡಿಯುಮಂ ತಳಿರ್ದೊಂಗಲನುನ್ಮದಾಳಿಯಂ
ಕೆನ್ನೆಮೊಡರ್ಚುತುಂ ಮರಳೆ ಸೊಂಪವಱತೊಳ್ ಮೆಱತಂತೆ ಪೋಪುದುಂ ೧೦೮

ಕಂದ : ಮೀನಲೋಚನೆಯರರವಿಂ
ದಾನನೆಯರ್ ಚಕ್ರವಾಕಮಿಥುನಸ್ತನಿ[1]ಯರ್[1]
ಮಾನಿತಕಳಹಂಸಮಧು
ಯಾನೆಯರಪ್ಕೇಳಿಗೆಳಸಿ ಪೋಪುದದುಚಿತಂ ೧೦೯

ವಾರಿಧಿ ದಿಕ್ಪತಿಕಡಲಂ
ಕ್ಷಾರಮಿದೆಂದುಳಿದು ದೇವಿವೆರಸೆಲ್ತಪ್ಪಂ
ತಾ ರಾಜಂ ಸತಿವೆರಸು ಮ
ನೋರಾಗದಿನಂದು ಪೂಗೊಳಕ್ಕೆಳ್ತಂದಂ ೧೧೦

ವಚನ : ಅಂತೆಯ್ದೆವರ್ಪುದುಂ ಮುಂದೊಂದೆಡೆಯೊಳ್

ಕಂದ : ಸುಳಿಯ ಬಳಸಿಂದೆ ಚೆಲ್ವಂ
ತಳೆದು ಸುಗಂಭೀರಮಾಗಿ ವನಲಕ್ಷ್ಮಿಯ ಮಂ
ಗಳನಾಭಿಯೆಂಬಿನಂ ಕ
ಣ್ಗೊಳಿಸಿದುದು ಸರೋವರಂ ಧೃತೋಪರಿವಳಿಕಂ ೧೧೧

ವಚನ : ಮತ್ತಂ ನಳನಳಿಸಿ ಬೆಳೆದು ಸುರಳ್ದರಳ್ದ ಚೆಂಗಣಿಗಿಲೆ ನೆಯ್ದಿಲ್ ಕನ್ನೆನೆಯ್ದಿಲ್ ತಾವರೆ ಕೆಂದಾವರೆ ಪೊಂದಾವರೆ ಮುಂತಾದ ಪಲತೆಱದ ನೀರ್ವೂಗಳ ಬಳಗದೊಳೋಲಾಡುತ್ತಿರ್ದ ಷಟ್ಚರಣಚರಣಸಮಾಘಾತದಿಂದೆಸಳ್ಗಳ ಪೊರೆ ಸಡಿಲ್ದು ಸುರಿವ ಮಂಜುಕಿಂಜಲ್ಕಮಂಜರಿ ಸುಳಿಗಾಳಿಯ ವಶದಿಂ ಮೇಗೆನೆಗೆದು ಪರಕಲಿಸಿ ಬೀಳ್ದು ಜಗದ್ವಲ್ಲಭನ ಜಳಕೇಳೀಸಮುತ್ಸವದೊಳ್ ಸೂಸಿದ ವಾಸಚೂರ್ಣ ಪರಿಪೂರ್ಣಮಾದುದೆಂಬಂತೆ ಕಣ್ಮಲೆಸರ್ಗೊಲಪನೋಲಗಿಪ ಲೀಲಾಸರೋವರಂ ದೀರ್ಘಿಕಾ ವಾಪಿಕಾದಿಯಿಂ ಪೊಱಮಡುವ ಘಟೀಯಂತ್ರಪ್ರವಾಹಂಗಳಿಂ ತುಂಬುವ ಪವಣಿಂ ಮಿಗಿಲಾಗಿ ತುಂಬಿದ ನೀರಂ ತುಂಬುಗಳಿಂ ಕಳೆವ ಬೆಡಂಗಗುರ್ವನೊಡರಿಸೆ ಚರಣಹರಣವಿದ್ಯಾನಿಪುಣೀಭೂತಜಳದೇವತಾಸಿಪಹಸಮವಗಾಹನಸಂಭ್ರಮನದಿಂ ವಿಡಂಬನಂಬಡೆದುದೆಂಬಿನಂ ಕೌತುಕಮಾಗಿ ವರ್ಪುದುಂ

1 ಯಂ (ಗಚ)

ಕಂದ: ಅದಱ ನಾಲ್ದೆಸೆಯೊಳಂ ಚೆ
ಲ್ವೊದವಿದ ಪೊಸಚಂದ್ರಕಾಂತಮಣಿಮಯಸೋಪಾ
ನದ ಪಂತಿ ಸೀಳ್ದು ನಿಮಿರ್ದುದು
ಸುದತಿ ಸುಖಾರೋಹಣಾಪರೋಹಣಕರಣಂ ೧೧೨

ವಚನ: ಅದಕ್ಕೆ ತಲೆದೊಡಿಗೆಯೆನಿಸಿ ನಿಱಿಸಿ ಮೆಱೆವ ನವರತ್ನಖಚಿತವಿಕಟ ಹಾಟಕ ಪರಿಘಟಿತಮಹಾಕಟಾಹಪಟಳಿಕಾಕೋಟರದೊಳಂ ರಜತರಚಿತದ್ರೋಣಿಶ್ರೇಣಿಯೊಳಮಲ್ಲಲ್ಲಿ ಬೇಱೆವೇಱೆ ತೀವಿದ ಕಾಶ್ಮೀರಕರ್ಪೂರಕಸ್ತೂರಿಕಾಚಾರುಹರಿಚಂದನ ಪರಿಕ್ಷೋದದಿಂ ಸಾರಮಾದ ನೀರಿಂದುಪಸರೋವರಂಗಳೆಂಬಂತಿರದಱ ಸುತ್ತಲುಂ ಪರಿವೇಷ್ಟಿಸಿ ವಿಸ್ಮಯಮಂ ಕೆದಱುತ್ತುಂ ಮುಂದೆ ಮೆಱೆದಿರ್ದವಂತುಮಲ್ಲದೆಯುಂ

ಕಂದ: ಬಳಸಿರ್ದ ತತ್ಕಟಾಹಂ
ಗಳ ನಡುವೆ ಸರೋವರಂ ಸಘೋಷಂ ಚೆಲ್ವಂ
ತಳೆದತ್ತು ಪೆತ್ತ ಮಱಿಗಳ
ನೊಲವಿಂದಂ ತಾಯಿ ಬಿಡದೆ ಮುದ್ದಾಡಿಪವೋಲ್ ೧೧೩

ವಚನ: ಅದಂ ನೋಡುತ್ತುಂ ನಾಡೆಱೆಯುಂ ಮುಟ್ಟೆವರ್ಪುದುಂ

ಕಂದ: ನೆಗೆವ ನೀರ್ವನಿಗಳೆಂಬ
ಕ್ಕಿಗಳಿಂ ತೆರೆಗೈಗಳಿಂದೆ ಸೇಸಿಕ್ಕಿ ಕೊಳಂ
ಮಿಗುವ ಪೊಣ್ಣರ್ವಕ್ಕಿಯುಲಿಯಿಂ
ಜಗದೊಡೆಯನನಂದು ಪರಸುತಿರ್ದವೊಲೆಸೆಗುಂ ೧೧೪

ವಚನ: ಅಂತುಬಂದು ರಾಜಾಧಿರಾಜಂ ಕಂದರ್ಪನೆಂಬ ಕಲ್ಪವೃಕ್ಷದಭಿವೃದ್ಧಿ ನಿಮಿತ್ತಮುಪಕಲ್ಪಿತಾನಲ್ಪತರ ಪರಿವಿಳಸದಾಳವಾಳಮೆಂಬಂತೆ ಕಣ್ಗೊಳಿಪ ತೀವಿದ ತಿಳಿಗೊಳದ ತೀರದೊಳ್ ಸುತ್ತಲುಂ ಬಳಸಿ ಸೌಂದರೀಜನಂ ಸಂದಣಿಸಿರೆ ನಿಂದಿರ್ಪುದುಂ

ಮತ್ತೇಭವಿಕ್ರೀಡಿತ

ತಡಿಯೊಳ್ ಕಾಂತೆಯರೆಯ್ದೆ ನಿಂದೊಳಗಣಂಭಃಶೋಭೆಯಂ ನೋಡಲಾ
ಗಡೆ ತಮ್ಮ ಪ್ರತಿಬಿಂಬಮಲ್ಲಿ ಪೊಳೆದೆತ್ತಂ ತುಂಬಿ ಕಣ್ಗೊಪ್ಪಮಂ
ಪಡೆಯಲ್ ತಜ್ಜಳದೇವತೆ ಪ್ರಿಯುಡೆ ನಾನಾರೂಪಮಂ ತಾಳ್ದ ನಾ
ಡೊಡೆಯಂ ಬಂದೊಡೆ ನೋಡುತಿರ್ದ ತೆಱದಿಂದಂದಿತ್ತುದಾಶ್ಚರ್ಯಮಂ ೧೧೫

ವಚನ: ಅಲ್ಲಿ

ಕಂದ : ಕಡುತೋರನೂಗಿ ವೇಗ
ಙ್ಗಡರ್ದ ಸ್ತನವುಂಡಳಾಂತರಿತದಿಂ ಕಾಣ
ಲ್ಪಡೆಯದುದಂ ಬಾಸೆಯನಾ
ಗಡೆ ಕಂಡರ್ ತಮ್ಮ ರೂಪು ಮಾರ್ಪೊಳೆಯಲೊಡಂ ೧೧೬

ವಚನ : ಆಗಳ್

ಕಂದ : ಸ್ತ್ರೀರತ್ನರಾಶಿಯೆಂಬ ಮ
ಹಾರತ್ನಸಮೂಹಮೆಯ್ದೆ ತುಂಬಿರ್ದ ಮನೋ
ಹಾರಿ ನಿಧಾನದ ಕುಳಿಯುಂ
ಮಾರಬ್ರಹ್ಮಂ ವಿನಿರ್ಮಿಸಿದವೋಲೆಸೆಗುಂ ೧೧೭

ವಚನ : ಬಳಿಯವಿಳಾತಳಪಾಳಕಸ್ವೈವರ್ಣದ ಚೆನ್ನರನ್ನದಿಂ ತಿಣ್ಣಂ ಬಣ್ಣಿಸಿ ಪಣ್ಣಿದ ಜೀರ್ಕೊಳವಿಯು ಕೊಂಬಿನ ಜಂತ್ರದ ಬಳಗಂಗಳೆಂಬೋಕುಳಿಯ ಘಳಿಯಂಗಳಂ ತರಿಸಿಕೊಡುವುದುಂ ತಮತಮಗೆ ತಳೆದುಕೊಂಡು

ಚಂಪಕಮಾಲೆ

ಕುಸುಮಮನುಳ್ಳ ಬಾಹುಲತೆಗಳುಜಿತಕ್ಕೆವಶವಾಗಿ ಬಂದವೆಂ
ಬೆಸಕಮನಾಂತು ಹಂಸೆ ಗಿಳಿ ಕೋಗಿಲೆಯೆಂಬಿವಱಂತೆ ಮುತ್ತಿನಿಂ
ಪಸುರ್ಪರಲಿಂ ವಿನೀಲಮಣಿಯಿಂದಮೆ ಮಾಡಿದ ವಾರಿಕೇಳಿಯಂ
ತ್ರಸಮಿತಿಯಂ ಲಸತ್ಕರತಳಂಗಳೊಳಂ ಪಿಡಿದಿರ್ದರೆಲ್ಲರುಂ ೧೧೮

ವಚನ : ಮತ್ತಮಾ ಭುವನತ್ರಯಾಗ್ರಗಣ್ಯಾನಗಣ್ಯಲಾವಣ್ಯರಸವಿಸರದಿಂದೊಕ್ಕೆ ಸುಕ್ಕುಂಗುರುಳ ಸುತ್ತಲುಂ ತಳಿದ ಕತ್ತುರಿಯ ಪರಿಮಳದ ಪಸರದಿಂ ತೆಕ್ಕನೆ ತೀವಿದ ಜಳಕ್ರೀಡಾಸನ್ನದ್ಧೆಯರಾದ ಚೆನ್ನೆಯರಂ ಕೈವೀಸುವುದುಂ

ಚಂಪಕಮಾಲೆ

ಪುರುಡಿಪವೆಮ್ಮೊಳೆಯ್ದೆ ನಡೆಯಿಂ ನುಡಿಯಿಂದಮಿವೆಂದು ಕಾಂತೆಯರ್
ಪರಿದೊಳಪೊಕ್ಕು ಜೀರ್ಕೊಳವಿಯಾದುಱ ಜಂತ್ರದ ಮುತ್ತಿನಂಚೆಯಂ
ಮರಕತದೊಂದು ಕೋಗಿಲೆಯುಮಂ ಪಿಡಿದೋವದೆ ನೀರೊಳದ್ದಿದರ್
ಬೆರಸಿದ ಕೋಪದಿಂ ಹುಡಿಕೆನೀರೊಳಗದ್ದುತುಮಿರ್ದರೆಂದೆಂಬಿನಂ ೧೧೯

ಸಡಗರದಿಂದೆ ಜೀರ್ಕೊಳವಿಯಿಂ ಜಳಮಂ ತೆಗೆದೆತ್ತಿ ಕೈಯೊಳಂ
ಪಿಡಿದಿರದೊರ್ವರೊರ್ವರನಡುರ್ತು ದಲೊತ್ತುತುಮಿರ್ದೊಡೆಲ್ಲಿಯುಂ
ಗಡಣಿಸಿ ಕುಂಕುಮೋದಕದ ಸಿಂಪಿಣಿ ಪರ್ವಿರೆ ಕೆಮ್ಮುಗಿಲ್ಗಳೊಳ್
ಕಡುಸಿಮಿರ್ದಿರ್ದ ಮಿಂಚುಗಳವೊಲ್ ಪಥುಗಳ್ ಪೊಳೆದಾಡಿದರ್ ಕರಂ ೧೨೦

ನೆಲವೊಲೆ ಮಿಾಱಿ ಮುಯ್ಪನಡರಲ್ ನಳಿತೋಳನೊದಲ್ ಬೆಡಂಗಿನ
ಗ್ಗಳಿಸಿರೆ ಕೊಂಕಿ ಬಳ್ಕಿ ನಡು ಕೋಮಳೆ ಮಾಣಿಸಿ ಮೇಳದಾಳಿಯುಂ
ತೊಲಗಪೆ ಬೆನ್ನನೊಡ್ಡಿನುತೆ ಪೊಯ್ದು ಮರಳ್ವಳನೋರ್ವಳಡ್ಡಬಂ
ದಳನಡೆ ಪೊಯ್ದು ಳಪ್ಪಳಿಸುವಂತೊಡನಾಯುವರಂ ಮನೋಭವಂ ೧೨೧

ಉತ್ಪಲಮಾಲೆ

ಓಕುಳಿಯಾಟದೊಳ್ ತೆರಳೆ ಪೂಸಿದ ಚಂದನಕರ್ದಮಂ ನಖ
ಪ್ರಾಕಟರೇಖೆ ತೋಱಿ ಕುಚಮಂಡಳದೊಳೆ ಕಡುನಾಣ್ಚಿರಲ್ಕೆ ಮ
ತ್ತಾಕೆಯ ಮೇಳದಂಗನೆಯರೊತ್ತಿದ ಕುಂಕುಮಪಂಕವಾರಿಧಾ
ರಾಕುಳಮಲ್ಲಿ ಕಂಚುಳಿಕೆಯಂತಿರೆ ರಾಗಿಸಿಯಾಡಿದಳ್ ಕರಂ ೧೨೨

ಕಂದ: ಸೋಗೆನಿಱಿ ನಾಂದು ಸಡಿಲಲ್
ಜೇಗದಿನೋಸರಿಸಿ ಪಿಡಿದು ಮುರಿದೆಡಗೈಯಿಂ
ಬೀಗಿ ಬಲಗೈಯನೊಡ್ಡಿಸಿ
ತಾಗುವ ನೀರ್ವೊಯ್ಲನಾಂತು ನಿಂದಳದೊರ್ವಳ್ ೧೨೩

ವಚನ: ಇಂತಗುರ್ವುವಡೆದ ಜಳಕ್ರೀಡಾಪರ್ವಮನುರ್ವರಾಧಿಪತಿ ನಡೆನೋಡು ತ್ತುಮಿರ್ಪೆಡೆಯೊಳ್

ಚಂಪಕಮಾಲೆ

ಮಳಯಜವಾರಿಸೇಚನದಿನೊರ್ವೆ ಕರಂ ಬಿಳಿದಾಗಿ ಕುಂಕುಮಾ
ವಿಳಜಳದೊಂದು ಸಿಂಪಿಣಿಯನೊರ್ವೆ ಸಮಾವರಿಸಿರ್ದ ಕೆಂಪುವಂ
ತೊಳಗುವ ಚೆಲ್ವ ಕತ್ತುರಿಯ ನೀರ ಸುರಂಜನೆಯಿಂದವೊರ್ವೆ ಕ
ಪ್ಪಳವಡೆ ಮಾಯದಂಗನೆಯರೆಂಬಭಿಶಂಕೆಯನಿತ್ತ್ರನಾಕ್ಷಣಂ ೧೨೪

ಕಂದ: ಶೃಂಗಾರವತೀದೇವಿಯ
ನಂಗಜಸಿಭಧರ್ಮನಾಥನಭಿಷಿಂಚಿಸಿದಂ
ಗಂಗೆಯೊಳಿಭವಲ್ಲಭೆಯಂ
ಮಂಗಳಯೂಥಾಧಿನಾಥನಭಿಷಿಂಚಿಪವೊಲ್ ೧೨೫

ಮತ್ತೀತನೆತ್ತಿದಪ್ಪಂ
ಚಿತ್ತಭವಂ ಕಾಮುಕಲ್ಪಲತೆಗೆನೆ ನೃಪಂ
ಬಿತ್ತರಿಸಿದ ಜಳಯಂತ್ರದಿ
ನೊತ್ತಿದನಾ ಸತಿಯ ಮೇಲೆ ಕುಂಕುಮಜಳಮಂ ೧೨೬

ಕುಂಕುಮಜಲಧಾರಾಪ್ರಸ
ರಂ ಕುಚದೆಡೆಯಿಂದೆ ಜಾಸವಿಡಿದಿಳಿದುದು ತ
ತ್ಪಂಕಜವದನೆಯ ಚಿತ್ತದೊ
ಳಂಕಿತಮದನಾನುರಾಗರಸಮಿಳಿವನ್ನಂ ೧೨೭

ವಚನ: ಮತ್ತಂ

ಕಂದ: ಕತ್ತುರಿಯ ರಸಮನವನಿಪ
ನೊತ್ತಿದೊಡಂದಸಿಯ ಧಾರೆಯಗ್ರದೊಳೆಸೆದಳ್
ಚಿತ್ತಭವನಸಿಯ ಧಾರೆಯ
ಮೊತ್ತದ ಮುಂದೆಸೆವ ವಿಜಯಲಕ್ಷ್ಮಿಯ ತೆಱದಿಂ ೧೨೮

ಉತ್ಪಲಮಾಲೆ

ಓಪಳಮೇಲೆ ಜೀರ್ಕೊಳವಿಯಿಂ ಪೊಸಗತ್ತುರಿನೀರನೊತ್ತೆ ತ
ದ್ಭೂಪತಿ ಧಾರೆಗಟ್ಟೆಳಿವ ಪೊತ್ತಿನೊಳಾಕೆಯ ವಕ್ತ್ರಪದ್ಮಮಂ
ವ್ಯಾಪಿಸಿದತ್ತು ಭೃಂಗಕುಳಮೆಂಬಿನಮೊಪ್ಪಿಡಿಯಾದ ಮಧ್ಯಮಂ
ಧೂಪಿಸಿದತ್ತು ಮನ್ಮಥನ ಚಾಪಲತಾಘನಮೌರ್ವಿಯೆಂಬಿನಂ ೧೨೯

ವಚನ: ತತ್ಸಮಯದೊಳ್

ಚಂಪಕಮಾಲೆ

ಪರಮವಿಳಾಸಸಾರರಸದಿಂದಮದೊರ್ಮೆ ಬೆಡಂಗುವೆತ್ತ ಭಂ
ಗುರವದಪಾಂಗದೀಪ್ತಿರಸದಿಂದಮದೊರ್ಮೆ ಮನೋಗತೋರುಭಾ
ವರಸದಿನೊರ್ಮೆ ಕುಂಕುಮಕಳಂಕಿತಸದ್ರಸದಿಂದಮೊರ್ಮೆ ತ
ನ್ನರಸನ ಮೇಲೆ ಸಿಂಪಿಸಿದಳೊಪ್ಪುವ ಪಟ್ಟದರಾಣಿ ಲೀಲೆಯಿಂ ೧೩೦

ಬೆಳಗುವ ಪೊನ್ನಜೀರ್ಕೊಳವಿಯಿಂ ಮಿಗೆ ನೀರ್ದೆಗೆದೆತ್ತಿ ದೇವಿ ಭೂ
ತಳಪನನೊಲ್ದು ಸಣ್ಣನಡುವಂ ಮುಱಿಯೊಯ್ಯನೆ ಕೈಯೊಳೊತ್ತಲು
ಜ್ಜ್ವಳಿಸುವ ಕಸ್ತುರೀಘುಸೃಣಚಂದನವಾರಿಯಧಾರೆ ಬೇಱೆವೇ
ಱಳಿದುದು ಕಪ್ಪು ಕೆಂಪು ಬಿಳಿದಾದಲರಂ ರತಿ ಚೆಲ್ಲುಮಂದದಿಂ ೧೩೧

ಕಂದ: ಕಡುನಿಮಿರ್ದು ಪೊಳೆವ ಕಣ್ಗಳ
ಕುಡಿವೆಳಗಂ ಗಂಧಸಾರಜಳಧಾರೆಯುಮುಮಂ
ಗಡ ನಿಟ್ಟಿಸಲರಿದೆನೆ ತ
ನ್ನೊಡೆಯನ ಮೇಲರಸಿಯೊತ್ತುತಿರ್ದಳ್ ಸಲವಿಂ ೧೩೨

ವಚನ : ಮತ್ತಮಂತಃಪುರಪ್ರಧಾನಪುರಂಧ್ರೀನಿಕುರುಂಬಮುಂ ಶಂಬರರಿಪುಸೈನ್ಯ ಮೊಮ್ಮೊದಲೊಳ್ ಕವಿವಂತೆ ಪೋಲ್ವಾಯ್ದು

ಚಂಪಕಮಾಲೆ

ತಡೆಯದೆ ಕಾಮಕಲ್ಪಲತೆಗಳ್ ತಳಿರ್ದೊಂಗಲಿನರ್ಘ್ಯಪಾದ್ಯಮಂ
ಕುಡುಪವೊಲಿಂದುಮುಂಡಳಿಗೆ ರಾಣಿಯವಾಸದ ಪೆಂಡವಾಸದೊಳ್
ಮಡದಿಯರಾ ಮಹೀಪತಿಯ ಸನ್ಮುಖಬಿಂಬದಮೇಲೆ ಕೂಡಿ ಕೈ
ಮಡಗದೆ ತುಳ್ಕಿತುಳ್ಕಿ ಮಿಗೆಚೆಲ್ಲಿದರೊಪ್ಪುವ ಕೆಂದಳಂಗಳಿಂ ೧೩೩

ಕಂದ : ಸೊಂಪಾದ ಕುಂಕುಮಾಂಬುವ
ಸಿಂಪಿಣಿರಮಣಿಯರನರಸನೆಯ್ದೆ ಮುಸುಂಕಲ್
ಕೆಂಪೇಱಿದ ಮುಗಿಲೊಳ್ ಚಂ
ದ್ರಂ ಪುರುತಾರೆಗಳ ನಡುವೆ ಪೊಳೆವವೊಲೆಸೆದಂ ೧೩೪

ತೀ[1]ವ[1]ದೊಡಂ ಶಶಿಕಾಂತ
ಗ್ರಾವದ ಜೀರ್ಕೊಳವಿಯುಗುಳುತಿರ್ದುದು ಜಳಮಂ
ಭಾವಕಿಯರೊತ್ತೆ ಹಾಸ ವಿ
ಭಾವಿಸರದಿನೆಸೆವ ಮುಖ ಹಿಮಾಂಶೂದಯದೊಳ್ ೧೩೫

ಚಂಪಕಮಾಲೆ

ತವಕಿಸಿ ಕೂಡೆ ಸಿಂಪಿಸುವ ಕುಂಕುಮವಾರಿಯ ಕೆಂಪು ಸೀರೆಯೊಳ್
ಕವಿದಭಿರಂಜಿಸಿತ್ತು ಮದದಾನೆಗಳೆನ್ನವಿವೆಂದು ಕಾಮನೆಂ
ಬಸನಿಪಸೊತ್ತಿದುಂಡಿಗೆಯವೋಲ್ ಪಥುಗಳ್ ಮೆಱೆದರ್ ಪಯೋಜಧೂ
ಳಿಸರವಾರಿಯೊಳ್ ಸಲಿಲದೇವಿಯರಾಡುತುಮಿರ್ದರೆಂಬಿನಂ ೧೩೬

ವಚನ : ಬಳಿಯಂ

ಕಂದ : ತರತರದಿಂದಿಳಿಪಿದ ಕೊ
ಪ್ಪರಿಗೆಗಳೊಳ್ ತೀವಿ ಪೊಯ್ದು ನೀರ್ ತೀವಿ ಬರು
ತ್ತಿರೆ ಮೊಗೆಯಲೆಯ್ದಿದಿರ್ದೊಡೆ
ಸರಸಿಯೊಳೊಳಪುಗುವ ಬಗೆಯುನರಸಂ ಬಗೆದಂ ೧೩೭

---

[1] ವಿ (ಗ)

ಉತ್ಪಲಮಾಲೆ

ಈ ತರುಣೀಜನಂಗಳ ವಿಲೋಚನದೊಳ್ ಕುಮುದಂ ಪಯೋಧರ
ಸ್ಫಾತಿಯೊಳಂ ರಥಾಂಗಯುಗಮಾಸ್ಯದೊಳಂ ಕಮಳಂ ಪ್ರಶೋಭೆಯಿಂ
ದಾತತಮಾಗಿ ಮಚ್ಚರಿಸುತಿರ್ದುಮಮಂ ಪಡಿಯಿಟ್ಟು ನೋಳ್ಪಿನೆಂ
ದಾ ತನುಮಧ್ಯೆಯರ್ವೆರಸು ಪೂಗೊಳದೊಳ್ ಪುಗುತಂದನಾ ನೃಪಂ ೧೩೮

ವಚನ : ಶ್ರುತಿಯೆಂತುಂ ಸರದೊಳ್ ಪೊಕ್ಕು ಪರಿಪಡುವುದಂತಾ ರಾಜಹಂಸಮುಂ ಸರೋವರದೊಳೊಳಪೊಕ್ಕಲ್ಲಿ

ಕಂದ : ಅರೆಬಿರಿದ ಕುತ್ತೆಸಳ್ಗಳ
ಪೊರೆಯೊಳ್ ಮೆಯ್ಯುರೆದು ಮೊರೆವ ಮಱಿದುಂಬಿಯ ಮೆ
ಲ್ಸರದಿಂದರವಿಂದದ ಸಿರಿ
ಧರಣಿಪನಂ ಪರಸುವಂತೆ ಪಡೆದುದು ಪದಪಂ ೧೩೯

ವಚನ : ತದನಂತರಮನಂತ ಸೀಮಂತಿನೀಸಂತಾನಮುಂ ತಿಂತಿಣಿಗೊಂಡು ಸರೋವರಾಂತರಾಳಮಂ ಪುಗುವಲ್ಲಿ

ಕಂದ : ಪಲಬರ್ ಬಂದೊಡೆ ತಾವರೆ
ಯೊಳಗಿರ್ದುರುಲಕ್ಷ್ಮಿ ತೆರೆಯುನಿಕ್ಕಿಸಿದವೊಲ
ಗ್ಗಳಿಸಿ ಪರ್ವಿತ್ತು ರತ್ನೋ
ಜ್ಜ್ವಳಸೋಪಾನೋತ್ಥ ಬಹಳಕಾಂತಿವಿತಾನಂ ೧೪೦

ಜಳದೇವತೆಯರ್ ತಮ್ಮು
ಗ್ಗಳಚೆಲ್ವಿನ ಗರ್ಭದಿಂದೆ ತಲೆಕೆಳಗಾಗಿ
ರ್ದಳೆಯೊಳ್ ನಡೆವಂತಿರೆ ಮಾ
ರ್ಪೊಳೆವಿಂದಮನಿಕ್ಕಿ ಮೆಟ್ಟುನಂತಿರೆ ನಡೆದರ್ ೧೪೧

ಮತ್ತೇಭವಿಕ್ರೀಡಿತ

ಉಡೆಯುದ್ದಂ ಜಳಮೆಂದು ಬಲ್ಲೊಡಮವರ್ ಕೇಳೀನಿಮಿತ್ತಂ ತಳ
ರ್ನಡೆಯಿಂದೊಯ್ಯನೆ ಗುಜ್ಜು ಮೆಟ್ಟಿ ಪುಗುವಾಗಳ್ ಘಾತಕಾಸಾರಮುಂ
ತಡವಿಂದೋಸರಿಸುತ್ತೆ ಜೆನ್ನಿಱಿಗಳಂ ಪೊಕ್ಕಿರ್ದರಾ ಸ್ತ್ರೀಯರೀ
ಗಡೆ ಮುಂಪೋಗಿ ಸಪತ್ನಿಯರ್ಗೆ ಕೆಳಗಾಗಿರ್ಪಂದಮೇಕಂಬವೋಲ್ ೧೪೨

ಪಿಡಿಯುತ್ತುಂ ಕಡುತೋರಬಟ್ಟಮೊಲೆಯಂ ಕಲ್ಲೋಲಹಸ್ತಾಗ್ರದಿಂ
ಜಡಿಯುತ್ತುಂ ನಿಜಊರುಯಂ ನಿತಂಬದೆಡೆಯಂ ತಳ್ಳೊಯ್ದು ಮುಟ್ಟುತ್ತಮೊ
ಳ್ಪೊಡೆಯಂ ನೀವಿ ತುಡುಂಕುತುಂ ಪುಳಕಮುಬ್ಬೇಳ್ವಂತೆ ಮೆಯ್ಸೋಂಕುತುಂ
ಮಡು ತಾಂ ಕಾಮುಕನೆಂಬಿನಂ ಸರಸವಾಡುತ್ತಿರ್ದುದಾ ಸ್ತ್ರೀಯರೊಳ್ ೧೪೩

ಕಂದ : ನಾರೀಲಾವಣ್ಯರಸಂ
ಸಾರಂ ತಿಳಿಗೊಳದೊಳೆಯ್ದೆ ತೆಕ್ಕನೆ ತೀವಲ್
ಭೋರೆನೆ ನೆಲೆವೆರ್ಚಿ ಸಮಂ
ತಾರಯಲಾ ಪಯಸಮಾಯ್ತು ನಾಭಿದ್ವಯಸಂ ೧೪೪

ಓಲಾಡಿ ವಿಮಳಜಳದೊಳ್
ಮೇಲಾಡಿ ಸರೋರುಹಕ್ಕೆ ತಮ್ಮಯ ಮೊಗಮಂ
ಲೀಲಾವತಿಯರ್ ಜಳದೇ
ವೀ ಲಾಸಮನಾಂತು ಕಣ್ಗೆ ಪಡೆದರಗುರ್ವಂ ೧೪೫

ಪೊನ್ನ ಜೀರ್ಕೊಳವಿಯೊತ್ತುವ
ಚೆನ್ನೆಯರಿಂದೆಸೆದು ಪೋಲ್ತುದದು ಪುತ್ತಳಿಯಂ
ಬಿನ್ನಣಿಸಿ ಕಡೆದು ಬಿಡಿಸು
ತ್ತಂ ನಿಲಿಸಿದ ಮದನಯಂತ್ರಧಾರಾಗೃಹಮಂ ೧೪೬

ವಚನ : ಅಲ್ಲಿ ಮತ್ತೊರ್ಬಂ

ಕಂದ : ತೊಲೆಯೆನೆ ಬಡನಡು ರೇಖಾ
ವಳಿಯೆನೆ ವಳಿ ಮೊಲೆಯ ಜಘನದತಿಭಾರಮನ
ಗ್ಗಳಿಸದೆ ತೂಗುವನೆನೆ ಕರ
ತಳದಲೀಸಾಡಲಬಲೆಗಭ್ಯಾಸಿಸಿದಂ ೧೪೭

ಚಂಪಕಮಾಲೆ

ಸವತಿಯ ಮೇಲೆ ಜಂತ್ರದೆ ಮನಃಪ್ರಿಯನೊತ್ತಿದ ವಾರಿಧಾರೆಗಳ್
ಕವಿದುರದಲ್ಲಿ ಬೀಳ್ದರದ ಮುನ್ನಮೆ ಕೂರದ ಪೆಣ್ಣ ಕಣ್ಗಳಿಂ
ದವೆ ಕವಿತಂದವಶ್ರುಗಳ ಬಿಂದುಗಳಾಗಳಸೂಯೆಯಿಂದೆ ಸಂ
ಭವಿಸಿದ ಭೂರಿಕೋಪರಸದಿಂದವಳಾಡಿದಳಂಬುಕೇಳಿಯಂ ೧೪೮

ಕಂದ : ಇನಿಯನನೊರ್ವಳ್ ಕಾಡುವ
ಮನದಿಂದಂ ಮುಳ್ಗಿ ಪೋಗಿ ನೀರೊಳಡಂಗಲ್
ತನುಗಂಧಕ್ಕೆಳಸುವ ಭೃಂ
ಗನಿಕರಮಾ ನೆಲೆಯನುಸಿರ್ವವೊಲ್ ಮೇಲೆಸೆಗುಂ ೧೪೯

ಕೊರಳಳವಧಿಯಾ ಮುಗ್ಗಿದ
ತರುಣಿಯ ಮೊಗಮಂಬುಜಂಗಳಿಡೆಯೊಳ್ ಬೆರಸಿ
ರ್ದರಿದೆನಿಸಿ ತೋಱೆ ಭೇದಿಸ
ಲರವರಿಸಿದನವಳನಲ್ಲಿ ಕಾಣದೆ ತರುಣಂ ೧೫೦

ಮಸೆದಲರಂಬಂ ಕಾಮಂ
ಪೊಸಕುಂಕುಮರಸದಿನರ್ಚಿಸಿದನೆಂಬಿನಮಾ
ಬಿಸಜಾನನೆಯರ ಕಣ್ಗಳ್
ನಸುಗೆಂಪಂ ಪಡೆದವಾ ಜಳಕ್ರೀಡೆಯೊಳಂ ೧೫೧

ಪೋದುದತಿರಾಗಮಧರ
ಕ್ಕಾದುದು ದೃಷ್ಟಿಗೆ ನಿರಂಜನತ್ವಂ ತಣ್ಪಿಂ
ಬಾದುದು ಮೆಯ್ಯೊಳ್ ನಿರ್ಮಳ
ರಾದವರೊಳ್ ಕ್ರೀಡಿಪರ್ಗೆ ಲೇಸಾಗದುದೇಂ ೧೫೨

ಅವಚತ್ತವದರ ಕೈಗಳ್
ಕವಿತಂದುದು ನಡುಕಮವರ ಮೆಯ್ಯೊಳಗೆಲ್ಲಂ
ತವೆ ಪೋದುದು ಜಳಕೇಳಿಯ
ತವಕಂ ಮತ್ತವರ ಬಗೆಯೊಳದನಱಿದರಸಂ ೧೫೩

ವಚನ : ನಿವಾರಿತಜಳಕ್ರೀಡಾವಸರನಾಗಿ

ಕಂದ : ಕರಿಣೀವೃಂದಂ ಬೆರಸಿದ
ಕರಿಪತಿ ನೀರಾಟವಾಡಿ ಪೊಱಮಡುವಂತಾ
ನರಪತಿ ಪೊಱಮಟ್ಟಂ ಸೌಂ
ದರಿಯರ್ ಬೆರಸಾಗಳಾ ಸರೋವರದಿಂದಂ ೧೫೪

ವಚನ : ಅಂತು ಪೊಱಮಡುವಾಗಳ್

ಉತ್ಪಲಮಾಲೆ

ಅಂದುಗೆಯೊಳ್ ತೊಡಂಕಿ ಬರುತಿರ್ದ ಮೃಣಾಳಮನಂಜೆವಿಂಡು ಕಂ
ಡಂದು ಕರ್ದುಂಕೆ ಬಲ್ಸೆಳೆವುತಿರ್ದೊಡವಂ ಬಿದಜಟ್ಟಿ ಸೋವುತುಂ
ಸೌಂದರಿಯರ್ ಬರಲ್ಕೆ ಸಿಮುಗೆನ್ನನೆ ಬಿಸ್ಸನೆಮಾಡಿ ಪೋಪುದ
ತ್ರೆಂದೊಲವಿಂಗೆ ಕಾಲ್ಪಿಡುವವೊಲ್ ತೆರೆಪೊಯ್ವುತುಮಿರ್ದುದಾಕ್ಷಣಂ ೧೫೫

ವಚನ : ಬಂದು ತಡಿಯೊಳ್ ನಿಂದು ನೋಳ್ಪಾಗಳ್

ಕಂದ : ಓಕುಳಿಯನಾಡಿ ವನಿತಾ
ನೀಕಂ ಪೊಱಮಟ್ಟು ಪೋಪುದುಂ ಬಱಿದಾಗಿ
ರ್ದಾ ಕೊಳನಿಳಿದಾಯ್ತಕ್ಷಿಗೆ
ಜೀಕೆಂಬ ನಿಧಾನಮೆತ್ತಿದೊಡೆ ಕುಳಿಯನ್ನಂ ೧೫೬

ವಚನ : ಅದಲ್ಲದೆಯುಂ

ಮತ್ತೇಭವಿಕ್ರೀಡಿತ

ಸಲಿಲಕ್ರೀಡೆಯೊಳಂಗನಾಂಗ ಗಳಿತಂ ಕಸ್ತೂರಿಕಾಕರ್ದಮಂ
ವಿಳಸತ್ಕುಂಕುಮಕಲ್ಕಮುನ್ಮಳಯಜಕ್ಷೋದಂ ಸುಕರ್ಪೂರ ಮುಂ
ಜುಳರೇಣುಬ್ರಜಮುಂ ತರಂಗವಶದಿಂ ಮೇಲೆಲ್ಲಿಯುಂ ತೀಂಕಲಾ
ಜಲದಲ್ಲಿಕ್ಕಿದ ರಂಗವಾಲಿಯೆನೆ ಕಣ್ಗಿಂಬಾದುದಾ ಪೂಗೊಳಂ ೧೫೭

ವಚನ : ಅನಂತರಂ

ಕಂದ : ವದನಂ ಘನಸೀತ್ಕಾರದ
ಸದನಂ ಕಾಯಂ ವಿಶೇಷಪುಳಕನಿಕಾಯಂ
ಸುದತಿಯರ ಜಲಕ್ರೀಡಾ
ಪದವಿರತಮುದಾದುದುಷ್ಣಪೀಡಾವಿರತಂ ೧೫೮

ಶಾರ್ದೂಲವಿಕ್ರೀಡಿತ

ಹಸ್ತಸ್ವಸ್ತಿಕಮೊಪ್ಪಿತೋಱಿತ ಕುಚಕುಂಭದ್ವಂದ್ವದೊಳ್ ನಾಂದ ಸ
ದ್ವಸ್ತ್ರಂ ಪತ್ರಿರಲಾಸ್ಯದರ್ಪಣವಿಳಾಸಂ ಮೇಲೆ ಲೇಸಾಗಿ ವಿನ್ಯ
ಸ್ತಾಷ್ಟಚ್ಛವಿಚಾರಂ ಪಲ್ಲವಮುದೆಯ್ದಿಂಬಾಗೆ ನಾರೀಜನಂ
ಶಸ್ತ್ರಂ ಮನ್ಮಥಮುತ್ರದೇವಿಯರವೊಲ್ ತಾಳ್ದತ್ತು ಮಾಂಗಲ್ಯಮಂ ೧೫೯

ವಚನ : ಮತ್ತಂ

ಚಂಪಕಮಾಲೆ

ಅಡಿಗಡಿಗೆತ್ತಿ ಸಾಪಗಿಸಿದತ್ತು ಸಡಿಲ್ದುಡೆನೂಲನಂದು ನಾಂ
ದಡಸಿ ಸುರುಳ್ದು ಬೀಳ್ವ ಪೊಸವೋಲುದನುತ್ಕುಚಮಂಡಳಂಗಳ
ಟ್ಟಿಡೆಯೊಳೆ ಸಾರ್ಚಿದತ್ತು ಪೆಗಲೊಳ್ ಕೆದಱಿರ್ದುರುಕೇಶಪಾಶಮಂ
ಕೊಡಹಿ ಕಡಂಗಿ ನೂಂಕಿದುದು ಬೆನ್ನೊಳಮೆಯ್ದು ಣೆದಾ ವಧೂಜನಂ ೧೬೦

ವಚನ: ಆಪೊತ್ತಿನೊಳ್

ಚಂಪಕಮಾಲೆ

ವನಿತೆಯುರಂಗಸಂಗಸುಖಮಂ ಪಡೆದೊಪ್ಪಮನಾಳ್ದೆ ವಿನ್ನೆಗಂ
ಘನಸುಖದಿಂದಗಲ್ಚಿಸಿದರಿನ್ನಿಪರೆಂದುಱಿತನಾಂದ ಸೀರೆಗಳ್
ತನುವನೆ ಪತ್ತಿಕೊಂಡಗಲಲಾಱದೆ ದುಃಖದೆ ಕೂಡೆ ಕಣ್ಣನೀ
ರ್ವನಿಗಳನಿಕ್ಕುವಂತಿರುದಬಿಂದುಗಳಾವಳಿ ಬಿಳ್ದುದೆತ್ತಲುಂ ೧೬೧

ವಚನ: ಆಗಳ್ ಭಾಂಡಾಗಾರಾಧಿಕಾರನಿಯುಕ್ತರಪ್ಪ ಗೃಹಮಹತ್ತರಮುಖ್ಯರ್ ತಂದುಕೊಟ್ಟ ದೇವಾಂಗಯೋಗ್ಯ ದೇವಾಂಗಾದಿ ಪ್ರಶಸ್ತವಿಸ್ತೃತವಸ್ತ್ರಂಗಳನುಟ್ಟು ನವ ವಿಧಾಭಿನವಮಣಿಕೇವಣದಿನಂದಂಬಡೆದಾಭರಣಂಗಳಂ ತೊಟ್ಟು ತಾನುಂ ಶೃಂಗಾರವತೀ ಮಹಾದೇವಿಯುಂ ಪೊಸಶೃಂಗಾರಭಂಗಿಯನಂಗೀಕರಿಸಿ ಬಳಿಯಮಖಿಳವಿಳಾಸಿನೀಜನಕ್ಕಂ ಮುಂದಿಳಿಪಿದ ವಸನಕುಸುಮಾನುಲೇಪನ ಭೂಷಣಕಳಾಪಂಗಳನೀಯಲೊಡಮವರು ಮೆಯ್ದೆ ಕೈಗೆಯ್ದು ಬಳಸಿನಿಂದಿರೆ

ಕಂದ: ವಾರಸ್ತ್ರೀಯರ ನಡುವೆ ಮ
ಹೀರಮಣಂ ದೇವಿವೆರಸು ಕಣ್ಗೆಸೆದಿರ್ದಂ
ತಾರೆಗಳ ನಡುವೆ ಚಂದ್ರಂ
ಶ್ರೀರೋಹಿಣಿವೆರಸಿ ತೋರ್ಕೆವೆತ್ತಿರ್ಪನ್ನಂ ೧೬೨

ವಚನ: ಮತ್ತಂ ವನಮಹತ್ತರನಂ ಬರಿಸಿ

ಮತ್ತೇಭವಿಕ್ರೀಡಿತ

ಇದು ಕೌಂಗಿಂಗಿದು ನಾಗವಲ್ಲಿಗಿದು ಮಲ್ಲೀಮಲ್ಲಿಗಿಮ್ಮಾವಿಗಿಂ
ತಿದು ಮತ್ತೆಂದುಱಿ ಬೇಱೆವೇಱಿ ಪೆಸರ್ಗೊಂಡೊಳ್ ಸೀರೆಯಂ ವಸ್ತುಮಂ
ಪದೆಮಂ ನಂದನಪಂಗೆ ಕೊಟ್ಟನಧಿಪಂ ದಾರಿದ್ರಮೆಯ್ದೋಡುವಂ
ದದಿನಲ್ಲಿರ್ದ ಮರಕ್ಕಮಾದೊಡುಡಕೊಟ್ಟಂ ಮಂದಿಗೇಂ ಪೇಳ್ವುದೋ ೧೬೩

ವಚನ: ಇಂತು ಸಫಳೀಕೃತಸಮಸ್ತಾರ್ಥಿಸಾರ್ಥಮನೋರಥನಾಗಿಯಾ ಧರ್ಮನಾಥಮಹಾರಾಜಂ ಕುಸುಮಾಕರೋದ್ಯಾನದಿಂ ಪೊಱಮಟ್ಟು ಪಟ್ಟದರಸಿವೆರಸು ಪಣ್ಣಿದ ಪಟ್ಟದಾನೆಯನೇಱಿ ಪರಿಕೃತಸಕಳಪರಿವಾರಪರಿವೃತನಲ್ಲಿಂ ತಳರ್ದು

ಉತ್ಪಲಮಾಲೆ

ಮಂಡಳಿಗೊಂಡು ಬೆಳ್ಗೊಡೆಗಳಂಬರಮಂ ಪುದಿಯಲ್ ಸಮಂತು ಭೂ
ಮಂಡಳಮಂ ಮುಸುಂಕೆ ಘನವಾರಣವಾಜಿಪದಾತಿಸೈನ್ಯಕಂ
ಮಂಡನರತ್ನರಾಜಿಕಿರಣಪ್ರಸರಂ ದೆಸೆಯಂ ತುಡುಂಕಲಾ
ಖಂಡಳನೆಂಬಿನಂ ತಡೆಯದೆಯ್ದಿದನಾ ನಿಜರಾಜಧಾನಿಯಂ ೧೬೪

ವಚನ: ಆ ಪುರಗೋಪುರದ್ವಾರಮಂ ಪುಗುವಲ್ಲಿ

ಮಹಾಸ್ರಗ್ಧರೆ

ವನವಾರಿ ಕ್ರೀಡೆಯಂ ನಿರ್ಮಿಸಿ ಜಗದಧಿಪಂ ಬಂದನೆಂದಾ ಪುರಸ್ತ್ರೀ
ಜನಮೆಲ್ಲಂ ನೋಳ್ಪ ವಾಂಛಾತುರತೆಯನಿರದೆಯ್ತಂದು ನಿಂದಿರ್ದು ಕಾಮಂ
ಗಿನಿತೊಂದಾಶ್ಚರ್ಯರೂಪಂ ಘಟಿಸದಿನಿತುಸಂಪತ್ತಿ ಶಕ್ರಂಗಮಿಲ್ಲೆಂ
ದೆನುತುಂ ನೋಡಲ್ಕೆ ಪೊಕ್ಕಂ ಪುರದೊಳಖಿಳ ದೃಕ್ಕೈರವಾನಂದಚಂದ್ರಂ ೧೬೫

ವಚನ: ಅಂತು ಪುರಮನರಮನೆಯಂ ಪೊಕ್ಕು ರಾಜಾಧಿರಾಜಂ ರಾಜಾಂಗಣದೊಳ್ ನಿಂದು ಗಂಧಗಜರಾಜನಿಂದಿಳಿವುದುಮಹಮಹಮಿಕಾಭಿವಾದಕ ಸಕಳಮೇದಿನೀಪಾಳಕರ್ ತಂತಮ್ಮ ಮಾಣಿಕ್ಯಮಯಕಿರೀಟಕೋಟಿಕಿರಣಮೇಳಾಪ ದೀಪಕಳಾಪದಿಂ ತದೀಯಚರಣಯುಗಳಕ್ಕಾರತಿಯನೆತ್ತುತ್ತುಮಿರೆ

ಮತ್ತೇಭವಿಕ್ರೀಡಿತ

ಕೆಲರಂ ಚಾಳಿತಮೌಳಿಯಿಂದೆ ಕೆಲರಂ ಹಸ್ತಾಂಗುಳೀ ಚಾಳದಿಂ
ಕೆಲರಂ ವೀಕ್ಷಣಭಂಗಿಯಿಂದೆ ಕೆಲರಂ ತಾಂಬೂಳದಾನಂಗಳಿಂ
ಒಲವಿಂ ಬೀಳ್ಕೊಡೆ ಕೈಗಳಂ ಮುಗಿದು ಭಾಳಾಗ್ರಕ್ಕೆ ತಂದಿರ್ದದಂ
ಸಲೆಪೋದತ್ತು ಸಸೈನ್ಯಕಂ ನಿಜನಿಜಾವಾಸಕ್ಕೆ ರಾಜನ್ಯಕಂ ೧೬೬

ವಚನ: ಮತ್ತಮುತ್ತುಂಗಮಣಿಮಯಮಂಡಪಮಧ್ಯಸಮುದ್ಭಾಸಿತ ಕನತ್ಕನಕಮಯಸಿಂಹಾಸನಸುಖಾಸೀನನಾಗಿರ್ಪುದುಮಾಘೂರ್ಣಿತ ಮಾಂಗಳಿಕಶಂಖಭೇರೀದುಂದುಭಿಸಂದೋಹಗಂಭೀರಧ್ವಾನಮೆಣ್ದೆಸೆಯಂ ಪಳಂಚಲೆಯಲಾಗಳಂಕಾರಕಳಿತಕಮನೀಯಕಾಮಿನೀನಿಕರಮನೇಕ ಕಳಧೌತ ಕಳಧೌತಭಾಜನ ಸಮಾಜವಿನಿಹಿತಸರೋಜರಾಗ ನೀರಾಜನರಾಜಿಗಳನೆತ್ತುವವಸರದೊಳ್ ಮಂಗಳಪಾಠಕರ್ ನೆರೆದು ಮಂಗಳವೃತ್ತಂಗಳ ನಿಂತೆಂದೋದಿದರ್

ಮತ್ತೇಭವಿಕ್ರೀಡಿತ

ನಲವಿಂ ನಿಮ್ಮಯ ರಾಜ್ಯದಭ್ಯುದಯದೊಳ್ ಪೆರ್ಚಿದರ್ ಲಕ್ಷ್ಮೀಸದ್ವ
ಕ್ಷಲಸತ್ಕಾಂತೆಯರೆತ್ತುವಾರತಿಯ ಮಾಂಗಲ್ಯಕ್ಕೆ ಮಾಂಗಲ್ಯಮಂ
ಸಲಿಸುತ್ತುಂ ಜಗತ್ತ್ರಯಾಧಿಪತಿ ನಿನ್ನೊಳ್ ದೇವದೇವಾರ್ಚಿತಾ
ನೆಲೆಗೊಂಡಾವಗಮಿಕ್ಕೆ ಕೂಡೆ ವಿಜಯಂ ಭದ್ರಂ ಶುಭಂ ಮಂಗಳಂ ೧೬೭

ಮಹಾಸ್ರಗ್ಧರೆ

ಜನತಾ ನೀಲೋತ್ಪಲಕ್ಕಾವಗಮೊಗೆಗೆ ಮಹಾನಂದನಂದದ್ವಿಕಾಸಂ
ಜನಿತೋದ್ಯತ್ತಾಪಮಾದಂ ಕೆಡುಗಮೃತಕಳಾವ್ಯಕ್ತಿಮಾಂಗಲ್ಯದಿಂದಂ
ಘನಮಿಥ್ಯಾತ್ವಾಂಧಕಾರಸ್ಥಿತಿಗೆಸಗುಗೆ ನಿರ್ನಾಶದೊಂದೇಳ್ಗೆ ನಿನ್ನಿಂ
ಜಿನಧರ್ಮಾಂಭೋಧಿ ಪೆರ್ಚಂ ತಳೆದು ಮಿಗುಗೆಲೇದೇವ ಭೂಚಕ್ರಚಂದ್ರಂ ೧೬೮

ವಚನ : ಎಂದೋದುವ ಮಂಗಳವೃತ್ತಂಗಳನಾಲಿಸುತ್ತಮುವರ್ ತಳಿದ ಮಂಗಳಾಕ್ಷತಂಗಳನುತ್ತಮಾಂಗದೊಳಾಂತುಕೊಳುತ್ತುಮಿರಲಾ ಪ್ರಸ್ತಾವನಾನುಗತಸಮುಚಿತ ವಿಕಟನಾಟಕಪಟುನಟನಾವಿನೋದವಿಲೋಕನ ಸಮನಂತರಮವರಂ ಕಳಿಪಿ ಬಳಿಯಂ ಮಜ್ಜನಭೋಜನವ್ಯಾಪಾರಮಂ ತೀರ್ಚಿ ಸುಖದಿನಿರುತ್ತುಮಿರೆ

ಮಹಾಸ್ರಗ್ಧರೆ

ಪಿರಿದುಂ ಸಂಸಾರಸೌಖ್ಯಾನುಭವವಿಭವಮಂ ತಾಳ್ದಿದಂ ಧರ್ಮನಾಥಂ
ಪರಮೋದ್ಯದ್ಧೀಸನಾಥಂ ಸುಜನವಿನುತಪುಣ್ಯಂ ಚರಿತ್ರಾಗ್ರಗಣ್ಯಂ
ಪರಿಣಸ್ಯದ್ಭಾವಜಂ ಬಾಹುಬಲಿಸುಕವಿರಾಜಂ ಗುಣಾಂಭೋಧಿರಾಜಂ
ಧರಣೀಪಾಲಾರ್ಚಿತ ಶ್ರೀಪದಸರಸಿರುಹಂ ಚಾತುರೀಜನ್ಮಗೇಹಂ ೧೬೯

ಗದ್ಯ : ಇದು ಸಕಲಭುವನಜನವಿನೂಯಮಾನಾನೂನ ಮಹಿಮಾಮಾನನೀಯ
ಪರಮಜಿನಸಮಯಕಮಳಿನೀಕಳಹಂಸಾಯಮಾನ ಶ್ರೀಮನ್ನಯಕೀರ್ತಿ
ದೇವಪ್ರಸಾದಸಂಪಾದಪಾದನಿಧಾನದೀಪವರ್ತಿಯುಭಯಭಾಷಾ
ಕವಿಚಕ್ರವರ್ತಿ ಬಾಹುಬಲಿಪಂಡಿತದೇವಪರಿನಿರ್ಮಿತಮಪ್ಪ
ಧರ್ಮನಾಥಪುರಾಣದೊಳ್ ವಸಂತೋತ್ಸವ ವನ
ಜಳಕೇಳೀವಿನೋದಪರಿವ್ಯಾವರ್ಣನಂ

**ಚತುರ್ದಶಾಶ್ವಾಸಂ**

# ಪಂಚದಶಾಶ್ವಾಸಂ

ಕಂದ: ಶ್ರೀಲಲನಾ ಕುಚಕಳಶಪ
ಮಾಲಿಂಗನ ಭಂಗಿವೆತ್ತ ಪೇರುರದೊಳ್ ಪರಿ
ಲಾಲಿಸಿ ಕಿಣಾಂಕಮೆಸೆದಂ
ಲೀಲಾಪತಿಪರಸಚತುರಕವಿಕುಳತಿಳಕಂ ೧

ವಚನ: ಅಂತು ಸುಖದಿನಿರ್ಪುದುಮನ್ನೆಗಂ

ಮತ್ತೇಭವಿಕ್ರೀಡಿತ

ಘನವೇಳಾವನಮಧ್ಯದೊಳ್ ಪಡುವಣಂಭೋರಾಸಿ ನೀರಂ ಕರಂ
ದಿನಪಂಗೀಯಲುಗುರ್ವನಂಬರಗತಿಶ್ರಾಂತಂಗೆ ಕಂಡಿಲ್ಲ ದೇ
ವನವೊಲಾಂ ಜಳಕೇಳಿಯಂ ರಚಿಸುವೆಂ ದುಸ್ಸಹ್ಯತೇಜಪ್ರಭಾ
ವನೆಯಿಂದಂ ಸಮನೆಂದು ಮಚ್ಚರಿಸಿದಂತುಗ್ರಾಂಶು ಬಂದೆಯ್ದಿದಂ ೨

ವಚನ: ಆಗಳ್

ಚಂಪಕಮಾಲೆ

ತೆರೆತೆರೆಗೊಂಡು ಬಾಸರಬಿಸಿಲ್ ಕೆಲದೊಳ್ ತಿವರಲ್ಲಿ ಬೆಟ್ಟದೊಳ್
ಪರಕಲಿಸುತ್ತುಮಿರ್ದು ಪರಿರಂಜಿಸಿದತ್ತು ದಿವಾಕರಪ್ರಭಾ
ಪರಿಕರದುಷ್ಣಪೀಡನನಿವಾರಣಕಾರಣಮಾಗಿ ಧಾರಿಣೀ
ತರುಣಿ ಸಮಂತು ಬಾಸರದ ಸೀರೆಯನೆಯ್ದೆ ಮುಸುಂಕಿದಂದದಿಂ ೩

ವಚನ: ಆ ಪ್ರಸ್ಥಾವದೊಳ್

ಮತ್ತೇಭವಿಕ್ರೀಡಿತ

ಪೊಸಕೆಂಬಟ್ಟೆಯನುಟ್ಟು ಮಿಂಚಡರ್ದು ಕೆಂಪಿಂ ಕೂಡೆ ಚೆಲ್ವಾಗಿ ರಂ
ಜಿಸುವೊಂದಡ್ಡಣಮುಂ ದಲೊಡ್ಡಿಸಿ ವಿಸರ್ಪನ್ಮಂಡಳಾಗ್ರಾಂಶುವಿಂ
ದೆಸೆದಂದಟ್ಟೆಬರುತ್ತುಮಿರ್ಪ ತಮಮಂ ಮಾಱಾಂತು ಪೊಯ್ವಲ್ಕೆ ಲೋ
ಪಿಸಿ ನಿಂದಿರ್ದವೊಲೊಪ್ಪಿದಂ ದಿನಕರಂ ಪ್ರೋದ್ರಿಕ್ತ ರಕ್ತಾಕರಂ ೪

ಕಂದ: ವಾರುಣಿಯುಂ ಸೇವಿಸುವಾ ಮ
ನೋರಥದಿಂ ಬಿಟ್ಟು ಪೂರ್ವಗೋತ್ರಸ್ಥಿತಿಯಿಂ
ಸೂರಂ ನಡದೊಡೆ ನಭಮುಪ
ಸಾರಸಿತುದ್ವೃತ್ತಿಗಾವನೋ ಸೈರಿಸುವಂ ೫

ಉತ್ಪಲಮಾಲೆ
ಕತ್ತಲೆ ಸುತ್ತಲೆ ಸುತ್ತಲುಂ ಪರೆದು ಭಾಸ್ಕರನಂ ಬೆದಱಿಟ್ಟೆ ಮುಟ್ಟಿಬೆಂ
ಬತ್ತಿ ಬರುತ್ತಿರಲ್ಕಿಗಿದುಬಿಟ್ಟು ನಿಜಾಂಬರಮುಂ ಸ್ವಪಾದಮುಂ
ಮತ್ತುಱಿನೀಳ್ದ ಮುಂದೆ ನಿಡುಮೆಟ್ಟೆ ಕರಂ ಪರಿದೋಡಿ ಪೋಗಿ ತಾಂ
ಪತ್ತಿದನಸ್ತಭೂಧರಮನೆಂಬವೊಲೊಪ್ಪಿದುದರ್ಕಮಂಡಳಂ ೬

ವಚನ: ತದಸ್ತಾಚಳಮಸ್ತಕದಲ್ಲಿ ಚೂಡಾಮಣಿಯೆಂಬಂತೆ ಕಡುರಮಣೀಯ ಮಾಗೆ

ಚಂಪಕಮಾಲೆ
ಬಳಸಿಬರುತ್ತುಮಿರ್ದ ಪವಮಾನನ ತೀವ್ರತರಾಭಿಘಾತದಿಂ
ಚಳಿಸಿ ಕಳಲ್ಚೆ ತೊಟ್ಟು ಹರಿದುನ್ನತಪತ್ರದೊಳೊಂದಿ ನಾಡೆಯುಂ
ವಿಳಸಿತಮೂಳಮುಂ ಶತವಿಶಾಖೆಯನಾಂತನಭೋಮಹೀಜದಿಂ
ಕಳಿಸದನಾದ ಪಣ್ಣೆನಿಸಿ ತೊಪ್ಪನೆ ಬಿಳ್ದುದು ಸೂರ್ಯಮಂಡಳಂ ೭

ಉತ್ಪಲಮಾಲೆ
ಪಿಂಬಗಲೆಂಬ ಹೇಮಕರನರ್ಯಮಮಂಡಳಮೆಂಬ ಘಟ್ಟಿ ಚೆ
ಲ್ವಂಬಡೆದೆಯ್ದೆ ಕಾಯ್ದು ಪೊಳಪೇಱಿಲುದಗ್ರಕರಾಗ್ರದಿಕ್ಕುಳಿಂ
ದಂ ಬಿಡದೊತ್ತಿ ಸಾರ್ಚಿಯಪರಾಬ್ಧಿಯ ನೀರೊಳಗಳ್ದಿದಂ ದಲೆಂ
ದೆಂಬವೊಲರ್ಕಬಿಂಬಮುಱಿನುಳ್ಗಿದುದುಣ್ಮುವ ರಾಗರಂಜಿತಂ ೮

ವಚನ: ಆ ಪೊತ್ತಿನೊಳ್

ಮಹಾಸ್ರಗ್ಧರೆ
ಕಹಳಾಭೇರೀಮೃದಂಗಪ್ರತತಿವಿರುತಿವೇಳಾಪಕಂ ಕೂಡೆ ಘೋರೆಂ
ದು ಹಟಜ್ಜೈನೇಂದ್ರಗೇಹಂಗಳೊಳೆಸೆದುದು ಸಂಗೀತವಾದ್ಯಪ್ರನೃತ್ಯೋ
ದ್ಧ ಹಳಾನಂದಪ್ರಭಾವಕ್ಕನುಗತಮೆನೆ ದೇದೀಪ್ಯಮಾನಪ್ರದೀಪೋ
ನ್ನಹಿಮಂ ಮೆಯ್ವೆರ್ಚೆ ಚೆಲ್ವಂ ತಳೆದುದಪರಸಂಧ್ಯಾನುವೇಳಾವಿಳಾಸಂ ೯

ಸ್ರಗ್ಧರೆ
ನಾನಾಜಾತೀಯ ಪೂಜಾತಿಶಯದ ರಚನಾಕೌತುಕಂ ಸರ್ವದೇವ
ಸ್ಥಾನವ್ರಾತಂಗಳೊಳ್ ಕಣ್ಗೊಡರಿಸೆ ಸುಖಮುಂ ಧೂಪದುದ್ದಾಮ ಧೂಮೋ
ತ್ಥಾನಂ ಪ್ರಾಸಾದಪಾರಾವತವಿತತಿಗೆ ತುಚ್ಛೇತರಚ್ಛಾಯಿಕಾ ಸಂ
ತಾನಶ್ರೀಯುಂ ನಿಮಿರ್ಚಲ್ ಮೆಱಿದುದಪರಸಂಧ್ಯಾದಿಕಾಲಾನುಬಂಧಂ ೧೦

ವಚನ: ಅಪರಾಹ್ಣಕಾಲದೊಡವಶ್ಯಂ ಕರಣೀಯನಿತ್ಯದೇವತಾರ್ಚನಾಕ್ರಿಯಾನಿಯಾಮಮನಾ ದೇವಾಧಿದೇವಂ ಜಿನದೇವಾಗಾರದೊಳ್ ತೀರ್ಚಿ ತೀರ್ಥನಾಥಂಗೆ ಪುಷ್ಪಾಂಜಳಿಯನಿತ್ತು ಮುಕುಳಿತಪಾಣಿಪುಟರಾಗಾಭೋಗದಿಂ ನಿಜಲಲಾಟತಟಪಲ್ಲಿಯ ಪಲ್ಲವಿತಂಮಾಡಿ

ಕಂದ: ಅಸ್ತಮನೊರ್ವ[1]ಯ್ದಿ[1]ದ ತೇ
ಜಸ್ಥಿತಿಯಿಂದೊರ್ವಯುಗ್ರನಾಗದ ಮತ್ತಂ
ನಿಸ್ತೇಜನಾಗದೊರ್ವ ಸ
ಮಸ್ತಜಗನ್ಮಿತ್ರನಾದೆ ನೀನೆ ಜಿನೇಶಾ ೧೧

ಚಂಪಕಮಾಲೆ
ಶಶಿರವಿಕೋಟಿದೀಧಿತಿಯೊಳೊಂದಿದ ನಿನ್ನಯ ದಿವ್ಯದೇಹದೊಳ್
ಪಸರಿಪ ಚೆಲ್ವನುಣ್ಕೆಗು ಚಿತ್ತದ ಕತ್ತಲೆಯುಂ ಬಹಿಸ್ತಮೋ
ವಿಸರಮನೊರ್ವೊದಲ್ ಕಿಡಿಸಿದತ್ತು ದಲೀದೃಶತೇಜದೇಳ್ಗೆ ಭಾ
ವಿಸುವಡೆ ದೇವರೆಂಬ ಪೆಸರ್ವೊತ್ತವರ್ಗುಂಟೆ ಜಗತ್ತ್ರಯಾರ್ಚಿತಾ ೧೨

ವಚನ: ಇಂತೆಂದು ತತ್ಸಮಯಸಮುಚಿತ ಜಿನಸಮಯಾಭಿರೂಪರೂಪ ಗುಣವಸ್ತುಸ್ತವನವಿಶೇಷದಿಂ ವೀತರಾಗಸರ್ವಜ್ಞನಂ ಸ್ತುತಿಗೆಯ್ದು ಗಂಧೋದಕಬಿಂದುಮಂ ತಳಿವ ಸಿದ್ಧಶೇಷಾಕ್ಷತಪ್ರಸರದಿಂದಳಕಲತಾಜಾಳಕಮುಂ ಕುಸುಮಿತಂ ಮಾಡಿ ಚಂದನತಿಳಕಮುಂ ಭಾಳತಳದೊಳಂಗೀಕರಿಸಿ ಬಸದಿಯಿಂ ಪೊಱಮಟ್ಟು ಬಂದು ಸಭಾಭವನಭದ್ರವೇದೀಮಧ್ಯದೊಳಪರಿಮಿತ ಪರಿಜನಂಬೆರಸು ಕುಳ್ಳಿರ್ದು ಗಾಣಿಕ್ಯನೀರಾಜಿತಮಾಣಿಕ್ಯದೀಪನುಂ ಕವಿಜನಕೃತಪ್ರಶಂಸಾಳಾಪನುಂ ಕಾರ್ಯಾವಿಜ್ಞಾನೋತ್ಸುಕಕೃತಭೂಪನುಂ ಕೀರ್ತಿಸ್ಫೂರ್ತಿಪರಿಕೀರ್ತನಸಮರ್ಥಿತ ವನೀಪನುಂ ಸೇವಾವಿನೋದವಿಭಕ್ತಿನೀಭೂತವಿಳಾ[2]ಸ[2]ಕಳಾಪನುಂ ಯುಕ್ತಾಯುಕ್ತ ವಿಚಾರವಿವೇಕನಿಯುಕ್ತ ನಿಖಿಳವಾದಿವಿವಾದಕೋಳಾಹಳಮೇಳಾಪನುಮಾಗಿ ಸುಖದಿನಿರ್ಪುದುಂ

ಮಹಾಸ್ರಗ್ಧರೆ
ಪಿರಿದುಂ ಸುತ್ತಿರ್ದ ಕೈದೀವಿಗೆಗಳ ಬಳಗಂ ತಳ್ತು ತಾರಾಳಿಯೆಂಬಂ
ತಿರೆ ವಿಸ್ಫಾರೇಂದ್ರನೀಳಸ್ಥಳಿ ಗಗನಮಿದೆಂಬಂತೆ ಚೆಲ್ವಾಗೆ ದೇವಂ
ನರನಾರೀಲೋಚನೇಂದೀವರವನ ಪರಮಾನಂದಸಂಪಾದಕಂ ಭಾ
ಸುರತಾರಾನಾಥನೆಂಬಂತಿರೆ ಸೊಗಯಿಸಿದಂ ಸತ್ಕಳಾಲಾಲನೀಯಂ ೧೩

ವಚನ: ತದನಂತರಂ

1 ಯಿದ (ಗಚ) 2 ಸಿನೀ (ಗ)

ಮತ್ತೇಭವಿಕ್ರೀಡಿತ

ರವಿಯೆನ್ನಾಸೆಗೆ ಬಂದನೆಂದು ವರುಣಂ ಮಿತ್ರಂಗಿದಿರ್ವೋಗಿಯು
ತ್ಸವದಿಂ ಮಾಣಿಕದರ್ಘ್ಯಮಿತ್ತೊಡೆ ತದೀಯೋದ್ವೃತ್ತ ಭಾನಾಳಿಕಾ
ಪ್ಲವನಾ ತಾಣದೊಳೆಲ್ಲಮೆಯ್ದೆ ಪಸರಂಜೆತ್ತಿರ್ದುದೆಂಬಂತೆ ಪ
ರ್ಬುವ ನಲ್ಸಂಜೆಯ ಕೆಂಪು ಸೊಂಪುವಡೆದತ್ತಂ ರಂಜಿಸಿತ್ತಾಕ್ಷಣಂ ೧೩

ಚಂಪಕಮಾಲೆ

ಸಳಸಳಿಸುತ್ತಮಿರ್ದ ಪೊಸಮಾಲೆಯ ಚೆಲ್ವ ಕದಂಬಗಂಪನ
ಗ್ಗಳಿಸಿ ಕವಲ್ತೆಗೊಂಡು ತಱುಗಿರ್ದ ಗೃಹಾಳಿಗಳಲ್ಲಿ ಪೊಕ್ಕು ಬೆಂ
ಬಳಿಯೊಳೆ ಬಟ್ಟೆಗಾಣದೆ ಕರಂ ಸುಳಿದಾಡೆ ನುಸುಳ್ದ ಬೀದಿಯೊಳ್
ಮಲಯಪವಮಾನಣಂ ಬಿಡದೆ ಬೀಸಿದುಮೊಯ್ಯನೆ ಶೈತ್ಯಧಾರಣಂ ೧೪

ವಚನ: ಇಂತು ಸಾಯಂತನಸಮಯಸಮೀರಣಂ ಸುಖದ ಸೊಕ್ಕನುಜ್ಜೀವಿಸುತ್ತುಂ ಬೀಸಿದಾಗಳ್

*

ಚಂಪಕಮಾಲೆ

ಬಿಡವಮರ್ದಪ್ಪಿಕೊಂಡು ನಡುಬೇಗದೆ ಚುಂಬಿಸಿ ಮುದ್ದುಗೆಯ್ದು ಕೈ
ಮಡಗದೆ ಕೂಡಿ ಕೋಡುಮನಗಲ್ಚಿ[ಸಿ] ಸಿಂ[1][ಬ][1]ಗಲಿಂಗೆ ಕಾಯ್ದು ಕಣ್
ಕಿಡಿಕಿಡಿಯೋಱುತುಂ ತಡಿಗಳಂ ಕಡೆಸಾರ್ದುಱು ಬೇಱುವೇಱು ತಾಂ
ಮಿಡುಕುವ ಚಕ್ರವಕ್ಕಿಗಳ ದಂಪತಿಗಳ್ ಪೊಱಮಟ್ಟವಾಕ್ಷಣಂ ೧೫

ಕಂದ: ತಾವರೆಯಲರೆಸಳ್ವಾಸಿನೊ
ಳಾ ಮಧುಪಂ ಸೋಂಕಿ ಕುಳ್ಳಿದಿರ್ದಳಿಗೀತಾ
ರಾವಮನಾಲಿಸುತಿರ್ಪನು
ಭಾವಮುಮಂ ನೆನೆದು ನೊಂದುದು ಚಕ್ರಂ ೧೬

ಚಂಪಕಮಾಲೆ

ಬಿರುಸೆಳೆದೆಯ್ದೆ ಸಣ್ಣಮಳಲಂ ಪಸೆಯಾಗಿ ಕಳಲ್ದು ಬೀಳ್ದ ತಾ
ವರೆಗಳೆಸಳ್ಗಳಿಂ ಸಮೆದ ಪಾಸುಮನರ್ಪಿಸಿ ಶೀಕರಂಗಳಂ
ತರಳತರಂಗಮಾಳಿಕೆ ರಥಾಂಗವಧೂಟಿಗೆ ಶೀತಳಕ್ರಿಯಾ
ಪರಿಕರಭಾರಮುಂ ಕೆಳದಿಯಂತಿರೆ ನಿರ್ಮಿಸಿದತ್ತು ಮೋಹದಿಂ ೧೭

ವಚನ: ಇಂತು ಮರುಕಚಕ್ರವಾಕನಿಕಾಯಂ ವಿಯೋಗವಿಕಾರಾತಿರೇಕಪರಿಪಾಕದಿಂದಸ್ತೋಕಶೋಕವ್ಯಾಕುಳಮಾಗಿರ್ಪುದುಂ

---

1 ಗ (ಕಗಚ) * ಸೂರ್ಯಾಸ್ತಮಾನ (ಗಚ)

ಉತ್ಪಲಮಾಲೆ

ಅಸ್ತಗಿರೀಂದ್ರಮಸ್ತಕದ ಗಹ್ವರದೊಳ್ ಸಲೆಬಿಳ್ದು ಪೋದನೋ
ವಿಸ್ತೃತಸಿಂಹ ತದ್ಪನದ ಕುತ್ತುಱುತೂಳೀಗಳಡಂಗಿಪೋದನೋ
ದುಸ್ತರಮಾದ ಪಶ್ಚಿಮಸಮುದ್ರದ ಮಧ್ಯದೊಳಳ್ದು ಪೋದನೋ
ಶಸ್ತಮದೀಶನೆಂದುಱು ಪಲುಂಬಿದಳಬ್ಜಿನಿ ಕಾಣದರ್ಕನಂ ೧೮

ಮಹಾಸ್ರಗ್ಧರೆ

ಇನನೆನ್ನಂ ಬಿಟ್ಟುಪೋದಂ ಗಣಿಯಿಸದದನಾಸಿರ್ದೊಡಂ ರಾಜತಃಪೀ
ಡನಮಕ್ಕಿಂತೆಂದು ಪದ್ಮಾಲಯೆಯೆಸಳ್ಗದಮಂ ಗಾಢಮಾಗಿಕ್ಕಿದಳ್ ತಾ
ನೆನೆ ಸಂಕೋಚಂ ದಲಾಯ್ತಂಬುರುಹಮದಳಿ ಮೇಗಿರ್ದ ಪಣ್ದುಂಬಿ ತದ್ಬಂ
ಧನಮಂ ಪುಯ್ಯಲ್ಚಿ ಪೇಳ್ವಂತಮಮ ಮೊರೆವುತಿರ್ದತ್ತು ಗುಂಗುಮ್ಮೆನುತ್ತುಂ ೧೯

ಕಂದ: ಅಪರಾಶಾವಶನಾಗೀ
ತಪನಂ ಮುನ್ನೆನ್ನಮೇಲೆ ನೀಡಿದ ಕರಮುಮ
ನಪಸಾರಿಸಿದಂ ಚೀಯೆಂ
ದುಪತಾಪಿಸಿದಂತೆ ಮುಗಿದುದಂಭೋಜವನಂ ೨೦

ಪತಿ ಪೋದನೆಂದು ಮಧುಪಂ
ನುತಪದ್ಮಿನಿಯಾಸ್ಯಬಿಂಬಮಂ ಚುಂಬಿಸಲಾ
ಯ್ತುತಿಸಂಕುಚಿತಂ ಸದ್ಗುಣ
ವತಿಯರ್ ಮಲಿನಾತ್ಮರೊಲ್ದಡೀಯರ್ ಮೊಗಮಂ ೨೧

ವರಪದ್ಮಕೋಶದಗ್ರದೊ
ಳುರುಮಧುಕರಮೇಱಗಿ ಕುಳ್ಳಿದಿರ್ದೆಸೆದತ್ತು
ಸ್ಮರನೃಪನ ಪದ್ಮಕೋಶದೊ
ಳರಗಿನ ಪೊಸಮುದ್ರೆಯಂ ದಲಿಕ್ಕಿದ ತೆಱದಿಂ ೨೨

ಮತ್ತೇಭವಿಕ್ರೀಡಿತ

ಸಿರಿಯುಂ ತಾಳ್ದೊಡಮೊಳ್ಗುಣಂಬಡೆದೊಡಂ ಬ್ರಹ್ಮಂ ಮಗಂ ಬಾಳ್ವೊಡಂ
ಖರತೇಜಂ ಸಖನಾದೊಡಂ ಕಮಳಷಂಡಂ ಕೂಡೆ ಸಂಕೋಚಮಂ
ಧರಿಸುತ್ತಿರ್ದುದು ರಾತ್ರಿ ಕಾಲವಶದಿಂ ಸಾಮರ್ಥ್ಯಮುಂಟಾದೊಡಂ
ಧರೆಯೊಳ್ ಪ್ರಾಪ್ತಿಯನಾವನೋ ತೊಲಗಿಸಂ ಕಾಲಕ್ಕೆ ಬಂದಿರ್ದುದಂ ೨೩

ಚಂಪಕಮಾಲೆ

ಮಿಗಿಲೆನೆ ರಾಜಬಾಧೆಗೊಳಗಾಗಿ ಸರೋಜಿನಿ ನೊಂದು ರೂಪಮಂ
ಮುಗಿಯಲದಂ ಕುಮುದ್ವತಿ ನಿರೀಕ್ಷಿಸಿ ತಾಂ ನಗುವಂತರಲ್ದಿರಲ್
ಬಗೆವುಗೆ ಪೇಳ್ದು ಬಂಧನಮುಮಂ ಬಿಡಿಸಲ್ ನಳಿತೋಳ್ಗಳಿಂದ ನಂಟರಂ
ತೊಗೆದಳಿಗಳ್ ಕುಮುದ್ವತಿಗೆ ಬಂದೆಱಗಿರ್ದವು ನುಣ್ಚಿನುಂಗುತುಂ ೨೪

ಮಹಾಸ್ರಗ್ಧರೆ

ಎಮಗಂ ರಾಜಪ್ರಸಾದಂ ಪಿರಿದದಕನುಕೂಲಂ ತ್ರಿಯಾಮಾಬಲಂ ಮ
ತ್ತಮಿದುಂ ತಾರಾಬಲಂ ಕೂಡಿದಿದು ನೆಲಸಿದಳ್ ಪದ್ಮದ ಶ್ರೀಯುಮೆಮ್ಮೊಳ್
ಸಮಗೀ ಸಂಪತ್ತಿ ಕೈಗೂಡಿದುದಣಮಿಲ್ಲೆಂಬ ಸಂತೋಷದಿಂದಾ
ದಮೆ ಮೆಯ್ಯುರ್ಕುತ್ತುಮಿರ್ದತ್ತೆನೆ ಕುಮುದಕುಳಂ ತತ್ತರಳ್ದತ್ತದೆತ್ತಂ ೨೫

ಉತ್ಪಲಮಾಲೆ

ಮೂಡಣಭಾಗದಲ್ಲಿ ತಿಮಿರಪ್ರಸರಂ ತಲೆದೋಱೆ ಪರ್ವೆ ಪೆಂ
ಪೋಡವ ಸಂಜೆಗೆಂಪು ಪಡುಮಲ್ ಪರಿರಂಜಿಸಿ ತೋರ್ಕೆವೆತ್ತಿರಲ್
ಮಾಡೆಯುಮರ್ಧನಾರಿಯ ವಿಚಿತ್ರದ ತಪ್ಪರಮಂ ಸ್ವಮೂರ್ಧದೊಳ್
ಗಾಡಿಯನಿಕ್ಕಿದಂತಿರೆ ಮಹಾಹಭಟಂ ಪಡೆದತ್ತು ಚೋದ್ಯಮಂ ೨೬

ಕಂದ: ಇನ್ನನನಗಲ್ದಿರಲಾಱದೆ
ತನು ಕಂದಿಯಡಂಗಿಪೋದಳೆನೆ ಸಂಧ್ಯಾಕಾ
ಮಿನಿ ನೋಡೆನೋಡೆ ಕರಗಿದ
ಡನುರಕ್ತೆ ಪ್ರಿಯನ ವಿರಹಮಂ ಸೈರಿಪಳೇ ೨೭

ಮತ್ತೇಭವಿಕ್ರೀಡಿತ

ಇನನಸ್ತಂಗತನಾಗಿ ಪೋದಮರುರಾಕಾಚಂದ್ರಮಂ ಪೂರ್ವದಿ
ಗ್ವನಿತಾಸನ್ನಿಧಿಗೆಯ್ದೆ ಬಂದಪನದಕ್ಕಂ ಮುನ್ನಮೇ ಪೋಗಿಯಾ
ತನೊಳಂ ಕೂಡುವೆನೆಂದು ಜಾರೆ ಗಗನಶ್ರೀಹಾರಕ್ಕಂದು ಪೋ
ಪನುವಿಂ ನೀಲಿಯ ಸೀರೆಯುಂ ಪೊದೆದವೋಲ್ ಪರ್ವಿತ್ತು ತೀವ್ರಂ ತಮಂ ೨೮

ಶಾರ್ದೂಲವಿಕ್ರೀಡಿತ

ಪೂರ್ವಾಶಾಗಿರಿಕೂಟದಿಂದಡರ್ದು ತಳ್ತಾಕಾಶಮಂ ಪರ್ವಿ ಮೆಯ್
ಕೊರ್ವಿಂ ಯಾನೆಗಳೊಡ್ಡುಗೊಂಡು ಪರಿದೆಯ್ತಪ್ಪಂದದಿಂ ಕೂಡೆ ಮೇಣ್
ಗೀರ್ವಾಣಾಪಗೆಯೊಳ್ ಪ್ರವೃದ್ಧಜಲನೀಲೀಜಾಲಸಂಚಾರದಿಂ
ತೂರ್ಣಂ ಕೀಳ್ದೆಲ್ಲೆಡೆಯಲ್ಲಿಯುಂ ಪಸರಿಸಿತ್ತಂದಂಧಕಾರಂ ಕರಂ ೨೯

ಚಂಪಕಮಾಲೆ

ಬಿದಿ ಕಡೆದಿಂದ್ರನೀಲಶಿಲೆಯಂ ನೆಲನಾಗಸಮೆಂಟುದಿಕ್ಕುಮಂ
ಪದುಳಿಸಿ ಮಾಡಿ ರಂಜಿತಮಹಾಂಜನದಿಂ ಬಿಡದೊಪ್ಪವಿಟ್ಟಮಂ
ಬಿದಿನಿಸಗುತ್ತುಮುದ್ಧತಮುಮಂ ತಮಮಂ ಕಡುಗೊರ್ವಿ ಪರ್ವಿದ
ತ್ತಿದು ಕುಡಿಬಿಟ್ಟಮೆಂಬ ಪರಿಭೇದದ ಕಲ್ಪನೆ ಪುಟ್ಟದಂದದಿಂ ೩೦

ಕಂದ: ನೆಲೆವೆರ್ಚಿದ ಕತ್ತಲೆ[ಯು] ಬ
ಯಲೊಡಮಾದೊಡಮಿತ್ತುಪಡೆಯನಿತ್ಪರಿಕಾಸಂ
ಕುಳ ಸುರತಕ್ರೀಡೆಗೆ ಮಿಗೆ
ಮುಳಿನಾತ್ಮರ್ ಖಳರನಲ್ಲದಿಂ ತಣಿಪುವರೇ ೩೧

ಕರಿ ಕರಿದಾ ಕರಿಗಂ ಮಧು
ಕರಿ ಕರಿದಾ ಕರಿ ಮಧುಕರಿಗಮನ್ಯಭೃತಮುಂ
ಕರಿದಾ ಕರಿಗಂ ಮಧುಕರಿ
ಗಿರಿದನ್ಯಭೃತಕ್ಕೆ ಕರಿದು ತಿಮಿರಪ್ರಸರಂ ೩೨

ಚಂಪಕಮಾಲೆ

ಇಡುಕುಱಿಒಳೊತ್ತಿನೊಳ್ ಮುರಿದ ಭಿತ್ತಿಯ ಸಂಧಿಯೊಳೆಯ್ದೆ ಕೇಳಿವಿ
ಟ್ಟಿಪೆಯೊಳಿ ಪಿತ್ತಿಲೊಳ್ ಪ್ರಕಟಮಿದ್ದೆಡೆಯೊಳ್ ಮಱಿಗೊಂಡು ಪಾಣ್ಬರುಂ
ಮಿಡುಕದೆ ಪಾಣ್ಬೆಯರ್ ನಲಿದು ಬಂದಪರೆಂಪಡಗಿರ್ದರೆಲ್ಲಿಯುಂ
ಕಡೆಯುದೆಯುರ್ವಿ ಕೊರ್ವಿ ಕಡುಪರ್ವಿ ಮುಸುಂಕೆ ದಿಗಂತಮುಂ ತಮುಂ ೩೩

ಕಂದ: ತಮಸಂ ಕಳಕೋಕಿಳಕುಳ
ಸಮಮುಂ ಕಜ್ಜಳವಿಶೇಷವಾರಿಚ್ಛಾಯೋ
ಪಮಮುಂ ಮಧುಕರರುಚಿವಿ
ಭ್ರಮಮುಮಸದೇವೊಗಳ್ವೆನಾತ್ತಕುಲಟಾಭ್ರಮಮುಂ ೩೪

ಚಂಪಕಮಾಲೆ

ಸಿರುಮಮರೂಪಮದ ಗಗನಮಂಡಳಲಕ್ಷ್ಮಿ ಮನಃಪ್ರಿಯಂ ಕಳಾ
ಧರನರಸಿನ್ನಸನ್ನಿಧಿಗೆ ಬಂದಪನೆಂಬ ವಿಶೇಷಹರ್ಷದಿಂ
ದುರುತರ ಸೌಕ್ತಿಕಾಭರಣಮಾಳಿಕೆಯಂ ನೆಱಿತೊಟ್ಟಳೆಂಬಿನಂ
ಸುರುಚಿರ ತಾರಕಾವಳಿಗಳಾಗಸದೊಳ್ ಪೊಳೆದಿರ್ದುವೆತ್ತಲುಂ ೩೫

ಕಂದ: ಮೊದಲ ದಿಗಂಗನೆಯಂ ತ
ಣ್ಣದಿರಂ ಹಾದರಿಗನೊಲ್ದು ತಂಬುಲದಿಂದಂ
ದುದಯಾದ್ರಿಭಿತ್ತಿಯಂ ಮಾ
ಣದೆ ಮಱಿಗೊಂಡಿಟ್ಟ ತೆಱಿದ ತೋಱಿತ್ತರುಣಂ ೩೬

ಶಾರ್ದೂಲವಿಕ್ರೀಡಿತ

ರಾಜಂ ಬಂದಪನೀಗಳಭ್ಯುದಯಮಂ ಪೆತ್ತು ಪ್ರಭಾಚಕ್ರವಿ
ಭ್ರಾಜಂ ನಮ್ಮೊಡೆಗಾತನಂ ನಿವಳಿಸಲ್ಕೀಡಿಂದ್ರದಿಕ್ಕಾಮಿನೀ
ವ್ರಾಜಂ ಮಾಣಿಕಮೊಪ್ಪುವಾರತಿಗಳಂ ಮಾಡಿದ್ದೊಡಾ ಭೂರಿಭಾ
ರಾಜಿವ್ಯಾಪ್ತಿಯಿದೆಂಬವೋಲರುಣಿಮಂ ಪರ್ವಿತ್ತು ದಿಕ್ಪ್ರಾಂತಮಂ ೩೭

ಕಂದ: ಚಂದ್ರಮನಿಂದೆನ್ನಾಸೆಗೆ
ಬಂದಪನೆಂದಿಂದ್ರದಿಕ್ಕುಮಾರಿಕೆ ಪೊಟ್ಟತ್ತಿ
ಸೌಂದರಮಣಿಭೂಷಣರುಚಿ
ಯಂದದೆ ಕಡುಗೆಂಪು ಪೆಂಪುವಡೆದುದು ಸುತ್ತಂ ೩೮

ವಚನ: ಆಗಳಭಿನವ ಸುಧಾಕರೋದಯ ಸಮಯಮುಖದೊಳಖಿಳನಿಳಿಂಪ ವಿಲಾಸಿನೀಸಂಕುಳದೊಳೋಕುಳಿಯಾಟದೊಳೊಗುವ ಜೀರ್ಕೊಳವಿಗಳನೊತ್ತರಿಸಿ ನೂಂಕಿ ಮೇಗೆಮೇಗೆ ನೆಗೆವ ಕುಂಕುಮಪಂಕಪರಿಕಳಿತ ಹರಿಚಂದನರಸಧಾರಾಪೂರಪರಂಪರೆ ತಳ್ತಿಂಬಂತೆ ನಿರಂತರಿತ ಮುಖರಮಯೂಖಶಿಲಾಲೇಖೆಗಳುನ್ಮುಖತೆಯನಪ್ಪುಕೆಯ್ವುದುಂ

ಕಂದ: ಕತ್ತಲೆಯೆಂಬಾನೆಯ ಮೇ
ಲೊತ್ತಮಿಸಿಯೆ ಪಾಯಲೆಂದು ಶಶಿಕೇಸರಿ ಮೇ
ಲ್ಗೆತ್ತಿದ ಪದದುಗುರ್ಗಳವೋಲ್
ಬಿತ್ತರಿಸಿದವೆಯ್ದೆ ನಿಮಿರ್ದ ಕಿರಣಾಗ್ರಂಗಳ್ ೩೯

ಚಂಪಕಮಾಲೆ

ನಲಿದು ಚಕೋರಿಯಾಡೆ ಕಮಳಂ ಮಿಗೆಬಾಡೆ ಮದಾಳಿ ಕೂಡೆ ಕ
ತ್ತಲೆ ಕೆರಳ್ದೋಡೆ ನೆಯ್ದಿಲೆಸಳಾವಳಿ ನೋಡೆ ರತೀಹೆ ತೀಡೆಯ
ಗ್ಗಳಿಸಿದ ಕಂತು ಕಾಡೆ ಬೆಳಗಂ ಜಗತೀತಳದಲ್ಲಿ ಮಾಡೆ ಕೋ
ಟಲೆಯುನಂಪೋಗಿ ಮೂಡೆ ಸಲೆಮೂಡಿದುದೊಯ್ಯನೆ ಚಂದ್ರಮಂಡಲಂ ೪೦

ಉದಯಿಸಿದರ್ಧಬಿಂಬದೊಳಗೊಪ್ಪುವ ಸುಣ್ಣ ಬಿತ ಕಜ್ಜಳಂಬೊಲಿಂ
ಬೊದವಿರೆ ಮೇಲಣರ್ಧಮದು ಸುಸ್ಫಟಿಕೋಮಳ[1]ರಾ[1]ಜನಾರ್ಧದಿಂ
ಪದುಳಿಸಿ ರಾತ್ರಿಯೆಂಬಬಲೆ ಕಾಡಿಗೆಯಂ ಪಿಡಿಯಲ್ ಕಳಾಪ್ರದೀ
ಪದ ತುದಿಯಂ ಮುಸುಂಕಿದವೊಲಿರ್ದುದು ಖಂಡಹಿಮಾಂಶುಮಂಡಳಂ ೪೧

---

1 ಭಾ (ಗ)

ಘನತರಕಾಂತಿಯಿಂದೆ ಪೊಳಪೇಱಿ ಸುವೃತ್ತತೆಯಿಂದಮೊಪ್ಪಿ ಪ
ತ್ರಸುಪನುಸಾಗಿ ಕೋವಿದರ ಲಾಲಸೆಯಿಂ ಬಿಡದಪ್ಪು ಕೆಯ್ದು ಭೂ
ಜನತೆಯ ಕಣ್ಗೆ ಗುರ್ಮನಿರದಿತ್ತು ವಿಜೃಂಭಿಸಿದತ್ತು ಪೂರ್ವದಿ
ಗ್ವನಿತೆಯ ಕರ್ಣಪೇಕಮಣಿಮಂಡನದಂತಿರೆ ಚಂದ್ರಮಂಡಳಂ ೪೨

ಉದಯಗಿರೀಂದ್ರಶೃಂಗಶಿಖರಜಂ ಪುದಿದಂತಿರೆ ರಕ್ತಮಾಗಿ ಪೂ
ರ್ವದ ದಿಸೆವೆಣ್ಣ ತೋಳರಿಸಿನಂ ಪೊರೆದಂತಿರೆ ಪೀತಮಾಗಿ ನಾ
ಕದ ನದಿಯೊಳ್ ಮುಳುಂಕಿ ತೊಳೆದಂತೆ ಪಳಚ್ಚನೆ ಶುಭ್ರಮಾಗಿ ಕ
ಣ್ಗೊ[1][ದವಿ][1]ಸಿದತ್ತು ಗುರ್ಮನುರುದೀಧಿತಿಮಂಡಲಮಿಂದುಮಂಡಲಂ ೪೩

*

ಕಂದ: ಪದೆದಿಂದ್ರನೀಲಮಾಣಿ
ಕ್ಯದ ಹಾರಮನಿಕ್ಕಲುರದೊಳೊಪ್ಪಂಬೆತ್ತಿ
ರ್ದುದು ತೋರ್ಕೆವೆತ್ತುದೆಂಬಂ
[2][ತದು][2] ಪೊಳೆದುದು ಚಂದ್ರಬಿಂಬದಲ್ಲಿ ಕಳಂಕಂ ೪೪

ಚಂಪಕಮಾಲೆ

ಪೊಳೆವ ಕಳಂಕಮೆಂಬ ಶಬರಂ ಶಶಿಮಂಡಳಮೆಂಬ ತೆಪ್ಪದೊಳ್
ನಿಲಸಿ ನಭಸ್ತಟಾಕದೊಳಗುಣ್ಮುವ ಕರ್ಕಟಮೀನರಾಸಿಗಂ
ಪೆಳಪಿಡುದಿಂಗಳೆಂಬ ಬಲೆಯಂ ನೆಱೆವೀಸಿದನೆಂಬ ಪೊಳ್ಕೆಯಿಂ
ಬಳಸಿದುದೆತ್ತಲುಂ ನಿಮಿರ್ದು ನೀಳ್ದು ಸುಧಾಕರಕಾಂತಿಸಂಕುಳಂ ೪೫

ಸಸುನಸುಮಬ್ಬಿನೊಳ್ ನುಸುಳ್ವ ತಿಂಗಳ ನುಣ್ಗದಿರೆಳ್ನುಕ್ಕಿಯುಂ
ಪಸರಿಸಿತೋರ್ಪವೊಲ್ ನಿಮಿರ್ದು ನೀಡ್ದಿಡಿದಲ್ ಗಗನಾಂತರಾಳದೊಳ್
ಪಸಿದ ಚಕೋರಿಕಾಶಿಶುಗಳೀಕ್ಷಿಸಿ ಬಂದೊಳಪೊಕ್ಕು ಪೀರ್ದು ಪೀ
ರ್ದೊಸೆದು ಕರ್ದುಂಕುತಿರ್ದುವು ಮನಂ ದಣಿವನ್ನೆವರಂ ದಲಾಕ್ಷಣಂ ೪೬

ಶಾರ್ದೂಲವಿಕ್ರೀಡಿತ

ರಾಜಂ ಬಂದು ಕರಾಗ್ರದಿಂ ರಜನಿಯಂ ತಕ್ಕೈಸಲಾಗಳ್ ತಮೋ
ರಾಜಿವ್ಯಾಕೃತಿಯೆಂಬ ನೀಲಮಯವಸ್ತ್ರಂ ಪಿಂಗಿಪೋದತ್ತು ಪ
ದ್ಮಾಜೀವಾಯತಲೋಚನಂ ಮುಗಿದುದುದ್ಯಚ್ಚಂದ್ರಕಾಂತೋಪಳ
ವ್ಯಾಜೋತ್ಸಾಹದಿನಾಕ್ಷಣಂ ದ್ರವಿಸಿದತ್ತೇಂ ಚೋದ್ಯಮೋ ಮೋಹನಂ ೪೭

---

[1] ದರಿ (ಕಗಚ) [2] ತೆನೆ (ಕಗಚ)

* (ಚ) ಪ್ರತಿಯಲ್ಲಿ ೪೪ನೆಯ ಪದ್ಯದಿಂದ ೫೨ನೆಯ ಪದ್ಯಪೂರ್ತಿ ಅಸ್ಪಷ್ಟವಾಗಿದೆ.

ಮಹಾಸ್ರಗ್ಧರೆ

ಸ್ಮರಚಕ್ರಾಧೀಶ್ವರಂಗೆತ್ತಿದ ಪೊಸಧವಳಚ್ಛತ್ರಮೆಂಬಂತೆ ಚೆಲ್ವಂ
ಧರಿಸಿತ್ತಂತಲ್ಲದಿರ್ದಂದದಱಿನಧಿಕಕಾಮಾಸ್ಪದಸ್ತ್ರೀಮುಖಾಭ್ಯಂ
ತರದೊಳ್ ಛಾಯಾವಿಶೇಷಂ ಸ್ಥಿತಿಯುದಯಮುದೆಂತಕ್ಕುಮೋ ಗರ್ವಮೆಂಬು
ದ್ಧುರತಾಪಂ ಕೇಡನೆಂತೆಯ್ದುವುದೊ ಬಗೆವೊಡಿಂತೊಪ್ಪಿದತ್ತಿಂದುಬಿಂಬಂ ೪೮

ಸರಸೀಯೂಷಾದಿಪಾತ್ರಂ ಯುವತಿವಿಕೃತಿಮಿತ್ರಂ ಸುತಾರಾಕಳತ್ರಂ
ಸರಸೀಜಾಸ್ಯಾತ್ತಮುದ್ರಂ ಕೃತಕುಮುದವಿನಿದ್ರಂ ಪ್ರಪುಷ್ಯತ್ಸಮುದ್ರಂ
ಪಿರಿದುಂ ಪೇಳಲ್ಕಳುಂಬಂ ಮದನಮುಕುರಬಿಂಬಂ ತಮಶ್ಶೈಲಶಂಬಂ
ಪರಿಶೋಭಾಭಾರರುಂದ್ರಂ ಬಹಳಕಿರಣಸಾಂದ್ರಂ ಮಹಾಪೂರ್ಣಚಂದ್ರಂ ೪೯

ವಚನ : ಇಂತು ಸುಧಾಸೂತಿಮಂಡಳಮತಿಪ್ರೌಢಮಾಗೆ

ಮತ್ತೇಭವಿಕ್ರೀಡಿತ

ನವಚಂದ್ರೋಪಳದೊಂದು ಚೆಲ್ವ ಸದನಂ ತಾನೆಂಬಿನಂ ಪದ್ಮಸಂ
ಭವನಂ ಪತ್ತುದಿಶಾಭಿಭಿತ್ತಿಗಳೊಳಿಟ್ಟೊಪ್ಪಂಬಡೆಂದೆಂಬಿನಂ
ದಿವಸಮೆಂಬಿಂದಿರೆಯುಟ್ಟ ಕೋರ್ವ ದುಗುಲಂ ತಾನೆಂಬಿನಂ ಲೋಕಮೆ
ಲ್ಲಮನಾಚ್ಛಾದಿಸಿದತ್ತು ಬಣ್ಣಮಡಗೊಂದಾಗಂತೆ ಚಂದ್ರಾತಪಂ ೫೦

ವಚನ : ಮತ್ತಂ ಜಗತ್ಸ್ವಳಯಮನವಟೆಲಿಪ ಸುಲಿದು ಕೋಟೆಲೆಗೊಳಿಸುವ ನನೆವಿಲ್ಲಬಲ್ಲಹನ ದಿಗ್ವಿಜಯಕ್ಕಾಗಿ ವಸಂತನಪಾಲಕನಲಗಣೆಗಳ ಬಳಗಂಗಳನಗೆವೊಯ್ದನೆಂಬಂತೆ ಥಳಥಳಿಸಿ ತೊಳಗಿ ಬೆಳಗುವಚ್ಚಬೆಳ್ದಿಂಗಳ್ ಪಿರಿದುಂಪೆರ್ಚಿ ಬೆಚ್ಚದೆ ನಿಬಿಡಮಾಗಿ ಬಿಡದಡರ್ದು ಕೆದಱಿ ನಾಂದು ಪೊದಱುಗಟ್ಟಿ ಪರೆಕಲಿಸಿ ಪರ್ಬುತ್ತುಮಿರೆ

ಉತ್ಪಲಮಾಲೆ

ನೆತ್ತಿಯೊಳೊತ್ತಿ ಪೊತ್ತು ಪದದಿಂದೊಡೆಮೊಯ್ಯನೆ ನೂಂಕೆ ಪಕ್ಷದಿಂ
ಪತ್ತಮಿರ್ದಪ್ಪಿಕೊಂಡು ನಿಜಚಂಚುಪುಟಾಗ್ರದೆ ಚಲ್ಲಿ ಪೊಯ್ದು ಮೆ
ಯ್ವೆತ್ತ ಸಖಿಂಗಳಿಂದೆ ಬಿಡಮೋಡಿ ಕರಂ ನಲಿದಾಡುತಿರ್ದುವ
ತ್ಯುತ್ತಮಕೌಮುದೀತತಿಯನೊಲ್ದು ಚಕೋರಕುಳಂ ನಿರಾಕುಳಂ ೫೧

ಕಂದ : ತಿಱಿಗದಿರನಿತ್ತು ತನ್ನಯ
ಮಱಿಗಂ ತನಿಗದಿರನಿತ್ತು ತನ್ನಿನಿಯಂಗಂ
ತುಱುಗಿದ ನುಣ್ಗದಿರಂ ಬೇ
ಸಱದಿಂಟುತ್ತಿರ್ದುದಂದದೊಂದು ಚಕೋರಂ ೫೨

ವಚನ: ಅದಲ್ಲದೆಯುಮೆಲ್ಲಾ ತಾಣದೊಳ್ ಬೆಳ್ಳಂಗೆಡೆದು ಬಳ್ಳಿವರಿದಚ್ಚವೆಳ್ದಿಂಗಳುತ್ತುಂಗಗಂಗಾಪ್ರವಾಹದುದ್ರಿಕೆ ಸೆಜ್ಜೆಡೆಯಿಂದಿಳಿದು ಬಿಳ್ದು ಪರಕಲಿಸಿತೆಂಬಭಿಶಂಕೆಯಿಂ ಕೆದಱಿದ ಜೆಡೆಯೊಳ್ ಮುಗುಳೆ ಮುದ್ರಿಸಿ ಸ್ಥಿತಿಮಾಡುವುಜ್ಜುಗಮುಮನುಮಾವಲ್ಲಭಂಗೊಗೆಯಿಸುತುಂ ಚಂದ್ರೋದಯದೊಳಚ್ಚರಿಯಾಗಿ ಪೆರ್ಚಿಪಡೆದ ಕ್ಷೀರೋದಭೂರಿಪೂರದ ಘೋರಣೆ ಮೇರೆಯಂ ಮೀಱಿ ನಿಖಿಳಧಾರಿಣೀತಳಮುಮೊರ್ಮೊದಲೊಳ್ ಮುಸುಂಕಿ ದಿಕ್ಕುಹರವಿವರಮಂ ತಳ್ಪೊಯ್ದುವುತ್ತುಂ ತನ್ಮಯಮಾಗಿ ಪರಿಣಮಿಸಿತೆಂಬಂತಗುರ್ವನುರ್ವಿಸೆ ಪಾಲ್ಗಡಲ ನಡುವಿದಿಲ್ಲಿ ಜಲಶಯನಮುಮೆಸಗಲ್ವೇಳ್ಕುಮೆಂಬ ಬಗೆಯಂ ಹರಿಗೆ ಪುಟ್ಟಿಸುತುಂ ಕಟಾಕ್ಷಕಾಂತಿಯಿಂ ದ್ವಿಗುಣಿಸಿದ ಸಮುಜ್ವಳಮಾದ ಸರಸ್ವತಿಯ ಮೆಯ್ವೆಳಗಿನ ಬಳಗದ ಪಸರವೆಸಕಮಿದೆಂದು ತರ್ಕೈಸುವ ಮೋಹನಮಂ ವಸುಗರ್ಭನಾಶಯದೊಳುಕ್ಕಿಸುತುಂ ನಂದನವನದ ಮರಂಗಳ್ಗೆ ಬಹಳಮಾದಮೃತರಸದಿಂ ತುಂಬಿದ ಪೃಥುಳತರಾಳವಾಳವಳಯಂಗಳ ಮಧ್ಯವರ್ತಿ ಪಾರಿಜಾತಂಗಳ ಲೀಲೆಯನೋಲೈಸುತುಂ ಕಲ್ಗಳೆಲ್ಲಕ್ಕಂ ಚಂದ್ರಕಾಂತದ ರೂಪಿನ ಚೆಲ್ವಂ ನೆಲೆಗೊಳಿಸುತುಂ ಜಗಮನಗೆ ಮಿಗಿಲಾವರಿಸಿ ತುಂಬಿ ತುಳುಂಕಾಡಿ

ಚಂಪಕಮಾಲೆ



ಧವಳಿಸಿದಂ ವಿರಿಂಚಿ ಜಗಮಂ ಪೊಸಪಾಲ್ಸೊದೆಯಿಂದಮೆಂಬಿನಂ
ನವತರಮಾಗಿ ಕೆಂಡರಿಸಿದಂ ನೆಱೆಕರ್ಪುರದಿಂದಮೆಂಬವೋ
ಲವಿರಳಚಂದನದ್ರವದ ಕಲ್ಕದೆ ಪೂಸಿದನೆಂಬಿನಂ ಮಹೀ
ಭುವನದೊಳೆಯ್ದೆ ತೀವಿದುದು ತಿಂಗಳ ನುಣ್ಚೆಳದಿಂಗಳಗ್ಗಳಂ ೫೩

ಮತ್ತೇಭವಿಕ್ರೀಡಿತ

ಇದು ಪುಷ್ಪೋದ್ಗಮರಾಶಿಯಿಂ ಸಮೆದುದಲ್ತಾಮೋದಯುಕ್ತಂ ಸಮಂ
ತದು ಮುತ್ತಂ ಪರಸೌಕ್ತಿಕೌಘಘಟಿತಂ ತಾನಲ್ತಿದಸ್ಪರ್ಶನಾ
ಸ್ಪದಮಾಗಿರ್ದುದದೆಯ್ದೆ ಪೆರ್ಚಿದಿದನಾನೇನೆಂದು ಪೇಳ್ ಬಣ್ಣಿಪೆಂ
ಪಡೆಪಂ ಪೆತ್ತುದು ಕೌಮುದೀಮಯಮುಮಾಯ್ತಾ ಲೋಕಮೆಂದೆಂಬಿನಂ ೫೪

ವಚನ: ಇಂತನುಂದದಚಂದ್ರಿಕಾಸಂದೋಹವಿವರಣಮುಖಿಳ ಜಗದಾನಂದಕರಣನಿಪುಣೀಭಾವಮನಪ್ಪುಕೆಯ್ದಿರ್ದುದುಮಾಗಳಾ ಸಭಾಮಧ್ಯದಲ್ಲಿ ಸುಕರವಿಳಾಸನೆಂಬ ಪರಿಹಾಸಕಂ ಕೌಮುದೀವರ್ಣನವಿನೋದರೂಪಸರಸವಚನಂಗಳಿಂ ಸಭೆಯನಭಿರಂಜಿಸಿ ದೇವರ ದೇಸಂ ಮೆಚ್ಚಿ ತಲೆದೂಗುವಿನಂ ಮನಂಗೊಳಿಸಿ ಬಳಿಯಮಿಂತೆಂದನಿಂದಿನ ತುಚ್ಛೇತರ ಕೃತ್ಸ್ನಜ್ಯೋತ್ಸ್ನಾಮಹೋತ್ಸವದೊಳ್ ಪುರದ ಸಿರಿಯಂ ನೋಡುವ ಬಯಕೆ ಬಗೆಯೊಳೊಗೆಯೆ ದೇವ ಸಿಮ್ಮಡಿಗಳಂ ಕರೆಯಲಮ್ಮದೆನ್ನೊಡನೆ ನಾಗರಕಂ ಬಿರಲ ಕೊಂಕಿಂ ಸನ್ನೆಗೆಯ್ದಂ ವಿಟಂ ಶಿರಃಕಂಪನದಿಂ ದಿಟಂಮಾಡಿದಂ ವಿದೂಷಕಂ ಬಂದೆನ್ನ ಕಿವಿಯಂ ಪಚ್ಚಿದಂ ಪೀಠಮರ್ದಕಂ ಕಣ್ಸನ್ನೆಯಿಂ ನನ್ನಿಗೆಯ್ದನೆಂದು ಪ್ರಹಸನಮುಖದಿಂ ಬಿನ್ನಪಂಗೆಯ್ದ

ಮತ್ತೇಭವಿಕ್ರೀಡಿತ

ಅನಿರಂತಿಕ್ಕೆ ಭವತ್ಪದಾಂಬುರುಹಸೇವಾಸಕ್ತನಪ್ಪೆನ್ನ ಮು
ದ್ದುವಚೋವೃತ್ತಿಯಸೊಲ್ದು ಮನ್ನಿಪುದಿದಂ ಚಿತ್ತೈಸಲೇ ದೇವ ಮಾ
ನವಪೂಜ್ಯಾಭಿನಿದಂಗಳಿಂದೆ ಬಿಜಯಂಗೆಯ್ದಾ ಪುರಶ್ರೀವಿಳಾ
ಸಮನೀಗಳ್ ನಡೆನೋಡಿ ಕಣ್ಗೆ ತಣಿವಂ ಪೆತ್ತೆಯ್ದು ಸಂತೋಷಮಂ ೫೫

ವಚನ : ಅಂತುಮಲ್ಲದೆಯುಂ

ಕಂದ : ವಾತಾಯನ ವಿವರ ಸಮಾ
ಪಾತಿತಕರದಿಂದೆ ಪಿಡಿದು ನಿಮ್ಮಂಘ್ರಿಗಳಂ
ಸಾತಿಶಯ ಪ್ರೀತಿಯುತಂ
ಶೀತಕರಂ ಕಱಿಇವ ತೆಱದೆ ಪೊಱಗೆಸೆದಿರ್ದಂ ೫೬

ಎಂದು ಬಿನ್ನೈಸೆ ದೇವನ
ಮಂದಸ್ಮಿತವಚನಶೋಭೆ ಮನದನುಮತಿಯಂ
ಸಂಧಿಸಿ ಪೇಳಲ್ ಪೊಡೆವಡು
ವಂದದಿನವಧಾನವೆಂದು ಕೈಗೊಡುತೆಳ್ದಂ ೫೭

ವಚನ : ಇಂತು ಪರಿಹಾಸಕಂ ದೇವನಂ ರಾತ್ರಿವಿಹರಣಕ್ಕಭಿಮುಖಂಮಾಡಲೊಡನಾ ತ್ರಿಲೋಕೀಭೂಷಣಂ ತತ್ಕಾಲೋಚಿತಭೂಷಣದಿಂದಭಿಭೂಷಿತನಾಗೆ

ಉತ್ಪಲಮಾಲೆ

ಕಪ್ಪುರದಿಂದೆ ಕಂಡರಿಸಿ ಮಾಡಿದ ಕರ್ಣದ ಭೂಷಣಂ ಕಟಾ
ಕ್ಷಪ್ರಭೆ ಪಿಂಡುಗೊಂಡು ನೆಲಸಿರ್ದವೊಲುಟ್ಟ ದುಕೂಲಚೇಲಮುಂ
ನೇರ್ಪಡೆ ತೊಟ್ಟ ಮುತ್ತುಗಳ ನುಣ್ದೊಡವುಂ ಹರಿಚಂದನಾನುಲೇ
ಪಾರ್ಪಣಮುಂ ಮನಂಗೊಳಿಸಿದತ್ತುರುಚಂದ್ರಿಕೆಯಪ್ಪಿದಂದದಿಂ ೫೮

ಅಪ್ಪುತವ ಪೂರದಿಂ ತೊಳೆದವೊಲ್ ಪೊಳಪೇಱಿ ಪಳಚ್ಚನಾಗಲಾ
ದಮೆ ಪೊಳಲೆಲ್ಲಮಾಗಳವನೀಪತಿ ಪಾಲ್ಗೊಡೆಯಿಟ್ಟ ಸೌಧದು
ತ್ತಮಶಿಖರಾಗ್ರದಿಂದಮಿಳಿತಂದನುದಗ್ರವಿಮಾನದಿಂದೆ ಚಂ
ದ್ರಮನಿಳಿತಪ್ಪವೋಲ್ ಕುಸುಮಬಾಣವಸಂತಸಹಾಯಸೇವಿತಂ ೫೯

ಕಂದ : ಅರಮನೆಯಿಂದಂ ತಳರ್ದಾ
ಸನಾಥಂ ಮುಂದದೆ ನಡೆದು ಪೋಗುತ್ತಿರ್ದಂ
ಸ್ಮರಚಕ್ರವರ್ತಿ ತನ್ನಯ
ಪರಿಕರದೊಡಗೂಡಿ ನಡೆದು ಪೋಪಂತೆವೊಲಂ ೬೦

ವಚನ: ಆಗಳಾ ಮನುಜಮನೋಜನ ರಜನೀವಿಹಾರಕೇಳಿಗುದ್ದೀಪಕರಪ್ಪ ಮೇಳದ ಕೆಳೆಯರ್ ನಾಲ್ವರನುನಾಯಕರಂ ನಾಲ್ವರ್ ಮುಖ್ಯನಾಯಕರಂ ಕೂಡಿಕೊಂಡು

ಕಂದ: ಪುರವೃತ್ತಾಂತವಿದಂ ನಾ
ಗರಕಂ ಪರಿಹಾಸಕಂ ವಿದೂಷಕನೆನಿಪಂ
ಸುರತಪ್ರೌಢಂ ವಿಟನೊ
ಲ್ದರಸನ ಪರಿಪೀಠಮರ್ದಕನುಮಿಾ ನಾಲ್ವರ್ ೬೧

ಅನುನಾಯಕರೆಂದೆನಿಸುವ
ರನುಕೂಲಂ ದಕ್ಷಿಣಂ ಶಠಂ ಧೃಷ್ಟನುಮೆಂ
ಬಿನಿಬರ್ ನಾಯಕಮುಖ್ಯರ್
ಬಿನದಿಗರಿಂತೆಣ್ಬರುಂ ವಿನೋದಸಹಾಯರ್ ೬೨

ವಚನ: ಇಂತಿವರೊಡಗೂಡಿ ಮಹಾರಾಜಂ ರಾಜಮಾರ್ಗಂಬಿಡಿದು ನಡೆತಂದು ಮಂಗಳಮಾದಂಗಡಿಗೇರಿಯಿಕ್ಕೆಲಂಗಳೊಳ್ ಕಿಕ್ಕಿಱಿಗಿಱಿದು ಸಂಗಡಿಸಿ ನಿಂದು ಮಾಲ್ಯಾಂಗಲೇಪನಾಂಗನೆಗಳೆಂಬ ಜಂಗಮ ಕಾಮಕಲ್ಪಲತೆಗಳ್ ಕೈಸಂದುದೆಂಬಂತೆ ಮನಂಗೊಳಿಸಿ ನೀಱರ ಮನಮಂ ಬೆಲೆಗೊಂಡು ಪೂಮಾಲೆಯುಮಂ ಗಂಧದುರುಳಿಯುಮಂ ಮಾಱುವ ಮಾಲೆಗಾತಿಯರ ಘಟ್ಟಿವಳ್ತಿಯರ ಶರೀರಸೌರಭಸಂಕುಳದಿಂ ದಳಮೇಱಿ ಕಿಱುಮಡುಗೊಂಡು ಸುತ್ತಲುಂ ಪಸರಿಸಿ ಪರಿಮೋಗರದ ಪರಿಮಳಭರ ತರಂಗಿಣಿಯ ಸುಳಿಯೊಳೀಸಾಡುವಂತೆ ವಿಳಾಸದಿಂ ನುಸುಳ್ದು ನುಸುಳ್ದು ಬರ್ಪಾಗಳ್

ಚಂಪಕಮಾಲೆ

ಅಸದುರುಮೌಕ್ತಿಕಾಭರಣದಿಂ ನಗೆಗಣ್ಣನುರಾಗದೇಳ್ಗೆಯುಂ
ಪಸರಿಪ ಜೊಲ್ಪ ಪೊಚ್ಚಪೊಸಜವ್ವನ ಮುಂದಿದಿರಂ ಬರುತ್ತಿರಲ್
ವಸುಮತಿಗೀಶನಾ ಮನುಜಮನ್ಮಥನಾಕೆಯನೊಲ್ದು ನೋಡಿದಂ
ರಸೆಯೊಳೆ ಮೂರ್ತಿವೆತ್ತ ಬೆಳುದಿಂಗಳ ಪುತ್ತಳಿಯೆಂಬ ಶಂಕೆಯುಂ ೬೩

ವಚನ: ಅವಳಂ ಕಂಡು ಮನಂಗೊಂಡು ನಾಗರಕನೆಂದನೀಕೆಯ ರೂಪಕಳಾಕೌಮುದೀಸಮಾಸ್ವಾದನದಿನೆಮ್ಮಯ ಲೋಚನಚಕೋರಿಕಳಭಂಗಳ್ ತಣಿದು ನಲಿದವು ನಡಯಿಯೆನೆ ಮುಂದೊಂದೆಡೆಯೊಳ್ ಪುರೋಹಿತನಿಕೇತನವೀಧಿಕಾಪ್ರದೇಶಮನೆಯ್ದೆ ವರ್ಪುದುಮಲ್ಲಿ

* (ಚ) ಪ್ರತಿಯಲ್ಲಿ ೬೧ನೆಯ ಪದ್ಯದ ಉತ್ತರಾರ್ಧದಿಂದ ೬೯ನೆಯ ಪದ್ಯದವರೆಗೆ ಸ್ಪಷ್ಟವಾಗಿ ಕಾಣುವುದಿಲ್ಲ.

ಚಂಪಕಮಾಲೆ

ತವಕಿಸಿ ಮುಂಡನಂ ವಿಧವೆ ಕಂಡಭಿಸೂಚಿತಶಾಲೆಗೊಯ್ದು ಕೊ
ಡುವ ಪದದಲ್ಲಿ ಕೂಗಿಡುತುಮಿಕ್ಕೆಲೊಯಿಕ್ಕೆಲೊಯಿಕ್ಕೊಯಿಕ್ಕೆ ಶಿಂ
ಶಿವಶಿವ ಲಿಂಗಲಿಂಗ ಹರ ಶಂಕರ ಶಂಕರ ಶಂಕರ ಕಾಮಸೌಖ್ಯದು
ತ್ಸವಮಸೆ ನಿಚ್ಚಲುಂ ಕರುಣಿಸೀ ಪರಿಯಿಂದೆನುತಿರ್ದಳಾಕ್ಷಣಂ ೬೪

ವಚನ: ಇಂತಪ್ಪ ವಿಕಾರವಿಜೃಂಭಣಮಂ ನೋಡುತ್ತು ಕೇಳುತ್ತುಮಿರ್ದ ಮುಂಡಿರ್ ಮಾಡದುಪೇಸೆಂದು ತನ್ನೊಳ್ ಮಾತಾಡುತ್ತುಂ ವಿಳಾಸಿನೀನಿವಾಸದಂತಿಕಕ್ಕೆವರೆ

ಉತ್ಪಲಮಾಲೆ

ಕೇಶವಭಟ್ಟರೆಮ್ಮಯ ಪೆಸರ್ ನಿನಗೇನಱಿಯಲ್ಕೆ ಬಾರದೇ
ಬಾಸುಳಡರ್ದವೋಲುರಮನೇಕೆಗ ಪೊಯ್ದಪೆ ಬೇಡಬೇಡ ನಾ
ಲ್ಕಾಸುರಮಾದ ಸೆಳ್ಕುಗರನೊತ್ತಿದುಡುಃಯೆನುತೆಳ್ದು ಱಿಂಡೆ ಸಂ
ಕ್ಲೇಶಮನಿತ್ತಳೈ ಹರಿಕರ್ರೀಯೆನುತಂ ದ್ವಿಜಮುಗ್ಧನೋಡಿದಂ ೬೫

ವಚನ: ಇದು ಮೊದಲಾದನೇಕವಿನೋದಂಗಳಂ ಕಂಡು ಮಹೀಮಂಡನಂ ಪ್ರಹಸನಪರಿಸ್ಫುರಿತಗಂಡಮಂಡಲನಾಗಿ ವಿದೂಷಾದಿಗಳ್ಗೆ ತೋಱುತ್ತುಂ ಮುಂದೆ ನಡೆವೆಡೆಯೊಳ್

ಮತ್ತೇಭವಿಕ್ರೀಡಿತ

ವಿರಹಾಸಕ್ತವಿಟೀವಿಟಾನನಭವನ್ನಿಶ್ವಾಸದೊಂದುಷ್ಣದಿಂ
ಪೊರೆದಿರ್ದಾಕುಳಮಂದಗಂಧವಹನಂಪೆಯ್ತ್ತಪ್ಪ ಭೂಮಂಡಳೇ
ಶ್ವರಗೇಹಸ್ಥಿತ ನವ್ಯಶೈತ್ಯಭರಮಂ ಸೌಗಂಧ್ಯಮಂ ಕೀರಸು
ಸ್ವರದಿಂ ಯಾಚಿಸಲೆಂದು ಬರ್ಪ ತೆಱದಿಂ ಬಂದತ್ತು ವೇಶ್ಮಾನಿಳಂ ೬೬

ವಚನ: ಅಂತು ಸೂಳೆಗೇರಿಯ ಗಾಳಿ ತೀಡಲೊಡಂ ಮೆಯ್ಪುಳಕಂಗಳೋಲಗಕ್ಕವಸರಂಗುಡೆಯನುಕೂಲನಾಯಕಂ ಲೋಕದೊಳಾವಾವ ಬಿನದಂಗಳುಂಟವೆಲ್ಲಮನಿಲ್ಲಿಕಾಣಲಕ್ಕು ದೇವರಿತ್ತ ಬಿಜಯಂಗೆಯ್ವುದೆಂದು ಬಿನ್ನವಿಸುವುದುಮಾ ಮನುಜೇಂದ್ರಚಂದ್ರಮಂ ತಾರಾಂತಃಪುರನಿವಾಸವೀಧಿಯಂ ಪುಗುವ ಚಂದ್ರಮನೆಂಬಂತೆ ಸೂಳೆಗೇರಿಯಂ ಪುಗುತಪ್ಪಾಗಳೊಂದು ಪಳುಕಿನ ಸೆಜ್ಜೆವನೆಯ ಕನಕವೇದಿಯ ಮುಂದಣ ಧವಳಪ್ರತೋಳಿಕಾಭ್ಯಂತರಾಳಮಣಿಕುಟ್ಟಿಮರಾಜಾಂಗಣಸ್ಥಳದೊಳಗೆ ಮಳಯರುಹತರುಗಳಂ ಕಂಡರಿಸಿಮಂತರಾಂತರಪ್ರದೇಶಮುಚಿತಮಾಗಿ ಕೀಲಿಸಿದ ನವರತ್ನಂಗಳ ವರ್ಣಕ್ರಮವಿನ್ಯಾಸದಿಂ ವಿಚಿತ್ರಂಬೆತ್ತು ವಿರಚಿಸಿದಮುಕ್ಕಂಬಂಗಳಿಂದಂ ಪವಳದ ಮೇಲ್ವಲಗೆಯಿಂದಂ ಮುತ್ತಿನ ಮಿಳಿಯಿಂದಂ ಬಿತ್ತರಂಬಡೆದು ಪಚ್ಚೆವಡಿಸಿದ ಮರಕತದ ಮಣಿಯಿಂದಂ ಮೇಲೆ ತೆತ್ತಿಸಿದ ಕನಕಕಳಶ

ಮಣಿದರ್ಪಣಂಗಳಿಂದಂ ಥಳಥಳಿಸಿ ಪೊಳೆದು ತೋರ್ಕೆವೆತ್ತು ಸಮಾಲಂಬಮಾನಪುಷ್ಪಮಾಲಾಜಾಲಂಗಳಿಂದಚ್ಚರಿಯಾಗಿ ಮದನಮಂಗಳಾಗಾರದ್ವಾರ ತುಂಗತೋರಣದಂತೆ ರಮ್ಯಮಾದ ನವಿಲುಯ್ಯಲಂತಿಕಕ್ಕೆ ದಂತಾವಲಗಮನೆ ನಡೆತಂದು ನಿಂದು ತನ್ನೊಡನಾಡಿಗಳಪ್ಪ ಮೇಳದ ಕೆಳದಿಯರ್ಗೆ ಕರ್ಪುರದ ವೀಳೆಯಮುಮಂ ಪೂವಿನ ಮಾಲೆಯುಂ ಕತ್ತುರಿಯ ತಿಳಕಮನಿತ್ತು ಬಾಯಿನ ಬೀಯಮಂ ಬೆಡಂಗಂ ಬೀಱಿ ಮಂಗಳಗೇಯಮಂ ಸಂಗಳಿಸಿ ಪೊಣ್ಮುತ್ತುಮಿರೆ

ಚಂಪಕಮಾಲೆ

ಬಡನಡು ಕೊಂಕೆ ತೋರಮೊಲೆಯೊಡ್ಡು ವಿಜೃಂಭಿಸಿ ಮುಂದೆನೂಂಕೆ ನು
ಣ್ಪಡಸಿದ ರಜ್ಜುಮಂ ಪಿಡಿದ ಕೆಂದಳಮಚ್ಚರಿಯಂ ತೊಡಂಕೆ ಜೆ
ಲ್ವೊಡರಿಸೆ ದಕ್ಷಿಣಾಂಘ್ರಿತಳದಿಂ ಮಣೆಯಂ ಬಿಡದೌಂಕಿ ಮೆಟ್ಟಿ ಜಾ
ಣಿಡೆ ನವಿಲುಯ್ಯಲಂ ಲಲನೆಯೇಱಿದಳಂಗಜನೇಱಿ ಗರ್ಭಮಂ ೬೭

ವಚನ: ಮತ್ತಂ ಚಿತ್ರವಲ್ಲಭಂ ಮಣೆಯ ಕಡೆಯಂ ಪಿಡಿದು ಮೆಲ್ಲಮೆಲ್ಲನೊಲೆದೊತ್ತಿನೂಂಕಿ ತೂಗಲೊಡಂ

ಮತ್ತೇಭವಿಕ್ರೀಡಿತ

ಬಿಡದಳ್ಳಾಡೆ ಸಡಿಲ್ದ ಮೇಲುದಿನ ವಸ್ತ್ರಂ ಜೇಟದಚ್ಚಾಡೆ ಬೆಂ
ಬಿಡದೊಳ್ದುಂಬಿಯ ಬಂಬಲಂಬರದೊಳಂ ಮೇಲ್ವಾಯ್ಯ ಕಂಪಿಂಗೆ ತ
ನ್ನೊಡನೆಳ್ದಾಡೆ ತಳಿರ್ತು ಪೀಲಿದಳೆಯೆಂಬಂತಿಂದುಬಿಂಬಕ್ಕೆ ಧಾ
ಳಿಡುವಂತುಯ್ಯಲನಾಡಿದಳ್ ತರುಣಿ ತನ್ನಂ ನೋಳ್ಪರಂ ಕಾಡಿದಳ್ ೬೮

ಮಹಾಸ್ರಗ್ಧರೆ

ಮದದಿಂದಂ ಚಂದ್ರ ನೀನೆನ್ನಯ ವದನಸದೃಶಂ ದಲೆಂದೊಂದು ತಪ್ಪಿಂ
ಗಿದು ನೀನೆನ್ನಂ ವಿಯೋಗಕ್ಷಣದೊಳುರಿಯಿಸುತ್ತಿರ್ಪೆನೆಂಬೊಂದು ತಪ್ಪಿಂ
ಗಿದು ನೀನೆನ್ನೊಳ್ ಕಳಾಶೋಭೆಯಿನುಪಗತಮಾಶ್ಚರ್ಯನಾದೊಂದು ತಪ್ಪಿಂ
ಗಿದು ಮತ್ತೆಂದಿಂದುಮಂ ಮೂದಲಿಸಿಯೊದೆವವೋಲುಯ್ಯಲಾಡುತ್ತಮಿರ್ದಳ್ ೬೯

ವಚನ: ಆ ವಿಳಾಸವತಿಯ ಖೇಳನವಿಳಾಸಶ್ರೀಯಂ ನೋಡಿನೋಡಿ ಮೆಚ್ಚುತ್ತುಂ ಪೋಗೆ ಮುಂದೆ ಮತ್ತೊಂದುತಾಣದಲ್ಲಿ ಮಲ್ಲಿಗೆಯರಲಮಾಲೆಗಳಿಂ ಹೊಂದಾವರೆಯ ಹೊಂಗಳಸದಿಂ ಕೊಸಗಿನ ಕುಸುಮದ ಕನ್ನಡಿಯಿಂ ಜೆನ್ನಂಬಡೆದಸುಕೆಯ ಕೆಂದಳಿರುಯ್ಯಲನೊರ್ವಗಪೂರ್ಣಯುಮ್ಮನೋನ್ನತ್ತಿ ಬಸನಿಗನನೋಲೈಸುವ ಜೇವಸೆಯಿಂದವನ ಮನವನೇಱುವಂತೇಱಿ

ಉತ್ಪಲಮಾಲೆ

ಕಾಮಿನಿ ತನ್ನ ಬಟ್ಟದೊಡೆಯಂ ರಮಣಂಗೆಡೆಗೊಟ್ಟು ಕುಳ್ಳಿರ
ಲ್ಕಾ ಮಣೆಯಂ ಸಖರ್ ಪಿಡಿದು ತೂಗುತಮಿರ್ದೆಡೆಯಲ್ಲಿ ಜೋಲ್ದುದಂ
ಪೂಮುಡಿಯಂ ಪದಗೊಳಿಸುತಂ ಪೊಳೆಯಲ್ ತನುದೀಪ್ತಿಯಾಡಿದಳ್
ಪ್ರೇಮದೆ ರಾಗಸಾಗರದೊಳೀಸಿ ಮರಳ್ದಿರದೀಸುವಂದದಿಂ ೭೦

ಕಂದ: ಇನಿಯನೊಡಗೂಡಿಯಾಡುವ
ವನಿತೆ ಮಹಾರಾಗಭೇದಮಂ ತೋಱುಸುತಂ
ಮನವೊಲ್ದು ಪಾಡುತಿರ್ದಳ್
ಘನಚಂದ್ರಮುಖಕ್ಕೆ ಗೌರಿಯಂ ಪಾಡುವವೋಲ್ ೭೧

ವಚನ: ಇಂತಾಡುವುಯ್ಯಾಲ ತೂಕಮಾ ರಾಜಮನೋಜಂಗೆ ಕೂಡೆಗೂಡೆ ತಲೆದೂಕಮನೊಡರ್ಚೆ ಮೆಚ್ಚಿಮೆಚ್ಚಿ ನೋಡುತ್ತುಮಿರ್ಪೆಡೆಯೊಳ್ ವಿಟನಾಯಕಂ ದಕ್ಷಿಣನಾಯಕಂಗಿಂತೆಂದನಿವಳ್ದಿರ್ ನೋಟಕರನನಂಗಪೀಡಾಮಷ್ಟಿಗುಯ್ಯಾಲಾಡುವಂದಮಲ್ಲಮುಯ್ಯಾಲಾಡುವಂದಮಲ್ತು ಬಱುಮೆಚ್ಚಿನೊಳೇನೀ ನೀಱೆಯರ ತೊಡೆಯನೇಱುಮಾಡಿದೊಡೆ ಸುಖಮೊಳೋಲಾಡಲಕ್ಕುಮೆಂದು ನುಡಿದು ನಗಿಸುತ್ತುಂ ನಡೆಯೆ ಮುಂದೊಂದು ದ್ರಾಕ್ಷಾಮಂಡಪದ ನಡುವೆ ಬೆಳುದಿಂಗಳ ಬಳಗಮಂ ರಾಸಿ ಪುಂಜಿಸಿದಂತೆ ರಂಜಿಸುವ ಚಂದ್ರಕಾಂತದ ಜಗುಲಿಯೊಳೊತ್ತೈಗೊಳಲೆಂದು

ಮಹಾಸ್ರಗ್ಧರೆ

ಪಿರಿದುಂ ಚೆಲ್ವಾದ ಪೊಂಗೇದಗೆಯ ಗಱಿಗಳಂ ತೀಡುವ ವ್ಯಾಜದಿಂ ನು
ಣ್ಬೆರಳಾಂತೊಂದೊಪ್ಪಮಂ ತೋಱುಸುತುಮೆಸೆವ ತನ್ನಾಸ್ಯದಚ್ಛಾಯೆಯಂ ಬಿ
ತ್ತರಿಸುತ್ತುಂ ಮತ್ತಲಂ ಕಾಮನ ವಿಜಯಮಹಾಲಕ್ಷ್ಮಿ ಬಂದಿರ್ದಳೆಂಬಂ
ತಿರೆ ಚೋದ್ಯಂಬೆತ್ತು ಕುಳ್ಳಿರ್ದಸಿಯಳನರಸಂ ನಿಂದು ನೋಡುತ್ತುಮಿರ್ದಂ ೭೨

ವಚನ: ಆಗಳನುಕೂಲನಾಯಕಂ ದೇವನ ಮೊಗಮಂ ನೋಡಿ ಗಾಡಿವಡೆದಿವಳ ಶೃಂಗಾರಂ ನೋಳ್ಪ ಜನದ ಹೃದಯಾಂಗಾರಮಾಗಿರ್ದುದಿವಳನ್ನಳಪ್ಪ ಚೆಲ್ವೆಯನೆಲ್ಲಿಯುಂ ಕಾಣೆನದುಕಾರಣಮೆನ್ನ ಮನಂ ಬೇವುತ್ತುಮಿರ್ದುದೆಂದು ಮುಗುಳ್ನಗೆಯನೊಗೆಯಿಸುತ್ತುಂ ಪೋಗೆ ಮುಂದೊಂದು ಮತ್ತವಾರಣದ ಕೆಲದೊಳ್

ಉತ್ಪಲಮಾಲೆ

ಕೆನ್ನೆಯ ಜೊಲ್ಲೆಯಂ ಪೊಳೆವ ಮುತ್ತಿನ ಮೂಕುತಿ ನೀಲದೋಲೆ ಚೆ
ಲ್ವಂ ನೆಱಿಮಟ್ಟ ಪಟ್ಟಣಿಗೆಯೊಳ್ನಱುಂಪೊಳ್ ನಸುದೋರ್ಪ ನುಣ್ದೊಡೆ
ಪ್ರೋನ್ನತಿವೆತ್ತ ಲೋಚನದ ಕಾಡಿಗೆ ಸಾದಿನ ಬೊಟ್ಟು ದೋರೆವ
ಲ್ಚೆನ್ನಮದಾಗಿ ತೋಱುತಿರಲೊತ್ತಿಗೆ ನಿಂದಳದೊರ್ವಳೊಪ್ಪದಿಂ ೭೩

ವಚನ : ನಾಗರಕಂ ಪೊಸದೇಸಿಪೆತ್ತು ನಿಂದವಳ ಗಾಡಿಗೆಯುಂ ನೋಡುತ್ತುಮಿರ್ದೆಡೆಯೊಳೊಂದು ನೆವದಿಂದಾಕೆಯ ಮೇಲುಮೋಸರಿಸಿ ಪೋಗಲೊಡಂ

ಚಂಪಕಮಾಲೆ

ಮೊಗಮಡಮುಂ ಕಳಲ್ಚಿದ ಮನೋಭವನಂಕದ ಬಿಂಕದಾನೆಯ
ದ್ವಿಗುಣಿತಶೋಭಕುಂಭಯುಗದಂತಿರೆ ಮೇಲುದು ಜೋಲ್ದು ಬೀಳೆ ಮೇ
ಲ್ನೆಗೆದ ಕುಚಂಗಳಟ್ಟಳಿಸಿ ಮುಮ್ಮಳಿಯಾಗಿರೆ ಕಂಡು ಕೌತುಕಂ
ಮಿಗೆ ತಲೆದೂಗಿದಂ ನಡುವೆ ಕೀಲಿತದೃಷ್ಟಿಯುಮಂದು ಕೀಳ್ವವೋಲ್ ೭೪

ವಚನ: ಆಗಳಮನಿವಳಂತರಂಗಶೃಂಗಾರಭಂಗಿಯುಂ ಪರೀಕ್ಷಿಸಿನೋಳ್ಪೆನೆಂದು ಪೋಗಿ ನುಡಿಸಿ ಬಂದು ಧೃಷ್ಟನಾಯಕಂಗಿಂತೆಂದ

ಚಂಪಕಮಾಲೆ

ನುಡಿದೊಡೆ ಕಾಮಮಿಮ್ಮಡಿಸಿದಪ್ಪುದು ಸಾರೆಗೆ ಪೋಗಿ ಸೋಂಕಿದಾ
ಗಡೆ ಬಿಡಮೆಯ್ದೆ ಮೂರ್ಛೆಡಿಸಿದಪ್ಪುದವಳ್ಗೆ ಮನೋಭವಂಗೆ ಸಂ
ಗಡಿಸಿದನಂಟಿದಾವ ತೆಱನೆಂದಱಿಯೆಂ ಸಲೆಗಾಡಿಕಾರ್ತಿಯೋ
ಗಡಿಸದೆ ಕೊಂದಪಳ್ ತವದ ಕಾಮದ ಕೋಟಲೆಯಿಂದೆ ಲೋಕಮಂ ೭೫

ವಚನ: ಎಂದು ನುಡಿದು ನಗಿಸುತ್ತುಂ ಮತ್ತೊಂದೆಡೆಯೊಳೊರ್ವಳ್ ಮುನಿದಿನಿಯನಂ ತಿಳಿಪಲ್ ಕೆಳದಿಯುಂ ಕಳಿಪಿದೊಡವಳ್ ತಡೆದುಬಂದುದಕ್ಕೆ ಕಡುಕನಲ್ದು ಸೈರಿಸಲಾಱದೆ ವ್ಯಂಗ್ಯದಿಂದಿಂತೆಂದಳ್

ಚಂಪಕಮಾಲೆ

ಮೊಲೆಗಳ ಕುಂಕುಮಂ ತೆರಳಿಪೋದುದು ಕಣ್ಣೊಳಗಿದ್ದ ಕಜ್ಜಳಂ
ತೊಲಗಿದುದೆಯ್ದೆ ಬೆಳ್ಪನೊಳಕೊಂಡುದು ಕೆಂಪಧರಂ ಪೊದಳ್ದು ತ
ತ್ಪುಳಕಮಿದಾತನೊಳ್ ನೆರೆದಳೆಂದಭಿಶಂಕಿಸಿ ಮಿಂದುಬಂದೆಯೋ
ಕೆಳದಿ ಮದೀಶನಂ ಕರೆದುಬಂದೆಯೊ ಪೇಳೆನೆ ನಾಣ್ಚಿ ಬಾಗಿದಳ್ ೭೬

ವಚನ: ಅದಂ ಕಂಡೀಕೆ ತನ್ನ ಮರುಳಂ ಮುಚ್ಚಿ ಪೆಱರ ಮರುಳನಾಲೆಂಬ ನಾಣ್ಣುಡಿಯುಂ ಸನ್ನಿಮಾಡಿ ಮಱಸಿನುಡಿದೊಡಾಕೆಯಪರಾಧಮಱಿಯಲಾದುದೆಂದರಸನನುಕೂಲಾದಿಗಳೊಡನೆ ನುಡಿಯುತ್ತುಂ ನಡೆಯೆ ಮುಂದೊಂದೆಡೆಯೊಳೊರ್ವನೆಂದುಮಿಲ್ಲದ ತಪ್ಪನಂದೆಮಾಡಿ ಪುರುಡಿಸಿ ಸೂಱುಳ್ದೊಡಲ್ಲದೊಲ್ಲೆನೆಂದು ರೋಷದಿಂ ಘಾಸಿಮಾಳ್ಪುದುಂ ನೊಂದ ಮನದ ಕಂದಂ ಕಳೆಯಲೆಂದು

ಚಂಪಕಮಾಲೆ

ಬಿಡುಬಿಡು ನಲ್ಲ ಕೋಪದೊದಸಂ ನಿನಗಲ್ಲದೆಯನ್ಯರಿಂಗೆ ಕೊ
ರ್ತಡೆ ರತಿಯಾಣೆಯೆಂದು ತಿಳಿಪಲ್ ವಧು ಕುಂಟಣಿ ಕೇಳ್ದು ಪೇೞ್ದಪಳ್
ಸುಡುವುದೆ ಬಾಯನಾಣೆ ಬಳಿನೀರ್ ಪೊಱಪೊಯ್ದುಱತ ಪೊಟ್ಟೆಯಂ ಸಮಂ
ತೊಡವುದೆ ಮಾರವಲ್ಲಭೆಯ ಸೂಱುಳಿದಂ ದಿಟಮೆನ್ನದಿರ್ ಗಡಾ ೭೭

ವಚನ : ಸೂಳೆಯೊಲ್ದು ಬಿಡಲಾಱದಿನಿಯನನೊಸೆಯಿಸುವ ಜೇವಸೆಯಿಂ ಸೂಱೆಗೊಳ್ಳೊಡದಂ ವಿಫ[1]ಳಂ[1]ಮಾಡಿ ಧನಹೀನನಿವನಿಂದೇನಾದಪುದೆಂದು ಮನಂಬಿಡಿಸುವ ಬಗೆಯಂ ನುಡಿದ ಮುದುಗುಂಟಣಿಯ ವಕ್ರೋಕ್ತಿಯಂ ಕೇಳ್ದವರಿರ್ವರ ಮೋಹಕ್ಕೆ ಪೋಹಮನೊಡರ್ಚಿದಳೆಂದು ದಕ್ಷಿಣನೊಡನನುಕೂಲಂ ನುಡಿದು ನಗುತ್ತುಂ ನಡೆವುದುಂ ಮುಂದೆ ಮತ್ತೊಂದು ಸೂಳೆಮನೆಯೊಳಿರ್ವರುಂ ಬೇಟದ ಕಾಟದಿಂ ಕೋಟಲೆಗೊಂಡೊಡನೊಡನೆ ಮಸೆದು ತೋಟಿ ಮಸಗಿ

ಉತ್ಪಲಮಾಲೆ

ಏಕೆದೆಗೊಯ್ಕೆ ಸೊಕ್ಕಿದಪೆ ಪೋ ಫಡ ಬೀಳಿದೆಗೊಯ್ಕೆ ನೀನೆ ನಾ
ಯ್ಕೇಕೆಗ ಬಾಲಮುಂ ಬಡಿದುಕೊಂಡಪೆ ಹೇಕುಳಿಗೊಂಡನಾಯಿ ನೀ
ನೇಕೆಲೆ ಹಂಚೆ ಬಾಯ್ಬಡಿಯದಿರ್ ಕೊಳೆದೆಂಜಲ ಹಂಚು ನೀನೆಯೆಂ
ದೊಯ್ಕನೆ ಬಂದು ಮಚ್ಚರಿಸಿ ಬನ್ನಮನೆತ್ತಿದರೆಂದು ಸೂಳೆಯರ್ ೭೮

ವಚನ : ಅದಂ ಕಂಡು ಕುಟಿಳವಿಟನರಸನ ಮುಂದಿವಳ್ದಿರ್ ಕಾಮದೇವನಂಕದ ಸೊರ್ಕಾನೆಗಳುರ್ಕಿ ಹೋರಟೆಗೊಂಡಪುವೆಂದು ಕೈಮುಗಿದು ನುಡಿದು ನಗಿಸುತ್ತುಂನಡೆಯೆ ಮುಂದೊಂದೆಡೆಯೊಳ್

ಶಾರ್ದೂಲವಿಕ್ರೀಡಿತ

ಎಂದುಂ ನಲ್ಲರ ಕೂಟವಿಲ್ಲದ ವಿದಗ್ಧಸ್ತ್ರೀಯ ಕೈಯಂ ಮಹಾ
ನಂದಂ ಪೊಣ್ಮಿರೆ ಕಾದಲಂ ಪಿಡಿಯೆ ಕಂಪಂಬೆತ್ತಳೊಳ್ಮಾತನಾ
ಪಿಂದೆಯ್ದಾಡಿಸಿ ಮೆಲ್ಲನೊಪ್ಪೆ ನುಡಿದಳ್ ಬಲ್ಪಿಂದಮಂ ಚುಂಬಿಸ
ಲ್ಕಂದೂಹೂಹು ಮಹೂ ಹು ಮಾಹುಮೆನುತುಂ ಜಾನಂಬರಂ ಕಾಡಿದಳ್ ೭೯

*

ವಚನ : ಅದಂ ನೋಡಿ ಮುಂದಱಿಯದ ಮುಗ್ಧೆಯಂದಕ್ಕೆ ನಸುನಗುತ್ತುಂ ಪೀಠಮರ್ದಕಂ ಹಠವೃತ್ತಿಯ ಜೇಳನಮಂ ಶಠನೊಡನೆ ನುಡಿದು ನಡೆತಪ್ಪುದುಂ ಮುಂದಣೆಡೆಂಪೊಳೊಲುಮ ಭುಜಂಗನುಳಿದೊಡೆ ಮನಂಮುಱುಗಿ ಕಂದಿಕುಂದಿ ಚಿಂತಿಸುತ್ತುಮೊತ್ತಗೆ ಜೇಸತ್ತು ಪೊತ್ತಂಕಳೆವುತ್ತುಮಿರ್ದ ಮುಗಳ್ಗೆ ಟಿಂಟಣಿಸಿ ಕುಂಟಣಿಯೊರ್ವಳಿಂತೆಂದಳ್

1 ಲಂ (ಗಚ) * ವಿರಹವ್ಯಾವರ್ಣನೆ (ಗಚ)

ಮತ್ತೇಭವಿಕ್ರೀಡಿತ

ಪಣಮುಂಟಾದ ವಿಟಂಗೆ ತೋರಿಸಿ ಕಲಾಪ್ರೌಢತ್ವಮಂ ತೋಱುತಂ
ಪಣಮಂ ಕೊಂಬುದು ಕಜ್ಜವಿಲ್ಲದವನ ಸ್ನೇಹಾಭಿಸಂಬಂಧದಿಂ
ದಣುಮಾತ್ರಂ ಫಲಮಿಲ್ಲಮಾಪನೊಳಮೋಹೋದ್ರೇಕದಿಂ ಸೂಳೆಯು
ಗ್ರಣಿಸೇನಪ್ಪುದೆ ಸಿರಿಯಪ್ಪುದೆ ತೊಡಲ್ ಭಂಗಾರಮೇನಪ್ಪುದೇ ೮೦

ಕಂದ: ಸೊಡರ್ಗುಡಿಗೆಣ್ಣೆ ಯನೆಱೆತನಂ
ತೊಡವೆಯನಡಿಗಡಿಗೆ ಕೊಡುವನಂ ಮೋಹಿಸುತುಂ
ನಡೆವುದವನಿಚ್ಛೆಯೊಳ್ ವಿಗೆ
ಕೊಡದವನಂ ಕಾಣ್ಬುದಕ್ಕೆ ಕೊಡದವನನ್ನಂ ೮೧

ವಚನ: ಎಂದು ಪಡಪಾಳಿತನಮನೆ ಮುಂದಿಟ್ಟು ಮಗಳ್ಗೆ ಬುದ್ಧಿಗಲಿಸುವ ಹಡಹು ಕಾರ್ತಿಯ ನುಡಿಯನಾಲಿಸಿ ಬೆಲೆವೆಣ್ಣ ಜೀವಿತವೆಂಬುದಾನಿದು ಪೊಗದಂತೆ ಕೋಡಿಂ ದಲ್ಲದೆ ಪೇಱುಯುದೆಂದು ನಾಡೊಡೆಯಂ ನಾಗರಕಾದಿಗಳೊಡನಿರ್ದು ದರಹಾಸವಿಭಾ ಸಿತಾಸ್ಯಬಿಂಬನಾಗಿ ಬರುತ್ತುವಿರೆ ಮುಂದೊಂದು ಕೆಂದಳಿರ ಪಂದರೊಳಗಣ ಬಾಳದ ಜೇ ಗರ್ಳ ಕೇಗರ್ಟ್ಟಿನೋಂಗಿಯೊಳಗೆ ಚಿತ್ರವಲ್ಲಭನುಳಿದ ವಿರಹಸಂತಾಪದಿಂ ಬಾಡಿ ಗಾಡಿ ಕಾರ್ತಿಯೊರ್ವಳ್ ಪಾಡಿದಳ್

ಮತ್ತೇಭವಿಕ್ರೀಡಿತ

ಬಿದಿಯಂ ಬೈದು ವಿಲೋಚನಾಂಬುಕಣದಿಂದಂ ಸೀರೆಯಂ ತೊಯ್ದು ಮಾ
ಣದೆ ಶೀತಾಂಶುಗೆ ಕಾಯ್ದು ಕೆಯ್ಯತಳಮಂ ಗಂಡಸ್ಥಳಕ್ಕೊಯ್ದು ತಾಂ
ಪದಸೆಜ್ಜಂ ಬಿಡದಪ್ಪುಕೆಯ್ದು ನಿಡುಸುಯ್ಯಿಂ ಸುಯ್ದು ದುಶ್ಚಿಂತೆಯಂ
ಪದಸಿಂದಂದೊಳಕೆಯ್ದು ಪಂಬಲಿಸಿದಳ್ ತನ್ವಂಗಿ ಚಿತ್ರೇಶನಂ ೮೨

ವಚನ: ಆಗಳಾ ಕುಸುಮಕೋಮಳೆಯಂ ಶೀತಳರಸದಿನೆಚ್ಚಱಿಸಲೆಂದು ಕೆಳದಿ ಯೊರ್ವಳೆಯ್ದು ಬಂದು ಶಿಶಿರೋಪಚಾರಂಗಳಿಂ ಸಂತೈಸಲೊಡಂ ಸಂತಾಪವಿಮ್ಮಡಿಸುತ್ತು ಮಿರೆ ಬಸವಳಿದು

ಚಂಪಕಮಾಲೆ

ವಿರಹಿಣಿ ವಕ್ಷದಲ್ಲಿ ಹರಿಚಂದನಕಲ್ಕಮನೊಟ್ಟಿಕೊಂಡಿರು
ತ್ತಿರಲುರಿಯಿಂದ ಮುಂದಣಗೆ ಕುಳ್ಳಿದ ತುಂಬಿ ಪದಂಗಳಳ್ದುವಂ
ತ್ವರಿತದೆ ಕೇಳಲಾಜಿದು ವಕ್ಷಮನೆತ್ತಲನಂಗನಂಬುಗಳ್
ಪರಿದೆನಸಟ್ಟಿರಲ್ ಪೊಜಗೆ ತೋಱುವ ನುಣ್ಗಱಿಯಂತಿರೊಪ್ಪುಗುಂ ೮೩

ವಚನ: ಅದಂ ಕಂಡು ನೀ ಮಾಳ್ಪ ಶಿಶಿರಕ್ರಿಯೆ ಎನಗಸಕ್ರಿಯೆಯಾದುದಿದಕ್ಕೆ ಮನದೊಳಿರ್ದ ಕಡುನಲ್ಲನ ಕೂಟಮೆ ಮರ್ದುಮದಱಿಂದಲ್ಲದೀ ವಿರಹಜ್ವರಮುಪಶಮಿಸ ದೆಂದು ಕೆಳದಿಗಿಂತೆಂದಳ್

ಚಂಪಕಮಾಲೆ

ಇನಿಯನ ಕೂಟಮೊಂದೆ ವಿರಹೋಷ್ಣಮನಾಱುಪುದೆಂತಿರಂತೆ ಪಾ
ವನಶಿಶಿರೋಪಚಾರಮಭಿಕೂಟಮಿದಾಱಿಸಲಾಱದಕ್ಕೆ ಚಂ
ದನರಸದಣ್ಪು ಚಂದ್ರಿಕೆಯ ಸೊಂಪು ಸಮಂತೊಡನೊತ್ತುತಿರ್ದ ಕಂ
ಪಿನ ಪೊಸನೀರಪೊಟ್ಟಣದ ತಂಪು ಸರೋಜದಲಂಪು ನಾಡೆಯುಂ ೮೪

ವಚನ: ಅಂತಾದೊಡಮಿದೊಂದು ವಿಪರೀತಮಂ ಕೇಳೆಂದು ಮತ್ತಮಿಂತೆಂದಳ್

ಉತ್ಪಲಮಾಲೆ

ಎನ್ನಯ ಕೈಯೊಳೋದಿದ ಶುಕಂ ನಡೆಗಲ್ತೆಳೆಹಂಸೆ ನುಣ್ಚರಂ
ಎನ್ನಮದಾಗಲಭ್ಯಸಿಸಿದುತ್ಕಳಕೋಕಿಳಮೆಂಬಿವೆಲ್ಲಮೆ
ಯ್ದೆನ್ನಯ ಶಿಷ್ಯಸಂತತಿಗಳಾಗಿಯುಮೇಕೆನಗಕ್ಕೆ ದುಃಖಮಂ
ಕೆನ್ನಮೊಡರ್ಚುತಿರ್ದಪುವನಂಗನ ಕೂಡೆ ನಿರೀಕ್ಷಿಸಿಂತುಟಂ ೮೫

ವಚನ: ಆ ವಿರಹವಿಹ್ವಳತಾ ವ್ಯಾಕುಳಿತೆಯ ಮುಗ್ಧವಿಳಸನಕ್ಕೆ ಮೇಳದಾಳಿ ನಸು ನಗುತ್ತುಮಿರ್ಪುದುಮದಕ್ಕೆ ಕನಲ್ದು ಪೆಱರ ಪೀಡೆಯುಮಱಿಯದ ಬೋಡಿ ನೀಂ ಪೋಗೆಂದು ತನ್ನ ಕಾಮವ್ಯಸನಮನುಸಿರ್ವ ನೆವದಿಂತೆಂದಳ್

ಕಂದ: ಕಡುನಲ್ಲನ ಬಾಯೆಲರಿಂ
ತೊಡಲುರಿ ಕೆಡುವಂತಿರಕ್ಕೆ ಕೆಡದೀಯೆಲರಿಂ
ಬಿಡು ಪೀಲಿಯ ಬಿಜ್ಜಣಿಗೆಯ
ನಡಿಗಡಿಗಂ ಬೀಸುತಿರ್ಪ ಕೋಟಲೆಯೇಕೌ ೮೬

ವಚನ: ಎಂದು ನೆಟ್ಟನೆ ಮುಟ್ಟಿದೆಡೆಯೊಳಿಂತಾದೊಡಮವನಂ ತಂದು ಕೂಡಿ ದೊಡೆ ಬರ್ದುಂಕುವೆನಲ್ಲದೊಡೆ ಸಾವೆನೆಂದು ಪರಿಚ್ಛೇದಿಸಿದ ನುಡಿಯಂ ಕೇಳ್ದೀಗಳೆ ತಂದೀ ವೆನೆಂದು ತತ್ಕಾಂತನಂತಿಕಕ್ಕೆ ಬೇಗದಿಂ ಪೋಗಿಯಾಕೆಯವಸ್ಥಾಭೇದದ ಸಂಸ್ಥಿಯಂ ತೋಱಿ ಚತುರಚಾಟುವಚನಂಗಳಿಂ[ದಿಂ]ತೆಂದಳ್

ಮತ್ತೇಭವಿಕ್ರೀಡಿತ

ಮನದೊಳ್ ನಿನ್ನಯ ರೂಪಮಂ ನೆನೆದು ಸಚ್ಚೈತ್ಯಕ್ರಿಯಾದಂಭದಿಂ
ಮನಜಾತಂಗಳನರ್ಚಿಸಿ ಪ್ರಣಮನಂಗೆಯ್ದುದ್ಧನಾಮಪ್ರಭಾ
ವನೆಯಂ ಮಂತ್ರಮದಾಗಿಮಾಡಿ ಜಪಿಸುತ್ತುಂ ಸಾಧಿಸುತ್ತಿರ್ದಪಳ್
ತನುಸಂತಾಪವಿಮುಕ್ತಿಯಂ ಪಡೆಯಿಸಾ ನೀಂ ಪೋಗಿ ಸತ್ಸೌಖ್ಯಮಂ ೮೭

ವಚನ: ಎಂದವಳ್ಗೆ ನಿನ್ನ ಮೇಲೆ ಕೈಮಿಾಜಿಂದ ಜೇಟಿವ್ರಂಟೆಂಬಿದಂ ಶೋಜಿಂ ಬಳಿಯಂಮೆಲೆ ಕರುಣಮಿಲ್ಲದ ಪಾಪಿಯಿನ್ನೆಗಮೇನಕ್ಕುಮೆಂದಜಿಂಯೆಂ ನೀಂ ಬಂದಾ ಬಿಂಬಾಧರೆಗೆ ಸಂತೋಷದುತ್ಕರ್ಷಮನೊಡರ್ಚೆಂದು ಕೆಯ್ಯಂ ಪಿಡಿದೆತ್ತಲೆಳ್ದು ಲೇಸಾಗಿ ಪೂಸಿದನುಲೇಪನದಿಂ ವಾಸನೆವಡೆದು ಮಣಿಮಯಾಭರಣಕಿರಣದಿಂ ಮೆಯ್ವೆಳಗಂ ದಳ ವೇಜಿಂಸುತ್ತುಂ ಬಲದ ಕಾಲೊಳಿಕ್ಕಿದ ತೊಡರ ಪೊನ್ನಕಡೆಯದ ಕಡಾರವದೊಡನೆ ತಡಂಗಲಿಸಿ ನೆಗಳ್ವ ಬಿರುದಾವಳಿಯಂ ಪೊಗಳ್ವ ಭಟ್ಟರ ನುಡಿಯನಾಲಿಸುತ್ತುಂ ಸೇವಕ ರಾಜಕುಮಾರರ್ನೋರ್ವನೆಯ್ದಿ ಬಂದು ಬಾಗಿಲೊಳ್ ನಿಂದು ಕೊಡೆ ಬಂದವನನಲ್ಲಿರಿಸಿ ಮನೆಯೊಳಗಂ ಪುಗುವುದುಂ

*

ಮತ್ತೇಭವಿಕ್ರೀಡಿತ

ಇನಿಯಂ ಬಂದುದೆನಂದು ಕಂಡರಲ ಪಾಸಿಂದಂ ಪೊರಳ್ದೆಳ್ದು ಕಾ
ಮಿನಿ ಜೋಲ್ದಳ್ಕುಡೆಯಂ ಮರಳ್ದಿಡದ ಕೆಯ್ಯಿಂ ಸಯ್ತುಮಾಡುತ್ತು ಭೋಂ
ಕನೆ ತಾಂ ಬಂದಮರ್ದಪ್ಪಿಕೊಂಡು ಪುಳಕಂ ಸಾಲೇಳ್ವಿನಂ ಕೂಡೆ ಚುಂ
ಬನಮಂ ಮಾಡಿ ಚಟೂಕ್ತಿಯಿಂದೆ ಪಿರಿದುಂ ಬೊಲ್ಲೈಸಿದಳ್ ಕಾಂತನಂ ೮೮

†

ವಚನ: ಇಂತು ಸೂರ್ಮುಡಿಯಾದ ಕೂರ್ಮೆಯ ಪೆರ್ಮೆಯ ಮೇಜಿಕದು ಪೂವಿನ ಪಾಸಿನಮೇಲೆ ಕಾಂತನ ಮೆಯ್ಸೋಂಕಿಂ ಕುಳ್ಳಿರ್ಪುದುಂ

ಸ್ರಗ್ಧರೆ

ಪಜಿಂತ್ತೆಕ್ಕೆಕ್ಕೆಯಿಂ ಕಾಮಿನಿಗೆ ವಿರಹದಲ್ಲೊಂದೆರಳ್ಮೂಜು ನಾಕ್ಕೈ
ದಾಜೆಳೆಂಟೊಂಬತುಂ ಪತ್ತೆನಿಪಧಿಕದಶಾವಸ್ಥೆ ಕುಂದಿಕ್ಕು ತನ್ನಾ
ನೀಜಂ ಬಂದಿಂಬಳಿಕ್ಕಂ ಘನಪುಳಕಮನಾಳ್ವೆಳ್ಗೆ ಪತ್ತೊಂಬಡೆಂಟೇ
ಳಾಜೈದುಂ ನಾಲ್ಕುಮೂಜುಂ ತಡೆಯದೆರಡುಮೊಂದುಂ ದಲಿಲ್ಲಾಗಿ ಮತ್ತಂ ೮೯

ವಚನ: ಇಂತಪ್ಪ ವ್ಯಾಮೋಹಮುದ್ದಾಮತೆಯಿಂದಾದ ಕಾಮುಡಾಮರದೊಳ್ ತೊಡಂಕಿ ಮಿಡುಂಕುವುದುಂ ಕಂಡು ಬೆಗಡುಗೊಂಡು ವಿದೂಷಕಂ ತನ್ನೊಡನಾಡಿಗಳ್ಗಿಂ ತೆಂದಂ

ಉತ್ಪಲಮಾಲೆ

ಪಲ್ಲಿನಗಲ್ಲೆಯುಂವಳಲ್ನೆಯ್ದಿ ಬರ್ದುಂಕುವುದೊಳ್ಳಿತಲ್ತು ಕೀ
ಳಲ್ಲದೆ ಬಳ್ದೊಡಂ ನೆಜಿತಿಯೆ ಕೂರ್ಪುದದಾರೊಳಮೊಳ್ಳಿತಲ್ತು ಮೇಣ್
ಸಿಲ್ಲದೆ ಕೊರ್ಡಿಡಂ ಮುನಿದಗಲ್ವುದು ಭಾವಿಪೊಡೊಳ್ಳಿತಲ್ತು ತ
ಳ್ಪಿಲ್ಲದಗಲ್ದು ಜೀವಿಪುದಿದಿಲ್ಲಿಯೆ ನಾರಕದುಃಖಮಲ್ಲದೇ ೯೦

---

* ಸಂಭೋಗವ್ಯಾವರ್ಣನೆ (ಗ)

† (ಚ) ಪ್ರತಿಯಲ್ಲಿ ೮೮ನೆಯ ಪದ್ಯದ ವಚನದಿಂದ ೧೧೭ನೆಯ ಪದ್ಯದವರೆಗೆ ಸ್ಫುಟವಾಗಿಲ್ಲ

ವಚನ: ಎನೆ ವಿದೂಷಕನಿದು ಬರ್ದುಂಕುವನ್ನೆವರಂ ಪೋಗದ ರೋಗಮೆಂದು ನುಡಿದು ನಗಿಸುತ್ತುಂ ಪೋಗೆ ಮತ್ತಂ ಮುಂದೊಂದು ಚಂದ್ರಕಾಂತಮಯಮುಂ ಮಂಡಪಕ್ಕಲಂಕಾರಮಾದುಪರಿಮ ಸೌಧತಳದ ಸುರತಾಗಾರದೊಳಗೆ

ಕಂದ: ಮಂಚದ ಶಕುನಿಯ ಪಾರಿವ
ದಂಜೆಯ ಮೆಲ್ಲುಲಿಯುಮೆಯ್ದೆ ಕೂಡುವರುಲಿಯುಂ
ಸಂಚಿಸಿ ಕಿವಿಗಳನೆಯ್ದೆ ಪ
ಳಂಚಲೆದುದು ಮದನದುಂದುಭಿಧ್ವನಿಯನ್ನಂ ೯೧

ವಚನ: ಇಂತು ವಿಚಿತ್ರಸಂಭೋಗಸಂದರ್ಭಸಮಾವಿರ್ಭಾವನಿರ್ಭರಪ್ರಣಯಪರವಶತೆಯಿಂ ನೆರೆವ ಕಾದಲರ ಕಾಮುಕಕೇಳೀಕಳಕೂಜನಕೋಳಾಹಳಂ ನಾಗರಕದಕ್ಷಿಣಾದಿಗಳ ಕಿವಿಗೆ ಸವಿಯನವಟೈಸುವುದುಂ

ಮತ್ತೇಭವಿಕ್ರೀಡಿತ

ಕರದಿಂ ಮೋದಿಕೊಳುತ್ತುಮಳ್ಕಿರ್ದ್ಯನಾ ದೇವಂಗಿದಿರ್ಗಂಡಲೇ
ಶರಣಾಯಾತನೃಪವ್ರಜಪಂಜರಕ ನೀಂ ಪೆಣ್ಬುಯ್ಯಲಂ ಕೇಳ್ದು ಭೂ
ವರನಾರಯ್ಯದ ನೋಡದಿರ್ದೊಡಮುಪೇಕ್ಷಾದೋಷಮಕ್ಕುಂ ದಲೀ
ಧರೆಯೊಳ್ ಗಂಡುತನಕ್ಕೆ ಬಕ್ಕ ಪಳಿ ಚಿತ್ರೈಸಿತ್ತಲೆಂದಂ ವಿಟಂ ೯೨

ವಚನ: ಬಳಿಯಮನುಕೂಲಾದಿಗಳ್ವೆರಸಿ ನರಪತಿಶಿರೋಮಣಿ ಪೋಗಿ ಗವಾಕ್ಷವಿವರ ಪರಿನಿಕ್ಷಿಪ್ತನಿರೀಕ್ಷಣರಾಗಿ ನಿಂದು ನೋಡುತ್ತುಮಿರ್ಪನ್ನೆಗಂ

ಮಹಾಸ್ರಗ್ಧರೆ

ಪುಳಕಂಗಳ್ ಕೀಳ್ಗಳಿಂಬಂದೊಳನೊಳಪುಗೆ ತರ್ಕೈಸಿಕೊಂಡಿರ್ದ ಮೆಯ್ಯ್ ಮೆ
ಯ್ಯೊಳೆ ಕಾಮಂ ಕಾಸಿ ಬೆಚ್ಚಂ ಮಿಥುನದ ತನುವಂ ನೋಳ್ಪಡೆಂಬಂದದಿಂದಂ
ತ್ರಿಗುತ್ತಿರ್ದಾ ಸ್ವರೂಪಂ ಬಗೆಯೊಳಗೆಂದುಸಿತ್ತರ್ಧನಾರೀಶ್ವರಾತ್ಯು
ಜ್ಜ್ವಳಮೂರ್ತಿಭ್ರಾಂತಿಯಂ ಕೂಟದ ಪಡುತನಕಂ ಚಿತ್ರದೊಳ್ ಕೊರ್ವಿ ಪರ್ವಲ್ ೯೩

ಕಂದ: ಗಂಡಸ್ಥಳಚಿಬುಕಾಧರ
ಮಂಡಳ ಚೂಚುಕವಿಲೋಚನ ಭ್ರೂಸ್ಥಾನಂ
ಗೊಂಡು ಪರಿಚುಂಬಿಸಿದನು
ದ್ದಂಡಂ ಪೀರ್ವಂದದಿಂ ಸುಖಾಮೃತರಸಮಂ ೯೪

ಚಂಪಕಮಾಲೆ

ನಿಱಿವಿಡಿದುಟ್ಟ ಸೀರೆಯೊಳಗೆಂಬ ಧರಾತಳದಲ್ಲಿ ನಾಡೆಯುಂ
ಮಱಸಿದ ಕಾಮಿನೀಜಘನಮೆಂಬ ನಿಧಾನಮನೊಲ್ದು ಕಾಯ್ದು ಕೊಂ
ಡುಱಿ ಬಳಸಿರ್ದ ಮೇಖಳೆಯುಮೆಂಬಹಿಯಂ ವಿಟನೆಂಬ ಮಾಂತ್ರಿಕಂ
ನೆಱೆಗಳ ರಾವಮಂತ್ರದುಲಿಯಿಂ ಪೆಱಪಿಂಗಿಸಿಕೊಂಡನಂತದಂ ೯೫

ವಚನ: ಆ ಪೊತ್ತಿನೊಳ್

ಕಂದ: ಇರ್ಬರ ನಿತಂಬಮಂಡಳ
ಮುರ್ಬೆಳ್ದು ವಿಚಿತ್ರಮಾಗಿ ಕುಣಿದಾಡುವುದಂ
ನಿರ್ವಹಿಸಿ ತೋರ್ಪ ತೆಱನದ
ಗುರ್ವಿಸಿದುದುಮೊಳ್ಪುಗಂಡೊಡಾವನೊ ನಲಿಯಂ ೯೬

ಉತ್ಪಲಮಾಲೆ

ಭಂಡಿಸಿ ಬೈದ ಬೈಗುಳನೆ ಲಾಲಿಸಿ ಬೇಡುವ ಪೊಯ್ಪ ಪೊಲ್ಗೆಯು
ದ್ದಂಡಿಸಿ ಮೆಯ್ಯನೊಡ್ಡುವ ನಖಕ್ಷತಿಗಾಯತಮಪ್ಪ ಸೊಕ್ಕು ಮೆ
ಯ್ಗೊಂಡಱಿ ನಿಲ್ವ ಕೂಡೆ ಕಡುಗೂಡುವ ಸಂಭ್ರಮಮುಣ್ಮಿಪೊಣ್ಮಿ ಕ
ಣ್ಗೊಂಡಿರೆ ಕೂಡುತಿರ್ದುದು ವಿದಗ್ಧವಿಟೀವಿಟಮೇಟಮುತ್ಕಟಂ ೯೭

ಕಂದ: ಸೂಳ್ವಡೆದ ಕೂಟದೊಳ್ ನಾ
ಣ್ಕೇಳ್ವನುವಿಂ ಬೇಟದಿಚ್ಛೆಯುಬ್ಬುವ ಜಾಣ್ಣುಡಿ
ಗೇಳ್ವರನರಿಂದೆ ಸುಖದಿಂ
ಬಾಳ್ವನಿಯರ್ ನೆರೆದರತನುಜಂತ್ರದ ತೆಱದಿಂ ೯೮

ಕೊರಲಸರದೊಡನೆ ಕುಟ್ಟುವ
ಬೆರಲುಲಿಯನುಕೂಲಮಾಗಿ ಕೂಡಿ ಶ್ರುತಿವೆ
ತ್ತಿರೆ ರತಿ ಬಾಜಿಸ ಬೀಣೆಯು
ಪರಿಯಂ ಪೋಲ್ತೊಪ್ಪಿದತ್ತು ಕೂಡುವ ಮಿಥುನಂ ೯೯

ವಚನ: ಇಂತು ಪೆರ್ಚುವೆರ್ಚಿ ತಮ್ಮಿಚ್ಛೆಯಿಂ ನೆರೆವಾಗಳ್

ಮತ್ತೇಭವಿಕ್ರೀಡಿತ

ಉರಮಂ ಕುಟ್ಟಿದೊಡಂ ನಖಾಗ್ರಮುಖದಿಂ ದೋರ್ಮೂಲಮಂ ಸೀಳ್ದೊಡಂ
ಮರಕಾಲಿಣ್ಬಮನಾಂತ ಪೆರ್ಮೊಲೆಗಳಿಂದಂ ತಾಡನಂಗೆಯ್ದೊಡಂ
ಕೊರಲಂ ಕರ್ಚಿದೊಡಂ ವಿಟೀವಿಟಜನಕ್ಕಾಯ್ತಿಲ್ಲ ನೋವೇನುಮಾ
ದರದಿಂದಂದಧರಾಮೃತಪ್ಲವದ ಸೇವಾಸೌಖ್ಯಮೇಂಕಾರಣಂ ೧೦೦

ವಚನ : ಮತ್ತಂ ನಿರ್ವರ್ತಿತವಿಚಿತ್ರನವೀನನಾನಾವಿಧಕರಣಪರಿವರ್ತನದಿಂ ಪುರುಷಾಯಿತಸುರತಸುಖದೊಳ್

ಕಂದ : ಇನಿಯನುರದಲ್ಲಿ ಬಿಳ್ದುದು
ವನಿತೆಯ ನೆಲೆಮೊಲೆಗಳಿಂ ಬೆಮರ್ವನಿಗಳ ಪಾ
ವನಧಾರೆಯುಪರಿಸುರತದೊ
ಳನುವಿಂ ಕಾಮಾಗ್ನಿಗಾಹ್ಯಗಾಹುತಿಯನ್ನಂ ೧೦೧

ವಚನ: ಅನವರತಮನುಸ್ಯೂತ ಸ್ತ್ರೀಸೇವಾಸಂಬಂಧಮುಖದಿಂ ಪೂರ್ವಮಾದೊಡಮಭಿನವಮಣಿತಾದಿ ಕ್ರಿಯಾವಿಶೇಷವಶದಿಂದಪೂರ್ವಮಾಗಿ ಸಂಭವಿಸಿದ ನಿಮಿಾಲಿತನ ಯುಗಳಸಮುಭಿನಂದದಾನಂದಸಂದೋಹಸಮಾಸ್ವಾದನರೂಪಸಂಭೋಗಸುಖಾನುಭವದ ರಸಾನುಸಮಯದೊಳ್

ಚಂಪಕಮಾಲೆ

ಬೆಮರಿಳಿದೊಯ್ಯನಾಱೆ ಬೆಳರ್ವಾಯ್ ಮಿಸುಪೇಱೆ ಬಳಲ್ದು ನೀಳ್ದ ಸುಯ್
ಸಮನಿಸೆ ಕಣ್ಣ ಕೆಂಪು ಪರಿರಂಜಿಸೆ ವಾಸನೆ ಪೆಱದೊಂದು ದೇ
ಹಮನಡರ್ದೊಪ್ಪೆ ಬಲ್ಪು ನೆಱೆತಪ್ಪೆ ಗವಾಕ್ಷದ ಗಾಳಿಗಾಸೆಗೆ
ಯ್ಯುದ್ದಿರೆ ರತಾಂತ್ಯದೊಳ್ ವಿಟವಿಟೀಜನಮಾಂತುದಪೂರ್ವಶೋಭೆಯಂ ೧೦೨

ಕಂದ : ಮಿಱುಗುವ ಕೆಂಪಧರದ ನು
ಣ್ಣಱೆ ತೋಱೆಕೆವೆತ್ತುದಮೃತರಸಸೇವನೆಯಂ
ನೆಱೆಮಾಡಿಯುಳಿದುದಕ್ಕಂ
ಕುಱುಪಿನ ಪೊಸಮುದ್ರೆಯಿಟ್ಟನಿನನೆಂಬಿನೆಗಂ ೧೦೩

ಮೊದಲಿಂ ತುದಿವರೆಗಂ ಕೆಂ
ಪೊದವಿದ ನಖರೇಖೆ ಸುತ್ತಲುಂ ನೀಳ್ದಿರೆ ಪೆ
ರ್ಚಿದ ಮೊಲೆಯ ಮೇಲೆಯುದು ಪೋ
ಲ್ತುದು ಮದನಸುವರ್ಣಕಳಶಮುದ್ರಾಕ್ಷರಮಂ ೧೦೪

ವಚನ: ಇಂತು ಕಾಮುಕಕಾಮುಕೀನಿಕಾಯಂ ಮಾಳ್ಪ ಕಾಮವಿಕಾರದ ವಿನೋದಕೌತುಕಮಂ ಕಂಡು ಚತುರಚಕ್ರವರ್ತಿ ಮೆಚ್ಚುತ್ತುಮಲ್ಲಿಂ ಪೋಗಲನುಗೆಯ್ವಾಗಳೊರ್ವಳೊಡರ್ಚಿದ ಸುರತಮಂ ಪೆರ್ಚಿದ ಕಡುಮೋಹದಿಂದಿನಿಯನಂ ಬಿಡಲಾಱದಾಲಿಂಗನಂಗೆಯ್ದು ಕಾರ್ಯಾಂತರಾತುರತೆಯಿಂದೊಳಗಂ ಪೊಱಮಟ್ಟದಿರಂ ಬರ್ಪಳಂ ನಾಗರಕಂ ನಡೆನೋಡಿ

ಕಂದ: ಮಿಗೆ ಗುಜ್ಜುಗೊಂಡ ಪೆರ್ಮೊಲೆ
ಬಿಗಿದಪ್ಪಿದ ಸವಿಯನೆಸಗೆ ಪಿಸುಣಾಡುವವೊಲ್
ಬಗೆಗೆ ಬಂದತ್ತು ಚೋದ್ಯಂ
ಮಿಗುವೀಕೆಯ ನಾಟುಗೊಂಡ ಜೇಟದ ಕಾಟಂ ೧೦೫

ವಚನ: ಎಂದು ನುಡಿದ ನಾಗರಕನ ಮಾತಿಂಗೆ ನೀತಿರತ್ನಾಕರಂ ಮುಸೆಂಗೊಂಡು ನಗುತ್ತುಂ ಬರ್ಪನ್ನೆಗಂ ಪಿರಿದೊಂದು ಸಂಭೋಗಭವನದ ಮುಂದಣಪ್ರದೇಶದೊಳು ಗೋಷ್ಠಿಯಾಗಿ ನೆರೆದಿರ್ದ ಚಟುಪಟುವಿಟಪಟಳಮಂ ಕಂಡಿಲ್ಲಿ ಕಾಮತತ್ತ್ವ ಮೀಮಾಂಸಾ ರಹಸ್ಯಮನೇನಾನುಮನೊಂದಂ ಕೇಳಲಕ್ಕುಮೆಂದು ಪೋಗಿ ನಟ್ಟನಡುವೆ ನಿಂದು ಕೇಳುತ್ತುಮಿಪ್ಪಿನಮೋರ್ಗರವೇಂಟದ ಭೋಗಿವಿಟನೋರ್ವಂ ಸುರತದೆಡೆಯೊಳ್ ತನ್ನೋಪಳ ಮಾಟಮಂ ನೆನೆನೆನೆದು ಮನಮುರ್ಬಿ ಸೈರಿಸಲಾಱದೆ ಕೆಳೆಯಂಗಿಂತೆಂದಂ

ಉತ್ಪಲಮಾಲೆ

ಇಂದಿರುಳೆನ್ನಕೂಡೆ ನೆರೆವಾಕ್ಷಣಮೋಪಳದೊಂದು ಕೆಯ್ತ್ತಮಂ
ಸಂಧಿಸಿ ಬಯ್ತ್ತು ಬಯ್ಕೆಯಿನಸಲೆನ್ನಯ ಚಿತ್ತದೊಳಿರ್ದದೀಗಳಾ
ಸೌಂದರಿಯಂದದಿಂ ಸುರತದೊಳ್ ಕಡುಜಾಣೆಯನಂತುಕಾಣೆನಾ
ನೆಂದು ಪ್ರೌಢೆಯೊಳ್ ಕುಲಟೆಯೊಳ್ ಬೆಲೆವೆಣ್ಣೊಳಮಾರೊಳಾದೊಡಂ ೧೦೬

ವಚನ: ಮತ್ತಂ

ಚಂಪಕಮಾಲೆ

ಪದನಱಿದೊಲ್ದು ಚುಂಬಿಸುವ ಸೋಂಕಿದೊಡಂ ಬಿಗಿದಪ್ಪಿಕೊಳ್ವ ಮಾ
ಣದೆಯಧರೋಷ್ಠಮಂ ಸವಿವ ಕಣ್ಮಲರಂ ನಸುಮುಚ್ಚಲಿಚ್ಚೆಱಿಂ
ಪಮುಳಿಸಿ ಮಾಳ್ಪ ರಾಗರಸದಿಂದಮೆ ನೋಳ್ಪನಿಯಳ್ಗೆ ಜೇಡಿತಂ
ಪಡೆದಿರದೀವುದೊಲ್ವುದಿಳಿಕೆಯ್ವುದು ಕೊಳ್ಳಿಸಿ ತಿಂಬ ಥಾಳಿಯಂ ೧೦೭

ವಚನ: ಇಂತೆಂಬೆಳವೆಂಡಿರ ತಂಡದ ನುಡಿಯಂ ಮೆಯ್ಗರೆದಾಲಿಸಿ ಭೂಮಂಡಳಾಧೀಶ್ವರಂ ಸಡಗರಂಗೊಂಡು ಮೆಚ್ಚುತ್ತುಂ ನಡೆತಪ್ಪಾಗಳ್ ಮುಂದೊಂದು ಸಮುತ್ತುಂಗ ಶೃಂಗಾರಾಗಾರದ ಪುರೋಭಾಗದೊಳ್ ನಿಂದು ನಾಲ್ದೆಸೆಯಂ ನೋಡುತ್ತುಮಿಪ್ಪಾಗಳ್ ಪಡುವಗಡೆಗಿಳಿಪು ಕುಂದಿಕೊಂಡಿರ್ದ ಚಂದ್ರನಂ ಕಂಡು ವಿದೂಷಕನರಸನ ಮೊಗಮಂ ನೋಡಿ ದೇವರಿತ್ತಲವಧರಿಸಿಯೆಂದು ಸುಟ್ಟಿತೋಱಿ ಪ್ರಹಸನಮುಖದಿಂದಿಂತೆಂದಂ

ಸ್ರಗ್ಧರೆ

ನೀಮೆಲ್ಲಂ ನೋಡಿ ರಾಗಂಬಡೆದನುದಯದೊಳ್ಪೆರ್ಚೆ ಬಾಳ್ವಾಕ್ಷಣಂ ಸ
ದ್ಭಾವಂ ಕೈಮಿಕ್ಕು ತಾಳ್ದಂ ಘನಶುಚಿತೆಯನೀಗಳ್ ಕರಂ ಕೊರ್ಬಿ ಶುಕ್ಲಂ
ದೇಮಂ ವಾರಾಂಗನಾಂಗಳನುಱಿ ಕರದಿಂ ಮುಟ್ಟಿರಲ್ ಕುಂದಿ ಚಂದ್ರಂ
ಮೂವಣ್ಣಂ ಬಂದನಾನಿನ್ನಱಿಯೆನಿವಗೆ ಮುಂದಪ್ಪುದಂ ಕಟ್ಟಿನಯ್ಯೋ ೧೦೮

ವಚನ: ಅಂತುಮಲ್ಲದೆಯುಂ

ಮತ್ತೇಭವಿಕ್ರೀಡಿತ

ಕಡುಸೊಂಪಂ ಪಡೆದಿರ್ದ ಚಂದ್ರನಿರುಳೆಂಬೀ ಸೂಳೆಯೊಳ್ ಕೂಡಿ ಸಂ
ಗಡಿಸಿಂ ತೀರ್ದೊಡೆ ತೀರ್ದುದಾತನ ಸುವರ್ಣಂ ವಾರನಾರೀಜ್ಞೈಯೊಳ್
ತೊಡರ್ದಿರ್ದಂ ಕೆಡದಿರ್ಪನಾವನೊ ಧರಿತ್ರೀಚಕ್ರದಲ್ಲಿನ್ನುಮಿ
ರ್ದೊಡಮಕ್ಕುಂ ತದವಸ್ಥೆ ಮತ್ತೆ ನಮಗಂ ಚಿತ್ತೈಸಿಕೊಳ್ಳೆಂತುಟಂ ೧೦೯

ವಚನ: ಇಂತೆಂಬವನುಕ್ತಿಯ ವಕ್ರಿಮಕ್ಕೆ ಸಾರ್ವಭೌಮಸರ್ವಜ್ಞಂ ಮನದೊಳ್ ಮೆಚ್ಚಿ ಬಳಿಯಮಾಪಣವಧೂಸಂಗದಿನೀ ಪಣಭಂಗಮಕ್ಕುಮಿನ್ನಿಲ್ಲಿ ಪ್ಪುದನುಚಿತಮೆಂದು ಭೂಮಿಸೀಮಿರಾಮಸಮಯಮನುಪಲಕ್ಷಿಸುತ್ತುಮಿರ್ಪುದುಂ

ಮಹಾಸ್ರಗ್ಧರೆ

ನವಕಾಮಕ್ರೀಡೆಯೊಳ್ ಮಾಡುವ ಸರಸವಿನೋದಂಗಳಾಲೋಕದಿಂ ರಾ
ತ್ರಿವಿಹಾರಂ ಮತ್ತೆ ಯಾಮತ್ರಿತಯದ ಕಡೆಯಂ ಕಾಣಿಸಿತ್ತೆಯ್ದೆ ನಲ್ಪೋ
ತ್ಸವದಿಂದಾ ಧರ್ಮನಾಥಂಗರೆಘಳಿಗೆಯಿಂದೆಂದೆಂಬಿನಂ ಯಾಮಭೇರೀ
ನಿವಹಂ ಘೋರೆಂದುದಾಗಳ್ ಕರೆಸವೊಲಸರಂ ಕೇಳ್ವುದಂ ಧೃಷ್ಟನೆಂದುಂ ೧೧೦

ವಚನ: ತಡೆಯದೆ ಬಿಜಯಂಗೆಯ್ವುದಲ್ಲದೊಡೆ ಸಮ್ಮುಖ ಮನವಿಲ್ಲಿಯ ಸೂಳೆಯರಂ ಕಂಡೊಡೆ ಸ್ಥಿತಿ ನಿಲ್ಲದೆಂದು ಬಿನ್ನಪಂಗೆಯ್ದು ರಾಜಭವನಕ್ಕಭಿಮುಖಂ ಮಾಡೆ

ಕಂದ: ನಗರ ಸ್ತ್ರೀಪುರುಷರ ದೃ
ಷ್ಟಿಗಳ ವಿಷಂ ಸೋಂಕೆ ಬಾಡೆ ಸೊಪ್ಪಾದುಜಿತ ಮ್ಮೆ
ಲಗೆವೆಳ್ದಿಂಗಳ ಸೋಂಕಂ
ಮಿಗೆ ಸೈರಿಸಲಾಜಿತನೆಂಬಿನಂ ಪತಿ ಪೋದಂ ೧೧೧

ವಚನ: ಅಂತು ಬೇಗದಿಂ ಪೋಗಿ ರಾಜಾಲಯದ ಬಾಗಿಲೊಳ್ ನಿಂದು ಕೂಡೆ ಬಂದವರಂ ವಿಸರ್ಜಿಸಿ ಕಾಮೋದ್ದೀಪಕೋಪಕರಣಸಜ್ಜಿತಮಾದ ಸೆಜ್ಜೆವನೆಗೆ ಬರ್ಪುದುಂ ಮುನ್ನಮೆ ಸೂಳ್ಗೆವಂದು ಬರವಂ ಪಾರುತ್ತಂ ತಳ್ಪತಳದೊಳಿರ್ದ ಶೃಂಗಾರವತೀದೇವಿಯಿದಿರೇಳ್ವುದುಮಾಗಳ್

ಕಂದ: ಮುಟ್ಟಿದೊಡೆ ಸುಖದ ಸೊಕ್ಕಂ
ಪುಟ್ಟಿಸುವತಿಮೃದುಮೆನಿಸಿಪ್ಪವಾಪ್ಪತಿಯಿಂ ನೇ
ರ್ಪಟ್ಟ ಗುಣದಿಂದೆ ಪೆಣ್ಣೆನೆ
ನೆಟ್ಟನೆ ಚೆಲ್ವಾದ ಹಾಸನರಸಂ ಸಾರ್ದಂ ೧೧೨

ವಚನ: ಮತ್ತಂ ಕಾಮಂ ರತಿಯ ಕೆಯ್ಯಂ ಪಿಡಿದು ತೆಗೆಸಂತಿರಾತನಾಕೆಯ ಕರಮಂ ಪಿಡಿದು ಬಲ್ಪಿಂದಲ್ಲಿ ಕುಳ್ಳಿರಿಸುವುದುಂ

ಮತ್ತೇಭವಿಕ್ರೀಡಿತ

ತಡೆದಾ ಭೂಪತಿ ಬಂದುದಕ್ಕೆ ಮುನಿದೀರ್ಷ್ಯಾಕೋಪದಿಂ ನೋಡಲಾ
ಗಡೆ ಚಾಟೂಕ್ತಿಯ ಲಲ್ಲೆಯಿಂದ ಸತಿಯಂ ಸಂತೈಸಿ ಚಿತ್ತಕ್ಕೊಡಂ
ಬಡುವಾಲಿಂಗನ ಚುಂಬನಾದ್ಯುಚಿತ ತದ್ವ್ಯಾಪಾರದಿಂದರ್ಥಿ ಮುಂ
ದಿಡೆ ಸಂಭೋಗಸುಖಂಗಳಿಂ ತಣಿಪಿದಂ ಕಾಮಾಂಗಮಭ್ಯಾಸಿತಂ ೧೧೩

ವಚನ: ತದನಂತರಂ

ಚಂಪಕಮಾಲೆ

ಸತಿ ಸುರತಾಂತ್ಯದೊಳ್ ನಿಜಮನಃಪ್ರಿಯನಂ ಬಿಗಿದಪ್ಪಿಕೊಂಡು ಮೋ
ಹಿತೆ ಬಿಡಲಾಱದಚ್ಚಳಿಯುದಿರ್ದೊಡೆ ನಿದ್ರೆಯ ಭಾರದಿಂದೆ ಮು
ದ್ರಿತಘನನೇತ್ರರಾಗೆಯೊಡಗೂಡಿದ ಬಾಯ್ ಪುದಿದಿರ್ದ ಪುರ್ಪು ಮ
ತ್ತತಿಶಯಮಾದುದಿಬ್ಬರಿಗಮೊಂದೆಶರೀರಮಿದೆಂಬ ಮಾಳ್ಕೆಯಿಂ ೧೧೪

ವಚನ: ಅಂತಡಿಕಿಲ್ಗೊಂಡಿರ್ದೇಳುಂಪಾಸಿನಮೇಲೆ ಪಧೂಪರರಿರ್ಬರುಂ ನಿಧುವನ ಪರಿಶ್ರಮದಿಂ ಸುಷುಪ್ತಿಸುಖಾಭಿಮುಖರಾಗಿರುತ್ತುಮಿರಲೊಂದು ಮುಹೂರ್ತಮಾತ್ರ ಮುಳಿದ ಮನೋಹರಿಯೆಂಬ ಜೆಳಗಪ್ಪ ಜಾವದ ಕಡೆಯೊಳ್

ಕಂದ: ಉದಿರ್ದಲ್ಲೊಕ್ಕ ನಭೋಭೂ
ಜದ ಪೂಗಳ ಬಳಗಮೆಂಬಿನಂ ತೊಳಗುವ ನು
ಣ್ಗದಿರೊಳ್ಪು ಮಸುಳಿಸುತ್ತಿರೆ
ಪದೆಪಿಂ ನೀರೋಡಿ ಬಾಡಿದವು ತಾರಗೆಗಳ್ ೧೧೫

*

ಮತ್ತೇಭವಿಕ್ರೀಡಿತ

ಮಿಗೆ ದೋಷಾಕರನಾಗಿಯುತ್ಪಳಮಧುಪ್ರೀತಂ ದಲಾಗಿರ್ದು ದಂ
ದುಗದಿಂ ತೇಜಮುಡಂಗಿಪೋಗಿ ಪಿರಿದುಂ ಮೆಯ್ ಕಂದಿ ಕಪ್ಪಾಗಿ ಕೈ
ಮಿಗೆ ಸೊಕ್ಕುಬಿ‌ಂ ಕಡಂಗಿ ಸಾರ್ದನಪರಾಶಾ[1][ದ್ರಿಂ][1]ದ್ರಮಂ ಚಂದ್ರಮಂ
ಜಗದೊಳ್ ನಾಶಮನೆಯ್ದನಾವನೊ ಮಹಾದುರ್ವೃತ್ತಿಮತ್ತಾತ್ಮಕಂ ೧೧೬

ವಚನ: ಆಗಳ್ ಪೂರ್ವಾಶಾಪ್ರದೇಶದಲ್ಲಿ

---

[1] ಧೀಂ (ಕಗ)

* ಚಂದ್ರಾಸ್ತಮಾನ (ಗ)

ಕಂದ : ಬಳಸಿ ಪೊಳೆಯುದಯರಾಗಂ
ಥಳಥಳಿಸಿತ್ತಿಂದ್ರದಿಕ್ಕುಮಾರಿಕೆ ನೀನು
ಜ್ವಳದುದಯರಾಗಮೆಂಬ
ಗ್ಗಳಪಟ್ಟಾವಳಿಯನೊಲ್ದು ಕೊಟ್ಟಟ್ಟಿದವೋಲ್ ೧೧೭

ಮತ್ತೇಭವಿಕ್ರೀಡಿತ

ಪದೆಪಿಂ ಮೆಯ್ ಮುರಿದೆಳ್ದು ನೀಡಿ ಕೊರಳಂ ಪಕ್ಕಂಗಳಂ ಬಿರ್ಚಿ ಮಾ
ಣದೆ ಕುಕ್ಕೂಯೆನುತೊಲ್ದು ಕೂಗಿದುದು ಜಾವಂಗೋೞಿ ತತ್ಸುಪ್ರಭಾ
ತದೊಳಂ ಪಕ್ಕಿಗಳೆಯ್ದೆ ತಮ್ಮ ನೆಲೆಯೊಳ್ ಚೀಚೀಪುಚೀಚೀಪುಚೀ
ಪೊದವಲ್ ಚಿಂಚಿಲಿ ಚಿಂಚಿಲೆಂದು ದನಿಗೆಯ್ವುತ್ತಿರ್ದವಾ ಪೊತ್ತಿನೊಳ್ ೧೧೮

ಚಂಪಕಮಾಲೆ

ಅರೆಬಿರಿಮುತ್ತುಮಿರ್ದ ಕಮಳಂಗಳೆಸಳ್ಗಳನೆಯ್ದೆ ಬಿರ್ಚಿ ಬಂ
ಧುರಮಕರಂದದೊಳ್ ಪೊರೆದು ಶೈತ್ಯಸುಸೌರಭಮಾದ್ಯಮೆಂಬ ತ
ನ್ನುರುಗುಣಸಂಪದಂಬೆರಸು ಮಂದಸಮೀರಣಮಾ ಪ್ರಭಾತದೊಳ್
ಸುರುಚಿರಮಾಗಿ ಬೀಸಿದುದು ಸರ್ವಜನಕ್ಕೆ ಸುಖಪ್ರದಾಯಕಂ ೧೧೯

ವಚನ : ಮತ್ತಂ

ಮತ್ತೇಭವಿಕ್ರೀಡಿತ

ತಿಮಿರಂ ಜಾಱೆ ಸರೋಜಷಂಡಮಲರ್ದ ವ್ಯಾನಂದಮಂ ಬೀಱೆ ಯೋ
ಗಿಮನಂ ಧ್ಯಾನಮನೇಱೆ ಕೋಕಮಿಥುನಂ ಸಂತೋಷಮಂ ಪೇಱೆ ಸಂ
ಭ್ರಮಮುಂ ಸರ್ವಜನಕ್ಕೆ ಶೋಱೆ ದೆಸೆಗಳ್ ಕೆಂಪಾಗಿ ಪೂರ್ವಾದ್ರಿಯಂ
ಕ್ರಮದಿಂ ಬಂದಿರದೇಱಿದಂ ಭುವನದೊಳ್ ತೇಜಸ್ಕರಂ ಭಾಸ್ಕರಂ ೧೨೦

ಕಿರಣಂ ನಾಲ್ದೆಸೆಯಲ್ಲಿ ಲಂಬಿಸುವ ನೇಣೆಂದೆಂಬಿನಂ ತೋಱಲಂ
ಬರಮುಂ ತಾಂಗತುಳಾದಿದಂಡಮೆನೆ ಚೆಲ್ವಂ ತಾಳ್ದೆ ಪೂರ್ವಾಸ್ತಭೂ
ಧರಮುಂ ತ್ರಾಸಿನೆರಳ್ಕೊಡಂಬೊಲೆಸೆಯಲ್ ಚಂದ್ರಾರ್ಕಬಿಂಬಂಗಳೆಂ
ಬುರುರತ್ನಂಗಳನಿಕ್ಕಿ ತೂಗುವವೊಲಾ ಬ್ರಹ್ಮಂ ಬೆಡಂಗಾದುದೋ ೧೨೧

ಕಂದ : ಮೂಡಲ್ ಸೂರ್ಯನ ಕಿರಣಂ
ಮೂಡಲ್ ಪಡುವಲ್ ಸುಧಾಂಶುಬಿಂಬದ ಕಿರಣಂ
ಕೂಡಿರೆ ನಡುವಣ ಕತ್ತಲೆ
ಪಾಡಳಿದುದು ಕರ್ತರೀಶಿರೋರುಹದನ್ನಂ ೧೨೨

ಸ್ರಗ್ಧರೆ

ನೋಡಲ್ಕಾಂ ದೇಶದೊಳ್ಪಂ ಪಡುವಗಡೆಗಿರುಳ್ ಪೋಗಿರಲ್ ನಾಲ್ಕುಜಾವಂ
ಕೂಡಿರ್ದಳ್ ಚಂದ್ರನೊಳ್ ಪಾದರಿಗಿ ಗಗನದುಃಷ್ಕಾಂತೆಯೆಂದೀರ್ಷ್ಯೆಯೊಳ್ ತೇಂ
ಕಾಡುತ್ತುಂ ಬಂದು ಹಸ್ತಶ್ರವಣಮನಿರದೆ ಛೇದನಂಗೆಯ್ದನಂ ಶು
ಕ್ರೋದ್ಯನ್ಮಂಡಲಾಗ್ರಸ್ಫುರಣದಿನಿನನೆಂಬಂತಿರಾಯ್ತುಸ್ತಶೋಭಂ ೧೨೩

*

ಕಂದ : ಸುರದಿಕ್ಕಾಮಿನಿ ಪೊಯ್ದಡೆ
ಭರದಿಂ ಮೇಲೊಗೆವ ಶೋಣಕಂದುಕಮೆಂಬಂ
ತಿರೆ ತರುಣತರಣಿಬಿಂಬಂ
ಪಿರಿದು ಪುಟಂನೆಗೆದು ತೋರ್ಕೆವೆತ್ತುದು ನಭದೊಳ್ ೧೨೪

ವಚನ : ಆ ಪ್ರಸ್ತಾವದೊಳ್

ಚಂಪಕಮಾಲೆ

ಪೊರೆಪೊರೆಗೊಂಡೆಸಳ್ಮಸಗಿಯುಳ್ಳಲರ್ವಾಗಳನೂನಕಂಟಕೋ
ತ್ಕರವೊಗೆತಂದು ಮೆಯ್ಯೊಳಗೆ ತಳ್ತಿಸೆಯಲ್ಕನುರಾಗದೇಳ್ಗೆಯು
ಬ್ಬರಿಸಿ ಕರಾಗ್ರದಿಂ ಪಿಡಿದು ಪದ್ಮಿನಿಯೊಳ್ ನೆರೆದು ಪ್ರಭಾಕರಂ
ನಿರುಪಮಸೌಖ್ಯಮಂ ಪಡೆದನಾವನೊ ತೋಷಿಸನಿಷ್ಟಯೋಗದಿಂ ೧೨೫

ಪಿರಿದುವಿಕಾಸಲಕ್ಷ್ಮಿ[1] ಕುಮುದಾಲಯದೊಳ್ ನೆಲಸಿರ್ದು ಚಂದ್ರನೊಳ್
ನೆರೆದಳಿರುಳ್ ಪಗಲ್ ಕಮಳಗೇಹದ ಮುದ್ರೆಯನಂಜದಾಶಯೋ
ದ್ಧುರತರಧೈರ್ಯದಿಂದೊಡೆದು ತಾನದಱೊಳ್ ನೆಲಸಿರ್ದು ಸೂರ್ಯನೊಳ್
ನೆರೆದಳದಾರು ಬಲ್ಲರಬಳಾಜನಕೈತವದೊಂದುವೃತ್ತಿಯಂ ೧೨೬

ಕಂದ : ಘನಕೋಶಪಾನಮಂ ಕುಮು
ದಿನಿಯೊಳಿರುಳ್ ಮಾಡಿ ಪಗಲೊಳಂ ಬೆರಸಿದುದ
ಬ್ಜಿನಿಯೊಳದಱಿಂದಮಾಱಡಿ
ಯೆನಿಸಿದುದಳಿದೂಷ್ಯಮಾಗದಾವುದು ಸತ್ಯಂ ೧೨೭

ಹಿಮಕರನಪ್ಪೊಡೆ ಪೋದಂ
ಸಮನಿಸಿದುದು ತೆಱಪಿದೆಂದು ರವಿಕರಮೆ ದಲಂ
ದಮರ್ದಿನಕರಮಲ್ತೆಂದಾ
ಕುಮುದಿನಿ ಮೊಗಮಿಾಯದಂತೆ ಮುಗಿದುದು ಪಿರಿದುಂ ೧೨೮

1 ಮೆ (ಕ)
* ಸೂರ್ಯೋದಯ (ಗ)

ಮತ್ತೇಭವಿಕ್ರೀಡಿತ

ಸುರಿಯುತ್ತುಂ ಪ್ರಮದಾಶ್ರುವಂ ಪರಿದುಬಂದೊಲ್ದಪ್ಪಿ ಪಕ್ಕಂಗಳಿಂ
ವರಚಂಚೂಪುಟದಿಂದೆ ಮುಂದಲೆಯ ನೀಳ್ದೊಳ್ತುಪ್ಪುಳಂ ಕಚ್ಚಿ ತಾ
ವೆರಡುಂ ೯ತಲ್ಲಮನಾಡಿ ಬಾಕುಳಿಕೆಯಿಂ ಬಾಯ್ಗೂಡಿ ಚೆಲ್ವಾದ ತಾ
ವರೆವೋಕುತ್ತೆಸಳ್ವಾಸಿನೊಳ್ [1]ನೆ[1]ರೆದುದಾಗಳ್ ಚಕ್ರವಾಕದ್ವಯಂ ೧೨೯

ವಚನ: ಅದೆಱಂಬಳಿಯಂ

ಕಂದ: ಬಸದಿಗಳ ಮುಂದೆ ಬಾಜಿಪ
ಪೊಸತೆನಿಸುವ ಪಲವುತೆಱದ ವಾದ್ಯಂಗಳ ರವ
ವಿಸರಂ ಪಸರಿಸಿದುದುಮಾ
ಗಸದೊಳಮದು ತೀವಿ ತೀವಿ ದಳವೇಱುವಿನಂ ೧೩೦

ವಚನ: ಇಂತು ಮೆಲ್ಲಮೆಲ್ಲನೆ ಪ್ರಭೂತಮಾದ ಪ್ರಭಾತಕಾಲದ ಪ್ರಭಾಪಂ ಪರೆದು ಪೋಗಲೊಡಂ

ಚಂಪಕಮಾಲೆ

ಪಿಡಿದು ಕರಾಗ್ರದಿಂದಮೆ ತೊಡಂಕಿದ ನೇಣ್ತುದಿಯಂ ವಿಳಾಸಮಂ
ಪಡೆದುಱೆ ನೀಡಿದೊಂಗುವೆಡೆಯೊಳ್ ಮಣಿಕಂಕಣರಾವದಿಂದಮಿ
ಮ್ಮಡಿಸಿರೆ ಮಂತು ಸಂಚಳಿಸುವ ಧ್ವನಿ ಮುತ್ತಿನ ಕರ್ಣಪತ್ರಮುಂ
ಪೊಡೆಯೆ ಕದಂಪನೆಯ್ದೆ ಮೊಸರಂ ಪೊಸೆದಳ್ ತರಳಾಕ್ಷಿಯಾಕ್ಷಣಂ ೧೩೧

ಕಂದ: [1]ಖ[1]ರತೇಜನ ಕರಪೀಡನ
ಭರದಿಂದಂ ತೊಡೆದ ಚಂದ್ರಮಂಡಳದಿಂದಂ
ಸುರಿತಂದಮೃತಂ ಘಟದೊಳ್
ಪಿರಿದುಂ ತುಂಬಿರ್ದ ತೆಱದಿನೆಸೆದುದು ತಕ್ರಂ ೧೩೨

ವಚನ: ಮತ್ತಮಾ ಸಮಯದೊಳ್ ಚಿತ್ರಪ್ರಿಯರ ಸೆಜ್ಜಾಗೃಹದ ಗವಾಕ್ಷವಿವರಾಂತರಾಳದೊಳ್ ಪೊಕ್ಕು

ಚಂಪಕಮಾಲೆ

ಉದಯದ ಗಾಳಿ ಬಂದು ಶಯನಸ್ಥವಧೂವರ ಕೋಮಳಾಂಗಮಂ
ಪದುಳಿಸಿ ಮುಟ್ಟಿದತ್ತು ಸುರತಕ್ರಿಯೆಯೊಳ್ ಪಿರಿದಾದ ಘಾಸಿಯಂ ಪ
ಡೆದು ಸಮಂತು ಸ್ವೈರಿಸಿದಿರೆಂದಳಿನೀರವದಿಂದೆ ಪೇಳ್ದು ಸಂ
ಮುದದೊಳೆ ಬೆನ್ನನೆಯ್ದೆ ತೊಡೆದಾದರಿಪ ಪ್ರಿಯಮಿತ್ರನೆಂಬಿನಂ ೧೩೩

---

[1] ಕ (ಚ)

ಕಂದ : ಕಾದಲರ ಸುರತಕೇಳೀವಿ
ನೋದದ ಚೋದ್ಯಕ್ಕೆ ಮೆಚ್ಚಿ ತಲೆದೂಗುವವೊಲ್
ಮೇದುರ ಪವನಾಹತಿಯಿಂ
ದಾದಮೆ ಸೊಡರ್ಗುಡಿಗಳೋಳಿ ಚಳಿಸಿದವಾಗಳ್ ೧೩೪

ವಚನ: ಆ ಪೊತ್ತಿನೊಳ್ ಸೇವಾಸಮಯಮಂ ದೋಲೈಸಲೆಂದು ಬಂದ ಪುಣ್ಯಪಾಠಕಪ್ರಧಾನಸಂದೋಹಂ ಬಾಗಿಲೊಳ್ ನಿಂದು ಭುವನತ್ರಯಕ್ಕಭಿನವಭಾನುವೆನಿಸಿದ ಧರ್ಮನಾಥಂಗೆ ಪ್ರಬೋಧಜನನಿಮಿತ್ತಂ ಭಾನೂದಯವಿಭವಮಂ ಸಿಂತೆಂದು ಗಂಭೀರ ಮಂದ್ರಧ್ವನಿಯಿಂ ಸಮುದ್ಘೋಷಣಂಗೆಯ್ವುತ್ತಿರ್ಪುದುಂ

ಚಂಪಕಮಾಲೆ

ಎಲೆ ಜಿನರಾಜ ನಿನ್ನ ಪದಪದ್ಮದ ಸೇವನೆಗಾಗಿ ಬಂದು ಬಾ
ಗಿಲೊಳಿಸೆದಿರ್ದ್ದ ನಿನ್ನ ಬರವಂ ಸಲೆಪಾರ್ದಪರಂಧ್ರ ಚೋಳ ಕುಂ
ತಳ ಮರುಮಾಳವಪ್ರಮುಖದೇಶದಧೀಶ್ವರರೆಂದು ಸರ್ವಮಾಂ
ಗಳಿಕಜನಂಗಳಂದುಸಿರ್ದರಾತನ ಸೆಜ್ಜೆಯ ರಾಜಗೇಹದೊಳ್ ೧೩೫

ಉತ್ಪಲಮಾಲೆ

ಆಗಸವೆಂಬ ನೀಲಮಣಿಭಾಜನದಲ್ಲಿ ದಿನೇಶನೆಂಬ ಚೆ
ಲ್ವಾಗಿ ಸಮುಜ್ಜ್ವಳಂಬಡೆದ ಮಾಣಿಕದಾರತಿಯಂ ನಿವಾಳಿಪು
ದ್ಯೋಗದೊಳಿರ್ದಳಿಂದ್ರನ ದಿಗಂಗನೆ ಭೂತ್ರಿತಯಾಧಿನಾಥ ನೀ
ನೀಗಳೆ ಬೇಗಮುಪ್ಪವಡಿಸೆಂದುಸಿರ್ದರ್ ಮಿಗೆ ಪುಣ್ಯಪಾಠಕರ್ ೧೩೬

ವಚನ: ಮತ್ತಂ

ಕಂದ: ಜಗದೀಶ ನಿನ್ನ ತೇಜಂ
ಮಿಗಿಲಾಗೆ ಸಮಸ್ತಲೋಕದೊಳ್ ಗಿರಿದುರ್ಗಮ
ನಗಿದೇಱಿದಂತೆ ಸೂರ್ಯಂ
ಸೊಗಯಿಸಿದಂ ಪೂರ್ವಪರ್ವತಾಧಿ[1]ತ್ಯಕ[1]ದೊಳ್ ೧೩೭

ವಚನ : ಅಂತುಮಲ್ಲದೆಯುಂ

ಕಂದ : ಅವಧಾನ ದೇವ ಪೊಱಮಡು
ಜವದೊಳ್ ಸೆಜ್ಜಾನಿವಾಸದಿಂದಂ ನೀಂ ಬ
ರ್ಪವಸರದೊಳುಚಿತಮಾದು
ತ್ಸವಮಂಗಳಮಂ ವಿನಿರ್ಮಿಸುವ ಬಗೆಯಿಂದಂ ೧೩೮

1 ಕ್ಯ (ಗಚ)

ಉದಯಧರವೆಂಬ ಕಳಶಾ
ಗ್ರದೊಳಿರಿಸಿದ ಪೊಳೆವ ರತ್ನದರ್ಪಣವೆಂಬಂ
ದದಿನಿರೆ ರವಿಬಿಂಬವುದಂ
ಪಡುಳಿಸಿ ಪಿಡಿದಿಂದ್ರದಿಕ್ಕುಮಾರಿಕೆಯಿರ್ದಳ್ ೧೩೯

ವಚನ: ಇಂತು

ಚಂಪಕಮಾಲೆ

ನೆರೆದು ಸಮಸ್ತಪಾತಕಜನಂ ಬಿಡದೋದುವ ಸುಪ್ರಭಾತ ಬಂ
ಧುರತೆಯನೆಯ್ದೆ ಸೂಚಿಸುವ ಮಂಗಳಪಾವನಪದ್ಯಗದ್ಯಮೇ
ದುರನಿನದಂಗಳಿಂ ಸಕಳಮಂಗಳಗಾಯಕರೊಲ್ದು ಪಾಡುವು
ದ್ಧುರತರಗೀತರಾವಮುಮನಾಲಿಸಿಯೆಚ್ಚರನೆಯ್ದಿದರ್ ಕರಂ ೧೪೦
ಪುಳಕದ ಕೀಳ್ ಸಡಿಲ್ದು ಬಿಗಿದಪ್ಪಿದ ಬಲ್ಪನಡಂಗಿಸಲ್ ತಡಂ
ಗಳಿಸಿದ ಮುಯ್ಪು ತೋಳ್ ತೊಡೆಗಳೆಚ್ಚಱುತಂ ಶಿಥಿಲಂಗಳಾಗೆ ಮಂ
ಗಳಮನರಾಗಿ ಕಣ್ದೆಱೆದು ಮೆಯ್ಮುರಿದೆಳ್ದರನೂನರತ್ನಮಂ
ಜುಳತರ ಮಂಚತಳ್ಪತಳದಿಂದೆ ವಧೂವರರಾ ಪ್ರಭಾತದೊಳ್ ೧೪೧

ಮಹಾಸ್ರಗ್ಧರೆ

ನರಪಂ ಕೆಯ್ಯೊಱೆ ಶೃಂಗಾರವತಿಯ ಪೆಗಲೊಳ್ ಬಲ್ಪುಗೆಯ್ದರ್ಧಮೆಳ್ದಾ
ದರದಿಂ ಕಂಠಾಗ್ರಮುಂ ತನ್ನೆರಡುರುಭುಜದಿಂದಪ್ಪಿಕೊಂಡೆತ್ತಿ ವಕ್ತ್ರಾಂ
ತರಮಂ ತಾಂ ಚುಂಬಿಸುತ್ತುಂ ಕೆಳಗೆ ಚರಣವಿನ್ಯಾಸಮಂ ಮಾಡಿ ನಿಂದಂ
ವರಚಂದ್ರಂ ಕ್ಷೀರವಾರಾಶಿಯ ಲಹರಿಕೆಯಿಂದೆಳ್ದು ನಿಲ್ವಂದದಿಂದಂ ೧೪೨

ವಚನ: ತದನಂತರಂ ಬೆಳ್ಮುಗಿಲ ಕೂಟದೊಳಗಿಂ ಪೊಱಮಡುವ ಕಳಾಧರನೆಂಬಂತೆ ಧರ್ಮನಾಥಮಹಾರಾಜಂ ಸೆಜ್ಜಾಗೃಹದೊಳಗಿಂ ಪೊಱಮಟ್ಟು ಸಕಳಜನಂಗಳ ಕರಕಮಳಂಗಳಂ ಮುಕುಳೀಕರಿಸುತ್ತುಂ ಬಂದು ದಂತಧಾವನ ಸ್ನಾನವಿಧಾನದಿ ವೈಭಾತಿಕ ಕ್ರಿಯಾವ್ಯಾಪಾರಮಂ ತೀರ್ಚಿ ದೇವತಾರ್ಚನಾಯೋಗ್ಯನವ್ಯದ್ರವ್ಯಸಂಸೇವ್ಯಂಗಳಪ್ಪ ರಜತ ಮಹಾರಜತಾದಿ ವಿರಚಿತ ಪವಿತ್ರಪಾತ್ರಂಗಳಂ ಪಿಡಿದು ಭವ್ಯಜನಂಗಳಿಕ್ಕೆಲದೊಳಂ ಬರೆ ವಿಚಿತ್ರಚೈತ್ಯಾವಾಸಮಂ ವಾಸನನಕೃತ್ರಿಮಚೈತ್ಯಾಲಯಮುಮಂ ಪುಗುವಂತೆ ಪೊಕ್ಕೀರ್ಯಾಪಥಶುದ್ಧಿಯಿಂ ಮಾಡಿ ಗರಿಷ್ಠನಿಷ್ಠಾಧಿಷ್ಠಿತಂ ಪಂಚಪರಮೇಷ್ಠಿಸ್ವರೂಪಮನಂತರಂಗದೊಳ್ ಪ್ರತಿಷ್ಠೆಗೆಯ್ದು ಕ್ರಿಯಾಪೂರ್ವಕಮಭಿವಂದಿಸಿ

ಕಂದ: ಜಳಗಂಧಾಕ್ಷತೆ ಪುಷ್ಪಾ
ವಳಿ ಚರುದೀಪ ಪ್ರಧೂಪಫಳದಿಂದಾ ಭೂ
ತಳಪತಿ ಪೂಜಿಸಿದಂ ಮಂ
ಗಳಕಾರಣಮಾಗಿ ಭಕ್ತಿಯಿಂ ಜಿನಪತಿಯಂ ೧೪೩

ವಚನ: ಅಂತನುಷ್ಠಾನವೇಳಾಕರಣೀಯಮಾದಷ್ಟವಿಧಾರ್ಚನೆಯಂ ಯಥಾಕ್ರಮದಿನರ್ಹದ್ದೇವಶ್ರೀಪದದೊಳನುಷ್ಠಿಸಿ ವಿಶಿಷ್ಟಸ್ತೋತ್ರಮುಖರಮುಖನಾಗಿ

ಚಂಪಕಮಾಲೆ

ಜಯಜಯ ದೇವದೇವ ಕರುಣಾಂಬುಧಿವರ್ಧನ[ಚಾರು]ಚಂದ್ರ ದು
ರ್ನಯಹರ ನಿನ್ನಸೇವೆಯನೆ ಮಾಳ್ಪುದು ಮೋಕ್ಷಸುಖಾನುಭೂತಿಯಂ
ಬಯಸುವವಂ ಕುದೈವಮನೆ ಪೊರ್ದುವುದಲ್ತುಚಿತಂ ಬುಭುಕ್ಷಿತಂ
ಪ್ರಿಯಮೆನಿಪನ್ನಮಂ ಸವಿವುವಲ್ಲದೆ ಪೇಳ್ ವಿಷಭಕ್ಷಿಯಪ್ಪುದೇ ೧೪೪

ವಚನ: ಎಂದನೇಕಸ್ತವನದಿಂದವನತನಾಗಿ ಕೌತೂಹಳಜಾತಿಗೀತಾತೋದ್ಯನೃತ್ಯಮಂಗಳಸಂಗತ ಸಂಗೀತಕ ಪ್ರಚುರದರ್ಶಿತಪ್ರಭಾವಂ ಪ್ರಭಾವಭಾಸುರ ಭಕ್ತಿಪ್ರಪಂಚ ಸಂಚಿತವದಾಶ್ಚರ್ಯಸಪರ್ಯಾಸಪ್ಯೈಶ್ವರ್ಯಂ ನಿತ್ಯನಿರ್ವರ್ತ್ಯಮಾನಚತುರ್ವಿಧದಾನಮಂ ಜಿನಶಾಸನಪ್ರಕಾಶಕರಪ್ಪ ಸಮ್ಯಗ್ದೃಷ್ಟಿಗಳ್ಗಿತ್ತು ಧರ್ಮಕಥಾಪ್ರಸಂಗದಿಂ ಕಿಱು[1]ದುಂ[1] ಪೊತ್ತಂ ಕಳೆದರಮನೆಗೆ ಬಂದು

ಉತ್ಪಲಮಾಲೆ

ಸಗ್ಗದೊಳಗ್ಗಳಂಬಡೆದು ಚಿತ್ರವಿಚಿತ್ರತರಂಗಭಂಗಿಯಿಂ
ದೊಗ್ಗಿ ವಿಲೋಚನಕ್ಕೆ ಸೊಗಸಂ ಬಿಡದೀವತಿದಿವ್ಯವಸ್ತ್ರಸ
ದ್ವರ್ಗಮನುಟ್ಟು ಮೂಜಗದೊಳಚ್ಚರಿಯಪ್ಪಿನಮಾಂತು ಚೆಲ್ವನಾ
ಮಾರ್ಗಮಪರ್ತಿ ಪಾರ್ಥಿವನೊಡರ್ಚಿದನೆಲ್ಲರ ಕಣ್ಗೆ ಹಬ್ಬಮಂ ೧೪೫

ಮತ್ತೇಭವಿಕ್ರೀಡಿತ

ಮಕುಟಂ ಕುಂಡಳಮುದ್ಧಹಾರಮುರುಕೇಯೂರಂ ಕಟೀಸೂತ್ರಕಂ
ಸುಕನತ್ಕಂಕಣಮುಚ್ಚಬಾಹುವಳಯಂ ಮಾಣಿಕ್ಯಮುದ್ರಿಕಾ
ನಿಕರಂ ಚೆಲ್ವಿವು ಮುಖ್ಯಮಾದ ಸಕಳಾಳಂಕಾರಸಾರಂಗಳಿಂ
ದೆ ಕರಂ ಭೂಷಿತನಾಗಿ ಕಣ್ಗೆ ಸುಖಮಿತ್ತಂ ಧರ್ಮನಾಥಂ ನೃಪಂ ೧೪೬

ವಚನ: ಇಂತು ದಿವ್ಯದೇವಾಂಗವಸ್ತ್ರಮನುಟ್ಟು ರಮಣೀಯ ಮಣಿಮಯ ಭೂಷಣಕಳಾಪಮಂ ತೊಟ್ಟು ಧರ್ಮನಾಥಮಹಾರಾಜನುಂ ಶೃಂಗಾರವತೀ ಮಹಾದೇವಿಯುಮಿಷ್ಟವಿಷಯಭೋಗೋಪಭೋಗಂಗಳನನುಭವಿಸುತ್ತುಮನ್ಯೋನ್ಯಾಸಕ್ತ ಚಿತ್ತರಾಗಿ ಲೀಲಾವಿನೋದಂಗಳಿಂದನೇಕದಿನಂಗಳಂ ನಿಮಿಷಮಾತ್ರಂಗಳಾಗಿ ಕಳಿಯುತ್ತುಮಿರೆಯಿರೆ

1 ದು (ಗಚ)

ಚಂಪಕಮಾಲೆ

ಸೊಗಯಿಪ ರೂಪುರೇಖೆ ಗುಣಮೆಂಬಿವು ತನ್ನೊಳಮುಚ್ಚನೊತ್ತಿದಂ
ತಗಲಸೆ ತೋಱಲಾ ನೃಪತಿಗಂ ಸತಿಗಂ ಮರಮರ್ಮನೆಂಬ ಪೆ
ರ್ಮಗನೊಗೆದಂ ಸಮಸ್ತಧರಣೀತಳರಕ್ಷಣದಕ್ಷಣಪ್ಪವಂ
ಮಿಗುವ ಹಿಮಾಂಶುಗಂ ಕಳೆಗಮುಂದಮೃತಂ ಸಲೆಪುಟ್ಟುವಂದದಿಂ ೧೪೭

ಕಳೆಗಳನೆಯ್ದೆ ಕಲ್ತು ಯುವರಾಜಪದಸ್ಥಿತನಪ್ಪ ಪುತ್ರನುಂ
ನಳಿನದಳಾಕ್ಷಿಯಪ್ಪ ಸತಿಯುಂ ಬೆರಸಂದಧಿರಾಜನೊಪ್ಪನುಂ
ತಳೆದು ನಿಮಿರ್ಚಿದಂ ವಿಭವಮುಂ ಸಿರಿ ಮುಪ್ಪುರಿಗೊಂಡುದೆಂಬಿನಂ
ಸಲೆಸೆಲೆಯಾಗಿ ತೋಱತೆ ಪೆಱತೆದಂ ಜಗದೊಳ್ ಜಗದೇಕಬಾಂಧವಂ ೧೪೮

ಕಂದ : ಪರನರಪರಭಿಪ್ರಾಯಮ
ನುರುಚರರಿಲ್ಲದೊಡಮಱಿದು ನೆಗಳ್ವುದುಮಾತಂ
ಗಿರದೆ ಬಿನ್ನೈಸಿದೊಡಮಾ
ಪರಿವಾರದ ಮನಮನಱಿದು ಕೊಡುವುದು ಸಹಜಂ ೧೪೯

ವಚನ : ಆಗಳ್

ಕಂದ : ಪರಮಕಲ್ಯಾಣನಿಧಿಯೆನಿ
ಪರುಹಂ ರಾಜ್ಯಾರ್ಹನಾದನೆಂದವನಿತಳಂ
ಪಿರಿದಾದ ಬೆಳೆಯ ಚೆಲ್ವಂ
ಧರಿಸಿ ನಿಮಿರ್ಚಿತ್ತು ತನ್ನ ವಿಭವದ ಸೊಂಪಂ ೧೫೦

ಮಹಾಸ್ರಗ್ಧರೆ

ಜಗಮೆಲ್ಲಂ ಕೂಡೆ ಕೊಂಡಾಡುವಿನಮೊಸೆದು ಸಜ್ಜೈನಧರ್ಮಪ್ರಭಾವಂ
ಮಿಗಿಲಾಗಲ್ ಮಾಡಿದಂ ಭಾಸುರಚರಿತನಿಧಾನಂ ವಿಪಶ್ಚಿತ್ಪ್ರಧಾನಂ
ದ್ವಿಗುಣೀಭೂತಪ್ರಭಂ ಬಾಹುಬಲಿಸುಕವಿರಾಜಂ ಜಗತ್ಕಲ್ಪಭೂಜಂ
ಸ್ಥಗಿತ್ಯೈಕಾಂತಂ ಪ್ರವಾದ್ಯಾಪನಸರಸಿರುಹಂ ಚಾತುರೀಜನ್ಮಗೇಹಂ ೧೫೧

ಗದ್ಯ : ಇದು ಸಕಳಭುವನಜನವಿನೂಯಮಾನ ಮಹಿಮಾಮಾನನೀಯ ಪರಮಜಿನ
ಸಮಯಕಮಳಿನೀಕಳಹಂಸಾಯಮಾನ ಶ್ರೀಮನ್ನಯಕೀರ್ತಿದೇವಪ್ರಸಾದ
ಸಂಪಾದಪಾದನಿಧಾನದೀಪವರ್ತಿಯುಭಯಭಾಷಾಕವಿಚಕ್ರವರ್ತಿ
ಬಾಹುಬಲಿಪಂಡಿತದೇವ ಪರಿನಿರ್ಮಿತಮಪ್ಪ ಧರ್ಮನಾಥ
ಪುರಾಣದೊಳ್ ಚಂದ್ರಿಕಾವಿಹರಣಪರಿವ್ಯಾವರ್ಣನಂ

**ಪಂಚದಶಾಶ್ವಾಸಂ**

# ಷೋಡಶಾಶ್ವಾಸಂ

ಕಂದ: ಶ್ರೀಪತಿಜಸಮಂ ಸಕಳಾ
ಶಾಪದದೊಳನೇಕ ಧನಮನದಿ ದಾನದೊಳಂ
ರೂಪುಗುಣಂ ಶೀಲದೊಳಾ
ರೋಪಿಸಿದಂ ಸರಸಚತುರಕವಿಕುಳತಿಳಕಂ ೧

ವಚನ: ಇಂತು ಚತುಸ್ಸಮುದ್ರಮುದ್ರಿತಮಾದ ನಿರವಶೇಷಧರಣೀವಳಯಮು ನವನೀಪಾಳಶಿರೋಮಣಿ ದುಷ್ಟನಿಗ್ರಹಶಿಷ್ಟಪ್ರತಿಪಾಳನಾಪೂರ್ವಕಮಾಗಿ ಪರಮ ಪ್ರಮೋದದಿಂ ಪರಿರಕ್ಷಣಂಗೆಯ್ವುತ್ತುಮಿರ್ಪಲ್ಲಿ

ಮಹಾಸ್ರಗ್ಧರೆ

ಒಡೆಯಂ ಸಾಮ್ರಾಜ್ಯರಾಜ್ಯಕ್ಕೊಡೆಯನೆಡರಣಂ ಪೊರ್ದಿದೆಂದುರ್ಬಿದತ್ತಾ
ಪಡೆ ಪೆಂಡಿರ್ ನಮ್ಮ ಗಂಡಂ ವಿಮಳಗುಣಕರಂಡಂ ದಲೆಂದಾಂತರೊಳ್ಪಂ
ಬಿಡದಾದಂ ಭೂತ್ರಯಿಯಾಬಾಂಧವನೆಮಗೆ ಕರಂ ಬಂಧುವೆಂದೆಯ್ದೆ ಹರ್ಷಂ
ಬಡೆದಿರ್ದರ್ ಬಾಂಧವರ್ ಪಾಳಿಸುವೆಡೆಯೊಳಿಳಾಲೋಕಮಂ ಧರ್ಮನಾಥಂ ೨

ಕಂದ: ಪೃಥುಳಗುಣನರಸುಗೆಯ್ಯಲ್
ಪೃಥಿವೀಜನಮೆಲ್ಲಮಾದುದತಿಶಯದಿಂ ಸ
ತ್ಪಥವರ್ತಿ ಯಥಾರಾಜಾ
ತಥಾಪ್ರಜಾಯೆಂಬ ನೀತಿಯುಂ ಮಾಜಿದವೋಲ್ ೩

ಉತ್ಪಲಮಾಲೆ

ಆತನ ತೇಜದೇಳ್ಗೆ ದೆಸೆವೆಂಡಿರ ತಂಡದ ಸತ್ಕುಚಾಗ್ರದೊಳ್
ನೂತನಕುಂಕುಮಂಬೊಲೆಸೆದತ್ತು ದಲಾತನ ಕಾಂತಕೀರ್ತಿ ವಿ
ಸ್ಫಾತಿಯುಮೆಯ್ದೆ ದಿಕ್ಪತಿಗಳಿಕ್ಕಿದ ಮುತ್ತಿನ ಹಾರಮೆಂಬಿನಂ
ಸಾತಿಶಯಪ್ರವರ್ತನಮುಮಾದುದು ಧರ್ಮನ ಪೆರ್ಮೆಯಗ್ಗಳಂ ೪

ಮತ್ತೇಭವಿಕ್ರೀಡಿತ

ನೆಲನೆಲ್ಲಂ ತೆಱಪಿಲ್ಲದಾಯ್ತು ನರಪಾಳಂ ಮಾಡಿಸುತ್ತಿರ್ದ ವಂ
ಗಳಜೈತ್ಯಾಲಯಸಂಚಯಕ್ಕೆ ಘನಪಾತ್ರವ್ರಾತವೆಲ್ಲಂ ಮಹೀ
ತಳದೊಳ್ ನೋಳ್ಪಡಮೆಯ್ದದಾಯ್ತು ನಲವಿಂದಂ ನಾಳ್ಪ ದಾನಕ್ಕೆ ದಿ
ಕ್ಕುಲವೆಲ್ಲಂ ಪಱಿಲ್ಲದಾಯ್ತು ಬಹುಲಾಸ್ಫೂರ್ತಿಯೊಂದೇಳ್ಗೆಗಂ ೫

ವಚನ: ಇಂತು ಕನತ್ಕರ್ಪೂರಧಾರಾವರ್ಷಂ ಹರ್ಷೋತ್ಕರ್ಷತೆಗಾಲಂಬನ ಮಾದಭಿನವವಿಭವಪ್ರಭಾವದೊಳೊಂದಿ

ಮತ್ತೇಭವಿಕ್ರೀಡಿತ

ಅರವಿಂದಂ ಜಲದಲ್ಲಿ ಪುಟ್ಟಿ ಜಲಮಂ ತಾಂ ಮುಟ್ಟದಿರ್ಪಂದದಿಂ
ದರಸಂ ರಾಜ್ಯಸುಖಾನುಭೋಗಪರನಾಗಿರ್ದುಂ ಮನಂಮುಟ್ಟಿದಾ
ದರಮಂ ಮಾಡದೆ ಧರ್ಮಮುದ್ಧವಿಸುತನ್ನಂ ನ್ಯಾಯದಿಂದಾ ಮಹೀ
ವರನಾಳ್ದಂ ಬಿಡದಮ್ಮುದಲಕ್ಕೆ ಬರಿಸಂ ಪ್ರಾಜ್ಯಾದಿಸಾಮ್ರಾಜ್ಯಮಂ ೬

ಕಂದ: ದಶವಿಧಭೋಗಂಗಳನಂ
ದೊಸೆದನುಭವಿಸುತ್ತುಮಿರ್ದನಾ ನರನಾಥಂ
ಪೊಸತೆನೆ ಸಾಮ್ರಾಜ್ಯದೊಳಂ
ವಿಸರುಹದೊತ್ತಣಿದು ನಲಿವ ಕಳಹಂಸದವೋಲ್ ೭

ವಚನ: ಅಂತು ಸದ್ಧರ್ಮನಾಥನಪ್ಪ ತದ್ಧರ್ಮನಾಥಮಹಾರಾಜಂ ರಾಜ್ಯರಕ್ಷಣಂಗೆಯ್ವುತ್ತುಮಿರ್ದೊಂದುದಿವಸಂ ಥಳಥಳಿಪ ಕುಳಿಶದಳಕುಳಕೀಲಿತಪ್ರವಾಳಕಪರಿಮಂಡಿತಪರ್ರ ವೈಡೂರ್ಯಸ್ತಂಭಸಂಭೃತಸಮುತ್ತುಂಗರಂಗಮಂಡಪರಮಣೀಯಮುಂ ನವೀನನಾನಾ ವಿನೋದವಿಚಿತ್ರಿತಭಾವರಸಪ್ರಪಂಚಪಾಂಚಾಳಿಕಾಸಂಚಯಸಮಂಚಿತ ಕಾಂಚನಭಿತ್ತಿವಿಸ್ತೃತಮುಂ ವಿಶಾಳವಳಭಿವಳಯಕೀಲಿತ ನೀಲಮಣಿಮಯಮಂದನಮಾಳಿ ಜಾತಸಂಭಿನ್ನನಿರ್ಮುಕ್ತಮುಕ್ತಾಫಳಲಂ[1][ಬು][1]ಷಭೂಷಣವಿಶೇಷ್ಯಮಾಣಮಂಗಳಸ್ಥಾನ ವಿಳಸಿತಕಳಮಾಕ್ಷತಪುಂಜರಂಜನಾಯಮಾನ ನಕ್ಷತ್ರಮಾಳಿಕಾಸಂಭೂಷ್ಯಮಾಣ ಪುಷ್ಯರಾಗಮಾಣಿಕ್ಯಕಳಶಕಳಾಪಚೂಳಿಕಾಭಾಗಚೋಚುಂಬ್ಯಮಾನ ಭಾನುಬಿಂಬಾನನವಿಳಾಸ ಮುಮಾದ ಸರ್ವಾವಸರಸಮಯಮೆನಿಸುವ ಸಭಾಲಕ್ಷ್ಮೀಪ್ರಾಸಾದಭವನಮನೆಯ್ದಿ ವಂದೊಳಗಂ ಪೊಕ್ಕು

ಮಹಾಸ್ರಗ್ಧರೆ

ಸ್ಥಿತನಾನಾಮಾನ್ಯರಾಜನ್ಯಕ ಮಕುಟತಟೀರತ್ನರೋಚೀಪ್ರವೀಚೀ
ಸ್ಮಿತವತ್ತದ್ಗೇಹ ರತ್ನಾಕರದ ನಡುವೆ ಕಣ್ಗೊಂಡ ಪೋತಂ ದಲೆಂಬಂ
ತತಿಶೋಭಾಭಾರಮಂ ತಾಳ್ದಿದ ಮಿಸುನಿಯ ಸಿಂಹಾಸನಾಸೀನನಾದಂ
ಕೃತಕೃತ್ಯಂ ಧರ್ಮನಾಥಂ ಸಕಳಮಣಿಲಸದ್ದಿವ್ಯಭಾಷಾಸನಾಥಂ ೮

1 ಭೂ (ಕಗಚ)

ಕಂದ: ಇದೆ ಪರಮಸೀಮೆಯೆನ್ನೊದ
ವಿದ ಮೆಯ್ದೊಡವಿಂಗಮೆಂದು ಸೂಚಿಪ ತೆಱದಿಂ
ಪದೆದುಟ್ಟು ತೊಟ್ಟು ಪೂನವ
ಮದನಂ ನೋೞ್ಪರ್ಗೆ ಪುಟ್ಟಿಸಿದನಚ್ಚರಿಯಂ ೯

ವಚನ: ಅಂತು ಬಾಣೊಡನೆ ಬಪ್ಪಸವೇಱುವ ರೂಪು ರೂಪಿಸಲರಿದೆನಿಸಿ ಮೇಱುವಿ ಕಡುನೀಱನೊಡ್ಡೋಲಗಂಗೊಟ್ಟು ಕುಳ್ಳಿರ್ದಾಗಳ್

ಉತ್ಪಲಮಾಲೆ

ಇರ್ಕ್ಕಲವಲ್ಲಿ ಚಾಮರವನಿಕ್ಕುವ ವಾರವಿಳಾಸಿನೀಜನಂ
ನಿಕ್ಕಭಿರಂಜಿಸಿತ್ತು ಪೊಸಕೆಂದಳಿರ್ಮೊಗಂಗಳೊಳಿರ್ದ ಹಂಸೆಗಳ್
ಸೊಕ್ಕಿ ವಿನೋದದಿಂ ಚಳಿಸಲೊಪ್ಪುವ ಕಾನನ ಕಲ್ಪವಲ್ಲಿಯಿಂ
ತಕ್ಕುವಿಡಂಬಿಸಂ ಕುಸುಮಮಂಜರಿ ರಂಜಿತಗಾತ್ರವಿಭ್ರಮಂ ೧೦

ವಚನ: ಮತ್ತಮುಕ್ಕುವ ಜವ್ವನದ ಸೊಕ್ಕಿಂ ನೋೞ್ಪ ಜಾಣರ ಮನಮಂ ಜಕ್ಕುಲಿಸುತ್ತುಮಿರ್ಪೋಲಗದ ಸೂಳೆಯರಾತತನಂ ಬಳಸಿ ಕುಳ್ಳಿರ್ದು

ಚಂಪಕಮಾಲೆ

ತೊಡಿಗೆಯ ತೋರ ಕೆಂಬರಲ ಬಣ್ಣದಿನಂ ಬಿಸಿಲಂ ಪೊದಳ್ದ ನೋ
ಮರ್ಗಡಿಗಳ ಕಪ್ಪಿನಿಂ ನಿವಿರ್ದ ಕತ್ತಲೆಯಂ ಕಡೆಗಣ್ಣ ಕಾಂತಿಯಿಂ
ಕುಡಿವೆಳುದಿಂಗಳಂ ವಿರಚಿಸುತ್ತು ಮನಂಗಮಹೇಂದ್ರಜಾಲಮಂ
ನಡೆಸು ಕರಂ ಮರುಳ್ಗೊಳಿಸಿದತ್ತು ನಿರೀಕ್ಷಿಪರಂ ವಧೂಜನಂ ೧೧

ವಚನ: ಅನಂತರಂ

ಚಂಪಕಮಾಲೆ

ಬಗೆದಿರದುಂ ಕೆಲಂಬಿಡಿದನುಕ್ರಮದಿಂದಮೆ ಮಾಲೆಗೊಂಡು ಗ
ದ್ದಿಗೆಗಳೊಳಿರ್ದದಗ್ಗದ ರಾಯರನೇಕಕುಮಾರಸಂಕುಳಂ
ಸೊಗಯಿಪ ತತ್ಸಭಾಸದನಲಕ್ಷ್ಮಿಯ ರನ್ನದ ಹಾರದಂದದಿಂ
ಜಗದೊಳೆ ನಿಸಂ ವಿರಾಜಿಸಿದನೊಪ್ಪುವ ನಾಯಕರತ್ನದಿಂಬಿನಂ ೧೨

ವಚನ: ಇಂತು ಭುವನತ್ರಯಪ್ರಭುವಿನುಭಯಪಾರ್ಶ್ವದೊಳ್ ಪ್ರತಾಪರಾಜನುಂ ನವಧರ್ಮಕುಮಾರನುಂ ಮೊದಲಾಗಿ ಮೂರ್ಧಾಭಿಷಿಕ್ತಮಕುಟವರ್ಧನ ಮಂಡಳಿಕ ಸಾಮಂತ ಮಂತ್ರಿಮಹತ್ತರಾದಿಗಳ್ ಯಥೋಚಿತಾಸನಂಗಳೊಳಿರೆ

ಕಂದ : ಮಿಗುವ ಪಂಚಾಂಗಮಂತ್ರಮೆ
ಸೊಗಯಿಪ ತನುವಡೆದು ಮಾನ್ಯತೆಯನಾಂತವೊಲಾ
ಜಗದೊಡೆಯನ ಮುಂದಿರ್ದ
ತ್ರಿಗಣಿತಮತಿಯನ್ವಿತಪ್ರಧಾನರ ಮೊತ್ತಂ ೧೩

ಒಂದೇ ಕಂಟದ ಮೊನೆಯೊಳ್
ಸಂದುದು ನಿಂದುದುಮನಾಯಮುಂ ಬೀಯಮುಮಂ
ಕುಂದದೆ ನಿರ್ಣಯಿಸುವ ಬ
ಲ್ಪಿಂದೆಸೆದರ್ ನೃಪನ ಬಳಸಿ ಕರಣಾಗ್ರಣಿಗಳ್ ೧೪

ಕವಿ ಗಮಕಿ ವಾದಿ ವಾಗ್ಮಿಗ
ಳವನಿಪನಂ ಬಳಸಿ ಸುತ್ತಲುಂ ಕುಳ್ಳಿರ್ದರ್
ವಿವಿಧನಿರವದ್ಯವಿದ್ಯಾ
ನಿವಹಂ ನರಮೂರ್ತಿವೆತ್ತುದೆಂಬಂತೆವೊಲಂ ೧೫

ಉತ್ಪಲಮಾಲೆ
ಬೀಣೆಯನೆಯ್ದೆ ಮೇಳವಿಸಿ ತಂತಿಯನೊಯ್ಯನೆ ನೀವಿ ನಾದಮಂ
ಕ್ಷೀಣಿಸಿ ಪೊಯ್ದು ನೋಡಿ ಪದೆದಂಡಿಗೆಯಂ ತಿರುವಿಟ್ಟು ತುಂಬಿಯುಂ
ಮಾಣದೆ ಠಾಯೆಗಳ್ ಪದದೊಳೋಯುರಮಾಗಿರೆ ಕೂಡಿಪಾಡುತುಂ
ಗಾಣರ ಮೊತ್ತಮಿರ್ದುದು ನೃಪಾಳಕನೋಲಗದಲ್ಲಿ ಸುತ್ತಲುಂ ೧೬

ವಚನ : ಮತ್ತಮೇಕೈಕಪ್ರದೇಶದೊಳ್

ಕಂದ : ನಗೆಕಾಱರಾಟಕಾಱರ್
ಬಗೆಕಾಱರ್ ವಾಸಕಾಱರೊಳ್ನುಡಿಕಾಱರ್
ಮಿಗುವಸಿಕಾಱರ್ ಪತಿಯೋ
ಲಗದೊಳ್ ಕುಳ್ಳಿರ್ದು ಕಣ್ಗೆ ಪಡೆದರ್ ಸೊಗಸಂ ೧೭

ವಚನ : ಪುತ್ರಂ ಮೂವತ್ತೆರಡಾಯುಧದಭ್ಯಾಸದಿಂ ಬೇಸರಂಬೋಗದೆ ಕಂಡುವೆ ಕಳನಾಗಿ ತೆಗೆದಿಱಿವ ಜೋಳಿಗೊಂಡಂಕಮಾ ಪ್ರಸ್ತಾವದೊಳ್

ಚಂಪಕಮಾಲೆ
ಕಲಿತನದಿಂದೆ ಕಂಡರಿಸಿದಂತೆ ವಿಶೇಷಿತ ಗಂಡಗರ್ವದಿಂ
ಸರಿ ಕಡೆದಂತೆ ಕೂರ್ಗೆಸೆದು ಮಾಡಿಸುತ್ತುಂ ಬಿರಿದಾಳಿ[1][ಯುಂ][1] ಮನಂ
ಗೊಳೆ ನಡೆತಂದು ಮಾಸವಳದಂಕಮುದಾಸುರನಾಗಿ ಭಾಷೆಯುಂ
ಗಳಹುತ್ತುಮಿರ್ದುದಾ ನರಪನೋಲಗದಲ್ಲಿ ವಿಭೂಷಣಾಂಚಿತಂ ೧೮

---

1 ತುಂ (ಕಗಚ)

ವಚನ : ಅದಲ್ಲದೆಯುಂ ಪೊಸಪೊಸತಾದ ಮಲ್ಲಶ್ರಮದಿನುಲ್ಲಾಸಂಬಡೆದು ಸೊಲ್ಲಿಸದೆ ಮಲ್ಲನಂ ನಿಲ್ಲದೆ ಕೊಂದು ಗೆಲ್ಲಂಗೊಳ್ವೆನೆಂಬ ಪೂಣ್ಕೆಯಂ ಮನದೊಳ್ ತೊಡಂಕೆಗೊಳಿಸಿ ಬಲ್ಪಿನ ಬಾಳ್ಕೆಯಿಂ ಬಣ್ಣವಿಟ್ಟಂತೆ ತಿಣ್ಣಮಾದೊಡ್ಡುಂಗಾಡಿಯುಮೆಡ್ಡಮಾಗೆ ಚಲ್ಲಣಂ ಬಿಗಿದುಟ್ಟು ಕುಂಕುಮದ ಪಂಕಮಂ ಮಯ್ಯ್ವಿನೊಳಂಕೆಗೆಯ್ದು ಭೂಸಿದ ಗಂಧಸಾರದಿನಂದಂಬಡೆದ ಭೂರಿಭುಜಾದಂಡಂ ಸೌಂದರಸಿಂಧೂರರಾಗಪರಿರಂಜಿತ ಕುಂಭಸ್ಥಳೊಂದಿಪ್ಪೈರಾವತದ ಶುಂಡಾಳದಂಡದೊಡನೆ ಪುರುಡಿಸುವಂತೆ ಕಡುಪನೊಳಗೊಂಡು ಬೆಡಂಗುವಡೆದು ಜೆಟ್ಟಿಗಳೆಲ್ಲಂ ನೆರೆದುಬಂದು

ಮತ್ತೇಭವಿಕ್ರೀಡಿತ

ಬಿಸಿನೆತ್ತರ್ ಪೊಱಸೂಸುವಂತೊಡನೆ ಮೂಗುಂ ಬಾಯುಮಂ ಮುಚ್ಚಿ ಪ
ಟ್ಟಿಸದಿಂದಂ ಪ್ರತಿಮಲ್ಲನಂ ಕೆಡಹುವೆಂ ಸಂಸ್ಥಾನದೊಳ್ ಬಲ್ಪುದೋ
ಱಸಲಾನಾಳ್ದುಡಿ ಕತ್ತರಂ ಕರವಡಂ ಸೀಪಟ್ಟಣಂ ಘೊಕ್ಕರಂ
ಪಸರಂ ಸಂದಣವಟ್ಟೆ ಪೊಟ್ಟು ಮುಹಡಂ ಚೌಪಟ್ಟೆ ಪಿಟ್ಟಾಳಸಂ ೧೯

ವಚನ : ಎಂದು ಮಲ್ಲವಾತುಮಂ ನುಡಿದು ಪೊಡವಟ್ಟು ಕುಳ್ಳಿರ್ದುಮನಂತರಮುಪ್ಪಣ್ಣದ ರನ್ನದಿಂ ಚೆನ್ನಂಬಡೆದ ಪೊನ್ನ ಪೊರಜೆಯಂ ಹತ್ತಿಸಿ ಬಿಗಿಯಲಱ ಬೆರಕೆನೆಳಗಿಂ ಥಳಥಳಿಸಿ ಪೊಳೆವಂಕದಾನೆ ಸುರಧನುವಿನ ಬಳಸುವೆರಸಿದ ಕಾರ್ಮುಗಿಲೊಡ್ಡು ಕಾಲೂಱ ನಿಂದಿರ್ದುದೆಂಬಂತೆ ಬಿಂಕಂಬೆತ್ತು ಬೆಂದುರದ ರಂಜೆಯಿನಂದವಾದ ಕುಂಭಸ್ಥಳದೊಳ್ ಮಲಂಗಿದ ಕೂರಂಕುಸಂ ನೆಮ್ಮಿರ್ದ ಕೆಮ್ಮುಗಿಲ ಮೇಲೆ ಮೂಡಿದೆಳವೆಱೆಯಂತೆ ಬೆಸ್ವೆಱ ಕೋಱ ಮುಂದೆ ಬಾಜಿಸುವಾನೆವಱೆಯ ದನಿಯುಂ ಪಿಂದೆ ಝಣಝಣೆಂಬ ಬಿರುದಿನ ತೊಡರ ನಿಗಡದೊಳ್ ತೊಡಂಕೆ ಬಿಡದೆಳಲ್ವ ಬಾವುಲಿಗಳ ಬಲ್ಲುಲಿಯುಮನಾಲಿಸುತ್ತುಮುಬ್ಬರಿಸುವ ಸೊಕ್ಕಿನಳುರ್ಕೆಯಿನಿಕ್ಕೆಲಕ್ಕಮಪ್ಪಳಿಸಿ ನೂಂಕುವಾನೆಕಾಱರ ಬಡಿವ ಕೋಡತಿಕಾಱರ ಮೊತ್ತಮನೊತ್ತವಿಸುತ್ತುಂ ಬಂದು ತನಂಗಮನೆಳ್ಚಡುವಿಸಂ ನಿಂದು ಮೇಲಿದ್ದ ಮಾವಂತಿಗನಾನೆವಾತಿನ ಸನ್ನೆಯಿಂದೊಡೆಯಂಗೆ ಪೊಡೆವಟ್ಟು

ಉತ್ಪಲಮಾಲೆ

ಬೀರದೊಳಾನೆ ಬಲ್ಪುವಡೆದು ಪ್ರತಿದಂತಿಯ ದಂತಮೂಲಮಂ
ಜೇರೊಡಗೀಳ್ವ ಸಾಹಸದೊಳಾನೆ ಕದರ್ಥಿತವೈರಿಸೈನ್ಯಸಂ
ಹಾರದೊಳಾನೆ ಮತ್ತೆನಗೆ ಮಾರ್ಮಲೆವಾನೆಗಳಿಲ್ಲಮೆಂದು ಸಂ
ಚಾರಿಸುವಂತಿರಾನೆ ಭರಿಕೆಯ್ಯನೆ ತೂಗುತುಮಿರ್ದುದಾಕ್ಷಣಂ ೨೦

ವಚನ : ಅಲ್ಲಿಂಬಳಿಯುಂ ಪಲ್ಲಣಿಸಿ ಬಂದ ವಾನಾಯುಜ ಪಾರಸಿಕ ಕಾಂಭೋಜ ಬಾಹ್ಲೀಕಮೆಂಬ ನಾಲ್ಕುಜಾತಿಯೊಳ್ ಪುಟ್ಟಿದ ಸಮಾಸ್ಕಂದಿತ ರೇಚಿತ ಧೌರಿತ ವಲ್ಗಿತ ಪ್ಲುತಮೆಂಬೈದುಂತೆಱದ ನಡೆಯಿಂ ಬೆಡಂಗುವಡೆದ ಪಟ್ಟದ ವಾರುವಂಗಳುಂ ರಥಮಂತೆ

ಮುಪಕೆಳಸಡುವ ಕೂಡಿದ ಕಡುನಲ್ಲಳಂತೆ ತೊಡೆಸೋಂಕಿಂಗೊಡಂಬಡುವ ಕೋಗಿಲೆಯಂತೆ ಸ್ವರಭೇದದೊಳ್ ಸುಸರಮೆನಿಪ ಜೋಡೆಪೆಂಡತಿಯಂತೆ ಕೈಸನ್ನೆಯಱಿವ ರಾಜಹಂಸನಂತೆ ಮಾನಸಮಱಿದು ಪರ್ತಿಸುವ ಶೀಲದಿನುಲ್ಲಾಸಂಬಡೆದು ಪರಿಪರಿಯಭ್ಯಾಸದ ಬಿನ್ನಣಂ ಜೆನ್ನಂಮೆಱೆವಿನಂನೀಡುಮೆಟ್ಟಿ ಭೂರಿಚಮತ್ಕಾರದಿನೋಡಿಯೋಡಿ ತಮ್ಮಯ ಸುಶಿಕ್ಷಣಮ ನಿರ್ಮಾಡಿಯಾಗಿ ಪ್ರಕಟೀಕರಿಸುತ್ತುಮಿಪ್ಪೆಡೆಯೊಳ್ ಚತುರತುರಗವಾಹಕರೆಲ್ಲಂ ಕೈಯ ಬೆರಳ್ಗಳನುದ್ದಮೆತ್ತಿ ಸಂಚಳಿಸುತ್ತುಂ ಲೇಸುಲೇಸೆಂಬ ಕೊಂಡಾಟದೊಳಾಸಕ್ತರ್ ಮೆಚ್ಚಿ ಮೆಚ್ಚಿ ತಲೆದೂಕಮನೊಡರ್ಚುವಿನಮೇಱಿ ತೋಱುವ ರಾಯರಾವುತ್ತರನುಮಾ ನಕ್ಕನುಕೂಲಮಾಗಿ ಬಂದು ಲಳಿಲುಳಿಯ ಮೇಲೆ ಹೋಹೋಯೆಂದು ಮೆಲ್ಲಮೆಲ್ಲನೆ ನಿಲಿಸಿ

ಉತ್ಪಲಮಾಲೆ

ಓಜೆಯ ಕೇಣಮುಮಂ ಮನದ ಸಾಹಸಮುಮಂ ತೊಲೆಯಲ್ಲಿ ತೂಗಿ ಸಂ
ಯೋಜಿಸಿದಂತೆ ಸಕ್ಕಸಮನಾಗಿರೆ ಗಾಳಿಗೆ ಪಕ್ಕಮೂಡಿದಂ
ತೀ ಜಗವಲ್ಲಿಯೋಡುವ ತುರಂಗಮಪುಂಗವದೊಂದು ಜೆಲ್ವಮಂ
ರಾಜಮನೋಜ ನೋಡೆನುತೆ ವಾಹಕರಾವಳಿ ತಾಳ್ದುದೊಪ್ಪಮಂ ೨೧

ವಚನ: ಇಂತು ಸಕಳಸಾಮ್ರಾಜ್ಯಲೀಲಾವಿಭವಕ್ಕಿದುಮೆ ಪರಮಸೀಮೆಯೆಂಬಂತಿರೊಡ್ಡೋಲಗವಡ್ಡಪರಸೆಡ್ಡಮಾಗಿರ್ದುದಾ ಪ್ರಸ್ತಾವದೊಳಲ್ಲಲ್ಲಿನಿಂದುಘೇಯುಘೇ [1]ಚಾ[1]ಗಬೊಲ್ಲಾಯೆಂದು ಗೋಸನೆಯನೆಸಗುತ್ತುಂ ಪುಷ್ಪಾಂಜಳಿಯುಂ ಕೊಡುವ ಗೋಸನೆಕಾಱರ ಬಿನ್ನಪಂಗೆಯ್ವರಸುಗಳ ಬೇಡುವ ವಂದಿಗಳ ಪೊಗಳ್ವ ಭಟ್ಟರ ಗೊಟ್ಟಿಯ ಕೋಳಾಹಳಮಂ ಕಟ್ಟೆಗೆಕಾಱರ್ ಚಪ್ಪರಿಸಿ ನಿಲಿಸುತ್ತುಮಿರ್ಪೆಡೆಯೊಳ್

ಚಂಪಕಮಾಲೆ

ಪೊಸತನಿಗಂಪು ಪೊಂಪುಳಿಸಿ ಪೊಂಪಿನ ಸಂಪದಮುಬ್ಬಿಕೊಬ್ಬಿ ಪೆಂ
ಪಸದಳಮಾಗೆಯೋಲಗಮದಾಯ್ತು ವಸಂತವನಂ ದಲೆಂಬಿನಂ
ಪಸರಿಸಿದತ್ತು ಕೋಕಿಳನಿನಾದದವೋಲುತಬ್ಬೈಸ ಜಾವುರೇ
ಖುಸುರುಗಲಾಸೆ ಹೋ ಹಳು ಹಳೆಂಬ ಮಹಾಪ್ರತಿಹಾರಕಸ್ವನಂ ೨೨

ವಚನ: ಆ ಸಮಯದೊಳ್

ಚಂಪಕಮಾಲೆ

ಅಭಿನವತತ್ಸಭಾವಿಭವಶೋಭೆಯ ಸಂಭ್ರಮಮಂ ನಿರೀಕ್ಷಿಸಲ್
ಪ್ರಭುಕರುಣಾವಲೋಕನಸುಚಂದ್ರಿಕೆ ರಂಜಿಸಲಿತ್ತಲತ್ತ ಭೂ
ವಿಭುಗಳ ಕಂಕಣಾಂಕಿತ ಕರಾಂಬುರುಹಂ ಮುಗಿದತ್ತು ಕೂಡೆ ಮ
ತ್ತ್ರಿಭುವನೆ ಭಾಪು ಭಾಪು ಮಝು ಭಾಪುರೆ ಭಾಪೆನುತಿರ್ದರೆಲ್ಲರುಂ ೨೩

---

[1] ಬಾ (ಗಚ)

ಕಂದ: ಪೊಳೆವ ಚರಮಾಂಗನಂಗೋ
ಜ್ವಳಕಾಂತಿಯೊಳೆಸೆದು ನೋಟಕರ ನಗೆಗಣ್ಗಳ್
ಸ್ಥಳಪದ್ಮಂಗಳ ಬಳಗಂ
ಬಳಸಿದ ಹೇಮಾದ್ರಿಯಂತೆ ಚೆಲ್ವಂ ತಳೆದಂ ೨೪

ವಚನ: ಇಂತು ದೇವಾಧಿದೇವಂ ಬಹಳಗೊಂದಳಾಸ್ಥಾನದೊಳೋಲಗಂಗೊಟ್ಟು ಲೀಲೆಯಿಂ ನಾಲ್ದೆಸೆಯಂ ನೋಡುತ್ತುಮಿರ್ಪನ್ನೆಗಂ

ಕಂದ: ಪಲವುಂಕಾಲದ ಗಗನ
ಸ್ಥಳಿ ಕಡುಹಳದಾಗಿ ಜೀರ್ಣತೆಯನೆಯ್ದಿ ಮಹಾ
ಬಿಲನಾಗಿ ಸೀಳ್ದ ತೆಱದಿಂ
ದೊಳಕೊಂಡುದಗುರ್ವನಾಗಸದ ನಡುಭಾಗಂ ೨೫

ವಚನ: ಆ ಪೊತ್ತಿನೊಳ್

ಮತ್ತೇಭವಿಕ್ರೀಡಿತ

ಪೊಸಕೆಂದಾವರೆವೂಗಳಿಂದಲರ್ದವೊಲ್ ಚೆಲ್ವೇಱುತಿರ್ದಪ್ಪುದಾ
ಗಸಮೆಲ್ಲಂ ಪವಳಂಗಳೊಳ್ಬೆಳಗಿನಿಂ ಸುತ್ತಂ ತಳಿರ್ತಂತಿರೆ
ಣ್ದೆಸೆಯುಂ ರಂಜಿಸಿದಪ್ಪುದೇನೊ ತನಿಗೆಂಪಾಗುತ್ತುಮಿರ್ದತ್ತಿದಾ
ವೆಸಕಂ ಮೂಡಿದುದೆಂದು ನೋಡಿದುದು ಸಭ್ಯಾನೀಕಮುತ್ಕಂಠದಿಂ ೨೬

ಚಂಪಕಮಾಲೆ

ಪಗೆಯೆನಿಸಿರ್ದ ಕಾಮನ ಸಖಂ ವಿಧುವೆಂದವನಂ ಸುಡಲ್ಕೆ ತಾಂ
ಬಗೆದು ನಭಸ್ವರೂಪ ಗಿರಿಶಂ ತೆಱೆವಯಲ್ ನೊಸಲಗ್ನಿದೃಷ್ಟಿಯಿಂ
ಮಿಗೆ ಪೊಱಪಾಯ್ದು ಮಿಳ್ಳಿಸುವ ದಳ್ಳುರಿಯೋಳಿಯು ಮುಂದ್ವರ್ಗೊಂಡ ಪ
ರ್ವಗೆಯೊ ದಲಾತನೊಂದು ಪೊಱಪೇಱಿದ ಕೆಂಜೆಡೆಯು ಪ್ರಲಂಬಮೋ ೨೭

ಉತ್ಪಲಮಾಲೆ

ಜಿನ್ನಮಹೇಶ್ವರಂ ತ್ರಿಪುರಮಂ ಸುಡಲೆಂದನುಗೆಯ್ದು ಕಾಸಿ ಮ
ತ್ತಂ ನಲಿದೆಚ್ಚೊಡುಜ್ಜ್ವಳಿಸುತಂ ಬರುತಿರ್ಪ ನಿಶಾತಬಾಣಮೋ
ತನ್ನಯನಂತನಾಮಮನಿದುಂ ತಳೆದಿರ್ದಪುದೆಂಬ ಮೋಹದಿಂ
ಸನ್ನಿಧಿಗೆಯ್ದಿಬಂದ ಧರಣೇಂದ್ರಫಣಾಮಣಿಯೊಂದು ಕಾಂತಿಯೊಳ್ ೨೮

ವಚನ: ಇಂತು ಪರಕಲಿಸಿದರುಣಮಾಲೋಕನದಿಂ ಸಭಾಲೋಕದ ಚಿತ್ತಂ ನಿರಂತರಿತ ಶಂಕಾಕಳಂಕದಿಂ ವ್ಯಾಕುಳಿತಮಾಗಿ ಕಡುಚೋಜಿಗಮಿದಾವುದೆಂದು ಕೊರಳಂ ನೆಗಪಿ ನೋಡುವೆಡೆಯೊಳ್

ಉತ್ಪಲಮಾಲೆ

ಆಗಸಮೆಂಬ ದೈತ್ಯನಗಿದೀ ಜಗಮಂ ನೆಱೆತಿಂದು ನುಂಗುವು
ದ್ಯೋಗದೆ ತೋಱತಾರಗೆಗಳೆಂಬುಱುದಾಡೆಗಳಂ ನಿಮಿರ್ಚಿ ಮುಂ
ಬೇಗದೆ ಬಾಯನೆಯ್ದೆ ತೆಱೆತಂತೆ ಪೊಱಪೊಣ್ಮುವ ಜಿಹ್ವೆಯಂತೆ ಜೆ
ಲ್ವಾಗಿರೆ ನೀಳ್ದು ಬಿಳ್ಪಳುಕು ಪುಟ್ಟಿಸಿದತ್ತಖಿಳರ್ಗೆ ಭೀತಿಯಂ ೨೯

ಚಂಪಕಮಾಲೆ

ಘುಳುಘುಳು ಭುಂಭುಗಿಲ್ ಭುಗಿಲು ಚಟ್ಟಟಿಲುಚ್ಚಟಿಲುಚ್ಚಟಿಚ್ಚಟ
ಚ್ಚಟಿತಟಿಯೆಂಬ ರೌದ್ರತರಭೀಷಣಘೋಷಣಮುಣ್ಮೆ ಪೊಣ್ಮೆ ಸಂ
ಗಳಿಸಿರಲುಗ್ರಮಂ ಪ್ರಳಯಕಾಲಮಹಾಗ್ನಿಯಿದೆಂಬ ಮಾಳ್ಕೆಯಿಂ
ದುಳುಕುನಿಮಿಳ್ದು ಬಿಳ್ದುದು ಮರೀಚಿ ಮುಸುಂಕೆ ದಿಗಂತರಾಳಮಂ ೩೦

ವಚನ: ಅಂತು ಭಯಂಕರಾಕಾರದಿಂ ಸಾತಿಶಯಮಾದ ನೂತನತದುಲ್ಕಾಪಾತಂ ಸಭೆಯೆಲ್ಲಂ ಬೆಕ್ಕಳಿಸುವಂತೆ ವಿಯತ್ತಳದಿಂ ಬೀೞ್ದು ಸಂಕ್ರಂದನ ವಂದ್ಯಮಾನ ಪದದ್ವಂದನ ಮುಂದೆ ದೂರದೊಳ್ ನಿಂದು ತನ್ನಯ ಚಂಚದುದಂಚದಭಿಜ್ಯೋತಿರ್ಜಾಲದಿಂದಾರತಿಯನೆತ್ತುವ ಮಾಳ್ಕೆಯಿಂ ಬಳಸಿ ಪೊಳೆಯುತ್ತುಮಿರ್ಪುದುಂ

ಕಂದ: ಮೋಹಮೆಂಬಂಧಕಾರಸ
ಮೂಹಂ ವ್ಯಾಪಿಸಿದ ಮೋಕ್ಷಪಥಮಂ ಬೆಳಗಿ ಪು
ರೋಹಿತಮಂ ತೋಱು ಸಕರ
ವಾಹಿತದೀಪಂ ದಲೆಂಬಿನಂ ಸೊಗಯಿಸುಗುಂ ೩೧

ವಚನ: ಅನಂತರಂ ನೋಡನೋಡಲದೃಶ್ಯಮಾಗಿ ಪರೆದುಪೋಪುದುಂ ಸಭೆಯೆಲ್ಲಂ ಬೆಕ್ಕಸಂಬೆಱಗಾಗಿ ಜಗದೊಡೆಯನ ಮೊಗಮಂ ನೋಡಿ ಕೌತುಕಮಿದೇನೆದಱಿಂದಮಂ ಬೆಸಸಲ್ವೇಳ್ಕುಮೆಂದು ಕರಕಮಳಂಗಳಂ ಮುಗಿದು ಬಿನ್ನಪಂಗೆಯ್ವುದುಮಾಗಳ್ ಜ್ಞಾನತ್ರಯನಿಧಾನಂ ಮುಗುಳ್ನಗೆವೆರಸಿದ ನುಡಿಯಿಂದಿಂತೆಂದಂ

ಸ್ರಗ್ಧರೆ

ಒರ್ವಂ ಜ್ಯೋತಿಷ್ಕದೇವಂ ವಿಮಳಚರಿತನೆಂಬಂ ಸುರಾಧೀಶನಾಜ್ಞಾ
ಪೂರ್ವಂ ಬಂದಂಬರಸ್ಥಾನದೊಳಿರುತುಮುದಂನೋಡಿ ಕಂಡಿಲ್ಲಿ ನಮ್ಮಂ
ಸರ್ವೇಶಂ ಬೇಸಱಿಂ ಸಂಸೃತಿ ವಿಷಯಸುಖಕ್ಕಿನ್ನುಮೆಂದೆಮ್ಮ ಚಿತ್ತ
ಕ್ಕುರ್ವಿನ್ವೈರಾಗ್ಯಮಂ ಪುಟ್ಟಿಸುವ ಬೆಸಸೆಯಿಂದಿಂತುಟಂ ತೋಱಿಪೋದಂ ೩೨

ವಚನ: ತೇಜೋಮಯಮಾಪೊಡಮೇನ್ನಾಕಾರಮೆಂತಿಂತಪ್ಪ ತೋಱಿ ಪಾಱು ಮನಸ್ಥಿಯನೆಯ್ದಿತ್ತಂತೆ ಸಂಪತ್ತಿಶರೀರಭೋಗಂಗಳುಮಸ್ಥಿರಂಗಳವಂ ತೋಱಿಯದೆ ನಿಮ್ಮ

ಪಂದಿಗರ್ ಮಱೆದಿರ್ಪುದನುಚಿತಮೆಂದು ಬಿಳ್ದ ಕೈದನೆತ್ತಿಕೊಟ್ಟು ಕಲಿಯುಂ ಮೂದಲಿಸುವಂತೆ ಸಂಸಾರದಧ್ರುವತೆಯುಂ ತೋಱಿಸಿ ವಿರಕ್ತಿಭಾವಮನೆಮಗೆಚ್ಚಱಿಸಿಕೊಟ್ಟು ಪೋದನೆಂದ ಪ್ರತಾಪರಾಜಂಗಂ ಪರಧರ್ಮಕುಮಾರಂಗಮನಿತ್ಯತಾಪ್ರತಿಪಾದನ ಮುಖದಿಂ ದೇವನಿಂತೆಂದಂ

**ಮತ್ತೇಭವಿಕ್ರೀಡಿತ**

ಘನಸಂಕ್ಲೇಶವಿಭಾವಮೆಂಬ ತೆರೆಯಿಂದಂ ಕೂಡಿ ರೋಗಪ್ರವ
ರ್ಧನಮೆಂಬುನ್ನತ ಫೇನದಿಂ ಪುದಿದು ಚಿಂತಾವರ್ತದಿಂದೊಂದಿ ಕು
ತ್ಸನಸಂಸಾರಸಮುದ್ರದಲ್ಲಿ ಜವನೆಂಬೌರ್ವಾನಳಂ ಪೀರ್ವ ಜೀ
ವನಮಾದತ್ತು ಶರೀರಜೀವನಮಿದಕ್ಕೇಕಯ್ಯ ಮುಯ್ವಾಂತಪರ್ ೩೩

ಸ್ರಗ್ಧರೆ

ಪಾಲುಂ ನೀರಂತಿರೈಕ್ಯಂಬಡೆದು ಸುಖಮನೀವುತ್ತುಮಿರ್ಪಾತ್ಮನಾಯು
ರ್ಮಾಲಂ ತೀರಲ್ಕೆ ಮೆಯ್ವಿಟ್ಟಪರಗತಿಗೆ ಪೋಪಾಗಳೀ ದೇಹ[1]ಮುಂ[1] ಮ
ತ್ಪಾಲಂ ಮಿತ್ರಂ ದಲೀತಂ ಬಳಿಗಳಿಹ ಬರಲ್ವೇಳ್ಕುಮೆಂದೆಳ್ವುದಿಲ್ಲಂ
ಖೇಳರ್ ಪೆಂಡಿರ್ ತನೂಜರ್ ಬಹಿಸುತರರರೇನನ್ಯರೆಂಬಲ್ಲಿ ಚೋದ್ಯಂ ೩೪

ಕಂದ: ಒಡೆಯನಿವಂ ಬಡವನಿವಂ
ಕಡುಜಾಣನಿವಂ ಜಡಂ ದಲಿವನೆಂದೆನ್ನಂ
ತಡೆಯದೆ ಸರ್ವಗ್ರಾಸಮ
ನೊಡರಿಸುವಂ ಕಿಚ್ಚಿನಂದದಿಂ ಕ್ರೂರಯಮಂ ೩೫

ಕರೆಯ ಮರದಂತೆ ಬೀಳ್ವುದು
ಶರೀರಮಿದು ಮಂಜಿನಂತೆ ಪರೆವುದು ಭೋಗಂ
ಸುರಚಾಪದಂತೆ ಕಿಡುವುದು
ಸಿರಿ ಚಿರಮಾಗಿರ್ಪುದಾವುದೋ ಮನುಜರ್ಗಂ ೩೬

ಪುದಿದ ಮಧುಮಕ್ಷಿಕಾದಂ
ಶದ ನೋವಂ ಬಗೆಯನೆಂತು ಮಧುಪರಂ (?)
ಪದೆಪಿಂ ಸಂಸೃತಿದುಃಖದ
ಮವನೋವಂ ಬಗೆಯನಂತೆ ಸುಖಬಿಂದುಕರಂ ೩೭

---

[1] ಮುಂ (ಚ)

ಚಂಪಕಮಾಲೆ

ಮನಸಿಜನೆಂಬ ಬಲ್ಗ್ರಹಮದೊತ್ತಿ ನಿಪೀಡಿಸೆ ಹುಚ್ಚುಗೊಂಡು ಪೊ
ಲ್ಲೆನಿಸುವ ವಸ್ತುವಂ ಪಿರಿದುಮೊಳ್ಳಿತವೆಂಬರವೆಂತು ಮೂತ್ರ ರ
ಕ್ತನಿಳಯಮಾಗಿ ಕೊಕ್ಕರಿಕೆಯಂ ನೆಱಪುಟ್ಟಿಸುತಿರ್ಪ ಕಾಮಿನೀ
ಘನಜಘನಂ ಮನೋಹರಕಮೆಂಬರನಂಗನ ಸೊಕ್ಕು ಮೊಕ್ಕಳಂ ೩೮

ನೆರಪಿದ ಪುಣ್ಯಪಾಪಪರಿಪಾಕದೆ ಪುಟ್ಟುವ ಪೊಂದುತಿರ್ಪ ದು
ರ್ಧರತರದುಃಖದಿಂ ನವೆದು ಕಷ್ಟಚತುರ್ಗತಿಯಲ್ಲಿ ಕೂಡಿ ಮಾ
ಣ್ದಿರದೆ ಸಮಂತು ಜಾಟಣದ ಗುಂಡಿಗೆಯಂತಿರನೇಕಕಾಲಮುಂ
ತಿರುತರುತಿರ್ದು ಸೇದೆವಡುತಿರ್ಪುವು ನೋಡಿರೆ ಜೀವರಾಶಿಗಳ್ ೩೯

ಶಾರ್ದೂಲವಿಕ್ರೀಡಿತ

ಜೀವಂ ಕೋಟಲೆಗೊಳ್ಗು ಕರ್ಮವಶದಿಂದಾ ಕರ್ಮಮುಂ ಸತ್ತಪ
ಸ್ಸೇವಾಯೋಗದೆ ಕೆಟ್ಟುಪೋಕದಱ ಕೇಡಿಂದಕ್ಕು ನಿತ್ಯತ್ವದು
ದ್ಭಾವಂ ಪೆರ್ಚಿದ ಮೋಕ್ಷಮಲ್ಲಿ ಸುಖರೂಪಂ ಸಾರ್ಗುಮೆಂದಾ ಮಹಾ
ದೇವಂ ಚಿತ್ತದೊಳಂ ದೃಢೀಕರಿಸಿದಂ ದೀಕ್ಷಾಗ್ರಹಾಕಾಂಕ್ಷೆಯಿಂ ೪೦

ಕಂದ : ಕೆಡುವುದದೆಲ್ಲಂ ಕೆಟ್ಟೊಡೆ
ತಡೆಯದೆ ಕೆಡದಿರ್ಪುದೆಯ್ದೆ ಬರ್ಪುಡೆ ಮತ್ತಂ
ಕಡುಲಾಭಮಾವುದಿದಱಿಂ
ದೊಡನೆರಡನೊಡರ್ಚುವುದ್ಘತಪಮಂ ಮಾಳ್ಪೆಂ ೪೧

ವಚನ: ಎಂದು ತಱಿಸಂದು ಮೋಕ್ಷಲಕ್ಷ್ಮೀಸಮಾಶ್ಲೇಷಾಭಿಲಾಷನಾಗಿಯಾ ಧರ್ಮನಾಥಮಹಾರಾಜಂ ತಪೋಗ್ರಹಣಪರಿಣಾಮಪರಿಸೂಚನ ನಿರತ ನಿರತಿಶಯವಚನದಿಂದಖಿಳಸಭಾಜನಕ್ಕೆ ಶರೀರಾದಿಪರದ್ರವ್ಯದಧ್ರುವತೆಯನಿಂತು ಬೆಸಸುವುದುಮಲ್ಲಿ ಸಂಸಾರಭೀರುಗಳಪ್ಪರಸುಮಕ್ಕಳೆಲ್ಲಂ ಮೆಚ್ಚಿ ಮತ್ತಮೆಮಗೆ ದೇವರಲೋಕಮೇ ಲೋಕಮೆಮ್ಮೊಡನೆ ಬಪ್ಪುದೆಂದನುಜ್ಞೆಯಂ ದಯೆಗೆಯ್ಯಲ್ವೇಳ್ಕುಮೆಂದಿಂತೆಂದರ್

ಚಂಪಕಮಾಲೆ

ಪರುಷದ ಕೂಟದಿಂದಮುಮ ಕಬ್ಬುನಮೆಂತು ಸುವರ್ಣಮಪ್ಪುದಂ
ತಿರೆ ಧರಣೀತಳಾಧಿಪತಿ ನಿನ್ನಯ ಬೆಂಬಳಿಸಂದು ದೀಕ್ಷೆಯಂ
ಧರಿಸುವೆವೆಂದು ಪೂಣ್ದರಧಿರಾಜರುಮಾಗಳೆ ಮಿಾಱಿರುತ್ತಮರ್
ಗುರುಜನಶೀಲಮಾಚರತಿ ಶಿಷ್ಯಕದಂಬಕಮೆಂಬ ನೀತಿಯಂ ೪೨

ಕಂದ: ಮಿಗುವ ವಿರಕ್ತಿಯೊಳೊಂದಿದ
ಸೊಗಯಿಪ ಸಾಸಿರ್ವರರಸುಮಕ್ಕಳ ಬಳಗಂ
ತೆಗೆಯೂಳನಾಯ್ದು ತೆಗೆದಂ
ತೊಗೆದುದು ಕೊಳಲೆಂದು ಮೋಕ್ಷಮುರ್ಗವನದಱಿಕೊಳ್ ೪೩

ವಚನ: ಅನಂತರಂ ಜಗತ್ತ್ರಯಜ್ಯಾಯನಭಿಪ್ರಾಯಮನವಧಿಬೋಧದಿಂದಱಿದು

ಮತ್ತೇಭವಿಕ್ರೀಡಿತ

ವರವೈರಾಗ್ಯರಸಪ್ರವಾಹಭರದೊಳ್ ತೇಂಕುತ್ತಿರಲ್ ಧರ್ಮನಾ
ಥರಸಾಧೀಶ್ವರನಾಕ್ಷಣಂ ಪ್ರಮುದದಿಂ ಸಾರಸ್ವತಾದಿತ್ಯವ
ಹ್ನ್ಯರುಣಪ್ರೋತ್ತಮ ಗರ್ದತೋಯತುಷಿತಾವ್ಯಾಬಾಧರಿಷ್ಟರೆ
ಣ್ಬರುಮೆಳ್ತಂದರಮರ್ತ್ಯಯೋಗಿಪತಿಗಳ್ ಬ್ರಹ್ಮಾಖ್ಯಕಲ್ಪಾಗ್ರದಿಂ ೪೪

ವಚನ: ಬಂದು ಮುಂದೆ ನಿಂದು ಜಯಜಯನಿನಾದಸಮುತ್ತುಂಗರುಂ ವಿನಯ ಭರಾನತೋತ್ತಮಾಂಗರುಂ ಸಂತೋಷರಸತರಂಗಿತಾಂತರಂಗರುಂಪುಳಕಕಳಿತ ಸಕಳಾಂಗರು ಮಾಗಿ ಪರಮನ ಚರಣದ್ವಂದದೊಳ್ ನಮೇರುಮಂದಾರಪಾರಿಜಾತ ಕುಸುಮಾಸಾರಮಂ ಸುರಿದು

ಮತ್ತೇಭವಿಕ್ರೀಡಿತ

ಎಲೆ ವಿಜ್ಞಾನನಿಧಾನ ನೀಂ ಬಗೆದ ಕಾರ್ಯಂ ಲೇಸುಲೇಸೆಂತು ವಿ
ಹ್ವಳಸಂಸಾರಸಮುದ್ರದಿಂ ತೊಲಗಿ ಮೋಕ್ಷಸ್ಥಾನದೊಳ್ ಸಂತತಂ
ನೆಲೆಗೊಂಡಿರ್ಪೆನೆಂಬ ಬುದ್ಧಿ ಕರಣಂ ಶ್ರೇಯಸ್ಸುಖೋಪಾರ್ಜನಂ
ಬಳಸಂಸಾರವಿಸರ್ಜನಂ ಸಹಜಮಾರ್ಹಂತ್ಯೈಕರಪ್ಪರ್ಗೆ ತಾಂ ೪೫

ಚಂಪಕಮಾಲೆ

ನಿನಗೆ ಜಗತ್ತ್ರಯೀಪತಿಗಳಾಳ್ವೆಸವಂ ನೆಱೆಮಾಳ್ಪ ಭೂರಿಪಾ
ವನಮಹಿಮಾವಿಶೇಷಿತವಿಭೂತಿ ಜರತ್ತೃಣಮಾತ್ರಮೆಂದೊಡೀ
ತನವಧಿ ವಾರ್ಧಿಯಂ ಕುಡಿವ ಕುಂಭಭವಂಗರಿದೇ ಘಟೋದಕಂ
ವನಧಿಪೃತೋರ್ವಿಯಂ ಬಿಸುಟೆಯೆಂಬುದು ವಿಸ್ಮಯಕಾರಿಯಲ್ತದೇಂ ೪೬

ಉತ್ಪಲಮಾಲೆ

ನೆಟ್ಟನನಂತನಾಥನಪವರ್ಗಮನೆಯ್ದಿದನಂತರಂ ಕರಂ
ಕೆಟ್ಟದು ಧರ್ಮವರ್ತನೆಯುದಂ ಪೊಸತಾಗಿ ವಿಶೇಷಮಪ್ಪಿನಂ
ಪುಟ್ಟಿಸಿ ಮತ್ತಮಿಾಗಳಧಿಕೇವಳಬೋಧಮನೆಯ್ದುವಾರ್ಪು ನೇ
ರ್ಪಟ್ಟುದು ನಿನ್ನೊಳಲ್ಲದುಳಿದರ್ಗಿದು ಕೂಡುಗುಮೇ ಸುರಾರ್ಚಿತಾ ೪೭

ಚಂಪಕಮಾಲೆ

ಚರಮಶರೀರ ನಿನ್ನ ಪರಿನಿಷ್ಕ್ರಮಣೋದ್ಯಮಮಂ ನಿರೀಕ್ಷಿಸಿ
ತ್ವರಿತದಿನೆಮ್ಮ ಜನ್ಮ ಕೃತಕೃತ್ಯಮಿದಾಗಲೆವೇಳ್ಕುಮೆಂಬಧಿ
ಸ್ಫುರಣದೆ ಬಂದೆವಲ್ಲದೆ ನಿಜಾಶಯಮಂ ಪ್ರತಿಬೋಧಿಸಲ್ಕೆ ಶ
ಕ್ತರೆ ದಿನನಾಥನಂ ಬೆಳಗಲಾರ್ಪುದೇ ತುಚ್ಛಪತಂಗಪಾತಕಂ ೪೮

ವಚನ : ಇಂತು ಸಾರಸ್ವತಾದಿ ಲೋಕಾಂತಿಕದೇವರುಷಿವೃಷಭರಾ ಪುರುಷೋತ್ತಮನ ಸಂಸ್ತವನಮುಖದಿಂ ಪ್ರತಿಬೋಧನಮನುಜ್ಜೀವಿಸಿ ನಿಜನಿವಾಸಕ್ಕೆ ಪೋಗಲೊಡಂ

ಕಂದ : ಪರಮನ ಪರಿನಿಷ್ಕ್ರಮಣೋ
ದ್ಧುರಕಲ್ಯಾಣಪ್ರಭಾವಮಂ ದೇವೇಂದ್ರಂ
ಪರಮಾವಧಿಬೋಧದಿನಱ
ದಿರದೆಯ್ದಿದನಂದು ಹರ್ಷದುತ್ಕರ್ಷತೆಯಂ ೪೯

ಮಹಾಸ್ರಗ್ಧರೆ

ದೆಸೆಯೊಳ್ ನಾನಾವಿಮಾನಂ ಕೆದಱಿ ಸುರಧನುಶ್ರೀಯಮನೆಲ್ಲಾತಪತ್ರ
ಪ್ರಸರಂ ವ್ಯೋಮಾಗ್ರದೊಳ್ ಸಂದಣಿಸಿ ಪುದಿಯೆ ಸಂಗೀತವಾದ್ಯಪ್ರಘೋಷಂ
ರಸೆಯೊಳ್ ಮೆಯ್ವೆರ್ಚೆ ಜೋದ್ಯಂಬಡೆದಿರೆ ಭವನಾಭ್ಯಂತರಜ್ಯೋತಿರುತ್ಕ
ಲ್ಪಸುರರ್ ಮುಂತಾದ ಸರ್ವಾಮರಬಲಸಹಿತಂ ಬೇಗದಿಂ ಬಂದನಿಂದ್ರಂ ೫೦

ವಚನ : ಅಂತು ಚತುರ್ನಿಕಾಯದೇವರ್ಕಳೆಲ್ಲಂ ನೆರೆದು ರತ್ನಪುರಕ್ಕೆವಂದರಮನೆಯಂ ಪೊಕ್ಕು ಸಭಾಭವನಮನಳಂಕರಿಸಿರ್ದ ಭುವನಭೂಷಣನ ಚರಣಪೀಠದೊಳ್

ಚಂಪಕಮಾಲೆ

ಪಲತೆಱದಿಂ ಪೊಗಳ್ದು ಪರಿನಿಷ್ಕ್ರಮಣೋತ್ಸವಮಂ ನಮೇರುಮಂ
ಜುಳಕುಸುಮೋಪಹಾರಚಯಮಂ ಮಿಗೆಸೂಸುವ ಪೊತ್ತಿನೊಳ್ ಸಮು
ಜ್ಜ್ವಳಿತಕಿರೀಟಕೋಟಿ ಹರಿನೀಲಮಣಿಪ್ರಭೆ ತುಂಬಿವಿಂಡು ಮಂ
ಡಳಿಸಿದ ಮಾಳ್ಕೆಯಿಂದೊಡರಿಸಿತ್ತದು ನೋಳ್ಪರ ಕಣ್ಗೆ ಸೌಖ್ಯಮಂ ೫೧

ವಚನ : ತನ್ನಯ ಪೆಸದಿಂ ಮುನ್ನಮೆ ಪೋಗಿ ಕಿನ್ನರೇಶ್ವರಂ ಸಮೆದ ತಪೋಲಕ್ಷ್ಮೀವಿವಾಹಮಂಡಪಮೆಂಬಿನಂ ಕಣ್ಗೊಂಡಭಿಷೇಕಮಂಡಪಕ್ಕೆ ಭೂಮಂಡಳೀಮಂಡನನಾಖಂಡಳಂ ತಾನೆ ಕೈಗೊಟ್ಟು ಬಿಜಯಂಗೆಯ್ಸಿ ದಿವ್ಯವಸ್ತ್ರಭೂಷಣಾದಿ ನವ್ಯಮಂಗಳದ್ರವ್ಯಧಾರಿಕೆಯ ಸರಸಿರುಹಮುಖಿಯರ್ಪ್ಪ ಹರಿತ್ಕುಮಾರಿಕಾದಿ ಪರಿಕರಮಂ ಮಜ್ಜನಪೀಠದಿಕ್ಕೆಲದೊಳ್ ನಿಱಿಸಿ ಸಂಭೂರಿಗಂಭೀರಮಂಗಳಾಚಾರಚಾರುಂ ವಿರಾವಬಹಳಕೋಳಾಹಳಂ ವಿಯತ್ತಳಮಂ ಮೂವಳಸು ಬಳಸೆ

ಮತ್ತೇಭವಿಕ್ರೀಡಿತ

ಇದು ಜನ್ಮಾಭಿಷವಕ್ಕೆ ಸಕ್ಕಸಮನೆಂಬಂತಾಗೆ ಹೇಮಾದ್ರಿಯಂ
ಪದೆಪಿಂದೇಱಿಳಿಯುತ್ತುಮಿರ್ಪ ಪದದೊಳ್ ತೋರ್ಪಾ ದುರಾಯಾಸಮಿ
ಲ್ಲದೆ ಚಿತ್ರಂ ಮಿಗೆಮಾಡಿದಂ ಪತಿಗೆ ಗಂಗಾಸಿಂಧುತೀರ್ಥಪ್ರತೋ
ಯದಿನಾಖಂಡಳಸಂದು ಪಾವನತಪೋರಾಜ್ಯಾಭಿಷೇಕಾಂಗಮಂ ೫೨

ಶಾರ್ದೂಲವಿಕ್ರೀಡಿತ

ಇಂದೇ ದೇವನ ದೇಹಸಂಗಮೆಮಗಿನ್ನೆಲ್ಲೆಂಬಿದಂ ತೋರ್ಪವೋ
ಲಿಂದ್ರಂ ಭೂಷಿಸಿದುದ್ಘರತ್ನಮಯ ನಾನಾಭೂಷಣಂ ಗಂಧಸಾ
ರಂ ದೇವಾಂಗದ ವಸ್ತ್ರಮಂದತಿಶಯಂಬೆತ್ತಿರ್ದುದಾ ಪೊತ್ತಿನೊಳ್
ಬಂದೆತ್ತಿತ್ತು ಸುರಾಂಗನಾಸಮುದಯಂ ನೀರಾಜನಾಪ್ಪಂದಮಂ ೫೩

ವಚನ: ಮತ್ತಂ

ಕಂದ: ವರಧರ್ಮಕುಮಾರಕನಂ
ಕರೆಯಿಸಿ ರಾಜ್ಯಾಭಿಷೇಚನಂಗೆಯ್ದು ಜಗ
ದ್ಗುರು ಕಟ್ಟಿ ರತ್ನಪಟ್ಟಮ
ನಿರದಿತ್ತಂ ತನ್ನ ಸಕಳರಾಜ್ಯಶ್ರೀಯಂ ೫೪

ಮತ್ತೇಭವಿಕ್ರೀಡಿತ

ಬಿಸುಟಿಪ್ಪಂ ಪಿತೃ ಪೋದಪಂ ತಪಕೆ ಮತ್ತೇಗೆಯ್ವೆನಾನೆಂಬ ಬೇ
ವಸದಿಂದುಮ್ಮಳಿಸಲ್ಕೆವೇಡ ಸಹಜಂ ಮೋಕ್ಷಾರ್ಥಿಗಳ್ಗೆಂದು ಬೋ
ಧಿಸಿ ಸಂತೈಸಿ ಸಮಸ್ತರಂ ಪೊಳಲೊಳತ್ಯುತ್ಸಾಹಮಂ ಕೂಡೆಮಾ
ಡಿಸಿ ನೀವೆಂದೆನೆ ಡಂಗುರಂಬೊಡೆಸಿದರ್ ಸರ್ವೋರ್ವರಾಪಾಳರುಂ ೫೫

ವಚನ: ಆ ಡಂಗುರದ ಬಲ್ಲುಲಿಯುಗ್ಗಳಮಾಗಿ ಗಗ್ಗಲಿಸುತ್ತುಮಿರೆ

ಕಂದ: ಮೊಳಗುವ ಬದ್ದವಣಂಗಳ
ಥಳಥಳಿಸುವ ಪಲವುತೋರಣಂಗಳ ಬಳಗಂ
ರಾಗಾವಳಿಯಿಂ ತೊಳಗುವ
ಬೀದಿಗಳೊಳ್ ಭೋರೆನುತ್ತೆ ಮೇಳಯಿಸುವುದುಂ (?) ೫೬

ವಚನ: ಆಗಳಾಡುವ ವೈತಾಳಿಕರ ಪಾಡುವ ಗಾಯಕರ ಬೇಡುವ ಯಾಚಕರ ನೋಡುವ ನೋಟಕರ ಸಂದಣಿಯಿಸಂದಮಾದ ಪುರದ ಸಂಭ್ರಮಂ ಪರಮನ ಪರಿನಿಷ್ಕ್ರಮಣಕಲ್ಯಾಣದುಪಕ್ರಮಕ್ಕಂ ಪರಮಧರ್ಮಕುಮಾರನ ಪಟ್ಟಬದ್ಧಕಲ್ಯಾಣದನುಕ್ರಮಕ್ಕಂ ಸಕ್ಕಸಮನಾಗಿ ತೆಕ್ಕನೆ ತೀವೆ

ಮತ್ತೇಭವಿಕ್ರೀಡಿತ

ಮಗನಂ ಮೋಹದೆ ನೋಡಿನೋಡಿ ಪುಳಕಂ ಸಾಲೊತ್ತೆ ತಳ್ಕೈಸಿಯು
ಶ್ರುಗಳುಣ್ಮುತ್ತಿರೆ ನಿಂದ ತಾಯನನುಕಂಪಾಲೋಕನಾಭಂಗಿ ಕೈ
ಮಿಗಲಾಲಿಂಗಿಸಿ ಬುದ್ಧಿವೇಳ್ದು ಪುರಮಂ ಬೀಳ್ಕೊಂಡು ಬಂದೇಱಿದಂ
ಮಿಗೆ ಚಂದ್ರಪ್ರಭನಾಮಮಂ ಶಿವಿಗೆಯಂ ಮುಕ್ತಾಫಳವ್ಯಕ್ತಮಂ ೫೭

ವಚನ: ಅಂತು ಮೋಕ್ಷಲಕ್ಷ್ಮೀಪ್ರಾಸಾದ ಪ್ರಥಮಸೋಪಾನಮನೇಱುವಂತೇಱಿದೊಡಂ

ಕಂದ: ದಂಡಿಗೆಯನೆತ್ತಿ ಪೊತ್ತರು
ಮಂಡಳಿಕರ ಮಕುಟಘಟಿತಮಣಿಗಳ ಕಿರಣಂ
ಮಂಡಳಿಸಿ ನಭದೊಳದು ಕ
ಣ್ಗೊಂಡುದು ಕಂಬಟ್ಟೆಯೊಂದು ಮೇಲ್ಗಟ್ಟಿನವೋಲ್ ೫೮

ಚಂಪಕಮಾಲೆ

ನೊರೆಗಳ ಪಿಂಡು ಮಂಡಳಿಸಿದಂತೆ ಸಹಸ್ರನೃಪಾಳಯಾನಮಾ
ನರಿಸಿರೆ ಪೂಜಿಪಾರತಿಯನೆತ್ತುವ ಸೋಳ್ಪ ಪುರೀಜನಂಗಳು
ದ್ಧುರನಯನಾಂಶುಗಳ್ ಬಳಸೆ ಭೂಪರ ಸೂಳ್ ಪೆಗಲಲ್ಲಿ ಪೋದುದಾ
ಗುರುಮರನೇಱಿದಳ್ಳಿವಿಗೆ ದುಗ್ಧಪಯೋಧಿಯ ನಾವೆಯಂದದಿಂ ೫೯

ಮತ್ತೇಭವಿಕ್ರೀಡಿತ

ತೊಡವಂ ತಾಳ್ದ ನೃಪಾಳಜಾಳಮೊಲವಿಂ ಮುಂಪೊತ್ತುಕೊಂಡೊಯ್ದುದೇ
ಳಡಿಯಂ ಖೇಚರರಾಜರಪ್ರಮತಿಮುಖಂ ಪೊತ್ತೊಯ್ದು ಕೊಂಡೊಯ್ದುದೇ
ಳಡಿಯಂ ದಾನವರೋಳಿಯುತ್ತಲದಱಿಂದಂ ಪೊತ್ತುಕೊಂಡೊಯ್ದುದೇ
ಳಡಿಯಂ ಪೊತ್ತುದು ಶಕ್ರರಾಳಿ ಬಳಿಯಂ ದೀಕ್ಷಾವನಾಂತಂಬರಂ ೬೦

ಉತ್ಪಲಮಾಲೆ

ಪಾಡುವ ಕಿನ್ನರೀಜನದ ಗೀತರಸಕ್ಕನುಕೂಲಮಾಗಿ ಕೈ
ಗೂಡುವ ಖೇಚರೀವಿತತಿ ಬಾಜಿಪ ವಾದ್ಯನಿನಾದದೊಳ್ ತಡಂ
ಮಾಡದೆಯಾಡುತಿರ್ಪ ನರಕಿಂಪುರುಷಪ್ರಮದಾಳಿನರ್ತನಂ
ಕೂಡೆ ಬೆಡಂಗನಿತ್ತುದದು ಯಾತ್ರೆಯೊಳಂದು ತಪೋವನಂಬರಂ ೬೧

ವಚನ: ಆ ವಿಶಾಳಮಾದ ಸಾಳವೆಂಬ ನಂದನವನದ ಮಧ್ಯಪ್ರದೇಶದೊಳ್

ಉತ್ಪಲಮಾಲೆ

ಕೆಂಬರಲಿಂದೆ ಪಙ್ತಿಸರಲಿಂದೆ ವಿಸೌಕ್ತಿಕದಿಂ ಕುಬೇರನಂ
ದೆಂಬಡೆಯೆಸ್ದಿ ನಿರ್ಮಿಸಿದ ದೀಕ್ಷೆಯ ಮಂಡಪಮಂ ಪಿಕಂ ಶುಕಂ
ತುಂಬಿ ನಿರೀಕ್ಷೆಗೆಯ್ದು ತಳಿಗಾಯುಲಿಂದೊಲಿದಾಡಿದತ್ತು ಮು
ತ್ತಿಂಬಿನೊಳಂ ಕರ್ದುಂಕಿಮುದು ಬಂದೆಜಗಿತ್ತು ವಿಶೇಷಹರ್ಷದಿಂ ೬೨

ವಚನ: ಆ ಮಂಡಪಮುನೆಯ್ದೆ ಬಂದು ಮಕರತೋರಣದ್ವಾರ ಪುರೋಭಾಗದೊಳ್ ನಿಂದು ಸೌಧರ್ಮೇಂದ್ರಂ ದೇವಾಪಧಾನವೆಂದು ಕೈಗುಡೆ ಸಿವಿಗೆಯಿಂದಿಳಿದು ಧಾನವ ಮಾನವ ವ್ಯಂತರಾನಂತಕೋಟಿ ಪಟುಪಟಹಸಮುತ್ಕಟರಟನಂ ದಿಕ್ತಟಕೋಟರದೊಳ್ ಪ್ರಕಟಮಾಗಿ ನಟಿಸಂಗೆಯ್ವುತ್ತುಮಿರೆ ಬಂದೊಳಗಂ ಪೊಕ್ಕು ನವರತ್ನವರ್ಣಪರಿಪೂರ್ಣ ಕರ್ಪೂರಚೂರ್ಣಮಯ ರಂಗಾವಲಿಯಿಂ ಭಂಗುರಮಾದರಂಗದ ನಟ್ಟನಡುವಣಿಂದುಕಾಂತ ಶಿಲಾಪಟ್ಟಕದ ಮೇಲೆ ದೇವಂ ಪೂರ್ವಾಭಿಮುಖನಾಗಿ ಕುಳ್ಳಿರ್ದು

ಉತ್ಪಲಮಾಲೆ

ತೊಟ್ಟ ತಿರೀಟಮಂ ತೆಗೆದುಕೊಟ್ಟು ಸುರೇಶ್ವರನಾಂತ ಹಸ್ತದೊಳ್
ತೊಟ್ಟನೆ ಬಿಟ್ಟ ಕೇಶಭರಮಂ ನೆಱೆ ಬಿಚ್ಚಿದೊಡೊಕ್ಕುದಲ್ಲಿ ಜೈ
ತ್ತಿಟ್ಟ ನಮೇರುಪುಷ್ಪನಿವಹಂ ಚರಮಾಂಗದ ಸಂಗಸೌಖ್ಯದಿಂ
ಕೆಟ್ಟಪುದೆಂದದುಮ್ಮಳಿಸಿ ಸೂಸುವವೋಲ್ ಬಿಡದಶ್ರುಬಿಂದುವಂ ೬೩

ಕಂದ: ಕಳೆದು ವರವಸ್ತ್ರಭೂಷಣ
ಕುಳಮಂ ದೇವಾಧಿದೇವನೊಪ್ಪಿದನಾಗಳ್
ಬಳಸಿದ ಮುಗಿಲಾವರಣಂ
ತೊಲಗಿದ ಹೇಮಾದ್ರಿಶಿಖರವೆಂದೆಂಬಿನೆಗಂ ೬೪

ಮಾಣಿಕದಾರತಿಗಳ ಹರಿ
ಯಾಣಂಗಳನೆತ್ತಿಪಿಡಿದು ನಿಂದರ್ ಕೆಲರಿಂ
ದ್ರಾಣಿಯರಿಕ್ಕೆಲದೊಳ್ ಸುರ
ಗಾಣಿಕ್ಯಂ ಪಿಡಿದುದಷ್ಟಮಂಗಳಭರಮಂ ೬೫

ವಚನ: ಆಗಳಾ ಮಂಡಪದುಭಯಪಾರ್ಶ್ವದೊಳ್ ಪೊಂಗಟ್ಟಿಗೆವಿಡಿದು ಸೌಧರ್ಮೇಂದ್ರಸುಮಿಶಾನೇಂದ್ರನುಂ ನಿಂದು ಪ್ರಜಗಳೊಳಗಣ ಕಳಕಳಂಗಳಂ ಮಾಣಿಸುತ್ತುಮಿರೆ

ಚಂಪಕಮಾಲೆ

ಸಮತೆಯಮಪ್ಪುಕೆಯ್ದು ಕಮಳಾಸನಸಂಸ್ಥಿತಿ ಚೆಲ್ವನಾಗೆ ಪಂ
ಚಮಗತಿಗೆಯ್ದಿಸಲ್ ನೆಱೆವ ಪಂಚಪದಾಂಚಿತಪಂಚಮುಷ್ಟಿಯಿಂ
ಪಮೆ ಪಱಿದಿಕ್ಕಿದಂ ಕುಟಿಳಕುಂತಳಜಾಳಕಭಾರಮಂ ಕುದುಃ
ಖಮುಸಿರದೀವ ಪಂಚಕರಣಂಗಳ ಮೂಲಮನೆಯ್ದೆ ಕೀಳ್ವವೋಲ್ ೬೬

ಕಂದ: ಪರಮಸಮುಸ್ಸಿದ್ಧೇಭ್ಯ
ಸ್ವರನಾದದಿಂದಮೊಗೆಯೆ ಕಿತ್ತೊಳ್ಗುರುಳಂ
ಸುರಪಂ ಕನಕದ ಪಾತ್ರೆಯೊ
ಳಿರಿಸಿಯಮಂ ಬಿಟ್ಟನೊಯ್ಯಮ ಪಾಲಿಂಗಮಲೊಳ್ ೬೭

ಸುಳಿಸುಳಿದು ಸುತ್ತುತಿರ್ಪ
ಗ್ಗಳ ಬೆಳ್ನಳಿಯೆಂಬ ಚಂದ್ರಮಂಡಳದೊಳ್ ಕ
ಣ್ಗೊಳಿಪ ಕಱೆಯಂತೆ ತೋಱಿದು
ದಳಿಕುಂತಳಭಾರಮಾ ತ್ರಿಳೋಕೇಶ್ವರನಾ ೬೮

ವಚನ: ಇಂತು ಬಾಹ್ಯಾಭ್ಯಂತರಪರಿಗ್ರಹಮೆಂಬ ಕೆಸಱಿಂ ಕಳೆದು ತಪಸ್ತರುಣಿಯ ಪರಿಣಯನಕಲ್ಯಾಣಮನಾಂತ ಧರ್ಮನಾಥನಂ ಪೂಜಿಸುವ ಪೊಡಮಡುವ ಪೊಗಳ್ವ ನೀಳ್ವಳಿಸು ಸಕಳದಿವಿಜಮನುಜಮನುಜರಾಜರಾಜಿ ಜಯ ಜಯನಿನಾದಮನೇಕಾನಕ ಧ್ವಾನದೊಡನೊಡನೆ ಬಾನಮನಾವರಿಸುತ್ತುಮಿರೆ

ಚಂಪಕಮಾಲೆ

ಪಡೆನವರಾರೊ ಬೀಳ್ಕುಡೆಯಮೆಂದೆನುತುಂ ಸುರರಾಜರೆಲ್ಲರಾ
ಗಡೆ ಜಿನನುಟ್ಟು ತೊಟ್ಟು ತೆಗೆದಿಟ್ಟ ಸುವಸ್ತ್ರವಿಭೂಷಣಂಗಳಂ
ಸಡಗರದಿಂದೆ ತಂತಮಗೆ ಕೊಂಡು ಕರಂ ಬಿಗಿತೊಟ್ಟು ಕೊಟ್ಟು ನೇ
ರ್ಪಡೆ ಕಣ್ಣೆಮಾಡುತಿರ್ದರಿರದಾರೊ ವಿಮೋಹಿಸರಿಷ್ಟಯೋಗದಿಂ ೬೯

ಕಂದ: ಶ್ರೀಯಂ ಪರಿಹರಿಸಿ ತಪಃ
ಶ್ರೀಯಂ ಮಾಘಾರ್ಜುನತ್ರಯೋದಶಿಯಪರಾ
ಹ್ಣಾಯತ್ತ ಪುಷ್ಯತಾರೆಯೊ
ಳೋಂಪುದಿಂ ತಾಳ್ದನಖಿಳಜನವಿನುತಪದಂ ೭೦

ರಾಜಕುಮಾರ ಸಹಸ್ರಂ
ಯೋಜಿಸಿ ಧೀರತೆಯುಮೊಡೆಯನೊಡನಾಂತುದದು
ಶ್ರೀಜೈನದೀಕ್ಷೆಯಂ ಗುಣ
ಭಾಜನರೊಡಸಲ್ವರಲ್ತೆ ತನ್ನಯ ಪತಿಯಾ ೭೧

ಜಿನಪಂ ತ್ರಿಸಾಕ್ಷಿಕಂ ತಾ
ನೆನಿಸಿ ತಪಂಗೊಂಡ ಪದದೊಳಾಕ್ಷಣಮೊಗೆದ
ತ್ತನುಪಮಮನಃಪರ್ಯಯಂ
ಘನಕೇವಳಬೋಧದುದಯದಿಂದಂ ಮುನ್ನಂ ೭೨

ವಚನ: ಬಳಿಯಮಾ ತ್ರಿಳೋಕೀತಿಳಕನ ಚರಣಕಮಳಯುಗಳಮಂ ನಿಳಿಂಪ ಸಂಕುಳಂಬೆರಸು ಪೌಳೋಮೀಪತಿ ಮೂಮೆ ಬಲವಂದು ದಿವ್ಯವಸ್ತುಗಳಿಂಪರ್ಚಿಸಿ ನಿರ್ಭರ ಭಕ್ತಿಯಿಂ ಪದಕ್ಕೆಱಗಿ ನರ್ತಿಸಿ ಕೀರ್ತಿಸಿ ಮಗುಳ್ದು ಪೊಗಳ್ದು ಸಂತುಷ್ಟಾಂತರಂಗನಾಗಿ ತೃತೀಯಕಲ್ಯಾಣಾರ್ಚಣಾವಿಧಾನಮಂ ವಿಸ್ತರಿಸಿ ತಾನುಂ ಶಚೀಮಹಾದೇವಿಯುಂ ಪತಿ ವಿರಹಪರಿತಪ್ತಾಂಗಿಯಪ್ಪ ಶೃಂಗಾರವತೀದೇವಿಯುಂ ಸುವ್ರತಾಮಹಾದೇವಿಯುಮಂ ಮಱ ಧರ್ಮಕುಮಾರನುಮಂ ಸಂತೈಸಿ ರತ್ನಪುರಕ್ಕೆ ಕಳಿಪಿ ತದನಂತರಂ

ಕಂದ: ಮಡದಿ ಶೃಂಗಾರವತಿ ತ
ನ್ನೊಡೆಯನನಡಿಗಡಿಗೆ ನೆನೆದು ಶರಣೆನಗಾರುಂ
ದೊಡಲುರಿದು ಪಲುಂಬಿದಳಿ
ತ್ತಡಿಯೊಳ್ ಬೇಱಾದ ಜಕ್ಕಪಕ್ಕಿಯ ತೆಱದಿಂ ೭೩

ವಚನ: ಆಗಳ್

ಮಹಾಸ್ರಗ್ಧರೆ

ಸುರರಾಜರ್ ನಿಚ್ಚಲಾರಾಧಿಸುವರೊಸೆದು ಗರ್ಭಾವತಾರಂ ಮೊದಲ್ಗೊಂ
ಡರೆಬರ್ ಲೋಕತ್ರಯಾಧೀಶ್ವರಪದವಿಗೆ ಸಂದಪ್ಪ ನೀನೆನ್ನ ಪುತ್ರಂ
ಪರಿಚಿಂತಾಭಾರಮೇಕೆಂದುಸಿರ್ದು ಕುಮರನಂ ಪೆಂಡಿರಂ ನಂಟರಂ ಭೂ
ವರರಂ ಸಂತೈಸಿದಳ್ ತಜ್ಜನನಿ ಕೆಳದ ಲೇಸಪ್ಪುದೇಕಯ್ಯ ದುಃಖಂ ೭೪

ವಚನ: ಎಂದಾ ಸುವ್ರತಮಹಾದೇವಿ ನುಡಿದು ವಿಯೋಗವಿಕಳತೆಯುನಾಱಿ ಸುತ್ತುಮಿರ್ದಳನ್ನೆಗಮಿತ್ತಲ್

ಮಹಾಸ್ರಗ್ಧರೆ

ಗುರುಪಾದದ್ವಂದ್ವಮಂ ವಂದಿಸಿ ವಿನಯದೆ ಬೀಳ್ಕೊಂಡು ಸಾಹಸ್ರಯೋಗೀ
ಶ್ವರರಿಂಗಾನಮ್ರನಾಗಿ ತ್ರಿದಶಪರಿವೃಢಂ ವ್ಯೋಮಭಾಗಾಗ್ರದೊಳ್ ಪೀ
ವರ ನಾನಾದೇವಸೈನ್ಯಂ ಬಳಸಿ ಬರುತಿರಲ್ ಪೋಗಿ ಪೊಕ್ಕಂ ಲಸನ್ಮಂ
ದಿರಮಂ ಮತ್ತೆಲ್ಲರಂ ಬೀಳ್ಕೊಡೆ ನಿಜನಿಜವಾಸಕ್ಕೆ ಪೋದರಾಗಳ್ ೭೫

ವಚನ: ಅನಂತರಮಿತ್ತಲಾ ದುರ್ಧರತಪೋನಿಧಾನಸಾಧಕಂ ದುರಿತಗ್ರಹೋಚ್ಚಾಟನಪಟಿಷ್ಠ ಪಂಚಪದಮಂತ್ರಮನುಚ್ಚಾರಣಂಗೆಯ್ಯುತ್ತುಮಿರ್ದು

ಕಂದ: ಅನ್ನೃತಸೇವನೆಯ ಬಗೆ ಸಂ
ದವುರ್ದಿರೆ ಕೈಯಿಕ್ಕುವಂತೆ ಕೈಯಿಕ್ಕಿದನಂ
ದವುಮು ಕೈಯೆತ್ತಿದಂ ಮ
ತ್ತಮರಗಣಂ ಕೈಯನೆತ್ತಿ ಪೊಡವಡುವನ್ನಂ ೭೬

ಉತ್ಪಲಮಾಲೆ

ಮತ್ತಮನಂತತೀರ್ಥಕರ ಕಾಲದಿನಿತ್ತನಶೇಷಕರ್ಮ ಭೂ
ವರ್ತನದಲ್ಲಿ ಧರ್ಮದ ನೆಗಳ್ತೆಯದಿಲ್ಲದೆ ಪೋದುದಿನ್ನದಂ
ಬಿತ್ತರಿಸುತ್ತುಮಿರ್ದ ಸಮಯಾಭರಣಸ್ಥಿತಿಯ ಪ್ರಭಾವನಾ
ವೃತ್ತಿಯನೆಯ್ದೆ ತೋಱಿಸುವ ಬೇವಸದಿಂ ತಳರ್ದಂ ಮುನೀಶ್ವರಂ ೭೭

ಕಂದ: ಷಷ್ಠೋಪವಾಸಮಂ ಸಮ
ನುಷ್ಠಿಸಿ ನಾಲ್ಕನೆಯ ದಿನದೊಳತಿಶಯಿತತಪೋ
ನಿಷ್ಠನೀರ್ಯಾಪಥಸ್ಥಿತಿ
ಸೌಷ್ಠವಮಂ ಪಡೆಯಲಿಂದುಗತಿಯಿಂ ನಡೆದಂ ೭೮

ವಚನ: ಇಂತು ಸಾಳವನದಿಂ ಪೊಱಮಟ್ಟು ಪಾರಣೆಯ ನೆವದಿಂ ದಾನಮಾರ್ಗ ವ್ಯಕ್ತೀಕರಣನಿಮಿತ್ತಂ ವೀರಭಾವರಿಯ ಕ್ರಮಮಂ ಮಾಱದೆ ಪಾಟಳೀಪುತ್ರಪುರಕ್ಕಭಿಮುಖನಾಗಿ ನಡೆದುಬರ್ಪಲ್ಲಿ

ಶಾರ್ದೂಲವಿಕ್ರೀಡಿತ

ನೋಡುತ್ತುಂ ನೊಗನೊಂದನಿಕ್ಕುವನಿತಂ[1] ಮುಂಬಟ್ಟೆಯಂ ಭೂಮಿಯೊಳ್
ನೋಡುತ್ತುಂ ಸ್ಥಳಪದ್ಮಮಂ ನಿಜಪದನ್ಯಾಸಂಗಳಿಂ ತೋಳ್ಗಳೊಳ್
ಕೂಡುತ್ತುಂ ನೆಱೆನಿಶ್ಚಳತ್ವದೊದವಂ ಮಾರ್ಗಕ್ರಮಂ ತಳ್ತು ಕೈ
ಗೂಡುತ್ತುಂ ನಡೆತಂದುದಂದು ಸಮುದಾಯಂ ಪಿಂದೆ ಯೋಗೀಂದ್ರನಾ ೭೯

ವಚನ: ಆಗಳ್

ಕಂದ: ಫಳಮಂಜರಿಯಂತೆ ಕಮಂ
ಡಲು ಪೂಗೊನೆಯಂತೆ ಕುಂಚವೊಳ್ದಳಿರೆನೆ ಕೆಂ
ದಳಮೊಪ್ಪಿರೆ ಸಮುದಾಯಂ
ಜ್ವಳಿಸಿತ್ತಿದು ನಡೆವ ದಿವಿಜಕುಜವನದನ್ನಂ ೮೦

ವಚನ: ಅಂತು ಬಂದಾ ಪುರಮಂ ಪೊಕ್ಕು ತದೀಯ ವೀಧಿಕಾಭಾಗದೊಳಗೆ

---

1 ಶಂ (ಕ)

ಮತ್ತೇಭವಿಕ್ರೀಡಿತ

ಪರಿದಗ್ಧಾಂಗವಿಹೀನಸೂತಕ ಪಥೂದುಷ್ಕರ್ಮಕಾನಾದ ಗೀ
ತರಸೋಜ್ಜೀವಕ ದೀನಯಾಚಕರ ಗೇಹದ್ವಾರಮಂ ಬಿಟ್ಟು ಭ
ವ್ಯರ ಭಾಗ್ಯೋದಯದಿಂದೆ ಬಂದನಭನಾಥಂ ವೀರಚರ್ಯಾರ್ಥಮಾ
ಗಿರದಂದುತ್ತಮ ಮಧ್ಯಮಾಧಮ ನಿವಾಸಂಗಳ್ಗೆ ಮಾನಾಪಹಂ ೮೧

ವಚನ: ಆ ಪೊತ್ತಿನೊಳ್

ಕಂದ: ಅರಮನೆಯ ಮೊದಲ ಬಾಗಿಲೊ
ಳಿರಿಸಿದನರಸ ತಿಥಿಸಂವಿಭಾಗಾರ್ಪಣನೀಯ (?)
ಮರತನನಗಾರವೇಳೆಯೊ
ಳುರುಮುದದಿಂ ವಿಮಳನೆಂಬ ಮುನಿವೇದಕನಂ ೮೨

ವಚನ: ಆತಂ ಸನ್ನಿಧಿಯೊಳ್ ಕಂಡು ಮುನ್ನಮೆ ಪರಿದುಪೋಗಿ ಸತ್ಪಾತ್ರ ಸಮಾಗಮನಸಮಯಮಂ ಪಾರುತ್ತಮಿರ್ದ ಧನ್ಯಸೇನಮಹಾರಾಜಂಗೆ ಬಿನ್ನೈಸುವುದುಂ

ಉತ್ಪಲಮಾಲೆ

ಅಷ್ಟವಿಧಾರ್ಚನೋಚಿತ ನವೀನ ಸುವಸ್ತುಗಳಿಂದೆ ತುಂಬಿದು
ತ್ಕೃಷ್ಟ ಸುವರ್ಣಪಾತ್ರೆಗಳನುತ್ಕಳಶಾಂಚಿತ ದರ್ಪಣಂಗಳಂ
ಶಿಷ್ಟವಧೂಜನಂ ಪಿಡಿದು ಮುಂದೆ ಬರಲ್ಕಿಡಿರ್ವಂದನಾ ನೃಪಂ
ಹೃಷ್ಟನನೇಕಭೂಪರನಧಾನವೆನುತ್ತವೆ ಸುತ್ತಿ ಬರ್ಪಿನಂ ೮೩

ವಚನ: ಆಗಳೋದುವ ಪಾಠಕರ ಊದುವ ಶಂಖಂಗಳ ನರ್ತಿಸುವ ನಟ್ಟುವರ ಕೀರ್ತಿಸುವ ಭಟ್ಟರ ಸೂಳೈಸುವ ನಿಸ್ಸಾಳಂಗಳ ಸೂಳ್ವಡೆದ ಕಹಳೆಗಳ ಮೇಳಾಪಕದ ಕೋಳಾಹಳಂ ಬಹಳಮಾಗೆ ಕುಳಿರ್ವ ಕುಡಿಗಳಿಂ ಮಿಳಿರ್ವ ತೋರಣಂಗಳಿನಲಂಕಾರಂ ಬಡೆದ ರಾಜವೀಧಿಯೊಳತೀವ ಪ್ರಭಾವನಾವಿಭವದಿಂ ಧನ್ಯಸೇನಮಹಾರಾಜಂ ತನ್ನಯ ಮನಮುಂ ಕಣ್ಗಳುಂ ಮುಂದೆ ಮಚ್ಚರಿಸಿ ಪರಿಯಲಾ ಪರಮಮುನೀಶ್ವರಂಗಿದಿರ್ವಂದು ವಂದಿಸಿ ಜಯಜಯಮೆನುತ್ತುಂ ಮೂಮೆ ಬಲವಂದು ಭಕ್ತಿಪೂರ್ವಕಮರ್ಚನಾದ್ರವ್ಯಂಗಳಿಂದರ್ಚಿಸಿ ತಚ್ಚರಣರೇಣುವಿಂ ನಿರ್ವಾಣರಮಣೀವಶ್ಯತಿಳಕಮೆಂಬಂತೆ ಪೊಳೆವ ತಿಳಕಮುಂ ನೊಸಲೊಳ್ ತಳೆವುದುಂ ಪುಣ್ಯಪುಂಜಮೆ ನಿಲುವಂತೆ ನಿಂದು ಪರಸಿದ ಯತಿಕುಳತಿಳಕನಂ ನೋಡಿ

ಉತ್ಪಲಮಾಲೆ

ಎನ್ನಯ ಜನ್ಮಮಿಂದು ಸಫಳತ್ವಮನೆಯ್ದಿದುದೆನ್ನ ವಂಶಮು
ತ್ಯುನ್ನತಮಾದುದಿಂದು ಬಿಡದೆನ್ನ ಗೃಹಸ್ಥತೆ ಪೂಜ್ಯಮಾದುದಿಂ
ದೆನ್ನವೊಲಾವನೋ ನೆಱೆಯೆ ನೋಂಪಿಯ ನೋಂತು ಕೃತಾರ್ಥನಾದನಿಂ
ದೆನ್ನಗೃಹಕ್ಕೆ ತೀರ್ಥಕರದೇವನೆ ಬರ್ಪವೊಲಾಯ್ತು ಪುಣ್ಯದಿಂ ೮೪

ಕಂದ : ಈ ಮನೆ ಪಾವನಮಾಗಿ ಮ
ಹಾಮಹಿಮೆಯನಾಂತುದಿಂದು ನಿಮ್ಮಡಿಗಳ ಪದ
ತಾಮರಸಪಾಂಸುಯೋಗದೆ
ವಾಮಗುಡಂ ಕೂಡೆ ಪಿಟ್ಟುಸವಿಯಪ್ಪನ್ನಂ ೮೫

ವಚನ: ಎಂದು ಯಥಾಸ್ತೋತ್ರಂಗೆಯ್ದನಂತರಂ ದೇವಾವಧಾನ ಬಿಜಯಂಗೆಯ್ವು ವೆಂದು ತಲೆಸುತ್ತಂ ತೆಗೆದುತ್ತರಾಸಮಿಟ್ಟು ಸ್ಥಾನತ್ರಯದೊಳರ್ಚನಾಪೂರ್ವಕಂ ನಮೋಸ್ತುಗೆಯಿದುದಕಶುದ್ಧಿವಿಲೋಕನಪುರಸ್ಸರಂ ನಿಜರಾಜಮಂದಿರದೊಳಗಂ ಪುಗಿಸಿ ಮಣಿಖಚಿತ ಚಂದ್ರಕಾಂತಪಟ್ಟಕಮಂ ತಂದಿಟ್ಟದಱಮೇಲೆ ಕುಳ್ಳಿರಿಸಿ

ಕಂದ : ಚರಣತಳಂಗಳನೆರಸಂ
ತೊಳೆದಾ ತೀರ್ಥೋದಬಿಂದುವಂ ಮಸ್ತಕದೊಳ್
ತಳಿದಮಳಮೌಕ್ತಿಕಂಗಳ
ತಲೆದೊಡವಂ ತೊಟ್ಟನೆಂಬಿನಂ ಕಣ್ಗೆಸೆದಂ ೮೬

ಜಳಗಂಧಾಕ್ಷತ ಪುಷ್ಪಾ
ವಳಿ ಚರು ಮಣಿದೀಪಧೂಪಫಳದಿಂದಮ ಮಂ
ಗಳನಂಘ್ರಿಗಳಂ ಪೂಜಿಸಿ
ಪುಳಕಾಂಕಂ ಪಂಚಮುಷ್ಟಿಯಿಂ ಪೊಡೆವಟ್ಟಂ ೮೭

ವಚನ: ಮತ್ತಂ ಪ್ರತಿಗ್ರಹಾದಿ ನವವಿಧಪುಣ್ಯವರೇಣ್ಯನಾಗಿ ವಿಶಾಳಪ್ರಕಾಶ ಪೇಶಲಮಾದ ಶುಚಿತಮಾವಕಾಶದೇಶದೊಳ್ ನಿಱಿಸಿ

ಉತ್ಪಲಮಾಲೆ

ಏಳುಗುಣಂಗಳಂ ತಳೆದು ಭವ್ಯಶಿರೋಮಣಿ ಸಿದ್ಧಭಕ್ತಿಯಂ
ಪೇಳೆ ಮುನೀಶ್ವರಂ ನೆನೆದು ಮಂತ್ರಮನಾಂತುರುಪಾಣಿಪಾತ್ರೆಯೊಳ್
ಮೇಳಿಸಿ ತುಪ್ಪದಿಂದೆ ಪರಮಾನ್ನದ ಪಾನೆಯನಿಕ್ಕಿದಂ ಮಹೀ
ಪಾಳಕನೆಯ್ದೆ ತಾಳ್ದಿ ಕರಣತ್ರಯಶುದ್ಧಿಸಮೃದ್ಧಭಾವಮಂ ೮೮

ವಚನ: ಅಷ್ಟಚತ್ವಾರಿಂಶದ್ದೋಷದೂರಮಾದ ದಿವ್ಯಾಹಾರಮಂ ತ್ರಿವಾರಂ ಕೈಯಲಿಕ್ಕುವುದುಂ

ಮಹಾಸ್ರಗ್ಧರೆ

ಸಮುದಾಯಂಗೂಡಿ ಚರ್ಯಾಕ್ರಮುಮನೆಸಗೆ ಮತ್ತ್ರಕ್ಷಂಸಂ ದಾನವಸ್ತೂ
ತ್ತಮವಾಕ್ಯಂ ಪೊಣ್ಮೆ ಕೈಯೆತ್ತಿರದೆ ಪರಸಿಯಾನವ್ರಭೂಪಾಳನಂ ನಿ
ರ್ಗಮನಕ್ಕುದ್ಯುಕ್ತರಾಗುತ್ತಿರೆ ದಿವಿಜರಹೋದಾತೃಪಾತ್ರಪ್ರಸಾಮ
ರ್ಥ್ಯಮಳುಂಬಂ ಬಣ್ಣಿಸಲ್ಕೆಂಬ ರುತಿ ಗಗನದೊಳ್ ತುಂಬಿತುಳ್ಕಾಡಿತೆತ್ತಂ ೮೯

ಕಂದ: ಸುರದುಂದುಭಿ ಮಂದಾನಿಳ
ನಲರ್ಗಳೆ ಪೊನ್ಮಳೆ ಸಮಸ್ತದಿವಿಜಸಮಾಜೋ
ಚ್ಚರಿತಾಹೋದಾನಸ್ವರ
ಮರಮನೆಯಂಗಣದೊಳಾಯ್ತು ಪಂಚಾಶ್ಚರ್ಯಂ ೯೦

ಬಳಿಕಾ ಮುನಿವರನಲ್ಲಿಂ
ತಳರಲೊಡಂ ಕೂಡೆಪೋಗಿ ಬಿಡಲಾಱದೆ ಬೆಂ
ಬಳಿಸಂದನಾ ನೃಪಂ ಕರಿ
ಕಳಭಂ ಯೂಥಾಧಿಪತಿಯ ಬಳಿಸಲುವನ್ನಂ ೯೧

ವಚನ: ಅಂತು ತಪೋವನಪರ್ಯಂತಂ ಕಳಿಪಿ ತದನುಜ್ಞೆಯಿಂ ಮಿಾಱಲಮ್ಮದೆ ಬೀಳ್ಕೊಂಡು ಬರುತ್ತುಮಲ್ಲಲ್ಲಿ ನಿಂದು ಮರಳೆ ನೋಡುತ್ತುಮೆತ್ತಾನುಂ ಮಗುಳ್ದು ಬಂದು ನಿಜನಿವಾಸಮಂ ಪೊಕ್ಕು

ಚಂಪಕಮಾಲೆ

ಕಱೆದ ಸುವರ್ಣವೃಷ್ಟಿಯನಭೀಕ್ಷ್ಣಿಸಿ ದಾನದಿನಾದ ವಸ್ತುವಂ
ನೆಱೆ ಪುರಭವ್ಯರಿಂಗೆ ಕೊಡುವನ್ನೆಗಮುಲ್ತುಪಯೋಗವೆಂದು ನಾ
ಡೆಱೆಯನದಂ ಮನಂದಣಿವಿನಂ ನಿಖಿಳರ್ಗುಱೆ ಪಚ್ಚುಗೊಟ್ಟು ತಾಂ
ಮೆಱೆದನುದಾರವೃತ್ತಿಯನಿಳಾತಳದೊಳ್ ಜನವೊಪ್ಪಿ ತೋರ್ಪಿನಂ ೯೨

ವಚನ: ಅನ್ನೆಗಮಿತ್ತಲಾ ಧರ್ಮನಾಥಮುನಿನಾಥಂ ಪುಣ್ಯಾರಣ್ಯಮಂ ಪೊಕ್ಕತ್ಯಂತ ನಿರ್ಮಳಪ್ರಾಶುಕಪ್ರದೇಶಪ್ರಸಿದ್ಧ ಶುದ್ಧಸ್ಫಟಿಕಶಿಲಾತಳಾಗ್ರದೊಳ್ ಯೋಗನಿರೋಧಂಗೆಯ್ದು ಕಾಯೋತ್ಸರ್ಗಪ್ರತಿಮಾನುಯೋಗಯೋಗನಿಯೋಗದೊಳಿರ್ಪಲ್ಲಿ

ಚಂಪಕಮಾಲೆ

ನೆಲನನವುಂಕಿ ಮೆಟ್ಟದೆ ಸಮಾನತೆವೆತ್ತ ಪದಂಗಳಿಂದೆ ನಿಂ
ದಲಘುಭುಜಂಗಳಂ ನಿಮಿರ್ದು ಲಂಬಿಸಿ ಜಾನುವನಂಟುತೋಱೆ ಕೆಂ
ದಳವೆರಡುಂ ವಿಕಾರವಣಮಿಲ್ಲದೆ ಯೋಗದೊಳಿರ್ದನಂದು ಮೆ
ಯ್ಗಲಿ ಕೆಳಗಣ್ಗೆ ಬೀಳ್ವವರನುದ್ಧರಿಪುಜ್ಜುಗದಿಂದಮಿರ್ದವೋಲ್ ೯೩

ಕಂದ: ವರಯೋಗವೆಂಬ ದೀಪಾಂ
ಕುರದಿಂ ಪೊಱಮಟ್ಟುಪೋಪ ಕಜ್ಜಳವೆಂಬಂ
ತಿರೆ ಯತಿಯ ಕುಂತಳಂ ಬಂ
ಧುರಮಾದುದು ಮಂದಗಂಧವಹ ಸಂಚಳಿತಂ ೯೪

ಪಿರಿದಾದ ಶಾಂತರಸದಿಂ
ದೊರೆಕೊಳಿಸಿ ಕ್ರೋಧಮಾನಮಾಯಾಲೋಭೋ
ತ್ಕರವೆಂಬಗ್ನಿಗೆ ಕೇಡಂ
ವರಗುಣಿ ತನ್ನಲ್ಲಿ ತಾನೆ ತಣ್ಣನೆ ತಣಿದಂ ೯೫

ಕಡುತಪದಿಂ ಮೆಯ್ ಬಡವಾ
ದೊಡಮುರ್ಬಿಸಿದತ್ತು ಸತ್ತಪಸ್ತೇಜಂ ಪಾ
ಣಿಡೆ ಸಣ್ಣವಾದ ಮಣಿ ನೋ
ಳ್ಪಡೆ ತೇಜಂ ಬಂದು ಮತ್ತೆ ಪೊಳಪೇಱುವವೋಲ್ ೯೬

ಮತ್ತೇಭವಿಕ್ರೀಡಿತ

ಪಸರಂಬೆತ್ತುರುಮೋಹವೆಂಬ ಬಲೆಯಂ ಸಂಕೋಚಿಸುತ್ತುಂ ಸ್ವಮಾ
ನಸದಿಂದಂ ತೆಗೆವಲ್ಲಿ ಸಿಕ್ಕಿದವುದೀ ಮಾನೆನ್ನದೊಂದೆಂಬ ಬೇ
ವಸದಿಂ ಮುನ್ನಮೆ ಮೀನಕೇತನನವಂ ತನ್ನೊಂದು ಮೀಂಗೊಂಡು
ಬೀಸರದಿಂದೋಡಿದನೆಂಬಿನಂ ಮನಸಿಜಂ ಪೋದಂ ಮುನಿ ಸ್ವಾಂತದಿಂ ೯೭

ಮಹಾಸ್ರಗ್ಧರೆ

ತನುವಿಂ ಬೇಱಾಗಿ ತೋರ್ಪಾತ್ಮನನವಗಮದಿಂ ಕಂಡು ಮೆಯ್ಯೆನ್ನದಲ್ಲೆಂ
ದನವದ್ಯಂ ಬಿಟ್ಟುದಾಸೀನತೆವಡೆದ ನಿಮಿತ್ತಂ ಬಿಸಿಲ್ ತಣ್ಣೆಳಲ್ ಕಾ
ಱಿನಮಾದಂ ಕೋಮಳಂ ಖೇದದ ಪರಿ ಬಗೆಯೊಳ್ ಪುಟ್ಟದು ಧ್ಯಾನ ನಿಃಕಂ
ಪನನಂ ಪೆರ್ಮಾವುಗಳ್ದೊಲ್ದಿರಲೆಸೆದನಗಂ ಬೀಳಲಂ ತಾಳ್ದಿದನ್ನಂ ೯೮

ಮತ್ತೇಭವಿಕ್ರೀಡಿತ

ಪುಲಿಗಳ್ ಪುಲ್ಲೆಗಳೊಂದುಗೂಡಿ ಕರಿಗಳ್ ಸಿಂಹಂಗಳೊಂದಾಗಿ ಮುಂ
ಗುರಿಗಳ್ ಪಾವುಗಳುಂ ಕರಂ ಬೆರಸಿ ಕೋಣಂಗಳ್ ತುರಂಗಂಗಳಾ
ವಳಿಗಳ್ ಸಂಗತಿವೆತ್ತು ಜಾತಿಜನಿತ ಪ್ರದ್ವೇಷಮಂ ಬಿಟ್ಟು ತ
ಮ್ಮೊಲವಿಂದಿರ್ದುವು ತತ್ತಪಸ್ವಿಯ ಸಮೀಪಸ್ಥಾನದೊಳ್ ಸುತ್ತಲುಂ ೯೯

ಕಂದ: ಎಳೆನಾಗರ ಮರಿಗಳ್ ಮಿಗೆ
ಪೊಳೆದಾಡುತ್ತಿರ್ದುವಲ್ಲಿ ಮಱಿಸೋಗೆನವಿ
ಲ್ಗಳ ಕಣ್ಣ ಪೀಲಿಗಳ ತ
ಣ್ಣೆಳಲೊಳ್ ತಮ್ಮಿಚ್ಛೆ ತಳ್ತು ಕೈಗೂಡುವಿನಂ ೧೦೦

ಮತ್ತೇಭವಿಕ್ರೀಡಿತ

ಎರಲೇಕೇಂದ್ರಿಯಮಾದೊಡಂ ಸಮನುಕೂಲಂಬೆತ್ತು ಬೀಸುತ್ತುಮಿ
ರ್ದಲರಂ ಬೀಳ್ವವನಂದು ತಂದು ಮುನಿಪಾಂಘ್ರಿದ್ವಂದ್ವಮಂ ಪೂಜಿಸಿ
ತ್ತೊಲವಿಂದೆಂದೊಡೆ ಸಿಂಹಮುಖ್ಯಮೆನಿಪಾ ಪಂಚೇಂದ್ರಿಯ ಪ್ರಾಣಿಸಂ
ಕುಲಮಂ ಮತ್ತನುಕೂಲಮಪ್ಪುದರಿದೇ ಸತ್ಸೇವೆ ಸಾಮಾನ್ಯಮೇ ೧೦೧

ವಚನ: ಇದು ಮೊದಲಾದನೇಕವಿಧದತಿಶಯಮನೊಡರ್ಚುತ್ತುಮೇಕಮಾಸ ಪ್ರಕಲ್ಪಿತಪ್ರತಿಮಾಯೋಗಮನಲ್ಲಿ ನಿರ್ವರ್ತಿಸಿ ಬಳಿಯಂ ತಳರ್ದು ಯೋಗಯೋಗ್ಯಸ್ಥಳಂಗಳೊಳನುಷ್ಠಿತಧ್ಯಾನನಾಗುತ್ತುಮೇಕವಿಹಾರಿಯಾಗಿ

ಕಂದ: ಗ್ರಾಮದೊಳಗೊಂದುದಿನಮಭಿ
ರಾಮಪುರೀ ಖೇಡ ಖರ್ವಡ ಮಡಂಬ ದ್ರೋ
ಣಾಮುಖದೊಳೈದುದಿವಸಂ
ಭೀಮಾಟವಿಯಲ್ಲಿ ದಶದಿನಂಬರಮಿರ್ದಂ ೧೦೨

ವಚನ: ಇಂತು ಸಕಳಸತ್ವಗುಣಾಧಿಕ ಕೃಶ್ಯಮಾನಾವಿನೇಯಜನಂಗಳಲ್ಲಿ ಮೈತ್ರೀ ಪ್ರಮೋದಕಾರುಣ್ಯಮಧ್ಯಸ್ಥವೃತ್ತಿಗಳನವಲಂಬಿಸುತ್ತುಂ ವಿಹಾರಿಸುವಲ್ಲಿ

ಕಂದ: ಪಗೆ ಕೆಳೆಯೊಳ್ ತೃಣಮಣಿಯೊಳ್
ಮಿಗುವ ಸ್ತುತಿನಿಂದೆಯಾಳ್ದನಂ ಧನದೊಳ್ ಕೈ
ಮಿಗೆ ಸುಖದುಃಖದೊಳಂ ಸರಿ
ಬಗೆಯಂ ಮಾಡುತ್ತುಮಿರ್ದನಧಿಕಾಪೇಕ್ಷಂ ೧೦೩

ದೋಷಂಗಳಲ್ಲಿ ಬಹಳ
ದ್ವೇಷಮನಧಿಮೋಕ್ಷದಲ್ಲಿಯನುರಾಗಮನೆ ವಿ
ಶೇಷಿಸಿಯುಮಿಲ್ಲ ರಾಗ
ದ್ವೇಷಂ ಮುನಿಗೆಂಬ ಮಾತು ಚಿತ್ರಮಿದಲ್ತೇ ೧೦೪

ಮಿಗೆ ಮುನಿದು ಘಾತಿಕರ್ಮಾ
ದಿಗಳಂ ಕೆಡಿಸುತ್ತುಮಿರ್ದ ಮುನಿಮುಖ್ಯಂ ಕೈ
ಮಿಗಲುತ್ತಮಕ್ಷಮಾಶೋ
ಭೆಗೆ ಭಾಜನನಾದನೆಂಬಿದತ್ಯಾಶ್ಚರ್ಯಂ ೧೦೫

ಸ್ರಗ್ಧರೆ
ಅಯ್ದಾಚಾರಂಗಳಂ ಪನ್ನೆರಡುತಪಮನೀರಯ್ದು ಧರ್ಮಂಗಳಂ ಮ
ತ್ತಯ್ದಾವಶ್ಯಂಗಳಾಱಂ ವಿಮಳಸಮಿತಿಯೈದಂ ವ್ರತಾಂಗಂಗಳೈದಂ
ಕಾಯ್ದಂ ಯೋಗೇಂದ್ರಚಂದ್ರಂ ಚರಿತದಪದ ಮೂಱಕ್ಕೆ ಗುಪ್ತಿತ್ರಯಕ್ಕೇ
ಗೆಯ್ದುಂ ಸಂದಂ ಮಹಾಮೂಲಗುಣದೊಳಧಿಕಂ ಸರ್ವಶೀಲಾಭಿರಮ್ಯಂ ೧೦೬

ಕಂದ: ಶಿಷ್ಟ ತಪಸ್ತರುಣೀಪತಿ
ಗಷ್ಟಮಹಾರುದ್ಧಿಗಳ್ ಕ್ರಮಂಗೊಂಡೊಗೆದಭಿ
ಚೇಷ್ಟಿಸಿದವು ಮಚ್ಚರಿಪಂ
ತಷ್ಟಮಹಾಪ್ರಾತಿಹಾರ್ಯ ವಿಭವೋದಯದೊಳ್ ೧೦೭

ವಚನ: ಅವಾವುವೆಂದೊಡೆ

ಕಂದ: ನರನಾವನಾವ ತತ್ತ್ವದ
ಪರಿಯಂ ಬೆಸಗೊಂಡಡಾಕ್ಷಣಂ ಪೇಳ್ವ ಸುವಿ
ಸ್ತರಕೋಷ್ಠ ಬುದ್ಧಿಯೆಂಬು
ದ್ಧರಿದ್ಧಿಯನೆಯ್ದಿದಂ ತಪೋಧನತಿಳಕಂ ೧೦೮

ಪರಮಾಣುಮಾತ್ರರೂಪಂ
ಧರಿಸೀರ್ಯಾಶುದ್ಧಿಕಾರಣಂ ಮುನಿವರನಂ
ಬರಮಾರ್ಗದಲ್ಲಿ ನಡೆದಂ
ನಿರತಿಶಯಶ್ರೇಣಿ ಚಾರಣತ್ವದ ಬಲದಿಂ ೧೦೯

ಮುಂದಿರೆ ವಜ್ರದ ಬೆಟ್ಟಂ
ಸಂಧಿಸಿ ತನ್ನಂಗಮಂದೊಡಾಕ್ಷಣಮೊದೆವಾ
ಪೊಂದಿತ್ತು ಯೋಗಿನಾಥಂ
ಗಂದು ಪ್ರತಿಘಾತಮೆಂಬ ರಿದ್ಧಿಯ ಗುಣದಿಂ ೧೧೦

ಅತಿದುರ್ಧರ ತಪದಿಂದಂ
ಸ್ವತನುಕರಂ ತಪ್ತಮಾದೊಡಂ ಕಂದದೆ ಮ
ತ್ತತಿಶಯಕಾಂತಿಯನಾಂತುದು
ನುತತಪ್ತತಪಂ ದಲೆಂಬ ರಿದ್ಧಿಯ ಬಲ್ಪಿಂ ೧೧೧

ಸಿದ್ಧಾಂತವೆಲ್ಲಮಂ ಸಂ
ಶುದ್ಧಮನಂತರ್ಮುಹೂರ್ತಕಾಲದೊಳಾಸಂ
ದೋದ್ಧಾರಕನುಚ್ಚರಿಸುವ
ನಿದ್ಧ ಮಹೋಬಳ ಸಮೃದ್ಧರಿದ್ಧಿಯ ಪೆಂಪಿಂ ೧೧೨

ಎಲ್ಲರ ರೋಗಮುಮಂ ತ
ಳ್ಪಿಲ್ಲದೆ ಮಾಣಿಸುವುದಮಮ ತನ್ನಯ ತನುವಿನ
ಜಲ್ಲಮಲಮೆಂದೊಡಾ ಮುನಿ
ವಲ್ಲಭನಂ ತೋಷದರ್ಧಿಯಂ ತಳೆದನರಾರ್ ೧೧೩

ನೀರಸವಸ್ತುವನಿಕ್ಕಲ್
ಸಾರಾಮೃತಮಯಮೆನಿಪ್ಪ ರಸರಿದ್ಧಿಯನಾ
ಸೂರಿವರಂ ತಳೆದಂ ಕೈ
ಸಾರದು ನೋಳ್ಪರ್ಗೆ ಮತ್ತೆ ಪಸಿವುಂ ತೃಷೆಯುಂ ೧೧೪

ಪಾನೆಯೋಗರಮನೆಲ್ಲಾ
ಸೇನಾಜನಮುಂಡೊಡಾ ದಿನಂಬರಮಿಕ್ಕುಂ
ತೇನುಂಗುಂದದೆನಿಪ್ಪ
ನ್ನಾನವದಕ್ಷೀಣರಿದ್ಧಿಯಂ ಯತಿ ತಾಳ್ದಂ ೧೧೫

ವಚನ: ಇವು ಮೊದಲಾಗಿ ಸಮನಿಸಿದ ಹದಿನೆಂಟು ತೆಱನಪ್ಪ ಬುದ್ಧಿರಿದ್ಧಿಯೊಳಂ ದ್ವಿಪ್ರಕಾರಮಪ್ಪ ಕ್ರಿಯಾರಿದ್ಧಿಯೊಳಂ ಬಹುಭಂಗಿಸಂಗತಮಾದ ವಿಕ್ರಿಯರ್ಧಿಯೊಳಂ ಸಪ್ತವಿಧಮಪ್ಪ ತಪೋರಿದ್ಧಿಯೊಳಂ ಮೂದೆಱನಾದ ಬಲರಿದ್ಧಿಯೊಳಂ ನಾಲ್ಕು ತೆಱನಾದ ಸರ್ವೌಷಧಿಯೊಳಂ ಮೂಱುತೆಱನಾದ ರಸರಸರಿದ್ಧಿಯೊಳಂ ದ್ವಿವಿಧಮಪ್ಪ ಕ್ಷೀಣರುದ್ಧಿಯೊಳಂ ನೆಱೆದು

ಶಾರ್ದೂಲವಿಕ್ರೀಡಿತ

ಎಲ್ಲಾ ಪ್ರಾಣಿಗಣಂಗಳಂ ಕರುಣದಿಂ ತನ್ನಂತೆ ಕೊಂಡೋವುವಂ
ಸೊಲ್ಲಂ ಲೌಕಿಕವಾರ್ತೆಯಂ ಸ್ವಸಮಯಾಚಾರಕ್ರಮಂಗುಂದನೆ
ಯ್ದೊಲ್ಲಂ ರಾಗನಿಬಂಧವಸ್ತುಚಯ ಸಂಯೋಗಂಗಳಂ ಮೋಹದೊಳ್
ನಿಲ್ಲಂ ಮೋಕ್ಷಸುಖಪ್ರಸಾದಕ ತಪಂ ಮೆಯ್ವೆತ್ತುದಾ ಧರ್ಮನೊಳ್ ೧೧೬

ವಚನ: ಮತ್ತಂ

ಕಂದ: ಕೊನರಿಂ ತಳಿರಿಂ ನನೆಯಿಂ
ಘನಫಳದಿಂ ಕಲ್ಪವೃಕ್ಷಮೆಂತೊಪ್ಪುವುದಂ
ತನುಪಮಮತಿಶ್ರುತಾವಧಿ
ಮನಃಪರ್ಯಯಬೋಧದಿಂದಮೊಪ್ಪಿದನಮಳಂ ೧೧೭

ವಚನ: ಅವಗ್ರಹಮುಮೀಹೆಯುಮವಾಯುಮುಂ ದಾರಣಮುಮೆಂಬೀ ನಾಲ್ಕುಂ ಪಲತೆಱದಿಂ ಕವಲ್ವರಿದು ಮೂನೂಱಮೂವತ್ತಾಱು ಭೇದಮಾದ ಮತಿಜ್ಞಾನಮುಂ ತನ್ಮತಿಪೂರ್ವಕಮಾಗಿ ಪುಟ್ಟಿ ಲಿಂಗಜಮುಂ ಶಬ್ದಮುಮೆಂಬ ದ್ವಿಪ್ರಕಾರಮನಾಂತು ಬಹುವಿಧಕಲ್ಪದಿಂದನೇಕಭೇದಮಾದ ಶ್ರುತಜ್ಞಾನಮುಂ ಭವಪ್ರತ್ಯಯಮುಂ ಗುಣಪ್ರತ್ಯಯಮುಮೆಂದು ದ್ವೈವಿಧ್ಯಮುಂ ತಾಳ್ದಿ ಪಲವುಂತೆಱನಾಗಿ ಬಹುಭೇದಮಾದವಧಿಜ್ಞಾನಮುಂ ಋಜುಮತಿಯುಂ ವಿಪುಳಮತಿಯುಮೆಂಬೆರಡು ಭೇದಮಾದ ಮನಃಪ್ರರ್ಯಯಜ್ಞಾನಮುಮೆಂಬ ಚತುರ್ವಿಧಬೋಧಮನೊಳಕೊಂಡು ತ್ರಿಳೋಕಮಾಣಿ[1]ಕ್ಯಂ ಮಾಣಿಕ್ಯ[1] ನಿಕರಮನೊಳಕೊಂಡ ಮಾಣಿಕ್ಯಾಕರದಂತೆ ಸಮುತ್ತುಂಗ ಪ್ರಕಾಶಮಯಾಂತರಂಗನಾಗಿ

ಮತ್ತೇಭವಿಕ್ರೀಡಿತ

ಚಳಸಾತ್ಯುಜ್ಜಿತಯೋಗಯೋಗ್ಯಮೆನಿಪಾದಂ ವೃಕ್ಷಮೂಲದೊಳ್
ಪುಳಿನಸ್ಥಾನದೊಳುಚ್ಚಪರ್ವತನಿತಂಬೋಚ್ಚೂಳಿಕಾಭಾಗದೊಳ್
ವಿಳಸದ್ಧ್ಯಾನದ ಸೆಂಪನೊಲ್ದು ರಚಿಸುತ್ತುಂ ಘಾತಿದುಃಷ್ಕರ್ಮಸಂ
ಕುಳಮಂ ನಿರ್ಜರಿಸುತ್ತುಮಿರ್ದನಧಿಮೋಕ್ಷಪ್ರಾಪ್ತಿಬದ್ಧೋದ್ಯಮಂ ೧೧೮

ವಚನ: ಇಂತು ಧರ್ಮಮಾರ್ಗಪ್ರಭಾವನಾರ್ಥಂ ಛದ್ಮಸ್ಥಾವಸ್ಥೆಯಿಂದೊಂದು ವರ್ಷಪರ್ಯಂತಂ ವಿಹಾರಿಸುತ್ತುಮಿರ್ದು

ಕಂದ: ಎಲ್ಲಿ ತಪಂಗೊಂಡಂ ಮ
ತ್ತಲ್ಲಿಗೆ ಬಂದಂ ವಿಬೋಧಲಾಭಾರ್ಥಂ ಮುನಿ
ವಲ್ಲಭನಧಿಕಫಲಾರ್ಥಂ
ನಿಲ್ಲದೆ ಬರ್ಪಂತೆ ಬಿತ್ತಿದಲ್ಲಿಗೆ ವನಪಂ ೧೧೯

[1] ಕ್ಯ (ಕ)

ವಚನ: ಇಂತು ಶ್ರುತಾವಧಿಮನಃಪರ್ಯಯಂಗಳೆಂಬ ವಿಶೇಷಬೋಧ ಚತುಷ್ಟಯಂಗಳಿಂದಳಂಕೃತನಪ್ಪ ಧರ್ಮನಾಥಂ ಸಕಳವಿಮಳಕೇವಳಜ್ಞಾನಾದಾನ ಪರಮಪಂಚಮಜ್ಞಾನಸಂಜನಕಾರಣಾತ್ಯಂತಶುದ್ಧಶುಕ್ಲಧ್ಯಾನ ಸಮುದ್ಯಾತನಸಕ್ತಚಿತ್ತನಾಗಿ ಮುನ್ನಂ ದೀಕ್ಷಾಗ್ರಹಣಮಾದ ಸಾಳವನಕ್ಕೆ ಬಂದೊಂದು ಸಪ್ತಪರ್ಣವೃಕ್ಷಮೂಳದೊಳಕ್ಷೂಣಚ್ಛಾಯಾಚ್ಛನ್ನಮೆನಿಸಿ ನಿಜನಿಕಟವರ್ತಿರಕ್ತಾಶೋಕಪಲ್ಲವಪ್ರತಿಬಿಂಬದಿಂ ಶೋಣಮಾಣಿಕ್ಯಮಯಮೆಂಬಂತೆ ಕಾಣ್ಕೆವಡೆದ ಚಂದ್ರಕಾಂತಶಿಳಾತಳದೊಳೀರ್ಯಾಪಥಶುದ್ಧಿಕರಣಾನಂತರಂ ಪೂರ್ವಾಭಿಮುಖನಾಗಿ

ಮಹಾಸ್ರಗ್ಧರೆ

ಕೃತಕಾಯೋತ್ಸರ್ಗರೂಪಂ ಕೆಡಿಸಿ ಪೊಱಗಣ್ಯೆದಿಂದ್ರಿಯಾಕ್ಷೇಪಮಂ ಸಂ
ಹೃತಿಗೆಯ್ದುದ್ಯೋಗದಿಂ ಘಾತಿಗಳನಿರದೆ ಕೆಯ್ಯಿಕ್ಕುವಂತಿಕ್ಕೆ ಕೆಯ್ಯಂ
ಸತವದ್ಭೂಮಧ್ಯದೊಳ್ ಸ್ಥೈರಿಸಿ ಮನಮನೇಕಾಗ್ರನಿಷ್ಠಾಪ್ರತಿಷ್ಠಂ
ನುತಶುಕ್ಲಧ್ಯಾನಮುದ್ರಾವಿಭವನಭವಂ ಭಾವಿಸುತ್ತಿರ್ದನಾದಂ ೧೨೦

ವಚನ: ಆಗಳ್

ಕಂದ: ಉಲಿಯದ ಪಕ್ಷಿಗಳೋಳಿಗ
ಮೆಲೆಮಿಡುಕದ ತರುಗಳಿಂಗೆ ನೆಲೆಯಾಗಿ ವನಂ
ಸಲೆ ಚಿತ್ರಿಸಿದಂತಿರ್ದುದು
ಕಲಿಲಘ್ನ ಧ್ಯಾನವಿಘ್ನ ಶಂಕಾರಸದಿಂ ೧೨೧

ವಚನ: ಅಂತು ಬಹಿಸ್ಸಾಮಗ್ರಿಯನಪ್ಪುಕೆಯ್ದು ಲೋಕಾಗ್ರಮನೆಯ್ದುವಾಗ್ರಹದಿಂದ ವ್ಯಗ್ರನಾಗಿ ಕ್ಷಾಯಿಕಸಮ್ಯಕ್ತ್ವಮನಂತಜ್ಞಾನಮನಂತದರ್ಶನಮನಂತವೀರ್ಯಮವಗಾಹನತ್ವಮಗುರುಲಘುತ್ವಮವ್ಯಾಬಾಧತ್ವಂ ಸೂಕ್ಷ್ಮತ್ವಮೆಂಬ ತದೀಯಸ್ಥಾನನಿಷ್ಠಿತರಪ್ಪ ಸಿದ್ಧಪರಮೇಷ್ಠಿಗಳಷ್ಟಗುಣಂಗಳಂ ಮನದೊಳ್ ನೆನೆದು

ಕಂದ: ವರನವಪದಾರ್ಥದರ್ಥೋ
ತ್ಕರಮಂ ಪರಿಭಾವಿಸುತ್ತುಮಿರ್ದಾ ಮುನಿಪಂ
ಸ್ಥಿರಮಾದ ತನ್ನ ಚಿತ್ತದೊ
ಳಿರದಾಜ್ಞಾವಿಚಯಮೆಂಬ ಯೋಗಮನಾಂತಂ ೧೨೨

ಕಡುಬಲ್ಪಿಂದಘಕುಳಮಂ
ಕೆಡಿಸುವುದಂ ಲಸದಪಾಯವಿಚಯಮನಾ ಮುನಿ
ಸಡಗರದಿಂ ವ್ಯಾಪಿಸಿದಂ
ತೊಡರ್ದತಿಶಯಮಾದ ಶುದ್ಧಲೇಶ್ಯಾತ್ರಯದೊಳ್ ೧೨೩

ಪರಮಯತಿ ಪುಣ್ಯಪಾಪ
ಸ್ವರೂಪಮಂ ತತ್ಫಲಂಗಳಂ ಧ್ಯಾನಿಸುತಂ
ಧರಿಯಿಸಿದಂ ತನ್ನಭ್ಯಂ
ತರದಲ್ಲಿ ವಿಪಾಕವಿಚಯಮಂ ನಿಶ್ಚಳದಿಂ ೧೨೪

ಪರಿಪಡಿಯಿಂ ಚಿಂತಿಸಿ ಪ
ನ್ನೆರಡುಮನುಪ್ರೇಕ್ಷೆಗಳ ಸುಸಂಸ್ಥಾನಮುನಾ
ದರದಿಂ ತಾಳ್ದಂ ಮುನಿಪತಿ
ಸುರುಚಿರಸಂಸ್ಥಾನವಿಚಯಮಂ ಮುಕ್ತಿರತಂ ೧೨೫

ವಚನ: ಇಂತು ಚತುರ್ವಿಧಮಾದ ಧರ್ಮ್ಯಧ್ಯಾನಮಂ ಧ್ಯಾನಿಸುತುಮಪ್ರಮತ್ತ ಗುಣಸ್ಥಾನದೊಳ್ ನಿಂದು ಮುನ್ನಮಪ್ರವೃತ್ತಮಪೂರ್ವನಿವೃತ್ತಮೆಂಬ ಕರಣತ್ರಯದಿಂ ದೊರ್ಪೊದಲೊಳನಂತಾನುಬಂಧಿ ಕ್ರೋಧಮಾನಮಾಯಾಲೋಭಂಗಳೆಂಬ ಚತುಃಕಷಾಯಮಂ ಲಯಕ್ಕೆ ಸಲಿಸಿ

ಕಂದ: ಉಳಿದೀರಾಱುಱುಳಾಗಳೆ
ಖಳದುರಿತತಮೋರುಣಂ ವಿಸಂಯೋಜಿಸಿದಂ
ಬಳಿಯಂ ವಿಶ್ರಮಿಸಿದ ನರ
ನೊಳಕೊಂಡೆಚ್ಚಱುಮನೇಳ್ವ ಪೊತ್ತನಿತಱುಳಂ ೧೨೬

ವಚನ: ಮತ್ತಂ ಪೂರ್ವೋಕ್ತಕರಣತ್ರಯಮನೊಳಕೆಯ್ದನುಕ್ರಮದಿಂ ಪ್ರಥಮ ದ್ವಿತೀಯ ಚರಮಸಮಯದೊಳ್ ಮಿಥ್ಯಾತ್ವ ಸಮ್ಯಙ್ಮಿಥ್ಯಾತ್ವ ಸಮ್ಯಕ್ತ್ವ ಪ್ರಕೃತಿಗಳೆಂಬ ದರ್ಶನಮೋಹನೀಯತ್ರಯಮಂ ಕೆಡಿಸೆ

ಕಂದ: ತ್ರಿಕರಣಶುದ್ಧಂ ಸಪ್ತ
ಪ್ರಕೃತಿಗಳಂ ಕ್ರಮದೆ ಕೆಡಿಸಿ ಸತ್ಕ್ರಿಯದಿಂ ಕ್ಷಾ
ಯಿಕ ಸಮ್ಯಗ್ದೃಷ್ಟಿತ್ವಮ
ನಕುಟಿಳಮನಸೆಯ್ದೆ ಶುದ್ಧದರ್ಶನನಾದಂ ೧೨೭

ವಚನ: ಸಮನಂತರಂ ಚಾರಿತ್ರಮೋಹೋದಯಮುಮಂ ಜ್ಞಾನವೈರಾಗ್ಯ ಸಂಪತ್ತಿಯುಮನೊಂದನೊಂದನುಕ್ರಮಿಸುತ್ತುಮಿರೆ ಮತ್ತಾ ಪ್ರಮತ್ತ ಪರಾವರ್ತನ ಸಹಸ್ರಂಗಳ ನಂತರ್ಮುಹೂರ್ತದೊಳ್ ನಿರ್ವರ್ತಿಸಿ ಶುದ್ಧೋಪಯೋಗ ಸಮುದ್ಧತೆಯಿಂ ನಿಶ್ರೇಯಸ ಪ್ರಾಸಾದಸಮಾರೋಹಣನಿಶ್ರೇಣೀಭೂತಕ್ಷಪಕಶ್ರೇಣಿಯನೇಱಲೆಂದಧಃಪ್ರವೃತ್ತಾಧಿಕರಣ ಪರಿಣತಿಯನೊಳಕೊಂಡು

ಕಂದ: ಒಂದಾಯುಃಕರ್ಮಮಂ ಬಳಿ
ಸಂದಿರಲುಳಿದೇಳುಕರ್ಮದನುಭಾಗಸ್ಥಿತಿ
ಬಂದ ಪ್ರದೇಶಗುಣಮಂ
ಕುಂದಿಸಿದಂ ನಿರ್ಜರಾವಿಧಾನಕ್ರಮದಿಂ ೧೨೮

ವಚನ: ಅನಂತರಮನಂತಗುಣಪ್ರಭಾವದೊಳೊಂದಿದೋರೊಂದೇ ಪರಿಣಾಮದಿಂ ಪೂರ್ವಕರಣಗುಣಸ್ಥಾನದಿನಗಲ್ದು ನಿವೃತ್ತಿಕರಣ ಕ್ಷಪಕಗುಣಸ್ಥಾನಮಂ ಪೊರ್ದಿದಂತ ರ್ಮುಹೂರ್ತದೊಳ್ ನಿದ್ರಾನಿದ್ರಾ ನಿದ್ರಾಪ್ರಚಲಾ ಪ್ರಚಲಾಪ್ರಚಲಾ ಸ್ತ್ಯಾನಗೃದ್ಧಿ ನರಕ ತಿರ್ಯಗ್ಗತಿ ತತ್ತತ್ಪ್ರಯೋಗ್ಯಾನುಪೂರ್ವೇಂದ್ರಿಯ ವಿಕಳೇಂದ್ರಿಯಜ್ಯಾತಾತಪೋದ್ಯೋತ ಸ್ಥಾವರಸಾಧಾರಣಸೂಕ್ಷ್ಮಂಗಳೆಂಬ ಪದಿನಾಱುಂ ಪ್ರಕೃತಿಗಳಂ ನಿರ್ಮೂಲಂ ಪಡಲ್ವಡಿಸಿ ಬಳಿಯನಂತರ್ಮುಹೂರ್ತದೊಳ್

ಕಂದ: ಅಪ್ರತ್ಯಾಖ್ಯಾನ ಕಷಾ
ಯಪ್ರತ್ಯಾಖ್ಯಾನ ದುಷ್ಕಷಾಯಾಷ್ಟಕಮಂ
ಕ್ಷಿಪ್ರಂ ಕೆಡಿಸಿದನಾ ಧೀ
ರಪ್ರಭು ಕೈವಲ್ಯಸೌಖ್ಯಲಾಭನಿಮಿತ್ತಂ ೧೨೯

ವಚನ: ಮತ್ತಮುತ್ತರಕ್ಷಣದೊಳ್ ನಪುಂಸಕವೇದಂ ಸ್ತ್ರೀವೇದಮೆಂಬೆರಡಂ ಕೆಡಿಸಿ ಬಳಿಯಂ ಹಾಸ್ಯರತ್ಯರತಿಶೋಕಭಯಜುಗುಪ್ಸೆಗಳೆಂಬಾಱಱಳೊಡನೆ ಪುಂವೇದಮಂ ಬೆಂಕೊಂಡು ಪರಿವಿಡಿಯಿಂ ಸಂಜ್ವಳನ ಕ್ರೋಧಮಾನಮಾಯಾಲೋಭಂಗಳಂ ಪರಿಹರಿಸಿ

ಕಂದ: ಅತಿಸೂಕ್ಷ್ಮಸಾಂಪರಾಯ
ಸ್ಥಿತಂ ಪರಾಭವಿಸಿ ಸೂಕ್ಷ್ಮಲೋಭಕಷಾಯ
ಪ್ರತಿಪಕ್ಷಮನಷ್ಟಾವಿಂ
ಶತಿಭೇದಗ ಮೋಹನೀಯಬಲಮಂ ಗೆಲ್ದಂ ೧೩೦

ಕೆಡೆ ರಾಗದ್ವೇಷಂಗಳ್
ಪಡೆದು ಯಥಾಖ್ಯಾತ ಪರಮಚಾರಿತ್ರಮನಾ
ಗಡೆ ಪೆರ್ಮುಗಿಲಾವರಣಮ
ಮುಡುಗಿ ರವಿಬಿಂಬದಂತೆ ಚೆಲ್ವಂ ತಳೆದಂ ೧೩೧

ವಚನ: ಮತ್ತಂ ಪೃಥಕ್ತ್ವ ವಿತರ್ಕವಿಚಾರಮೆಂಬ ಪ್ರಥಮಶುಕ್ಲಧ್ಯಾನಮಂ ಧ್ಯಾನಿಸಿ ಕ್ಷೀಣಕಷಾಯವೀತರಾಗಚ್ಛದ್ಮಸ್ಥಗುಣಸ್ಥಾನಮಂ ಪೊರ್ದಿ ಕರಣಲಬ್ಧಿಯ ಪರಮ

ಪ್ರಕರ್ಷಮನೆಯ್ದಿ ಬಳಿಯಮೇಕತ್ವವಿತರ್ಕವಿಚಾರವೆಂಬೆರಡನೆಯ ಶುಕ್ಲಧ್ಯಾನದಿಂ ಬ[1]ಹು[1]ಳಪ್ರದೇಶ ನಿರ್ಜರೆಗಳನಾಗಿಸಿ ಚರಮಸಮಯದೊಳೊರ್ಮೊದಲೊಳ್

ಕಂದ : ತವಿಸಿದನಂದು ಮತಿಶ್ರುತ
ಮನಃಪರ್ಯಯಂ ಮಹಾಕೇವಳವೆಂ
ಬಿವಱಾವರಣಮನಯ್ದಂ
ನವಕೇವಳಲಬ್ಧಿಯೋಗ್ಯನೆನಿಪಾ ಮುನಿಪಂ ೧೩೨

ಪರಿಹರಿಸಿದನಾ ಮುನಿಪಂ
ಖರಚಕ್ಷುರ ಚಕ್ಷುರವಧಿಕೇವಳವೆಂಬೀ
ಪರಿಯಾದ ನಾಲ್ಕು ಭೇದಂ
ಬೆರಸಿದ ಸಲೆಕಷ್ಟದರ್ಶನಾವರಣಮುಮಂ ೧೩೩

ಪ್ರಭುದಾನ ಲಾಭ ಭೋಗೋ
ಪಭೋಗ ವೀರ್ಯಂಗಳಂತರಾಯಮಿವೈದುಮ
ನಭಿಭವಿಸಿ ಕೆಡಿಸಿದಂ ಜಗ
ದಭಿಸಂದ್ಯಂ ಕೆಡಿಸುವಂತೆ ರವಿ ಕತ್ತಲೆಯಂ ೧೩೪

ವಚನ : ಇಂತು ಜ್ಞಾನಾವರಣೀಯ ದರ್ಶನಾವರಣೀಯ ಮೋಹನೀಯಾಂತರಾಯಂಗಳೆಂಬ ಘಾತಿಕರ್ಮಚತುಷ್ಟಯಂಗಳಂ ನಿರವಶೇಷಂ ವಿನಷ್ಟಂಗೆಯ್ಯಲೊಡಂ

ಮಹಾಸ್ರಗ್ಧರೆ

ಪ್ರಕಟಂ ಪೆಂಪೋದುದಂ ವರ್ತಿಸುವುದನುಱಿ ಮುಂಬಪ್ಪುದಂ ದ್ರವ್ಯಸಂಸ್ಥಾ
ನಕಮಂ ಮೂಲೋಕದಾಕಾರಮನಱಿವ ಮಹಾಶಕ್ತಿವೆತ್ತಾ ನಿಮಿತ್ತಂ
ಸಕಳಪ್ರತ್ಯಕ್ಷಮಾದುತ್ತಮವಿಮಳಲಸತ್ಕೇವಳಜ್ಞಾನಮಾಗಳ್
ಸುಕೃತಾವಾಸಂಗೆ ಪುಟ್ಟಿತ್ತಮಿತಮಹಿಮವದ್ಧರ್ಮನಾಥಂಗೆ ಬೇಗಂ ೧೩೫

ಚಂಪಕಮಾಲೆ

ಬೆಳಗನಪೇಕ್ಷೆಗೆಯ್ಯದೆ ವಿಲೋಚನಗೋಚರಭಾವಮುಂ ಸಮಂ
ತೆಳಿಸದೆ ದೂರಮುಂ ತ್ವರಿತಮೆನ್ನದದೊರ್ಮೊದಲಲ್ಲಿ ವಸ್ತುಸಂ
ಕುಳಮನೆಲ್ಲಮುಂ ವಿಶದಮಾಗಿ ಕರಸ್ಥಿತರೇಖೆಯಂತಿರೊಂ
ದುಳಿಯದೆ ಕಾಣ್ಬ ಕೇವಳವಿಬೋಧಮುದುಜ್ಜ್ವಳಿಸಿತ್ತು ದೇವನೊಳ್ ೧೩೬

---

1 ಹ (ಗ)

ಕಂದ : ರಮಣೀಯಮತಿಶ್ರುತಮನ
ದಿ ಮನಃಪರ್ಯಯಮಡಂಗಿ ಪುದಿದುಸಿರದಿರೆ
ಕ್ರಮಕರಣವ್ಯವಧಾನಂ
ಸಮನಿಸದೆ ವಿಜೃಂಭಿಸಿತ್ತು ಕೇವಳಬೋಧಂ ೧೩೭

ಉದಯಿಸಿದುದು ಕೇವಳಬೋ
ಧದ ವಿಭವಂ ಮಾಘಮಾಸ ಪೌರ್ಣಮಿಯಪರಾ
ಹ್ಣದೊಳದುವೆ ಪುಣ್ಯನಕ್ಷ
ತ್ರದ ಸಿರಿ ಶುಭಲಗ್ನದಲ್ಲಿ ಗುರುವಾರದೊಳಂ ೧೩೮

ಅತ್ಯುಗ್ರತೇಜದಿಂದಾ
ದಿತ್ಯಂ ಚೆಲ್ವೆಳ್ ತೋರ್ಪ ತೆಱದಿಂದಾ ಕೃತ
ಕೃತ್ಯಂ ಚೆಲ್ವಂ ತಾಳ್ದಂ
ನಿತ್ಯಂ ಕೇವಳವಿಬೋಧಮಹಿಮೋದಯದಿಂ ೧೩೯

ವಚನ : ಮತ್ತಮಾ ಪೊತ್ತಿನಲ್ಲಿ ಮುನ್ನ ಪಲಬದ್ಧಕ್ಷಾಯಿಕಸಮ್ಯಕ್ತ್ವಂ ನವ ಕೇವಳಲಬ್ಧಿಯ ಪ್ರಭಾವಮನವಗೈಸುವುದುಂ

ಕಂದ : ಚಂದ್ರಾರ್ಕಕೋಟಿದೀಧಿತಿ
ವೃಂದಮನೊಳಕೊಂಡು ಪೊಳೆವ ಮೆಯ್ವೆಳಗಿಂದೆ
ಯ್ದುಂದಂಬಡೆದುದು ಜಿನತನು
ಕುಂದದೆ ಪೊಱವಳಿಸಿದಂತೆ ಶುಕ್ಲಧ್ಯಾನಂ ೧೪೦

ಮಹಾಸ್ರಗ್ಧರೆ

ಜರೆರಾಗದ್ವೇಷರೋಗಂ ಪಸಿವು ತೃಷೆ ಭಯಂ ಚಿಂತೆ ನಿದ್ರಾವಿಷಾದಂ
ಮರಣಂ ಸ್ವೇದಂ ವಿಮೋಹಂ ಮದರತಿಜನನಂ ವಿಸ್ಮಯಂ ಕ್ಲೇಶಮೆಂಬೀ
ಪರಿಭೇದಂಗೂಡಿದಷ್ಟಾದಶವಿಧಖಳದೋಷಂಗಳಂ ಗೆಲ್ದು ತಾಳ್ದಂ
ಪರಮಾರ್ಹಂತ್ಯಾದಿಲಕ್ಷ್ಮೀನಿರತಿಶಯಪರೀರಂಭಮಂ ಧರ್ಮನಾಥಂ ೧೪೧

ವಚನ : ಆ ಸಮಯದೊಳ್

ಕಂದ : ಪರಮೌದಾರಿಕ ದೇಹಂ
ಧರಣೀತಳದಿಂದಮೈದುಸಾಸಿರಬಿಲ್ಲಂ
ತರಮನಱೆ ಬಿಟ್ಟು ಗಗನೋ
ದರಕ್ಕೆ ನೆಗೆದತ್ತುದಕ್ಷಿಗಮೃತಾಂಜನಮಂ ೧೪೨

ವಚನ: ಇಂತು ಭೋಂಕನೆ ನಭಕ್ಕೆ ನೆಗೆಯಲೊಡಮಮೇಯ ಕಾಂತಿನಿಕಾಯ ದಿಂದಖಿಳವಿಯತ್ತಳದಂತರಾಳಮೆಳೆಮಿಂಚುಗಳ ಬಳಗಮನೊಳಕೊಂಡುದೆಂಬಂತೆ ಥಳ ಥಳಿಸಿ ಪೊಳೆಯುತ್ತುಮಿರ್ಪುದುಮಾಗಳ್

ಕಂದ: ಕೇವಳಬೋಧೋದಯ ಸಂ
ಸ್ಥಾವಿಭವಂ ಧರ್ಮನಾಥಜಿನಪಂಗಾಯೆಂ
ಬೀ ವಿಧಮಂ ತಿಳಿದಂ ಪರ
ಮಾವಧಿಯಿಂ ದಿವಿಜರಾಜನವನತಮುಕುಟಂ ೧೪೩

ವಚನ: ಮತ್ತಂ

ಕಂದ: ಕರಸಿ ಕುಬೇರನನುಸಿರ್ದಂ
ವಿರಚಿಸು ನೀಂ ಮುಂದೆ ಪೋಗಿ ಧರ್ಮಜಿನೇಶಂ
ಗುರುಸಮವಸರಣಮಣಿಮಂ
ದಿರಮಂ ನಾನಾನವೀನಘನಕೌಶಲಮಂ ೧೪೪

ವಚನ: ಎಂದು ಬೆಸಸುವುದುಮಾತನಾತನ ಮಾತಂ ಶಿರದೊಳಾಂತು ಮಹಾ ಪ್ರಸಾದಮೆಂದು ಕೈಕೊಂಡು ಶಿಲ್ಪಿಕ ಕಳಾಕೌಶಲ್ಯಸಂಕಲ್ಪನ ನೈಪುಣ್ಯಪಣ್ಯಜನಂಬೆರಸು ಧರ್ಮನಾಥತೀರ್ಥಂಕರನಿರ್ದೆಡೆಗೆವಂದು ವಂದಿಸಿ ತದನಂತರಮಂತರಿಕ್ಷದಲ್ಲಿ ಕಂತು ಕೈ ವಾರಂ ಬೀಸಿದಂತೆ ಸಮವೃತ್ತಮಾಗಿ ಪಂಚಯೋಜನವಿಸ್ತಾರದಿಂ ಪ್ರಶಸ್ತಮಾದ ನಿಸ್ತೂಳ ಹರಿನೀಳಮಾಣಿಕ್ಯಮಯ ಧರಣೀವಳಯಮಂ ಕಣ್ಗೆಗುವರ್ಾಗಿ ವಿಗುರ್ವಿಸಿ

ಕಂದ: ಕೊತ್ತಳಗಳಿಂದೆ ಜೆಲ್ವಂ
ಬೆತ್ತು ಮಹಾಟ್ಟಾಳಜಾಳದಿಂ ಪೊಳೆಯುತ್ತುಂ
ಸುತ್ತಿರ್ದುದದಱ ಮೇಲೆ ಸ
ಮುತ್ತುಂಗ ಸುವಜ್ರರತ್ನಧೂಳೀಜಾಳಂ ೧೪೫

ಮತ್ತೇಭವಿಕ್ರೀಡಿತ

ರಸೆಯಿಂ ಪಂಚಸಹಸ್ರಚಾಪನಿಯತೋತ್ಸೇಧಂಬರಂ ನೀಳ್ದು ರಂ
ಜಿಸುವಿಪ್ಪತ್ತುಸಹಸ್ರಸುಸ್ಫಟಿಕ ಸೋಪಾನಂಗಳ ಶ್ರೇಣಿ ನಾ
ಲ್ದೆಸೆಯೊಳ್ ಪರ್ಬಿದುದಿಂದ್ರನೀಲಮಹಿಯಂ ಮುಟ್ಟಿರ್ಪಿನಂ ಪಾದಲಿ
ಪ್ತ ಸಮಗ್ರೌಷಧಿಯಿಂದಮೊರ್ವೊದಲೆ ಮೇಲೇಱಿರ್ಪರಾನಂದದಿಂ ೧೪೬

ವಚನ: ಆ ಸೋಪಾನಂಗಳಗ್ರಭಾಗದೊಳ್

ಸ್ರಗ್ಧರೆ

ರಾಗಂಬೆತ್ತಿರ್ದ ನಾನಾನವಮಣಿಖಚಿತೋತ್ತೋರಣಶ್ರೇಣಿ ಮುಂದೊಂ
ದಾಗಿಂಬಂ ಮಾಡೆ ಮಾಣಿಕ್ಯಮಯಕಳಶಸಂದೋಹಮಾಕಾಶಮಂ ಪೊ
ತ್ತೇಗೆಯ್ದಿತ್ತಲ್ಕೆ ಪತ್ತುಂ ನೆಲೆಗಳನೊಳಕೊಂಡಿರ್ದ ಚೆಂಬೊನ್ನ ನಾಲ್ಕುಂ
ಬಾಗಿಲ್ವಾಡಂಗಳೊಪ್ಪಂಬಡೆದವು ದೆಸೆಯಂ ಪೊಂಗದಿರ್ ನುಂಗುವನ್ನಂ ೧೪೭

ಕಂದ: ಅವಱಿೞೊಳಗಣ ಪೊಱಗಣ ಪೊಸ
ಪವಳದ ಜಗಲಿಗಳ ಮೇಲೆ ಬಾಗಿಲ್ವಾಪಿನ
ನೆವದಿಂ ಜ್ಯೋತಿಷ್ಕಾಮರ
ನಿವಹಂ ಪಿಡಿದಿರ್ದುದೆಸೆವ ಪೊಂಗಟ್ಟಗೆಯಂ ೧೪೮

ಪದಿನಾಲ್ಕುಂ ರತ್ನಂಗಳ್
ಪದೆಪಿಂ ನವನಿಧಿಗಳಷ್ಟಮಂಗಳಮುಂ ಕನ
ಕದ ಮುರಜೋದ್ಯುಪಕರಣಮು
ಮೊದವಿರ್ದುವು ಬೇಱೆವೇಱೆ ನೂಱೆಂಟವಱೊಳ್ ೧೪೯

ವಚನ: ಆ ನಾಲ್ಕು ಬಾಗಿಲ್ವಾಡಂಗಳ್ ಮೊದಲ್ಗೊಂಡು ಜಿನಪತಿಯ ಮೊದಲ ಪೀಠಂಬರಂ ನೀಳ್ದು ಪರ್ವಿದ ನಾಲ್ಕು ಪೆರ್ಬೀದಿಗಳುಭಯಪಾರ್ಶ್ವದೊಳಳವಟ್ಟ ಪಳಿಕಿನ ಕೇರ್ಗಟ್ಟಿನ ನಡುವೆ ನಡುವೆ ಮಕರತೋರಣಂಗಳಿಂದಳಂಕೃತಮಾದೊಂದು ಗವ್ಯೂತಿ ಮಾತ್ರಾಂತರದೊಳ್

ಕಂದ: ಮಾನಸ್ತಂಭಂಗಳ್ ನಾ
ಲ್ಕೇನೆಸೆದುವೊ ನಾಲ್ಕುದೆಸೆಯೊಳಂ ಮಣಿಮಯ ಘಂ
ಟಾನಿಚಿತಂಗಳ್ ಮಿಥ್ಯಾ
ಜ್ಞಾನಾಹಂಕೃತಿಯನೊರಸುವವು ಕಾಣಲೊಡಂ ೧೫೦

ವಚನ: ಮತ್ತಂ ನಾಲ್ದೆಸೆಯ ಗೋಮೇಧವೇಧಿಗಳ ಮೇಲೆ ಕನತ್ಕನಕಮಯ ಜಿನ ಬಿಂಬಂಗಳ್ ನಾಲ್ಕು ಪೊಳೆಯುತ್ತುಮಿರ್ಪುವವಂ ಬಳಸಿ ಪ್ರತ್ಯೇಕಂ ಚತುರ್ಗೋಪುರಂಗಳಿಂದಳಂಕಾರಂಬಡೆದ ಮೂಱುಪ್ರಾಕಾರಂಗಳಿಂ ನಾಲ್ಕುಕೊಂಡಂಗಳಿಂ ಕಣ್ಗೊಂಡು ಬೇಱೆ ವೇಱೊಂದೊಂದಿಂತು ವಿಳಾಸಮನೊಳಕೊಂಡ ನಾಲ್ದೆಸೆಯ ನಾಲ್ಕು ಮಾನಸ್ತಂಭಂಗಳೆಡೆ ಯೆಡೆಯೊಳರ್ಧಯೋಜನದಗಲವನವಗಯಿಸಿದ ಪ್ರಾಸಾದಂಗಳೈದು ಜಿನಚೈತ್ಯಾವಾಸ ಮೊಂದೀ ಕ್ರಮದಿಂ ವಿನ್ಯಾಸಂಬಡೆದು ಪಂಚರತ್ನಂಗಳ ನಡುವೆ ಚಿಂತಾಮಣಿಯನಿರಿಸಿ ಬಣ್ಣ ಸರಂಗೊಯಿದಂತೆ ತಿಣ್ಣಂ ರಂಜಿಸುವ ಪ್ರಾಸಾದಚೈತ್ಯನಿಳಯದಿಳಾವಳಯದಿಂದೊಳಗೆ

ಕಂದ: ಪೊಸಬೆಳ್ಳಿಯ ಕೋಟೆ ವಿರಾ
ಜಿಸುಗುಂ ಧಳಧಳಿಪ ನಾಲ್ಕುಗೋಪುರದಿಂದೊ
ಳ್ಪಸುನಿಯ ವೇದಿಕೆಯೊಳ್ ಮು
ಸ್ನಸಿರ್ದವೊಲಿರೆ ಮಂಗಳಂಗಳುಂ ರಕ್ಷಕರುಂ ೧೫೧

ಪರಿಖಾವಳಯಂ ಚೆಲ್ವಂ
ಧರಿಸಿತ್ತಲ್ಲಿಂದವೊಳಗೆ ಸಿದ್ಧರಸಂ ಕಾ
ಳ್ಪುರಮಾದುದೆನೆ ಪರಾಗೋ
ತ್ಕರರಂಜಿತ ಸಲಿಲಮುದ್ಧ್ವಮಣಿಸೋಪಾನಂ ೧೫೨

ಇರುಳುಂ ಪಗಲುಂ ಬಿಡದಂ
ಬುರುಹವನಂ ಕುಮುದವನಮುಮಲರ್ದಿಂದೊಂದೇ
ಪರಿಯಾಗಿ ಚಿತ್ರದಿಂ ಬಿ
ತ್ತರಿಸಿದವೊಲ್ ತೋರ್ಕೆವೆತ್ತುದಾ ಖಾತಿಕೆಯೊಳ್ ೧೫೩

ಜಳಕೇಳಿಗೆ ಬರ್ಪಮರೀ
ಕಳಕಾಂಚೀದಾಮ ನೂಪುರಂಗಳ ರವದಿಂ
ಪಲವು ನೀರ್ವಕ್ಕಿಯುಲಿಯುಂ
ಜಳಖಾತಿಕೆ ಮುಖರಮಾಯ್ತು ಪೆರ್ದೆರೆಯುಲಿಯಿಂ ೧೫೪

ವಚನ: ಆ ನೀರ್ಗಾದಿಗೆಯುಮರ್ಧಯೋಜನಮಕ್ಕುಮಲ್ಲಿಂದೊಳಗೆಯುಮಾ ಪರಿಯ ಚತುರ್ಗೋಪುರವೇದಿಕಾ ದೌವಾರಿಕನಿಧಿಮಂಗಳಂಗಳ ಸ್ವೀಕಾರದಿನಾಕಾರಂಬೆತ್ತ ರಾಜತ ಪ್ರಾಕಾರಮಿಕ್ಕುಮವಱಂತರ್ಭಾಗದೊಳ್

ಮತ್ತೇಭವಿಕ್ರೀಡಿತ

ಸಿರಿದುಂ ಪೂತಿರುವಂತಿ ಬಲ್ಮುಗುಳನಾಂತೊಳ್ಮೊಲ್ಲೆ ಪೂದೊಂಗಲಂ
ಭರದಿಂ ತಾಳ್ದ ದಿರ್ಮುತ್ತೆ ಕನ್ನಲರಿನಿಂ ಸೊಂಪಾದ ಸೇವಂತಿ ಬಿ
ತ್ತರದಿಂ ಮೊಗ್ಗೆಗಳುಳ್ಳ ಮಲ್ಲಿಗೆಗಳಿಂ ಚೆಲ್ವಾದ ವಲ್ಲೀವನಂ
ಕರಮೊಪ್ಪಿತ್ತು ಸಮಸ್ತಪುಷ್ಪಪಸರಂ ನಿತ್ಯತ್ವಮಂ ಪೆತ್ತವೋಲ್ ೧೫೫

ಚಂಪಕಮಾಲೆ

ಜಿನಪನ ಸೇವೆಯೆಂದು ಪುಗಲಮ್ಮದೆ ದೂರದೊಳಿರ್ದ ಮನ್ಮಥಂ
ಘನಮೆನೆ ಗಾಳಿ ತಂದು ಪೊಱಸೂಸಿದ ಮುತ್ತಲರಿಂದೆ ಮಾಡಿ ಮೋ
ಹನಸರಮಂ ಜಗದ್ವಿಜಯಿಯಾದನದಂ ನಸುಸೋಂಕಿ ಬೀಸಲಾ
ಯ್ತುಸುಸಮಮಾದ ಗಂಧವಹಮೆಂಬಭಿಧಾನದ ರೂಢಿ ಗಾಳಿಗಂ ೧೫೬

ಕಂದ : ಅಳಿ ತುಂಬಿಯೆಂಬ ಪೆಸರಂ
ತಳೆದುದು ತದ್ವನದ ಪೂಗಳೆಸಳ್ಗಳನಿನಿಸುಂ
ಬಳಲಿಸದೆ ಬಹಳತರ ಪರಿ
ಮಳಭರಮುಂ ತುಂಬಿಕೊಂಡ ಕಾರಣದಿಂದಂ ೧೫೭

ವಚನ : ಇಂತೊಂದುಯೋಜನ ಸಮುಲ್ಲಸಿತಮಾದ ಸಂಫುಲ್ಲವಲ್ಲೀವನದಿಂದೊಳಗೆ

ಕಂದ : ಪೊಂಬೆಸದ ಪರಿಧಿ ನಯನ
ಕ್ಕಿಂಬಾದುದು ನಾಲ್ಕುರಜತಗೋಪುರದಿಂದಂ
ಕೆಂಬರಲ ಜಗಲಿಯಲ್ಲಿ ವಿ
ಡಂಬಿಸುವ ದ್ವಾರಪಾಲ ಯಕ್ಷಾಮರರುಂ ೧೫೮

ವಚನ : ಒಂದೊಂದು ಗೋಪುರದಿಕ್ಕೆಲಂಬಿಡಿದೆರಡೆರಡಾಗಿ ಮೂಱುನೆಲೆಯ ಮಣಿಮಯ ನಾಟಕಶಾಲೆಗಳ್ ಪದಿನಾಱಕ್ಕುಮವಱೊಂದೊಂದು ನೆಲೆಯೊಳ್

ಕಂದ : ಲಯದೊಡನೆ ಗೀತವಾದ್ಯಮ
ಚಯ ಮೃದುರವದಿಂದೆ ವಲಭಿ ಮಾರ್ದನಿಗುಡೆ ದೇ
ವಿಯರುಂ ಮೂವತ್ತಿರ್ವರ್
ನಯದಿಂ ನರ್ತಿಸುವರೆಸೆವಿನಂ ರಸಭಾವಂ ೧೫೯

ಒಂದೊಂದು ನಾಟ್ಯಶಾಲೆಯ
ಮುಂದೊಂದೊಂದನಿಸಿಯಗರುಧೂಪಘಟಂಗಳ್
ಕುಂದದೆ ಪದಿನಾಱಕ್ಕಂ
ಸಂದಡರಲ್ ದೀವಮನವಿತಧೂಮಸ್ತೋಮಂ ೧೬೦

ವಚನ : ಮತ್ತಮಲ್ಲಿ

ಉತ್ಪಲಮಾಲೆ

ಕೆಂದಳಿರ್ಗೊಂಗಲಿಂದೆಸೆವಶೋಕವನಂ ಪೊಸಗಂಪನಾಂತಿರಲ್
ಕುಂದದ ಚಾರುಚಂಪಕವನಂ ತಸಿವಣ್ಗೊನೆಯಿಂದೆ ಜೋಲ್ದು ಜೆ
ಲ್ವೊಂದಿದ ಸಪ್ತಪರ್ಣವನಮೆಲ್ಲೆಡೆಯೊಳ್ ಕಡುತೋರಗಾಯ್ಗಳಿಂ
ದಂದಮನಾಳ್ದ ಚೂತವನಮೀ ಕ್ರಮದಿಂದಮೆ ನಾಲ್ಕುಮೊಪ್ಪುಗುಂ ೧೬೧

---

1 ಸ (ಕ)

ಶಾರ್ದೂಲವಿಕ್ರೀಡಿತ

ಆ ನಾಲ್ಕುಂ ಬನದಲ್ಲಿ ಮೂಱು ಕನಕಪ್ರಾಕಾರದಿಂ ಸುತ್ತಿ ಮ
ತ್ತಾ ನಾಲ್ಕುಂ ಜಿನಬಿಂಬಮಿಕ್ಕು ಮಣಿಭಾಸ್ವತ್ಸಿಂಹಪೀಠತ್ರಯಾ
ಪೀನಂ ಕಾಂಚನಕೂಟದಲ್ಲಿ ಪರಮಾಷ್ಟಪ್ರಾತಿಹಾರ್ಯಪ್ರಭಾ
ಪಾನೂನಂ ಜಿನನಾಯಕಂಗಭಿಮುಖಂ ಪರ್ಯಂಕಶೋಭಾಸನಂ ೧೬೨

ವಚನ: ಇಂತಪ್ಪತಿಶಯ ವಿಡಂಬಿತಾರ್ಹದ್ಬಿಂಬಸಂಭೃತಮಾಗಿ ವಿಶಾಳಮೂಳ ಪ್ರದೇಶದ ನಾಲ್ದೆಸೆಯೊಳಿರ್ದ ಪೇಶಳಮಾದ ಜಾಂಬೂನದಮಯ ಚತುರ್ವೇದಿಕಾ ವಳಯ ಮನೊಳಕೊಂಡು ಪೊಳೆಯುತ್ತುಂ

ಕಂದ: ಒಂದೊಂದು ಬನದ ನಡುವಣ
ಸೌಂದರತರ ಚೈತ್ಯವೃಕ್ಷಮೊಂದೊಂದೆಸೆಗುಂ
ಬಂದು ಚತುರ್ವಿಧ ದಿವಿಜರ
ವೃಂದಂ ಪೂಜಿಸುವ ಸಂಭ್ರಮಂ ಪೆರ್ಚುವಿನಂ ೧೬೩

ನಾನಾಫಲತರುಗಳ ಸಂ
ತಾನಂ ಪುದಿದಿರ್ದುದೊಂದುಯೋಜನ ಮಿತಭೂ
ಸ್ಥಾನಂಬರೆಗಂ ಮಧುರ
ಧ್ವಾನಂ ಸೊಗಸಿತ್ತು ಕೀರಕೋಕಿಳಕುಳದಾ ೧೬೪

ವಚನ: ಇಂತನೂನಶೋಭಾವಳಂಬನಮಾದುಪವನದವನಿಯಿಂದೊಳಗೆ

ಕಂದ: ಪೊಸಪೊನ್ನಕೋಟೆ ನಾಲ್ಕುಂ
ದೆಸೆಗಳೊಳೊಳ್ಬೆಳ್ಳಿವೆಸದ ಬಾಗಿಲ್ವಾಡಂ
ಪಸುರ್ವರಲ ಜಗಲಿಯೊಳ್ ಶೋ
ಭಿಸುಗುಂ ನಿಧಿ ಯಕ್ಷರಕ್ಷಕರ್ಮಂಗಳಮುಂ ೧೬೫

ವಚನ: ಅಂತದಱ ಪ್ರದೇಶದೊಳ್

ಮಹಾಸ್ರಗ್ಧರೆ

ನಭಮಂ ಮುಂಡಾಡುವತ್ಯುಜ್ಜ್ವಳಕನಕಮಯಸ್ತಂಭಚೂಡಾಗ್ರದೊಳ್ ಜೆ
ಲ್ವಿಭಪಂಭೋಜಂ ಮಯೂರಂ ವೃಷಭಪತಿ ಮರಾಳಂ ಸ್ರಜಂ ಚಕ್ರವಾಕಂ
ಶುಭಪಂಚಾಸ್ಯಂ ಗರುತ್ಮಂ ಥಳಥಳಿಸುವ ತಳ್ತಂಬರಂ ಪತ್ತುಜಾತಿ
ಪ್ರಭವ ಚಿಹ್ನಂಗಳಿಂ ರಂಜಿಸುವವು ವಿಜಯಂಬೆತ್ತು ಪತ್ತುಂ ಧ್ವಜಂಗಳ್ ೧೬೬

ವಚನ : ಇಂತು ಪತ್ತುಂತೆಱದ ಮಹಾಧ್ವಜಗಳೊಂದಂದಕ್ಕೆ ನೂಱೆಂಟು ನೂಱೆಂಟಾಗಿ ನಾಲ್ದೆಸೆಯೊಳಿರ್ದವೆಲ್ಲಂ ನಾಲ್ಸಾಸಿರದ ಮೂನೂಱುಪ್ಪತ್ತು ಮುಖ್ಯಧ್ವಜಂಗಳಕ್ಕು ಮತ್ತಮದೊಂದೊಂದಕ್ಕಷ್ಟೋತ್ತರಶತಮಾಗಿ

ಕಂದ : ಬಿತ್ತರಿಸೆ ನಾಲ್ಕುಲಕ್ಕಂ
ಮತ್ತಱುವತ್ತಾಱುಸಾಸಿರಂ ಪಂಚಶತಂ
ಬೆತ್ತಱುಪತ್ತಾಗಿಕ್ಕುಂ
ಮೊತ್ತಂಗೊಂಡಿರ್ದುಪಧ್ವಜಂಗಳ್ ಸುತ್ತಂ ೧೬೭

ಪರಿಕಲಿಸಿದ ಬಿಳಿಯ ಮುಗಿ
ಲ್ದೆರೆಯೆನೆ ತದ್ಧ್ವಜವಿಲಗ್ನಲೋಲ ದುಕೂಲಾಂ
ಬರಜಾಳಂ ಮಿಳ್ಳಿಸಿದ
ತ್ತಿರಲ್ವೋಲಿಂದುದಿರ್ದ ತೆಱದಿನುಪವನದರಲ್ಗಳ್ ೧೬೮

ವಚನ : ಆ ಧ್ವಜಾವನೀವಳಯಮೊಂದು ಯೋಜನಮಕ್ಕುಮಲ್ಲಿಂದೊಳಗೆ

ಕಂದ : ಅರ್ಜುನವರ್ಣದ ಸಾಲಂ
ಸಜ್ಜಿತರಜತಪ್ರತೋಳಿಕಾದಿ ಚತುಷ್ಕಂ
ದುರ್ಜಯನಾಗಕುಮಾರ ಸ
ಮುಜ್ಜೃಂಭಿತರಕ್ಷಣಂ ಸಮಂಗಳಮೆಸೆಗುಂ ೧೬೯

ವಚನ : ಅಲ್ಲಿ ಮುನ್ನಿನಂತೆ ಪದಿನಾಱುಂ ನಾಟಕಶಾಲೆಗಳುಮನನಿತೆ ಧೂಪಪಟಂಗಳುಮನೊಳಕೊಂಡು ಸಾಲತ್ರಯಪರಿವೃತ ತೃತೀಯ ವಿಷ್ಟರಾಗ್ರ ಕಾಯೋತ್ಸರ್ಗ ಸ್ಥಿತ ಶುದ್ಧಸ್ಫಟಿಕಮಯಸಿದ್ಧಪ್ರತಿಮಾಪ್ರತಿನಿಬದ್ಧಮೂಲಶಾಲಿಗಳುಂ ಪ್ರತೀತಿವಿಟಪಿ ಘಂಟಾಜಾಳಮುಕ್ತಾದಾಮಜಾಳಸುರೋದ್ದಾಮಂಗಳಪ್ಪ ನಮೇರು ಮಂದಾರ ಪಾರಿಜಾತ ಸಂತಾನಕಮೆಂಬ ಸಿದ್ಧಾರ್ಥಕವೃಕ್ಷಂಗಳಿಂದೀಕ್ಷಣಮುಂ ನೆಱೆಗೆಯ್ವೇಕಯೋಜನ ಪ್ರಕಲ್ಪಿತಮಾದ ನಲ್ಪತರ ಕಲ್ಪವೃಕ್ಷವನಕ್ಷೋಣೀಮಂಡಳಮಿಕ್ಕುಮಲ್ಲಿ

ಸ್ರಗ್ಧರೆ

ಮಾಲ್ಯಾಂಗಂ ಭೋಜನಾಂಗಂ ಪೊಸತೆನಿಸುವ ವಸ್ತ್ರಾಂಗಮುಜ್ಯೋತಿರಂಗಂ
ಸಲ್ಲೇಪಾಂಗಾಂಗಂ ಬಹುವಿಧವರ ತೂರ್ಯಾಂಗಮುದ್ಭೂಷಣಾಂಗಂ (?)
ಲಾಲ್ಯೋದ್ದೀಪಾಂಗಮತ್ಯುಜ್ವಳಿತ ಕನಕಪಾತ್ರಾಂಗಮೆಂದಿಂತು ಬೇಳ್ಪ
ರ್ಗೆಲ್ಲಗೊಲ್ದೀವ ಪತ್ತುಂತೆಱದತಿಶಯಮತ್ಕಲ್ಪವೃಕ್ಷಂಗಳ[1]ರ್ಕುಂ[1] ೧೭೦

[1] ಕ್ಕುಂ (ಗ)

ವಚನ: ಇಂತಕ್ಷೂಣಶೋಭಾಸಮುಪಲಕ್ಷಿತಮಾದ ಕಲ್ಪವೃಕ್ಷನಂದನವನದಿಂ ದೊಳಗೆ

ಕಂದ: ಬಳಸಿತ್ತು ಕನಕವೇದೀ
ವಳಯಂ ಧರಣೇಂದ್ರರೆಂಬ ದೌವಾರಿಕರು
ಜ್ವಳಿಸುವ ಬೆಳ್ಳಿಯ ನಾಲ್ಕ
ಗ್ಗಳಬಾಗಿಲ್ವಾಡದಿಂದೆ ಕಣ್ಗೆಸೆಯುತ್ತುಂ ೧೭೧

ವಚನ: ಅಲ್ಲಿಂದೊಳಗೆ

ಕಂದ: ಎಡೆಯೆಡೆಯೊಳ್ ಮಣಿತೋರಣ
ಮೆಡೆಗಿಱಿದಿರೆ ಜಿನರ ಸಿದ್ಧರ ಪ್ರತಿಮೆಗಳುಂ
ತೊಡರ್ದಿರೆ ನಾಲ್ಕುಂ ವೀಥಿಯ
ನಡುವಿರ್ಪವು ಜೇಱಿತ ನೆಮನವಸ್ತೂಪಂಗಳ್ ೧೭೨

ವಚನ: ಅವಱ ಕೆಲಂಬಿಡಿದು ಸುತ್ತಿ

ಮಹಾಸ್ರಗ್ಧರೆ
ಒಲಿದಾಡುತ್ತಿರ್ಪ ವಾದ್ಯಂಗಳನತಿಶಯದಿಂ ಬಾಜಿಸುತ್ತಿರ್ಪ ಸನ್ಮಂ
ಗಳಮುಂ ಪಾಡುತ್ತಮಿರ್ಪಚ್ಚರಿಯಿನೆಸೆವ ಮಾಣಿಕ್ಯಸಂಗೀತಹರ್ಮ್ಯಾ
ವಳಿ ಚಿತ್ರಂಬೆತ್ತುಂ ಸಂಗೀತಮನಱಿಯದಮರ್ಗಾದೊಡಂ ಪೊಕ್ಕೊಡಂದಾ
ಗಳೆ ಪಾಡುತ್ತಾಡುತಿರ್ಪಿಚ್ಚೆಯುನೊಡರಿಸುಗುಂ ತುಂಬಿ ದೇವರ್ಕಳಿಂದಂ ೧೭೩

ಕಂದ: ಸಂಗೀತತ್ರಯವಿಭವಂ
ಪಿಂಗದ ನವರತ್ನರಚಿತ ನಾನಾವಳಭೀ
ತುಂಗಭವನಂಗಳಿಂದಂ
ಮಂಗಳಮಾಯ್ತರ್ಧಯೋಜನಕ್ಷಿತಿಚಕ್ರಂ ೧೭೪

ವಚನ: ಇಂತು ನಿಳಿಂಪದಂಪತಿಗಳಭಿನವ ಕ್ರೀಡಾಸಂಭ್ರಮಸಂಪದದಲಂಪಿಂ ಪೊಂಪುಳಿವೋಪ ಸಂಗೀತಶಾಲಾಮಾಲಿಕಾವಳಯಿತ ಮಹೀತಳದಿಂದೊಳಗೆ

ಚಂಪಕಮಾಲೆ
ಪಳಿಕಿನ ಕೋಟೆಗೊಪ್ಪಿದವು ನಾಲ್ಕುವಿನೀಲದ ಗೋಪುರಂಗಳು
ಜ್ವಳಿಸುವವಿಕ್ಕೆಲಂಬಿಡಿದು ರತ್ನದ ವೇದಿಕೆಗಳ್ ತದಗ್ರದೊಳ್
ಬಳಸಿದ ಕಲ್ಪಜಾಮರಕುಮಾರಮಹಾಪ್ರತಿಹಾರಕರ್ ಮನಂ
ಗೊಳಿಸಿದರಾಂತು ಪೊಂಬೆಳೆಗಳಂ ಮಣಿಭೂಷಣದಿಂದವೊಪ್ಪುತುಂ ೧೭೫

ವಚನ: ಆ ವಿಕಟಸ್ಫಾಟಿಕಕೋಟಾವಳಯಲಕ್ಷ್ಮಿಯ ಚತುರ್ಮುಖಮಂಡಳ ದಂತೆಸೆವ ಹರಿನ್ಮಣಿಮಯಚತುರ್ಗೋಪುರದ್ವಾರದಭ್ಯಂತರಾಳದೆರಳ್ದೆಸೆಯೊಳಿರ್ದ ವಿತರ್ದಿ

ಕಾಷ್ಠಳೀಮಧ್ಯದೊಳಶ್ವರತ್ನಮುಂ ಗಜರತ್ನಮುಂ ಸೇನಾಪತಿರತ್ನಮುಂ ಗೃಹಪತಿರತ್ನಮುಂ ಪುರೋಹಿತರತ್ನಮುಂ ಸ್ತ್ರೀರತ್ನಮುಂ ವಿಶ್ವಕರ್ಮರತ್ನಮುಮೆಂದಿಂತು ಸಪ್ತಜೀವರತ್ನಂಗಳುಂ ಚಕ್ರರತ್ನಮುಂ ದಂಡರತ್ನಮುಂ ಖಡ್ಗರತ್ನಮುಂ ಛತ್ರರತ್ನಮುಂ ಚರ್ಮರತ್ನಮುಂ ಮಣಿರತ್ನಮುಂ ಕಾಕಿಣೀರತ್ನಮುಮೆಂದಿಂತೇಳುಮಜೀವರತ್ನಂಗಳುಮಿಾ ಪ್ರಕಾರದಿಂ ಚತುರ್ದಶರತ್ನಂಗಳುಂ ಬಳಿಯಂ ಕಾಳಮುಂ ಮಹಾಕಾಳಮುಂ ಮಾಣವಕಮುಂ ಪಿಂಗಳಮುಂ ಪದ್ಮಮುಂ ಪಾಂಡುಕಮುಂ ನೈಸರ್ಪಣಮುಂ ಶಂಖಮುಂ ಸರ್ವರತ್ನಮುಮೆಂಬ ನವನಿಧಿಭಂಡಾರಂಗಳುಂ ಮತ್ತಂ ಪ್ರತ್ಯೇಕಮಷ್ಟೋತ್ತರಶತಂಗಳಾಗಿ ತೋರ್ಕೆವೆತ್ತ ಮಂಜುಳಕಳಶಮುಂ ಮಣಿದರ್ಪಣಮುಂ ಸಮುತ್ತುಂಗಭೃಂಗಾರಮುಂ ವಿಮಳಚಾಮರಮುಂ ಧವಳಾತಪವಾರಣಮುಂ ವಿಜಯಧ್ವಜಮುಂ ಯಜನವ್ಯಜನಮುಂ ಗರಿಷ್ಠಸುಪ್ರತಿಷ್ಠಕಮುಮೆಂಬಷ್ಟಮಹಾಮಂಗಳಂಗಳುಂ ನಾರಂಗ ನಾಳಿಕೇರ ಮಾಕಂದ ಮಾತುಳಂಗಾದಿ ಸಕಳತರ್ಕ ಫಳಕುಳಕಳಿತ ವಿಪುಳ ಪರಿಮಳಭರವಿರಸನಮಿಳಿತ ಮಾಳತೀಲತಾಂತಾನಂತಮಾಳಾದಿ ಮಾಳಿಗೆಗಳುಂ ಥಳಥಳಿಸಿ ಪೊಳೆವ ಸ್ಥೂಳಸುವರ್ಣರೂಪ್ಯಮಯ ವಿಶಾಳಸ್ಥಳಾದಿ ನಾನಾವಿಧ ಭಾಜನಸಮಾಜಂಗಳುಂ ನಿರತಿಶಯಕಿರಣಗಣಮನುಗುಳ್ವ ಪಲತೆಜದ ಪರಿಪರಿಯ ವಿಳಸದಭಿನವಮಣಿವಿಳಾಸವಿಶೇಷಿತ ಮಕುಟಕುಂಡಳ ಕೇಯೂರಹಾರಾಂಗದಾದಿ ಬಹುವಿಧಭೂಷಣಕಳಾಪಂಗಳುಂ ಪ್ರಶಸ್ತನಿಧಾನಾದಿ ಸಮಸ್ತವಸ್ತುಗಳುಂ ನಿರಂತರಂ ನೆಲೆಗೊಂಡು ನಯನಾನಂದಮನಜನಿಸುತ್ತುಮಿರೆ

ಮಹಾಸ್ರಗ್ಧರೆ

ಅದಱಂತರ್ಭಾಗದಲ್ಲಿ ಸ್ಫಟಿಕಘಟಿತ ಕೌಶಲ್ಯಸಾಕಲ್ಯಶೋಭಾ
ಸ್ಪದಲಕ್ಷ್ಮೀಮಂಡಪಂ ವಿಸ್ಮಯಮನೊಡರಿಸುತ್ತಿರ್ದುದೆಲ್ಲರ್ಗೆ ನೈರ್ಮ
ಲ್ಯದಿನಾ[1]ಕಾಶ[1]ಸ್ವಭಾವಂ ಪೊಳೆವವೊಲದಱ ಸ್ಫೀತಕಾಂತಿಪ್ರಭಾವಂ
ಪುದಿಯಲ್ ಕ್ಷೀರೋದನೀರಿಂಪಭಿಷವಣಮನಾಂತಂತೆ ತೀರ್ಥೇಶನಿರ್ದಂ ೧೭೬

ಕಂದ: ಆ ಲಕ್ಷ್ಮೀಮಂಡಪದ ವಿ
ಶಾಲಂ ಯೋಜನಮದೊಂದಱನಿತಕ್ಕದಱಿಕ್ಕೆಳ್
ಸಾಲದ ಮೂಲಂಬಿಡಿದು ಗ
ಣಾಲಯ ಭೂವಳಯಮಿರ್ದುದೇಕಕ್ರೋಶಂ ೧೭೭

ಉತ್ಪಲಮಾಲೆ

ಆದಿಯ ನಾಲ್ಕುವೀಥಿಗಳೆರಲ್ಕೆಲದಲ್ಲೆರಡಾಗಿ ತಮ್ಮೊಳೆಂ
ಟಾದವು ಮತ್ತಮಂತವಱೆರಳ್ದೆಸೆಯಲ್ಲೆರಡಾಗಲಿಂತು ಸ
ನ್ಮೋದಮನಚಂಪ್ರಕಾಂತಮಯಭಿತ್ತಿಗಳುಂ ಪದಿನಾಱಿನಿಕ್ಕುಮಿಾ
ದ್ವಾದಶಕೋಷ್ಠಮೊಪ್ಪಿದುದು ಪೂರ್ವದಿಗಾದಿಜಿನಪ್ರದಕ್ಷಿಣಂ ೧೭೮

[1] ಶಸ್ವ (ಗಚ)

ವಚನ: ಆ ಪೂರ್ವದಿಗ್ವೀಥೀಪ್ರದೇಶಂಬಿಡಿದು ದಕ್ಷಿಣದಿಗ್ವೀಥೀಪ್ರದೇಶಪರ್ಯಂತ ಮಂತರಾಳದೊಳನುಕ್ರಮಂಗೊಂಡು

ಕಂದ: ಮುನಿಜನಮುಂ ಕಲ್ಪಾಮರ
ವನಿತಾಜನಮುಂ ಮನುಷ್ಯನಾರೀವೃತ ಪಾ
ವನಗುಣವದಬ್ಜಿಕಾ ವಿಭು
ಜನಮುಂ ನೆಲಸಿತ್ತು ಮೊದಲ ಕೋಷ್ಠತ್ರಯದೊಳ್ ೧೭೯

ವಚನ: ಆ ದಕ್ಷಿಣದಿಗ್ವೀಥಿಕಾಸ್ಥಾನಂ ಮೊದಲ್ಗೊಂಡು ಪಶ್ಚಿಮದಿಗ್ವೀಥಿಕಾವಧಿಯಾಗಿ ಮಧ್ಯದೊಳ್ ನಿಮಿರ್ದ

ಕಂದ: ಜ್ಯೋತಿಷ್ಕ ಕಾಮಿನೀತತಿ
[1]ನೂ[1]ತವ್ಯಂತರವಧೂಚಯಂ [ತಾಂ]ನೆಲಸಿ
ರ್ದೋತು ಭವನಾಮರಸ್ತ್ರೀ
ಜಾತಮುಮೆರಡನೆಯ ದೆಸೆಯ ಕೋಷ್ಠತ್ರಯದೊಳ್ ೧೮೦

ವಚನ: ಆ ಪಶ್ಚಿಮದಿಗ್ವೀಥಿಯಿಂ ತೊಟ್ಟುತ್ತರದಿಗ್ವೀಥಿಯೆ ಸೀಮೆಯಾಗಿ ನಡುವೆ ನಿಬಿಡಮಾದ

ಕಂದ: ಭವನಾಮರರುಂ ವ್ಯಂತರ
ನಿವಹಂ ಜ್ಯೋತಿಷ್ಕದೇವರುಂ ಬಹಳತರೋ
ತ್ಸವದಿಂ ನೆಲಸಿರ್ದರ್ ಭ
ಕ್ತಿಪರರ್ ಮೂಱನೆಯ ದೆಸೆಯ ಕೋಷ್ಠತ್ರಯದೊಳ್ ೧೮೧

ವಚನ: ತದುತ್ತರದಿಗ್ವೀಥಿ ತೊಡಗಿ ಪೂರ್ವದಿಗ್ವೀಥಿಯೇ ಮೇರೆಯಾಗಿ ಚಕ್ರವಾಕಸ್ಥಳದೊಳ್

ಕಂದ: ಕಲ್ಪಜದೇಹಸಮೂಹಮು
ನಲ್ಪಮಹಾಚಕ್ರವರ್ತಿನಿಕರಂ ನೆಲಸಿ
ತ್ತೊಳ್ಪಿಂ ತಿರ್ಯಗ್ಜಾತಿವಿ
ಕಲ್ಪಂ ನಾಲ್ಕನೆಯ ದೆಸೆಯ ಕೋಷ್ಠತ್ರಯದೊಳ್ ೧೮೨

ವಚನ: ಮತ್ತಮರಿಷ್ಟಸೇನಾಚಾರ್ಯರ್ ಮೊದಲಾದ ನಾಲ್ವತ್ತಿರ್ವರ್ ಗಣಧರರುಮೊಂಭೈನೂರ್ವರ್ ಪೂರ್ವಧರರುಂ ಸಾಸಿರದೇೞುನೂಱನಾಲ್ವತ್ತು ಶಿಕ್ಷಕರುಂ ಮೂಱು

1 ಮಾ (ಗ)

ಸಾಸಿರದಱುನೂರ್ವರವಧಿಜ್ಞಾನಿಗಳುಮಯಿನೂಱನಾಲ್ವತ್ತು ಮನಃಪರ್ಯಯಜ್ಞಾನಿಗಳುಮನಿತೆ ಕೇವಲಜ್ಞಾನಿಗಳುಮೇಳುಸಾಸಿರ್ವರ್ ವಿಕ್ರಿಯರ್ಧಿಪ್ರಾಪ್ತರುಮಿಚ್ಛಾಸಿರದೆಂಟುನೂರ್ವರ್ ವಾದಿಗಳುಂ ಮೂಱುಸಾಸಿರದ ನಾನೂರ್ವರಜ್ಜಿಯರುಮೆರಡುಲಕ್ಕೆ ಶ್ರಾವಕರುಂ ನಾಲ್ಕುಲಕ್ಕೆ ಶ್ರಾವಕಿಯರುಮಸಂಖ್ಯಾತ ದೇವಿಯರುಮಸಂಖ್ಯಾತ ತಿರ್ಯಗ್ಜಾತಿಜೀವಸಮಾಜಮುಂ ಪೂರ್ವೋಕ್ತಕ್ರಮದಿಂ ನಿಜನಿಜಕೋಷ್ಠಪ್ರದೇಶಂಗಳೊಳ್ ಪರಮೇಶ್ವರಪ್ರಭಾವದಿ ಸಂಕ್ಲಿಷ್ಟರೂಪಮಾಗಿರ್ಪುದುಂ

ಕಂದ: ದ್ವಾದಶವಿಧಕೋಷ್ಠಂಗಳ್
ಮೇದುರಸೌವರ್ಣಗಂಧಕುಟಿಯುಂ ಬಳಸಿದ
ವಾದರಿಸೆ ಮೇರುಗಿರಿಯುಂ
ದ್ವಾದಶರವಿಮಂಡಳಂಗಳುಂ ಬಳಸಿದವೋಲ್ ೧೮೩

ವಚನ: ಅನಂತಚಾತುರ್ವರ್ಣ್ಯಮಹಾಸಂಘದಿಂ ಸಂಪೂರ್ಣಮಾಗೆ ತುಂಬಿ ತಿಂತಿಣಿವೋಪ ಗಣಕ್ಷೋಣಿಯಿಂದೊಳಗೆ

ಚಂಪಕಮಾಲೆ
ಥಳಥಳಿಸಿಂದ್ರನೀಲಮಣಿಯಿಂದಮೆ ಮಾಡಿದ ನಾಲ್ಕುಗೋಪುರಂ
ಗಳ ಕೆಲದಲ್ಲಿ ವಿದ್ರುಮದ ವೇದಿಕೆಯೊಳ್ ನಿಧಿ ಮಂಗಳಂಗಳುಂ
ತೊಳಗುವ ಕಲ್ಪಜಾಮರ ಕುಮಾರಮಹಾಪ್ರತಿಹಾರಕಾಳಿ ಸಂ
ಗಳಿಸೆ ನಭೋನಿಭಸ್ಫಟಿಕವೇದಿಕೆ ಮಂಡಳಿಸಿತ್ತು ಸುತ್ತಲುಂ ೧೮೪

ವಚನ: ಮತ್ತಮುಚಿತಸ್ಥಾನಕದೊಳತೀವ ನವೀನಬಂಧಪ್ರಬಂಧಬಂಧುರಮಾಗೆ ಕೀಲಿಸಿದ ನವರತ್ನಂಗಳ ಮೊತ್ತದಿಂ ಚಿತ್ರರಂಜಿತ್ತ ಮುತ್ತಿನ ದ್ವಾರಬಂಧದ ಮುಂದೆ ಗದಾದಂಡ ಚಕ್ರಪಾಶ ಫಳಕಂಗಳಂ ಪಿಡಿದು ನಿಂದ ವೃಂದಾರಕವರ್ಗನಂ ದೌವಾ[1]ಕ[1] ಗೌರವಂ ವಿಜೃಂಭಿಸುತ್ತುಮಿರಲಲ್ಲಿಂದೊಳಗೆ

ಚಂಪಕಮಾಲೆ
ನವಶತದಂಡದುನ್ನತಿಯಿನೊಪ್ಪುಮನಂತಜಮೂಱುದಂಡಮೇ
ವರ್ಣಗಲಕ್ಕೆ ನೀಳಕೆ ಕುಬೇರನೆ ಸೂತ್ರಿಸಿ ಚಿತ್ರವಿಟ್ಟು ಸಂ
ಭವಿಸಿದ ಚೆಲ್ವಗಂಧಕುಟಿಯುಂ ಪೊಗಳ್ವನ್ನನದಾವನೋ ತ್ರಿಭೂ
ಭುವನದೊಳಿನ್ನುಮಿಲ್ಲೆನಿಪ ರನ್ನದ ಮಾಟದೆ ತೋರ್ಕೆವೆತ್ತುದಂ ೧೮೫

ಕಂದ: ಅದು ಪರಮಾರ್ಹಂತ್ಯಶ್ರೀ
ಸುದತಿಯ ಮದುವೆಯೊಳೊಡರ್ಚಿದುರುಮಂಡಪಮಂ
ದದೆ ಚಿತ್ತದ ಗೊತ್ತಾದುದು
ಬಿದಿ ಪೊಗಳಲ್ಕಾಱನವಱ ಶೋಭೆಯ ಸೊಂಪಂ ೧೮೬

---

1 ಕಾ (ಗ)

ಮತ್ತೇಭವಿಕ್ರೀಡಿತ

ಪರಮೌದಾರಿಕ ದಿವ್ಯದೇಹಘನಗಂಧಂ ತುಂಬಿ ತುಳ್ಕಾಡೆ ಬಿ
ತ್ತರಿಸುತ್ತಿರ್ದುದು ಸಾರ್ಥಗಂಧಕುಟಿಯೆಂಬೀ ನಾಮಮಂ ಪಂಚರ
ತ್ನರುಚಿಪ್ರಾಂಚಿತಮಂಡಪಂ ಜಿನಪತಿಸ್ನಾನಂ ಕರಂ ನಾಣ್ಚಿದಂ
ತಿರೆ ಕಾಳಾಗರುಧೂಪಧೂಮಮಡರ್ದತ್ತಲ್ಲಿಂದಲರ್ವಟ್ಟೆಯಿಂ ೧೮೭

ಕಂದ: ಆ ಗಂಧಕುಟಿಯ ಗಂಧ
ಕ್ಕೋಗಡಿಸದೆ ಸೋಲ್ತು ಬೆಳ್ಕೊಗಂ ಬಿರ್ದವೊಲಿಂ
ಬಾಗಿರ್ದುದು ಕರ್ಪೂರಂ
ಪೂಗಳ್ ಮಧುಬಿಂದು ವಿಷದೆ ನೀರೋಡುವವೊಲ್ ೧೮೮

ವಚನ: ಇಂತು ನವೀನರಚನಾತಿಶಯದಿಂ ಬಂಧುರಮಾದ ಗಂಧಕುಟಿಯ ಮಧ್ಯಸ್ಥಳಕ್ಕಳಂಕಾರಮೆನಿಸಿಯೇಳುನೂಱಯ್ವತ್ತು ಬಿಲ್ಲಗಲಮುಮೆಂಟುಬಿಲ್ಲುದ್ದಮುಮಪ್ಪುಕೆಯುದ್ದ

ಮತ್ತೇಭವಿಕ್ರೀಡಿತ

ರಮಣೀಯಾಂಶುತರಂಗಿತಂ ಮೊದಲಪೀಠಂ ಚಾರುವೈಡೂರ್ಯರ
ತ್ನಮಯಂ ರಂಜಿಸಿದತ್ತು ಮತ್ತದಱ ನಾಲ್ಕುಂ ದಿಕ್ಕಿನೊಳ್ ಧರ್ಮಚ
ಕ್ರಮನುದ್ಯನ್ಮಕುಟಾಗ್ರದೊಳ್ ತಳೆದು ಯಕ್ಷಶ್ರೇಣಿ ನಿಂದಿರ್ದುದು
ತ್ತಮ ನಾನಾವಿಧಪೂಜನೋಪಕರಣಂಗಳ್ ಸಂದವಲ್ಲಲ್ಲಿಗಂ ೧೮೯

ವಚನ: ಚಕ್ರವರ್ತಿ ಖಚರೇಂದ್ರಾದಿಸಮಭ್ಯರ್ಚಿತ ಪ್ರಥಮಪೀಠದ ಮೇಲೇಳುನೂಱು ಧನುಃಪ್ರಮಿತವಿಶಾಲಮುಂ ಚತುಶ್ಚಾಪೋತ್ಸೇಧಮುಮನೊಳಕೊಂಡು

ಕಂದ: ಎರಡನೆಯ ಹೇಮಮಯವಿ
ಷ್ಟರಮಷ್ಟವಿಧಧ್ವಜಂಗಳಿಂ ಬಳಸಿ ಮನೋ
ಹರಮಾದುದಮಳಮೌಕ್ತಿಕ
ಪುರಃರಾಶಿಯ ಪುಂಜರಾಜಿ ಪೊಳೆಯಲ್ ಸುತ್ತಂ ೧೯೦

ವಚನ: ದಿವಿಜಸಮಾಜಪ್ರಭೃತಿಪರಿಪೂಜ್ಯಮಾನ ದ್ವಿತೀಯಪೀಠದ ಮೇಲೆ ಪಂಚಶತಚಾಪವಿಸ್ತಾರದಿಂದಂಚಿತಮಾಗಿ ಚತುಶ್ಚಾಪದುನ್ನತಿಯಿಂ ಚೆನ್ನಂಬಡೆದು

ಕಂದ: ಮೂಱನೆಯ ರತ್ನಪೀಠಂ
ತೋಱುಕೆವೆತ್ತಿರ್ದ ಪಂಚವಿಧಮಣಿಖಚಿತಂ
ಮಿಱುಪದ ಸುಣ್ಬೆಳಗಿಂ ಪೊಳ
ಪೇಱುಸಲಾ ಶ್ರೀಯ ಮಕುಟಮಿರ್ಪಂತಿರ್ಕುಂ ೧೯೧

ಪೊಳೆವಷ್ಟಮಂಗಳಂಗಳ
ಬಳಗಂ ನವನಿಧಿ ವಿತಾನಮುಪನಿಧಿನಿಚಯಂ
ಜ್ವಳಿಸುವ ತೃತೀಯಪೀಠದ
ಕೆಲದೊಳ್ ನಿಲಿಸಿರ್ದು ಕಣ್ಗೆ ಪಡೆದವಗುರ್ವಂ ೧೯೨

ಮುತ್ತಿನ ನೀಲದ ಪಚ್ಚೆಯ
ಪೊತ್ತದ ಮಾಣಿಕದ ಪವಳದುರುರಾಶಿಗಳಿಂ
ಬಿತ್ತರಿಸಿದ ಪುಂಜಂಗಳ್
ಸುತ್ತಂ ಥಳಥಳಿಸುತಿರ್ದವಚ್ಚರಿಯಿಂದಂ ೧೯೩

ಮಗಮಗಿಸುವ ಕಡುಗಂಪಿಂ
ಮಿಗಿಲಾದ ನಮೇರು ಪಾರಿಜಾತದ ಕುಸುಮಾ
ಳಿಗಳೆತ್ತಂ ಚೆಲ್ಲಿರ್ದವು
ಸೊಗಸಂ ಸರ್ವರ್ಗೆ ಪುಟ್ಟಿಸುತುಮತಿಶಯದಿಂ ೧೯೪

ವಚನ: ಇಂತಮೂಲ್ಯರತ್ನರೋಚಿರ್ವಿರೀಚೀನೂತ್ನ ಸಮವಸರಣರತ್ನಾಕರಮಧ್ಯವರ್ತಿಬಹಿತ್ರ ಬಿಂಬಾಡಂಬರವಿಡಂಬಿ ಸಮುದಗ್ರಪೀಠತ್ರಯಾಗ್ರದೊಳ್ ಪಲವಂದದ ಬಂಧಮನನುಕರಿಸಿ ತೋರ್ಪಂತೆ ವಿಚಿತ್ರಮಾಗಿ ಕೇವಣಿಸಿದನಂತಾನಂತ ಚಿಂತಾಮಣಿ ಸಂತಾನಪಂತಿಗಳಿಂ ನಿರಂತರಿತಮಾದ ಪರುಸದ ಪಸುರ್ವರಲ ಪೊಸಪೆಸದಿನಸದಳಮೆಸೆವ ಮಹಾರ್ಹಸಿಂಹಾಸನಮಂ ಮುಟ್ಟದೆ ನಾಲ್ವೆರಳಿಂ ಮೇಲೆ

ಮಹಾಸ್ರಗ್ಧರೆ

ಪಡೆಪಿಂ ಪೊಂಬಣ್ಣಮಂ ಕೀಳ್ಪಡಿಸಿ ಪೊಳೆವ ಮೆಯ್ವಣ್ಣದಿಂ ಚೆಲ್ವನಾಂತು
ರ್ವಿದ ನಾಲ್ವತ್ತೈದು ಬಿಲ್ಲುದ್ದದಿನೆಸೆದುವರಾಶ್ಚರ್ಯ ಸೌಂದರ್ಯದಿಂದಂ
ಪುದಿದು ಶ್ರೀಧರ್ಮನಾಥಂ ಮುಡದೆ ನೆಲಸಿನಿಂದಂ ಮಹಾರಾಗಮಂ ಪಾ
ದದ ಕೆಂಪಿಂದಿಕ್ಕಿ ಮೆಟ್ಟಿರ್ದುರುಮಹಿಮೆಯನೀ ಲೋಕದೊಳ್ ತೋಱುವನ್ನಂ ೧೯೫

ಚಂಪಕಮಾಲೆ

ಜಿನಪನ ಪಿಂದಶೋಕತರು ರಂಜಿಸುತಿರ್ದುದು ಪುಷ್ಪಮಂಜರೀ
ಘನತರಮಾಗಿಯುಲ್ಲಸಿತಪಲ್ಲವಪಲ್ಲರಿಯಿಂದಮೊಪ್ಪಿ ಪಾ
ವನಬಹುಶೋಭೆಯಿಂದಡರಿ ತಣ್ಣೆಳಲಿಂದಮೆ ತಿಣ್ಣಮಾಗಿ ದೇ
ವನ ನಿಕಟತ್ವದಿಂದೆ ಮರನಾದೊಡಮೆಯ್ದಿದಶೋಕಭಾವಮಂ ೧೯೬

ನೆಳಸಳಿಸೈದುಮಾಣಿಕದ ಗೊಂಡೆಯದಿಂದೆ ವಿಚಿತ್ರಮಾಗಿಯು
ಗ್ಗಳಿಸಿದ ತೋರಮುತ್ತುಗಳ ಮಾಲೆಯ ಲಂಬನದಿಂದೆ ಸುತ್ತಲು
ಜ್ವಳಿಸಿ ಸುಪದ್ಮರಾಗಮಣಿದಂಡದಿನೊಪ್ಪಮನಾಳ್ದು ಶೋಭೆಯಂ
ತಳೆದುದು ಚಂದ್ರಕಾಂತಮಯಮಾಗಿಯೆ ಮುಕ್ಕೊಡೆ ಭೂತ್ರಯೀಶನಾ ೧೯೭

ಕಂದ: ಕನಕಮಣಿದಂಡಮಂ ಪಿಡಿ
ದನಿಮಿಷರಱುವತ್ತುನಾಲ್ಕುಚಮರರುಹಂಗಳ
ನನುನಯದಿಂದಿಕ್ಕಿದರಾ
ಜಿನಪನ ನಾಲ್ದೆಸೆಯೊಳಿರ್ದು ವಿಭವಾಧಿಕನಾ ೧೯೮

ಚಂಪಕಮಾಲೆ

ಸುರಿದುದು ಪುಷ್ಪವೃಷ್ಟಿ ನಭದಿಂದೆ ಜಿನಂಗೆ ಮನೋಜಸಂಜಿ ಮೆಯ್
ಗರೆದುಮಸಂಗನಾಗಿ ನಭದೊಳ್ ನೆಲಸಲ್ ನಡುಗುತ್ತುಮಿರ್ದ ತ
ತ್ಕರತಳದಿಂದೆ ಬೀಳ್ವರಲಬಿಲ್ಗಳುಮಂಬುಗಳೆಂಬ ಮಾಳ್ಕೆಯಿಂ
ಪರಿಕಿಸೆ ಪುಷ್ಪಸಂಸ್ಥಿತಿಯಕಾರಣಮೆತ್ತಣದಂತರಿಕ್ಷದೊಳ್ ೧೯೯

ಕಂದ: ಸುರದುಂದುಭಿಗಳ ಬಳಗಂ
ಪಿರಿದುಂ ಮೊಳಗುತ್ತುಮಿರ್ದುದೊರ್ಮೊದಲೊಳ್ ತ
ದ್ವಿರುತಿಯ ಭರದಿಂದಂದಂ
ಬರವಾರಿಧಿ ಘೂರ್ಮಿಸುತ್ತುಮಿರ್ದುದು ಗಾಢಂ ೨೦೦

ದಿವ್ಯಧ್ವನಿ ಪುಟ್ಟಿದುದುರು
ಭವ್ಯಜನಾರ್ಚಿತಪದಂಗೆ ನಾನಾಜೀವ
ದ್ರವ್ಯಕ್ಕೆ ನಿಜನಿಜೋಚಿ
ತ್ರವ್ಯಂ ವಸ್ತುಸ್ವಭಾವನಿರ್ಣಯನಿಪುಣಂ ೨೦೧

ಪರಮೌದಾರಿಕದೇಹೋ
ದ್ಧುರಭಾಮಂಡಳಮಶೇಷಮುಂ ವ್ಯಾಪಿಸೆ ಮಂ
ದರರೂಪಮೆಂಬ ಶಂಕಾ
ಕರಮಾದುದು ಸಮವಸರಣದೇಶಮದೆಲ್ಲಂ ೨೦೨

ವಚನ: ಅಂತು ವಿಶಿಷ್ಟಪರಮೈಶ್ವರ್ಯವಿಭವಪರಿಜುಷ್ಟತೋಷ್ಟಕಾಯಮಾನ ವಿಲಸದಷ್ಟಮಹಾಪ್ರಾತಿಹಾರ್ಯಪ್ರಕೃಷ್ಟನಾಗಿ ಶ್ರೀಧರ್ಮನಾಥತೀರ್ಥನಾಥಂ ಸಕಳ ಜನಂಗಳ ಕಣ್ಗಳಿಂಗೆ ಕೌತುಕಮಂ ಪಿಂಗದೆ ನೆಲೆಗೊಳಿಸುತ್ತುಮಿರ್ಪುದುಂ

ಮತ್ತೇಭವಿಕ್ರೀಡಿತ

ಕರದಿಂ ಮಾಳ್ಪುದದೇನುಮಿಲ್ಲ ನಡೆಯಿಂದಂ ಪ್ರಾಪ್ಯಮಿಲ್ಲಿಂತು ತಾ
ನಿರದಾಲಂಬಿತಹಸ್ತಕಂ ಸಮಪದದ್ವಂದ್ವಂ ದಲಾಗಿರ್ದು ಮೂ
ಧರೆಯೊಳ್ ತನ್ನ ಕೃತಾರ್ಥತಾಮಹಿಮೆಯಂ ಸಂಸೂಚಿಸುತ್ತಿರ್ದನಾ
ಪರಮೇಶಂ ನೆಱೆನಿರ್ವಿಕಾರತನುವಿಂ ಹೃಚ್ಛಾಂತಿಯಂ ತೋಱುತಂ ೨೦೩

ಚಂಪಕಮಾಲೆ

ತ್ರಿಭುವನ ಭೂಷಣಂಗೆ ವಿಗತಾಭರಣಂಗತಿಚಾರುಕಾರಿಯು
ಪ್ಪಭಿನವಭೂಷಣಂ ವಸನದಾವರಣಂ ಬಗೆವಂದಿದೇವುದೆಂ
ದುಭಯುರಮಾಧಿಪಂ ತೊಱೆದು ಭೂಷಣಮಂ ವರವಸ್ತ್ರಮಂ ಕರಂ
ಪ್ರಭವಿಸಿದಂ ಸ್ವಭಾವಜವಿಳಾಸವಿಶೇಷಮನಾಂತ ರೂಪದಿಂ ೨೦೪

ಕಂದ : ರತ್ನಂಗಳನೊಳಕೊಂಡಧಿ
ರತ್ನಾಕರಮೊಪ್ಪುವಂತೆ ಧರ್ಮಜಿನೇಶಂ
ರತ್ನತ್ರಯಂಗಳಂ ಘನ
ಯತ್ನದಿನೊಳಕೊಂಡು ತೊಳಗಿ ಬೆಳಗುತ್ತಿರ್ದಂ ೨೦೫

ವಚನ: ಅಂತೆನಿಸಿ ನಿಖಿಳಜಗದಳಂಕರಣಮುಂ ಭವ್ಯಗಣಶರಣಮುಮಾಗಿ ಸಮಸ್ತ ವಾಸ್ತುವಿದ್ಯಾಶ್ರಯಣನಪ್ಪ ವೈಶ್ರವಣಂ ಮಣಿಮಯ ಸಮವಸರಣಮಂಡಳಮನಾಖಂಡಳನಾಜ್ಞೆಯಿಂ ವಿಗುರ್ಬಿಸುವುದುಂ

ಕಂದ : ಮಿಗೆ ಮೋಕ್ಷಪುರಕೆ ಪೋಪು
ಜ್ಜುಗದಿಂ ಶ್ರೀಧರ್ಮನಾಥಪತಿ ಬಿಡಿಸಿದ ಶೋ
ಭೆಗೆ ನೆಲೆ ಪೊಱಗೆಯ್ದಿದನೆನೆ
ಸೊಗಯಿಸಿದುದು ಸಮವಸರಣ ಧರಣೀವಳಯಂ ೨೦೬

ಜಿನತನುವಿಂ ದ್ವಿಷ್ಟದ್ಗುಣ
ಮೆನಿಕಂ ವರಚೈತ್ಯವೃಕ್ಷಮಂಡಪಗೋಪುರ
ಘನಹರ್ಮ್ಯವಸತಿಕಾಸ್ತೂ
ಪನಿಚಯಮುನ್ನತಿಕೆಯಾಗಮುಜ್ಜ್ವಳ ಮತದಿಂ ೨೦೭

ಸುತ್ತಂ ಬಳಸಿದ ಕೋಟೆಗ
ಳುತ್ತಮವೇದಿಗಳ ಬಳಗದುನ್ನತಿ ಬಿಡದೆ
ರ್ಹತ್ತನುವಿಂ ನಾಲ್ಮಡಿ ಭಾ
ಸ್ವತ್ತೋರಣಮುಮದಱನಿನಿತಕ್ಕಧಿಕಂ ೨೦೮

ಅಂತರ್ಮುಹೂರ್ತದೊಳಗನಿ
ತುಂ ತೆಱಪಿನ ಸಮವಸರಣಮುಂ ಪೊಕ್ಕು ತೊಳ
ಲ್ದಂತಾಗಳೆ ಪೊಱಮಡುವರ್
ಸಂತಸದಿಂದೆಲ್ಲರೆಯ್ದೆ ಜಿನನತಿಶಯದಿಂ ೨೦೯

ಪುಗೆ ಪಸಿವುಂ ನೀರಳ್ಕೆಯು
ಮುಗಲ್ವುದು ಚಿತ್ತಾನುರಾಗಮಪ್ಪುದು ಸದ್ದೃ
ಷ್ಟಿಗಳಿಂಗೆ ಮತ್ತಭವ್ಯಾ
ಳಿಗಳಿಂ ನವಗೋಚರಂ ಮಹಾಸಭೆ ಜಿನನಾ ೨೧೦

ವಾರಿಧಿಯಂತಿರೆ ಪರಿಖಾ
ನೀರಂ ವರವಜ್ರವೇದಿಯಂತಿರೆ ತತ್ಪ್ರಾ
ಕಾರಂ ಜಿನಪತಿ ಮೆಱೆತದಂ
ಮೇರುವೆನಲ್ ಜಂಬು[1][ದೀ][1]ಪದಂತೆಸೆದುದದುಂ ೨೧೧

ವಚನ : ಇಂತು ಕುಬೇರ ವಿರಚಿತ ಸಮವಸರಣಮತಿರಮಣೀಯಮಾಗಿರ್ಪುದು ಮನ್ನೆಗಮಿತ್ತಲಾ ಧರ್ಮನಾಥನ ಕೇವಲಜ್ಞಾನೋತ್ಪತ್ತಿಲಕ್ಷಣ ಚತುರ್ಥಕಲ್ಯಾಣ ಪರಿಸೂಚನಾಕಾರಣಮಾಗಿ

ಕಂದ : ಆನಕದ ಶಂಖದುರುಪಂ
ಚಾನನದ ಸುವರ್ಣಘಂಟೆಯು ಸ್ವನಮಕೃತಂ
ವಾನವ್ಯಂತರಕ ಜ್ಯೋ
ತಿರ್ನಾಕದೊಳೊಗೆಯಲಱಿದರವರೊರ್ಮೊದಲೊಳ್ ೨೧೨

ಮಹಾಸ್ರಗ್ಧರೆ
ಧರಣೇಂದ್ರಂ ಮುಖ್ಯಮಾಗಿರ್ದಹಿಗಳ ಗಡಣಂ ವ್ಯಂತರೇಂದ್ರಂ ದಲಗ್ರೇ
ಸರಮಾಪ ವ್ಯಂತರಾಳಿದ್ಯುಮಣಿ ಹಿಮಗು ಮುಂತಾದವರ್ ಜ್ಯೋತಿಗಳ್ ನಿ
ರ್ಜರರೀಶಾನೇಂದ್ರಪರ್ಯರ್ರ್ ನಿಜನಿಜನಿಳಯಂ ಪಾಳದೆಂಬಂತೆ ಬಂದರ್
ನೆರೆದಾ ಸೌಧರ್ಮದೇವೇಂದ್ರನ ಮಣಿನಿಳಯಕ್ಕುತ್ಸುಕ್ಯದಿಂದಂ ೨೧೩

ವಚನ : ಬಳಿಯಮನೇಕಚ್ಛಂದದ ಪೊಂದೊಡವುಗಳಿನಂದಂಬಡೆದಿಂದ್ರಾಣಿಯೊಳೊಂದಿ ಪುರಂದರಂ ಪೊಱಮಟ್ಟು

1 ದ್ವೀ (ಕಗಜ)

ಮಹಾಸ್ರಗ್ಧರೆ

ಗಗನಂ ಚಂಚದ್ವಿಮಾನಾವಳಿಗಳ ಬೆಳಗಿಂ ತುಂಬುವಂತೆಂಟುದಿಕ್ಕೋ
ಹೆಗಳಂ ದಿಂಕಿಟ್ಟು ತೋರ್ಪಂತನಿಮಿಷವನಿತಾಗೀತದಿಂ ಭೂಮಿಯೆಲ್ಲಂ
ಮಿಗೆ ಚಲ್ಲುತ್ತಿರ್ಪ ಮಂದಾರದ ಕುಸುಮಸಮೂಹಂಗಳಿಂ ಮುಚ್ಚುವಂತೆ
ದ್ವಿಗುಣಾನಂದಂ ಸುರೇಂದ್ರಂ ಸುರಬಲಸಹಿತಂ ಬಂದನೈರಾವತಸ್ಥಂ ೨೧೪

ವಚನ : ಆ ಸಮಯದೊಳ್

ಉತ್ಪಲಮಾಲೆ

ನೇಸಱ ತೇರಗಾಲಿ ನಡೆಯಲ್ ಪಥಮಿಲ್ಲೆನೆ ಕೂಡೆ ತುಂಬಿಕೊಂ
ಡಾಸುರಮಾದ ಸತ್ತಿಗೆಗಳೋಳಿಗಳಿಂ ಬಿಡದಲ್ಲಿಗಲ್ಲಿಗಂ
ಬೀಸುವ ಚಾಮರಂಗಳಿನತೀವಕುತೂಹಳಮಾಗಿ ಬಂದುದಾ
ವಾಸವಮುಖ್ಯಮಾದ ಚತುರಂಗದ ದೇವನಿಕಾಯಸೈನಿಕಂ ೨೧೫

ಕಂದ : ನಳನಳಿಸಿ ಪೊಳೆದು ಮಿಳಿರ್ವಂ
ತೆಳೆಮಿಂಚುಗಳೋಳಿ ಗಗನತಳರಂಗದೊಳು
ಜ್ವಳಿಸುವ ಸುರನರ್ತಕಿಯರ
ಬಳಗಂ ಸುಳಿದಾಡಿದತ್ತು ಗೀತಾನುಗತಂ ೨೧೬

ಮತ್ತೇಭವಿಕ್ರೀಡಿತ

ಪದೆಪಿಂಗಾಶ್ರಯಮಾದ ಶೋಣಮಣಿದೀಪಶ್ರೇಣಿಯಂ ತಳ್ತು ತಾ
ಳ್ದಿದ ಮಂದಾರದಳಪ್ರಸೂನಘನಮಾಳಾಜಾಳಮುಂ ಕೂಡೆ ತಾ
ಳ್ದಿದ ಗೀರ್ವಾಣನಿವಾಸಿನೀಸಮುದಯಂ ಕಣ್ಗೊಂಡುದು ಜ್ಯೋತಿರಂ
ಗದ ಮಾಲ್ಯಾಂಗದ ಕಲ್ಪವೃಕ್ಷದ ಸಮೂಹಂ ತಾಂ ಬರುತ್ತಿರ್ಪಿನಂ ೨೧೭

ಕಂದ : ಗಗನಕ್ಕವಗಾಹನಮೆಂ
ಬ ಗುಣಂ ದಿಟಮಲ್ಲದಿರ್ದೊಡೆಯ್ದೆ ಬರುತ್ತಿ
ರ್ಪಗಣಿತ ಸಮಸ್ತಸುರಸೇ
ನೆಗೆ ತೆಱಪಂ ಕೊಡುವ ಶಕ್ತಿಯೆಂತಾದಪುದೋ ೨೧೮

ವಚನ : ಮತ್ತಂ ಶತಕ್ರತು ಮುಂತಾದ ಸಕಳಚತುರ್ನಿಕಾಯದೇವರ್ಕಳೆಲ್ಲಂ ನೆರೆದು ಧರ್ಮನಾಥನೆಂಬರ್ಹತ್ಪರಮೇಶ್ವರಂಗೆ ವಿಮಳಕೇವಲಜ್ಞಾನೋದಯಮೆಂಬ ಚತುರ್ಥಕಲ್ಯಾಣಪೂಜಾಸಮುತ್ಸವಂ ನಿರ್ವರ್ತಿಸಲೆಂದು ಬರುತ್ತುಮಿರ್ಪ ಪೊತ್ತಿನೊಳ್ ತುಮುಳಕೋಳಾಹಳಂಗೊಂಡು ಕಡುಸಂಭ್ರಮದಿಂ ನಿಳಿಂಪರಾವಳಿ ಸುಳಿದು ಸೂಸುವ ವಾಸಚೂರ್ಣದ ಸುತ್ತಲುಂ ಸುರಿವರಲ ಬಲ್ಸರಿಯ ಮೊಳಗುವಡೆವ ತೂರ್ಯದ ರವವ ತೊಳಗುವ ಕನ್ನಡಿಯ ಕಳಶದ ಪಾಡುವ ಗಂಧರ್ವದೇವರ ಕೂಡುವ ತಾಳಲಯಭೇದವ

ಕುಣಿದಾಡಿ ನಗಿಸುವ ವೈತಾಳಿಕವೇಷದ ವೈಮಾನಿಕದೇವ ವೈಸಟ್ಯದ ವೈಕುರ್ವಣದ ಗುರ್ವು ಕೊರ್ವುವಡೆದು ವಿಚಿತ್ರಮಾಗಿ ಪ್ರಭವಿಸಲಭಿನವ ಚತುರ್ಥಕಲ್ಯಾಣಸಮುರ್ಪಣಾ ಕರಣ ರಣರಣಕಪರಿಣತವದಂತಃಕರಣ ನಿರವಶೇಷದೇವದೇವೀಯಾತ್ರಾಪ್ರಭಾವನಾ ವೈಭವಮಹಾನುಭಾವಂ ವಿಸ್ಮಯಮುಮಂ ಜನಿಸುತ್ತುಮಿರೆ

ಮಹಾಸ್ರಗ್ಧರೆ

ಅತಿಚಿತ್ರಂಬೆತ್ತ ನಾನಾನವಮಣಿಮಯವಿಸ್ಫಾರಸೈಜಪ್ರಭಾಳೀ
ಸ್ಫುರತ್ತಾವತ್ರಗೋತ್ರಂಗಳೊಳತಿಶಯದಿಂ ತುಂಬಿಕೊಂಡಿರ್ದ ಗಂಧಾ
ಕ್ಷತನೈವೇದ್ಯ ಪ್ರದೀಪೋತ್ಪಳಕುಳಮುಕುರಾಧ್ಯರ್ಚನಾಯೋಗ್ಯ ನವ್ಯ
ಸ್ತುತ ದಿವ್ಯದ್ರವ್ಯಮಂ ತಾಳ್ದಿದ ಸುರವನಿತಾಕೋಟಿ ಬಂದತ್ತು ಸುತ್ತಂ ೨೧೯

ರುಚಿರಾಳಂಕಾರ ಸಾರೋಜ್ಜ್ವಳಮಣಿಕಿರಣಾಪೂರದೊಳ್ ಕೂಡಿದಂಗ
ಪ್ರಚುರಚ್ಛಾಯಾವಿಶೇಷಂ ಪುದಿದು ಗಗನದೊಳ್ ತೀವಿ ತುಳ್ಕಾಡಲಾಗಳ್
ವಿಚಳನ್ನಾನಾಪತಾಕಾಪಟಪಟಳತರಂಗತ್ತರಂಗಂ ತುರಂಗ
ಪ್ರಚಯೋದ್ಯನ್ನಕ್ರಚಕ್ರಂ ನಡೆದುದಮರಸೇನಾಸಮುದ್ರಂ ಸುಭದ್ರಂ ೨೨೦

ವಚನ : ರುತುಮಾನದ ದ್ವಾರಕುಟ್ಯಂ ಮೊದಲ್ಗೊಂಡು ಧೂಳೀಸಾಳಂಬರ ಮಂತರಾಳ ಚಕ್ರವಾಳಸ್ಥಳದೊಳೆಲ್ಲಂ ಕಿಕ್ಕಿಱಿಗಿಱಿದಿಕ್ಕೆಲಂಬಿಡಿದೆರಡೆರಡಾಗಿ ಮಾಲೆ ಗೊಂಡು ಪರಿಪರಿಯ ಪಂತಿರೂಪದಿಂ ನೀಳ್ದು ನಿಮಿರ್ದು ವಿಯತ್ತಳದೊಳ್ ತುಂಬಿ ಬರುತ್ತು ಮಿರ್ದ ನೂತ್ನರತ್ನಮಯ ನಾನಾವಿಧವಿನೂಯವಿಮಾನವಿತಾನ ಜೌಜಾಯಮಾಯ ನಿರತಿಶಯ ಕಿರಣಜಾಳಮೇಳಾಪರಂ ಗಗನಲಕ್ಷ್ಮೀದೇವೇಂದ್ರಸಮಾಗಮನ ಸಂತೋಷದಿಂ ದೆತ್ತಿಸಿದ ಮಕರತೋರಣದೋರಣಿ ವಿಳಾಸಮುಮನನುಕರಿಸುತ್ತುಮಿರ್ಪುದುಂ

ಚಂಪಕಮಾಲೆ

ಜಯಜಯ ಘಾತಿಕರ್ಮ ತರುಮೂಲವಿಶೋಷಣ ನಂದನಂದ ಭೂ
ತ್ರಯಜನವಂದ್ಯ ಕೇವಳವಿಬೋಧವಿಭೂಷಣಯೆಂಬ ಘೋಷಣಂ
ನಯದಿನಶೇಷದಿಕ್ತಟಕುಟೀರಕಕೋಟರದಲ್ಲಿ ದೇವಕೋ
ಟಿಯ ಪಟಹಸ್ವನಂಬೆರಸು ತುಂಬಿ ತುಳುಂಕುತುಮಿರ್ದುದಾಕ್ಷಣಂ ೨೨೧

ವಚನ : ಇಂತನಣುತರ ಪ್ರಭಾವದಿಂ ಶಚೀರಮಣನಾ ಸಮವಸರಣ ಪರಿಸರಣ ಪ್ರದೇಶಕ್ಕವತರಿಸುವುದುಂ ತೊಟ್ಟನೆ ಕಟ್ಟೆದಿರೊಳ್

ಮಹಾಸ್ರಗ್ಧರೆ

ಪಿರಿದಾದ್ಯೈವಣ್ಣದಿಂ ಚಿತ್ರಿಸುತುಮಖಿಳದಿಗ್ಭಿತ್ತಿಯುಂ ರಾಜನಂ ಭಾ
ಸುರಮಧ್ಯಸ್ಥಾನದೊಳ್ ತಾಳ್ದು ತುಮುರುದುರಿತಾರಾಶಿನಿರ್ನಾಶಮುಂ ಮೂ
ಧರೆಗಂ ಸಾಱುತ್ತುಮಿರ್ಪಾ ಸಮವಸರಣಮಂ ಕಂಡು ಸಂತೋಷಿಸುತ್ತುಂ
ಪರಿವೇಷಂಬೆತ್ತ ಶೀತದ್ಯುತಿ ರುಚಿರಮಹಾಬಿಂಬದಂತಿರ್ದುದೆಂದಂ ೨೨೨

ವಚನ : ಎಂದಿಕ್ಕೆಲದ ದೇವರ್ಕಳೊಡನೆ ನುಡಿಯುತ್ತುಂ ಬಂದು ರಮಣೀಯ ಸಮವಸರಣಲಕ್ಷ್ಮಿಗೆ ದೃಷ್ಟಿದೋಷಪರಿಹರಣಕಾರಣಮಾಗಿ ವಿಚಿತ್ರವರ್ಣ ಸಂಕೀರ್ಣ ಮಂಜಿಷ್ಠಿಕಾ ಕಾಂಡಪಟಮನವಟಯಿಸಿದಂತೆ ಸುತ್ತಲುಂ ವಿಮಾನಪಂತಿಗಳಂ ನೆಲೆಗೊಳಿಸಲ್ವೇಳ್ದು ತನ್ನಯ ಸಂಚಳತ್ಪಾಣಿಪಲ್ಲವ ಸಮುಲ್ಲಸನದಿಂ ಪಂಚಮಹಾಶಬ್ದಪರಿಘೂರ್ಣನ ಕೋಳಾಹಳಮಂ ನಿಲಿಸಿ

ಮಹಾಸ್ರಗ್ಧರೆ

ಬಳಿಯಂ ಛತ್ರಧ್ವಜಂ ಚಾಮರಮಿವು ಮೊದಲಾಗಿರ್ದುವಂ ರಾಜಚಿಹ್ನಂ
ಗಳನಾ ಸಂಕ್ರಂದನಂ ದೂರದೊಳಿರಿಸಿ ಜಿನಾಸ್ಥಾನಮಂ ನೋಳ್ಪಲಂಪ
ಗ್ಗಳಮಾಗಲ್ ದೇವದೇವೀತತಿವೆರಸಿ ಕರಂ ನೋಡುತುಂ ಬಣ್ಣಿಸುತ್ತುಂ
ಜ್ವಳನಾನಾಚಿತ್ರಶೋಭಾಸಮವಸರಣಮಂ ಪ್ರೀತಿಯಿಂದಂದು ಪೊಕ್ಕಂ ೨೨೩

ಕಂದ : ಮೂಡಣ ದಿಕ್ಕಿನ ಬಾಗಿ
ಲ್ಮಾಡದ ಮುಂದಣ ವಿಯತ್ತಳಾಂಗಣದೊಳ್ ಪೆಂ
ಪೋಡದಸಿತಕುಂಜರದೊಡ
ಗೂಡಿರಿಸಿದನೆಯ್ದೆ ತನ್ನ ಪರಿಕರಮಸಿತಂ ೨೨೪

ಇಂದ್ರಾಣಿಯೊಳೊಂದಿದ ದೇ
ವೇಂದ್ರಂ ನಿಖಿಳಾಮರಾಮರೀಜನಸಹಿತಂ
ಗಂಧಕುಟೀ ಶಿಬಿಗೆಱಗುತು
ಮ್ಮೈಂದ್ರೀದಿಗ್ವೀಥಿವಿಡಿದು ನಡೆತಪ್ಪಾಗಳ್ ೨೨೫

ವಚನ: ಅಂತು ನಡೆವ ಸಹಸ್ರಾಕ್ಷನ ಸಹಸ್ರಲೋಚನ ಮರೀಚೀನಿಚಯಂಗಳೊಡನೊಡನನೇಕ ನಾಕಿನಾಯಕನಿಕಾಯ ಕೇಕರಮಯೂಖ ಮಾಳಿಕೆಗಳುಮಖಿಳನಿಳಿಂಪ ವಿಳಾಸಿನೀಸಂಕುಳಸಮುತ್ತರಳತರನಯನ ಕರನಿಕರಂಗಳೆಳಸಿ ಬಳಸಿ ತಪಕಿಸಿ ಪಳೆಪ್ಪಿಯುದ್ದ ಗೋಪುರವೇದಿಕಾಪ್ರಾಕಾರದಾಕಾರಮನೇಕವರ್ಣಮಾಗಿ ಧವಳಿಸೆಯುಂ ಮಾನಸ್ತಂಭಂಗಳಂ ನಿಮಿರ್ದನೀಳ್ದ ಪೂಮಾಲೆಗಳಾಲಂಬನದಿನಂದಂಬಡೆದಂತಿರಳಂಕರಿಸೆಯುಂ ಪ್ರಾಸಾದ ಚೈತ್ಯನಿಳಯಂಗಳ ಬಳಗಮನೊಳಕೊಂಡಚಕ್ರವಾಳಭೂಮಿಯುಂ ಮೂವಳಸುವಳಸಿಯುಂ ಜಳಖಾತಿಕಾಕಳಹಂಸೀಕುಳದ ಬಳಿಸಂದು ಪೊಳೆದಾಡೆಯುಂ ವಲ್ಲೀವನಾವನಿಯ ಮಱಿದುಂಬಿಯ ಬಂಬಲೊಡನೆ ಪಱಿಮಱಿಯಾಡಿಯುಮುಪವನಮಹಿಯನಪರಿಮಿತ ಹಿಮಾನೀಪರಿಪಿಹಿತಮೆಂಬಂತೆ ಮಾಡಿಯುಂ ಧ್ವಜಭೂಮಿಯ ಬಳಯಿಗೆಗಳೊಡನೊಡನೆ ಬಳೆದು ಬಳಸೆಯುಂ ದಶಾಂಗಕಲ್ಪವೃಕ್ಷಸಂಡಮನಮಂ ಮಾಲ್ಯಾಂಗಮುಮೆಂಬ ಸಂದೆಗಮೊಳೊಂದಿಸೆಯುಂ ಸಮುತ್ತುಂಗಮಂಗಳಸ್ತೂಪಂಗಳಂ ಧವಳಕಮಳದಳಾಳಂಕೃತಂಗಳೆಂಬ ಸಂಕೆಯುನನುಕರಿಸೆಯುಂ ಸಂಗೀತಹರ್ಮ್ಯಂಗಳೋಳಿಯುಂ ಪೊಸತಾಗಿ ಸೊದೆವಳಿ

ದಂತೆ ಕಣ್ಗೊಳಿಸೆಯುಂ ದ್ವಾದಶಕೋಷ್ಠಂಗಳ ಗೋಪುರಾಗ್ರಮಣಿಕಳಶಪ್ರಭಾಪ್ರಭಾವ ಪಲ್ಲವದೊಡನೆ ಚಲ್ಲವಾಡಿಯುಂ ಗಂಧಕುಟಿಯನಸಮಯಾಮುಂದಚಂದ್ರಿಕಾಸಂದೋಹ ಪ್ರವಾಹದೊಳವಗಾಹವಿರಿಸೆಯುಂ ಪರಮೇಶ್ವರನ ಪರಮೌದಾರಿಕ ಶರೀರಮನಪಾರ ಸಾರಭೂತಿ ಕ್ಷೀರೋದಧಾರಾಪೂರದಿನಭಿಷೇಕದಾಡಂಬರಮನೊಡರ್ಚಿದಂತೆ ರಂಜಿಸೆಯುಂ ಕಣ್ತಣಿವಿನಂ ವಿನೋದವಿಕಸಿತ ಮುಖಕಮಳನಾಗಿಯಾ ಪುಲೋಮಜಾಮನೋರಮಣಂ ತನ್ನಯ ಬೆಸದಿಂ ಮುನ್ನಮೆ ಕಿನ್ನರನುನ್ನತಭಕ್ತಿಯಿಂ ಸಮೆದ ಸಮವಸರಣಮುಂ ನೀಡುಂ ನೋಡಿ

ಚಂಪಕಮಾಲೆ

ಇದಱ ವಿಳಾಸಮಂ ಪೊಗಳ್ವಡೆನ್ನಳವಲ್ತು ವಿಚಿತ್ರಚಿತ್ರಸಂ
ಪದದಿವಿಂತುಟೆಂತುಟು ಸುವಿದ್ಧದ ಪದ್ಧತಿಯಿಂತುಟೆಂತುಟೆಂ
ಬಿದನುರಗೇಂದ್ರನುಂ ಕಮಳಸಂಭವನುಂ ಪೊಗಳಲ್ಕಮಾಱರಿ
ನ್ನಿದಱತಿಶೋಭೆಯಿಂದೆ ಮಿಗಿಲಾದಭಿಶೋಭೆಯದುಂಟೆ ಲೋಕದೊಳ್ ೨೨೬

ವಚನ : ಎನುತ್ತುಂ

ಸ್ರಗ್ಧರೆ

ರೋಮಾಂಚಂ ಮಿಂಚ್ಯೊಳೀಳಲ್ ಬಗೆಯೊಳೊಗೆಯೆ ಕೌತೂಹಳಂ ನೋಡಿ
ನೋಡಲ್
ಪ್ರೇಮಂ ಕೈಮಿಕ್ಕು ಕಣ್ಣಾಸಿರಮುಮನಿರದೋಲಾಡಿಸುತ್ತಿರ್ದನಾ ಸು
ತ್ರಾಮಂ ಸಂತೋಷಸ್ರೀಯುಷಪರಸದೊಳಧಿಕಂ ತೂಗುತುಂ ರತ್ನರೋಚೀ
ಸ್ತೋಮೋದ್ಯನ್ಮೌಳಿಯಂ ಮೆಚ್ಚಿನ ಭರಪಸದಿಂದೋಸರಂದೋಱಿದನ್ನಂ ೨೨೭

ಚಂಪಕಮಾಲೆ

ಕೆದಱಿದ ಚೆಲ್ವ ಪೂವಲಿಯನಾಗಿಸೆ ಪಾದನಖಾಂಶು ತೊಟ್ಟ ರ
ನ್ನದ ಬೆಳಗಲ್ಲಿ ಪೊತ್ತಿಸಿದ ದೀವಿಗೆಯಂದದಿನೊಪ್ಪಿ ಮಾಳ್ಪವೊಲ್
ಪಡೆದು ಗೃಹಾರ್ಚನಾ ರಚನೆಯಂ ಸುರನಾಯಕನೊಲ್ದು ಮೂಱುಸೂಳ್
ತ್ರಿದಶದೊಳೊಂದಿ ಗಂಧಕುಟಿಯಂ ಬಲಗೊಂಡನತೀವ ಭಕ್ತಿಯಿಂ ೨೨೮

ವಚನ : ಅಂತು ತ್ರಿಪ್ರದಕ್ಷಿಣಂಗೆಯ್ದು

ಕಂದ : ಸಾಸಿರ ಕಣ್ಗಳ ಪಂತಿಕೆ
ಲೇಸಾದುದು ಬರೆದ ಲಿಪಿಗಳೋಳಿಯ ತೆಱದಿಂ
ವಾಸವನಿರ್ದಂ ಮಣಿಮಯ
ಶಾಸನಮಂ ನಿಲಿಸಿದಂತೆ ಬಾಗಿಲ ಕೆಲದೊಳ್ ೨೨೯

ವಚನ: ಅಂತು ನಿಂದು

ಮಹಾಸ್ರಗ್ಧರೆ

ಜಳಮಂ ಪೊಂಗುಂಬದೊಳ್ ಸಂಗಳಿಸು ಮಳಯಜಕ್ಷೋದಮಂ ತೀವು ಪಾತ್ರಂ
ಗಳೊಳಂ ಮತ್ತಕ್ಷತಕ್ಷಾಳನಮನೆಸಗು ಮಾಲ್ಯಂಗಳಂ ಸೈತೆಮಾಡು
ಜ್ವಳನಮಾಣಿಕ್ಯಪ್ರದೀಪಂಗಳನಳವಡಿಸುದ್ಧೂಪಮಂ ಕೂಡು ನಾನಾ
ಫಳಮಂ ತುಂಬೆಂದು ಪೇಳ್ದಂ ಸುರಪರಿವೃಢನಿಂದ್ರಾಣಿಗಾನಂದದಿಂದಂ ೨೩೦

ವಚನ: ಇಂತು ಪೇಳ್ದು ನ[1]ಸೇ[1]ರು ಮಂದಾರ ಪಾರಿಜಾತದಲ್ಲಳಂ ತನ್ನಯ ಕರತಳಪುಟದೊಳ್ ತೆಕ್ಕನೆ ತೀವಿಕೊಂಡು

ಮಹಾಸ್ರಗ್ಧರೆ

ಕಡುಥಾಳಂಬೆತ್ತು ತೋರ್ಪಾರತಿಗಳ ಹರಿಯಾಣಂಗಳಂ ದೇವಿಯರ್ ಸಂ
ಗಡದಿಂದಂ ತಾಳ್ದಿ ಸುತ್ತಂಬರೆ ಪಲತೆಱದರ್ಚನಾದ್ರವ್ಯಮಂ ನೇ
ರ್ಪಡೆ ಹಸ್ತಾಗ್ರಂಗಳಿಂದಂ ಪಿಡಿಪೊಡವರೆ ದೇವರ್ಕಳೆಲ್ಲಂ ಸುರೇಂದ್ರಂ
ಸುಡಿಯುತ್ತುಂ ತಾಂ ನಿಷದ್ಯಾಕ್ತಿಯುನೊಳಗೆ ಮಹೋತ್ಸಾಹದಿಂ ಬಂದು ಪೊಕ್ಕಂ ೨೩೧

ವಚನ: ಅಂತು ಬಂದೊಳಗಂ ಪೊಕ್ಕು ತನ್ಮಧ್ಯಸಮುದ್ಭಾಸಿತಸಿಂಹಾಸನಮನಳಂಕರಿಸಿರ್ದ ಲೋಕತ್ರಯೈಕಸ್ವಾಮಿಯ ಶ್ರೀಪಾದಪೀಠೋಪಕಂಠದೊಳ್ ಪುಷ್ಪಾಂಜಳಿಕ್ಷೇಪಮೊಡನೆ ಸರ್ವಾಂಗಪ್ರಣಮನಮನೊಡರ್ಚಿ ಹರ್ಷೋತ್ಕರ್ಷಪುಳಕಸಂಕುಳಂ ಮುನ್ನಮೇಳೆ ಬಳಿಯಂ ತಾನೆಳ್ದು ಸಮುಚಿತಪ್ರದೇಶದೊಳ್ ನಿಂದು ಕಿಂಚಿನ್ನಮಿತಮಣಿಮಕುಟನುಮಾ ಮುಕುಳಿತಕರಸರೋಜಪುಟನುಮನುವಿಕಸಿತಾಧರೋಷ್ಠತಟನುಮಾಗಿ ಧರ್ಮನಾಥನ ಸಮ್ಮುಖದೊಳ್ ನಿಂದು ಅಷ್ಟಕಂಗಳಿಂ ಪೇಳಿಹನು

ಶಾರ್ದೂಲವಿಕ್ರೀಡಿತ

ಶ್ರೀಯಂ ಶ್ರೇಯಮುಮಾಯುಮಂ ವಿಭವಮಂ ಸತ್ಕೀರ್ತಿಯಂ ಮೂರ್ತಿಯಂ
ದೀಯಂ ಬೀಯದ ಪೆಂಪನೀಪಧಿಕಸತ್ವಂ ನಿನ್ನೊಳುಂಟೆಂಬಭಿ
ಪ್ರಾಯಂ ಸೋಯದೆ ಪುಟ್ಟೆ ಮನ್ಮನದೊಳಂ ನಿನ್ನಂಘ್ರಿಯಂ ಪೂರ್ದಿಪೆಂ
ಹೇಯಾದೇಯವಿವೇಕಮಾದನಗೆ ನೀಂ ಶ್ರೀಧರ್ಮತೀರ್ಥೇಶ್ವರಾ ೨೩೨

ಮತ್ತೇಭವಿಕ್ರೀಡಿತ

ಪರಮಧ್ಯಾನವಿಪಾಕದಿಂ ಸಮುದಮಂಗೆಯ್ದಾಕ್ಷಣಂ ಪುಟ್ಟಿದಂ
ತಿರೆ ನಿರ್ನಾಶಮುದಾಯ್ತು ಘಾತಿತಿಮಿರಂ ಮೂಲೋಕಮಂ ವ್ಯಕ್ತಮಾ
ಗಿರೆ ಮಾಳ್ಪಂದಧಿಕಪ್ರಕಾಶಮೊಗೆದೊಪ್ಪುತ್ತಿರ್ದುದೀ ಶಕ್ತಿಯ
ನ್ಯರೊಳೇಂ ತೋರ್ಪುದೆ ನಿನ್ನೊಳಲ್ಲದೆ ದಿಟಂ ಶ್ರೀಧರ್ಮತೀರ್ಥೇಶ್ವರಾ ೨೩೩

1 ಮೆಯ (ಗಚ)

ವಿಳಸತ್ಕೇವಳಬೋಧಲಕ್ಷ್ಮಿಯೊಡಸಂದಿರ್ದೈಕ್ಯಮಂ ತಾಳ್ದಿಯು
ಗ್ಗಳಮಾಗೊಪ್ಪುವ ನಿನ್ನ ರೂಪುಮನಿದಂ ಸ್ತ್ರೀರೂಪಮೆಂದೆಂಬೆನೋ
ಜ್ವಳರೋಚಿಃಪುರುಷಸ್ವರೂಪಮಿದು ಮತ್ತಿಂತೆಂಬೆನೋ ಭೇದಮಂ
ತಿಳಿಯಲ್ಬಾರದಗನ್ಯರೂಪನದಱಿಂ ಶ್ರೀಧರ್ಮತೀರ್ಥೇಶ್ವರಾ ೨೩೪

ಜಗಮೆಲ್ಲಂ ನೆಲಸಿತ್ತು ನಿನ್ನಯ ಮಹಾಕೈವಲ್ಯವಿಜ್ಞಾನದೊಳ್
ಮಿಗುವಾ ಜ್ಞಾನಮುಮೆಯ್ದೆ ನಿನ್ನೊಳಗೆ ಬಂದಿರ್ದತ್ತು ನೀನುಂ ಸುಭ
ಕ್ತಿಗೆ ಸಂದೆನ್ನಯ ಚಿತ್ತದಲ್ಲಿ ನೆಲೆಗೊಂಡಿರ್ದಪ್ಪೆ ತತ್ಕಾರಣಂ
ಜಗದೊಳ್ ಮತ್ತೆನಗಾವುದೇನರಿದು ಪೇಳ್ ಶ್ರೀಧರ್ಮತೀರ್ಥೇಶ್ವರಾ ೨೩೫

ಅಱಿವುತ್ತಿರ್ದಪೆ ಮೂಜಗಂಗಳನಿಸಂ ನಿನ್ನಿನ್ನನಾರುಂ ಸಮಂ
ತಱಿಯರ್ ಮತ್ತಮುಮೆಲ್ಲಮಂ ಬಿಡದೆ ನೀಂ ಕಾಣುತ್ತಮಿರ್ದಪ್ಪೆ ಕಂ
ಡಱಿಯರ್ ನಿನ್ನನದಾರುಮೆಲ್ಲರೆಡೆಯೊಳ್ ನೀನಿರ್ದೆ ನಿನ್ನಲ್ಲಿ ಮೇಣ್
ತಱಿಸಂದಿರ್ದವರಾರುಮಿಲ್ಲ ಕುತುಕಂ ಶ್ರೀಧರ್ಮತೀರ್ಥೇಶ್ವರಾ ೨೩೬

ಪಡೆವೆಂ ತಪ್ಪದೆ ಮೋಕ್ಷಸೌಖ್ಯಪದಮಂ ತ್ವದ್ಭಕ್ತಿಯಿಂದಂತದಾ
ದೊಡಮಾ ನಿನ್ನಯ ಪಾದಸೇವೆ ಬಳಿಕಂ ಕೈಸಾರದೆಂದುಬ್ಬೆಗಂ
ಬಡುತಿರ್ದಪ್ಪುದು ಮನ್ಮನಂ ದಲದಱಿಂ ತ್ವತ್ಸೇವನಾಸೌಖ್ಯಮಾ
ಗಡೆ ಮಚ್ಚಿತ್ತದೊಳುಂಟುಮಾಳ್ಕೆ ತಣಿಪಂ ಶ್ರೀಧರ್ಮತೀರ್ಥೇಶ್ವರಾ ೨೩೭

ಶಾರ್ದೂಲವಿಕ್ರೀಡಿತ

ಕೆನ್ನಂ ನುಣ್ಣೆಳಗೆಂಬ ಸಾರಜಳದಿಂದಂ ತುಂಬಿತುಳ್ಕಾಡುತುಂ
ಚೆನ್ನಂಬೆತ್ತ ಸಭಾಸರೋವರದ ಮಧ್ಯಸ್ಥಾನದಲ್ಲೊಪ್ಪುವೀ
ನಿನ್ನ ಶ್ರೀಪದಪದ್ಮದಲ್ಲಿ ನೆಲೆಗೊಂಡಿರ್ಕಾವಗಂ ಪ್ರೀತಿಯಿಂ
ದೆನ್ನೀ ಮಾನಸಮೆಂಬ ಹಂಸೆ ಪರಮಶ್ರೀಧರ್ಮತೀರ್ಥೇಶ್ವರಾ ೨೩೮

ಮತ್ತೇಭವಿಕ್ರೀಡಿತ

ಕೊಡುವೈ ನಿನ್ನನೆ ಪೂಜಿಪರ್ಗೆ ಸುಖಮಂ ಮತ್ತನ್ಯರಿಂಗಂತದಂ
ಕುಡೆ ನೀನೆಂದೊಡೆ ವೀತರಾಗನೆನಿಪೀ ಕೊಂಡಾಟಮೆಂತೊಪ್ಪಮಂ
ಪಡೆಗುಂ ನೋಳ್ಪಡುಪೇಕ್ಷೆಯಂ ಧರಿಸಿಕೊಂಡಿರ್ದಪ್ಪೆ ಸರ್ವರ್ಗೆ ಕ
ನ್ನಡಿಯಂತೆಯ್ದೆ ಸಮಾನಮಾಗಿ ಪೊಳೆಗುಂ ಶ್ರೀಧರ್ಮತೀರ್ಥೇಶ್ವರಾ ೨೩೯

ವಚನ: ಎಂದನೇಕಪ್ರಕಾರ ಪವಿತ್ರಶತಸಹಸ್ರಂಗಳಿಂ ಸ್ತುತಿಗೆಯ್ದು ಬಳಿಯಂ ನಿರ್ಜರರಾಜಂ ನಿರ್ಜಿತಮನೋಜ ಜಿನರಾಜನ ಪೂಜೆಗುಜ್ಜುಗಿಸಿ ಪುಳೋಮಜೆಯ ಮೊಗಮಂ ನೋಡುವುದುಮಾಕೆ ಗಂಗಾಜಳಸಂಗತ ಗಾಂಗೇಯಮಯ ಸಮುತ್ತುಂಗಮಂಗಳ

ಭೃಂಗಾರಸಂಘಾತಂಗಳಂ ಕುಂಕುಮಪಂಕಸಂಕಳಿತ ಮೇದುರಾಮೋದಪರಿಹ್ಲಾದನೀಯ ಹರಿಚಂದನರಸಕ್ಷೋದಪೂರಿತಮಾದ ಹಾರೀತಕಶುಕ್ತಿಕಾಸಾರಂಗಳಂ ಪ್ರಕ್ಷಾಳಿತಸದಕ್ಷತ ಸ್ವರೂಪಕಳಮಾಕ್ಷತ ರಾಶಿಭಾಸುರ ಕರ್ಕರೀತನವರ್ತುಳಸಾರ್ಥಂಗಳಂ ನಮೇರುಮಂದಾರ ಮಾಳತೀಮೇಳಾಪಮಿಳಿತ ಮದೀಂದ್ರನೀಲಪಟಳಕಪಟಳಂಗಳನುಪರಿಪರಿನಿಹಿತ ಸುಧಾರಸ ಮಧುರ ವಿವಿಧಭಕ್ಷ್ಯೋಪಲಕ್ಷಿತ ಪರಮಾನ್ನಸಾನ್ನಾಯ್ಯ ಪರಿಪೂರ್ಣಸೌವರ್ಣಸ್ಥೂಳ ಸ್ಥಾಲೀಜಾಲಂಗಳುಂ ಪೃಥುಳಕಿರಣಶ್ರೇಣಿ ರಮಣಿತಾಪರಿಣಾಯಮಾನಶೋಣಮಾಣಿಕ್ಯ ನೀರಾಜನಾವ್ಯಾಜವಿಭಾಜಿತ ಮಹಾರಜತರಜತಭಾಜನಸಮಾಜಂಗಳುಂ ಧೂಪಿತಹರಿದ್ವಳ ಯಾಂತರಾಳಪರಿಸ್ಫುರದಗರುಧೂಪಸಮುದ್ದಾಮಧೂಮಸ್ತೋಮ ಸಮಾವೃತಧೂಪ ಕುಂಡಿಕಾಮಂಡಳಿಗಳುಂ ಜಂಬೀರಬೀಜಪೂರಾದಿ ನಾನಾನವೀನ ಕೋಮಳ ಪಕ್ವಫಳಂಗಳಿಂ ತುಂಬಿದ ಡೆಳ್ಳಿಗಳ ಬಳಗಂಗಳಂ ತಂದಪಟೆಯಿಸಿ ನೀಡುವುದುಮವಂ ಕೆಳಿಮುಕೊಂಡು

ಚಂಪಕಮಾಲೆ

ಸುರುಚಿರವಾರಿಯಿಂ ಸುರಭಿಚಂದನಗಂಧದಿನಕ್ಷತಾಕ್ಷತೋ
ದ್ಧುರುತರಪುಂಜದಿಂ ಪರಿಮಳೋನ್ನತಚಾರುಲತಾಂತಮಾಲೆಯಿಂ
ನಿರತಿಶಯಾಮೃತಾನ್ನಚರುವಿಂದೆ ಸಮುಜ್ವಳರತ್ನದೀಪದಿಂ
ನಿರುಪಮಧೂಪಧೂಮಲತೆಯಿಂ ಬಹುನೀಪರಸಸ್ಫಲಂಗಳಿಂ ೨೪೦

ಮಣಿಮಯದಂಡ ಚಾರುಚಮರಂಗಳಿನಾತಪವಾರಣಂಗಳಿಂ
ಘೃಣಿಕುಳಮಗ್ನಚಿತ್ರರಚನಾಭರಣಂಗಳಿನಾತ್ತಶೋಭದ
ರ್ಪಣಕಳಶಂಗಳಿಂ ಪರಮಧರ್ಮಜಿನೇಶ್ವರಪಾದಪದ್ಮಮಂ
ತಣಿವಿನಮೊಲ್ದು ಪೂಜಿಸಿದನಿಂದ್ರನತೀಂದ್ರಸುಪಾಸ್ತಿರುಂದ್ರನಂ ೨೪೧

ವಚನ: ಅದಲ್ಲದೆಯುಂ

ಚಂಪಕಮಾಲೆ

ಚಸ್ತವಿಡುತಿಪ್ಪ ರತ್ನಮಯಭಾಜನದೊಳಗೆ ಪುಣ್ಯತೀರ್ಥವಾ
ರ್ಭರಿತಸುಧಾಂಶುಕಾಂತಕಳಶಕ್ಕೆ ನಿವಾಳಿಸುತಿರ್ಪ ಪಂತಿಗೊಂ
ಡಿರಿಸಿದ ಜೆಲ್ವಮಾಣಿಕದ ಪಜ್ವಳಿಪಾರತಿಗಳ್ಗೆ ಪುಷ್ಪಮಂ
ಜರಿಸಿಗೆ ಲೆಕ್ಕವಿಲ್ಲೆನಿಸಿ ಪೂಜಿಸಿದಂ ಜಿನನಂ ಸುರೇಶ್ವರಂ ೨೪೨

ವಚನ: ಅಂತನೇಕ ಪ್ರಮೇಕದಿವ್ಯಾರ್ಚನಾದ್ರವ್ಯಂಗಳಿನರ್ಥಿವೆರಸರ್ಚಿಸುತ್ತುಮಿರ್ಪಲ್ಲಿ

ಕಂದ: ಪರಮರನಿಸ್ಮಣಿಕಳಶೋ
ತ್ಕರಕಿರಣಂ ಪೀಠದಲ್ಲಿ ನಿಮಿರ್ದುದು ದೂರ್ವಾಂ
ಕುರದರ್ಚನೆಯೆನೆ ಮೌಕ್ತಿಕ
ವಿರಚಿತ ಕಳಶಂ ಸುಶಾಂತಿಧಾರಾಂಬುಮವೊಲ್ ೨೪೩

ಮಱುದುಂಬಿಗಳಾವಳಿ ಬಂ
ದೆಱಗಿರ್ದುದು ಧೂಪಧೂಮಲತಿಕಾಶೋಭೆಯೊ
ಳುಱುವೆಳಗಾಯ್ತು ಳ ಬಳಗಂ
ತಱುಗಿದುದೆಂಬೊಂದು ಶಂಕೆಯಂ ಪುಟ್ಟಿಸುತುಂ ೨೪೪

ವಚನ: ಅಂತನಂತರಮಂತ್ರಪ್ರಮುಖ ಮಹಾಪೂಜಾವಿಧಾನದಿಂ ವಾಕ್ಪೂಜಾವಿಶೇಷದಿ ನಿಖಿಳಾರಾಧ್ಯನ ಚರಣಸರೋಜಸಮಾರಾಧನಂಗೆಯ್ದು

ಮತ್ತೇಭವಿಕ್ರೀಡಿತ

ಮನಮಂ ಯೋಜಿಸಿ ಭಕ್ತಿಯೊಳ್ ನಿಲಿಸಿ ವಾಗ್ವ್ಯಾಪಾರಮಂ ಸ್ತೋತ್ರದೊಳ್
ತನುವಂ ಸೇವೆಯೊಳಂ ನಿಯಾಮಿಸಿ ಸಹಸ್ರಾಕ್ಷಂಗಳಂ ದಿವ್ಯರೂ
ಪನಿರೀಕ್ಷಾಪ್ರವಿಧಾನದಲ್ಲಿರಿಸಿ ಹಸ್ತದ್ವಂದ್ವಮಂ ಪಾದಪೂ
ಜನದುದ್ಯೋಗದ ವೃತ್ತಿಯೊಳ್ ಸಲಿಸಿ ತಾಳ್ದಂ ಜನ್ಮಸಾಫಲ್ಯಮಂ ೨೪೫

ಉತ್ಪಲಮಾಲೆ

ಎಂತಮರೇಂದ್ರನರ್ಚಿಸಿದನಷ್ಟವಿಧಾರ್ಚನೆಯಿಂ ಜಿನೇಂದ್ರನಂ
ಸಂತೊಸದಿಂದಮಾ ತೆಱದೆ ಬಾಹುಬಲಿಪ್ರತಿನಾಯಕಂ ಜಗ
ತ್ಕಾಂತಮೆನಿಪ್ಪ ತನ್ನಯ ಪಟೋಮಯ ಮಂಗಳ ಶಸ್ತ್ರವಸ್ತುವಿಂ
ದಂ ತಣಿಪಂತು ಪೂಜಿಸಿದನಷ್ಟವಿಧಾರ್ಚನೆಪೂರ್ವಮಾಕ್ಷಣಂ ೨೪೬

ಚಂಪಕಮಾಲೆ

ವಿಳಸಿತವಾಙ್ಮಯಂ ಭುಜಬಳೀಯಸಕಮುತ್ತಮವಾರಿಯಾಯ್ತು ಸ
ನ್ಮಳಯಜಮಾಯ್ತು ಧೌತಕಳಮಾಕ್ಷತಮಾಯ್ತು ಸುಪುಷ್ಪಮಾಯ್ತು ಮಂ
ಜುಳಚರುವಾಯ್ತು ದೀಪಮಣಿಯಾಯ್ತು ಧೂಪಮುಮಾಯ್ತು ಸ
ತ್ಫಳಕುಳಮಾಯ್ತು ಧರ್ಮಜಿನರಾಜನ ಪಾದಪಯೋಜಪೂಜೆಯೊಳ್ ೨೪೭

ವಚನ: ಇಂತು ನಿರ್ಭರಭಕ್ತಿಯಿಂ ಬಾಹುಬಲಿಪಂಡಿತದೇವರುಂ ರೂಪಸ್ಥಮೆಂಬ ಧ್ಯಾನದಿಂ ಮನದೊಳನುಷ್ಠಿತ ತತ್ಸ್ವರೂಪರಾಗಿ ವಾಕ್ಪೂಜೆಯನೊಡರ್ಚಿ ಕೃತಕೃತ್ಯತೆಯನೆಯ್ದುವುದುಂ

ಕಂದ: ನವರತ್ನರಾಶಿಗಳಿನೊ
ಪ್ಪುವ ದೇವಾಂಗಾದಿವಸ್ತ್ರತತಿಯಿಂದೆ ಮಹಾ
ನವನಿಧಿಗಳನರ್ಚಿಸಿದಂ
ದಿವಿಜೇಂದ್ರಂ ಧರ್ಮನಾಥನ ಶ್ರೀಪದಮಂ ೨೪೮

ವಚನ: ಅನಂತರಂ

ಸ್ರಗ್ಧರೆ

ಆಳಾಪಂಗೆಯ್ವ ರಾಗಜ್ಞ ವಿಗನುಪಶಮುಪ್ಪಂತೆ ಸೌವರ್ಣ ನಾನಾ
ಲೀಲಾ ವಾದ್ಯಂಗಳಂ ಬಾಜಿಸುವ ಗತಿಗೊಡಂಬಟ್ಟು ಸನ್ಯಾಸದಿಂದಂ
ತ್ರೈಲೋಕ್ಯಾಧೀಶ್ವರಾಭ್ಯರ್ಚಿತ ಚರಣನ ಮುಂದಾಡಿ ತನ್ನೊಂದು ಸೇವಾ
ಕೇಳೀ ಸಾಮರ್ಥ್ಯಮಂ ಬೀಱಿದನಮರವರಂ ಭಕ್ತಿಸಕ್ತಿಪ್ರಯುಕ್ತಂ ೨೬೯

ವಚನ: ಅಗಳಖಿಳದೇವತಾಚಕ್ರವರ್ತಿಯು ಬಹಳಾಶ್ಚರ್ಯಕಾರಿಯಪ್ಪ ಪರಮೈಶ್ವರ್ಯ ವಿಭವಸಮುತ್ಕರ್ಷಮಂ ಮೂಜಗಕ್ಕೆ ಸಾಱಿ ತೋಱುವಂತಿರೊರ್ವೊದಲೊಳ್ ಭೋರ್ಗರೆದು ಘೂರ್ಮಿಸುವ ಸುರಕುಮಾರಕರ ಪರಿತಾಡ್ಯಮಾನಸಾರ್ಧ ದ್ವಾದಶಕೋಟಿ ಮಹಾದೇವದುಂದುಭಿ ಸಂದೋಹದ ಸೊಳ್ಪಡೆದು ದೇವರ್ಕಳೂದುವ ಸಪ್ತಕೋಟಿ ಶಂಖವಾಸ ಕಹಳಾಕಳಾಪನಿನದ ಕೋಳಾಹಳದ ವಿಂಶತಿಕೋಟಿ ದೇವಗಾಯಕರ ಕರತಳ ಕಳಿತವೀಣಾತಾಳಕರ ವಿರಾವಮೇಳದೊಳಗೂಡಿದ ಪರಿಪರಿಯ ಠಾಯೆಗ ತಾರ ಮಂದ್ರ ಮಧ್ಯಮುಮೆಂಬ ಭೇದತ್ರಯದಿಂ ಮೋದುವನಾದ ಗಂಭೀರಶುಂಭಧ್ವಾನಕ್ಕೆ ತಕ್ಕಂದದಿಂ ದಾನಂದನಾಟ್ಯಮನಪ್ಪು ತಮೆನಲೊಡ್ಡಯಿಸಿದಿಂ ಬಳಿಯಂ

ಮಹಾಸ್ರಗ್ಧರೆ

ಪಿಡಿದಿರ್ಪಂ ತಾನೆ ಮೂಱುಂ ನೆಲೆಯ ಮಣಿಮಯಚ್ಛತ್ರಮಂ ಪ್ರೀಜ್ಯಂ ನೇ
ರ್ಪಡೆ ಮಾಳ್ಪಂ ತಾನೆ ನಾನಾಸ್ತುತಿಯನೆಸಗುವಂ ತಾನೆ ದೇವರ್ಕಳಂ ಸೈ
ತಿಡುವಂ ತಂತಾನೆ ಭಾಸ್ವಚ್ಚಮರರುಹಮುಮಂ ಬೀಸುವಂ ತಾನೆ ಮತ್ತೆ
ನ್ನೆಡೆಯೊಳ್ ಬೇಱಾವನೋ ಸೇವಕನೆನೆ ಸುರಪಂ ಸೇವೆಯಂ ಮಾಡುತಿರ್ದಂ ೨೫೦

ವಚನ: ಇಂತು ಸಮಸ್ತದೇವಸಮೂಹಂಬೆರಸು ಸೌಧರ್ಮೇಂದ್ರಂ ಸಾಸಿರ್ಮಡಿಯಾದ ಪೆರ್ಮೆಯಿಂ ಧರ್ಮನಾಥಜಿನೇಂದ್ರನಂ ಪೂಜಿಸಿ ಪೊಗಳ್ದಡಿಗಡಿಗಂ ಪೊಡಮಟ್ಟು ಹರ್ಷಸಮುತ್ಕರ್ಷವರ್ಷಿತಬಾಷ್ಪವಾಃಪೂರಂ ತನ್ಮಹಾಮಹಿಮೆಯಂ ಮನಂದಣಿವಿನಂ ನೀಡುಂನೋಡಿ ಕೊಂಡಾಡುತ್ತುಂ ಬಂದು ಗಣಧರಕೋಷ್ಠದೊಳಶೇಷಗಣಧರವಿಶೇಷಕರಾಗಿರ್ದ ವಿಶಿಷ್ಟಗುಣಸಮುಭಿಷ್ಟುತವರಿಷ್ಟಸೇನರೆಂಬ ಮುಖ್ಯಗಣಧರರಂ ಪರಿವಂದಿಸಿ ಮುಂದೆ ಕುಳ್ಳಿರ್ದು ತತ್ಸ್ವರೂಪದ ತೆಱನಂ ಸರ್ವಜ್ಞನಂ ಕೇಳಿ ಸೀಮೆಂದು ಸೌಧರ್ಮೇಂದ್ರಂ ಪ್ರಾರ್ಥಿಸಿ ತಂತಮ್ಮ ಕೋಷ್ಠದೊಳ್ ಕುಳ್ಳಿರ್ಪುದುಮಿಂದ್ರಪ್ರೇರಿತನುಂ ಭವ್ಯಸಾರ್ಥಪ್ರಾರ್ಥಿತನುಮಾಗಿ

ಕಂದ: ಅತಿಶಯಬೋಧಚತುಷ್ಟಯ
ಯುತನನುಪನರಿಷ್ಟಸೇನಗಣಧರರಾ ಜಿನ
ಪತಿಯಂ ಬೆಸಗೊಂಡಂ ವಿರ
ಚಿತನತಿತತ್ತ್ವ ಸ್ವರೂಪಭೇದಸ್ಥಿತಿಯಂ ೨೫೧

ವಚನ: ಅಂತು ವಿನಯಭರವಿನಮಿತಮಸ್ತಕನುಂ ಮುಕುಳೀಕೃತಹಸ್ತನುಮಾಗಿ ಬೆಸಗೊಳಲೊಡಮಾ ಧರ್ಮನಾಥಜಿನವಲ್ಲಭನ ವದನಮಂಡಳಮೆಂಬ ಹಿಮವದ್ಗಿರಿಶಿಖರ ವಳಯದಿಂ ದಿವ್ಯಧ್ವನಿಯೆಂಬ ಸ್ವರ್ಧುನೀಪ್ರವಾಹಂ ಪೊಱಮಡುವುದುಂ

ಮಹಾಸ್ರಗ್ಧರೆ

ರಮಣೀಯಂ ಮುಕ್ತತಾಲೋಷ್ಠಪುಟಚಳನಕಂ ದೂರಸಮೀಪದೊಳ್ ತಾಂ
ಸಮರೂಪಂ ಸರ್ವಭಾಷಾತ್ಮಕಮಖಿಳಹಿತಂ ತ್ಯಕ್ತವಾಯುಪ್ರಚಾರೋ
ದ್ಗಮಕಂ ಹಿಂಸಾದಿ ದೋಷೋಜ್ಝಿತಮಭಿವಿಸರದ್ಯೋಜನೈಕಪ್ರಮಾಣಂ
ಪ್ರಮದಂ ಪೆರ್ಚಲ್ಕೆ ದಿವ್ಯಧ್ವನಿ ಜಿನಮುಖದಿಂ ಪುಟ್ಟೆ ಪೊಣ್ಮಿತ್ತದೆತ್ತಂ ೨೫೨

ವಚನ: ಆ ದಿವ್ಯಧ್ವನಿಯರ್ಧಮಾಗಧೀಭಾಷೆಯೆಂಬ ಪೆಸರಿಂದೇಕರೂಪಮಾಗಿ ಪುಟ್ಟಿದೊಡಮನೇಕಭಾಷಾಮಯಮುಮಾಗಿ ಪರಿಣಮಿಸುವುದದೆಂತೆನೆ

ಕಂದ: ಮಳೆವನಿಯೊಂದೇಪರಿಯಿಂ
ಧಿಳೆಯೊಳ್ ಬಿಳ್ದುಂದು ಮತ್ತೆ ಭೂಮಿಯ ಗುಣದಿಂ
ಪಲವಂದಮಾಗಿ ತೋರ್ಪಂ
ತೊಳಕೊಂಡುದನೇಕಜಾತಿಭಾಷೆಯ ತೆಱನಂ ೨೫೩

ವಚನ: ಇಂತು ಸರ್ವಶ್ರವ್ಯಮಾದ ದಿವ್ಯಭಾಷೆಯಿಂ ಭುವನಭೂಷಣನಿಂತೆಂದು ಬೆಸಸಿದಂ ತತ್ತ್ವಮೆಂಬುದು ಜೀವಾಜೀವಾಸ್ರವಬಂಧ ಸಂವರನಿರ್ಜರಾಮೋಕ್ಷಭೇದದಿಂ ಸಪ್ತ ವಿಧಮಕ್ಕುಮಲ್ಲಿ ಬಂಧಾಂತರ್ಭಾವಿಗಳಪ್ಪ ಪುಣ್ಯಪಾಪಂಗಳೆರಡಂ ಕೂಡಿದೊಡೆ ನವಪದಾರ್ಥಮಕ್ಕು ಸಪ್ತತತ್ತ್ವಂಗಳೊಳ್ ಮುಖ್ಯಮಪ್ಪ ಜೀವತತ್ತ್ವಸ್ವರೂಪಮೆಂತೆನೆ

ಕಂದ: ದ್ರವ್ಯಪರ್ಯಾಯರೂಪನಿ
ಷೇವ್ಯಂ ಚೈತನ್ಯಲಕ್ಷಣಂ ತನುಮಾತ್ರ
ಸ್ವವ್ಯವಧಿಕರ್ತೃಭೋಕ್ತೃ
ದ್ರವ್ಯೋತ್ಪತ್ತಿವ್ಯಯಸ್ವಭಾವಂ ಜೀವಂ ೨೫೪

ವಚನ: ಅದು ಮು[1]ಕ್ತಿ[1]ಜೀವಂ ಸಂಸಾರಿಜೀವನೆಂದಿತ್ತೆಱನಕ್ಕುಮಲ್ಲಿ ಮುಕ್ತಿಜೀವನನಂತಚತುಷ್ಟಯಮಯನಾಗಿಕ್ಕು ಮತ್ತೆ ಸಂಸಾರಿಜೀವಂ ನರಕತಿರ್ಯಙ್ಮನುಷ್ಯದೇವಗತಿಸಂಜನವಿಕಲ್ಪದಿಂ ನಾಲ್ಕುಪ್ರಕಾರಮಕ್ಕುಮಾ ನಾರಕಜೀವನಧೋಧಃಸಪ್ತಭೂಮಿಸಂಭಿನ್ನರತ್ನಶರ್ಕರಾವಾಲುಕಪಂಕಧೂಮತಮೋಮಹಾತಮಃಪ್ರಭಾಭಿಧಾನಸಪ್ತಭೂಮಿಸಂಬಂಧದಿಂ ಸಪ್ತವಿಧಮಾಗಿಮಧಿಕಾಧಿಕ ಸಂಕ್ಲೇಶ ಪ್ರಮಾಣಾಯುಷ್ಯವಿಶೇಷದೊಳೊಂದಿ ನವೆಯುತ್ತುಮಿರ್ಕುಮಲ್ಲಿ

1 ಕ್ತ (ಕ)

ಮಹಾಸ್ರಗ್ಧರೆ

ಮೊದಲೊಳ್ ಮೂವತ್ತುಲಕ್ಷಂ ದ್ವಿತಯಮಹಿಯೊಳಿಪ್ಪತ್ತು ಮತ್ತೈದುಲಕ್ಷಂ
ಪದಿನೈದುಂ ಲಕ್ಷಮಾ ಮೂಱನೆಯ ನರಕದೊಳ್ ನಾಲ್ಕಱಱೊಳ್ ಪತ್ತುಲಕ್ಷಂ
ಪಡೆಪಿಂ ಲಕ್ಷತ್ರಯಂ ಪಂಚಮನರಕದೊಳಂತೈದುಗುಂದೊಂದುಲಕ್ಷಂ
ಪುದಿದಿರ್ದತ್ತಾಱಱೊಳ್ ಸಪ್ತಮನರಕದೊಳೈದೆ ಬಿಲಂಗಳ್ವಿಕ್ಸಂ ೨೫೫

ವಚನ: ಇಂತೇೞುಂ ನರಕಭೂಮಿಯೊಳಿರ್ದಿಂದ್ರಶ್ರೇಣೀಬದ್ಧಪ್ರಕೀರ್ಣಕರೂಪಮಾದಂಗಳಾದ ಬಿಲಂಗಳೆಲ್ಲಂ ಕೂಡಿಯೆಣ್ಭತ್ತನಾಲ್ಕುಲಕ್ಷಮಾಗಿರ್ಕುಂ

ಉತ್ಪಲಮಾಲೆ

ಕಾಗೆಯ ನಾಯ ಕತ್ತೆಯ ಸೃಗಾಳದ ಗೂಗೆಯ ಬಾಯ್ಗಳಂದದಿಂ
ದಾಗರಮಾಗಿ ಪೇಸಿಕೆಗೆ ನಾಱುತಮಿಪ್ಪೆಡೆಯಲ್ಲಿ ಪುಟ್ಟುವರ್
ಪೋಗಿ ಘನಾರ್ತರೌದ್ರಪರಿಣಾಮದೊಳೊಂದಿದ ಕೃಷ್ಣನೀಲಲೇ
ಶ್ಯಾಗತಪಾಪಿಗಳ್ ನರಕಕಷ್ಟಬಿಲಂಗಳ ತಾಣವೆಲ್ಲಿಯುಂ ೨೫೬

ವಚನ: ಪುಟ್ಟಿದಂತರ್ಮುಹೂರ್ತದೊಳಾಹಾರಕ ಶರೀರೇಂದ್ರಿಯೋಚ್ಛ್ವಾಸನಿಶ್ವಾಸ ಭಾಷಾಮನಂಗಳೆಂಬ ಷಟ್ಪರ್ಯಾಪ್ತಿಗಳ್ ನೆಱೆದು ಪಱಿದ ಪಾದರಸ ಬಿಂದುಗಳಂತೊಡಗೂಡುವಂತೆ ಶತಖಂಡಂಗಳಾದಂಗಂಗಳೆಲ್ಲಮೊಂದುಗೂಡಿ ಮುದ್ರಿಸಿದ ಮಸಿಯ ಮಾಮೆಯಂತೆ ಕಡುಕಱಂಗಿ ಮೊಡೆನಾತಕ್ಕೆಡೆಯಾದ ಮೆಯ್ಯಂ ಪಡೆದು ಶಾರೀರ ಮಾನಸ ಕ್ಷೇತ್ರಜ ಪರಸ್ಪರೋದೀರಿತ ದಸುರೋದೀರಿತಂಗಳೆಂಬ ಪಂಚಪ್ರಕಾರದುಃಖಮೆ ಪಂಚಮಹಾಭೂತಮಾಗಿ ಮೂರ್ತಿವೆತ್ತುದೆಂಬಂತೆ ಕೋಟಲೆಯನನುಭವಿಸಿರ್ಕುಂ

ಕಂದ: ಆಱಂಗುಲಂ ತ್ರಿಹಸ್ತಂ
ಮೀಱದೆ ಕೂಡಿರ್ದ ಸಪ್ತಚಾಪೋತ್ಸೇಧಂ
ತೋಱುವುದು ಮೊದಲನರಕದೊ
ಳಾಱಡಿವೆತ್ತಿರ್ದ ನಾರಕರ ಮೆಯ್ಗಳೊಳಂ ೨೫೭

ತದ್ವಿಗುಣ ದ್ವಿಗುಣಂಬಡೆ
ದುದ್ದಂ ಮತ್ತುಳಿದ ನರಕದವರ್ಗೆಲ್ಲಂ ಮೆ
ಯ್ವೊದ್ದಿದ ಪಂಚಧನುಃಶತ
ಮುದ್ದಂ ತೋರ್ಪನ್ನೆವರಮುಮೆಯ್ದುಗು ಪೆರ್ಚಂ ೨೫೮

ಒಂದು ಮೂಱೇೞು ಪತ್ತುಂ
ಕುಂದದೆ ಪದಿನೇೞುಮಿಪ್ಪತೆರಡುಂ ಮೂವ
ತ್ತೊಂದಿದ ಮೂಱಿರ ಸಾಗರ
ಮುದಾಯುಃಪ್ರಮಿತಿಯೋಳಿಯಿಂದೇೞಱೊಳಂ ೨೫೯

ಕರಗುಗು ಕಗ್ಗಲ್ಲಾದೊಡ
ಮಿರದಾಗಳೆನಿಪ್ಪ ತೀವ್ರತರಮುಷ್ಣಂ ನಾ
ಲ್ಕರೆಭೂಮಿಯೊಳಕ್ಕುಂ ಮ
ತ್ತೆರಡರೆಭೂಮಿಯೊಳತೀವಶೀತಂ ತೋರ್ಕುಂ ೨೬೦

ವಚನ: ಇಂತು ದುಃಖಾಕರಮಾದೇಳುಂ ನರಕದೊಳನುದಿನಮನವಧಿವೇದನೆಯಮನನುಭವಿಸುತ್ತಿರ್ಪರ್

ಕಂದ: ನಾರಕಜೀವನ ತೆಱನುಮ
ನೋರಂತಿರೆ ತಿಳಿಯೆ ಪೇಳ್ದ ಸರ್ವಜ್ಞಂ ಮ
ತ್ತಾರಯೆ ತಿರ್ಯಗ್ಜೀವನ
ಘೋರಾವಸ್ಥೆಯುಮನಿಂತು ಪೇಳುತ್ತಿರ್ದಂ ೨೬೧

ವಚನ: ಅದೆಂತೆಂದೊಡೆ ತಿರ್ಯಗ್ಜೀವಂ ತ್ರಸಮುಂ ಸ್ಥಾವರಮುಮೆಂದಿತ್ತೆಱನದಱೊಳ್ ತ್ರಸಮೆಂಬುದು ಸರ್ವಸಾಧಾರಣಸ್ಪರ್ಶನೇಂದ್ರಿಯಮನುಳ್ಳ ಶರೀರಿಯಲ್ಲಿ ಕ್ರಮಂಗೊಂಡೊಂದೊಂದು ರಸನಂ ಘ್ರಾಣಂ ಚಕ್ಷು ಶ್ರೋತ್ರಮೆಂಬಿಂದ್ರಿಯಂಗಳ ಪೆರ್ಚುಗೆಯಿಂದಪ್ಪುದು ದ್ವೀಂದ್ರಿಯಾದಯಸ್ತ್ರಸಾಯೆಂದು ಜಿನಾಗಮಪ್ರತಿಪಾದಿತಮಾದುದಱಿಂ ದ್ವೀಂದ್ರಿಯ ಪ್ರಾಣಿ ಮೊದಲ್ಗೊಂಡು ಪಂಚೇಂದ್ರಿಯಪ್ರಾಣಿಪರ್ಯಂತಂ ತ್ರಸಮೆನಿಕ್ಕುಮಿಂತು.

ಕಂದ: ದ್ವೀಂದ್ರಿಯಜೀವದ ತನುಮಾ
ನಂ ದ್ವಾದಶಯೋಜನಂ ಸಮುತ್ಕರ್ಷತೆಯಿಂ
ದಂ ದ್ವಾದಶವರ್ಷಮಿತಂ
ಸಂದಾಯುಷ್ಯದ ಪವಣ್ ಜಿನೋಕ್ತಕ್ರಮದಿಂ ೨೬೨

ಒಂದೂನಮಾಗಿಯೈವ
ತ್ತುಂ ದಿನಮಕ್ಕುಂ ಸ್ಥಿತಿಪ್ರಮಾಣಂ ಮಾನಂ
ದ್ವೀಂದ್ರಿಯಜೀವದ ದೇಹದೊ
ಳೊಂದಿರ್ದುದು ಮುಖ್ಯವೃತ್ತಿಯಿಂ ತ್ರಿಕೋಶಂ ೨೬೩

ಚತುರಿಂದ್ರಿಯಜೀವನದ
ಸ್ಥಿತಿ ಷಣ್ಮಾಸಪ್ರಮಾಣಮುತ್ಕೃಷ್ಟತೆಯಿಂ
ದೆ ತನು ಸಮುನ್ನತಿಯೋಜನ
ಮಿತಮಿಂತೆಂದುಸಿರ್ದನಾ ಜಿನೇಶಂ ಸಭೆಗಂ ೨೬೪

ಒಂದುಯೋಜನಸಹಸ್ರಂ
ಕುಂದದೆ ತೋರ್ಪುದು ಶರೀರದುದ್ದಂ ನಿಯತಂ
ಸಂದಮರ್ದುದು ತಿರ್ಯಕ್ಪಂ
ಚೇಂದ್ರಿಯಕಂ ಪೂರ್ವಕೋಟಿಪರಮಾಯುಷ್ಯಂ ೨೬೫

ವಚನ: ಮತ್ತಮೇಕೇಂದ್ರಿಯಮನುಳ್ಳ ಸ್ಥಾವರಜೀವಂ ಪೃಥಿವ್ಯಪ್ತೇಜೋವಾಯು ವನಸ್ಪತಿ ಕಾಯಿಕವಿಕಲ್ಪದಿಂ ಪಂಚಪ್ರಕಾರಮಕ್ಕುಮಲ್ಲಿ ಪರಮಾಯುಷ್ಯಂ ಪೃಥ್ವೀಕಾಯಿಕಕ್ಕಿಪ್ಪತ್ತೆರಡುಸಾಸಿರ ವರ್ಷಮಕ್ಕುಮಪ್ಕಾಯಿಕಕ್ಕೇಳುಸಾಸಿರ ವರ್ಷಮಕ್ಕುಂ ತೇಜಸ್ಕಾಯಿಕಕ್ಕೆ ಮೂಱುದಿನಮಕ್ಕುಂ ವಾಯುಕಾಯಿಕಕ್ಕೆ ಮೂಱುಸಾಸಿರವರ್ಷಮಕ್ಕುಂ ವನಸ್ಪತಿಕಾಯಿಕಕ್ಕೆಪ್ಪತ್ತುಸಾಸಿರವರ್ಷಮಕ್ಕುಮಿಂತು

ಉತ್ಪಲಮಾಲೆ

ಶೀತದ ಪೀಡೆಯಿಂ ರುಜೆಯ ಪೀಡೆಯಿನುಷ್ಣದ ಪೀಡೆಯಿಂ ಮಹಾ
ವಾತದ ಪೀಡೆಯಿಂದೆ ಪೊಣರ್ದೊಂದನದೊಂದುಱಿಪೊಯ್ವ ಶೃಂಗನಿ
ರ್ಘಾತದ ಪೀಡೆಯಿಂ ಕ್ಷುಧೆಯ ಪೀಡೆಯಿನೆಯ್ದೆ ತೃಷಾದಿಪೀಡೆಯಿಂ
ದಾತತ ತಿರ್ಯಗಂಗನಿಕಾಯಮುಂ ಕಡುದುಃಖದೊಳೊಂದಿ ಬಳ್ದಗುಂ ೨೬೬

ಕಂದ: ಆರ್ತಧ್ಯಾನಂ ಮನದೊಳ್
ಸಾರ್ತರಲುದ್ಭವಿಸಿ ಕಷ್ಟತಿರ್ಯಗ್ಗತಿಯೊಳ್
ವರ್ತಿತ ಪಾಪೋದಯದಿಂ
ದರ್ತಿಂಪೊಳೋಲಾಡುತಿರ್ಕು ತಿರ್ಯಗ್ಜೀವಂ ೨೬೭

ಇಂತಖಿಳಜ್ಞಂ ತಿರ್ಯ
ಗ್ಜಂತು ಸಮೂಹಸ್ವರೂಪ ನಿರೂಪಣಾ ಸಮ
ನಂತರಮೆಲ್ಲರ್ಗುಸಿರ್ದಂ
ಸಂತಸದಿಂದಂ ಮನುಷ್ಯಜೀವನದ ತೆಱನಂ ೨೬೮

ವಚನ: ಅದೆಂತೆಂದೊಡೆ ಮನುಷ್ಯಜೀವಂ ಭೋಗಭೂಮಿ ಕರ್ಮಭೂಮಿ ಸಮುದ್ಭವಭೇದದಿಂ ದ್ವಿವಿಧಮಕ್ಕುಮಾ ಭೋಗಭೂಮಿಯುಂ ದೇವಕುರೂತ್ತರಕುರ್ವಾದಿ ಭೇದದಿಂ ಮೂವತ್ತು ತೆಱನಕ್ಕು ಮತ್ತಮುತ್ತಮ ಮಧ್ಯಮ ಜಘನ್ಯಭೂಮಿ ಭೇದದಿಂ ಮೂದೆಱನಾಗಿ ತೋರ್ಕುಂ ತದುತ್ತಮಭೋಗಭೂಮಿಜರ್ಗಾಱುಸಾಸಿರಬಿಲ್ಲುದ್ದಮುಂ ಮೂಱುಪಲ್ಯೋಪಮುಂ ಜೀವನಮುಮಕ್ಕುಮಾ ಮಧ್ಯಮಭೋಗಭೂಮಿಜರ್ಗೆ ನಾಲ್ಕುಸಾಸಿರಬಿಲ್ಲುತ್ಸೇಧಮುಂ ಎರಡುಪಲ್ಯೋಪಮಮಾಯುಷ್ಯಮುಮಕ್ಕು ಜಘನ್ಯಭೋಗಭೂಮಿಜರ್ಗೆರಡುಸಾಸಿರ ಚಾಪೋನ್ನತಿಯುಮೊಂದು ಪಲ್ಯೋಪಮಮಾಯುಃಪ್ರಮಾಣಮುಮಕ್ಕುಮಲ್ಲಿ

ಕಂದ: ಪತ್ತುತೆಱನಾದ ಸುರತರು
ವಿತ್ತ ಮಹಾಭೋಗ ಸಮುಪಭೋಗಮನನುಭವಿ
ಸುತ್ತಿರ್ಪರ್ ದಂಪತಿಗಳ್
ಉತ್ತಮಪಾತ್ರಕ್ಕೆ ಕೊಟ್ಟ ದಾನದ ಫಲದಿಂ ೨೬೯

ವಚನ: ಮತ್ತಂ ಕರ್ಮಭೂಮಿಗಳ್ ಭರತಾದಿಭೇದದಿಂ ಪದಿನೈದು ಪರಿಯಕ್ಕುಂ ತದ್ಭೂವಿಭವರಾರ್ಯಮ್ಲೇಚ್ಛ ಪ್ರಭೇದದಿಂ ದ್ವಿವಿಧರಪ್ಪರವರ್ಗುತ್ಕೃಷ್ಟದಿಂದೈನೂಱಿಪ್ಪತ್ತೈದು ಚಾಪೋತ್ಸೇಧಮುಂ ಪೂರ್ವಕೋಟಿಪ್ರಮಾಣಾಯುಷ್ಯಮುಂ ವಿದೇಹಂಗಳೊಳ್ ನಿಯಮಿತಮಕ್ಕು ಭರತೈರಾವತಂಗಳುತ್ಸರ್ಪಿಣ್ಯವಸರ್ಪಿಣಿಗಳೆಂಬಿಪ್ಪುಕಾಲವಶದಿಂ ವೃದ್ಧಿಹ್ರಾಸಮನೆಯ್ದುಗುಮವಱೊಳೊಂದಕ್ಕೆ ಪತ್ತುಕೋಟಾಕೋಟಿ ಸಾಗರೋಪಮಕಾಲ ಪ್ರಮಾಣಮಕ್ಕು ಮತ್ತಮುತ್ಸರ್ಪಿಣೀಕಾಲಮುಂ ಸುಷಮಸುಷಮೆಯುಂ ಸುಷಮೆಯುಂ ಸುಷಮದುಷ್ಷಮೆಯುಂ ದುಷ್ಷಮಸುಷಮೆಯುಂ ದುಷ್ಷಮೆಯುಮತಿದುಷ್ಷಮೆಯುಮೆಂಬ ಷಟ್ಪ್ರಕಾರಮಕ್ಕುಮೀ ಕ್ರಮದಿಂದವಸರ್ಪಿಣೀ ಕಾಲಮುಮಂತೆಯಕ್ಕುಮಲ್ಲಿ ಮೊದಲಕಾಲಕ್ಕೆ ನಾಲ್ಕುಕೋಟಾಕೋಟಿಸಾಗರೋಪಮಮೆರಡನೆಯದಕ್ಕೆ ಮೂಱು ಕೋಟಾಕೋಟಿಸಾಗರೋಪಮಂ ಮೂಱನೆಯದಕ್ಕೆರಡು ಕೋಟಾಕೋಟಿ ಸಾಗರೋಪಮಂ ನಾಲ್ಕನೆಯದಕ್ಕೆ ನಾಲ್ವತ್ತೆರಡು ಸಾಸಿರವರುಷಗಳಿಂದಿಱೊಂದು ಕೋಟಾಕೋಟಿ ಸಾಗರೋಪಮಮಯ್ದನೆಯದಕ್ಕಿಪ್ಪತ್ತೊಂದು ಸಹಸ್ರ ಸಂವತ್ಸರಮಾಱನೆಯದಕ್ಕನಿತೇ ಪ್ರಮಾಣಮುಮಕ್ಕುಮಿಂತು

ಕಂದ: ವ್ಯವಸಾಯಂ ಗಣಕತ್ವಂ
ವ್ಯವಹಾರಂ ವಿದ್ಯೆ ಶಿಲ್ಪಸೇವನಮುಂ ಸಂ
ಭವಿಸುವ ಷಟ್ಕರ್ಮಕದಿಂ
ದವೆ ಷಡ್ವಿಧಮಕ್ಕು ಪಾಪಹರದಾರ್ಯಜನಂ ೨೭೦

ವಚನ: ಮತ್ತಂ ಮಿಥ್ಯಾದೃಷ್ಟಿ ಸಾಸಾದನಸಮ್ಯಗ್ದೃಷ್ಟಿ ಸಮ್ಯಗ್ಮಿಥ್ಯಾದೃಷ್ಟಿ ಅಸಂಯತಸಮ್ಯಗ್ದೃಷ್ಟಿ ದೇಶವ್ರತಿ ಪ್ರಮತ್ತಸಂಯತಸಪೂರ್ವಕರಣ ಕ್ಷಪಕೋಪಶಮಕ ಸಂಯತಸನಿವೃತ್ತಿಕರಣ ಕ್ಷಪಕೋಪಶಮಕಸಂಯತ ಸೂಕ್ಷ್ಮಸಾಂಪರಾಯಕ್ಷಪಕೋಪಶಮಕ ಸಂಯತನುಪಶಾಂತಕಷಾಯ ವೀತರಾಗಚ್ಛದ್ಮಸ್ಥಸಂಯತಕ್ಷೀಣಕಷಾಯ ವೀತರಾಗಚ್ಛದ್ಮಸ್ಥಸಂಯುತ ಸಯೋಗಕೇವಳಿ ಅಯೋಗಕೇವಳಿಯೆಂಬ ಪದಿನಾಲ್ಕು ಗುಣಸ್ಥಾನಭೇದದಿಂ ತದಾರ್ಯಜನಮುಂ ಪದಿನಾಲ್ಕುತೆಱನಾಗಿ ತೋಱುತ್ತುಮಿರ್ದು

ಕಂದ: ಧರ್ಮಕರಣಪ್ರವೀಣಂ
ನಿರ್ಮಳಚಾರಿತ್ರಶೀಲಮಂ ತಾಳ್ದಿ ಕರ್ಮಂ
ಕರ್ಮಕ್ಷಯಮಂ ಮಾಡುವ
ಪೆರ್ಮೆಗೆ ಸಂಪ್ರಾಪ್ತಮಪ್ಪುದಖಿಳಾರ್ಯಜನಂ ೨೭೧

ಮ್ಲೇಚ್ಛಖಂಡಂಗಳೈದು ಸ
ಮುತ್ಸವದಿಂದಲ್ಲಿ ಪುಟ್ಟಿ ನೆಲಸಿರ್ದ ಮಹಾ
ಮ್ಲೇಚ್ಛರುಮೆಯ್ದೆ ಜಿನಪ್ಪರ
ತುಚ್ಛಜಿನಾಗಮಪಯೋಧಿಪಾರಗಮತದಿಂ ೨೭೨

ಪುಟ್ಟುವುದು ಮನುಜಜೀವಂ
ನೆಟ್ಟನೆ ಮಲಮೂತ್ರಜಂತು ದುರ್ಗಂಧಕ್ಕೆಡೆ
ಗೊಟ್ಟ ಸ್ತ್ರೀಗರ್ಭದೊಳಂ
ಪುಟ್ಟುವ ತೆಱದಿಂದಮಲ್ಲಿ ದುಷ್ಕ್ರಿಮಿನಿಕರಂ ೨೭೩

ಈತೆಱದ ಮನುಜಗತಿವಿ
ಖ್ಯಾತಶರೀರಸ್ವರೂಪಮಂ ಪೇಳ್ದಿನ್ನಂ
ಸಾತಿಶಯದೇವಗತಿಯ ವಿ
ಭೂತಿಯನಿಂತೆಂದು ಪೇಳುತಿರ್ದಂ ಜಿನಪಂ ೨೭೪

ವಚನ : ಅದೆಂತೆಂದೊಡೆ [1]ಜೀ[1]ವಜೀವಂ ಭವನ ವ್ಯಂತರ ಜ್ಯೋತಿಷ್ಕ ವೈಮಾನಿಕ ಭೇದದಿಂ ಚತುರ್ವಿಧಮಕ್ಕುಮಲ್ಲಿ ಭವನವಾಸಿಕರ ಸುರನಾಗವಿದ್ಯುತ್ಸುಪರ್ಣಾಗ್ನಿ ವಾತ ಸ್ತನಿತೋದಧಿದ್ವೀಪ ದಿಕ್ಕುಮಾರವಿಕಲ್ಪದಿಂ ಪತ್ತುತೆಱನಪ್ಪವರೊಳಸುರಕುಮಾರಕರ್ಗಿಪ್ಪತ್ತೈದು ಬಿಲ್ಲುದ್ದಮುಳಿದವರ್ಗೆ ಪತ್ತುಬಿಲ್ಲುದ್ದಮುತ್ಕರ್ಷದಿಂದೊಂದು ಸಾಗರೋಪಮಮಾಯುಷ್ಯಂ ವ್ಯಂತರರ್ ಕಿನ್ನರ ಕಿಂಪುರುಷ ಗರುಡ ಗಂಧರ್ವ ಯಕ್ಷ ರಾಕ್ಷಸಭೂತ ಪಿಶಾಚ ಭೇದದಿಂದೆಂಟುತೆಱನಪ್ಪವರ್ಗೆ ಪತ್ತು ಬಿಲ್ಲುತ್ಸೇಧಂ ಪಲ್ಯೋಪಮಂ ಪರಮಾಯುಜ್ಯೋತಿಷ್ಕ ಚಂದ್ರಾದಿತ್ಯ ಗ್ರಹ ನಕ್ಷತ್ರಪ್ರಕೀರ್ಣಕ ತಾರಕಭೇದದಿಂದೈದುತೆಱನಪ್ಪರವರುತ್ಸೇಧಮಂ ಸಪ್ತಚಾಪೋದಯಂ ಪರಮಾಯುಷ್ಯಮುಂ ವ್ಯಂತರರಂತಿರ್ಕುಂ

ಕಂದ : ಮತ್ತೆ ಜಘನ್ಯಾಯುಷ್ಯಂ
ಪತ್ತುಂ ಸಹಸ್ರಾಬ್ದಮಕ್ಕು ಭವನ ವ್ಯಂತರ
ಗೊತ್ತಮಿಕುಂ ಜ್ಯೋತಿಷ್ಕರ
ವೊತ್ತಕ್ಕದಮಾಯುಪಲ್ಯದಷ್ಟಮಭಾಗಂ ೨೭೫

ವಚನ : ಅದಲ್ಲದೆಯುಂ ವೈಮಾನಿಕದೇವರ್ ಕಲ್ಪಜರೆಂದುಂ ಕಲ್ಪಾತೀತರೆಂದೆರಡುತೆಱನಪ್ಪರಾ ಕಲ್ಪಂಗಳುಂ ಸೌಧರ್ಮ ಈಶಾನ ಸನತ್ಕುಮಾರ ಮಾಹೇಂದ್ರ ಬ್ರಹ್ಮ ಬ್ರಹ್ಮೋತ್ತರ ಲಾಂತವ ಕಾಪಿಷ್ಠ ಶುಕ್ರ ಮಹಾಶುಕ್ರ ಶತಾರ ಸಹಸ್ರಾರ ಆನತ ಪ್ರಾಣತ ಆರಣ ಅಚ್ಯುತಂಗಳೆಂದು ಪದಿನಾಱಕ್ಕುಮಲ್ಲಿ ಸೌಧರ್ಮೇಶಾನಕಲ್ಪಜರ್ಗೆ ಶರೀರಮಾನ

1 ದೇ (ಕ)

ಪೇಳುತ್ತಿ ಪರಮಾಯುಷ್ಯಮೆರಡುಸಾಗರೋಪಮಂ ಸನತ್ಕುಮಾರ ಮಾಹೇಂದ್ರಕಲ್ಪ ಜರ್ಗೆ ಆಜುತ್ತಿ ಸಪ್ತಸಾಗರೋಪಮಂ ಬ್ರಹ್ಮಬ್ರಹ್ಮೋತ್ತರಕಲ್ಪಜರ್ಗೆ ಪಂಚರತ್ನಿ ಪತ್ತು ಸಾಗರೋಪಮಂ ಲಾಂತವ ಕಾಪಿಷ್ಠ ಕಲ್ಪಜರ್ಗಂ ಪಂಚರತ್ನಿ ಪದಿನಾಲ್ಕು ಸಾಗರೋಪಮಂ ಶುಕ್ರಮಹಾಶುಕ್ರಕಲ್ಪಜರ್ಗೆ ನಾಲ್ಕುರತ್ನಿ ಪದಿನೆಂಟುಸಾಗರೋಪಮಂ ಆನತ ಪ್ರಾಣತ ಕಲ್ಪಜರ್ಗೆ ಮೂಱುವರೆರತ್ನಿ ವಿಂಶತಿ ಸಾಗರೋಪಮಂ ಆರಣ ಅಚ್ಯುತ ಕಲ್ಪಜರ್ಗೆ ಮೂಱುರತ್ನಿ ದ್ವಾವಿಂಶತಿಸಾಗರೋಪಮಮಕ್ಕುಂ ಮತ್ತಂ ಕಲ್ಪಾತೀತಂಗಳಪ್ಪಧೋ ಗ್ರೈವೇಯಕತ್ರಯದವರ್ಗೆರಡುವರೆ ಹಸ್ತಂ ಮಧ್ಯಮ ಗ್ರೈವೇಯಕತ್ರಯದವರ್ಗೆರಡು ಹಸ್ತಮೂರ್ಧ್ವಗ್ರೈವೇಯಕ ತ್ರಯದವರ್ಗೆ ಒಂದುವರೆಹಸ್ತಮಲ್ಲಿಂ ಮೇಲಣವರ್ಗೆಲ್ಲಂ ಹಸ್ತಪ್ರಮಾಣಮಕ್ಕುಮವರ ಪರಮಾಯುಷ್ಯಮುಂ ಪ್ರತ್ಯೇಕಮೇಕೈಕವೃದ್ಧಿಯಿಂ ಕಡೆಯ ಸರ್ವಾರ್ಥಸಿದ್ಧಿಪರ್ಯಂತಂ ಮೂವತ್ತಮೂಱು ಸಾಗರೋಪಮಮಕ್ಕುಮಿಂತು

ಮತ್ತೇಭವಿಕ್ರೀಡಿತ

ತಪಮಂ ಬಾಲ್ಯದೊಳಪ್ಪುಕೆಯ್ದತಿಚಾರಂ ಮಾಡುತುಂ ನಾಡೆ ವ
ತ್ರಿಪರುಂ ಮಾಳ್ಪರಕಾಮನಿರ್ಜರೆಗಳಂ ಸಮ್ಯಕ್ತ್ವಸಂಧಾರಿಗಳ್
ಕೃಪೆಯೊಳ್ ಕೂಡಿ ಸಮಾಧಿಯಂ ಪಡೆದರುಂ ರತ್ನತ್ರಯಾಧಾರರುಂ
ವಿಪುಳಶ್ರೀಸುರಲೋಕದೊಳ್ ಜನಿಸಿ ನಾನಾಸೌಖ್ಯಮಂ ಸೇವಿಪರ್ ೨೭೬

ಕಂದ: ನರಕಾದಿ ಚತುರ್ಗತಿಯೊಳ್
ಬೆರಸಿದ ಜೀವಸ್ವರೂಪಭೇದಮನಾ ಜಿನ
ವರನುಸಿರ್ದಂ ಮತ್ತಜೀವನ
ಸ್ವರೂಪಭೇದಮನುನಿಂತು ಪೇಳುತ್ತಿರ್ದಂ ೨೭೭

ವಚನ: ಅಂತೆಂದೊಡೆ ಧರ್ಮಾಧರ್ಮಾಕಾಶ ಕಾಲ ಪುದ್ಗಲಭೇದದಿನಜೀವಂ ಪಂಚಪ್ರಕಾರಮಕ್ಕುಮಲ್ಲಿ

ಕಂದ: ಜೊರೆಕೊಂಡಡೆ ಜೀವಂ ಮ
ತ್ತಿರಪೌಷದ್ರವ್ಯಮೆನಿತುಕಾಲಮುದೊಂದಂ
ಬೆರಸದೆಯುಮಜಳೊಳ್ ಕಳೆದೊಡೆ
ಧರಿಸುಗು ಪಂಚಾಸ್ತಿಕಾಯಮೆಂಬೀ ಪೆಸರಂ ೨೭೮

ವಚನ: ಮತ್ತಂ ಲೋಕಾಕಾಶವ್ಯಾಪಾರಂಗಳಪ್ಪ ಧರ್ಮಾಧರ್ಮಂಗಳೆಂಬೆರಡುಂ ಜೀವಪುದ್ಗಲಗಳ ಗತಿಸ್ಥಿತಿಗೆ ಕಾರಣಂಗಳಕ್ಕು ಮತ್ಸ್ಯಂಗಳ್ಗೆ ಜಲದಂತಿರಶ್ವಂಗಳ್ಗೆ ನೆಲದಂತೆ ಯುಂ ಧರ್ಮಾಧರ್ಮಗಳೇಕಜೀವಮುಯಂಗಳಸಂಖ್ಯಾತಪ್ರದೇಶಂಗಳಾಗಿ ತೋಱುತ್ತು ಮಿರ್ಕುಮಾಕಾಶಮೆಂಬುದು ನಿತ್ಯಂ ವ್ಯಾಪಕಮುಮಾಗಿ ಲೋಕಾಕಾಶಮೆಂದುಮಲೋ ಕಾಕಾಶಮೆಂದೆರಳ್ತೆಱನಕ್ಕುಂ

ಕಂದ: ಜೀವಾದಿದ್ರವ್ಯಂಗ
ಳ್ಗಾವಗವುವಗಾಹಸ್ಯೈಕಲಕ್ಷಣಗುಣಸ
ದ್ಭಾವಂ ಲೋಕಾಕಾಶಂ
ಕೇವಳವುದಱಿಂದೆ ಪೊಱಗಲೋಕಾಕಾಶಂ ೨೭೯

ವಚನ: ಮತ್ತಂ ಜೀವಾದಿದ್ರವ್ಯವರ್ತನಾಪರಿಣಾಮರೂಪೋಪಯೋಗ್ಯನುಪ್ಪುದು ಕಾಲದ್ರವ್ಯಮದುಂ ಮುಖ್ಯವ್ಯವಹಾರಭೇದದಿಂ ದ್ವಿವಿಧಮಕ್ಕುಂ

ಕಂದ: ವ್ಯವಹಾರಕಾಲವೆಂದುಂ
ರವಿಶಶಿಯುದಯಾಸ್ತಮಾನಘಟಿಕಾಸಂಖ್ಯಂ
ತವೆಯದದು ಮುಖ್ಯಕಾಲಂ
ಭುವನದೊಳನುವೇಯರೂಪಮೆನಿಕುಂ ನಿರುತಂ ೨೮೦

ಪರಿಕಿಸೆ ಪುದ್ಗಲವೆಂಬುದು
ಪಿರಿದೆನಿಪ ಸ್ಪರುಶಗಂಧವರ್ಣರಸಂಗಳ
ಬೆರಕೆಯನುಳ್ಳದದುಂ ಮು
ತ್ತೆರಡುತೆಱಂ ಸ್ಪಂದಮಣು ದಲೆಂದೀ ಕ್ರಮದಿಂ ೨೮೧

ವಚನ: ಅದಕ್ಕಂ ಸ್ಥೂಲಸೂಕ್ಷ್ಮಚ್ಛಾಯಾತಪಾದಿ ರೂಪವಿಕಲ್ಪದಿನನೇಕಭೇದ ಮಕ್ಕುಮಿಂತು

ಕಂದ: ಸುರಸಭೆಗಜೀವತತ್ತ್ವ
ಸ್ವರೂಪಮುಂ ತಿಳಿಯೆಪೇಳ್ದು ಸಕಳಜ್ಞಂ ಬಂ
ಧುರಮಾದಾಸ್ರವತತ್ತ್ವದ
ಪರಿಯಂ ಪೇಳುತ್ತುಮಿರ್ದನಂದಾದರದಿಂ ೨೮೨

ವಚನ: ಅದೆಂತೆನೆ

ಮತ್ತೇಭವಿಕ್ರೀಡಿತ

ಪಿರಿದುಂ ಮಾಳ್ಪ ಶುಭಾಶುಭಾಧಿಕ ಮನೋವಾಕ್ಕಾಯಕರ್ಮಂಗಳಿಂ
ದೊರೆಕೊಳ್ಗುಂ ಸಲೆಪುಣ್ಯಪಾಪದ ಸಮಾಯಾನಂ ಸಮಂತೆಯ್ದೆ ಪೊ
ರ್ದಿರವೇಯಾಸ್ರವಮಕ್ಕು ಸಂಯಮಸರಾದಿ ಕ್ಷಾಂತಿಶೌಚಾದಿ ಸ
ತ್ಪರಿಣಾಮಂಗಳಿನಪ್ಪುದಂತದಶುಭಧ್ಯಾನಂಗಳಿಂ ನಿಂದೆಯಿಂ ೨೮೩

ಮಹಾಸ್ರಗ್ಧರೆ

ಸಲೆ ಬಹ್ವಾರಂಭದಿಂ ಪೊರ್ದುವುದು ನರಕದಾಯುಷ್ಯಮಾತ್ಮಪ್ರದೇಶಂ
ಗಳೊಳಲ್ಪಾರಂಭದಿಂ ಸಾರ್ವುದು ನರಗತಿಯಾಯುಷ್ಯಮುಂ ಮಾಯೆಯಿಂ ಸಂ
ಗಳಿಸಿರ್ಕುಂ ತಿರ್ಯಗಾಯುಸ್ಥಿತಿ ಸುರಗತಿಯಾಯುಷ್ಯಮಾಶ್ರೈಸುಗುಂ ಮಂ
ಜುಳರಾಗಂಗೂಡಿದೊಳ್ಸಂಯಮಗುಣವಿಮಳಾಚಾರಶೀಲಂಗಳಿಂದಂ ೨೮೪

ಕಂದ : ಅಱಿಪಿದನಾಸ್ರವತತ್ತ್ವದ
ತೆಱನಂ ಶ್ರೀಧರ್ಮನಾಥಜಿನಪತಿಸಭೆಗಂ
ಕಿಱಿದಾಗಿ ಬಂದ ತತ್ತ್ವದ
ತೆಱನುಮನಿಂತೆಂದು ಮತ್ತೆ ಪೇಳುತ್ತಿರ್ದಂ ೨೮೫

ವಚನ : ಅದೆಂತೆಂದೊಡೆ

ಚಂಪಕಮಾಲೆ

ನೆಲಸಿದ ದುಷ್ಕಷಾಯವಶದಿಂದೆ ಶರೀರನಿಜಪ್ರದೇಶದೊಳ್
ತೊಲಗದೆ ಕರ್ಮರೂಪಕನುಯೋಗ್ಯಮೆನಿಪ್ಪರು ಪುದ್ಗಲಂಗಳಂ
ಸಲೆಧರಿಸುತ್ತುಮಿರ್ದಿರವೆ ಬಂಧಮಿದಕ್ಕಮಿವೈದುಕಾರಣಂ
ದಲವಿರತಿ ಪ್ರಮಾದ ಖಳಯೋಗ ಕಷಾಯ ಕುಮೈಥ್ಯದರ್ಶನಂ ೨೮೬

ಕಂದ : ಪ್ರಕೃತಿಸ್ಥಿತ್ಯನುಭಾಗಾ
ದಿಕಪ್ರದೇಶಂಗಳೆಂಬ ಭೇದದೆ ಬಂಧಂ
ಪ್ರಕಟಚತುರ್ವಿಧಮಕ್ಕುಂ
ಪ್ರಕೃತಿಯುಮೆಂಟುಪ್ರಕಾರಮೆನಿಸುವುದದಱೊಳ್ ೨೮೭

ವಚನ : ಜ್ಞಾನಾವರಣೀಯಮುಂ ದರ್ಶನಾವರಣೀಯಮುಂ ವೇದನೀಯಮುಂ ಮೋಹನೀಯಮುಮಾಯುಷ್ಯಮುಂ ನಾಮಮುಂ ಗೋತ್ರಮುಮಂತರಾಯಮುಮೆಂ ದಿಂತನುಕ್ರಮದಿಂ

ಕಂದ : ಅಯ್ದು ಮೊಂಭತ್ತುಮೆರಡುಮ
ಡೆಯ್ದುಪ್ಪತ್ತೆಂಟುನಾಲ್ಕು ನಾಲ್ವತ್ತೆರಡೆರ
ಡಯ್ದೆಂಬೀ ಪರಿಭೇದಮ
ನೆಯ್ದುವುದು ಜ್ಞಾನವೃತ್ತಿಮೊದಲ್ಗೊಂಡೆಂಟುಂ ೨೮೮

ವಚನ ಮತ್ತಂ ಜ್ಞಾನಾವರಣೀಯ ದರ್ಶನಾವರಣೀಯ ವೇದನೀಯಾಂತರಾ ಯಂಗಳ ಸ್ಥಿತಿಪ್ರತ್ಯೇಕಮುತ್ಕೃಷ್ಟದಿಂ ಮೂವತ್ತುಕೋಟಾಕೋಟಿಸಾಗರೋಪಮಂ

ಮೋಹನೀಯದ ಸ್ಥಿತಿಯೆಪ್ಪತ್ತುಕೋಟಾಕೋಟಿಸಾಗರೋಪಮ ನಾಮಗೋತ್ರಂಗಳ ಸ್ಥಿತಿ ಪ್ರತ್ಯೇಕಮಿಪ್ಪತ್ತು ಕೋಟಾಕೋಟಿಸಾಗರೋಪಮಮಾಯುಷ್ಯಕರ್ಮದ ಸ್ಥಿತಿ ಮೂವತ್ತ ಮೂಱು ಕೋಟಾಕೋಟಿ ಸಾಗರೋಪಮಮಕ್ಕು ಜಘನ್ಯಸ್ಥಿತಿ ವೇದನೀಯಕ್ಕೆ ದ್ವಾದಶ ಮುಹೂರ್ತಂ ನಾಮಗೋತ್ರಂಗಳ್ಗೆಂಟುಮುಹೂರ್ತಮುಳಿದವಕ್ಕಂತರ್ಮುಹೂರ್ತ ಮುಮಕ್ಕುಮಿಂತು

ಕಂದ: ಭಾವಕ್ಷೇತ್ರಾಪೇಕ್ಷಂ
ಜೀವನ ಕರ್ಮಸ್ವಭಾವ ಪರಿಪಾಕಮದೇ
ಭಾವಿಪೊಡನುಭಾಗಮಿದಂ
ಬೀ ವಿಧಮುಂ ಪ್ರಕಟಮಾದುದರ್ಹನ್ಮತದೊಳ್ ೨೮೯

ಸಲೆಬಂಧಭೇದದಿಂದ
ಗ್ಗಳಿಸಿದ ಸರ್ವಾತ್ಮಸುಪ್ರದೇಶಂಗಳೊಳಂ
ಕಲಿಲಪ್ರದೇಶಮೆಲ್ಲಂ
ನೆಲಸಿರ್ದಡೆ ತಾಂ ಪ್ರದೇಶಮೆಂಬುದದಕ್ಕುಂ ೨೯೦

ಇಂತು ಚತುರ್ವಿಧಮಾಗಿ ಸ
ಮಂತೊಪ್ಪುವ ಬಂಧತತ್ತ್ವಮಂ ವಿವರಿಸಿ ಜಿನ
ಪಂ ತಿಳಿಪುತ್ತಿರ್ದಂ ಮುನಿ
ಸಂತತಿಗಂ ಸಂವರಾದಿತತ್ತ್ವದ ತೆಱನಂ ೨೯೧

ವಚನ: ಅದು ಮತ್ತಮೆಂತೆನೆ

ಕಂದ: ಕರ್ಮಂಗಳಾಸ್ರವಂಗಳ
ನೊರ್ಮೊದಲೊಳ್ ನೆಱೆನಿರೋಧನಂಗೆಯ್ವ ದಿಟಂ
ಪೆರ್ಮೆಯ ಸಂವರಮೆನಿಕುಂ
ಧರ್ಮಂ ಸಮಿತಿ ತ್ರಿಗುಪ್ತಿಯಿಂ ಪುಟ್ಟುಗದುಂ ೨೯೨

ಸಂಸಾರಮೂಲಮಾಶ್ರವ
ಕಂ ಸಂವರಮೆಯ್ದೆ ಮೋಕ್ಷಮೂಲಮೆನಿಕ್ಕುಂ
ಸಂಶಯಮಿಲ್ಲಿದುವೆ ರಹ
ಸ್ಯಂ ಶಾಸನದಲ್ಲಿ ನಿರತಿಶಯಜಿನಪತಿಯಾ ೨೯೩

ಮಿಗೆ ಸಂವರತತ್ತ್ವಮನಾ
ಜಗದೀಶ್ವರನುಸಿರ್ದು ನಿರ್ಜರಾತತ್ತ್ವದ ದಂ
ದುಗದಂದಮನಿಂತೆಂದೊ
ಳ್ಪೊಗೆವನ್ನಂ ಬಗೆಗೆ ಮತ್ತೆ ಪೇಳುತ್ತಿರ್ದಂ ೨೯೪

ತಳೆದು ಶುಭಾಶುಭಕರ್ಮಂ
ಗಳನಾತ್ಮಂ ಬಿಡದೆ ನಿರ್ಜರಿಸುತಿಪ್ಪುದಜೀಂ
ದಳವಟ್ಟುದಿದಕೆ ಸಾರ್ಥವು
ನೊಳಕೊಂಡ ವಿನಿರ್ಜರಾಭಿಧಾನಂ ನಿಯತಂ ೨೯೫

ವಚನ : ಅದು ಮತ್ತೆ ಸಕಾಮನಿರ್ಜರೆಯೆಂದಕಾಮನಿರ್ಜರೆಯುಮೆಂದುಮೆರ ಳ್ತೆಱನಕ್ಕುಮಲ್ಲಿ ಪ್ರತೋಪಕ್ರಮದಿಂ ಮಾಡಲ್ಪಟ್ಟುದು ಸಕಾಮನಿರ್ಜರೆಯೆಂಬುದು ಸ್ವವಿ ಪಾಕದಿಂದಪ್ಪುದಕಾಮನಿರ್ಜರೆಯೆಂಬುದಿಂತು

ಕಂದ : ಅಭಿವರ್ಣಿಸಿದಂ ದಿವಿಜರ
ಸಭೆಗೆ ಜಿನಸ್ವಾಮಿ ನಿರ್ಜರಾತತ್ತ್ವಮನಿಂ
ತು ಭವಹರಮೋಕ್ಷತತ್ತ್ವ
ಪ್ರಭಾವಮಂ ಬಳಿಕೆ ತಿಳಿಯಪೇಳುತ್ತಿರ್ದಂ ೨೯೬

ಸಲೆ ಬಂಧ ಹೇತ್ವಭಾವದಿ
ನಲಘುವಿನಿರ್ಜರೆಯಿನಖಿಳಕರ್ಮಕ್ಷಯಮೇ
ವಿಳಸಿತಮೋಕ್ಷಮೆನಿಕ್ಕು
ಜ್ವಳರತ್ನತ್ರಯಮದಕ್ಕೆ ಕಾರಣಮಕ್ಕುಂ ೨೯೭

ಉತ್ಪಲಮಾಲೆ
ಬಪ್ಪಘಮಂ ನಿರೋಧಿಸುತುಮಿರ್ಪುದು ಬೋಧಮುಪಾರ್ಜಿತಾಘಮಂ
ತಪ್ಪದೆ ನಾಡೆಯುಂ ಕೆಡಿಸುತಿರ್ಪುದು ಚಾರುಚರಿತ್ರಮೆಯ್ದುವ
ಕ್ಕೊಪ್ಪುವ ಪುಷ್ಟಿಯಂ ಪಡೆವುತಿರ್ಪುದು ದರ್ಶನಮಿಾ ತ್ರಯಕ್ಕೆ ಸ
ಮ್ಯತ್ವದ ಯೋಜನಂ ಜಿರಸಲಿಂತಿವು ಮೋಕ್ಷಸುಖಕ್ಕೆ ಕಾರಣಂ ೨೯೮

ಕಂದ : ತತ್ತ್ವಾವಗತಿಜ್ಞಾನಂ
ತತ್ತ್ವಶ್ರದ್ಧಾನಮೆಸೆವ ದರ್ಶನಮುರು ಚಾ
ರಿತ್ರಂ ಪಾಪಾರಂಭನಿ
ವರ್ತನಮಿದು ಲಕ್ಷಣಂ ಸುರತ್ನತ್ರಯದಾ. ೨೯೯

ವಚನ : ಮತ್ತಮಾ ರತ್ನತ್ರಯಸಂಪತ್ತಿಯಿಂ ರಾಗದ್ವೇಷಾದಿಗಳ್ಗೆ ನಿರ್ನಾಶ ಮಕ್ಕುಮವಱ ನಾಶದಿಂ ಸಕಳಕರ್ಮಂಗಳುಂ ಕೆಟ್ಟುಪೋಕಿಂತು

ಕಂದ : ಕರ್ಮಕ್ಷಯದೊಳ್ಚರಮವ
ಘರ್ಮಾತ್ರಾಕಾರದಿಂದೆ ಲೋಕಾಗ್ರದೊಳಂ
ಪೆರ್ಮೆವಡೆದಿಪ್ಪನಾತ್ಮಂ
ನಿರ್ಮಳಮುಪ್ಪಷ್ಟಗುಣಸುಪುಷ್ಟ ಹೃಷ್ಟಂ ೩೦೦

ಅನುಪಮಗ್ನಿಶಿಖಾನ್ವಯದಿಂ
ಗಳ್ ತೇಜದಿಂದೂರ್ಧ್ವಗಾಮಿಯಾದೊಡಮದಱಿಂ ಮೇಲ್
ನೆಲಸಿರ್ದಂ ಪೋಗದೆಯ
ಗ್ಗಳಿಸಿದ ಧರ್ಮಾಸ್ತಿಕಾಯಮಿಲ್ಲಾದುದಱಿಂ ೩೦೧

ವಚನ: ಆ ಮೋಕ್ಷಪದದಲ್ಲಿ ನಿತ್ಯಸ್ಥಿತನಿತ್ತ ಮುಕ್ತಜೀವಂ ಪ್ರಾಗ್ದೇಹದಿಂ ಕಿಂಚಿದೂನನಾಗಿ ನಿರಂತರಸುಖಮನವಲಂಬಿಸುತ್ತಿರ್ದು

ಕಂದ: ನಿರತಿಶಯಮಪ್ಪಾಗಿ ಪೆರ್ಚಿದ
ಪರಿಬೋಧಾರಹಿತಮಾದ ಶಾಶ್ವತಸುಖದಿಂ
ಪಿರಿದಂ ತಣಿವುತ್ತಿರ್ದಂ
ದೊರೆಕೊಂಡ ಜರಾಮರತ್ವಶುದ್ಧಂ ಸಿದ್ಧಂ ೩೦೨

ವಚನ: ಇಂತು ನಿರೂಪಿತಸ್ವರೂಪಂ ಪಂಚಾಸ್ತಿಕಾಯ ಷಡ್ದ್ರವ್ಯ ಸಪ್ತತತ್ತ್ವ ನವಪದಾರ್ಥಂಗಳನಾಮೂಳಜೂಳನ್ನೈರಂತರ್ಯದಿನೊಳಕೊಂಡು ಚತುರ್ದಶರಜ್ಜೂತ್ಸೇಧದಿನೊಂದಂಬಡೆದ ತ್ರಸನಾಳಾಂತರಾಳದಧೋಲೋಕಂ ಮಧ್ಯಲೋಕಮೂರ್ಧ್ವಲೋಕಮೆಂಬ ಭೇದದಿಂ ಮೂಱಱಿನಕ್ಕುಮಲ್ಲಿ ಸಪ್ತರಜ್ಜುಪ್ರಮಿತ ದಕ್ಷಿಣೋತ್ತರಾಯಾಮಮುಮಕ್ಕುಮದು ನರಕಮಲ್ಲಿಂ ಮೇಲೆ ಭವನಮೆಂಬ ನಾಗಲೋಕಮಿಕ್ಕುಮಲ್ಲಿಂದಂ ಮೇಲೇಕರಜ್ಜುವಿಸ್ತೃತ ಮಧ್ಯಪ್ರದೇಶಮೊಳೇಕದ್ವೀಪಾಕೂಪಾರಮಹಾಕುಧರಪರ್ವತ ಮಂದರ ಮಹೀಧರ ಪೂರ್ವಾಪರವಿದೇಹಭರತೈರಾವತ ಕರ್ಮಭೋಗಭೂಮಿಸಮಾಕೀರ್ಣಸ್ವಯಂಭೂರಮಣಸಮುದ್ರಪರ್ಯಂತಮಾಗಿಪ್ಪುದು ಮನುಷ್ಯಲೋಕಮಲ್ಲಿಂಮೇಲೆ ಜ್ಯೋತಿರ್ಲೋಕಮನಾದಿಯಾಗಿ ಪಂಚರಜ್ಜುಪ್ರಮಾಣವಿಶಾಳಮಾದ ಮೇಗಣಭಾಗದಲ್ಲಿ ಷೋಡಶಕಲ್ಪಂಗಳಿರ್ದಪವಲ್ಲಿಂ ಮೇಲೊಂಭತ್ತುಗ್ರೈವೇಯಕಂಗಳಿಕ್ಕುಮಲ್ಲಿಂದಂ ಮೇಲೆ ನವಾನುತ್ತರೆಗಳಿಸಿವವಲ್ಲಿಂ ಮೇಲೆ ಸರ್ವಾರ್ಥಸಿದ್ಧಿಮಧ್ಯಮಪ್ಪ ಪಂಚಾನುತ್ತರೆಗಳೆ ಸೀಮೆಯಾಗಿಪ್ಪುದು ದೇವಲೋಕಮಿಾ ಮೂಱುಂ ಲೋಕಮುಂ ಘನೋದಧಿ ಘನಾನಿಳಮು ತನುವಾತಮೆಂಬ ಪೆಸರನುಳ್ಳ ವಾಯುತ್ರಯಪರಿವೇಷ್ಟಿತಮಾಗಿರ್ದುದುಮಿಂತುಪಲಕ್ಷಿತಮಾದ ತ್ರಿಲೋಕನಾಳಿಕಾಶಿಖರಶಿಖಾಶೇಖರಾಯಮಾಣ ಸಿದ್ಧಪರಮೇಷ್ಠಿ ಸಮಧಿಷ್ಠಿತಮಪ್ಪ ಕ್ಷಮಾನಂದಮೋಕ್ಷಮಿಕ್ಕುಮದಕ್ಕೆ ನಿರ್ಮಳಮಪ್ಪೇಕಾದಶನಿಳಯನಿಷ್ಠಿತ ಸಾಗಾರಧರ್ಮದೊಳಂ ಬಾಹ್ಯಾಭ್ಯಂತರಭೇದಭಿನ್ನ ದ್ವಾದಶವಿಧ ತಪೋಲಕ್ಷಣಮಪ್ಪನಗಾರಧರ್ಮದೊಳಂ ನೆಗಳ್ದಣುವ್ರತ ಮಹಾವ್ರತದೊಳ್ ಕೂಡಿದ ಸಮ್ಯಗ್ದರ್ಶನ ಜ್ಞಾನ ಚಾರಿತ್ರಗಳೆಂಬ ರತ್ನತ್ರಯಸಾಕಲ್ಯಮೇ ಕಾರಣಮದೆ ಭವ್ಯಜನಪರಮೋಪಾದೇಯಮೆಂದು ಸರ್ವಜ್ಞೇಶ್ವರಂ ನಿರವದ್ಯಸ್ಯಾದ್ವಾದಪ್ರತಿಷ್ಠಾಮುಖದಿಂ ಸಪ್ತಭಂಗಿ ಸಮಾಲಿಂಗನಭಂಗುರಮಾದ ಸಪ್ತತತ್ತ್ವಸ್ವರೂಪಮಂ ಪ್ರತಿಪಾದಿಸುತ್ತುಮಿರ್ದಲ್ಲಿ

ಚಂಪಕಮಾಲೆ

ಪರಮಜಿನೇಂದ್ರಚಂದ್ರಮುಖಮಂಡಳದಿಂದಮೃತಪ್ರವಾಹಮುಂ
ಕರಮೊಸರುತ್ತುಮಿರ್ದಪುದಿದೆಂಬಿನೆಗಂ ಪೊಜಪೊಣ್ಮುತಿರ್ದ ದಿ
ವ್ಯರವಮಶೇಷಭವ್ಯಜನಮಾನಸಕೈರವಷಂಡಮಂ ಸಮಂ
ತಿರದೆ ವಿಕಾಸಿಸುತ್ತುಮುರುಹರುಷದೊಳೊಂದಿಸುತಿರ್ದುದಾಕ್ಷಣಂ ೩೦೩

ವಚನ : ಇಂತನಂತಚತುಷ್ಟಯ ಲಕ್ಷ್ಮೀಸಮಾಶ್ಲಿಷ್ಟನಪ್ಪ ಧರ್ಮನಾಥಂ ಸಕಳ ತತ್ತ್ವಸಮುಚ್ಚಯಮಂ ಸಂಕ್ಷೇಪದಿಂ ತಿಳಿಪಂತು ಬೆಸಸುವುದುಮರಿಷ್ಟಸೇನಗಣಧರಾಗ್ರ ಗಣ್ಯಂ ಮಾಘಮಾಸದ ಕೃಷ್ಣಪಕ್ಷದ ಪಾಡಿವದ ಪೂರ್ವಾಹ್ಣದೊಳ್ ದ್ವಾದಶಾಂಗದರ್ಥಂ ಗಳುಮನಪರಾಹ್ಣದೊಳ್ ಚತುರ್ದಶಪೂರ್ವಪದಂಗಳುಮನವಧಾರಿಸಿ ಪ್ರಥಮಾನು ಯೋಗಂ ಚರಣಾನುಯೋಗಂ ಕರಣಾನುಯೋಗಂ ದ್ರವ್ಯಾನುಯೋಗಮೆಂಬ ನಾಲ್ಕು ವಿಕಲ್ಪಮಾಗಿ ಗ್ರಂಥರಚನೆಯಂ ಮಾಡಿ ಸಮಸ್ತಸಭಾಜನಹೃದಯಮಣಿಭಾಜನದಲ್ಲಿ ನಿಜ ವಚನರಸಾಯನಮಂನಿರಿಸುತ್ತುಮಿರ್ಪುದುಂ

ಚಂಪಕಮಾಲೆ

ಅವಧಿವಿಬೋಧದಿಂದಱಿದು ದೇವನ ಧರ್ಮವಿಹಾರ ಕಾಲಮಂ
ದಿವಿಜವರಂ ಕೃತಾಂಜಳಿಯನಿಟ್ಟು ಲಲಾಟದೊಳಂದು ಬಿನ್ನಪ
ಕ್ಕವಸರಮೆಂದು ಬಿನ್ನವಿಸಿದಂ ಜಿನರಾಜನ ಮುಂದೆ ನಿಂದಿದೇ
ಭುವನದೊಳಂ ವಿಹಾರಿಸುವ ಪೊತ್ತು ಜಗತ್ತ್ರಿತಯೈಕಪಾಲಕಾ ೩೦೪

ಮಹಾಸ್ರಗ್ಧರೆ

ಸಕಳಾರ್ಯಾಖಂಡದೊಳ್ ಪಾವನತರ ಭರತಕ್ಷೇತ್ರದೊಳ್ ಜೈನಧರ್ಮಾ
ಧಿಕಮಧ್ಯಾತ್ಮಪ್ರಭಾವಂ ಪ್ರಬಳಿಸಿ ಪಿರಿದುಂ ಪೆರ್ಚುವಂತಾಗಿ ಸತ್ಕಾ
ತುಕಮಪ್ಪ ಶ್ರೀವಿಹಾರಾಶ್ಚರ್ಯಮನೆಸಗಲ್ವೇಳ್ಕುಮೆಂದಾಗಳಾನಂ
ದಕರಪ್ರಸ್ಥಾನಶಂಸೀಪ್ರಪಟುಪಟಹಮಂ ಪೊಯ್ಸಿದಂ ದೇವರಾಜಂ ೩೦೫

ಮತ್ತೇಭವಿಕ್ರೀಡಿತ

ದೆಸೆಗಳ್ ಮಾರ್ದನಿಯಿಂದೆ ಧಿಂಕಿಡುವಿನಂ ಗಂಭೀರಭೇರೀರವ
ಪ್ರಸರಂ ಮಂಗಳಗೀತತುಂಗನಿನದಂ ವೀಣಾಮಹಾಕ್ವಾಣಮು
ರ್ವಿಸುವೆಲ್ಲಾ ಸುರಮಂಡಳೀಜಯಜಯಪ್ರಧ್ವಾನಮುಂ ಕೂಡಿಯಾ
ಗಸಮುಂ ಮೂವಳಸಾಗಿ ಮುತ್ತಿದುದು ಯಾತ್ರಾರಂಭಸಂದೋಹದೊಳ್ ೩೦೬

ಕಂದ : ಧರ್ಮಚಕ್ರಾಧಿಪತ್ಯ
ತ್ಕಾರ್ಮಂ ತಾನಾಗಿ ಸಕಳದಿಗ್ವಿಯಯಾತ್ರಾ
ನರ್ಮಮೆನೆ ತಳರ್ದನಲ್ಲಿಂ
ಧರ್ಮಜಿನಂ ಬಳೆಯೆ ಜನದ ಕೋಳಾಹಳಮುಂ ೩೦೭

ವಚನ: ಇಂತಖಿಳಭವ್ಯಜನಂಗಳ ಪುಣ್ಯಪ್ರೇರಣದಿನನೇಕಾಡಂಬರವಿಡಂಬನದಿಂ ಕಣ್ಗೊಂಡ ಸಮವಸರಣಮಂಡಳಮನಾಖಂಡಳಂ ನಭಸ್ಥಳದೆಡೆಯೊಳ್ ನಡಯಿಸಲ್ಲಿ

ಕಂದ: ಮುಂದೇಳಂ ಪಿಂದೇಳಂ
ಕೆಂದಾವರೆವೂಗಳಂ ಜಿನೇಶಂ ಪದವಿಡು
ವಂದು ತಂದಿರಿಸಿದಂ ದಿವಿ
ಜೇಂದ್ರಂ ಹರಿಪೀಠಿಕಾತ್ರಯಾಗ್ರಸ್ಥಳದೊಳ್ ೩೦೮

ವಚನ: ಅಂದಿಂತೊಟ್ಟು

ಕಂದ. ಶ್ರೀಪದಮಂ ಧರಿಸಿದೆನೆಂ
ಬೀ ಪದವಾಸಿಯನೆ ಮೆಱೆವ ಪದ್ಮದೊಳಿನ್ನುಂ
ಶ್ರೀಪದೆಪಿಂ ನೆಲಸಿರ್ದು
ವ್ಯಾಪಿಸಿದಳ್ ಪದ್ಮನಿಳಯೆಯೆಂಬೀ ಪೆಸರಂ ೩೦೯

ಪರಮಾನುರಾಗದತಿಶಯ
ಮಿರದೊಗೆವುತ್ತಿರ್ದುದಖಿಳಜನಚಿತ್ತದೊಳಂ
ವರಸಮವಸರಣಮಂಡಳಿ
ಭರದಿಂದೆ ವಿಹಾರಿಸುತ್ತು ಮಿರ್ಪಾ ಪದದೊಳ್ ೩೧೦

ಸೂಸುತ್ತುಂ ಸೌರಭಮಂ
ಲೇಸಂ ಮೆಯ್ಗೊಡರಿಸುತ್ತುಮಾಡಿಸುತುಂ ಧ್ವಜ
ರಾಶಿಗಳನೊಯ್ಯನೊಯ್ಯನೆ
ಬೀಸಿದುದನುಕೂಲಮಾಗಿ ಮಂದಸಮೀರಂ ೩೧೧

ಸುತ್ತಂ ಯೋಜನದಗಲದೊ
ಳೆತ್ತಂ ತೃಣಧೂಳಿಕೀಟಕಂಟಕಶಿಲೆಗಳ
ನೊತ್ತಮದಿಲ್ಲದ ತೆಱದಿಂ
ಬಿತ್ತರಿಸಿದರಾ ಮರುತ್ಕುಮಾರರ್ ನೆಲನಂ ೩೧೨

ಚಳೆಯಂಗೊಟ್ಟರ್ ತನ್ಮಹಿ
ತಳದೊಳ್ ಕರ್ಪೂರರಸಾರಕುಂಕುಮವಿಳಯ
ನ್ಮಳಯಜರಸಮಿಶ್ರಿತದಿಂ
ಜಳದಿಂದಂ ಸ್ತನಿತರೆಂಬ ಕುಮರರ್ ಸಲವಿಂ ೩೧೩

ಕನ್ನಡಿಯಂತಿರೆ ಥಳಥಳಿ
ಪುನ್ನತಿಯುಂ ತಳೆದು ರತ್ನಮಯಭೂಮಿತಳಂ
ಚೆನ್ನೆನಿಸಿತ್ತು ಮತ್ತಂ
ಸನ್ನುತಪರಿಸೂತ್ರಮಾಗಿ ಪರಿರಮಣೀಯಂ ೩೧೪

ಸರ್ವರ್ತುಪುಷ್ಪಫಳಮುಂ
ನಿರ್ವಹಿಸಿ ದಶಾಭಿಕೋಪಶಾಖಾವಳಿಯಿನ
ಖರ್ವಘನವೃಕ್ಷತತಿಯಿನ
ಗುರ್ವಾದುದು ಪೊಱಗೆ ಬಳಸಿದುಪವನಷಂಡಂ ೩೧೫

ತೋರಮಾಗಿರ್ದ ತೆನೆಗಳ
ಭಾರದಿನುಱೆಬಾಗಿ ಬೀಗಿ ಬೆಳೆದ ವ್ರೀಹಿ
ಸ್ಫಾರಸಸ್ಯಂಗಳಿಂದಂ
ಧಾರಿಣಿ ರೋಮಾಂಚಭರಮನಾಂತಂತೆಸೆಗುಂ ೩೧೬

ಪರೆದಿರ್ದಖಿಳಸುರಾಸುರ
ಪರಿಕರಮುಂ ಶ್ರೀವಿಹಾರದುತ್ಸವವಿಭವ
ಕ್ಕಿರದೆ ಕರೆಯುತ್ತುಮಿರ್ಪಮ
ರರ ಕಳಕಳನಿನದಸಂಭ್ರಮಂ ಕರಮೆಸೆಗುಂ ೩೧೭

ನೆಱೆಪತ್ತುವಿಟ್ಟು ತಮ್ಮೊಳ್
ತಱಿಸಂದಭಿಜಾತಿವೈರಮುಂ ಮಿತ್ರತ್ವ
ಕ್ಕೆಱೆಪಟ್ಟೆನಿಸಿದುದಾಗಳ್
ತುಱುಗಿರ್ದ ಸಮಸ್ತತಿರ್ಯಗಾಧಿಕಜೀವಂ ೩೧೮

ಪರೆದೋಡೆ ತಮುಂ ಕಿಡೆ ರಜ
ಮುರುಪ್ರಸನ್ನಂ ದಲಾಗಿ ತೋಱಿಕೆವೆತ್ತುದ
ದಿರದೆ ಪತ್ತುಂ ದಿಗಂತಂ
ಪರಮಮುನೀಶ್ವರ ಮನಃಪ್ರಚಾರದ ತೆಱದಿಂ ೩೧೯

ವಚನ: ಮತ್ತಂ ಲೋಕತ್ರಯೈಕ ಚಕ್ರವರ್ತಿಯ ನಿತ್ಯತ್ವಂಬೆತ್ತ ಮಹಾಚಕ್ರವರ್ತಿಪದಮನಿಳಾಚಕ್ರಕ್ಕೆ ಕೈಮಿಕ್ಕು ಸೂಚಿಸುತ್ತುಂ

ಮಹಾಸ್ರಗ್ಧರೆ

ಪರಿವೇಷಂಗೊಂಡ ಚಂಡಾಂಶುವ ಪೊಳೆವ ಮಹಾಮಂಡಳಂ ಸೇವೆಗಾಗಿ
ಸ್ಫುರಿಸುತ್ತುಂ ಬಂದು ಮುಂದಂ ನಡೆದಪುದೆನೆ ಕಾಲ್ಗಾಪಿನೊಳ್ ಬಪ್ಪ ಯಕ್ಷಾ
ಮರಸೇನಾಚಕ್ರಚೂಡಾಮಣಿಗಣಕಿರಣಂ ಸುತ್ತಲುಂ ರಂಜಿಸುತ್ತುಂ
ಬರೆ ಪೋಗುತ್ತಿರ್ದುದಾ ದೇವನ ಸಭೆಯ ಪುರೋಭಾಗದೊಳ್ ಧರ್ಮಚಕ್ರಂ ೩೨೦

ಕಂದ: ಆದಱ ಮುಂದೊಪ್ಪದಿಂ ನಡೆ
ದುದು ಕನದುರುವಜ್ರಚಿಹ್ನದಿಂದಂ ಚಿತ್ರಂ
ಪುದಿದ ಮಹಾವಿಜಯಧ್ವಜ
ಮುದು ನಾನಾಕ್ಷುಲ್ಲಕ ಧ್ವಜಾವೃತಮುಚ್ಚಂ ೩೨೧

ವಚನ: ಅದಱಿಂದಂ ಮುಂದೆ ಪಲವುಂತೆಱದ ಪಲ್ಲವಚ್ಛತ್ರಚಾಮರಾದಿ ಮಂಗಳ ಪರಿಕರಂಗಳಿಂದಳಂಕಾರಂಬಡೆದು

ಚಂಪಕಮಾಲೆ

ಘಳಘಳಿಸುತ್ತುಮಿರ್ಪ ಪೊಸಪೊಂಗಳಸಂಗಳ ಮೇಲೆ ಕೂಡೆ ಮಂ
ಗಳಮಣಿದರ್ಪಣಾವಳಿಗಳೊಪ್ಪಲುಮಂ ಪಿಡಿದಿರ್ದ ದೇವಸಂ
ಕುಳಲಲನಾಜನಂ ನಡೆವುತಿರ್ದುದು ಜಂಗಮಕಲ್ಪವಲ್ಲಿ ಸಂ
ಜುಳಲತಿಕಾವಿತಾನದ ಬೆಡಂಗನೆ ಭಂಗಮನಂದು ಮಾಡುತುಂ ೩೨೨

ಕಂದ: ಇಂತಷ್ಟಮಂಗಳಂಗಳ
ನಾಂತು ಬರಲ್ ಮುಂದೆ ದಿಗ್ವಧೂಜನಮಾಗಳ್
ಸಂತೊಸಮನೊದವಿಸಿದತ್ತ
ನಂತರದೊಳ್ ನೋಡೆ ಸಮವಸರಣವಿಹಾರಂ ೩೨೩

ವಚನ: ಈ ತೆಱದಿಂ ಚತುರ್ನಿಕಾಯದೇವರ್ಕಳಿಂದುಪಕಲ್ಪಿತಮಾದ ಚತುರ್ಥ ಸಾತಿಶಯದಿಂ ಮೆಱೆದು

ಉತ್ಪಲಮಾಲೆ

ಕಣ್ಣೆ ಮೆಯ್ಯಿಕ್ಕದಿರ್ಪಿರವು ನಾಲ್ಕುಮುಖಂಗಳವಾಗಿ ತೋರ್ಪ ಸೈ
ಪುಣ್ಯಮಶೇಷವಿದ್ಯೆಗಧಿನಾಥತೆ ಮೆಯ್ನೆಳಲಿಲ್ಲದಿರ್ಪ ಲಾ
ವಣ್ಯವಿಶೇಷಮೆಯ್ದೆ ಸಮಕೇಶನಖಸ್ಥಿತಿ ಭುಕ್ತ್ಯಭಾವಮಾ
ತಿಣ್ಣಮೆನಿಪ್ಪ ಶಕ್ತಿ ಜವಮಾಂಗದೊಳಂದೊಗೆವತ್ತು ನಾಡೆಯುಂ ೩೨೪

ಮತ್ತೇಭವಿಕ್ರೀಡಿತ

ದೆಸೆಗಿನ್ನೂಱುವಿಯೋಜನಾಂತರದೊಳಂದಿಲ್ಲಾಯ್ತು ದುರ್ಭಿಕ್ಷದೊಂ
ದೆಸಕಂ ಪ್ರಾಣಿವಧಂ ದುರಿತಪರಪೀಡಾಚಾರಮುಂ ರೋಗದು
ಬ್ಬಸಮುಂ ತಳ್ತುಪಸಗ್ಗಮುಂ ಬಡತನಂ ಮುಂತಾದಿವೆಲ್ಲಂ ಮಹಾ
ತಿಶಯೋತ್ಕರ್ಷವಿಶೇಷಸಂಪದದಿನಾ ಲೋಕತ್ರಯಸ್ವಾಮಿಯಾ ೩೨೫

ವಚನ: ಇಂತು ಘಾತಿಕರ್ಮಕ್ಷಯಾನಂತರ ಜನಿತ ದಶಾತಿಶಯದಿಂ ಮೆಱೆದು

ಉತ್ಪಲಮಾಲೆ

ಮುನ್ನೊಡವುಟ್ಟಿ ಪತ್ತತಿಶಯಂ ಮೆಱೆದತ್ತು ಬಳಿಕ್ಕೆ ಘಾತಿಕ
ರ್ಮಂ ನೆಱೆಪೋಗಿ ಪತ್ತತಿಶಯಂ ಬಿಡದಾದುದು ಮತ್ತೆ ಭಕ್ತಿಸಂ
ಪನ್ನಸುರಾಳಿ ಮಾಳ್ಪತಿಶಯಂ ಪದಿನಾಲ್ಕೊಗೆದಿರ್ದುದಿಂತು ಜೋ
ದ್ಯೋನ್ನತಿವೆತ್ತುದಂತತಿಶಯಂ ಸಲೆಮೂವತನಾಲ್ಕು ಧರ್ಮನೊಳ್ ೩೨೬

ವಚನ: ಅಂತನಂತಚತುಷ್ಟಯವಿಶಿಷ್ಟನಪ್ಪ ಧರ್ಮನಾಥಂಗೆ ಪರ್ಯಾಪ್ತ ಮಹಾಪ್ರಾತಿಹಾರ್ಯಪ್ರಭಾವಿತ ಚತುಸ್ತ್ರಿಂಶದತಿಶಯಶೋಭಾವಿಭವಮುಂ ತ್ರಿವಿಷ್ಟಪಾಧಿಪತ್ಯಮಂ ಸ್ಪಷ್ಟಂ ಮಾಡುತ್ತುಮಿರಲಾ ಪರಮಪಾವನಪ್ರಯಾಣ ಪ್ರಭಾವದೊಳ್

ಚಂಪಕಮಾಲೆ

ಬಿಳಿಯ ಗಜಂ ತಗರ್ ಮಹಿಷಿಕಂ ಮನುಜಂ ಮಕರಂ ಮೃಗಂ ಸಮು
ಜ್ವಳಿತತುರಂಗಮಂ ವೃಷಭಮೆಂಬಿವನೇಱಿ ಸಮಸ್ತಸೈನಿಕರ್
ಬಳಸಿರಲಿಂದ್ರನಗ್ನಿ ಯಮ ನೈರುತಿ ಪಾಶಿ ಮರುತ್ಕುಬೇರ ಮಂ
ಜುಳಶಿತಿಕಂಠನೆಂಬಖಿಳದಿಕ್ಪತಿಗಳ್ ನಡೆದರ್ ನಿಜಾಶೆಯೊಳ್ ೩೨೭

ಮತ್ತೇಭವಿಕ್ರೀಡಿತ

ಭರದಿಂ ಕಟ್ಟಿದ ಗೆಜ್ಜೆಗಳ್ ಕುಣಿದು ಮೆಟ್ಟುತ್ತಿರ್ದ ಮೇಲ್ವಜ್ಜೆಗಳ್
ದುರಿತಾಳಂಗುಡೆ ಕಾಲೆ ನಾಲಗೆಯವೊಲ್ ಬೀಱಲ್ ಗತಿಚ್ಛಾಯೆಯುಂ
ಪರಮಸ್ವಾಮಿಯ ಮುಂದೆ ಗೊಂದಣಿಸಿ ಸಂಗೀತಕ್ಕೆ ತಕ್ಕಂದದಿಂ
ಸುರನೈತಾಳಿಕರಾಳಿ ಪೇರಣೆಯೊಳಂ ತೋಱುತ್ತು ವೈಚಿತ್ರ್ಯಮಂ ೩೨೮

ಮಹಾಸ್ರಗ್ಧರೆ

ಬರವೇಳ್ ದಿಕ್ಪಾಳರಂ ಸಂಗಡಿಸಿ ನಡೆಯವೇಳಿಂದ್ರನಂ ಚಂದ್ರಸೂರ್ಯಾ
ಮರರಂ ಮುಂಪೋಗವೇಳೆಂದುಸಿರ್ವ ಚಮರಪ್ರರೋಚನರ್ ಸರ್ವರಂ ಚ
ಪ್ಪರಿಸುತ್ತುಂ ಚೆಲ್ವ ಪೊಂಗಟ್ಟಿಗೆವಿಡಿದ ಕರಂ ಯೋಜಿಸುತ್ತಿರ್ದರಾಗಳ್
ಪಿರಿದುಂ ಪುಷ್ಪಂಗಳಂ ಚೆಲ್ಲುವ ಪದದೊಳಪ್ಪೋಯೆಂಬಿದುಣ್ಮಿತ್ತು ಸುತ್ತಂ ೩೨೯

ವಚನ : ಇಂತು ಪೆಂಪಿನ ಸಂಪದಮೆ ರೂಪುಗೊಂಡುದೆಂಬಂತೆ ಪೊಂಪುಳಿಯೋಪ ಸೊಂಪನೊಳಕೊಂಡ ಸರ್ವಜ್ಞನ ಸಭಾಮಂಡಳಂ ಕುಂತಳಾವಂತಿ ಕುರುಜಾಂಗಣ ಲಾಳ ಮಾಳವ ಚೋಳ ಪಾಂಚಾಳ ಮಹಾರಾಷ್ಟ್ರ ರಾಷ್ಟ್ರ ಮರು ಮಳಯ ಮಗಧಾದಿ ನಿಖಿಳ ವಿಷಯಂಗಳೊಳ್ ಧರ್ಮತೀರ್ಥಪ್ರಭಾವನಿಮಿತ್ತಂ ವಿಹಾರಿಸುತ್ತುಮಿರ್ಪಲ್ಲಿ

ಕಂದ : ಮಿಗೆ ನಿಷ್ಕಲಾಭರಾದರ್
ಜಗದೊಳ್ ದುರ್ಜನರ ತೇಜದೆ ಸಜ್ಜನರೆಲ್ಲಂ
ದ್ವಿಗುಣಿಸಿ ನಿಷ್ಕಂಟಕಮಾ
ಯ್ತು ಗಣಿತಜನಮಂತೆ ಸಕಳಭೂತಳಮನಿತುಂ ೩೩೦

ಎಲ್ಲಿ ವಿಹಾರಿಸುವಂ ಜಿನ
ನಲ್ಲಿ ಮನೋದುಃಖಶೋಕಚಿಂತಾತಂಕಂ
ಪೊಲ್ಲಮೆ ಮೊದಲಾದವುಮಣ
ಮಿಲ್ಲದೆ ಜನಮೆಲ್ಲಮೆಯ್ದೆ ಸುಖಿಯಾಗಿಕ್ಕುಂ ೩೩೧

ವಚನ : ಮತ್ತಮಾ ಸಮವಸರಣಮಂಡಳಮೆಂತಿರ್ದುದೆಂದೊಡೆ

ಕಂದ : ಧರ್ಮಮೆಂಬಮೃತಪೂರದ
ಪೆರ್ಮಳೆಯುಂ ಕಱೆದು ಭವ್ಯಜನಸಸ್ಯಂಗಳ
ನೊರ್ಮೆಯು ಮಾಣದೆ ಸಲಹುವ
ಪೆರ್ಮೆಯನೊಳಕೊಂಡ ಮೇಘಮಂಡಳಮೆನಿಕುಂ ೩೩೨

ಮಹಾಸ್ರಗ್ಧರೆ
ಕಿಡಿಸುತ್ತುಂ ದುರ್ಮತಧ್ವಾಂತಮನನುಜಿತ ನಿಜತೇಜಃಪರಿವ್ಯಾಪ್ತಿಯಿಂ ಧಿಂ
ಕಿಡಿಸುತ್ತುಂ ದಿಕ್ಕನೆಲ್ಲಾ ಮರರ ಜಯಜಯಧ್ವಾನದಿಂ ಭವ್ಯರಂ ನೂ
ರ್ಮಡಿ ಸದ್ರತ್ನತ್ರಯಾಲಂಕರಣಚರಿತರಂ ಮಾಡುತುಂ ನಿಷ್ಪೃಹತ್ವಂ
ಬಡೆದಾರ್ಯಾಖಂಡದೊಳ್ ಮಾಣದೆ ವಿಹರಿಸಿದಂ ಧರ್ಮಚಕ್ರಾಧಿನಾಥಂ ೩೩೩

---

ಕಂದ : ಸುರತರು ಕುಸುಮಾಸಾರಂ
ಪುರುಹೂತಾನಂದಕಾರಮಿತಿವಿದೂರಂ
ಪರಮಧರ್ಮಾವತಾರಂ
ಕರಮೆಸೆದುದು ಸಮವಸರಣವಳಯವಿಹಾರಂ ೩೩೪

ವಚನ : ಮತ್ತಂ ದ್ಯಾವಾಪೃಥಿವೀವಿಭಾಗಮೆಲ್ಲಮನತ್ಯಾಶ್ಚರ್ಯ ಮಂಗಳ ಪ್ರಾಜಾ ಕಾರ್ಯಕರಣಸಂಜಾತ ಕಾಳಾಗರು ಧೂಪಕಳಾಪಸಮುದ್ಭಾಮಧೂಮಲತಾಸ್ತೋಮಾ

ಮೋದನೀಯಮುಂ ಸಮಸ್ತಪ್ರಸ್ತೂಯಮಾನವಿಸ್ತೀರ್ಣವದನಸ್ತೋಕನಿಸ್ತೂಳಸ್ಫಿಮಿತ ಗಭಸ್ತಿಮಯಮುಂ ಪೊಗಳ್ತೆವಡೆದ ಸದ್ಧರ್ಮಪೀಯೂಷರಸಸಮುತ್ಕರ್ಷವಿಶೇಷಿತಮಹಾ ಪ್ರವಾಹಸಮೂಹಮಯಮುಂ ನಿರಂತರಿತ ಪರಮಸುಖಮಯಮುಮಾಗೆ ನಿರವಶೇಷ ದಿವಿಜ ದನುಜ ಮನುಜ ತಿರ್ಯಕ್ಸಮಾಜಮಂ ಸುಕೃತಭಾಜನಮಂ ಮಾಡುತ್ತುಂ ವಿಹಾರಿಸುತ್ತುಂ ಬಂದು ಸಪ್ತಲಕ್ಷವರ್ಷಪ್ರಮಿತಮಪ್ಪ ಕೇವಳಿಕಾಲಂ ಮಾಸಾವಶೇಷ ಮಾದುದೆಂಬಂದಿಗೆ

ಕಂದ : ಹಡಗೆಂತಾಗಸಮೆಂಬಿಂ
ಗಡಲಂತೆ[1][ದಿರ್ಗ][1]ಸಮಂ ಪೊಕರಂ ದರ್ಮವುದಂ
ತಡಸಿ ಪೊರ್ದಿತ್ತು ತತ್ಸಭೆ
ತಡೆಯದೆ ಸಮ್ಮೇದಗಿರಿಯ ಮಸ್ತಕದೆಡೆಯಂ ೩೩೪

ಆಗಳರ್ಹತ್ಪ್ರಭಾವಮ
ದಾಗಿಸಿದುದಪೂರ್ವಶೋಭೆಯಂ ತತ್ಸಮ್ಮೇ
ದಾಗದೊಳೆಲ್ಲಾ ರುತುಗಳ್
ಬೇಗಂ ಬಂದಿರ್ದು ಪಡೆಪವೆನೆ ಜೋಜಿಗಮಂ ೩೩೬

ಉತ್ಪಲಮಾಲೆ

ತೋರಿಪವಾದ ಪಣ್ಗೊನೆಗಳೋಳಿಯ ಭಾರದೆ ಬಾಗುತಿರ್ದ ಭೂ
ಮೀರುಹಸಂಕುಳಂ ಪೊರೆದು ಬಂದುಣಾತಿರ್ಪಳಿಮಾಲೆಯುಂ ಮನೋ
ಹಾರಿಗಳಾದ ಪೂಗಿಡುಗಳಾಪಳಿ ತಳ್ತರಳುತ್ತುಮಿರ್ದ ಕ
ಲ್ಹಾರಮನುಳ್ಳ ಜೆಲ್ವ ತಿಳಿನೀರ ಕೊಳಂಗಳವಾಳ್ದ ವೊಪ್ಪಮಂ ೩೩೭

ಮತ್ತೇಭವಿಕ್ರೀಡಿತ

ಪಲವುಂ ಜೆಟ್ಟುಗಳಿರ್ದೊಡಂ ಬಗೆಯದೀಡೆನ್ನಲ್ಲಿಗೆಳ್ತಂದು ಮುಂ
ಗಳಚೂಡಾಮಣಿಯಾದನಲ್ತೆ ಪರಮಶ್ರೀಧರ್ಮನಾಥಂ ದಲ
ಗ್ಗಳಿಸಿತ್ತೆನ್ನಯ ಜನ್ಮಮೆಂದು ಮುದಮಂ ತಾಳ್ದಂತೆ ಸಮ್ಮೇದಮೆ
ಯ್ದುಲಿಯುತ್ತಿರ್ದುದು ಸೋಗೆವಿಂಡುಗಳ ಕೇಕಾರಾವದುದ್ರೇಕದಿಂ ೩೩೮

ಕಂದ : ಅಮಮ ದ್ವಿತೀಯಕಲ್ಯಾ
ಣಮನಾಂತಂ ಮೇರುಗಿರಿಯೊಳೀ ಜಿನಪತಿ ಪಂ
ಚಮಕಲ್ಯಾಣಮಿದೆನ್ನೊಳ್
ಸಮನಿಸಿದಪುದೆಂಬ ಮದದಿನೆನೆ ಸೊಂಪೆಸೆಗುಂ ೩೩೯

---

[1] ದೀ (ಕಗಚ)

ಮಾನಿತವಿಚಿತ್ರಕೂಟವಿ
ತಾನಂ ವಿಂಶತಿಜಿನೇಶಪರಿನಿರ್ವಾಣ
ಸ್ಥಾನಂ ನಿರ್ಜರಲಹರೀ
ಪೀನಂ ಸಮ್ಮೇದಶೈಲಮಾಯ್ತುಪಮಾನಂ ೩೪೦

ವಚನ: ಅಂತತೀವರಮ್ಯಮಾದ ಸಮ್ಮೇದಮೆಂಬ ಶೈಲದ ಚೂಳಿಕಾಗ್ರಭಾಗದೊಳೊಂದು ಸೌಂದರತರ ಚಂದ್ರಕಾಂತಶಿಲಾಮಯ ಪಾವನಪ್ರದೇಶದೊಳ್ ನಿಜಪರಮೌದಾರಿಕಶರೀರಸ್ಥಿತಿಕಾಲಮೇಕಮಾಸಮೆನೆ ಯುಜನವಿಹರಣಕ್ರಿಯಾವಿಭೂತಿಯುಮಂ ವಿಸರ್ಜಿಸಿ ನವೋತ್ತರಾಷ್ಟಶತಸಂಖ್ಯಾಗಣಧರಮುನಿವೃಷಭಪ್ರಭೃತಿಸಭಾಪರಿವೃತನಾಗಿ ಏಕಮಾಸ ಪರ್ಯಂತ ಕಾಯೋತ್ಸರ್ಗಸ್ಥಿತನುಮುತ್ತರಾಭಿಮುಖನುಮಾಗಿ

ಮಹಾಸ್ರಗ್ಧರೆ

ಪಿರಿದುಂ ಸ್ವಾಘಾತಿಕರ್ಮಕ್ಷಯಮನೆಸಗುವುದ್ಯೋಗದೊಳ್ ನಿಂದನಂದಂ
ಬರದೊಳ್ ನೀಂಬಿಟ್ಟು ತನ್ನಾ ಸಮವಸರಣಮಂ ಲಂಬಮಾನೋರುಬಾಹು
ಸ್ಫುರಿತಂ ಜ್ಯೋತಿಸ್ಸ್ವರೂಪಂ ಚರಮಸುಧವಳಧ್ಯಾನನಿಷ್ಠಾಪ್ರತಿಷ್ಠಂ
ಪರಮಶ್ರೀಧರ್ಮನಾಥಂ ಗುಣಭವನಮಣಿಸ್ತಂಭಮಿಪ್ಪಂತಿರಿರ್ದಂ ೩೪೧

ವಚನ: ಅಂತಿರ್ದು ಸಾಮಾನ್ಯಶುಕ್ಲಧ್ಯಾನಾಪೇಕ್ಷೆಯಿಂ ತೃತೀಯಮುಮಂ ಪರಮ ಶುಕ್ಲಧ್ಯಾನಾಪೇಕ್ಷೆಯಿಂ ಪ್ರಥಮಮುಮಪ್ಪ ಸೂಕ್ಷ್ಮಕ್ರಿಯಾಪ್ರತಿಘಾತಿಯೆಂಬ ಪರಮ ಶುಕ್ಲಧ್ಯಾನದೊಳ್ ನೆಲಸಿದಂತರ್ಮುಹೂರ್ತದಿಂ ಮೇಲೆ ಲಘುಕರ್ಮ ಪರಿಪಾಚನ ಶಕ್ತಿ ಪ್ರಾಪ್ತಿನಿಮಿತ್ತಂ ಸೂಕ್ಷ್ಮಶರೀರದೊಳ್ ಕೂಡಿ ಚರಮಾಂಗತ್ರಿಗುಣಬಾಹುಲ್ಯದಿನೇಕ ಸಮಯದೊಳ್ ಚತುರ್ದಶರಜ್ಜು ದೈರ್ಘಜೀವಪ್ರದೇಶವಿಸರ್ಪಣಮಪ್ಪ ದಂಡಸಮುದ್ಘಾತಮಂ ದ್ವಿತೀಯ ಸಮಯದೊಳ್ ಪೂರ್ವಪ್ರಣೀತ ಬಾಹಲ್ಯಾಯಾಮದಿಂ ಯುಮಳಕವಾಟಾಕೃತಿಯಾಗಿ ಜೀವಪ್ರದೇಶಪ್ರಸರ್ಪಣಮಪ್ಪ ಕವಾಟಸಮುದ್ಘಾತಮಂ ತೃತೀಯಸಮಯದೊಳ್ ವಾಯುತ್ರಯಾವಶೇಷಲೋಕಾಕಾಶ ಜೀವಪ್ರದೇಶಪ್ರವರ್ತನಮುಮಪ್ಪ ಪ್ರತರಸಮುದ್ಘಾತಮುಮಂ ಚತುರ್ದಶಸಮಯದೊಳ್ ಸಕಳಲೋಕವ್ಯಾಪ್ತಿಜೀವಪ್ರದೇಶ ಪ್ರವರ್ತನಮಪ್ಪ ಲೋಕಪೂರಣಸಮುದ್ಘಾತಮುಮಂ ನೆಱಪಿ ಇಂತು ದಂಡಕವಾಟ ಪ್ರವರ ಲೋಕಪೂರಣಮೆಂಬ ನಾಲ್ಕು ಸಮುದ್ಘಾತಂಗಳನನುಕ್ರಮದಿಂ ನಿರ್ವರ್ತಿಸಿ

ಕಂದ: ಈ ತೆಱದಿಂದಂ ನಾಲ್ಕುಮ
ಘಾತಿಸ್ಥಿತಿಕಾಲಮೆಲ್ಲಮಂ ಸರಿಮಾಡಿ ಬಳಿ
ಕ್ಕೋತು ನಿಜಮೂಲದೇಹದೊ
ಳಾತಂ ನೆಲಸಿರ್ದು ಕಿಡಿಸಲುದ್ಯತನಾದಂ ೩೪೨

ವಚನ : ಮತ್ತಮಂತರ್ಮುಹೂರ್ತದೊಳ್ ಬಾದರಮನೋವಚನೋಚ್ಛ್ವಾಸಕಾಯಯೋಗಂ ಸೂಕ್ಷ್ಮಮನೋವಚನೋಚ್ಛ್ವಾಸಂಗಳುಮನಡಂಗಿಸಿ ಸೂಕ್ಷ್ಮಕಾಯಯೋಗನಾಗಿ ಯನಂತರಂ ನಿರೋಧಂಗೆಯ್ದು ಯೋಗಕೇವಳಿಗುಣಸ್ಥಾನಮಂ ಪೊರ್ದಿ ಸಮುಚ್ಛಿನ್ನಪ್ರಾಣಾಪಾನಪ್ರಚಾರ ಸರ್ವಕಾಯವಾಙ್ಮನೋಯೋಗಪರಿಸ್ಪಂದಕ್ರಿಯಾವ್ಯಾಪಾರಮಪ್ಪ ಸಮುಚ್ಛಿನ್ನಕ್ರಿಯಾನಿವೃತ್ತಿಯೆಂಬ ಚತುರ್ಥ ಪರಮಶುಕ್ಲಧ್ಯಾನದೊಳ್ ನಿಂದು

ಕಂದ : ಪರಿಪೂರ್ಣಸಕಳಗುಣಕಂ
ಪರಮಯಥಾಖ್ಯಾತಚರಿತಕಂ ಪರಶೀಲಾ
ಕರನಾಗಿ ಮೋಕ್ಷಲಕ್ಷ್ಮೀ
ಪರಿರಂಭಾರಂಭಕೇಳಿಗುತ್ಸುಕನಾದಂ ೩೪೩

ವಚನ : ಆಗಿ ತದುಪಾಂತ್ಯಸಮಯದೊಳನ್ಯತರವೇದನೀಯ ದೇವಗತಿ ತತ್ಪ್ರಾಯೋಗ್ಯಾನುಪೂರ್ವ ಶರೀರಬಂಧನಸಂಘಾತವರ್ಣರಸಪ್ರತ್ಯೇಕಪಂಚಕಂ ಸಂಹನನಸಂಸ್ಥಾನ ಷಟ್ಕಂಗಂಧದ್ವಿತಯಂ ವಿಹಾಯೋಗತಿದ್ವಿತಯಂ ಸ್ಪರ್ಶಾಷ್ಟಕಮಗುರುಲಘುಚತುಷ್ಕ ಶುಭಾಶುಭ ಸ್ಥಿರಾಸ್ಥಿರ ಸುಸ್ವರದುಸ್ವರ ಸುಭಗದುರ್ಭಗ ಪ್ರತ್ಯೇಕ ಶರೀರ ಯಶಸ್ಕೀರ್ತ್ಯನಾದೇಯ ನಿರ್ಮಾಣಪರ್ಯಾಪ್ತ ನೀಚೈರ್ಗೋತ್ರಂಗಳೆಂಬೆಪ್ಪತ್ತೆರಡುಂ ಪ್ರಕೃತಿಗಳಂ ನಿರವಶೇಷಂ ಕೆಡಿಸಿ ಚರಮಸಮಯದೊಳವಶಿಷ್ಟಾನ್ಯತರವೇದ್ಯ ಮನುಷ್ಯಾಯುರ್ಗತಿತತ್ಪ್ರಯೋಗ್ಯಾನುಪೂರ್ವ ಪಂಚೇಂದ್ರಿಯ ತ್ರಸನಾಮ ಸುಭಗಾದೇಯ ಪರ್ಯಾಪ್ತ ಬಾದರ ಯಶಸ್ಕೀರ್ತ್ಯುಚ್ಚೈರ್ಗೋತ್ರತೀರ್ಥಕರನಾಮಂಗಳೆಂಬ ಪದಿಮೂಱುಂ ಪ್ರಕೃತಿಗಳನು ನ್ಮೂಳನಂಗೆಯ್ದಂತು ವೇದನೀಯಾಯುಷ್ಯನಾಮಗೋತ್ರಂಗಳೆಂಬ ನಾಲ್ಕುಮಘಾತಿಕರ್ಮಂಗಳನೊರ್ಮೊದಲೊಳ್ ನಿರ್ಮೂಳಂ ಮಾಡುವುದುಂ

ಮಹಾಸ್ರಗ್ಧರೆ
ಪರಶುಕ್ಲಧ್ಯಾನಮೆಂಬುಜ್ವಳತರಣಿಸಮುದ್ಯೋತನಾಶ್ಚರ್ಯದಿಂದಂ
ದುರಘಾತಿಧ್ವಾಂತಮೆಲ್ಲಂ ಕೆಡಱು ಪರೆದುಪೋಗಲ್ಕೆ ಕಿಟ್ಟೋಡಿ ದೋಷಂ
ಪರೆಯಲ್ ಭ್ರಷ್ಟಪಜ್ಜ್ಯದಿಂ ಭಾಸುರಕನಕದವೋಲ್ ದೀಪ್ಯಮಾನಸ್ವರೂಪಂ
ಪರಿಶುದ್ಧಂ ಪೊರ್ದಿದಂ ಶಾಶ್ವತಸುಖಮಯಮಂ ಮೋಕ್ಷಮಂ ಧರ್ಮನಾಥಂ ೩೪೪

ಕಂದ : ತನುವಾತವಾಯುಮಂಡಳಿ
ಘನಮಂಡಪಮಾಗಲಷ್ಟಮಂಗಳಮಾಗಲ್
ವಿನುತಾಷ್ಟಗುಣಂ ಮೋಕ್ಷಾಂ
ಗನೆಯೊಳ್ ನಲವಿಂದೆ ಮದುವೆನಿಂದಂ ಧರ್ಮಂ ೩೪೫

ಚಂಪಕಮಾಲೆ

ಸಕಳನೃಚಕ್ರವರ್ತಿಗಳ ಸೌಖ್ಯಮದೆಲ್ಲಮಮರ್ತ್ಯರೊಂದು ಸೌ
ಖ್ಯಕಣಸಮಾನಮಾಗದು ಸಮಸ್ತಸುರಾಳಿತದಿಂದ್ರಸೌಖ್ಯರಾ
ಶಿಕಮಹಮಿಂದ್ರರೊಂದೊಂದು ಸುಖಲೇಶಸಮಾನಮನೆಯ್ದದಾ ಸುಖ
ಪ್ರಕರಮುಮಿದ್ಧ [1]ಸಿ[1]ದ್ಧರನಿಮೇಷಸುಖಕ್ಕೆಣೆಯಾಗದಂತದಂ ೩೪೬

ಕಂದ : ಉಪಮಾತೀತಮೆನಿಪ್ಪತಿ
ವಿಪುಳಮೆನಿಪ್ಪೀದ್ರುಗಧಿಕಶಾಶ್ವತಸುಖದಿಂ
ದೆ ಪರಮಧರ್ಮಜಿನೇಶಂ
ಸ್ವಪರಹಿತಂ ಮುಕ್ತಿಯಲ್ಲಿ ತಣ್ಣನೆ ತಣಿದಂ ೩೪೭

ಮತ್ತೇಭವಿಕ್ರೀಡಿತ

ನಲವಿಂ ಕ್ಷಾಯಿಕಮೆಂಬ ಚಾರುತರಸಮ್ಯಕ್ತ್ವಂ ಮಹಾನಂತ ಬೋ
ಧಲಸದ್ದರ್ಶ ವೀರ್ಯಮುಂ ಸಮವಗಾಹಂ ಬಾಧಕಾಭಾವದ
ಗ್ಗಳಮುಂ ಗೌರವಲಾಘನಾಪಘನಮುಂ ಸೂಕ್ಷ್ಮತ್ವಮೆಂದಿಂತು ಮಂ
ಗಳಮಾದಷ್ಟಗುಣಂ ಕರಂ ನೆಲಸಿ ತನ್ನೊಳ್ ನಿಂದನಾ ನಿಶ್ಚಳಂ ೩೪೮

ಕಂದ : ತಾಂ ತನ್ನಂ ತನ್ನಾಂತನ
ಗಂತುಂ ವಶಮಾಗಿಮಾಡಿ ತನ್ನತ್ರಣಿನಾ
ದಂತಪ್ಪ ತನ್ನ ಗುಣಮೆಂ
ಟುಂ ತನ್ನೊಳ್ ನೆಱೆಯೆ ಮುಕ್ತಿಯೊಳ್ ನೆಲಸಿರ್ದಂ ೩೪೯

ಕಂದ : ಪದಸಿಂದೆ ಚೈತ್ರಮಾಸವಿ
ಶದಪಕ್ಷ ಚತುರ್ಥಿ ತಿಥಿಯೊಳಪರಾಹ್ಣದ ಕಾ
ಲದೊಳಂ ಧರ್ಮಜಿನೇಶಂ
ಮುದದಿಂದಂ ಮೋಕ್ಷಲಕ್ಷ್ಮಿಗಧಿಪತಿಯಾದಂ ೩೫೦

ವಚನ : ಆ ಮೋಕ್ಷದ ಸ್ವರೂಪಮೆಂತುಟೆಂದೊಡೆ

ಕಂದ : ಮನುಜಕ್ಷೇತ್ರದವೊಲ್ ಪಾ
ವನಮೋಕ್ಷಮದೊಂದು ಲಕ್ಷಯೋಜನದಗಲಂ
ಘನಮಾದ ತೋರದಭಿಶೋ
ಭನಮುಂ ನಾಲ್ವತ್ತಯ್ದುಯೋಜನಮಕ್ಕುಂ ೩೫೧

---

1 ಋ (ಕ)

ಸಮವೃತ್ತಮೆಂಟುಯೋಜನ
ಮಮಳತರಸ್ಫಟಿಕಮಯಮದತಿರಮಣೀಯಂ
ಸಮನಿಸಿದನಂತಸಿದ್ಧರ
ಸಮಿತಿಗೆ ಕಡುತೆಱಪನೀವುತಿರ್ಕ್ಕುಂ ಸತತಂ ೩೫೨

ಆರಯ್ವಡಮಾಷತ್ಪ್ರಾ
ಗ್ಭಾರಶಿಳಾವಳಯಮಾಯ್ತು ಶೋಭಾನಿಳಯಂ
ಸಾರಜಗತ್ತ್ರಯಲಕ್ಷ್ಮಿಯ
ಚಾರುಸಿತಚ್ಛತ್ರದಂತಿರಾನಂದಕರಂ ೩೫೩

ಆಕ್ಷಯಮಪ್ರಸರ್ಭವಮವಿ
ಪಕ್ಷಮತೀಂದ್ರಿಯಮನಿಂದ್ಯಮನುಪ್ರದವಮನ
ಪೇಕ್ಷಮನಿಪ್ಪತಿಶಯಪರಿ
ಲಕ್ಷಿತಮಪ್ಪುದು ಪವಿತ್ರಸಿದ್ಧಕ್ಷೇತ್ರಂ ೩೫೪

ವಚನ: ಇಂತು ವಿಶಿಷ್ಟಶೋಭಾಸಮುಪಜುಷ್ಟಮಾದಷ್ಟಮಭೂಮಿಯೆನಿಸಿದ ತ್ರೈಳೋಕ್ಯಶಿಖರದೊಳತಿಪ್ರಸಿದ್ಧಮುಂ ಶುದ್ಧಮುಮಾಗಿರ್ದ ಸಮಿದ್ಧಸಿದ್ಧಶಿಲೆಯ ಮೇಲಣ ವಾಯುತ್ರಯ ಭಾಗದೊಳ್ ಕಿಂಚಿನ್ನ್ಯೂನ ಚರಮಶರೀರಮಾತ್ರ ಜೀವಘನಾಕಾರನುಂ ನಿರಾಕಾರನುಂ ಪರಿಧೃತಪರಮಾತ್ಮಸ್ವಭಾವನುಂ ಸಕಳವಿನುತಮಹಾನುಭಾವನುಂ ನಿರಾಮಯನುಂ ನಿಭಾಮಯನುಂ ನಿತ್ಯನುಂ ಸ್ತುತ್ಯನುಂ ನಿರವಯವನುಂ ನಿರುಪಮನುಂ ನಿರಂತರ ಘನಸುಖನುಂ ನಿರಂತರ ಚಿದಭಿಮುಖನುಂ ನಿರಂಜನನುಂ ನಿರಭಿರಂಜನನುಮಾಗಿ ಧರ್ಮನಾಥಜಿನೇಶ್ವರಂ ಸಿದ್ಧಪದವಿಯೊಳ್ ನಿಂದನನ್ನೆಗಮಿತ್ತಲ್

ಕಂದ: ಅವಧಿವಿಬೋಧದಿನಱಿದಾ
ದಿವಿಜೇಂದ್ರಂ ಸಿಂಹವಿಷ್ಟರಾಗ್ರದಿನೆಳ್ದಂ
ದಿವಿಜಸಭೆವೆರಸು ತದ್ದಿ
ಗ್ವಿವರಕ್ಕೇಳಡಿಯನೆಸಗಿಯುವನತನಾದಂ ೩೫೫

ವಚನ: ಆಗಳಾ ಪರಮೇಶ್ವರ ನಿಪರಿನಿರ್ವಾಣಕಲ್ಯಾಣಸ್ಥಳಸಮಭ್ಯರ್ಚನ ಮಂದಸೋತ್ಸಾಹ ಸಮುತ್ಸುಕಚಿತ್ತನಾಗಿ

ಸ್ರಗ್ಧರೆ
ಇಂದ್ರಾಣೀಯುಕ್ತನಿಂದ್ರಂ ಧವಳಿಗಜಸಮಾರೋಹಣಂಗೆಯ್ದು ದೇವೀ
ವೃಂದಂ ಮಂದಾರವೃಂದಾರಕಸಮುದಯಮುಂ ಯಾನವೈಮಾನಸಾ
ಚ್ಛಂದಂಜಿತ್ತಿರ್ದ ಸದ್ವಾಹನನಿಚಯಮುಮಂದೇಱಿ ಸುತ್ತಂ ಬರಲ್ ಬ
ಳ್ಳಿಂದಂ ನಿರ್ವಾಣಕಲ್ಯಾಣಮನೆಸಗುವೆನೆಂಬುತ್ಸವಮಂ ಪೆರ್ಚಿ ಬಂದಂ ೩೫೬

ವಚನ: ಆ ಪೊತ್ತಿನೊಳ್

ಕಂದ: ಪರಿವಿಡಿಯಿಂ ಭವನಭ್ಯಂ
ತರಕ ಜ್ಯೋತಿಷ್ಕ ಕಲ್ಪವಾಸಿಕಲೋಕದೊ
ಳುರು ಶಂಖಾನಕ ಸಿಂಹೋ
ದ್ಧುರ ಘಂಟಾರವದಿನಜುಂದರವರೊರ್ಮೊದಲೊಳ್ ೩೫೭

ಶಾರ್ದೂಲವಿಕ್ರೀಡಿತ

ಜ್ಯೋತಿಷ್ಕಾಮರಸಂಕುಳಂ ಭವನವಾಸಿವ್ಯೂಹಮುಂ ವ್ಯಂತರ
ಬ್ರಾತಂ ಕಲ್ಪಜನಿರ್ಜರಪ್ರತತಿಯುಂ ಸ್ವಸ್ವಾಂಗನಾವಾಹನೋ
ತ್ಕೇತುಶ್ರೇಣಿ ಸಮಸ್ತಸೈನಿಕಜನಂ ಮುಂತಾದುವಂ ಕೂಡಿಕೊಂ
ಡೈತಂದಿಂದ್ರನೊಳೊಂದಿ ಮೆಲ್ಲನೆ ಬರುತ್ತಿರ್ದತ್ತದಾನಂದದಿಂ ೩೫೮

ವಚನ: ಅಂತು ಕಂತುರಾಜನ ಮಂತ್ರದೇವತೆಯರಂತಿರನಂತಸುಮನಸ್ಸೀಮಂತಿನೀಸಂತತಿಯಂತರಿಕ್ಷದಲ್ಲಿ ತಿಂತಿಣಿಗೊಂಡು ನಡೆತಪ್ಪಾಗಳದಱೊಳ್ ಕಡುಚೆನ್ನೆಯರ್ ಕೆಲಂಬರ್ ತಮ್ಮಯ ಬಟ್ಟಮೊಲೆಗಳ ಚೆಲುವಿಂಗೆ ಪಡಿಯಿಟ್ಟು ನೋಳ್ಪಂತೆ ಕನ್ನಡಿ ಕಳಸಂಗಳಂ ಪಿಡಿದು ನೆಗಪಿ ಕುಚಕಳಶಾಗ್ರದೊಳ್ ಪತ್ತಿಸಾರ್ಚಿ ನಡೆಯೆಯುಂ ಮತ್ತೆ ಕೆಲರ್ ಕಡುನೀಱೆಯರ್ ತಮ್ಮಯ ಮಿಸುಪ ನೊಸಲ ವಿಳಾಸದೊಳಸೂಯೆಗೆಯ್ವುದಱಿಂ ಕೆಂಪೇಱಿ ಮೂಡುತ್ತುಮಿರ್ದೆಳೆವೆಱೆಯುಮಂ ಪಿಡಿದು ತಮ್ಮಂಗೆಯ್ಯೊಳಗಿಕ್ಕಿ ತೋಱುಸುವಂತೆ ಕುಂಕುಮರಸಕಲಂಕಿತಮಾದ ಮಳಯಜದ ಪಂಕಂ ತೀವಿಕೊಂಡಿರ್ದ ಚಂದ್ರಕಾಂತದ ಶುಕ್ತಿಕೆಗಳಂ ಕರತಳದೊಳ್ ಪಿಡಿದು ನಡೆಯೆಯುಂ ಮತ್ತಂ ಕೆಲರ್ ದೇವಕನ್ನೆಯರ್ ಗಗನತಳದೊಳ್ ಬೀಳಲ್ವಿಡಿದಂಗಜ ಜಂಗಮ ಕಲ್ಪವೃಕ್ಷಲತೆಗಳಂತೆ ಲಂಬಮಾನಪುಷ್ಪಮಾಲಾಜಾಲಂಗಳಂ ಪಿಡಿದು ನಡೆಯೆಯುಂ ಕೆಲಂಬರ್ ಕಡುಜಾಣೆಯರ್ ತಮ್ಮಯ ವದನಮೆಂಬವಿಂದುಬಿಂಬಮನೋಲೈಸಲೆಂದು ಸಾರಿಗೆ ಬಂದು ನೆರೆದ ತಾರೆಗಳ ಬಳಗದಂತೆ ಥಳಥಳಿಸಿ ಪೊಳೆವ ಮುಕ್ತಾಫಳಮಯಾಕ್ಷತ ಸಂಕುಳಂ ತುಂಬಿದ ವರ್ತುಳಂಗಳಂ ಪಿಡಿದು ನಡೆಯೆಯುಂ ಬಳಿಯಂ ಕೆಲಂಬರಮರನಿತಂಬಿನಿಯರ್ ಪರಮಾಮೃತರಸಮನೊಳಕೊಂಡ ಸೂರ್ಯಮಂಡಳಮಂ ಪಾಣಿತಳದೊಳ್ ತಳೆದು ಬರುತ್ತಮಿರ್ದಪ್ಪರೆಂಬಂತೆ ಪರಿಪರಿಯ ಸಮೂಷ್ಮಾಯಮಾಣಂಗಳಂ ಪಿಡಿದು ನಡೆಯೆಯುಂ ಮತ್ತಂ ಕೆಲರ್ ಸುಪರ್ವಪ್ರಮದೆಯರ್ ಪ್ರದ್ಯುಮ್ನ ಚಕ್ರವರ್ತಿಯ ಸರ್ವರತ್ನನಿಧಿಲಕ್ಷ್ಮೀದೇವಿಯರೆಂಬಂತೆ ತೊಳಗಿ ಬೆಳಗಿ ಪೊಳೆವುತ್ತುಮಿರ್ಪ ಪದ್ಮರಾಗ ಮಾಣಿಕ್ಯದೀಪ ಪ್ರದೀಪಕಳಿಕಾಕಳಾಪಮಂ ಪಿಡಿದು ನಡೆಯೆಯುಂ ಕೆಲಂಬರ್ ವಿಬುಧವಧುಗಳ್ ಮಿಳಿರ್ದು ವಿಳ್ಳಿಸುವ ತಮಾಳದೆಳೆಗದಿರ್ಗಳಾವಳಿ ಬಳಸಿದ ಶರದದ ಮುಗಿಲನಾಂತ ನಂದನ ಮಂಗಳದೇವತೆಯರೆಂಬಂತೆ ಮಗಮಗಿಸುವಗರು ಧೂಪದ ಪೊಗೆಯ ಪೊದರ್ ಕವಲ್ವರಿದು ನೊಗದಿಂದೊಗೆದು ಸಮಾವರಿಸುವ ಧೂಪಘಟಂಗಳಂ ಕರಪಲ್ಲವದಿಂ ಪಿಡಿದು ನಡೆಯೆಯುಂ ಮತ್ತೆ ಕೆಲರಮರ ಕೋಮಳೆಯ

ರಗಣ್ಯಪುಣ್ಯಕರು ಕೆಯ್ಯೆ ನೀಲಿ ಸಫಲಮಾದುದೆಂಬಂತೆ ನವೀನನಾನಾವಿಧವಿದ್ರುಮಫಳಕುಳ ಕಳಿತಂಗಳಾದ ಪಳಿಕಿನ ಪಟ್ಟಳಿಕೆಗಳಂ ಪಿಡಿದು ಸೌಧರ್ಮೇಂದ್ರನ ಸುತ್ತಲುಂ ನಡೆದುಬರ್ಪಲ್ಲಿ

ಮತ್ತೇಭವಿಕ್ರೀಡಿತ

ಕುಸುರಂಜೆತ್ತು ತೊಳಪ್ಪ ಪಂಚವಿಧರತ್ನಸ್ತೋಮನಾನಾವಿಮಾ
ನಸಮೂಹಂಗಳಿನುಚ್ಚ ಕೇತನದಿನುದ್ಯತ್ತೋರಣಶ್ರೇಣಿಯಿಂ
ಪಟವೃತ್ತಂ ಪಲಸಂದಮಾದ ಜೆಗಿಂದಂ ತುಂಬಿತುಳ್ಕಾಡುತುಂ
ಪೊಸಚಿತ್ರಂ ಬರೆದಂಬರಕ್ಕೆ ದೊರೆಯಾಗಿರ್ದೊಪ್ಪಿದತ್ತಂಬರಂ ೩೫೯

ಮಹಾಸ್ರಗ್ಧರೆ

ಪಲವಂದಂಜೆತ್ತ ತೂರ್ಯಧ್ವನಿಯ ರಭಸಮುಂ ಮಂಗಳಾಚಾರಸಂಪಾ
ದಲಸದ್ಗಂಭೀರಗೀತಧ್ವನಿಯ ರಭಸಮುಂ ದೇವದೇವಿಪ್ರಕೋಳಾ
ಹಳಮುಂ ದ್ಯಾವಾಪೃಥಿವ್ಯಂತರದ ತೆಱಪಿನೊಳ್ ತುಂಬಿತುಳ್ಕಾಡುತುಂ ದಿ
ಕ್ಕುಳಮಂ ತಳ್ಪೊಯ್ಯುದತ್ಯದ್ಭುತಮೊ ಕಡೆಯ ಕಲ್ಯಾಣಪೂಜಾಪ್ರಯಾಣಂ ೩೬೦

ವಚನ: ಇಂತಗುರ್ವುವಡೆದ ದೇವರ್ಕಳ ಪೂರ್ವದೇವರ್ಕಳ ಪೆರ್ವಡೆ ನಿರ್ಭರ ವಿಭವದಿಂದಾ ಧರ್ಮನಾಥನ ನಿರ್ವಾಣಸ್ಥಳಮಂ ತೊಟ್ಟನೆ ಮುಟ್ಟಿವಂದು ಪುಟ್ಟಿದ ಭಕ್ತಿಯಿಂ ಪೊಡೆವಟ್ಟು

ಸ್ರಗ್ಧರೆ

ಆ ಸಮ್ಮೇದಾದ್ರಿಚೂಡಾಗ್ರದ ತೆಱಪನಿತುಂ ಮಂಗಳದ್ರವ್ಯಧಾರಿ
ಸ್ತ್ರೀಸಂದೋಹಕ್ಕೆ ಸರ್ವಾಮರರ ಸಮುದಯಕ್ಕಂ ಮುನೀರಾಜನಾಸ್ಥಾ
ಳೀಸಂಘಾತಕ್ಕಮಿಂಬಿಲ್ಲದೆ ನೆಱೆಕಿಱಿದಾಗಿರ್ದತ್ತು ತಚ್ಛೃಂಗಮುಂ ದೇ
ವೇಶಂ ಮುಂತಾದ ದೇವರ್ ತ್ರಿವಿಧಿ ಮಿಗೆ ಬಲಗೊಂಡರಾನಂದದಿಂದಂ ೩೬೧

ವಚನ: ಅಂತು ಧರ್ಮನಾಥನಾಲಿಂಗನಂಗೆಯ್ದು ಮೋಕ್ಷಲಕ್ಷ್ಮಿಯ ಸಿರಿಮಂಚದ ಕೆಳಗೆ ಪೊಳೆವ ಪಳಚ್ಚನಾದಚ್ಚಪಳಿಕಿನ ಪಾವುಗೆಗಳಂತೆ ಥಳಥಳಿಪ ಚಂದ್ರಕಾಂತದ ಸಮಾಧಿ ಶಿಲಾಪಟ್ಟಕಮನಾಖಂಡಳಂ ಕಂಡು ತ್ರಿಃಪ್ರದಕ್ಷಿಣಂಗೆಯ್ದು ತನ್ನಯ ಕೋಟೀರ ಕೋಟಿ ಪರಿಘಟಿತ ಮಣಿಮರೀಚಿನಿಚಯದಿಂದದಕ್ಕೆ ವಾಸವಶರಾಸನದ ಬಾಸಣಿಗೆಯನಿಕ್ಕುವಂತೆ ಮೆಯ್ಯಿಕ್ಕಿ ಮುಂದೆ ಕುಳ್ಳಿರ್ದು

ಚಂಪಕಮಾಲೆ

ತಣಿಯದು ತಂದುಕೊಟ್ಟು ಸುರಕೋಟಿ ಸುರದ್ರುಮಮಿತ್ತ ಪೂಗಳಂ
ತಣಿಯದು ಪೂಜಿಸಂ ಬಿಡದೆ ಮಾಡಿಯುಮಿಂದ್ರನ ಹಸ್ತಪಲ್ಲವಂ
ತಣಿಯದು ಮತ್ತಮಾತನ ಮೊಗಂ ಪೊಗಳ್ದುಂ ಗುಣಭಾರದೇಳ್ಗೆಯಂ
ಪ್ರಣುತಮೆನಿಸಿಪ್ಪ ಧರ್ಮಜಿನನಿರ್ವೃತಿಪೂಜೆಯುಮೇನುದಾತ್ತಮೋ ೩೬೨

ಕಂದ: ವಿಳಸಿತ ಪರಿನಿರ್ವಾಣ
ಸ್ಥಳಮಂ ಪೂಜಿಸಿಮುದೊಸೆದು ಪೊಡವಟ್ಟುದು ಕ
ಣ್ಗೊಳಿಪಂತಖಿಳಸುರಾಸುರ
ಕುಳಮುದಜಿರದೊಳ್ ಕ್ರೀಡಿಸುತ್ತುಮಿರ್ದುದು ಪಿರಿದುಂ ೩೬೩

ಪಂಚಮಕಲ್ಯಾಣೋದ್ಧ ಸ
ಮಂಚನದುತ್ಸವಮನಿಂತು ಚಿತ್ತ್ರರಿಸಿದುದಾ
ದಂ ಚೆಲ್ವನಾಗಿ ಸುರ (?)
ಸಂಚಯಮಚ್ಚರಿ ಜಗತ್ತ್ರಯಕ್ಕಪ್ಪನ್ನಂ ೩೬೪

ವಚನ: ಇಂತು ಪುರಂದರಪುರಸ್ಸರಮಾದ ಸರ್ವಗೀರ್ವಾಣಗಣಮೆಲ್ಲಂ ಧರ್ಮನಾಥ ತೀರ್ಥಂಕರನ ಪರಿನಿರ್ವಾಣಕಲ್ಯಾಣಪ್ರದೇಶಮನೆ ಶಸ್ತಸಮಸ್ತ ಮಂಗಳವಸ್ತುಗಳಿಂ ಸವಿಸ್ತರಮಾರಾಧಿಸಿದನಂತರಂ

ಚಂಪಕಮಾಲೆ

ನವರಸಮೊಪ್ಪಿತೋರಜಿಕ ಗಮಕಂ ನೆಜಿಕೈಮಿಗೆ ಪಂಚಭಾವಮುಂ
ತವೆಮುದ ಶೋಭೆಯುಂ ತಳೆಯೆ ಕೋಮಳಹಸ್ತತಳಾಭಿಚಾಳನಂ
ಪ್ರವರಪದಾಗ್ರಚಾಳನಮೊಳೊಂದಿ ಚಮತ್ಕೃತಿಯಾಗಿ ತೋರ್ಪಿನಂ
ಸವಿವಡೆದಿರ್ದ ನಾಟ್ಯಮನೊಡರ್ಚಿದನಾ ದಿವಿಜಾಧಿನಾಯಕಂ ೩೬೫

ವಚನ: ಇಂತು ಪುರುವಿಭೂತಿಯಿಂದಾ ಪುರುಹೂತಂ ವಿಷ್ಟಪತ್ರಯಕ್ಕೆ ವಿಸ್ಮಯಮಪ್ಪಂತು ನಿರ್ವಾಣನೃತ್ಯಮಂ ಚಿತ್ತ್ರರಿಸಿ ಮಾಡಿ ಮಂಗಳಸಂಗೀತಮುಂ ಪಾಡಿ ತದೀಯ ಮಹಾಮಹಿಮೆಯುಂ ಕೊಂಡಾಡಿ ಘನಾನುರಾಗದೊಳ್ ಕೂಡಿ ಪುಳಕಾಂಕುರಸಂಕುಲಂ ಮೂಡಿ ತತ್ತೀರ್ಥಂ ದಿವ್ಯಮೂರ್ತಿಯುಂ ನೀಡುಂ ನೋಡುತ್ತುಮಿರ್ಪುದುಂ

ಉತ್ಪಲಮಾಲೆ

ಮಂಜಿನ ಮಾಳ್ಕೆಯಿಂ ಪರೆದುಪೋಗಿ ಜಿನೇಶ್ವರದಿವ್ಯದೇಹಮಾ
ರಂಜಿತ ಕೇಶಮುಂ ನಖಮುಮೆಯ್ದುಳಿದಿರ್ದೊಡೆ ಗಂಧಸಾರದಿಂ
ಮಂಜರಿಗೊಂಡ ಕಪ್ಪುರದ ಘಟ್ಟಿಗಳಿಂದಮೆ ಮಾಡಿ ದಗ್ಧಮಂ
ಪುಂಜಿಸಿತೋರ್ಪ ಭಸ್ಮದಿನೊಡರ್ಚಿದುದಾ ಸಭೆ ಬೂದಿಯಾಟಮಂ ೩೬೬

ವಚನ: ಅಂದಿಂತೊಟ್ಟು ಬೂದಿಯಾಟಂ ಲೋಕದೊಳ್ ಪರೆದು ಪ್ರಸಿದ್ಧಮಾದುದು ಮತ್ತಮಾ ಕೃತಕೃತ್ಯನಾದ ಧರ್ಮನಾಥಸ್ವಾಮಿಯ ಮಹಾಮಹಿಮೆಯಂ ಮನದೊಳ್ ಮೆಚ್ಚಿ ಮೆಚ್ಚಿ ವಿಚಿತ್ರಂಬಡುತ್ತುಮಿದ್ದಾಖಂಡಳಂ ನಿಟಿಳತಟಘಟಿತಕರಕುಟ್ಮಳನುಂ ಜಯಜಯೋಚ್ಚಾರಿತಮುಖಮಂಡಳನುಮಾಗಿ

ಉತ್ಪಲಮಾಲೆ

ಮೂಜಗವೆಲ್ಲಮಂ ಕಿಡಿಸಿ ದುಃಖಮನೂಡುವ ಸರ್ವಕರ್ಮಕ
ವ್ರಾಜಮನೊರ್ಮೊದಲ್ ತವಿಸಿದುನ್ನತಿ ಕಾಲನನಿಕ್ಕಿಮೆಟ್ಟಿ ಸಂ
ಯೋಜಿಸಿದಾರ್ಪು ಸಂಸರಣವಾರ್ಧಿಯನೀಸಿದ ಶಕ್ತಿ ಶಾಶ್ವತ
ಶ್ರೀಜಸುಖಾನುಭೂತಿ ನಿನಗಲ್ಲದೆ ಕೂಡುಗುಮೇ ಜಿನೇಶ್ವರಾ ೩೬೭

ಸ್ರಗ್ಧರೆ

ಮುನ್ನಂ ಸಾಮ್ರಾಜ್ಯಮಂ ಬಿಟ್ಟಧಿಕತರತಪೋನಿಷ್ಠನಾದಿಂಬಳಿಕ್ಕಂ
ಕೆನ್ನಂ ತ್ರೈಲೋಕ್ಯವಂದ್ಯಾತಿಶಯಯುತಪರಮಾರ್ಹಂತ್ಯಲಕ್ಷ್ಮೀಪ್ರಭಾಸಂ
ಪನ್ನಂ ನೀನಾಗಿ ಮತ್ತಂ ಕೆಡದಮೃತಪದಪ್ರಾಪ್ತನಾಗಿರ್ದೆ ನಿನ್ನಂ
ತೌನ್ನತ್ಯಂಬೆತ್ತನಾವಂ ತ್ರಿಭುವನನುತಪಂಚಕಲ್ಯಾಣಯೋಗ್ಯಾ ೩೬೮

ಮಹಾಸ್ರಗ್ಧರೆ

ಎನಗಂ ನಿನ್ನಂತಿರೈದುಂತೆಱದ ಪರಮಕಲ್ಯಾಣಸಂಪತ್ತಿಯಂ ಪಾ
ವನಮಂ ನೀನಿತ್ತು ಧನ್ಯತ್ವಮನೊದವಿಪುದೆಂದಿಂದ್ರನಾನಂದದಿಂದಂ
ಘನವಿಜ್ಞಾನಾತ್ಮನಂ ಧರ್ಮಜಿನಪನನತಿಪ್ರಾರ್ಥನಂಗೆಯ್ದು ಮಂದಾ
ರ ನವೇರೂತ್ಫುಲ್ಲಪುಷ್ಪಾಂಜಳಿಯನೆಸಗಿದಂ ಮೋಕ್ಷಸೌಖ್ಯವ್ಯಪೇಕ್ಷಂ ೩೬೯

ಕಂದ: ವಚನಂಗಳೆಂಬ ಪುಷ್ಪ
ಪ್ರಚಯಂಗಳಿನೆಯ್ದೆ ಪೂಜಿಸಿದನಾ ಜಿನನಂ
ಶುಚಿ ಬಾಹುಬಲಿಮುನೀಶಂ
ಶಚಿಯೊಡೆಯನ ತೆಱದಿನೈದುಕಲ್ಯಾಣದೊಳಂ ೩೭೦

ವಚನ: ಸಮನಂತರ ಸಮಾನಸಮಾಧಿಸಮೇತ ಕೇವಳಿಗಳ ಕಳೇವರಮಂ ಬೇಱೆ ಬೇಱೆ ಪೂಜಿಸಿ ಪೊಡಮಟ್ಟು ಮಗುಳ್ದು ಪೊಗಳ್ದುಂ ಕುಂದದ ಪರಮಾನಂದದಿನಂದಂಬಡೆದು ತೋಱುವ ವೃಂದಾರಕವೃಂದದೊಳೊಂದಿದ ಸೌಧರ್ಮೇಂದ್ರಂ ಸೌಂದರತರ ಚಂದನರಸ ಧಾರಾಪೂರಪರಂಪರಾಸಂದೋಹದಿಂದೋಕುಳಿಯನಾಡಿ

ಮಹಾಸ್ರಗ್ಧರೆ

ಸುರಪಂ ನಿರ್ವಾಣಕಲ್ಯಾಣಮನೊಡರಿಸಿ ಪೂರೈಸಿದಂ ಧರ್ಮನಾಥಂ
ಗಿರದಿಂತೀ ಪಂಚಕಲ್ಯಾಣದ ವಿಭವಮನೆಯ್ದೆ ಕ್ರಮಂಗೊಂಡು ಯಾತ್ರೋ
ದ್ಧುರ ಶೋಭಾಸಂಪದಂ ಭೂತ್ರಯದೊಳೆಸೆವಿನಂ ಜೈನಮಾರ್ಗಪ್ರಭಾವ
ಸ್ಫುರಣಾಭಿವ್ಯಕ್ತಿಸಕ್ತಂ ಜಿನಪತಿಚರಣಾರಾಧನಾಭಕ್ತಿಯುಕ್ತಂ ೩೭೧

ವಚನ: ಬಳಿಯಮರಿಷ್ಟಸೇನಗಣಧರರ್ ಮುಖ್ಯರಾದ ಸಕಳಗಣಧರರ ಪಾದಾರವಿಂದಂಗಳನಭಿವಂದಿಸಿ ಬೀಳ್ಕೊಂಡು ತೀರ್ಥಭೂತಸಮ್ಮೇದಶೈಲಮಂ ತ್ರಿಃಪ್ರದಕ್ಷಿಣಂಗೆಯ್ದು

ಮಹಾಸ್ರಗ್ಧರೆ

ಸಿರಿದಾದುತ್ಸಾಹದಿಂದೆತ್ತಿದ ಪರಿಪರಿಯ ಛತ್ರದಿಂದಂ ಚಳಚ್ಚಾ
ಮರಸಂದೋಹಂಗಳಿಂ ಪೆಂಪೊದವಿ ಗಗನದೊಳ್ ತುಂಬಿ ಮುಂದೈಸೆ ಸೈನ್ಯಂ
ಪರಿವಾರಂಗೂಡಿ ರಾಗುಂಬಡೆದು ನಿಜನಿವಾಸಕ್ಕೆ ಪೋದಂ ಮಹಾಬಂ
ಧುರತೂರ್ಯಾರಾವಮೆಂಟುಂದೆಸೆಯನಲೆವಿನಂ ಪುಣ್ಯಮಾ ನೃತ್ಯರಂಗಂ ೩೭೨

ವಚನ : ಅಂತತೀವ ಪ್ರಭಾವನಾ ವಿಭವದಿಂ ಧರ್ಮಜಿನನಾಥನ ನಿರ್ವಾಣರಮಣೀಯ ಪರಿಣಯನಲಕ್ಷಣ ಚರಮಕಲ್ಯಾಣದೊಸಗೆಯನೆಸಗಿ ಪುಳೋಮಜಾತಂ ನಿಜನಿಶಾಂತಕ್ಕೆ ಬೇಗದಿಂ ಪೋಗಿ ತನ್ನೊಡನೆ ಬಂದ ಚತುರ್ನಿಕಾಯದೇವರ್ಕಳೆಲ್ಲರಂ ತಂತಮ್ಮ ನೆಲೆಗೆ ಬೀಳ್ಕೊಟ್ಟು ಕಳಿಪಿ ಸುಖದಿಸಿರ್ಪುದುಮನ್ನೆಗಮಿತ್ತಲ್

ಶಾರ್ದೂಲವಿಕ್ರೀಡಿತ

ಈ ಸಮ್ಮೇದಶಿಲೋಚ್ಚಯಾಗ್ರದೊಳಘಪ್ರಧ್ವಂಸನಂಗೆಯ್ದು ಮು
ಕ್ತೀಶತ್ವಂ ದೊರೆಕೊಂಡುದಾ ಪಿತೃಭರಶ್ರೀಧರ್ಮನಾಥಂಗವೆಂ
ಬೀ ಸೂಕ್ತಂ ಪರಧರ್ಮಭೂಪತಿಯ ಕರ್ಣಾಭ್ಯರ್ಣಮಂ ಸಾರ್ತರಲ್
ಸೂಸುತ್ತುಂ ಪ್ರಮದಾಶ್ರುಮಂ ಪುಳಕಸಸ್ಯೌಘಕ್ಕಮೆಳ್ದಂ ನೃಪಂ ೩೭೩

ವಚನ: ಅಂತು ಸಿಂಹಾಸನದಿನೆಳ್ದು ದಿಕ್ಕಿಂಗೇಳಡಿಯ ನಡೆದು ಸಾಷ್ಟಾಂಗ ಪ್ರಣತನಾಗಿ ತದ್ವಾರ್ತೆಯಂ ಪೇಳ್ದವಂಗಂಗಚಿತ್ತಮನಿತ್ತು

ಕಂದ: ತಂದೆಯೆಂಬೊಂದು ಮೋಹಂ
ಸಂದಂ ಮೋಕ್ಷಕ್ಕೆ ಮತ್ತಮೆಂಬೀ ಮೋಹಂ
ಕುಂದದಿನ್ನುಡಿಸೆ ಪರಧ
ರ್ಮಂ ದಮಯುತನಾ ಸ್ಥಳಕ್ಕೆ ಪೋಗಲ್ ಬಗೆದಂ ೩೭೪

ವಚನ: ಬಳಿಯಮಾನಂದಭೇರಿಯಂ ಪೊಯಿಸಿ ನೆರೆದುಬಂದ ಪರಿಜನಂ ಪುರಜನಂಬೆರಸು ಮಹಾಮಹಿಮೆಯಿಂ ಪೋಗಿ ನವೀನಶೋಭಾಸ್ಥೂಳೀಕೃತ ನಿರ್ವಾಣ ಸ್ಥಳಮನೆಯ್ದಿ

ಸ್ರಗ್ಧರೆ

ನಿರ್ವಾಣಶ್ರೀವಿವಾಹೋತ್ಸವದೊಳೆಸೆವ ನಾನಾಪ್ರಕಾರಪ್ರಶೋಭಾ
ಪೂರ್ವಂ ತಾನಾದ ವೇಳೀವಳಯದ ತೆಱದಿಂ ತೋರ್ಕೆವೆತ್ತಿರ್ದ ಭಾಸ್ವ
ನ್ನಿರ್ವಾಣಸ್ಥಾನಮಂ ನೋಡುವುದು ಜಯಜಯೋಚ್ಚಾರಣಂಗೆಯ್ವುತುಂ ಬಂ
ದುರ್ವೀಶಂ ಮೌಳಿಚೂಡಾಮಣಿಕಿರಣದಿನಾ ಭೂಮಿಯಂ ಬಣ್ಣವಿಟ್ಟಂ ೩೭೫

ವಚನ: ಇಂತು ಸಾಷ್ಟಾಂಗಪ್ರಣತನಾದಿಂಬಳಿಯುಮೆಳ್ದು ಕೈಗಳಂ ಮುಗಿದು ನೊಸಲ್ಗೆ ತಂದು

ಕಂದ: ನಿನ್ನಂತೆ ಪಂಚಕಲ್ಯಾ
ಣೋನ್ನತಿಯಂ ತಾಳ್ದುವಧಿಕಸಾಮರ್ಥ್ಯಮನಿ
ತ್ತೆನ್ನನುದ್ಧರಿಸು ದುಃಖಾ
ಪನ್ನನನೀ ಭವದಿನಿಂತು ಧರ್ಮಜಿನೇಂದ್ರಾ ೩೭೬

ಶಾರ್ದೂಲವಿಕ್ರೀಡಿತ
ಧಾತ್ರೀಭೂತಜಗತ್ತ್ರಯಾಧಿಪತಿಕ ಶ್ರೀಧರ್ಮತೀರ್ಥೇಶ್ವರ
ಸ್ತೋತ್ರೈಕಾಲಯದೇವ ನೀನೆನಗೆ ಮಾಡತ್ಯಂತಕಾರುಣ್ಯದಿಂ
ಧಾತ್ರೀಸಂಸ್ತುತಿಪಾತ್ರಮಪ್ಪ ಘನಸಮ್ಯಗ್ದರ್ಶನಜ್ಞಾನ ಚಾ
ರಿತ್ರಶ್ರೀಯುಮನುತ್ತರೋತ್ತರ ಯಶಶ್ರೀಯಂ ಸುಖಶ್ರೀಯುಮಂ ೩೭೭

ವಚನ: ಎಂದು ಕೀರ್ತಿಸಿಯುಮರ್ಥಿಸಿಯುಂ ಧರ್ಮನಾಥತೀರ್ಥನಾಥನ ಮೂರ್ತಿಧ್ಯಾನಮಂ ಭಾವಿಸಿ ನಾಮಸ್ಥಾಪನಂಗೆಯ್ದು

ಮಾಳಿನೀ
ಪರಿಮಳಜಳದಿಂದಂ ಕುಂಕುಮಾರಂಜನಾಬಂ
ಧುರಮಳಯಜದಿಂದಂ ತಂಡದೊಳ್ ಪುಂಜದಿಂದಂ
ಪರಿಪರಿಯಲರಿಂದಂ ಚಾರುನೈವೇದ್ಯದಿಂದಂ
ವರಮಣಿಮಯರಾಜದ್ದೀಪಿಕಾಶ್ರೇಣಿಯಿಂದಂ ೩೭೮

ಸರಳತರಳಧೂಮಸ್ತೋಮವದ್ಧೂಪದಿಂದಂ
ಸುರುಚಿರಕದಳೀ ಜಂಬೀರನಾರಂಗಚೋಚಾ
ದ್ಯುರುತರಫಳದಿಂದಾರಾಧನಂಗೆಯ್ದನಾ ಭೂ
ವರತಿಳಕನುದಾತ್ತಸ್ಥಾನಮಂ ಭಕ್ತಿಯಿಂದಂ ೩೭೯

ವಚನ: ಇಂತು ವಿಶಿಷ್ಟಾಷ್ಟವಿಧಾರ್ಚನಾದ್ರವ್ಯದಿಂದಾ ಧರ್ಮನಾಥಸ್ವಾಮಿ ಕರ್ಮಕ್ಷಯಂಗೆಯ್ದ ತಾಣಮನರ್ಚಿಸಿ ಪೊಡವಟ್ಟು ಪೊಗಳ್ದು ನಿಖಿಳಕರ್ಮಬಾಧಾನಿರ್ಮೋಚನಕ್ಕಿದು ಲಕ್ಷ್ಯರಕ್ಷೆಯಿಂದುಳಿದ ರಕ್ಷೆಯನಂಟಂಟು ನೊಸಲೊಳ್ ಬೊಟ್ಟಿಟ್ಟು ಮೆಯ್ಯೊಳೆಲ್ಲಂ ಪೂಸಿಕೊಂಡು ಪಾಡಿಯಾಡಿ ವಿವಿಧಪ್ರಕಾರ ನೂತನಬ್ರತಾರೋಪಣಮಂ ನೆಗಳ್ದು

ಕಂದ: ಪಲವು ಜೈನಾಗ್ರಹಾರಂ
ಗಳನಾಗಳ್ ಕೊಟ್ಟನಲ್ಲಿ ರತ್ನತ್ರಯಮಂ
ಜುಳ ಜೈನೋಪಾಧ್ಯಾಯರ
ಬಳಗಕ್ಕೆ ಹಿರಣ್ಯಕಾದಿ ಧಾರಾಪೂರ್ವಂ ೩೮೦

ವಚನ: ಸುವರ್ಣವಸ್ತ್ರಕಪಿಲಾದ್ಯನೇಕವಿಧ ನೈಮಿತ್ತಿಕದಾನಮಂ ನೃಪಾಳೋತ್ತಮಂ ಕೈಪಂದ ಕಲ್ಪವೃಕ್ಷಮೆಂಬಂತೆ ನಿರ್ವರ್ತಿಸಿ ಮತ್ತಂ ಬೀಳ್ಕೊಂಡು ಕಿಱಿದಂತರಂ ಪಾದಮಾರ್ಗದಿಂ ಪೋಪಪಸರದೊಳ್

ಕಂದ: ಇವರಿಗಿದುತ್ಸೇಧಂ ಮ
ತ್ತಿವರಿಗಿದೀ ವರ್ಣಮೆಂಬ ನಿಯಮಂ ಬಿಡದೊ
ಪ್ಪುವ ಜಿನಬಿಂಬಂಗಳನೆಭಿ
ನವರತ್ನಮಯಂಗಳಂ ನಿರೀಕ್ಷಿಸಿ ನರಪಂ ೩೮೧

ವಚನ: ಭರತಸಗರಾದಿ ಚಕ್ರವರ್ತಿಗಳವಸರ್ಪಣಿಯದೆ ಕಡೆಯಕಾಲದೊಳಪ್ಪ ಚತುರ್ವಿಂಶತೀರ್ಥಂಕರರ ಸ್ವರೂಪಸನೋತ್ಸೇಧವಮಂ ಜ್ಞಾನರ್ಧಿಸಂಪನ್ನರಪ್ಪ ಗಣಧರದೇವರಿಂ ತಿಳಿದಾ ಪರಿಯೊಳ್ ಮುನ್ನಮೆ ತತ್ಪರ್ವತೋಪತ್ಯಕದೊತ್ತಿನೊಳ್ ಮಾಡಿಸಿದ ವಿಶಾಳಕಳಧೌತ ಕಳಧೌತಮಯ ಚೈತ್ಯಾಲಯದೊಳ್ ಪಂತಿಗೊಂಡು ಪೊಳೆವ ತಜ್ಜಿನಪ್ರತಿಮೆಗಳಂ ಕಂಡು ಮನಂಗೊಂಡಲ್ಲಿಗೆ ಪೋಗಿಯಪವರ್ಗಸುಖಸಮುಪಾರ್ಜನೋನ್ಮುಖಂ ನವಧರ್ಮಭೂಪನಪಕ್ಕಭಿಮುಖತೆಯನೆಯ್ದಿ ನಿಂದು ಸಮಾರಾಧನಂಗೆಯ್ವುತ್ತಂ ಮಂಗಳಸ್ತೋತ್ರಮುಖರಮುಖನಾಗಿ

ಕಂದ: ಆದಿಪರಮೇಶ್ವರಂ ಮೊದ
ಲಾದಾತಂ ವರ್ತಮಾನಜಿನರಿಂಗೀತನ
ನಾದಿಯೆನಿಸಿರ್ದೊಡಂ ತಾ
ನಾದರದಿಂ ಕೊಡುಗೆ ನಮಗೆ ಹಿತಮಂ ಮತಮಂ ೩೮೨

ಬಿಡದದ್ವಿತೀಯವಿಭವ
ಕ್ಕೊಡೆಯಂ ತಾನಾಗಿಯುಂ ದ್ವಿತೀಯಕನೆಂಬೀ
ನುಡಿಯಂ ಪಡೆದಜಿತಜಿನಂ
ಸಡಗರಮಂ ಕಿಡಮಂ ದಲೊಡರಿಸುಗೆಮಗಂ ೩೮೩

ಸಂಭವಿಸುವುದಮೃತಸುಖಂ
ಸಂಭವಜಿನನಿಂ ತೃತೀಯನಿಂದೆಮಗೆ ಕರಂ
ಜಂಭಾರಿಮಕುಟತಟಗತ
ಶುಂಭನ್ಮಣಿಕಿರಣರಂಜಿತಾಂಘ್ರಿಕನಿಂದಂ ೩೮೪

ವಂದಿಸುತುಮಿರ್ಪೆನಾನಭಿ
ನಂದನ ಜಿನನಾಥನಂ ಸನಾತನ ಪರಮಾ
ನಂದಮಯರೂಪನಂ ನಲ
ಮಿಂದಂ ನಾಲ್ಕನೆಯ ತೀರ್ಥಕರನಂ ಪರನಂ ೩೮೫

ಸುಮತಿಜಿನನಾಥನಂ ಪಂ
ಚಮತೀರ್ಥಂಕರನನನುದಿನಂ ಪೂಜಿಸುವೆಂ
ಕ್ರಮನತಜನತಾಕಲ್ಪ
ದ್ರುಮನಂ ಸನ್ಮತಕುಮುದ್ವತೀಚಂದ್ರಮನಂ ೩೮೬

ಪದ್ಮಪ್ರಭಜಿನನಂ ಗುಣ
ಸದ್ಮನನಾಱನೆಯ ತೀರ್ಥನಾಥನನುಭಯಿಸಾ
ಪದ್ಮಾಲಿಂಗಿತ ತನುವಂ
ಪದ್ಮಸನಾರಾಧಿಪೆಂ ಸುಪದ್ಮೇಕ್ಷಣನಂ ೩೮೭

ನೆನೆವೆಂ ಸುಪಾರ್ಶ್ವಜಿನನಂ
ಮನಮೊಲ್ದೇೞನೆಯ ತೀರ್ಥನಾಯಕನಂ ನೂ
ತನಬೋಧಮಯಾತ್ಮಕನಂ
ಕನದುರುಮಣಿನಿಚಯಖಚಿತಹರಿವಿಷ್ಟರನಂ ೩೮೮

ಚಂದ್ರಪ್ರಭಜಿನನಾಥನ
ನಿಂದ್ರಸ್ತುತನಂ ನಿರಂತರ ಧ್ಯಾನಿಸುವೆಂ
ಸಂದಷ್ಟಮತೀರ್ಥಂಕರ
ನಂ ದಿನಕರಕೋಟಿದೀಪ್ಯಮಾನಪ್ರಭನಂ ೩೮೯

ನವಮಜಿನಾಧೀಶ್ವರನಂ
ನವಮಂದಾರಪ್ರಸೂನವರ್ಷಣಶೋಭಾ
ಪ್ರವರನನಭಿವರ್ಣಿಸುವೆಂ
ದಿವಿಜಸ್ತುತ ಪುಷ್ಪದಂತಪರಮೇಶ್ವರನಂ ೩೯೦

ಪತ್ತನೆಯ ತೀರ್ಥನಾಥನ
ನುತ್ತಮಶೀತಳಜಿನೇಶನಂ ಚಿಂತಿಸುವೆಂ
ಸುತ್ತಿರ್ದ ದುಃಖತಾಪನಿ
ವೃತ್ತಿನಿಮಿತ್ತಂ ಕೃಪಾಬ್ಧಿವರ್ಧನವಿಧುವಂ ೩೯೧

ಶ್ರೇಯಾಂಶ ಜಿನೇಶ್ವರನನ
ಶ್ರೇಯಗುಣಾಸ್ಪದನನರ್ಥಿಯಿಂ ಸ್ತುತಿಯಿಸುವೆಂ
ಸಾಯದ ಹುಟ್ಟದ ಸುಖದೊಂ
ದಾಯಪರಿಪ್ರಾಪ್ತಿಗಾಗಿಯೇಕಾದಶನಂ ೩೯೨

ಶ್ರೀವಾಸುಪೂಜ್ಯಜಿನನಂ
ದೇವಂ ಮಹಿಮಾವಿಶೇಷಭಾಭಾಸುರನಂ
ಭಾವಿಸುವೆಂ ದ್ವಾದಶನಂ
ಕೇವಳಬೋಧಪ್ರಭಾವಲಾಭನಿಮಿತ್ತಂ ೩೯೩

ಪದಿಮೂಱನೆಯ ಜಿನಂ ಸ
ನ್ಮದಮಂ ನಮಗೀಗೆ ವಿಮಳತೀರ್ಥಾಧೀಶಂ
ವಿದಿತಜಗತ್ತ್ರಯಭಾವಾ
ಭ್ಯುದಯಸ್ಥಿತಿಕಂ ವಿಶಿಷ್ಟವಿಮಳವಿಬೋಧಂ ೩೯೪

ಅನಂತಚತುಷ್ಟಯಯುತನ
ನನಂತಜಿನಾಧೀಶನಂ ಚತುರ್ದಶನಂ ಪ
ರಿಚಿಂತಿಸುವೆನೆನ್ನಮನದೊ (?)
ಳನಂತಸುಖಾಸ್ಪದಲಾಭಮಂ ಬಯಸಿ ಕರಂ ೩೯೫

ಧ್ಯಾನಿಸುವೆಂ ಧರ್ಮಜಿನಾ
ಧೀಶನನೀ ಪಂಚದಶಸುತೀರ್ಥಾಧಿಪನಂ
ಮಾನಿತಧರ್ಮಸ್ಥಿತಿಯಮನ
ನೊ[1][ನಂ ದಲ್][1] ಪ್ರಭವಿಸುತ್ತುಮಿರ್ದನನೊಲವಿಂ ೩೯೬

ಶಾಂತಿಜಿನಾಧೀಶ್ವರನಂ
ಚಿಂತಿಸಿ ಮನದಲ್ಲಿ ನಿಲಿಸಿ ಲಾಲಿಸುತಿಪ್ಪೆಂ
[2]ಕಂ[2]ತುಮಾನಾದ್ರಿಕುಲಿಶನ
ನಂತಕವಿಧ್ವಂಸದಕ್ಷನಂ ಷೋಡಶನಂ ೩೯೭

ವರಕುಂಥುನಾಥನಂ ಬಂ
ಧುರಮಹಿಮುಪನಾಥನಂ ಪರಿಸ್ತುತಿಗೆಯ್ವೆಂ
ಪಿರಿದುಂ ಪದಿನೇಳನೆಯನ
ನುರುತರಕಾರುಣ್ಯಪುಣ್ಯಪಣ್ಯಾಪಣನಂ ೩೯೮

---

[1]ನಲ್ (ಕಗಚ) [2] ಕುಂ (ಚ)

ಅರಜಿನವರನಂ ಪರಿಹೃತ
ಭವನಂ ಹೃದಯದೊಳೆ ಧರಿಸಿಕೊಂಡಾಡುವೆನಾ
ದರದಿಂ ಪದಿನೆಂಟನೆಯನ
ಸುರುಗುಣಗಣಮಣಿಪಯೋಧಿಯಂ ವೃಷನಿಧಿಯಂ ೩೯೯

ಮಲ್ಲಿಜಿನಂ ಜಗತ್ತ್ರಿತಯನ
ವಲ್ಲಭನೇಕೋನವಿಂಶತೀಶಂ ಧೀಶಂ
ಫುಲ್ಲಶರಬಾಣಭಂಜನ
ನುಲ್ಲಾಲಿತಮುಕ್ತಿಸುಖಮನೀಗೆಮಗನಿಶಂ ೪೦೦

ಮುನಿಸುವ್ರತನಂ ವಿಂಶತಿ
ಜಿನಪತಿಯಂ ಭಕ್ತಿಯಿಂದೆ ಭಾವಿಸುತಿರ್ಪೆಂ
ವಿನುತಾನೇಕಾಂತ ಶ್ರೀ
ಗಿನನಂ ಮುನಿಸುವ್ರತಾದಿವಂದಿತಪದನಂ । ೪೦೧

ನಮಿಜಿನರಾಜನನರ್ಚಿಪೆ
ನಮಳಗುಣಾಕರನನೇಕವಿಂಶತಿತಮನಂ ।
ಸಮವಸರಣಾದಿ ವಿಭವನ
ನಮನು ಮಹಾದುರಿತತಿಮಿರಭಾಸ್ಕರಕರನಂ ೪೦೨

ನೇಮಿನಾಥಂ ದಯಾರಥ
ನೇಮಿ ದ್ವಾವಿಂಶತೀರ್ಥಕರನಖಿಳಜಗ
ತ್ಸ್ವಾಮಿ ನಮಗೀಗೆ ಸುಖಮಂ
ಕಾಮಿತಮಂ ಕಾಮಿತಾಮರಸವನಸೋಮಂ ೪೦೩

ವರ ವಿಜಯಪಾರ್ಶ್ವಜಿನನಂ
ಪರಮನನಿಪ್ಪತ್ತಮೂಜನೆಯ ತೀರ್ಥಾಧೀ
ಶ್ವರನಂ ಪರಿಪೂಜಿಸುವೆಂ
ಶರಣಾಗತಸಕಳಭವ್ಯರಕ್ಷಾಮಣಿಯಂ ೪೦೪

ಶ್ರೀವರ್ಧಮಾನಜಿನಪನ
ನಾವಗಮಿಪ್ಪತ್ತನಾಲ್ಕನೆಯ ಪರಮಾರ್ಹ
ದ್ದೇವನನಾರಾಧಿಸುವೆಂ
ಕೈವಲ್ಯಸುಖಪ್ರದಾಯಕನನತಿಮುದದಿಂ ೪೦೫

ಮತ್ತೇಭವಿಕ್ರೀಡಿತ

ವರಕೈಳಾಸದೊಳಾದಿನಾಥಜಿನಪಂ ಚಂಪಾಪುರೀಸ್ಥಾನದೊಳ್
ಪರಮಶ್ರೀಯುತವಾಸುಪೂಜ್ಯಜಿನಪಂ ತಳ್ತೂರ್ಜಯಂತಾದ್ರಿಯೊಳ್
ಸುರರಾಜಾರ್ಚಿತ ನೇಮಿನಾಥಜಿನಪಂ ಪಾವಾಪುರೀಸ್ಥಾನದೊಳ್
ಕರುಣಾವಾರಿಧಿ ವರ್ಧಮಾನಜಿನಪಂ ಗೆಲ್ದಿಕ್ಕಿದರ್ ಕರ್ಮಮಂ ೪೦೬

ಉಳಿದಿಪ್ಪತ್ತು ಜಿನೇಶ್ವರರ್ ತಡೆಯದೀ ಸಮ್ಮೇದಶೈಲಾಗ್ರದೊಳ್
ಖಳಕರ್ಮಕ್ಷಯಮಂ ವಿನಿರ್ಮಿಸಿ ಮಹಾಮೋಕ್ಷಕ್ಕೆ ಸಂದಿರ್ದವರ್
ಸಲವಿಂದಂ ಸಲುತಿರ್ದವರ್ ಸಲೆ ಸಲಲ್ವೇಡಿರ್ದವರ್ ಕೂಡೆ ನಿ
ರ್ಮಳರೂಪರ್ ನಮಗೀಗೆ ಕೂರ್ತು ವಿಜಯಶ್ರೀಯಂ ನಿಜಶ್ರೀಯುಮಂ ೪೦೭

ಭರದಿಂದೀ ಸ್ತವನಂಗಳಂ ಪೊಗಳ್ವ ವರ್ಗಕ್ಕೈಹಿಕಾಮುತ್ರಿಕೋ
ದ್ಧುರಸೌಖ್ಯಂ ಕ್ರಮದಿಂ ವಿರಾಜಿಸುತುಮಿರ್ದಿಪ್ಪತ್ತನಾಲ್ವರ್ ಜಿನೇ
ಶ್ವರರಂ ಪೂಜಿಸಿ ನಚ್ಚಿ ಮೆಚ್ಚಿ ನುತಿಗೆಯ್ದು ಧ್ಯಾನಿಸುತ್ತಿರ್ಪ ಭವ್ಯ
ವರವರ್ಗಕ್ಕೆ ನಿರಂತರಂ ಸಮನಿಕುಂ ಭದ್ರಂ ಶುಭಂ ಮಂಗಳಂ ೪೦೮

ವಚನ: ಇಂತತ್ಯಂತಭಕ್ತಿಯಿಂ ಭೂತಕಕಾಂತಂ ವರ್ತಮಾನಚತುರ್ವಿಂಶತಿ ತೀರ್ಥಂಕರರಂ ಸ್ತುತಿಗೆಯ್ದು ವಂದಿಸಿ ಬೀಳ್ಕೊಂಡು ಬಸದಿಯಂ ಪೊಱಮಟ್ಟು ಕಿಱುಪೆಡೆಯಂ ನಡೆದುಪೋಗಿ ಬಳಿಯಂ ಸಕಳಚಾತುರ್ದಂತಬಲಮೆಲ್ಲಮಂ ಕೂಡಿಕೊಂಡು

ಉತ್ಪಲಮಾಲೆ

ಸೊಕ್ಕಿದ ಪಟ್ಟವರ್ಧನಗಜೇಂದ್ರಮನೇಱ ನರೇಂದ್ರನಂದು ನಾ
ಲ್ದಿಕ್ಕಿನೊಳಿರ್ದ ಚಾಮರಮನಿಕ್ಕಿದುದುದ್ಘವಿಳಾಸಿನೀಜನಂ
ಪಕ್ಕದ ವಂದಿಗಳ್ ಬಿಡದೆ ಬಣ್ಣಿಸಿ ಭಾಪುರೆ ಭಾಪು ಭಾಪೆನಲ್
ಮಿಕ್ಕ ವಿಭೂತಿಯಿಂ ತಳರ್ದು ತಾಂ ನಡೆಗೊಂಡನನೂನಸೈನ್ಯಕಂ ೪೦೯

ವಚನ: ಇಂತು ನೂರ್ಮಡಿ ಪೆರ್ಮೆವಡೆದ ವರಧರ್ಮಭೂಪಾಲನನ್ವಯರಾಜಧಾನಿಯಾದ ರತ್ನಪುರಕ್ಕಭಿಮುಖನಾಗಿ

ಸ್ರಗ್ಧರೆ

ನಾನಾಲಂಕಾರಸಾರೋಜ್ಜ್ವಳಮಣಿಘೃಣಿಯಿಂದಂ ತಳಿರ್ತಂತಿರಾದಾ
ಸ್ಥಾನಂ ಜೀಲ್ಪಾಗಲಾಕಾಶದ ತೆಱಪುಱಿ ಪೂತಂತಿರೊಪ್ಪಲ್ ಸಿತಚ್ಛ
ತ್ರಾನೀಕೋಲ್ಲಾಸದಿಂದಂ ಧರಣಿ ತೆಱಪಿದಿಲ್ಲೆಂಬಿನಂ ತೋಱಲೆಲ್ಲಾ
ಸೇನಾಭಾರಕ್ಕೆ ಬಂದಂ ಪುದಿಯೆ ಸಕಳಮುಂ ಮಂಗಳಾತೋದ್ಯನಾದಂ ೪೧೦

ವಚನ: ಅಂತಾ ಸೊಂಪುವಡೆದ ಸಂಪದಂಬೆರಸಿ ಬಂದು

ಚಂಪಕಮಾಲೆ

ಥಳಥಳಿಸುತ್ತುಮಿರ್ಪ ಮಣಿತೋರಣದೋರಣೆಯಿಂದೆ ಶೋಭೆಯಂ
ತಳೆದು ಸಮಂತು ಬಾಜಿಸುವ ಬದ್ದವಣಂಗಳಿನೊಪ್ಪುವೆತ್ತು ಮಂ
ಜುಳಮೆನಿಸೆ ಕಟ್ಟಿದೊಳ್ಗುಡಿಗಳೋಳಿಗಳಿಂ ಪೊಳೆಯುತ್ತುಮಿರ್ಪ ಮಂ
ಗಳಮಯಮಾದ ರತ್ನಪುರಮಂ ಪುಗುತಂದನಿಳಾತಳಾಧಿಪಂ ೪೧೧

ವಚನ: ಇಂತು ನಿಜರಾಜಧಾನಿಯಂ ಪೊಕ್ಕು ವಿಜಯವೈಜಯಂತಿಗಳ ಸಂತತಿ ತಿಂತಿಣಿಗೊಂಡು ಸಂದಣಿಸಿ ಮುಂದೆನಡೆಯೆ ಸೂಳುಸೂಳುವದೆದೊದುವ ಬಿರುದಿನ ಕಹಳೆಗಳ ಬಹಳಕೋಳಾಹಳಮೇಳಾಪಕದೊಡನೊಡನೆ ಪದನಱಿದು ಸೂಳೈಸುವ ಸಮುತ್ತಾಳ ನಿಸ್ಸಾಳ ನಿರ್ಘೋಷಣಂ ದಿಕ್ಚಕ್ರಮಂ ಮೂವಳಸುವಳಸಲುತ್ತುಂಗ ಶೃಂಗಾರ ಭಂಗಿಯುಮಂಗೀಕರಿಸಿನಂಗಡಿಗೇರಿಯೊಳ್ ಬರುತ್ತುಮಿರ್ಪಾಗಳ್

ಮಹಾಸ್ರಗ್ಧರೆ

ಇನಿತೊಂದಾಶ್ಚರ್ಯರೂಪಿಂ ಬಗೆವಡೆ ಮದನಂಗುಂಟೆ ಮೇಣ್ ದೇವರಾಜಂ
ಗಿನಿತೊಂದಾಶ್ಚರ್ಯ ಸಂಪದ್ವಿಭವಮಹಿಮೆ ಪೇಳುಂಟೆ ಮೇಣ್ ಸೂರ್ಯದೇವಂ
ಗಿನಿತೊಂದಾಶ್ಚರ್ಯಮುಂ ತೇಜಃಪ್ರಸರದೆಸಕಮೇನುಂಟೆ ಪೇಳೆಂದು ತಮ್ಮೊಳ್
ಜನಮೆಲ್ಲಂ ಕೂಡೆ ಮಾತಾಡುತುಮನಿಪನಂ ನೋಡುತಿರ್ದತ್ತದಾದಂ ೪೧೨

ವಚನ: ಎಂದು ನುಡಿವ ಪೌರರ ನುಡಿಯನಾಲಿಸುತ್ತುಂ ಲೀಲಾವಿನೋದದಿಂ ದಿಕ್ಕೆಲನಂ ನೋಡುತ್ತುಂ ರಾಜಮಂದಿರಮಂ ಮುಟ್ಟೆವಂದು

ಮಹಾಸ್ರಗ್ಧರೆ

ರಮಣೀಯಾಕಾರ ಕಾಂತಾತತಿ ಪಿಡಿದು ಬರಲ್ ಮುಂದೆ ಸತ್ಪಲ್ಲವೋಲ್ಲಾ
ಸಮನೆಯ್ದಾಂತಿರ್ದುದಂ ಕನ್ನಡಿಕಳಶಮನಾ ವೃದ್ಧರೆಲ್ಲಂ ನೃಪಾಳೋ
ತ್ತಮನಂ ಕಾಣ್ಬರ್ಥಿಯಿಂದಂದಿದಿರ್ವರಲವರಂ ನೋಡುತುಂ ನಾಡೆಯುಂ ಸಂ
ಭ್ರಮದಿಂ ಕೈಮುಕ್ಕು ಜೆಲ್ವಂಪಡೆದರಮನೆಯಂ ಪೊಕ್ಕನುತ್ಸಾಹದಿಂದಂ ೪೧೩

ವಚನ: ಆ ಸಿರಿಯ ಸಿರಿಗೆ ಕರುವೆನಿಸಿ ಗರಗರಿಕೆವಡೆದರಮನೆಯನರಸಂ ಪೊಕ್ಕು ರಾಜಾಂಗಣದೊಳ್ ನಿಂದು ವಿಜಯಗಜದಿಂದಿಳಿದು ಮುಗಿವ ಕೈಯುಂ ನೊಸಲ್ಗೆ ತಂದರಸು ಮಕ್ಕಳಂ ತಂತಮ್ಮ ನಿಳಯಕ್ಕೆ ಬೀಳ್ಕೊಟ್ಟು ಕಳಿಪಿ ಮಜ್ಜನಭೋಜನವ್ಯಾಪಾರಮಂ ತೀರ್ಚಿ ಸುಖದಿನಿರ್ದು

ಉತ್ಪಲಮಾಲೆ

ಪೊಂಗಳಸಂಗಳಿಂ ಗಗನಮಂ ಪರಿಚುಂಬಿಸುತಿರ್ದ ಕೋಟಿಕೂ
ಟಂಗಳಿನೊಪ್ಪಮಂ ಪಡೆದ ಬೆಳ್ಳಿಯ ಮಾಟದ ಚೈತ್ಯಗೇಹಮಂ
ತುಂಗಮೆನಿಪ್ಪುದಂ ನೆಱೆಯೆ ಮಾಡಿಸಿದಂ ವರಧರ್ಮಭೂಮಿಪಂ
ಪಿಂಗದೆ ಮಾಡೆ ನುಣ್ಬೆಡಗು ದಿಕ್ಕುಗಳಂ ಪೊಱೆಯಿಟ್ಟರೆಂಬಿನಂ ೪೭೪

ಮಹಾಸ್ರಗ್ಧರೆ

ಸಲೆ ನಾಲ್ಪತ್ತೈದು ಚಾಪೋನ್ನತಿಮಿತನಿಯತೋತ್ಸೇಧದಿಂ ನಾಡೆಯುಂ ಕ
ಣ್ಗೊಳಿಪನ್ನಂ ಧರ್ಮನಾಥಪ್ರತಿಮೆಯನತಿಶಾಯಿ ಪ್ರಭಾಭಾರದಿಂದಂ
ಪೊಳಪೇಱುತ್ತಿರ್ಪಿನಂ ಕಾಂಚನಮಯಮನದು ಪೂರ್ವದಾಕಾರದೊಂದ
ಗ್ಗಳಮೆಂತಂತಂತೆ ತಾಂ ಮಾಡಿಸಿದನೆಸೆಯಲೆಂಟುಂ ಮಹಾಪ್ರಾತಿಹಾರ್ಯಂ ೪೭೫

ವಚನ: ತದನಂತರಂ

ಉತ್ಪಲಮಾಲೆ

ಕೂಡೆ ಜಗಕ್ಕೆ ಚೋಜಿಗಮನಾಗಿಸುತುಂ ಜನಮೆಲ್ಲಮೆಯ್ದೆ ಕೊಂ
ಡಾಡುವಿನಂ ಮಹಾವಿಭವದಿಂದಮೆ ಧರ್ಮಜಿನಪ್ರತಿಷ್ಠೆಯಂ
ಮಾಡಿಸಿ ಬೇಡಿದರ್ಗಿರದೆ ಬೇಡಿತನಾಗಳೆಕೊಟ್ಟು ಧರ್ಮಮಂ
ನಾಡೊಳಗೆಲ್ಲಿಯುಂ ಪ್ರಭವಿಸುತ್ತೆಸೆದಂ ವರಧರ್ಮಭೂಭುಜಂ ೪೭೬

ವಚನ: ಅದಲ್ಲದೆಯುಂ

ಮಹಾಸ್ರಗ್ಧರೆ

ಪಿರಿದುಂ ದಿಕ್ಕುಂಭಿ ಕುಂಭಸ್ಥಳದೊಳಧಿಕ ಸಿಂಧೂರರಾಗಪ್ರಭಾವಂ
ಜರಿಯೆಂಬಂತೊಪ್ಪಿದತ್ತಾತನ ಪರಿವಿಲಸತ್ತೇಜದೊಂದೇಳ್ಗೆಯಾ ದಿ
ಕ್ಕರಿ ಸರ್ವಾಂಗಂಗಳೊಳ್ ಪೂಸಿದ ಪೊಸತೆನಿಪೊಳ್ಶಂಖಮೆಂಬಂತೆ ಚೆಲ್ವಂ
ಧರಿಸುತ್ತಿರ್ದತ್ತು ಮತ್ತಾತನ ಸಕಳಜನಾನಂದ ಕೃತ್ಕೀರ್ತಿಪೂರಂ ೪೭೭

ವಚನ: ಆ ಕಾಲದೊಳ್

ಚಂಪಕಮಾಲೆ

ಜನಮನಿತುಂ ನಿರಂತರ ಸಮಸ್ತಸುಖಾನುಭವಂಗಳಿಂದೆ ತ
ಣ್ಣನೆ ತಣಿದಿರ್ದು ತೂಗಲೊಱಗಿ ಸ್ಥಿರಮಾಗಿಯೆ ಬಾಳ್ವಿನಂ ಮಹಾ
ವನಿತಳರಾಜ್ಯಮೆಲ್ಲಮನಿದಂ ಪ್ರತಿಪಾಳಿಸಿದಂ ಸುಧರ್ಮದಿಂ
ವಿನುತ ಕಳಾಧಿಪಂ ಸಕಳಜೀವಕೃಪಂ ವರಧರ್ಮಭೂಮಿಪಂ ೪೭೮

ವಚನ: ಇಂತಖಿಳರಾಜಕರಾಜನ್ಯಕಮಾನ್ಯನುಂ ವದಾನ್ಯತಾವಿಭವಸಂಪನ್ನನುಂ ಧನ್ಯನುಂ ಧರ್ಮನಾಥಮಹಾರಾಜತನೂಜನುಮೆನಿಪ ವರಧರ್ಮನೆಂಬ ಮಹಾರಾಜನ್ಯಂ

ದುಷ್ಟನಿಗ್ರಹಶಿಷ್ಟಪ್ರತಿಪಾಲನಪೂರ್ವಕನಾಗಿ ಸುಖಸಂಕಥಾವಿನೋದದಿಂ ಸಾಮ್ರಾಜ್ಯಮನಾಳುತ್ತುಮಿರ್ದಂ

ಚಂಪಕಮಾಲೆ

ನವರಸನವ್ಯಮಂ ಸುಜನಸೇವ್ಯಮನಾಮುದಿತ ಪ್ರಭವ್ಯಮಂ
ಕವಿಜನಭಾವ್ಯಮಂ ಪರಮಧರ್ಮಜಿನೇಶ್ವರ ಚಾರುಕಾವ್ಯಮಂ
ತವೆಯದ ಭಕ್ತಿಯಿಂ ನೆಱೆಯೆ ಮಾಡಿ ಸಮುಜ್ವಳಕೀರ್ತಿಯಂ ಸಮಂ
ತವನಿಯೊಳೆಯ್ದೆ ಬಾಹುಬಲಿಪಂಡಿತದೇವನಿದಂ ನಿಮಿರ್ಚಿದಂ ೪೧೯

ಉತ್ಪಲಮಾಲೆ

ಈ ಕಲಿಕಾಲದಲ್ಲಿ ಬುಧಸಂತತಿ ಮೆಚ್ಚೆ ಪೊಗ[illegible]ಂ ರಸೋ
ದ್ರೇಕದೊಳೊಂದಿ ಧರ್ಮಜಿನನಾಥಪುರಾಣಮನೊಲ್ದು ಪೇಳ್ವ ಶ
ಕ್ತ್ಯೇಕನಿವಾಸ ಬಾಹುಬಲಿಪಂಡಿತದೇವನವೊಲ್ ಸುವಿದ್ಯೆಗಂ
ಲೋಕದೊಳಾವನೋ ನೆಱೆಯೆ ನೋಂತಸಮುನ್ನತಪುಣ್ಯಪೇಳ್ಗೆಗಂ ೪೨೦

ಮತ್ತೇಭವಿಕ್ರೀಡಿತ

ವರರತ್ನತ್ರಯದಿಂ ವಿರಾಜಿಸುವ ಗಂಭೀರಂ ದಲಾಗಿರ್ದ ಪೀ
ವರಮಾದುತ್ತಮಧರ್ಮನಾಥಚರಿತಾಂಭೋರಾಶಿಯಂ ಭಕ್ತಿಭಾ
ಸುರಬುದ್ಧಿಸ್ಥಿತಿಯೆಂಬ ಜೆಲ್ವಹಡಗಿಂದಂ ದಾಂಟಿ ಪೋದಂ ಸಮು
ದ್ಧುರ ಸಾಂಯಾತ್ರಿಕನೆಂಬಿನಂ ಭುಜಬಳಿಪ್ರಖ್ಯಾತ ಯೋಗೀಶ್ವರಂ ೪೨೧

ಕಂದ: ಪರಮಾರ್ಥಭಾವಮಂ ಪಡೆ
ದುರುಸುಖದಿಂದಿರ್ದನೆಲ್ಲರುಂ ಪೊಗಳ್ವನ್ನಂ
ಪಿರಿದುಂ ವಿವೇಕಿಯೆನಿಪಂ
ವರವಸ್ತುಪರೀಕ್ಷೆಯಲ್ಲಿ ಭಾವಕಮುಖ್ಯಂ ೪೨೨

ಅಸಹಾಯನಾಗಿ ಮಾಡಿದ
ನಸದೃಶಮೆನಿಪೀ ಪ್ರಬಂಧಮಂ ಭುಜಬಳಿಮುನಿ
ಯುಸಹಾಯನಾಗಿ ನಿಶ್ಶ್ರೇ
ಯಸಮಂ ಜಿನನೆಂತು ಮಾಡದಂ ನಿಜವಸಮಂ ೪೨೩

ಉತ್ಪಲಮಾಲೆ

ಈ ಕೃತಿಯೊಳ್ ಜಿನಾಗಮರಹಸ್ಯಮನೆಯ್ದುಸಿರ್ದಲ್ಲಿ ಕೇಳನ
ಸ್ತೋಕಸುಖಾಸ್ತ್ರವಿದ್ಗುರುಗಳಂ ಪರತತ್ತ್ವವಿಭೇದ ಸಂಸ್ಥಿತ
ಪ್ರಾಕಟದಲ್ಲಿ ಪ್ರಜ್ಞಜನಮಂ ಬೆಸಗೊಳ್ಳದ ಬಲ್ಪಿನೇಳ್ಗೆಗಂ
ತಾಕರನಾಗಿ ಬಾಹುಬಲಿದೇವನದೇನಸಹಾಯನಲ್ಲನೇ ೪೨೪

ಚಂಪಕಮಾಲೆ

ವಿಕಸಿತಪಂಕಜಂ ಸುಳಿವ ತೆಂಕಣ ತೆಂಬಲರಿಂಬು ಪೂರ್ಣಚಂ
ದ್ರಕಳೆ ನಿತಂಬಿನೀವಿಕೃತಿಭಾವಮುಲರ್ಚಿಸಲಾರ್ಪುದೇ ಮಹಾ
ಧಿಕ ಕವಿಚಕ್ರವರ್ತಿಯ ಚಮತ್ಕೃತಕಾವ್ಯರಸಂ ಸಮಸ್ತ ಭಾ
ವಕಜನದಂತರಂಗಮುಮಲರ್ಚಿಸಿ ರಾಗದೆ ರಂಜಿಪಂದದಿಂ ೪೨೫

ಮತ್ತೇಭವಿಕ್ರೀಡಿತ

ಶ್ರವಣಾನಂದದ ಪದ್ಯಮಂ ಪ್ರಿಯನೆನಿಪ್ಪಾಮಂಗೆ ಪೇಳ್ವಂ ಸಮಂ
ತವನತ್ಯುನ್ನತ ಸಂಪದಂಬೆರಸಿ ಬಾಳ್ಗುಂ ಖ್ಯಾತನಾಗಿರ್ಪುವಿಂ
ತವನೀಚಕ್ರಮೊಳೆಯ್ದೆ ರೂಢಿವಡೆದೊಪ್ಪುತ್ತಿರ್ದುದಾಶ್ಚರ್ಯದಿಂ
ದವೆ ರಾಜತ್ಕವಿಚಕ್ರಿಯೊಂದಮೃತವಾಣಿತ್ವಂತಃ ಲೋಕೋತ್ತರಂ ೪೨೬

ಮಹಾಸ್ರಗ್ಧರೆ

ವರ ಸಮ್ಯಕ್ತ್ವಪ್ರಭಾವಸ್ಫುರಣದೊಳಧಿಚೂಡಾಮಣಿ ಪ್ರೀತವಿದ್ವ
ತ್ಪರಿಷತ್ಸದ್ಗೋಷ್ಠಿಯೊಳ್ ಭಾಳತಳನಯನಕಂ ಲೇಸನೊಂದಲ್ಲದೇನಂ
ಪರರೊಳ್ ಮಾತಾಡದಿಪ್ಪುತ್ತಮಗುಣನಿಳಯಂ ಭಾಪು ಸಾಮರ್ಥ್ಯಮಂ ಪೀ
ವರಮಂ ತಾಳ್ದಿರ್ದ ವಿಖ್ಯಾತಿಯನುಱೆ ಪಡೆದಂ ಚಾತುರೀಜನ್ಮಗೇಹಂ ೪೨೭

ಉತ್ಪಲಮಾಲೆ

ಬಲ್ಲವರೆಲ್ಲರುಂ ನೆರೆದು ಮಾನಸಮೆಂಬೊರೆಗಲ್ಲ ಮೇಲೆ ಕೀ
ಳಿಲ್ಲದ ಮಾಳ್ಕೆಯಿಂದೊರೆದುನೋಡಿ ಪರೀಕ್ಷಿಸಿ ತಿದ್ದಿ ಕೊಟ್ಟ ಕುಂ
ದಿಲ್ಲದ ಮೌಕ್ತಿಕಸ್ಥಿತಿಯಿನೊಪ್ಪುವ ಕಾವ್ಯಸುವರ್ಣಮಾವಗಂ
ಪ್ರೋಲ್ಲಸಿತಾತಿ ಚಿತ್ರರಚಸಂ ಶ್ರವಣಕ್ಕೆರಡಕ್ಕೆ ಭೂಷಣಂ ೪೨೮

ಕಂದ: ಪೊಳೆಯುತ್ತುಮಿರ್ದುದೆನ್ನೀ
ವಿಳಸತ್ಕೃತಿಯಲ್ಲಿ ಷೋಡಶಾಶ್ವಾಸಂಗಳ್
ತೊಳಗುವ ಷೋಡಶಭಾವನೆ
ಗಳವೆಂತೊಪ್ಪುತ್ತುಮಿರ್ದವಾ ಜಿನಪತಿಯೊಳ್ ೪೨೯

ಮತ್ತೇಭವಿಕ್ರೀಡಿತ

ವಿಪುಳಪ್ರೌಢಪದಂಗಳಿಂ ಮೆಱೆವುದು ಚಿತ್ರಾರ್ಥಂಗಳಿಂದೊಂದಿ ಮು
ತ್ತುಪಮಾತೀತ ನವೀನಭಾವರಸದಿಂ ಚೆಲ್ವಾಗಿ ವಿದ್ಯಾಪ್ರಭಾ
ವಪರಂ ಬಾಹುಬಲಿಪ್ರತೀಶನೊಲವಿಂದಂ ಪೇಳ್ದ ಸದ್ಧರ್ಮನಾ
ಥಪುರಾಣಂ ನೆಲೆಗೊಂಡು ನಿಲ್ಕೆ ಜಗದೊಳ್ ಚಂದ್ರಾರ್ಕತಾರಂಬರಂ ೪೩೦

ಮನಮೊಲ್ದೋದುವ ಪೇಳ್ವ ಕೇಳ್ವ ಪುಳಕಂ ಮೆಯ್ದೋರ್ಪಿನಂ ಮೆಚ್ಚಿ ಲಾ
ಲನಮಂ ಮಾಳ್ಪ ಸಮಸ್ತಭವ್ಯನಿವಹಕ್ಕಂ ಧರ್ಮನಾಥಾಹ್ವಯಂ
ಜಿನನೀ ಸತ್ಕೃತಿನಾಯಕಂ ಪರಮಮುಕ್ತಿಶ್ರೀಮನೋವಲ್ಲಭಂ
ಘನಕಾರುಣ್ಯದಿ ಮಾಳ್ಕೆ ಮಂಗಳಮಹಾಶ್ರೀಯಂ ಯಶಶ್ರೀಯುಮಂ ೪೩೧

ಶಾರ್ದೂಲವಿಕ್ರೀಡಿತ

ಸ್ವಸ್ತಿಶ್ರೀ ಶಕವತ್ಸರಂ ಸಲೆ ಚತು[1]ಸ್ಸಪ್ತ[1]ದ್ವಯೈಕಾಂಕವಿ
ನ್ಯಸ್ತಂ ನಂದನವರ್ಷದಲ್ಲಿ ಮಧುಮಾಸ ಶ್ವೇತಪಕ್ಷಾಷ್ಟಮೀ
ವಿಸ್ತಾರೀಕೃತ ಸೋಮವಾರದೊಳಿದಂ ಸಂಪೂರ್ಣಮಂ ಮಾಡಿದಂ
ಪ್ರಸ್ತುತ್ಯಂ ಪ್ರತಿಭಾಪರಂ ಭುಜಬಲಿಪ್ರಖ್ಯಾತಯೋಗೀಶ್ವರಂ ೪೩೨

ಮಹಾಸ್ರಗ್ಧರೆ

ಸಿರಿದುಂ ಸಂತೋಷಮಂ ತಾಳ್ದಿದನತಿಶಯಮತ್ಕಾವ್ಯಮಂ ಮಾಡಿ ತೇಜ
ಸ್ಸ್ಫುರಣಂ ವಿದ್ಯಾಸಮುದ್ರಾಮೃತಮಯಕಿರಣಂ ವಂದಿಮಂದಾರರೂಪಂ
ಸ್ಮರರೂಪಂ ನೀರಜಂ ಬಾಹುಬಲಿಸುಕವಿರಾಜಂ ವಿಪಶ್ಚಿತ್ಸಹಾಯಂ
ಧರಣೀಶೋಲ್ಲಾಲನೀಯಂ ಘನಗುಣನಿಲಯಂ ಚಾತುರೀಜನ್ಮಗೇಹಂ ೪೩೩

ಗದ್ಯ : ಇದು ಸಕಳಭುವನಜನವಿನೂಯಮಾನ ಮಹಿಮಾಮಾನನೀಯ ಪರಮಜಿನ
ಸಮಯ ಕಮಳಿನೀಕಳಹಂಸಾಯಮಾನ ಶ್ರೀಮನ್ನಯಕೀರ್ತಿದೇವಪ್ರಸಾದ
ಸಂಪಾದಪಾದನಿಧಾನದೀಪವರ್ತಿಯುಭಯಭಾಷಾಕವಿಚಕ್ರವರ್ತಿ
ಬಾಹುಬಲಿಪಂಡಿತದೇವ ಪರಿನಿರ್ಮಿತಮಪ್ಪ ಧರ್ಮನಾಥ
ಪುರಾಣದೊಳ್ ಧರ್ಮತೀರ್ಥಕರ ನಿರ್ವಾಣಗಮನ
ಪರಿವ್ಯಾವರ್ಣನಂ

**ಷೋಡಶಾಶ್ವಾಸಂ**

---

[1] ಷಷ್ಠ (ಚ)

# ೧. ಪದ್ಯಗಳ ಅಕಾರಾದಿ

[ಇಲ್ಲಿ ಕೊಟ್ಟಿರುವ ಸಂಖ್ಯೆಗಳು ಆಶ್ವಾಸ ಮತ್ತು ಪದ್ಯಗಳಿಗೆ ಸಂಬಂಧಪಟ್ಟುವು]

### ಅ

## ಆ

ಓ



ಕ

## ಖ



## ಗ

ತ

ಧ



ನ

## ಹ

# ೨. ಶಬ್ದಾರ್ಥಕೋಶ

[ಮೊದಲನೆಯ ಅಂಕಿ ಪುಟವನ್ನೂ ಎರಡನೆಯ ಅಂಕಿ ಪದ್ಯವನ್ನೂ ನಿರ್ದೇಶಿಸುತ್ತದೆ]

### ಅ

ಅಂಗಚಿತ್ತ ೧೪೮-೨೨ವ ಪಾರಿತೋಷಿಕವಾಗಿ ತನ್ನ ಮೈಮೇಲಿಂದ ತೆಗೆದುಕೊಡುವ ವಸ್ತ್ರ, ಆಭರಣ

ಅಂಗದಾಹ ೮೨-೯೦ ಶರೀರದ ತಾಪ

ಅಂಗವಟ್ಟ ೧೩೦-೧೦೪ವ ಮೈಮೇಲೆ ಹೊದೆಯುವ ಬಟ್ಟೆ

ಅಂಚಳ ೧೬೦-೮೪ ವಸ್ತ್ರದ ತುದಿ

ಅಂಚಿರ ೨೨-೧೯ವ ಚಂಚಲ

ಅಂಚೆ ೧೩೩-೧೧೭ ಹಂಸ

ಅಂಜಳಿಪುಟ ೫೮-೪೮ವ ಬೊಗಸೆ

ಅಂಡಲೆ ೧೪೩-೫ ಕಾಡು, ಹಿಂಸೆಮಾಡು

ಅಂತಿಕ ೧೭೯-೨೭ವ ಹತ್ತಿರ, ಸಮೀಪ

ಅಂಬುದ ೨೫-೧೨೧ ಮೇಘ

ಅಂಬುದುರ್ಗ ೪೦-೩೫ ನೀರಿನ ಕೋಟೆ

ಅಂಶುಕ ೮೬-೧೧ ಬಟ್ಟೆ

ಅಕುಲೀನತೆ ೫೫-೩೩ ಸತ್ಕುಲದಲ್ಲಿ ಹುಟ್ಟಿಲ್ಲದಿರುವುದು, ಭೂಮಿಯ ಸ್ಪರ್ಶವಿಲ್ಲದಿರುವುದು

ಅಕೂಪಾರ ೮೪-೧ವ ಸಾಗರ, ಸಮುದ್ರ

ಅಗಾರ ೨೩-೧೧೧ ಮನೆ

ಅಗಿ ೩೭-೧೭ ಹೆದರು, ಅಂಜು

ಅಗುರ್ವು ೩-೩ ಅತಿಶಯ, ಭಯ, ಬೆರಗು

ಅಚ್ಚಬಾಸಿಗ ೧೩೨-೧೧೦ವ ಬಳ್ಳಿಯ ಹೂವುಗಳಿಂದ ಕಟ್ಟಿದ ಹಾರ

ಅಜನಿಸು ೬೧-೬೩ ಉಂಟುಮಾಡು, ಹುಟ್ಟಿಸು

ಅಜ್ಜಿಕೆ ೪-೧೨ ಜೈನಸಂನ್ಯಾಸಿನಿ

ಅಟ್ಟಂಕ ೧೭೫-೯ ಮೇಲ್ಭಾಗ(?)

ಅಟ್ಟಳೆ ೨೯೧-೧೨೫ ಕೊತ್ತಳ, ಬುರುಜು

ಅಟ್ಟಾಳ ೨೫-೧೨೩ ಕೊತ್ತಳ, ಬುರುಜು

ಅಡಗು ೨೫೮-೧೩೬ವ ಮಾಂಸ

ಅಡಬಳ ೨೫೭-೧೩೧ ಮಾಂಸ

ಅಡಸು ೮೯-೩೦ ಒಳಸೇರಿಸು, ತುರುಕು

ಅಡರ್ಪು ೧೩೪-೧೧೮ವ ಊರೆ, ಆಧಾರ

ಅಡಿಕಿಲ್ಗೊಳ್ ೩೧-೧೫೪ ಒಂದರಮೇಲೊಂದಾಗಿ ಪೇರಿಸಿರು, ದಟ್ಟವಾಗಿರು

ಅಡುಕುವಾಸು ೧೩೩-೧೧೭ವ ಒಂದರ ಮೇಲೊಂದು ಸೇರಿಸಿದ ಹಾಸು

ಅಡ್ಡಣ ೧೨೩-೬೫ ಗುರಾಣಿ

ಅಡ್ಡತಾಳ ೨೦೭-೧ವ ಸಪ್ತತಾಳಗಳಲ್ಲಿ ಒಂದು

ಅಣಂ ೬೯-೩೦ ಸ್ವಲ್ಪವೂ

ಅಣಿವಣ ೨೯೮-೧೫೭ ಅಣಿವಿಣಿ, ಬಿಕ್ಕಟ್ಟು(?)

ಅಣೆದುನೂಂಕು ೧೬೬-೧೧೦ವ ಗುರಿಯನ್ನು ತೋರಿಸಿ ತಟ್ಟಿ ಮುಂದಕ್ಕೆ ಬಿಡು

ಅತನು ೧೩೫-೧೨೪ ಮನ್ಮಥ

ಅತಿಶಯಿಸು ೫೮-೪೭ ಮೀರು, ಮೇಲಾಗು

ಅತೀತಜನ್ಮ ೯೭-೬೬ವ ಹಿಂದಿನ ಜನ್ಮ

ಅದಿಮುರ್ಕುತ್ತೆ ೨೮೯-೮೭ ಒಂದು ಬಗೆಯ ಹೂವು, ಮಾಧವಿ

ಅಧರತ್ವ ೨೪-೧೨೦ ಕೀಳಾಗಿರುವುದು, ಕೀಳುತನ

ಅಧಿವಾಸನ ೧೩೪-೧೧೮ವ ಸುಗಂಧದ್ರವ್ಯಗಳಿಂದ ವಾಸನೆ ಕಟ್ಟುವುದು

ಅಧ್ವಗ ೧೮-೯೦ ದಾರಿಹೋಕ
ಅಧ್ಯಾನಿಸು ೨೫೦-೯೭ ತೊಂದರೆಮಾಡು
ಅನವದ್ಯ ೧೬೫-೧೦೮ ನಿಷ್ಕಳಂಕವಾದ
ಅನಾಗತ ೧೦೫-೧೦೦ವ ಭವಿಷ್ಯ
ಅನಾರತಂ ೫-೧೩ ನಿರಂತರವಾಗಿ
ಅನಿಶಂ ೩-೧ ಯಾವಾಗಲೂ
ಅನುಭೂತಿ ೮೭-೧೬ ದರ್ಶನ, ಸಾಕ್ಷಾತ್ಕಾರ
ಅನುಮಾನ ೯೭-೬೬ವ ತರ್ಕ, ಊಹೆ
ಅನುಮೇಯ ೯೭-೬೬ವ ತರ್ಕದಿಂದ ತಿಳಿಯಬಹುದಾದುದು
ಅನೋಕಹ ೨೧-೧೦೨ ಮರ
ಅನ್ನಯ ೧೬೯-೧೨೮ ಅನ್ಯಾಯ
ಅಪಲಾಪನ ೯೭-೬೬ವ ಅಸತ್ಯ, ಮುಚ್ಚುಮರೆ ಮಾತು
ಅಪವರ್ಗ ೪-೭ ಮುಕ್ತಿ
ಅಪಾಂಗ ೧೫೫-೫೬ ಕಡೆಗಣ್ಣು
ಅಪೋಹಿಸು ೨೪೯-೮೮ ಕಳೆ, ನಿವಾರಿಸು
ಅಪ್ಪಯಿಸು ೧೧೨-೧೬ವ ಒಪ್ಪಿಸು, ವಹಿಸು, ಆಶ್ರಯಿಸು
ಅಪ್ಪುಕೆಯ್ ೨೨೦-೬೧ವ ಅಂಗೀಕರಿಸು, ಒಪ್ಪು
ಅಭಿಜ್ಞ ೧೦-೪೬ ಚೆನ್ನಾಗಿ ತಿಳಿದವನು
ಅಭಿನೂತ ೧೯೯-೧೨೮ ಹೊಗಳಲ್ಪಟ್ಟ, ಶ್ರೇಷ್ಠವಾದ
ಅಭಿರಾಮ ೨೦-೧೦೦ ಮನೋಹರವಾದ
ಅಭಿವಾಂಛೆ ೨೮-೧೪೦ ಉತ್ಕಟವಾದ ಅಪೇಕ್ಷೆ
ಅಭಿಷವ ೧೯೨-೯೪ ಅಭಿಷೇಕ
ಅಭಿಷಿಂಚಿಸು ೪೦೪-೧೨೫ ಅಭಿಷೇಕಮಾಡು
ಅಭಿಷ್ಟುತ ೬-೨೨ ಕೊಂಡಾಡಲ್ಪಟ್ಟ
ಅಭೀಕ್ಷಿಸು ೨೦೨-೧೪೧ ಚೆನ್ನಾಗಿ ನೋಡು
ಅಮಳ್ಗಂಬ ೨೨೦-೬೫ ಜೋಡಿಕಂಭ
ಅಮ್ಮು ೨೦೮-೧೩೪ ಸಮರ್ಥವಾಗು
ಅಯ ೭೩-೪೭ ಒಳ್ಳೆಯ ಅದೃಷ್ಟ
ಅರಳ್ಚು ೭೦-೩೫ ಅರಳಿಸು
ಅರಳ್ಚಿಸು ೧೭೬-೧೫ ಅರಳಿಸು
ಅರಿಷ್ಟ ೧೪೬-೧೬ವ ಶುಭ, ಮಂಗಳ
ಅರ್ಧಮಾಗಧಿ ೫೦೩-೨೫೨ವ ಜೈನಾಗಮಗಳ ಭಾಷೆ
ಅರ್ಯಮ ೧೧೯-೪೮ ಸೂರ್ಯ
ಅರ್ವಿಸು ೮೦-೮೧ ಸುಡು
ಅಲಕ್ತಕ ೧೭೦-೧೩೩ ಅರಗು
ಅಲರ್ ೧೫೬-೬೦ ಹೂವು
ಅಲರ್ಚಿಸು ೧೩೫-೧೨೨ ಅರಳಿಸು
ಅಲರ್ಚು ೩೨೪-೯೫ವ ಅರಳಿಸು
ಅವಗತ ೨೮-೧೩೮,೨೧೨-೨೩ವ ಚೆನ್ನಾಗಿ ತಿಳಿದುಕೊಂಡ, ಕಳೆದುಹೋದ
ಅವಗಮ್ಯ ೯೭-೬೬ವ ತಿಳಿಯಬಹುದಾದ
ಅವಗವಿಸು ೨೬-೧೩೪, ೩೦-೧೫೨, ೨೨೧-೬೮ವ, ಪಡೆ, ಹೊಂದು, ಪರಿಹಾಸ ಮಾಡು
ಅವಗುಂಠಿತ ೨೯೨-೧೨೭ವ ಹೊದಿಸಲ್ಪಟ್ಟ, ಮರೆಮಾಡಲ್ಪಟ್ಟ
ಅವತಂಸ ೨೧೯-೨೭ (ಕಿವಿಯ) ಆಭರಣ
ಅವಭಾಸಿತ ೧೯-೯೩ವ ಹೊಳೆಯುವ, ಕಾಂತಿಯಿಂದ ಕೂಡಿದ
ಅವಲೀಢ ೭೫-೫೮ ನೆಕ್ಕಲ್ಪಟ್ಟ, ವ್ಯಾಪಿಸಲ್ಪಟ್ಟ
ಅವಷ್ಟಂಭಿಸು ೨೮೪-೫೭ವ ಆಶ್ರಯಿಸು
ಅವಸರಂಬಡು ೩೧೧-೨೭ವ ಅವಕಾಶವನ್ನು ಹೊಂದು
ಅವ್ವಳಿಸು ೧೩೮-೧೪೧ ಮೇಲೆಬೀಳು, ಆಕ್ರಮಿಸು
ಅಷ್ಟಚತ್ವಾರಿಂಶ ೪೬೮-೮೮ವ ನಲವತ್ತೆಂಟು
ಅಸಮಾಯುಧ ೪೬-೬೬ ಮನ್ಮಥ
ಅಸಿಕಾಱ ೪೫೧-೧೭ ಕತ್ತಿಯನ್ನು ಹಿಡಿದ ಸೈನಿಕ
ಅಸುಕೆ ೪೯-೯ ಅಶೋಕ ವೃಕ್ಷ
ಅಸ್ತೋಕ ೧೩-೬೧ವ ಅಧಿಕವಾದ, ಮಹತ್ತಾದ

ಅಹಿಜ ೩೮-೨೩ವ ಹಾವು (?)
ಅಳುಂಬ ೪೬-೬೭ವ ಅಧಿಕ್ಯ
ಅಳುರ್ಕೆ ೨೦೮-೩ವ ಪರಸುವುದು, ಅತಿಶಯವಾಗುವುದು
ಅಳ್ತಿ ೧೪೨-೧೫೭ ಪ್ರೀತಿ
ಅಳ್ಳಱಿ ೫೪-೨೯ವ ಅಲುಗಾಡು, ಸ್ಪಂದಿಸು
ಅಱುದಿಂಗಳು ೧೧೭-೩೮ವ ಆರುತಿಂಗಳು
ಅಱುನೀರು ೮೦-೮೦ ಬತ್ತಿದ ನೀರು
ಅಱೆ ೧೮೧-೪೦ ಬಂಡೆ
ಅಱೆಯಟ್ಟು ೧೬೫-೧೦೬ ಬೆನ್ನಟ್ಟಿಹೋಗು, ಹೊಡೆದೋಡಿಸು

### ಆ

ಆಂಕೆಗೊಳ್ ೪೮-೧ವ ಪ್ರತಿಭಟಿಸು, ಎದುರಿಸು
ಆಕಳನ ೧೪೭-೨೨ ಶೇಖರಿಸುವುದು
ಆಕಳಿತ ೧೪-೬೭ ಸೇರಿದ, ಕೂಡಿದ
ಆಕೀರ್ಣ ೧೨-೫೯ ಹರಡಿದ, ತುಂಬಿದ
ಆಕುಳಿತ ೯೯-೭೩ವ ತುಂಬಿದ
ಆಕೃಷ್ಟ ೨೮೨-೭೭ ಆಕರ್ಷಿಸಲ್ಪಟ್ಟ
ಆಖಂಡಳ ೨೦೯-೮ ದೇವೇಂದ್ರ
ಆಗತಿ ೮೮-೨೩ ಬರುವುದು, ಸೇರುವುದು
ಆಗಿಸು ೧೦೯-೧ ಉಂಟುಮಾಡು
ಆಗುಳಿರ್ಕೆ ೭೧-೩೮ ಆಕಳಿಕೆ
ಆಟಕಾಱ ೪೫೧-೧೭ ಆಟವಾಡುವವನು
ಆಡುಂಬೊಲ ೬೮-೨೩ವ ಆಟದ ಬಯಲು
ಆತಪವಾರಣ ೩೦೬-೧೭ ಛತ್ರಿ, ಕೊಡೆ
ಆತ್ತಚಿತ್ತ ೧೩೯-೧೪೫ ಮನಸ್ಸಿನ ಏಕಾಗ್ರತೆಯುಳ್ಳವನು
ಆದಂ ೨೪-೧೧೮ ವಿಶೇಷವಾಗಿ
ಆದಮೆ ೩೦-೧೫೨ ವಿಶೇಷವಾಗಿ
ಆಧರಿಸು ೧೦೪-೯೫ ಆಧಾರವಾಗಿಮಾಡಿಕೊ
ಆನಕ ೪೯೩-೨೧೨ ನಗಾರಿ
ಆಪಣ ೨೦-೯೭ ಅಂಗಡಿ
ಆಭೋಗ ೧೧೫-೨೮ ಸುಖ, ಸಂತೋಷ
ಆಮುತ್ರಿಕ ೩೨೪-೯೩ವ ಮೋಕ್ಷ
ಆಯತ್ತ ೯-೪೦ ಪಡೆದ, ಹೊಂದಿದ
ಆಯಾತ ೨೩೦-೩ವ ಬಂದ
ಆರ್ಪು ೨೬-೧೨೮ ಸಾಮರ್ಥ್ಯ
ಆಲ್ ೧೯೧-೮೮ ಗಟ್ಟಿಯಾಗಿ ಕೂಗು
ಆಲಾನಸ್ತಂಭ ೧೭೯-೨೭ವ ಆನೆಯನ್ನು ಕಟ್ಟುವ ಕಂಬ
ಆವಗಂ ೨೦೫-೧೫೭ ಯಾವಾಗಲೂ
ಆವಸಥ ೨೦-೯೯ ವಾಸಸ್ಥಾನ, ಮನೆ
ಆವಿಳ ೨೬-೧೩೦ ಕದಡಿದ, ಕೂಡಿದ, ಸೇರಿದ
ಆವೆಯೋಡು ೨೫೭-೧೩೦ ಮಣ್ಣಿನ ಮಡಕೆ
ಆಶಾಂತ ೧೫೦-೩೬ ದಿಕ್ಕಿನ ಕೊನೆ
ಆಸವ ೨೫೬-೧೨೪ವ ಮದ್ಯ
ಆಱಡಿ ೨೨-೧೦೯ವ, ೭೫-೭ ತುಂಬಿ, ಸೂರೆ

### ಇ

ಇಂದಿಂದಿರ ೨೨-೧೦೯ವ ತುಂಬಿ
ಇಂದಿರೆ ೨೬-೧೨೭ ಲಕ್ಷ್ಮಿ
ಇಂಬು ೨೧೧-೧೯, ೨೯-೧೧೪ ಆಶ್ರಯ, ನೆಲೆ, ಪ್ರೀತಿ
ಇಕ್ಷುವಾಟ ೧೪-೭೨ ಕಬ್ಬಿನ ತೋಟ
ಇಟ್ಟೆಡೆ ೨೪೪-೬೭ ಇಕ್ಕಟ್ಟು
ಇದ್ಧ ೬-೨೨ ವೃದ್ಧಿಹೊಂದಿದ
ಇನಿಮಿನಿ ೮೭-೧೫ವ ಚೆನ್ನಾಗಿ, ವಿಶೇಷವಾಗಿ (?)
ಇಬ್ಬರಿ ೮೫-೭ ಎರಡುಮುಗ್ಗುಲು
ಇಮ್ಮಡಿಸು ೨೬-೧೨೯ ಎರಡರಷ್ಟುಮಾಡು
ಇರೆ ೩೮-೨೩ ಭೂಮಿ
ಇಳಿಕೆಯ್ ೧೩೧-೧೦೫ ಕಡೆಗಣಿಸು, ಕೀಳಾಗಿ ಕಾಣು
ಇಳ್ಕುಳಿಗೊಳ್ ೨೧೬-೪೩ ಸೆಳೆದುಕೊಳ್ಳು, ಆಕರ್ಷಿಸು

### ಈ

ಈಡಾಡು ೯೨-೪೬ವ ಚೆಲ್ಲಾಡು, ತೂರಾಡು
ಈಡಿಱು ೧೯೯-೧೨೮ ಕೊಂಬಿನಿಂದ ಬಲವಾಗಿ ತಿವಿ
ಈರೇಳು ೧೩-೬೦ ಹದಿನಾಲ್ಕು
ಈರೈದು ೨೧೦-೧೪ ಹತ್ತು
ಈಸು ೪೨೯-೭೦ ಈಜು
ಈಱಾಱು ೧೩೯-೧೬೬ ಹನ್ನೆರಡು

### ಉ

ಉಕ್ಕೈವ ೩೭-೧೬ ಉತ್ಸಾಹ, ಸಡಗರ
ಉಗ್ಘಡಿಸು ೨೩-೧೧೨ ಘೋಷಿಸು, ಗಟ್ಟಿಯಾಗಿ ಕೂಗಿ ಹೇಳು
ಉಚ್ಚು ೧೧೬-೩೨ ಭೇದಿಸು, ಚುಚ್ಚು, ತಿವಿ
ಉಜ್ಜುಗ ೧೨-೫೮ ಉದ್ಯೋಗ, ಕಾರ್ಯ
ಉಜ್ಝನ ೧೯-೯೪ ಬಿಡುವುದು
ಉತಬ್ಬೈಸ ೪೫೩-೨೨ ಮಲ್ಲಯುದ್ಧದ ವರಸೆ
ಉಡುಚೋರ ೧೬೯-೧೨೮ ನಕ್ಷತ್ರಗಳ ಕಾಂತಿಯನ್ನು ಮುಸಳಿಸುವವನು, ಚಂದ್ರ
ಉಣ್ಮು ೩-೫ ಹೊಮ್ಮು, ಹೊರಸೂಸು
ಉತ್ಕಂಪ ೧೨-೫೮ ನಡುಕ
ಉತ್ಕರ ೧೧-೫೧ ರಾಶಿ, ಸಮೂಹ
ಉತ್ಕಳಿಕ ೬೬-೧೨ ವಿರಹಕಾತರತೆ
ಉತ್ತಂಸ ೨೭೫-೪೪ವ ಆಭರಣ
ಉತ್ಸೇಧ ೧೬೯-೧೨೪ವ ಎತ್ತರ, ಔನ್ನತ್ಯ, ಉದ್ದ
ಉದಗ್ರ ೨೦೧-೧೩೮ವ ಎತ್ತರವಾದ
ಉದೀರಣ ೩೩೮-೧೬೦ವ ಹೇಳುವಿಕೆ
ಉದ್ಘ ೩-೨ ಶ್ರೇಷ್ಠವಾದ
ಉದ್ಧವ ೪೮-೧ವ ಹಬ್ಬ, ಉತ್ಸವ
ಉದ್ಧುರ ೩-೩ ಶ್ರೇಷ್ಠವಾದ
ಉದ್ಧೂತ ೧೦೬-೧೦೧ವ ಮೇಲಕ್ಕೆಸೆಯಲ್ಪಟ್ಟ
ಉದ್ವರ್ತನಂಗೆಯ್ ೨೭೫-೪೪ವ ಸುಗಂಧದ್ರವ್ಯಗಳನ್ನು ಲೇಪಿಸು
ಉಪಚಯ ೬೮-೨೨ ರಾಶಿ, ಸಮೂಹ
ಉಪಪತ್ತಿ ೯೭-೬೬ವ ಸಿದ್ಧಾಂತವನ್ನು ಸಮರ್ಥಿಸುವುದಕ್ಕೆ ಮಾಡುವ ತರ್ಕ
ಉಪಾಧಿ ೨೮೬-೧೦೧ ತೊಂದರೆ, ಹಿಂಸೆ
ಉಪ್ತ ೧೯-೯೩ ಬಿತ್ತಿದ
ಉಪ್ಪವಡಿಸು ೧೩೯-೧೪೨ವ ನಿದ್ರೆಯಿಂದ ಎಚ್ಚರಗೊಳ್ಳು
ಉಪ್ಪುಗಂಡ ೨೫೭-೧೩೨ವ ಉಪ್ಪನ್ನು ಸವರಿದ ಮಾಂಸದ ತುಂಡು (?)
ಉಬ್ಬೆಗ ೩೧-೧೫೭ ದುಃಖ, ಸಂತಾಪ, ಚಿಂತೆ
ಉಭಯಜಿಹ್ವ ೮-೩೪ ಹಾವು
ಉಮ್ಮಳ ೨೨೫-೮೮ ದುಃಖ
ಉರವಣಿಸು ೨೨೮-೧೦೧ ರಭಸದಿಂದ ನುಗ್ಗು, ಆಕ್ರಮಿಸು
ಉರ್ಕು ೧೬೮-೧೨೩ ದರ್ಪ, ಪೌರುಷ
ಉರ್ಬು ೧೫೩-೪೬ವ ಅತಿಶಯ, ಹೆಚ್ಚಳ
ಉಲಿ ೧೧೨-೧೫ ಧ್ವನಿಮಾಡು
ಉಷ್ಣಕರ ೫೫-೩೪ ಶಾಖವಾದ ಕಿರಣಗಳುಳ್ಳವನು, ಸೂರ್ಯ
ಊಡು ೧೨೪-೬೭ ತಿನ್ನಿಸು
ಊರ್ಮಿ ೨೪-೧೧೫ ದೊಡ್ಡ ಅಲೆ

### ಎ

ಎಕ್ಕತಾಳ ೨೦೭-೧ವ ಸಪ್ತತಾಳಗಳಲ್ಲಿ ಒಂದು ಸ್ವರಮೇಳ
ಎಕ್ಕತುಳ ೩೬೨-೯೧ವ ಪರಾಕ್ರಮ, ಶೌರ್ಯ
ಎಕ್ಕಾವಳಿ ೧೩೯-೧೪೪ ಒಂದೆಳೆಯ ಸರ
ಎಗ್ಗ ೮೨-೫೪ ಅಸಂಸ್ಕೃತ, ದಡ್ಡ, ಒರಟ
ಎಡೆದೆಱಹು ೧೫-೭೨ ಬಿಡುವು, ವಿರಾಮ
ಎಡೆಯಾಡು ೧೫-೭೪ ಅಲೆದಾಡು, ಸಂಚರಿಸು
ಎಡೆಯುಡುಗು ೬೬-೧೨ವ ನಡುವೆ ನಿಂತುಹೋಗು
ಎಡೆವಱಿ ೧೧೯-೩೪ವ ನಡುವೆ ಕತ್ತರಿಸಿಹೋಗು

ಎಡ್ಡ ೨೧೦-೧೬ವ ಸುಂದರ, ಮನೋಹರ
ಎನಸುಂ ೧೯೩-೯೬ ಬಹಳವಾಗಿ
ಎಯ್ದೆ ೧೭-೮೫ ಚೆನ್ನಾಗಿ, ವಿಶೇಷವಾಗಿ
ಎಯ್ಯಮೃಗ ೨೫೩-೧೧೩ ಮುಳ್ಳುಹಂದಿ
ಎಲರ್ ೧೫೬-೬೦ ಗಾಳಿ
ಎಸಕ ೬೯-೨೭ ಕಾರ್ಯ
ಎಸು ೨೬-೧೨೯ ಬಾಣಪ್ರಯೋಗಮಾಡು
ಎಳೆಮುದ್ದು ೭೮-೬೮ ಸಣ್ಣಮಕ್ಕಳ ಮುದ್ದು
ಎಱಕ ೨೧೬-೪೧ ಪ್ರೀತಿ

ಏ

ಏಗಳುಂ ೧೬-೮೧ ಯಾವಾಗಲೂ
ಏಡಿಸು ೩೦೫-೬ ತಿರಸ್ಕರಿಸು, ಜರೆ
ಏಳಾಲತೆ ೨೪೯-೮೭ ಏಲಕ್ಕಿಬಳ್ಳಿ
ಏಳಿಸು ೧೦೬-೧೦೩ ಅವಹೇಳನಮಾಡು, ನಿಂದಿಸು, ಹೀಯಾಳಿಸು

ಐ

ಐಸರ ೧೩೧-೧೦೭ ಐದು ಎಳೆಯ ಹಾರ
ಐಳಬಿಳ ೧೦೬-೧೦೩ ಕುಬೇರ

ಒ

ಒಗು ೮೬-[illegible]೪ ಹೊರಸೂಸು, ಚೆಲ್ಲು
ಒಟ್ಟಜೆ ೮೮-೨೩ ಗುಂಪು, ಸಮೂಹ
ಒಟ್ಟೆ ೨೪೧-೫೩ ಒಂಟೆ
ಒಟ್ಟೈಸು ೧೯೭-೧೧೫ ಗುಂಪುಕೂಡಿಸು, ರಾಶಿಮಾಡು
ಒಡರಿಸು ೭೯-೭೫ ಮಾಡು, ನೆರವೇರಿಸು
ಒಡರ್ಚಿಸು ೧೬೫-೧೦೭ ಉಂಟುಮಾಡು
ಒಡರ್ಚು ೧೭೩-೧೪೪ ತೊಡಗು, ಮಾಡು
ಒಡವರು ೨೭೭-೫೧ವ ಜೊತೆಯಲ್ಲಿ ಬರು
ಒಡ್ಡಯಿಸು ೧೨೭-೮೫ವ ಪ್ರದರ್ಶಿಸು, ತೋರಿಸು
ಒಡ್ಡುಗೊಳ್ ೧೭೯-೨೭ವ ಗುಂಪಾಗು
ಒತ್ತಮಿಸು ೧೨೫-೭೫ ಮೀರು, ಅತಿಕ್ರಮಿಸು
ಒದೆ ೨೭-೧೩೫ ಹೆಚ್ಚಳ, ಆಧಿಕ್ಯ
ಒದವು ೧೮-೯೧ ಹೆಚ್ಚಳ, ಆಧಿಕ್ಯ
ಒಯ್ಯನೆ ೧೯೮-೧೨೩ ನೆಟ್ಟಗೆ, ನೇರವಾಗಿ
ಒರಸೊರಸು ೧೧೪-೫೪ವ ತಿಕ್ಕಾಟ, ಘರ್ಷಣೆ
ಒಸಗೆ ೭೧-೩೮ವ ಶುಭ, ಮಂಗಳಕಾರ್ಯ
ಒಸರು ೭೦-೩೧ ಜಿನುಗು
ಒಸೆ ೨೪-೧೧೫ ಶೋಭಿಸು, ಸೊಗಸು, ಹಿಗ್ಗು
ಒಳುಮಂಡ ೨೫-೧೨೫ ಒಳ್ಳೆಯ ಮಕರಂದ
ಒಳ್ಕವಿಲ್ ೧೭೦-೧೩೩ ಒಳ್ಳೆಯ ಕಪಿಲವರ್ಣ
ಒಳ್ತೊಡಿಗೆ ೨೫೨-೧೦೬ ಒಳ್ಳೆಯ ಆಭರಣ
ಒಳ್ಪು ೫-೧೬ ಸಜ್ಜನಿಕೆ, ಸುಖ, ಕ್ಷೇಮ, ಶ್ರೇಯಸ್ಸು
ಒಳ್ವಾಲು ೭೮-೬೮ ಒಳ್ಳೆಯ ಹಾಲು

ಓ

ಓ ೮೭-೧೮ ಪ್ರೀತಿಸು
ಓಗಡಿಸು ೩೯೨-೭೨ ಜುಗುಪ್ಸೆಹೊಂದು, ವಾಂತಿಮಾಡು
ಓಪಳ್ ೩೮೪-೪೦ ಪ್ರಿಯೆ, ನಲ್ಲೆ
ಓರಂತೆ ೮೪-೩ ಒಂದೇಸಮನೆ
ಓರಣೆ ೨೮-೧೩೮ವ ಸಾಲು
ಓಲಯಿಸು ೩೨-೧೬೧ವ ಸೇವೆಮಾಡು
ಓಲಾಡು ೯೬-೬೨ ಹಿಗ್ಗು, ನಲಿದಾಡು
ಓಸರ ೨೦೮-೪ ಒಂದುಮಗ್ಗುಲಿಗೆ ಸರಿಯುವುದು
ಓಹ ೨೫೫-೧೨೨ ಸಾಲು, ಗುಂಪು
ಓಳಿ ೪೯೭-೨೨೯ ಪಂಕ್ತಿ, ಸಮೂಹ, ಕ್ರಮ

ಔ

ಔರ್ವಜ್ವಳನ ೭೯-೭೨ ಸಮುದ್ರದ ಕಿಚ್ಚು

ಕ

ಕಂಚನಾರ ೩೮೦-೨೪ವ ಒಂದು ಜಾತಿಯ ಮರ
ಕಂಚುಕಿ ೧೨೦-೪೯ವ ಅಂತಃಪುರದ ಅಧಿಕಾರಿ
ಕಂಡರಣೆ ೩೧-೧೫೬ ಕೊರೆಯುವುದು
ಕಂತುಱು ೨೫೩-೧೧೩ ಕುಳಿ, ಬಿಲ
ಕಂಪಾಕ್ಷಿ ೨೩೭-೩೧ ಚಂಚಲವಾದ ಕಣ್ಣು

ಕಾದಂಬಿನಿ ೯೫-೬೦ವ ಮೋಡಗಳ ಗುಂಪು
ಕಾಲ್ಗಣ್ಣಿ ೨೫೧-೧೦೦ ಕಾಲಿಗೆ ಕಟ್ಟುವ ಹಗ್ಗ
ಕಾವಡಿಕಾಱ ೨೪೨-೫೭ ಕಾವಡಿಹೊರುವವನು, ಕಂಬಿಕಾರ
ಕಾಳಭ ೧೨-೫೫ ಆನೆಯ ಮರಿ
ಕಾಳಾಗರು ೧೩೩-೧೧೬ವ ಕರಿಯ ಅಗರು
ಕಾಳ್ಪುರ ೨೦೭-೩ ಕಾಡಿನ ಪ್ರವಾಹ
ಕಿಂಕಿರಾತ ೨೫೨-೧೦೫ ಕೆಂಪುಗೋರಂಟೆ
ಕಿಂಜಲ್ಕ ೧೩೭-೧೩೫ ಹೂವಿನ ಕೇಸರ
ಕಿಸುಗಲ್ ೧೭೦-೧೩೩ ಕೆಂಪಾದ ಕಲ್ಲು
ಕೀರ್ತಿಮುಖ ೧೨೪-೭೧ ಬಳೆಯಾಕಾರದ ಒಂದು ಆಭರಣ
ಕೀಲಿಸು ೨೮-೧೪೧ ಸೇರಿಸು, ಕೂಡಿಸು
ಕೀಳ್ನೆಲ ೨೫೩-೧೧೩ ಕೆಳಗಿನ ನೆಲ, ಒಳಭೂಮಿ
ಕೀಳ್ಮಾಡು ೧೭೪-೫ ಕಡಮೆಮಾಡು, ತಿರಸ್ಕರಿಸು
ಕುಂಟಣಿ ೪೩೧-೭೭ ತಲೆಹಿಡುಕಿ
ಕುಂತಲ ೧೦೬-೧೦೦ವ ತಲೆಗೂದಲು
ಕುಂಭಭವ ೪೫೮-೪೬ ಅಗಸ್ತ್ಯ
ಕುಟ್ಟಿಮ ೧೪೬-೧೬ವ ಸಮಮಾಡಿದ ನೆಲ
ಕುಡಿ ೧೧೯-೪೪ವ ಗುಡಿ, ಬಾವುಟ
ಕುಡಿವೆಳಗು ೧೨೧-೫೫ ಬೆಳಕಿನ ಕಿರಣ
ಕುತ್ತು ೨೫೩-೧೧೦ ಚುಚ್ಚು, ತಿವಿ
ಕುಮಾರಕಾಲ ೨೨೭-೯೮ವ ಹದಿನಾರು ವರ್ಷದ ಒಳಗಿನ ಪ್ರಾಯ
ಕುಮುದ್ವತಿ ೮೫-೫ ಸರೋವರ
ಕುರವಕ ೩೮೧-೨೮ ಗೋರಂಟೆ
ಕುಲ್ಯ ೧೫-೭೨ ಹಳ್ಳ, ಕಾಲುವೆ
ಕುಸುಮಿಸು ೨೯೪-೧೩೯ವ ಹೂ ಬಿಡು
ಕುಳಿರ್ ೧೪೭-೨೦ವ ತಂಪಾಗಿರು
ಕುಱುಪು ೧೫೦-೩೮ ಗುರುತು
ಕೂಗುರಿ ೨೬೭-೧೩ ಒಂದು ಬಗೆಯ ಕಾಯಿಪಲ್ಯ
ಕೂರಿದು ೧೬-೭೯ ಹರಿತವಾದ
ಕೂರ್ಚಧರ ೨೩೦-೩ ಕುಂಚವನ್ನು ಹಿಡಿದವನು
ಕೂರ್ಪು ೨೭೦-೨೫ ಪ್ರೀತಿ, ಸ್ನೇಹ
ಕೂರ್ವಾಳ್ ೩೪೭-೧೨ ಹರಿತವಾದ ಕತ್ತಿ
ಕೂಸುಮೃಗ ೮೧-೮೬ ಮರಿಜಿಂಕೆ
ಕೆಂಬರಲ್ ೧೮೨-೪೨ ಕೆಂಪುಹರಳು, ಮಾಣಿಕ್ಯ
ಕೆಕ್ಕಟಗೆರಳ್ ೩೬೩-೯೭ವ ಹೆಚ್ಚುಕೋಪಗೊಳ್ಳು
ಕೆಕ್ಕಳಿಸು ೨೫೩-೧೦೯ ರೇಗು, ಕಣ್ಣುಕೆಂಪಗೆ ಮಾಡಿಕೊಂಡು ನೋಡು
ಕೆಯ್ಮಿಗು ೨೧೨-೨೪ವ ಅಧಿಕವಾಗು, ಹೆಚ್ಚಾಗು
ಕೆಲಗೆಲ ೧೩೮-೧೪೧ ಸ್ವಲ್ಪ, ಕೊಂಚ
ಕೆಳೆಗೊಳ್ ೭೯-೭೨ ಜೊತೆಗೂಡು, ಸೇರು
ಕೇಗು ೩೧೨-೩೩ ನವಿಲಿನ ಕೂಗು
ಕೇರ್ ೧೩೩-೧೧೬ವ ಗೋಡೆ
ಕೇವಣ ೨೯೯-೧೬೨ ಹರಳುಗಳನ್ನು ಕೂಡಿಸುವುದು, ಕುಂದಣ
ಕೇವಣಿಸು ೧೨೯-೯೬ವ ಜೋಡಿಸು, ಪೋಣಿಸು
ಕೇಸಡಿ ೨೭೭-೫೧ವ ಕೆಂಪಾದ ಪಾದ
ಕೈಗಣ್ಮು ೧೮೪-೫೧ವ ಮೀರು, ಅತಿಶಯವಾಗು
ಕೈಗೆಯ್ ೨೧೨-೨೨ವ ಅಲಂಕರಿಸು, ಸಿಂಗರಿಸು
ಕೈಘಟ್ಟಿಗೊಳ್ ೩೦೨-೧೭೭ವ ಸುಗಂಧವನ್ನು ಕೈಗೆ ಲೇಪಿಸಿಕೊ
ಕೈನಿಱಿ ೧೮೯-೭೫ ಕೈಚಾಚು
ಕೈಮಡಗು ೨೩೧-೭ ಕೈಮಾಡು, ಹೋರಾಡು(?)
ಕೈಮಿಗು ೧೧೫-೨೮ ಹೆಚ್ಚಾಗು, ಅಧಿಕವಾಗು
ಕೈಲಡೆಗೊಡು ೩೦೫-೭ ರಕ್ಷಣೆಯಾಗಿ ಕೊಡು
ಕೊಕ್ಕರಿಸು ೯೨-೪೬ವ ಅಸಹ್ಯಪಡು
ಕೊಪ್ಪು ೧೩೧-೧೦೮ ಕಿವಿಯ ಆಭರಣ
ಕೊಮ್ಮು ೮೧-೮೨ ಕೊಂಕಿಸು, ಹೊರಳಿಸು
ಕೊಲ್ಲಣಿಗೆ ೩೮೮-೫೨ವ ಸಂದಣಿ, ನೆರವಿ
ಕೊಸಗು ೪೨೮-೬೯ವ ಬೆಟ್ಟದಾವರೆ
ಕೊಳ್ಕೊಡೆ ೨೩೩-೧೩ ವಿನಿಮಯ
ಕೊಳ್ಗೆಸರ್ ೨೧೩-೨೭ ಮಂದವಾದ ಕೆಸರು

ಚಾಟುಕಾರ ೨೪೭-೧೦ವ ಚತುರೋಕ್ತಿಯನ್ನು ಆಡುವವನು
ಚಾತುರ್ದಂತ ೨೪೩-೬೩ವ ಆನೆ
ಚಾಮೀಕರ ೨೨-೧೦೯ವ ಚಿನ್ನ
ಚಿಂಚಿಲಿ ೪೪೧-೧೧೮ ಒಂದು ಅನುಕರಣ ಶಬ್ದ
ಚಿತ್ತರ ೧೧-೫೧ ಚಿತ್ರ
ಚಿನ್ನಕಬ್ಬುನ ೧೭-೮೬ ಒಂದು ಬಗೆಯ ಲೋಹ
ಚಿಬುಕ ೩೦೬-೧೦ವ ಗಲ್ಲ
ಚಿಬ್ಬಂಬೊಯ್ ೨೬-೧೨೮ ಹಚ್ಚೈಹಾಕು
ಚಿಲ್ಲ ೨೪೮-೮೪ ಒಂದು ಜಾತಿಯ ಮರ
ಚುಳಕ ೧೯೩-೯೭ ಅಂಗೈ ಗುಳಿ
ಚೂಳಿಕೆ ೧೪-೬೬, ೭೦-೩೪ ತುದಿ, ಕೊನೆ, ನೆತ್ತಿ, ತಲೆ
ಚೆಚ್ಚರ ೮೬-೧೨ ಬೇಗನೆ
ಚೆನ್ನತ್ತಿ ೨೪೮-೮೪ ಒಂದು ಜಾತಿಯ ಮರ
ಚೇಷ್ಟಿಸು ೯೬-೬೪ವ ಮಾಡು, ಚಲಿಸು
ಚೋಚುಂಬ್ಯ ೨೩೦-೧ವ ತಾಗುವ, ಮುತ್ತಿಡುವ
ಚೋದಿಸು ೩೬೨-೮೯ವ ಓಡಿಸು, ನಡೆಸು
ಚೌಕಳಿ ೩೯೯-೧೦೨ ಕಿವಿಯ ಅಭರಣ
ಚೌಪಳಿಕೆ ೨೭೨-೩೨ವ ಹಜಾರ
ಚೌರಿಗೆ ೨೩೪-೧೯ ಅಂಗಳ
ಚೌವಟ್ಟ ೪೫೨-೧೯ ಮಲ್ಲಯುದ್ಧದ ಒಂದು ವರಸೆ

### ಜ

ಜಕ್ಕುಲಿಸು ೨೦೮-೩ವ ಚಕ್ಕಳಗುಳಿಯಿಡು, ವಿನೋದಪಡಿಸು
ಜಡಾಶಯ ೩೧೫-೮೯ ಜಲಾಶಯ
ಜರ್ವು ೪೬-೬೬ ಠೀವಿ
ಜಾಂಬೂನದ ೧೩೦-೧೦೦ವ ಚಿನ್ನ
ಜಾಗರ ೧೮೨-೪೫ ಹೊದಿಕೆ, ಕವಚ
ಜಾನುದಘ್ನ ೩೮೧-೨೯ ಮೊಳಕಾಲು ಮುಳುಗುವ ವರೆಗೆ
ಜಾವುರೆ ೪೫೩-೨೨ ಸಂಗೀತದ ಒಂದು ಪ್ರಭೇದ
ಜಿಗೀಷು ೩೩೧-೧೨೮ ಜಯಿಸಲು ಬಯಸುವವನು
ಜೀವಡೆ ೨೦೭-೨ ಬಿಲ್ಲಿನ ಹೆದೆಯನ್ನು ಠಂಕಾರ ಮಾಡು
ಜೋಗಿಣಿ ೨೫೫-೧೨೪ ಯೋಗಿಣಿ, ಸಂನ್ಯಾಸಿನಿ
ಜೋಡು ೨೪೦-೪೭ ಕವಚ
ಜೋಳಿ ೩೯೯-೧೦೨ ಜೋಡಿ, ಜೊತೆ

### ಝ

ಝಂಪೆ ೨೦೭-೧ವ ಸಂಗೀತದ ತಾಳ
ಝಲ್ಲರಿ ೧೧೪-೨೪ ಜಾಲರಿ

### ಟ

ಟಂಟಣಿಸು ೪೩೧-೭೯ವ ರೇಗು

### ಠ

ಠಾಯ ೨೦೭-೧ವ, ೩೩೫-೧೪೪ ಕೀರ್ತನೆಯಲ್ಲಿ ಒಂದು ಬಗೆ

### ಡ

ಡಂಬರ ೨೨೪-೮೨ ಆಡಂಬರ
ಡಕ್ಕೆ ೧೨೭-೮೯ ಒಂದು ಚರ್ಮವಾದ್ಯ
ಡವಕೆ ೧೨೬-೮೪ ಉಗುಳುವ ಪಾತ್ರೆ, ಪೀಕದಾನಿ
ಡಿಂಡಿಮ ೧೫೦-೩೬ ಚರ್ಮವಾದ್ಯ
ಡಿಳ್ಳಿಸು ೨೨೨-೭೧ ಹೆದರು, ಭಯಪಡು
ಡೆಳ್ಳೈ ೫೦೦-೨೩೯ವ ಹೆಡಗೆ (?)
ಡೊಂಗು ೨೫೮-೧೩೫ ಕಂಪಿಸು, ನಡುಗು

### ಢ

ಢಾಳೆ ೪೩೮-೧೦೭ ಕ್ರಮ, ರೀತಿ (?)
ಢೊಕ್ಕರ ೪೫೨-೧೯ ಮಲ್ಲಯುದ್ಧದಲ್ಲಿ ಒಂದು ವರಸೆ

### ತ

ತಂಡಸ ೨೪೭-೮೧ ಇಕ್ಕುಳ, ಒಂದು ಜಾತಿಯ ಮರ
ತಂದಲ್ ೨೨-೧೦೯ವ ಸೋನೆ, ತುಂತುರುಮಳೆ

ತಂಪು ೨೫೬-೧೨೬ ಒಂದು ಬಗೆಯ ಹೆಂಡ
ತಂಬೆರಲ್ ೧೩೯-೧೧೬ವ ತಂಪಾದ ಗಾಳಿ
ತಕ್ಕೈಸು ೨೭-೧೩೬ ಅಪ್ಪು, ಆಲಂಗಿಸು
ತಗುಳ್ ೭೦-೩೫ ಕೂಡು, ಸೇರು
ತಟವುಚ್ಚು ೨೨೩-೮೦ ಎಲ್ಲೆಮೀರು, ಮೇರೆಮೀರು
ತಟಿಲ್ಲತೆ ೨೩೯-೩೮ ಬಳ್ಳಿಮಿಂಚು
ತಟ್ಟುಂತಾಱು ೩೬೫-೧೦೬ವ ಅಸ್ತವ್ಯಸ್ತ
ತಡಂಗಲಿಸು ೩೯೦-೨೩ವ ಕೂಡು, ಸೇರು
ತಣ್ಗದಿರು ೧೩೨-೧೧೧ ತಂಪಾದ ಕಿರಣ, ಬೆಳುದಿಂಗಳು
ತಣ್ಣೆಲರ್ ೭೦-೩೪ ತಂಪಾದ ಗಾಳಿ
ತತ್ತು ೨೧೫-೩೭ ಸೇರು, ಕೂಡು
ತಡುಕು ೨೪೯-೯೨ ಬೇಲ
ತನೂದರ ೭೧-೩೭ ತೆಳುವಾದ ಹೊಟ್ಟೆ
ತನ್ವಂಗಿ ೪೨-೪೬ ಹೆಂಗಸು
ತಪ್ಪಣೆಗುಟ್ಟು ೨೫೯-೧೩೯ವ ತಪ್ಪುಹೆಜ್ಜೆ ಹಾಕು, ತೂರಾಡು
ತರ್ಕಜ್ಞೆ ೪೫-೬೨ ತರ್ಕದಲ್ಲಿ ಪರಿಣತೆ
ತರ್ಕಯಿಸು ೧೭೭-೨೦ ಅಪ್ಪು, ಆಲಂಗಿಸು
ತವಿಸು ೩೪೮-೨೬ ನಾಶಮಾಡು, ಹಾಳುಮಾಡು
ತಳರ್ ೫೨-೧೯ ಚಲಿಸು
ತಳರ್ನಡೆ ೨೧೮-೫೧ ಚಂಚಲವಾದ ನಡಗೆ
ತಳವಱ ೯೧-೪೧ ಕಾವಲುಗಾರ
ತಳಿ ೧೮೫-೫೫ ಚಿಮುಕಿಸು
ತಳೆ ೯-೩೬ ಹೊಂದು, ಧರಿಸು
ತಳ್ತಿಱಿ ೩೪೪-೭ವ ಎದುರಿಸಿ ಹೊಡೆ
ತಳ್ಪೊಯ್ ೧೫೪-೫೨ ಕೂಡು, ಸೇರು
ತಳ್ಳಿಸು ೨೩೪-೧೧೭ ತಲ್ಲಣಿಸು
ತಱಿ ೨೪೮-೮೪ ಕದಿರ ಮರ
ತಱಿಸರ್ ೯೫-೬೦ವ ನಿಶ್ಚಯಿಸು
ತಾಂಬೂಲಿಕ ೪೬-೬೮ವ ವೀಳೆಯದೆಲೆ ಮಾರುವವನು
ತಾಣ ೧೧೩-೧೭ ಸ್ಥಾನ, ಸ್ಥಳ
ತಾಮರಸ ೫೭-೪೫ ಕಮಲ
ತಾಯ್ಗಡಲ್ ೧೯೩-೯೬ ಸಮುದ್ರದ ತಳ
ತಾರ ೨೦೮-೩ವ ಸಂಗೀತದ ಏರಿಳಿತಗಳಲ್ಲಿ ಒಂದು
ತಾರಗೆ ೮೭-೧೫ವ ನಕ್ಷತ್ರ
ತಾರೇಲ್ವೆಯ ೨೫೯-೧೪೦ವ ಒಂದು ಬಗೆಯ ಅನುಕರಣದ ಹಾಡು
ತಾಳಿಸು ೮೦-೭೯ ಸುಡು, ಬೇಯಿಸು
ತಿಂತಿಣಿ ೧೧೦-೬ ಗುಂಪು, ಸಮೂಹ
ತಿಟ್ಟವಿಡು ೨೨೩-೭೮ ಚಿತ್ರಬರೆ
ತಿಣ್ಣ ೨೧೨-೨೨ವ ತೀಕ್ಷ್ಣ, ಅಧಿಕ, ಹೆಚ್ಚು
ತಿರೀಟ ೪೬೨-೬೩ ಕಿರೀಟ
ತಿರುಪು ೨೧೦-೧೬ ತಿರುವು
ತಿರೋಹಿತ ೨೪೭-೭೯ ಕಳೆದುಹೋದ, ಮರೆಯಾದ
ತಿವುರಿ ೨೩೪-೧೯, ೩೮೦-೨೪ವ ಒಂದು ಬಗೆಯ ಸುಗಂಧ ದ್ರವ್ಯ
ತಿಳಕ ೩೮೦-೨೪ವ ಒಂದು ಜಾತಿಯ ಮರ
ತೀವು ೧೪೭-೨೧ ತುಂಬು
ತುಂಬೀಫಲ ೯೮-೬೭ವ, ೨೪೩-೬೫ ಸೋರೆ ಬರುಡೆ, ಒಂದು ಬಗೆಯ ವೀಣೆ
ತುಡುಂಕು ೫೬-೩೮ವ ಹಿಡಿ
ತುಪ್ಪುಳ್ ೧೩೩-೧೧೭ ಹಕ್ಕಿಯ ಪುಕ್ಕ
ತುಱುಂಬು ೧೭೦-೧೩೭ ಹೂಮುಡಿ
ತುಱುಗು ೨೨-೧೦೮ ಮುಡಿ
ತೂಣೀರ ೨೫೦-೧೦೦ ಬತ್ತಳಿಕೆ
ತೂಳ್ ೮೮-೨೦ ಬೆನ್ನಟ್ಟು, ಅಟ್ಟು
ತೆಂಬೆರಲ್ ೨೪೩-೬೩ ತೆಂಕಣಗಾಳಿ, ತಂಪಾದ ಗಾಳಿ
ತೆತ್ತಿಸು ೧೬೩-೯೮ವ ನಾಟಿಸು, ಅಂಟಿಸು, ಕೂಡಿಸು

ತೇಂಕಾಡು ೩೦-೧೫೧ ತೃಪ್ತಿಹೊಂದು
ತೇಂಕು ೪೫೮-೪೪ ತೇಲು
ತೇಸೈಸು ೨೩೯-೪೧ ಅಧಿಕವಾಗು, ಹೊರಸೂಸು
ತೊಂಗಲು ೧೯೬-೧೧೧ ಸಮೂಹ
ತೊಂಡಿ ೧೧೨-೧೪ ಒಂದು ರಾಗ
ತೊತ್ತುಗೆಯ್ ೧೪೫-೧೬ ಸೇವೆಮಾಡು
ತೊಳಲ್ ೮೧-೮೨ ಸುತ್ತಾಡು, ಅಲೆ
ತೋರ ೧೬-೮೧ ದೊಡ್ಡ, ದಪ್ಪ
ತೋರಿತ್ತು ೬೯-೨೬ ದೊಡ್ಡದು, ದಪ್ಪವಾದುದು
ತೋಳಬಂದಿ ೧೩೧-೧೦೭ ತೋಳಿನ ಆಭರಣ
ತ್ರಾಸ ೩೬-೧೩ ಹೆದರಿಕೆ, ಭಯ
ತ್ರಿಪಥೆ ೨೪೭-೭೮ ಗಂಗೆ
ತ್ರಿವಿಷ್ಟಪ ೨೦೪-೧೫೨ವ ಸ್ವರ್ಗ

## ದ

ದಂಡೆ ೧೩೧-೧೦೮ ಹಾರ
ದಂದುಗ ೫೯-೫೨ ಕಷ್ಟ, ಕ್ಲೇಶ
ದಂಭ ೨೮-೧೪೦ ಅಹಂಕಾರ, ಗರ್ವ
ದಟ್ಟಡಿ ೨೧೮-೫೧ ತಪ್ಪುಹೆಜ್ಜೆ
ದಸರಿದೊಡಕು ೨೫೯-೧೩೯ವ ಅಸಂಬದ್ಧ (?)
ದಳವೇಱು ೭೮-೬೬ವ ಹೆಚ್ಚಾಗು, ಅತಿಯಾಗು
ದಾಸಣ ೨೫೫-೧೨೩ ದಾಸವಾಳದ ಹೂವು
ದಿಂಕಿಡಿಸು ೩೦೬-೭ವ ಹಾರಿಸು, ನೆಗೆಯಿಸು
ದಿನಮಾಳಿಕೆ ೪೪-೫೯ವ ಸೂರ್ಯ
ದೀಪಕಳಿಕೆ ೨೮೪-೮೭ವ ದೀಪದ ಉರಿ
ದೀವ ೨೩-೧೧೧ ಬೇಟೆಯ ಪ್ರಾಣಿಗಳನ್ನು ಹಿಡಿಯಲು ಬಳಸುವ ಸಾಕಿದ ಪ್ರಾಣಿ
ದುಸ್ಮೃಳ ೨೩೮-೧೯ ದುಃಖ
ದೂಟಿಕ್ಕು ೩೯೫-೮೫ ಓಡಿಸು, ನಿವಾರಿಸು
ದೂದವಿ ೯೦-೩೫ ಸೇವಕಿ, ದೂತಿ
ದೇಯ ೨೫೮-೧೩೪ ಕಾಣಿಕೆ, ಬಹುಮಾನ
ದೇವಳ ೩೩೧-೧೨೬ ದೇವಪೂಜೆ (?)
ದೇವಾಂಗ ೨೧೯-೯ ವಸ್ತ್ರ
ದೇಹಾರ ೩೨-೧೬೦ ದೇವಸ್ಥಾನ
ದೇಹಾರಾಗಾರ ೧೩೩-೧೧೫ವ ದೇವಾಲಯ
ದೈವತ ೨೦೭-೧ವ ಸಪ್ತಸ್ವರಗಳಲ್ಲಿ ಒಂದು
ದೌವಾರಿಕ ೧೨೩-೬೫ ದ್ವಾರಪಾಲಕ
ದ್ಯುಗಂಗೆ ೧೫೮-೭೧ ದೇವಗಂಗೆ
ದ್ಯುಮಣಿ ೧೧೫-೩೦ ಸೂರ್ಯ
ದ್ರೋಣಾಮುಖ ೪೭೦-೧೦೨ ನದೀದಡದ ಮೇಲಿರುವ ಊರು
ದ್ವಿರೇಫ ೨೭೮-೫೯ ತುಂಬಿ
ದ್ವೀಂದ್ರಿಯ ೫೦೫-೨೬೧ವ ಎರಡು ಇಂದ್ರಿಯಗಳುಳ್ಳ

## ಧ

ಧನಾಳಿ ೧೮-೯೨ ಐಶ್ವರ್ಯವಂತ, ಸಿರಿವಂತ
ಧನ್ವಿ ೨೪೦-೪೬ ಬಿಲ್ಲುಗಾರ
ಧಮ್ಮಿಲ್ಲ ೧೩೯-೧೪೩ ಮುಡಿ, ತುರುಬು
ಧಾತ್ರೀಧರ ೬-೧೯ ಪರ್ವತ, ಬೆಟ್ಟ
ಧುರಧರ ೬೨-೫೮ ಭಾರವನ್ನು ಹೊರುವವನು

## ನ

ನಟ್ಟುವಿಗ ೫೫-೩೫ವ ನರ್ತನವನ್ನು ಕಲಿಸುವವನು, ನರ್ತಕ
ನಟ್ಟುವ ೨೪೭-೮೧ ನರ್ತನಕಾರ, ನಟ
ನನೆವಿಲ್ಲ ೪೨೩-೫೦ವ ಮನ್ಮಥ
ನವತಿ ೨೧೦-೧೪ ತೊಂಬತ್ತು
ನಾಗವಲ್ಲಿ ೧೩೪-೧೧೮ವ ವೀಳಯದೆಲೆಯ ಬಳ್ಳಿ
ನಾಡಾಡಿ ೬೮-೨೩ವ ಸಾಮಾನ್ಯ ಮನುಷ್ಯ
ನಾಡೆ ೨೦-೯೯ ವಿಶೇಷವಾಗಿ, ಚೆನ್ನಾಗಿ
ನಾಭಿದಘ್ನ ೩೮೧-೨೯ ನಾಭಿ ಮುಳುಗುವಷ್ಟು
ನಿಕುರುಂಬ ೧೫೫-೫೬ ಸಮೂಹ, ಗುಂಪು
ನಿಚಿತ ೩೦-೧೫೨ ಸಮೂಹ
ನಿಚ್ಚ ೩-೪ ನಿತ್ಯ
ನಿಟ್ಟಿಸು ೮೮-೨೩ ನೋಡು

ನಿಡುಸುಯ್ಯು ೪೩೨-೮೨ ನಿಟ್ಟುಸಿರು
ನಿಸ್ತರಿಸು ೬೧-೮೨ ನಿಭಾಯಿಸು, ನಿರ್ವಹಿಸು
ನಿಪೀಡಿಸು ೪೫೭-೩೮ ಹಿಸುಕು, ಯಾತನೆಪಡಿಸು
ನಿಪ್ರೊಪ್ಪಸತು ೪೩-೫೦ ಹೊಚ್ಚ ಹೊಸದು
ನಿರ್ಮೋಕ ೨೪೫-೭೧ ಹಾವಿನ ಪೊರೆ
ನಿರ್ಯಾಣ ೨೧೨-೨೩ನೆ ಮೋಕ್ಷ
ನಿರ್ವಾದ ೧೨-೫೬ ದೋಷ, ಕಲಂಕ
ನಿಲೀನ ೩೦-೧೫೦ ಆವರಿಸಿದ, ಸುತ್ತುವರಿದ
ನಿವಿಷ್ಟ ೯೪-೫೫ನೆ ಕುಳಿತುಕೊಂಡ
ನಿಶೀಥಿನಿ ೭೦-೩೪ ರಾತ್ರಿ
ನಿಷಣ್ಣ ೨೨೫-೮೮ನೆ ಕುಳಿತ, ವಿಶ್ರಾಂತಿ ಹೊಂದಿದ
ನಿಷಾದ ೨೦೭-೧ನೆ ಸಪ್ತಸ್ವರಗಳಲ್ಲಿ ಒಂದು
ನಿಷೇವೆ ೩೪೦-೧೬೯ ಪರಿಚರ್ಯೆ, ಸೇವೆ
ನಿರ್ವೃತಿ ೪-೧೦ ಸಂತೃಪ್ತಿ, ಮುಕ್ತಿ
ನಿಷ್ಕ ೫೨೦-೩೩೦ ಚಿನ್ನ, ಚಿನ್ನದ ನಾಣ್ಯ
ನಿಷ್ಪ್ರವೀಚಾರತೆ ೧೦೫-೯೮ ಮೈಥುನಸೇವನೆ
(ಕಾಯ ಮನ ವಚನ) ಇಲ್ಲದಿರುವಿಕೆ
ನಿಸ್ಸಂಖ್ಯ ೨೩೮-೩೩ ಲೆಕ್ಕವಿಲ್ಲದಷ್ಟು
ನಿಳಿಂಪಕಾಂತೆ ೧೧೪-೨೩ ದೇವತೆ
ನೀರ್ಮನುಷ್ಯ ೧೯೯-೧೨೭ ಜಲದೇವತೆ
ನೀರ್ದಳಿ ೧೨೯-೯೯ ನೀರನ್ನು ಚಿಮುಕಿಸು
ನೀಱಿ ೪೨-೪೫ ಸುಂದರಿ, ಚೆಲುವೆ
ನುಗುಳ್ ೧೩೩-೧೧೬ನೆ ನುಸುಳು
ನೆಗಪು ೨೭೧-೨೮ನೆ ಮೇಲೆತ್ತು
ನೆಗಳ್ತೆ ೪೬-೬೭ನೆ ಪ್ರಸಿದ್ಧಿ, ಖ್ಯಾತಿ
ನೆಮ್ಮು ೧೮೨-೪೬ ಅವಲಂಬಿಸು, ಆಶ್ರಯಿಸು
ನೆರಪು ೮೯-೨೯ ಕೂಡಿಸು, ನೆರವೇರಿಸು
ನೆಲವಡಲಿಗೆ ೧೮೨-೪೫ ಕಂಬ (?)
ನೆಲೆಮಾಡ ೩೧-೧೫೯ ಉಪ್ಪರಿಗೆ
ನೇರಿತು ೨೬-೧೨೮ ನೇರವಾದ
ನೇರ್ಪಡು ೪೬-೬೭ನೆ ಹೊಂದಿಕೊಳ್ಳು,
ಸರಿಮಾಡು
ನೇರ್ಪು ೧೦೩-೯೦ ನೆಟ್ಟಗೆ
ನೇವುರ ೧೩೧-೧೧೭ ಕಾಲಂದುಗೆ
ನೇಳಕ ೨೧೫-೩೮ ಹಗ್ಗ (?)
ನೊಚ್ಚಿತು ೯೯-೭೨ ಕಳಪೆ, ಕೀಳು, ಹಗುರ
ನೋಂಪಿ ೧೪೦-೧೫೧ ವ್ರತ

## ಪ

ಪಂಚಧಾರೆ ೧೭೬-೧೨ ಕುದುರೆಯ ಐದು
ಬಗೆಯ ನಡಗೆ
ಪಂಚಮ ೨೦೭-೧ನೆ ಸಪ್ತಸ್ವರಗಳಲ್ಲಿ ಒಂದು
ಪಂಚಾಸ್ಯ ೩೬೫-೧೦೪ ಸಿಂಹ
ಪಂತಿ ೧೮೯-೨ ಸಾಲು, ಪಂಕ್ತಿ
ಪಂತಿಕೆ ೪೯೭-೨೨೯ ಸಾಲು, ಪಂಕ್ತಿ
ಪಕ್ಕ ೧೭-೮೨ ರೆಕ್ಕೆ
ಪಕ್ಕಣ ೨೫೧-೧೦೦ ಬೇಡರ ಬೀಡು
ಪಚ್ಚಿಸು ೭೯-೭೫, ವಿಭಾಗಿಸು, ಹಂಚು
ಪಜ್ಜಳಿಸು ೨೦೯-೧೧ ಪ್ರಕಾಶಿಸು, ಹೊಳೆ
ಪಟವೈಶ್ಮಜ ೨೬-೧೨೬ ಬಟ್ಟೆನೂರುವವನು
ಪಟಹ ೨೩೮-೩೪ ನಗಾರಿ
ಪಟಳಿಕೆ ೫೬-೩೮ ಸಮೂಹ, ಗುಂಪು
ಪಟ್ಟಣಿಗೆ ೪೨೯-೭೩ ವಸ್ತ್ರ
ಪಟ್ಟವರ್ಧನ ೨೩೫-೨೧ನೆ ಪಟ್ಟದಾನೆ
ಪಟ್ಟಸಾಲೆ ೨೮-೧೩೮ ಮೊಗಸಾಲೆ, ಹಜಾರ
ಪಡಲ್ವಡಿಸು ೩೪೪-೭ನೆ ಚೆಲ್ಲಾಪಿಲ್ಲಿಮಾಡು
ಪಡವಳಗಟ್ಟಿಗೆ ೩೮೮-೫೨ನೆ ಬಟ್ಟೆಬರೆಗಳನ್ನು
ಅಲಂಕಾರ ಮಾಡುವವನು ಹಿಡಿದುಕೊಳ್ಳುವ
ಕೋಲು
ಪಡಿ ೨೩೧-೭ ಪ್ರತಿ, ಸಮಾನ
ಪಡಿಗ ೩೦೫-೮ನೆ ಉಗುಳುವ ಪಾತ್ರೆ, ಪೀಕದಾನಿ
ಪಡಿಮುಟ್ಟೆ ೨೦೭-೧ನೆ ಸಪ್ತತಾಳಗಳಲ್ಲಿ ಒಂದು
ಪಡಿಯಱ ೫೦-೧೦ನೆ ಬಾಗಿಲುಕಾಯುವವನು
ಪಡಿರಾಣಿ ೧೨೧-೫೫ ಸಮಾನವಾದ ರಾಣಿ
ಪಡೆಮಾತು ೨೬೮-೧೮ ಪ್ರತಿಮಾತು, ಸುದ್ದಿ

ಪಣ್ಣು ೧೭೮-೨೧ ಸಜ್ಜುಮಾಡು, ಸಿದ್ಧಪಡಿಸು
ಪಣ್ಯಾಂಗನೆ ೨೯೪-೧೩೯ವ ವೇಶ್ಯೆ
ಪತ್ತನ ೨೪-೧೧೫ ಪಟ್ಟಣ
ಪತ್ತನಕ ೨೯-೧೪೬ ಪಟ್ಟಣ
ಪತ್ತಳಿಕೆ ೨೨-೧೦೯ವ ಬತ್ತಳಿಕೆ
ಪತ್ತೆಸಾರು ೪೬-೬೮ವ ಹತ್ತಿರ ಬರು
ಪತ್ರವಲ್ಲಿ ೪೨-೪೮ ಸುವಾಸನೆಯ ಪರಿಕರಗಳಿಂದ ದೇಹದ ಮೇಲೆ ಬರೆದ ಚಿತ್ರಗಳು
ಪದಪು ೧೫-೭೪ ಸಡಗರ
ಪದುಳ ೧೭೬-೧೪ ಕ್ಷೇಮ
ಪದುಳಿಸು ೩೪೯-೩೦ ಚೆನ್ನಾಗಿರಿಸು, ಸಿದ್ಧವಾಗಿಡು
ಪದೆ ೧೮-೮೮ ಬಯಸು, ಅಪೇಕ್ಷಿಸು
ಪದೆಪು ೩-೩ ಸಡಗರ, ಸಂಭ್ರಮ
ಪರಕಲಿಸು ೧೧೧-೮ ಹಬ್ಬು, ವ್ಯಾಪಿಸು
ಪರಪುಷ್ಟ ೩೭೬-೩ ಕೋಗಿಲೆ
ಪರಿಕಲಿಸು ೧೮೩-೪೭ವ ಹಬ್ಬು, ಆವರಿಸು
ಪರಿಕಲ್ಪಿಸು ೨೧೩-೨೭ವ ನಿಶ್ಚಯಿಸು, ಗೊತ್ತುಮಾಡು
ಪರಿಕಾಲು ೧೭-೮೭ ಹರಿಯುವ ಕಾಲುವೆ
ಪರಿಕೀಲಿಸು ೨೪೫-೭೧ವ ಸೇರು, ಕೂಡು
ಪರಿಖೆ ೨೬೯-೨೧ ಅಗಳು, ಕಂದಕ
ಪರಿಘೂರ್ಣನ ೪೯೬-೨೨೨ವ ಗಟ್ಟಿಯಾದ ಧ್ವನಿ
ಪರಿಣಾಹಕ ೧೯೧-೮೬ ವಿಸ್ತಾರ, ವಿಶಾಲ
ಪರಿತಪ್ತ ೨೨೦-೬೪ ದುಃಖಕ್ಕೀಡಾದ
ಪರಿಧಾನ ೧೩೫-೧೨೦ ಉಡುಗೆ, ತೊಡುಗೆ
ಪರಿಪಂಥಿ ೨೦-೯೭ ಶತ್ರು, ವೈರಿ
ಪರಿಪೀಡೆ ೧೭-೮೭ ದೊಡ್ಡ ತೊಂದರೆ
ಪರಿಯಪ್ಪಿ ೧೨೨-೬೦ವ ಆಹಾರ
ಪರಿಯಾಣ ೩೦೫-೪ವ ಹರಿವಾಣ, ತಟ್ಟೆ
ಪರಿವಿಗಳೆ ೨೭೬-೪೬ವ ತುಂಬಿ ಹರಿ, ಮೇರೆ ಮೀರು (?)
ಪರಿಶಂಕೆ ೧೭೧-೧೩೮ ಅಪನಂಬಿಕೆ, ಅನುಮಾನ
ಪರಿಷೇಕ ೩೪೦-೧೬೯ ಸುತ್ತುವರಿಯುವಿಕೆ
ಪರೆ ೧೪೯-೩೨ ,ಹರಡು, ವ್ಯಾಪಿಸು
ಪರ್ಯಂಕಾಸನ ೧೬೧-೮೫ವ ಒಂದು ವಿಧದ ಆಸನ
ಪರ್ವು ೧೨-೫೯ ಹಬ್ಬು
ಪರ್ವುಗೆ ೧೬೮-೧೨೦ ಹಬ್ಬುವಿಕೆ
ಪಲ್ಲಣ ೧೬೯-೨೯ ಜೀನು
ಪಲ್ಮಿಸು ೧೭೯-೨೯ ಹಲ್ಲುಕಿಸಿ, ನಗು
ಪಲ್ಸುಲಿ ೨೮-೧೪೨ ಹಲ್ಲುಜ್ಜು
ಪವಣಿಸು ೫೨-೧೬ವ ಪೋಣಿಸು
ಪವಣು ೨೦೬-೧೬೦ವ ಹವಣು, ಪ್ರಮಾಣ
ಪವಳ್ಗುಡಿ ೩೭೬-೨ ಹವಳದ ಬಳ್ಳಿಯ ಕುಡಿ
ಪವಿಧರ ೬೩-೭೨ ಇಂದ್ರ
ಪಸಾರಿತ ೫೭-೪೨ವ ಹರಡಿದ
ಪಸಾಯದಾನ ೩೮೩-೭೬ ಉಡುಗೊರೆ
ಪಳಂಚಲೆ ೩೦೦-೧೬೫ವ ಮೇಲೆಬಿದ್ದು ಹೊಡೆ
ಪಳಂಚು ೧೩೩-೧೧೫ ತಾಗು, ತಟ್ಟು
ಪಳಚ್ಚನೆ ೧೨೮-೯೪ ಕಾಂತಿಯುಕ್ತವಾಗಿ
ಪಳಯಿಗೆ ೩೫೩-೪೭ವ ಧ್ವಜ
ಪಳವಿಗೆ ೧೫೬-೬೦ ಧ್ವಜ, ಬಾವುಟ
ಪಳಿ ೯-೩೮ ಹಳಿ, ನಿಂದಿಸು
ಪಳಿಕು ೨೮-೧೪೨ ಸ್ಫಟಿಕ
ಪಱಿವೆ ೨೬-೧೩೦ ತುಂಬಿ
ಪಱುಗೋಲು ೨೪೬-೭೫ ಹರುಗೋಲು, ದೋಣಿ
ಪಱೆ ೨೬೫-೧ವ ತಮಟೆ
ಪಾಗುಡ ೩೦-೧೪೯ ಉಡುಗೊರೆ, ಕಾಣಿಕೆ
ಪಾಣ್ಬ ೪೨೦-೩೩ ಜಾರ, ವಿಟ
ಪಾಣ್ಬೆ ೪೨೦-೩೩ ಜಾರೆ
ಪಾದಪ ೨೨-೧೦೯ವ ವೃಕ್ಷ, ಮರ
ಪಾಮರಿ ೧೭-೮೨ ಹಳ್ಳಿಯ ಹೆಂಗಸು

ಪಾರ್ ೧೬-೭೯ ನಿರೀಕ್ಷಿಸು
ಪಾವುಗೆ ೧೨೩-೬೫ ಹಾವುಗೆ, ಎಕ್ಕಡ
ಪಾಶಿ ೫೧೯-೩೨೭ ವರುಣ
ಪಾಸ ೨೫೧-೧೦೦ ಹಗ್ಗ
ಪಾಸಟಿ ೨೦-೯೯ ಸಮಾನ, ಸಾಟಿ
ಪಾಸು ೧೩೯-೧೪೩ ಹಾಸಿಗೆ
ಪಾಸುಗೆ ೧೩೩-೧೧೭ ಹಾಸಿಗೆ
ಪಿಂಡುಗೊಳ್ ೨೮೧-೭೫ವ ಗುಂಪಾಗು, ಒಟ್ಟಾಗು
ಪಿಂದುಗೊಳ್ ೨೨೬-೯೨ ಅನುಸರಿಸು
ಪಿಕ್ಕು ೧೨೬-೭೯ ಬಾಚು, ಬಿಡಿಸು
ಪಿಡಿ ೧೯-೯೫ ಹೆಣ್ಣಾನೆ
ಪಿಡಿಕಟ್ಟು ೬೫-೭ ಸೆರೆ, ಬಂಧನ
ಪಿಟ್ಟಾಳಸ ೪೫೨-೧೯ ಮಲ್ಲಯುದ್ಧದ ಒಂದು ವರಸೆ
ಪಿಣಿ ೨೭-೧೩೭ ಪೆಣೆ, ಸೇರು, ಕೂಡು (?)
ಪಿಪ್ಪಳ ೩೮೧-೨೮ ಒಂದು ಜಾತಿಯಮರ
ಪಿಲ್ಲಿ ೧೩೧-೧೦೮ ಕಾಲುಂಗುರ
ಪಿಶಂಗ ೨೪-೧೬ ನಸುಗೆಂಪು
ಪುಂಜಿಸು ೫೬-೩೮ವ ರಾಶಿಮಾಡು, ಗುಂಪು ಕೂಡಿಸು
ಪುಂಸವನ ೧೪೫-೧೪ವ ಗರ್ಭಿಣಿಸ್ತ್ರೀಗೆ ಮಾಡುವ ಒಂದು ಧಾರ್ಮಿಕ ಸಂಸ್ಕಾರ
ಪುಗು ೨೬೩-೧೫೪ವ ಪ್ರವೇಶಿಸು, ಒಳ ಹೋಗು
ಪುಟಮಿಕ್ಕು ೨೩೦-೧ವ ಬೆಂಕಿಯಲ್ಲಿ ಕಾಯಿಸು
ಪುಟ್ಟು ೯೧-೪೨ ಆಶ್ರಯ, ನೆಲೆ
ಪುಡಿಗತ್ತುರಿ ೧೨೬-೭೯ ಕಸ್ತೂರಿಯ ಪುಡಿ
ಪುದಿ ೧೬೩-೯೬ ಸೇರು, ಕೂಡು
ಪುನ್ನಾಗ ೨೬೦-೧೪೫ ಬಿಳಿಯಅನ್ನೆ, ಸುರಹೊನ್ನೆಯಮರ
ಪುರಂದರ ೧೯೩-೯೭ವ ಇಂದ್ರ
ಪುರಂಧ್ರಿ ೨೩-೧೧೧ ಪತಿವ್ರತೆ
ಪುರುಡಿಸು ೮೫-೮ವ ಸ್ಪರ್ಧಿಸು
ಪುಲ್ಲಿ ೩೮೭-೪೯ (?)
ಪುಳಿಂದಿನಿ ೨೫೨-೧೦೬ ಬೇಡಿತಿ, ಬೇಡರ ಹೆಂಗಸು
ಪುಳಿನ ೭೮-೬೯ ಮರಳಿನ ದಿನ್ನೆ
ಪೂಗುಡಿ ೭೭-೬೫ ಹೂಗೊಂಚಲು
ಪೂತ್ಕರಿಸು ೧೫೭-೬೯ ಧ್ವನಿಮಾಡು
ಪೂವಲಿ ೧೮೨-೪೩ ರಂಗವಲ್ಲಿ
ಪೂಸು ೧೩೧-೧೦೬ ಸವರು, ಬಳಿ
ಪೆಂಡೆಯ ೧೩೧-೧೦೮ ಕಾಲ ಬಿರುದಿನಬಳೆ
ಪೆಟ್ಟುವೆರ್ಚು ೧೪೧-೧೫೫ವ ಪೆಟ್ಟುತಿನ್ನು
ಪೆರ್ಗೆಱೆ ೬೭-೧೬ ದೊಡ್ಡಕೆರೆ
ಪೆರ್ಚು ೧೧-೪೮ ಹೆಚ್ಚುಗೆ, ಅಧಿಕ್ಯ
ಪೆರ್ಚುಗೆಡು ೧೯೦-೭೯ ಕುಂದು
ಪೆರ್ಮಡದಿ ೨೩೮-೩೪ ವೃದ್ಧಸ್ತ್ರೀ, ಹಿರಿಯ ಹೆಂಡತಿ
ಪೆರ್ಮೆ ೧೨೩-೬೫ ಹೆಮ್ಮೆ
ಪೆಸರಿಲಿ ೨೫೬-೧೨೯ ಹೆಸರಿಲ್ಲದ, ಅನಾಮಿಕ
ಪೆಱಪಿಂಗು ೭೯-೭೫ವ ಹಿಂದೆಗೆ, ಮರೆಯಾಗು
ಪೇಟೆ ೨೬-೧೨೭ ಗುಂಪು
ಪೇಡಿವಡು ೧೪೩-೫ ಹೇಡಿಯಾಗು, ಅಂಜು, ಹೆದರು
ಪೇರಡವಿ ೨೪೮-೮೨ ದೊಡ್ಡಕಾಡು
ಪೇರಣೆ ೧೨೭-೮೫ ಕುಣಿತ, ನೃತ್ಯ
ಪೇಱು ೨೨-೧೦೭ ಒಂದರ ಮೇಲೊಂದು ಜೋಡಿಸು
ಪೊಂಪುಳಿ ೨೨-೧೯೯ವ ರೋಮಾಂಚನ
ಪೊಗಳ್ತೆ ೪೬-೬೭ವ ಹೊಗಳಿಕೆ
ಪೊಚ್ಚಿಸು ೧೪೬-೧೯ ಹತ್ತಿಸು
ಪೊಡವಡು ೯೪-೫೫ವ ನಮಸ್ಕರಿಸು
ಪೊಡೆ ೧೯-೯೫ ಹೊಡೆ, ಧಾನ್ಯದ ತೆನೆ

ಪೊಣರ್ ೨೨೬-೯೩ ಹೋರಾಡು
ಪೊಣರ್ವಕ್ಕಿ ೧೨೪-೭೦ ಚಕ್ರವಾಕಪಕ್ಷಿ
ಪೊದಳ್ ೧೧-೫೨ ಹೊರಬರು, ವ್ಯಾಪಿಸು, ಕಾಣು
ಪೊನಲು ೪೪-೫೭ ಪ್ರವಾಹ
ಪೊರೆಯೇಱು ೫೮-೪೬ ಉತ್ಸಾಹಗೊಳ್ಳು
ಪೊರ್ದು ೩-೩ ಸೇರು, ಕೂಡು
ಪೊರ್ದುಗೆ ೬೮-೨೩ ಸೇರುವಿಕೆ
ಪೊಲ ೧೬೮-೧೨೪ ಸ್ಥಳ, ನೆಲೆ, ನೋಟದ ಜಾಗ
ಪೊಲಂಬು ೯೬-೬೩ ದಾರಿ, ಮಾರ್ಗ, ರೀತಿ
ಪೊಲಂಬುಗೆಡು ೨೦೫-೧೫೪ ದಾರಿತಪ್ಪು
ಪೊಲಗೆಡಿಸು ೧೮೨-೪೫ ದಾರಿತಪ್ಪಿಸು
ಪೊಸಂತಿಲು ೧೫೭-೬೭ ಹೊಸ್ತಿಲು
ಪೊಸಯಿಸು ೧೭೨-೧೩೯ ಉಜ್ಜಿಸು, ತಿಕ್ಕಿಸು
ಪೊಱಮಡು ೧೩೦-೧೦೪ವ ಹೊರಹೊರಡು
ಪೊಱವೀಡು ೧೫೨-೪೫ವ ಹೊರಗಡೆ ಬಿಡುವ ಬೀಡು
ಪೊಱವೊಳಲು ೫೪-೨೮ ಊರಿನ ಹೊರಭಾಗ
ಪೌಳಿಂದಿನಿ ೨೫೧-೧೦೨ ಬೇಡರ ಹೆಂಗಸು
ಪ್ರಚೇತ ೩೮-೨೩ವ ವರುಣ
ಪ್ರಣಮನ ೭೫-೫೭ ನಮಸ್ಕರಿಸುವುದು
ಪ್ರಣಾದ ೩೦-೧೫೦ ಧ್ವನಿ
ಪ್ರಣಾಶಿ ೩-೫ ಹಾಳುಮಾಡುವವ
ಪ್ರಣುತೆ ೩೧-೧೫೮ ಹೊಗಳಲ್ಪಟ್ಟ
ಪ್ರತಿಪನ್ನ ೯೭-೬೬ವ ಪಡೆದ, ಹೊಂದಿದ
ಪ್ರತಿಹಾರಕ ೯೪-೫೬ ಬಾಗಿಲುಕಾಯುವವನು
ಪ್ರತೀಚಿಕೆ ೩೧೨-೩೬ ಪಡೆಯುವ, ಹೊಂದುವ
ಪ್ರತೋಳಿಕೆ ೧೫೮-೭೩ವ ರಾಜಮಾರ್ಗ, ಮುಖ್ಯಬೀದಿ
ಪ್ರಥಿತ ೧೨-೫೯ ಪ್ರಸಿದ್ಧವಾದ
ಪ್ರಪಂಚಿಸು ೧೦೯-೩ವ, ೧೪೭-೨೦ವ ಹರಡು, ವಿಸ್ತರಿಸು, ಪ್ರಕಟಿಸು
ಪ್ರಪಾಕಳಾಪ ೧೮-೫೯ವ ಆರವಟ್ಟಿಗೆಯಕೆಲಸ
ಪ್ರಭಂಜನ ೩೮-೨೩ವ ಗಾಳಿ
ಪ್ರಭವಿಸು ೩೯-೩೦ ಹುಟ್ಟು
ಪ್ರರಾಗ ೬೬-೧೧ ಬಣ್ಣದಿಂದ ತುಂಬಿದ
ಪ್ರರಿಂಖ ೧೯೪-೧೦೨ ಧ್ವನಿ (?)
ಪ್ರಲಂಬ ೪೫೪-೨೭ ನೇತಾಡುವಿಕೆ
ಪ್ರಲುಂಟನ ೨೩೨-೮ ಆಂದೋಲನ, ಹೊರಳಾಡುವುದು
ಪ್ರವಾಳ ೧೨೯-೯೭ ಹವಳ
ಪ್ರವಿಭಾಸನ ೨೨೬-೯೧ವ ಚೆನ್ನಾಗಿ ಹೊಳೆಯುವ
ಪ್ರವೇಕ ೧೯೮-೧೨೪ ಶ್ರೇಷ್ಠ, ಮುಖ್ಯ
ಪ್ರಶ್ರಯ ೨೧೬-೩೮ವ ವಿನಯ, ಆದರ
ಪ್ರಸೂನ ೨೯೬-೧೪೬ವ ಹೂ, ಹಣ್ಣು
ಪ್ರಸ್ಥಾನಭೇರಿ ೫೧-೧೩ವ ದಂಡಯಾತ್ರೆಗೆ ಹೊರಡುವ ಸಮಯದ ವಾದ್ಯ
ಪ್ರಸ್ಥಾನಶಿಬಿರ ೨೩೮-೩೩ವ ದಂಡಯಾತ್ರೆಯ ವೇಳೆಯಲ್ಲಿ ಬಿಡುವ ಬೀಡು
ಪ್ರಹೇಳಿಕೆ ೧೨೯-೯೬ವ ಒಗಟು, ಸಮಸ್ಯೆ
ಪ್ರಾಂಚಿತ ೧೩೩-೧೧೭, ೧೬೨-೯೦ ಮುಂಭಾಗ
ಪ್ರಾದುರ್ಭಾವ ೨೧೩-೨೭ವ ಕಾಣುವ, ತೋರುವ
ಪ್ರಾಪಣ್ಯಕ ೭೫-೫೮ ಹೊಂದುವುದು, ಪಡೆಯುವುದು
ಪ್ರೇಷಿತ ೩೦೪-೨ವ ಕಳುಹಿಸಲ್ಪಟ್ಟ
ಪ್ರೋತ್ತಾಲ ೨೫-೧೨೧ ಗಟ್ಟಿಯಾದ
ಪ್ರೋದ್ದಾಮ ೯-೪೧ ಶ್ರೇಷ್ಠವಾದ
ಪ್ರೋಲ್ಲಸಿತ ೧೯೨-೮೯ ಪ್ರಕಾಶಿಸುವ, ಹೊಳೆಯುವ
ಪ್ಲುತ ೪೫೨-೨೦ವ ಕುದುರೆಯ ಒಂದು ನಡಗೆ

ಫ

ಫೇನ ೧೩-೬೨ ಸಮುದ್ರದ ನೊರೆ

## ಬ

ಬಕುಳ ೩೮೦-೨೪ವ ರೆಂಜೆಪುರ, ರೆಂಜೆಹೂ
ಬಕ್ಕೆಪಲಸು ೧೯೦-೮೨ವ ಸಿಹಿಯಾದ ಹಲಸು
ಬಗೆಕಾಜಿ ೪೫೧-೧೭ ಮನಸ್ಸಿಗೆ ಬಂದಂತೆ ನಡೆಯುವವನು
ಬಗೆಗೊಳಿಸು ೧೨೮-೯೪ವ ಆಕರ್ಷಿಸು, ಸೆಳೆ
ಬಗ್ಗಿಸು ೨೩-೧೯೨ (ಕೋಗಿಲೆ)ಧ್ವನಿಮಾಡು, ಕೂಗು
ಬಚ್ಚಿಸು ೧೨೫-೭೭ ಮುಚ್ಚಿಡು, ಅಡಗಿಸು
ಬಟ್ಟಿದು ೩೪-೩೯ ಗುಂಡಾದ
ಬಟ್ಟೆ ೨೪೧-೩೨ ಮಾರ್ಗ
ಬಣ್ಣವಣ್ಣಿಗೆ ೧೨೩-೬೬, ೨೩೫-೨೦, ೨೭೭-೫೨ ೩೦೧-೧೭೧ ವಿಧವಿಧವಾದ ಬಣ್ಣ
ಬದ್ದವಣ ೭೧-೩೮ವ ಮಂಗಳವಾದ್ಯ
ಬನ್ನ ೧೩೨-೧೧೩ ಕಷ್ಟ, ತೊಂದರೆ
ಬಬ್ಬರಿ ೨೫೬-೧೨೬ ಒಂದು ಬಗೆಯ ಹೆಂಡ
ಬಬ್ಬರಿಗೆ ೨೫೭-೧೩೨ವ ಒಂದು ಬಗೆಯ ಹೆಂಡ
ಬಯಲ್ದಾವರೆ ೧೮-೮೯ ಬಯಲಿನಲ್ಲಿನ ತಾವರೆ
ಬಯ್ಕೆ ೪೧-೪೨ ಬಚ್ಚಿಡುವಿಕೆ, ಕೂಡಿಡುವುದು
ಬರಿಬರಿ ೨೫೨-೧೦೮ ಪಕ್ಕೆಲುಬು
ಬಲಗೊಳ್ ೫೮-೪೮ ಪ್ರದಕ್ಷಿಣೆ ಮಾಡು
ಬಲಘಟ್ಟನ ೨೪೧-೫೧ ಬಲವಾದ ತುಳಿತ
ಬಲವರು ೧೭೧-೧೩೪ ಪ್ರದಕ್ಷಿಣೆ ಮಾಡು
ಬಸನಿಗ ೪೨೮-೬೯ವ ದುಶ್ಚಟಕ್ಕೆ ಒಳಗಾದವನು
ಬಸವಳಿ ೪೩೨-೮೨ವ ಶಕ್ತಿಗುಂದು
ಬಹುಲಜ್ಞ ೯೩-೪೯ ಚೆನ್ನಾಗಿ ತಿಳಿದವನು
ಬಳ್ ೫೯-೫೨ ಬದುಕು, ಜೀವಿಸು
ಬಳಿಸಲ್ ೪೬೮-೯೧ ಅನುಸರಿಸು, ಹಿಂಬಾಲಿಸು
ಬಳ್ಚು ೧೪೧-೧೫೪ವ ಬದುಕು, ಜೀವಿಸು
ಬಜಿಬಜಿ ೮೦-೭೯ ಸಂಪೂರ್ಣವಾಗಿ ಒಣಗು
ಬಾಕುಳಿಕೆ ೪೪೩-೧೨೯ ಅತಿಯಾಸೆ
ಬಾಜಿಸು ೧೯-೯೩ ಬಾರಿಸು, ನುಡಿಸು
ಬಾಡಬಾಗ್ನಿ ೮೭-೧೯ ಸಮುದ್ರದ ಬೆಂಕಿ
ಬಾಡವ ೩೫೧-೪೧ ಬಾದಬಾಗ್ನಿ
ಬಾಣಪ್ಡಣಗೊಳ್ ೧೨೩-೬೫ ಆಹಾರವನ್ನು ಬಡಿಸುವ ಕಾರ್ಯ
ಬಾಯಿಸ ೩೦೦-೧೬೫ವ ಉಡುಗೊರೆ
ಬಾರ್ ೨೫೨-೧೦೫ ಹಗ್ಗ
ಬಾರಿಸು ೧೬-೮೧ ತಡೆ, ನಿವಾರಿಸು
ಬಾಸಣಿಸು ೧೭-೮೩ ಮುಚ್ಚು, ಮರೆಮಾಡು
ಬಾಸಿಗ ೧೨೪-೭೨ ಬಾಸಿಂಗ
ಬಾಸುಳ್ ೪೨೭-೬೫ ಬಾಸುಂಡೆ
ಬಾಹತ್ತರ ೧೨೮-೯೪ವ ಎಪ್ಪತ್ತೆರಡು
ಬಾಳ ೧೩೦-೧೧೬ವ ಲಾವಂಚ
ಬಿಗುರ್ ೧೪೬-೧೯ ಭಯಂಕರತೆ
ಬಿಜ್ಜಣಿಗೆ ೪೩೩-೮೬ ಬೀಸಣಿಗೆ
ಬಿಡೌಜ ೧೮೭-೬೩ವ ಇಂದ್ರ
ಬಿಣ್ಪು ೧೪೪-೬ ಭಾರ, ಘನತೆ
ಬಿತ್ತರ ೭೯-೭೬ವ ವಿಸ್ತಾರ
ಬಿತ್ತರಿಸು ೧೭-೮೭ ವಿಸ್ತರಿಸು
ಬಿದಿರ್ ೮೧-೮೬ ಹರಡು, ಚೆಲ್ಲು
ಬಿದಿರಿತ ೧೯-೯೩ ಹರಡಿದ
ಬಿದಿರ್ನೆಲ್ಲಿ ೨೪೮-೮೪ ಒಂದು ಜಾತಿಯ ನೆಲ್ಲಿ
ಬಿನ್ನನೆ ೭೭-೬೫, ೦೩೭-೧೫೫ವ ಮೌನವಾಗಿ
ಬಿಲ್ಗೀಸು ೨೫೧-೧೦೦ ಬಿಲ್ಲನ್ನು ಹೆರೆ, ಉಜ್ಜು
ಬಿಸಶಾಲಿನಿ ೪-೧೦ ಸರಸ್ವತಿ
ಬೀಜೋಕ ೧೩-೬೧ವ ಬೀಜ ಬಿತ್ತುವುದು
ಬೀಸರಂಬೋಗು ೨೬೧-೮೫ವ ಕೊನೆಗಾಣು, ಮುಗಿ
ಬೂವ ೩೦೧-೧೭೨ ಆಹಾರ
ಬೆಂಬಳಿ ೨೨೭-೯೨ ಹಿಂಬಾಲಿಸುವುದು, ಜೊತೆ ಸೇರುವುದು

ಬೆಂಬಿಡು ೯೮-೬೯ ಬಿಟ್ಟುಹೋಗು
ಬೆಂಬೀಳು ೭೮-೭೦ ಅನುಸರಿಸು, ಹಿಂಬಾಲಿಸು
ಬೆಗಡು ೪೩೪-೮೯ವ ಆಶ್ಚರ್ಯ
ಬೆರ್ಚಿಸು ೧೩೭-೧೩೨ ಹೆದರಿಸು
ಬೆವಸೆ ೧೨೬-೮೦ ಬಯಕೆ, ಆಸಕ್ತಿ
ಬೆಸನ ೧೧೮-೪೦ ಕಾರ್ಯ
ಬೆಳಂಬೀಡೆ ೨೪೮-೮೪ ಒಂದು ಜಾತಿಯ ಮರ
ಬೆಳರ್ ೯-೩೮ ಬಿಳಿದಾಗು, ಕಾಂತಿಹೊಂದು
ಬೆಳುವಸದನ ೧೩೧-೧೦೮ವ ಬಿಳಿಯಬಟ್ಟೆ
ಬೆಳೆಗೆಯ್ ೧೯-೯೫ ಬೆಳೆ ಬೆಳೆದಿರುವ ಹೊಲ
ಬೆಳ್ಗೊಡೆ ೧೬೩-೯೮ವ ಬಿಳಿಯ ಕೊಡೆ
ಬೆಳ್ವಟ್ಟೆ ೧೯೭-೧೧೫ ಬಿಳಿಯ ಬಟ್ಟೆ
ಬೆಳ್ವಸದನ ೧೩೨-೧೧೦ವ ಬಿಳಿಯಬಟ್ಟೆ
ಬೇಗಡವೆಸ ೩೧-೧೫೬ ರಂಧ್ರಕೊರೆಯುವ ಕೆಲಸ
ಬೇರ್ವರಿ ೨೬೦-೧೪೧ವ ಆವರಿಸು, ಹಬ್ಬು
ಬೇವಸ ೨೧೫-೩೭ ವ್ಯಾಕುಲ, ಉಮ್ಮಳ
ಬೇಳನ ೪೩೧-೭೯ವ ಯಾಗಮಾಡುವುದು
ಬೊಟ್ಟಿತ್ತು ೧೦-೪೬ ಬೆರಳನ್ನು ತೋರಿಸು
ಬೋನ ೧೨೩-೬೪ ಆಹಾರ

## ಭ

ಭಣಿತ ೮-೩೦ ಧ್ವನಿಮಾಡಿದ
ಭದ್ರಜಾತಿ ೨೩೮-೩೫ ಒಂದು ಜಾತಿಯ ಆನೆ
ಭರವಸ ೩-೪ ಆತ್ಮವಿಶ್ವಾಸ, ನಂಬಿಕೆ
ಭರಿಕ್ಕೈ ೧೬೮-೧೨೨ ಆನೆಯ ಸೊಂಡಿಲು
ಭಸ್ತ್ರಾನನ ೩೬-೧೧ ಆನೆಯ ಸೊಂಡಿಲು
ಭಾಭಾಸಮಾನ ೧೧೬-೩೧ ಹೊಳೆಯುವ, ಕಾಂತಿಯುಕ್ತವಾದ, ಸಮಾನವಾದ
ಭಾವಜ ೨೫೯-೧೩೮ ಮನ್ಮಥ
ಭಿಮ್ಮೆಂಡು ೨೪೭-೬೯ ಮೌನವಾಗಿರು, ಬಿಕೋಎನ್ನು
ಭೂಷಿಸು ೧೩೧-೧೦೭ ಅಲಂಕರಿಸು
ಭೇಷಜ ೯೯-೭೦ ಒಂದು ಮೂಲಿಕೆ

## ಮ

ಮಂಜರಿಕೆ ೬೫-೬ ರಾಶಿ
ಮಂಜಿಷ್ಠ ೨೩೭-೩೦ವ ಕೆಂಪುಬಣ್ಣ
ಮಂಜೀರ ೧೩೯-೧೪೩ ಕಾಲಂದುಗೆ
ಮಂಜುಕೆ ೬೬-೧೦ ಮನೋಹರ
ಮಂಡಗೆ ೩೦೨-೧೭೪ ಒಂದು ಭಕ್ಷ್ಯ
ಮಂಡಳಿಕ ೧೧೦-೭ ಒಂದು ಪ್ರಾಂತದ ಅಧಿಕಾರಿ
ಮಂಡಳಿಸು ೧೬೨-೯೩ ಗುಂಡಗೆ ಸುತ್ತು
ಮಂದೆವಳ ೨೨೭-೯೯ವ ಅಹಂಕಾರ, ಪ್ರತಿಷ್ಠೆ
ಮಂದೈಸು ೧೬೬-೧೧೧ ದಟ್ಟವಾಗು, ವ್ಯಾಪಿಸು
ಮಕರಪತಾಕ ೧೩೭-೧೩೧ ಮನ್ಮಥ
ಮಕರಿಕೆ ೧೨೫-೭೪ ದೇಹದ ಮೇಲೆ ಸುಗಂಧ ದ್ರವ್ಯದಿಂದ ಬರೆಯುವ ಚಿತ್ರ
ಮಘವ ೨೧೨-೨೨ವ ಇಂದ್ರ
ಮಚ್ಚರಿಸು ೪೦೭-೧೨೮ ಅಸೂಯೆಪಡು
ಮಟ್ಟೆ ೨೦೭-೧ವ ಒಂದು ತಾಳ
ಮಣಿಕುಟ್ಟಿಮ ೨೧೩-೨೭ವ ಪಚ್ಚೆಯ ನೆಲೆಗಟ್ಟು
ಮಣಿಗಾಜಿ ೨೬-೧೨೬ ರತ್ನವ್ಯಾಪಾರಿ
ಮಣಿಮಾಡ ೩೧-೧೫೪ ಮಣಿಗಳಿಂದ ಕಟ್ಟಿದ ಮನೆ
ಮತಲ್ಲಿಕೆ ೨೨-೧೯೯ವ ಶ್ರೇಷ್ಠವಾದ
ಮತ್ಕುಣ ೯-೩೭ ತಿಗಣೆ
ಮತ್ತಹಾಸ್ತಿಕ ೨೩೪-೧೭ ಮದಿಸಿದ ಆನೆ
ಮತ್ತಾಳಿನಿ ೨೭-೧೩೪ ಮದಿಸಿದ ತುಂಬಿ
ಮದುವೆನಿಲ್ ೫೨೩- ೩೪೫ ಮದುವೆಯಾಗು
ಮಧುಕರ ೫-೧೬ ತುಂಬಿ
ಮಧುಮಾಸ ೫೪೧-೪೩೨ ಚೈತ್ರಮಾಸ
ಮಧ್ಯಮ ೨೦೭-೧ವ, ೨೦೮-೩ವ ರಾಗಗಳಲ್ಲಿ ಒಂದು ಬಗೆ
ಮನದೆಗೊಳ್ ೪೮-೧ವ ಮನಸ್ಸಿಗೆ ತಂದುಕೊಳ್ಳು, ಮೆಚ್ಚು

ಮನ್ಮಳಿ ೪೬೦-೮೪ವ ರೂಪುಗೆಟ್ಟ ಸಾವು
ಮರವಟ್ಟಿಗೆ ೨೫೬-೧೨೬ ಒಂದು ಜಾತಿಯ ಹೆಂಡ
ಮರಾಳಿಕೆ ೧೪೫-೧೬ನ ಹೆಣ್ಣು ಹಂಸ
ಮರಿಚ ೮೦-೭೯ ಕರಿಯ ಮೆಣಸು
ಮಲಹರಿ ೧೧೨-೧೪ ಒಂದು ಜಾತಿಯ ರಾಗ
ಮಲೀಮಸ ೨೪೧-೫೧ ಕೊಳಕು, ಮಲಿನ
ಮಲ್ಲಶ್ರಮ ೪೫೨-೧೮ವ ಮಲ್ಲಯುದ್ಧದಿಂದ ಆಗುವ ಶ್ರಮ, ಆಯಾಸ
ಮಸಗು ೨೧೪-೨೭ ವಿಜೃಂಭಿಸು
ಮಹತ್ತರಿ ೧೨೪-೬೫ ಗೌರವಾನ್ವಿತ ಹೆಂಗಸು
ಮಹಾಚೀನ ೪೦೯-೨೦ವ ಒಂದು ಬಗೆಯ ರೇಶ್ಮೆಬಟ್ಟೆ
ಮಹಿಷಿಕ ೫೧೯-೪೨೭ ಎಮ್ಮೆ
ಮಹೀಧ್ರ ೨೯-೧೪೫ ಪರ್ವತ
ಮಹೋದಾರ ೨೫-೧೨೪ವ ಒಂದು ಜಾತಿಯ ಮರ
ಮಱಿತಿಯೇಱು ೬೫-೭ ಬಚ್ಚಿಟ್ಟುಕೊಂಡು ಮಾಡುವ ಯುದ್ಧ
ಮಾಂದಳಿರು ೨೩೬-೧೨೫ವ ಮಾವಿನ ಚಿಗುರು
ಮಾಕಂದ ೪೪-೪ವ ಮಾವಿನಮರ
ಮಾಗಾಯ್ ೫೫-೭೨ ಒಂದು ಆಭರಣ
ಮಾತಂಗ ೪೪೬-೧೪೮ ಚಂಡಾಲ
ಮಾತುಳುಂಗ ೧೮೪-೪೮ವ ಮಾದಲ
ಮಾಮಸಕ ೨೫೪-೧೦೯ ಅತ್ಯಂತ ಕೋಪ
ಮಾರಸಾಲ ೨೧-೧೦೫ ಶ್ರೇಷ್ಠವಾದ ಕಬ್ಬು
ಮಾರ್ಪೊಳೆಪು ೧೭-೮೪ ಹೊಳಪು, ಪ್ರಕಾಶ
ಮಾವಂತಿಗ ೧೭೯-೨೭ನ ಮಾವಟಿಗ
ಮಾಸವಳ ೪೫೧-೧೮ ವೀರ, ಪರಾಕ್ರಮಿ
ಮಾಳವ್ರೋಪರಿ ೨೫೬-೧೨೬ ಒಂದು ಬಗೆಯ ಮದ್ಯ
ಮಿಳ್ಳಿಸು ೧೪೬-೧೨೬ ಚಲಿಸು, ಅಲ್ಲಾಡು
ಮೀ ೧೪೯-೨೯ ಸ್ನಾನಮಾಡು
ಮುಂಕುಡಿ ೨೪೬-೭೬ವ ಮುಂಭಾಗದ ಸೈನ್ಯ
ಮುಂಡಾಡು ೨೨-೧೦೮ ಅಪ್ಪು, ಮುದ್ದಿಸು
ಮುಖರ ೪೦-೧೫೦ ಅಶ್ಲೀಲ, ಹಾಸ್ಯ
ಮುಗ್ಗು ೧೭೫-೬ ಮುಗ್ಗರಿಸು
ಮುಟ್ಟಿವರ್ ೨೬೧-೧೪೯ವ ಹತ್ತಿರಬರು
ಮುನ್ನೀರ್ ೨೪-೧೧೫ ಸಮುದ್ರ
ಮುಮ್ಮಟ್ಟು ೧೧೫-೨೮ ಅಟ್ಟಿಸಿಕೊಂಡು ಹೋಗು
ಮುಯ್ಯಾನ್ ೮೮-೨೨ ವಿರೋಧಿಸು, ಪ್ರತಿಭಟಿಸು
ಮುರಜ ೧೨೭-೮೮ ಮದ್ದಳೆ
ಮುಹಸ ೪೫೨-೧೯ ಮಲ್ಲಯುದ್ಧದಲ್ಲಿ ಒಂದು ವರಸೆ
ಮುಳ್ಗು ೬-೨೪ ಮುಳುಗು
ಮೂವೊರ್ಗ ೨೦೦-೧೨೯ ಮೂರು ದಿಕ್ಕು
ಮೂವಳಸು ೧೯೯-೧೨೫ ಮೂರುಸುತ್ತು
ಮೆಲ್ಲುಲಿ ೧೪೪-೧೧೫ ಮೃದುವಾದ ಧ್ವನಿ
ಮೆಳ್ಪಡು ೯೬-೬೪ ಮೋಸಹೋಗು
ಮೇಘರಂಜಿ ೧೧೨-೧೪ ಒಂದು ಜಾತಿಯ ರಾಗ
ಮೇಪುರ ೧೨-೫೫ ನಯ, ಮೃದು
ಮೇಲುವತ್ತಿ ೧೪೪-೧೧೮ವ ಶ್ರೇಷ್ಠ, ಉತ್ತಮ (?)
ಮೇಳವಿಸು ೧೮೫-೫೬ ಜತೆಗೂಡು, ಒಟ್ಟಾಗು
ಮೇಳೈಸು ೨೪೪-೧೭ ಸೇರು, ಕೂಡು
ಮೊಕ್ಕಳ ೪೪೪-೯ ಸಮೂಹ, ಗುಂಪು
ಮೊಗೆ ೧೯೪-೯೫ ತುಂಬು
ಮೊಗ್ಗು ೨೨೦-೬೨ ಶಕ್ಯ, ಸಾಧ್ಯ
ಮೊರೆ ೨೪೭-೪೨ ಧ್ವನಿಮಾಡು
ಮೊಳಗು ೧೬೬-೬೪ ಧ್ವನಿಮಾಡು
ಮೋನ ೧೦೧-೮೧ ಮೌನ
ಮೌರಿ ೧೨೭-೯೦ ಒಂದು ಬಗೆಯ ವಾದ್ಯ
ಮೌರ್ವಿ ೪೦೫-೧೭೯ ಬಿಲ್ಲಿನ ಹೆದೆ

## ಯ

ಯಕ್ಷಕರ್ದಮ ೨೦೦-೧೩೦ ಒಂದು ಬಗೆಯ ಸುಗಂಧ ದ್ರವ್ಯ

ಯಷ್ಟಿ ೧೩೨-೧೧೦ವ ಕೋಲು, ದೊಣ್ಣೆ

## ರ

ರಂಗವಲನ ೨೧೧-೧೭ ಯುದ್ಧಭೂಮಿ

ರಕ್ತಾಕ್ಷತ್ವ ೬೨-೪೨ ಕೆಂಪುಬಣ್ಣ (?)

ರಜ್ಜಿ ೨೦೭-೧ವ ಸಪ್ತತಾಳಗಳಲ್ಲಿ ಒಂದು

ರತ್ನಕುಟ್ಟಿಮ ೩೩-೧೬೬ ರತ್ನಖಚಿತವಾದ ನೆಲ

ರತ್ನಾಕರ ೨೦-೯೮ ಸಮುದ್ರ

ರಲ್ಲಕ ೨೪೪-೬೬ ಕಣ್ಣಿನ ಕಾಡಿಗೆ, ಉಣ್ಣೆಯಬಟ್ಟೆ

ರಸನೇಂದ್ರಿಯ ೨೩-೧೧೦ ನಾಲಗೆ

ರಸಾಲ ೨೧-೧೦೫ ಮಾವು, ಕಬ್ಬು

ರಾಗಿಣಿ ೧೩೩-೧೧೬ ಅನುರಕ್ತೆ

ರಾಗಿಸು ೬೪-೧ ಪ್ರೀತಿಸು

ರಾಜಕ ೧೦೭-೧೦೬ವ ರಾಜ

ರಾಜನ್ಯಕ ೨೮೨-೭೬ವ ಕ್ಷತ್ರಿಯವಂಶ

ರಾವಣಹಸ್ತ ೨೦೭-೧ವ ಒಂದು ಬಗೆಯ ವೀಣೆ

ರುತಿ ೩೨-೧೬೨ ಧ್ವನಿ

ರುಪ್ಪೆತ್ತು ೩೪೮-೨೫ ದಂಡೆತ್ತು (?)

ರುಷಭ ೨೦೭-೧ವ ಸಪ್ತಸ್ವರಗಳಲ್ಲಿ ಒಂದು

ರೇಚಿತ ೪೫೨-೨೦ವ ಕುದುರೆಯ ನಡಗೆಗಳಲ್ಲಿ ಒಂದು

## ಲ

ಲಂಬಳ ೧೦೯-೨ ಮುತ್ತಿನಹಾರ

ಲಂಬೂಷ ೨೩೫-೨೧ವ ಹಾರ

ಲಟಹ ೧೬೫-೧೦೭ ಆನಂದ, ಸಂತೋಷ

ಲತಾಂತ ೧೬-೭೬ ಪುಷ್ಪ

ಲಳಿಲುಳಿ ೪೫೩-೨೦ವ ಉತ್ಸಾಹದಿಂದ ಕೂಡಿದ ಕೈಚಳಕ

ಲೋವಿ ೨೭೨-೩೩ ಇಳಿಛಾವಣಿ

## ವ

ವಂದಿ ೧೦೭-೧೦೬ ಹೊಗಳುಭಟ್ಟ

ವಡ್ಡರಾವುತ್ತ ೩೬೦-೮೪ವ ಕುದುರೆಯ ಮುದಿ ಸವಾರ

ವರ್ತಿ ೨೦೫-೧೫೮ ಬತ್ತಿ

ವಪುರಿಂದ್ರಿಯ ೨೩-೧೧೦ ಶ್ರೇಷ್ಠವಾದ ದೇಹ

ವಲಂ ೮-೩೩ ನಿಶ್ಚಯವಾಗಿ

ವಲಭಿ ೨೮-೧೪೩ ಮೇಲ್ಛಾವಣಿ

ವಲಿ ೨೦೭-೧ವ ಒಂದು ವಿಧದ ರಾಗ

ವಲ್ಗನ ೮೫-೮ ನೆಗೆತ

ವಲ್ಲಕಿ ೨೫-೧೨೪ ವೀಣೆ

ವಸಂತ ೧೧೨-೧೪ ಒಂದು ವಿಧದ ರಾಗ

ವಾತೂಳಿಕ ೨೪೫-೭೧ವ ಸುಂಟರಗಾಳಿ

ವಾದಕ ೨೦೮-೫ ನುಡಿಸುವವನು

ವಾನಾಯುಜ ೪೫೨-೨೦ವ ಒಂದುದೇಶದ ಕುದುರೆ

ವಾಮೆ ೧೭೮-೨೨ ಸುಂದರಿ

ವಾಗಾಂಪತಿ ೮೦-೭೭ ವರುಣ

ವಾರಿದ ೩೧೪-೪೪ ಮೇಘ

ವಾರಿಧಿಪುತ್ರ ೮೮-೨೧ ಚಂದ್ರ

ವಾರುಣಿ ೮೪-೩ ಒಂದುಬಗೆಯ ಮದ್ಯ

ವಾಲಧರ ೬೨-೪೨ ವೃಷಭ

ವಾಸ ೧೨೭-೯೦ ಕೊಳಲು

ವಾಸಂತಿ ೨೫೬-೧೨೫ ಒಂದು ಬಗೆಯ ಪುಷ್ಪ

ವಾಸಕಾಱ ೪೫೧-೧೭ ವಸ್ತ್ರಗಳನ್ನು ಸಿದ್ಧಪಡಿಸುವವ

ವಾಸರವ್ಯಾಪಾರ ೩೧೦-೨೫ವ ಪ್ರತಿದಿನ ಮಾಡುವ ವ್ಯಾಪಾರ

ವಾಹ್ಯಾಳಿ ೪೬-೬೮ವ ಕುದುರೆಯ ಸವಾರಿ

ವಿಂಶತಿ ೨೦೭-೧ವ ಇಪ್ಪತ್ತು

ವಿಕಚಿಸು ೩೭೨-೧೩೧ ಅರಳು

ವಿಕಲ್ಪಿಸು ೮೭-೧೪ನ ಬದಲಾಗು, ಹೆಚ್ಚುಕಮ್ಮಿಯಾಗು

ವಿಗಂಡ ೨೪೬-೭೬ ವಿಸ್ತಾರವಾದ

ವಿಗುರ್ವಣೆ ೧೫೩-೪೬ವ ಭಯಂಕರವಾದ, ಭೀತಿಹುಟ್ಟಿಸುವ

ವಿಗುರ್ವಿಸು ೧೬೦-೮೦ ಭೀತಿಹುಟ್ಟಿಸು

ವಿಘೂರ್ಣಿಸು ೨೧೨-೨೫ ಗಟ್ಟಿಯಾಗಿ ಧ್ವನಿಮಾಡು

ವಿಟಪಿ ೨೫೩-೧೧೧ವ ಮರ

ವಿಡಂಬಿಸು ೫೫-೩೫ವ,೧೫೩-೪೬ವ ಪ್ರದರ್ಶಿಸು

ವಿಡಾಯಿ ೪೪-೫೮ ಆಡಂಬರ

ವಿದ್ಧ ೩೯-೩೦ ಹೋಲುವ

ವಿದ್ರುಮ ೧೯-೯.ವ ಹವಳ

ವಿಲಂಪಟ ೨೩೨-೨ ಅತಿಕಾಮುಕ

ವಿಲಂಬಿಸು ೨೨-೧೦೮, ೨೮-೧೪೩ ನೇತಾಡು

ವಿಲೋಡಿಸು ೨೪೫-೭೧ವ ಚೆನ್ನಾಗಿ ಕಲಕು

ವಿವಾದಿಸು ೧೨೦-೫೦ ಚರ್ಚಿಸು

ವಿಷಾಣ ೧೬೬-೧೧೨ ಕೊಂಬು

ವಿಸಟಂಬರಿಯಿಸು ೩೬೫-೧೦೫ವ ಅಡ್ಡಾದಿಡ್ಡಿ ಓಡಾಡಿಸು

ವಿಸರ್ಪಣ ೩೮೭-೪೯ವ ಸಾಲು, ಹೆಚ್ಚಿಗೆ

ವಿಸ್ಮಾಪಕ ೨೩೨-೮ವ ಆಶ್ಚರ್ಯ, ವಿಚಿತ್ರ

ವಿಳಸನ ೧೦೪-೯೨ ಹೊಳೆಯುವ, ಪ್ರಕಾಶಿಸುವ

ವೀಜನ ೨೯-೧೪೪ ಬೀಸಣಿಗೆ

ವೇಶ್ಮ ೪೨೭-೬೬ ಮನೆ, ವಾಸಸ್ಥಾನ

ವೇಸರಿ ೨೪೨-೫೬ ಕತ್ತೆ

ವೈಕಚ ೬೫-೯ ತಲೆಗೂದಲು

ವೈಕುರ್ವಣ ೧೬೫-೧೦೩ವ ದೈವಿಕ ಶಕ್ತಿಯಿಂದ ನಿರ್ಮಿತವಾದುದು

ವೈಜಯಂತಿ ೨೭೫-೪೫ವ ಬಾವುಟ

ವೈತಾಳಿಕ ೪೬೦-೫೬ವ ಸ್ತುತಿಪಾಠಕ

ವ್ಯಕ್ತೀಕರಿಸು ೭೬-೬೧ವ ಸ್ಪಷ್ಟಪಡಿಸು

**ಶ**

ಶಂಗ ೧೬೩-೯೫ ನಸುಗೆಂಪುಬಣ್ಣ (?)

ಶಂಬರ ೧೨೯-೯೮ ಒಬ್ಬ ರಾಕ್ಷಸ, ಪರ್ವತ

ಶರ್ವ ೮೦-೮೧ ಶಿವ

ಶಾಖಾಚರ ೧೭೭-೨೦ವ ಕೋತಿ

ಶಾತಕುಂಭ ೩೪-೩ವ ಚಿನ್ನ

ಶಾತ್ರವ ೧೦೨-೮೫ ಶತ್ರು

ಶೀತಗು ೫೮-೪೯ (?)

ಶುಂಡ ೨೫೯-೧೩೯ವ ಮದ್ಯ

ಶುಂಡಾಲ ೧೫೩-೪೭ ಆನೆ

ಶುಕ್ತಿ ೧೦೫-೧೦೦ವ ಮುತ್ತಿನ ಚಿಪ್ಪು

ಶುಕ್ಲಕುಷ್ಠ ೨೨೨-೭೪ ಬಿಳಿ ತೊನ್ನು

ಶುನಾಸೀರ ೧೮೯-೭೫ವ ಇಂದ್ರ

ಶೂಕ ೧೭-೮೨ ಹೊಟ್ಟು, ಊಬು

ಶೌಂಡಕಿತ ೨೨೦-೬೫ ಮದವೇರಿದ

ಶೌಂಡಿಕ ೨೫೯-೧೩೯ವ ಮದ್ಯಪಾನಿ, ಹೆಂಡ ಗುಡುಕ

ಶ್ರದ್ಧಾನ ೭೬-೬೦ ನಂಬಿಕೆ, ವಿಶ್ವಾಸ

ಶ್ಲಥೀಭೂತ ೩೭೭-೫ ಸಡಿಲವಾದ

**ಷ**

ಷಡ್ಜ ೨೦೭-೧ವ ಸಂಗೀತದ ಒಂದು ಮಟ್ಟು

**ಸ**

ಸಂಕಲೆ ೧೭-೮೬ ಸಂಕೋಲೆ, ಬೇಡಿ

ಸಂಕೆ ೧೩೦-೧೦೦ ಶಂಕೆ, ಸಂದೇಹ

ಸಂಗಡಿಸು ೬೯-೨೭ ಒಟ್ಟಾಗು, ಕೂಡು

ಸಂಗಣಿಸು ೨೮೧-೭೨ ಕೂಡು, ಸೇರು

ಸಂಗಳಿಸು ೨೦೦-೧೨೯ ಕೂಡು, ಸೇರು

ಸಂಚ ೨೮೦-೭೦ವ ಪತ್ರಗಳ ಕಟ್ಟು

ಸಂಚಯ ೧೨೫-೭೭ ರಾಶಿ, ಗುಂಪು

ಸಂಚಿಸು ೧೨೧-೫೬ ಕೂಡಿಸು, ಸೇರಿಸು

ಸಂಛನ್ನ ೨೪೧-೫೦ ಮುಚ್ಚಲ್ಪಟ್ಟ, ಹೊದಿಸಿದ

ಸಂತಪನ ೯೮-೬೭ವ ಕುದಿಸುವಿಕೆ
ಸಂತ್ರಾಸನ ೯೫-೫೯ ಭಯ, ಹೆದರಿಕೆ
ಸಂದಂಶ ೨೪೦-೪೬ ಇಕ್ಕುಳ
ಸಂದಣಿಸು ೧೪೯-೨೮ ಸೇರಿಸು, ಕೂಡಿಸು
ಸಂದೆಗ ೧೧೪-೨೫ ಸಂದೇಹ
ಸಂಧುಕ್ಷಣಂಗೆಯ್ ೧೨೯-೯೭ವ ಹೊತ್ತಿಸು
ಸಂನಂದಿತ ೧೪೮-೨೪ ಸೇರಿದ, ಕೂಡಿದ
ಸಂಪಣ ೮೦-೭೮ ಕಲಸಿದ ಹಿಟ್ಟು
ಸಂಬಳ ೬೮-೨೧ ಬುತ್ತಿ
ಸಂಸರಣ ೨೦೫-೧೫೪ ಸಂಸಾರ
ಸಂಸ್ತವ ೧೭೪-೨ ಹೊಗಳಿಕೆ
ಸಕ್ಕಸಮ ೪೬೦-೫೬ವ ಸರಿಸಮಾನ
ಸಜ್ಜಕ್ಷಣ ೨೩-೧೧೦ ಮದ್ಯ ಕುಡಿಯುವಾಗ ನಂಜಿಕೊಳ್ಳುವ ಮಾಂಸದ ಚೂರು
ಸಜ್ಜಾಲಕ ೫೩-೨೧ ಉತ್ತಮವಾದಯುದ್ಧ ಕವಚ
ಸಜ್ಜಿಕೆ ೧೫೮-೭೩ ಅಲಂಕಾರಮಾಡಿದ ಹೆಂಗಸು
ಸಣ್ಣಿಸು ೧೨೩-೬೪ ಚೂರುಚೂರುಮಾಡು
ಸತ್ವರ ೨೧೦-೧೬ ವೇಗ
ಸನ್ನತ ೨೧-೧೦೬ ಕೂಡಿದ, ಸೇರಿದ
ಸನ್ನಹಿತ ೨೭-೧೩೭ ಕೂಡಿದ, ಸೇರಿದ
ಸನ್ನಿದ ೫೩-೨೫ ಸಮೀಪ
ಸನ್ನೆಗಾಳೆ ೨೨-೧೦೯ವ ಸಂಜ್ಞೆಗಾಗಿ ಊದುವ ಕಹಳೆ
ಸಪುರ ೧೧೨-೧೫ವ ತೆಳು, ನಯ
ಸಪ್ತಚ್ಛದ ೧೭೯-೨೭ವ ಒಂದು ಜಾತಿಯ ಮರ
ಸಮಂಕಿತ ೧೦-೪೨ ಕೂಡಿದ
ಸಮಂಚಿತ ೨೭೪-೪೧ವ ಕೂಡಿದ, ಸೇರಿದ
ಸಮುಕಟ್ಟು ೨೩೪-೧೬ವ ಸಿದ್ಧತೆ
ಸಮನಿಸು ೫೨೧-೩೩೯ ಕೂಡು, ಪ್ರಾಪ್ತವಾಗು
ಸಮಪಹ ೧೭೩-೧೪೫ ನಾಶಮಾಡುವವನು
ಸಮಾಕಳಿತ ೨೧೧-೨೧ವ ಸೇರಿದ, ಕೂಡಿದ
ಸಮಾವರಿಸು ೩೯೭-೯೩ ಚೆನ್ನಾಗಿ ಆವರಿಸು
ಸಮಾಸ್ಕಂದಿತ ೪೫೨-೨೦ವ ಕುದುರೆಯ ನಡಗೆಗಳಲ್ಲಿ ಒಂದು
ಸಮುತ್ಥ ೨೪೧-೫೨ ಮೇಲೆದ್ದ
ಸಮುದ್ಭಾಷಿತ ೨೩೫-೪೫ವ ಚೆನ್ನಾಗಿನೆಲೆಗೊಂಡ
ಸಮುಪಕಂಠ ೨೯೨-೧೨೭ವ ಹತ್ತಿರ, ಸಮೀಪ
ಸಮುಪಗತ ೨೯-೧೪೫ವ ಹತ್ತಿರ ಬಂದ, ಸಮೀಪಿಸಿದ
ಸಮೆ ೯-೩೮ ಮಾಡು
ಸಮ್ಮದ ೭೫-೫೭ ಸಂತೋಷ
ಸರಭ ೨೫೫-೧೨೧ ಎಂಟು ಕಾಲಿನ ಒಂದು ಪ್ರಾಣಿ
ಸರವಳಿಗೆ ೩೦೨-೧೭೩ ಎಳೆ
ಸವನೋತ್ಸವ ೧೯೫-೧೦೩ ಜನ್ಮಾಭಿಷೇಕ
ಸಸಿನ ೧೪-೬೮ ನೇರ
ಸಱಿ ೧೮೧-೩೮ ಬಂಡೆ
ಸಾಯಾತ್ರಿಕ ೫೩೯-೪೨೧ ಜೊತೆಯಲ್ಲಿ ಹೋಗುವ ಯಾತ್ರಿಕ
ಸಾರತೆ ೧೩೦-೧೦೩ ಸತ್ವದಿಂದ ಕೂಡಿದ್ದು
ಸಾರಿಗೆ ೧೭೨-೧೪೧ ಸಮೀಪ
ಸಾಲಹಸ್ತ ೨೪-೧೨೦ ಕೋಟೆಯ ಎತ್ತರವಾದ ಗೋಡೆ
ಸಾವಗಿಸು ೪೧೧-೧೬೦ ಸರಿಯಾಗಿ ಹೊದ್ದುಕೊಳ್ಳು
ಸಾಸ ೨೫೭-೧೩೨ವ ಸೊಗಸು, ಮನೋಹರ
ಸಾಸಿಗ ೭೨-೪೩ ಶೂರ, ಪರಾಕ್ರಮಿ
ಸಿಂದ ೩೮೮-೫೨ವ ಆನೆ (?)
ಸಿಂಪಿಣಿ ೪೦೩-೧೨೦ ಸಿಂಪಡಿಸುವಿಕೆ, ಚಿಮುಕಿಸುವಿಕೆ
ಸಿರಿಸ ೧೨೪-೭೨ ಒಂದು ಜಾತಿಯ ಪುಷ್ಪ
ಸಿರಿಸಿಂಬಿ ೨೫೬-೧೨೬ ಒಂದು ಜಾತಿಯ ಮದ್ಯ
ಸೀಂಪು ೧೯೭-೧೧೯ ಸೀನುವುದು
ಸೀವಟ್ಟಣ ೪೫೨-೧೯ ಮಲ್ಲಯುದ್ಧದಲ್ಲಿ ಒಂದು ವರಸೆ

ಸುರಾಳ ೨೫೬-೧೨೬ ಒಂದು ಬಗೆಯ ಮದ್ಯ
ಸುರಿಗೆ ೨೫೩-೧೧೦ ಕತ್ತಿ
ಸುರಿಮುತ್ತು ೧೩೧-೧೦೮ ಸುರಿಯುತ್ತಿರುವ ಮುತ್ತು
ಸುರುಳ್ಚು ೭೦-೩೫ ಸುತ್ತು, ಮುಚ್ಚಿಡು
ಸುರ್ವುಗೊಳ್ ೨೫೭-೧೮೪ವ ಗುಂಪಾಗು, ಒಟ್ಟಾಗು
ಸುಲಿ ೨೮-೧೪೨ ಉಜ್ಜು, ತೊಳೆ
ಸುಲಿಪಲ್ ೧೩೩-೧೧೦ವ ಹಲ್ಲನ್ನು ಉಜ್ಜು
ಸುಷಿರ ೧೯೫-೧೦೪ ಒಂದು ಬಗೆಯ ವಾದ್ಯ
ಸುಗಿ ೧೩೩-೧೧೬ವ ಹೆದರು
ಸುಟ್ಟುಂಬೆ ೧೧೮-೪೩ವ ತೋರುಬೆರಳು
ಸುನಾದೆ ೪೩-೪೯ ಸರಸ್ವತಿ, ಶಾರದೆ
ಸೂಕರಜ ೨೫೧-೯೯ ಹಂದಿಯಿಂದ ಹುಟ್ಟಿದ
ಸೂಡಗ ೧೩೧-೧೦೭ ಬಳೆ
ಸೂಡು ೧೨೬-೭೯ ಮುಡಿ
ಸೂಸಕ ೧೮೨-೪೨ ಹಣೆಯ ಮೇಲೆ ಧರಿಸುವ ಒಂದು ಆಭರಣ, ಕುಚ್ಚು
ಸೂಳ್ವಡೆ ೪೩೬-೯೮ ಸರದಿಯನ್ನು ಹೊಂದು
ಸೆಕ್ಕು ೨೧೨-೨೫ ಸಿಕ್ಕಿಸು
ಸೇಕಿಸು ೭೫-೫೫ ನೀರು ಚಿಮುಕಿಸು
ಸೇದೆವಡು ೨೧೬-೪೩ ಆಯಾಸಪಡು, ಬಳಲು
ಸೈತುಮಾಡು ೧೮೫-೫೬ ಸೆಟ್ಟಗೆಮಾಡು
ಸೈಪು ೧೪೦-೧೫೦ ಪುಣ್ಯ
ಸೈವಳ ೧೮೦-೩೧ ಪಾಚಿ
ಸೊಡರ್ಗುಡಿ ೧೮೩-೪೭ವ ದೀಪದ ಕುಡಿ
ಸೊದೆವಳಿ ೪೯೬-೨೨೫ವ ಅಮೃತವನ್ನುಬಳಿ(?)
ಸೊಪ್ಪಿಸು ೯೦-೩೧ ಸೊರಗು, ಬಾಡು
ಸೊಪ್ಪುಳ್ ೨೫೨-೧೦೮ ಧ್ವನಿ
ಸೋಗೆ ೮೧-೮೫ ನವಿಲು
ಸೋಗಿಲು ೨೧೨-೨೪ ಮಡಿಲು
ಸೋರ್ಮುಡಿ ೧೬-೮೧ ಇಳಿಬಿದ್ದಿರುವ ತುರುಬು
ಸೋವು ೧೭-೮೨ ಓಡಿಸು, ಅಟ್ಟು
ಸೌವಸ್ತಿಕ ೩೪೨-೧ವ ಪೂಜಾರಿ
ಸ್ತಂಬೇರಮ ೨೭೦-೨೩ ಆನೆ
ಸ್ತೂಯಮಾನ ೨೦೪-೧೫೨ವ ಹೊಗಳಲ್ಪಟ್ಟ
ಸ್ವರಮಂಡಳ ೨೦೭-೧ವ ಒಂದು ಬಗೆಯ ವೀಣೆ

## ಹ

ಹಂಚೆ ೪೩೧-೭೮ ಹಂಸ
ಹಕ್ಕರಿಕೆ ೨೩೯-೪೧ ಕುದುರೆಯ ಜೀನು
ಹಡಪ ೧೨೬-೮೨ವ ಎಲೆ ಅಡಕೆಯ ಚೀಲ
ಹಡಪಿಗ ೩೯೨-೭೩ ಎಲೆ ಅಡಕೆಯ ಚೀಲ ಹಿಡಿದವನು
ಹಡಿಕೆ ೮೯-೩೦ ಕೆಟ್ಟವಾಸನೆ
ಹಮ್ಮೈಸು ೨೪೧-೫೫ ಭಯಪಡು, ಹೆದರು
ಹರಿಚಂದನ ೪೮-೩ ಶ್ರೀಗಂಧ
ಹರಿನೀಳಕುಟ್ಟಿಮ ೨೭೪-೪೧ ಪಚ್ಚೆಯ ನೆಲಗಟ್ಟು
ಹವಣಿ ೨೦೭-೧ವ ರಾಗದ ಒಂದು ಬಗೆ
ಹಳ ೩೪-೩ವ ಸೇಗಿಲು
ಹಳಿಗು ೧೬೮-೧೨೩ ಹೆಣಗು, ಹೋರಾಡು
ಹಾರೀತಕ ೫೦೦-೨೩೯ವ ಒಂದು ಜಾತಿಯ ಪಾರಿವಾಳ
ಹಾವಂಚೆ ೨೪೦-೪೯ ಪಾಚಿ
ಹಾವಸೆ ೧೭೮-೨೩ ಪಾಚಿ
ಹಾವುಗೆ ೨೭೬-೪೮ವ ಮರದ ಪಾದರಕ್ಷೆ
ಹಾಸು ೧೨೩-೬೫ ಹಾಸಿಗೆ
ಹಿಡಿಯಂಬು ೨೫೨-೧೦೫ ಒಂದು ಬಗೆಯ ಬಾಣ
ಹೀಲಿ ೧೧೪-೨೩ ನವಿಲುಗರಿ
ಹುಂಡ ೨೫೫-೧೨೪ ಹೊರೆ, ಭಾರ
ಹುಡಿಕೆನೀರು ೪೦೩-೧೧೯ ಬಿಸಿನೀರು
ಹುಜಿಗಿಲ್ ೨೪೮-೮೪ ಒಂದು ಜಾತಿಯ ಮರ

ಹೂತಿಯ ಬೆಕ್ಕು ೨೪೮-೮೩ ಒಂದು ಜಾತಿಯ ಬೆಕ್ಕು
ಹೂಸಣಂಬು ೩೦೨-೧೭೪ ಒಂದು ತಿಂಡಿ
ಹೆಕ್ಕಳಿಸು ೨೫೧-೧೦೦ ಗರ್ವಪಡು, ಹೆಮ್ಮೆ ಪಡು
ಹೆಡ್ಡೈಸು ೨೨೩-೭೬ ಹೀನವಾಗಿ ಕಾಣು, ತಿರಸ್ಕರಿಸು
ಹೇರುಡು ೨೫೩-೧೧೩ ದೊಡ್ಡಉಡ
ಹೇಳಾಲಂಬಿ ೪೪-೫೬ ವಿನೋದಪ್ರಿಯ
ಹೊಗರೇಱು ೨೮೯-೧೧೬ ಕಾಂತಿಯುಕ್ತವಾಗು
ಹೊದರು ೨೫೩-೧೧೩ ಪೊದರು
ಹೊನ್ನೆ ೭೭-೬೬ ಒಂದು ಜಾತಿಯ ಮರ
ಹೊರಜೆ ೪೫೨-೧೯ವ ದೊಡ್ಡ ಹಗ್ಗ
ಹೋರಾಶಾಸ್ತ್ರ ೧೦-೪೫ ಜ್ಯೋತಿಷ್ಯ

ಱ

ಱಂಚೆ ೨೩೫-೨೧ವ ಜೇನು

# ೩. ವಿಶಿಷ್ಟ ಪದಸೂಚಿ

[ಮೊದಲನೆಯ ಅಂಕಿ ಪುಟವನ್ನೂ ಎರಡನೆಯ ಅಂಕಿ ಪದ್ಯವನ್ನೂ ನಿರ್ದೇಶಿಸುತ್ತದೆ]

## ೪. ಪಾರಿಭಾಷಿಕ ಪದಕೋಶ

[ಮೊದಲನೆಯ ಅಂಕಿ ಪುಟವನ್ನೂ ಎರಡನೆಯ ಅಂಕಿ ಪದ್ಯವನ್ನೂ ನಿರ್ದೇಶಿಸುತ್ತದೆ]

**ಅಂತರಾಯ** ೪೭೭-೧೩೪ವ ಮೋಕ್ಷವನ್ನು ಬಯಸಿ ಮುಂದುವರಿಯುವವರಿಗೆ ನಡುವೆ ಉಂಟಾಗುವ ತೊಡಕು

**ಅಂತರ್ಮುಹೂರ್ತ** ೧೦೩-೮೮ವ ಒಂದು ಮುಹೂರ್ತಕ್ಕಿಂತಲೂ ಕಡಮೆಯಾದ ಕಾಲ, ತುಂಬಾ ಕಡಮೆ ಪ್ರಮಾಣದ ಕಾಲ

**ಅಕಾಮನಿರ್ಜರೆ** ೫೧೩-೨೯೫ವ ವ್ಯಕ್ತಿಯ ಉದ್ದೇಶವಿಲ್ಲದೆ ತನ್ನಷ್ಟಕ್ಕೆ ತಾನೇ ಆಗುವ ನಿರ್ಜರೆ

**ಅಘಾತಿಕಲುಷ** ೩-೨ ಜೀವದ ಅನಂತಜ್ಞಾನಾದಿಗುಣಗಳನ್ನು ನಾಶಮಾಡುವ ಕರ್ಮಗಳು

**ಅಜೀವತತ್ತ್ವ** ೫೧೦-೨೮೨ ಏಳು ತತ್ತ್ವಗಳಲ್ಲಿ ಎರಡನೆಯದು

**ಅರಿಷಡ್ವರ್ಗ** ೩೮-೨೩ನ ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ

**ಅರ್ಥಾಪತ್ತಿ** ೯೭-೬೬ವ ಪ್ರತ್ಯಕ್ಷಾದಿಪ್ರಮಾಣಗಳಲ್ಲಿ ಒಂದು

**ಅವಧಿಜ್ಞಾನ** ೧೯೭-೧೧೯ ಎಂಟು ಬಗೆಯ ಜ್ಞಾನಗಳಲ್ಲಿ ಒಂದು

**ಅವಸರ್ಪಿಣಿ** ೫೦೭-೨೬೯ವ ಮನುಷ್ಯರ ಆಯುಸ್ಸು ಸುಖ ಮುಂತಾದುವುಗಳು ಕ್ರಮವಾಗಿ ಕುಂದುವ ಕಾಲ

**ಅಷ್ಟಮಹಾಪ್ರಾತಿಹಾರ್ಯ** ೩೩೪-೧೪೧ ಜಿನನ ಎಂಟು ಮಂಗಳ ಲಾಂಛನಗಳು ೧ ಅಶೋಕವೃಕ್ಷ ೨ ಸುರಪುಷ್ಪವೃಷ್ಟಿ ೩ ದಿವ್ಯಧ್ವನಿ ೪ ಚತುಃಷಷ್ಟಿ ಚಾಮರ ೫ ರತ್ನಜಡಿತ ಸುವರ್ಣ ಸಿಂಹಾಸನ ೬ ಪ್ರಭಾವಲಯ ೭ ದೇವ ದುಂದುಭಿ ೮ ಛತ್ರತ್ರಯ

**ಅಷ್ಟವಿಧಾರ್ಚನೆ** ೧೦೭-೧೦೪ ಅಕ್ಷತೆ, ಜಲ, ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯ ತಾಂಬೂಲ–ಇವುಗಳ ಅರ್ಪಣೆ

**ಅಷ್ಟಶೋಭೆ** ೫೨-೧೫ ಸಣ್ಣ ಬಣ್ಣಗಳನ್ನು ಹಚ್ಚುವುದು, ಸುಗಂಧ ದ್ರವ್ಯಗಳಿಂದ ಸಾರಣೆ, ರಂಗವಲ್ಲಿ, ತಳಿರುತೋರಣ, ಧ್ವಜವನ್ನು ಏರಿಸುವುದು, ಪುಷ್ಪಗುಚ್ಛಗಳಿಂದ ಅಲಂಕರಿಸುವುದು, ಚಪ್ಪರಹಾಕುವುದು, ಮೇಲುಕಟ್ಟು ಕಟ್ಟುವುದು

**ಅಹಮಿಂದ್ರ** ೧೦೩-೮೮ವ ಹದಿನಾರು ಸ್ವರ್ಗಗಳೂ ಅಣೂತ್ತರಗಳೂ ಆದಮೇಲೆ ಬರುವ ಗ್ರೈವೇಯಕವೆಂಬ ಲೋಕಭಾಗದಲ್ಲಿ ಹುಟ್ಟುವ ಜೀವ

**ಅಹಮೇವೇಂದ್ರ** ೧೦೫-೯೭ ಹದಿನಾರು ಸ್ವರ್ಗಗಳೂ ಅಣೂತ್ತರಗಳೂ ಆದಮೇಲೆ ಬರುವ ಗ್ರೈವೇಯಕವೆಂಬ ಲೋಕಭಾಗದಲ್ಲಿ ಹುಟ್ಟುವ ಜೀವ

**ಆರ್ತಧ್ಯಾನ** ೫೦೬-೨೬೭ ಇಷ್ಟವಲ್ಲದ ವಸ್ತುಗಳಿಂದ ಅಗಲಬೇಕೆಂಬ ಆಕಾಂಕ್ಷೆಯಿಂದಲೂ, ಇಷ್ಟವಾಗಿರುವ ವಸ್ತುಗಳು ಬೇಕೆಂಬ ಆಕಾಂಕ್ಷೆಯಿಂದಲೂ ಮನಸ್ಸು ತುಂಬಿ ಅವುಗಳನ್ನೇ ಧ್ಯಾನಿಸುತ್ತಿರುವುದು

**ಆಸನಕಂಪ** ೧೪೧-೧೫೫ ತೀರ್ಥಂಕರರ ಜನನವೇ ಮುಂತಾದ ವಿಶೇಷ ಪ್ರಸಂಗಗಳಲ್ಲಿ ದೇವೇಂದ್ರನಿಗೆ ಉಂಟಾಗುವ ಪೀಠದ ಅಲುಗಾಟ

**ಉತ್ಸರ್ಪಿಣಿ** ೫೦೭-೯೯ವ ಮನುಷ್ಯರ ದೇಹ ಪ್ರಮಾಣ, ಶರೀರ ಬಲ, ಆಯುಸ್ಸು, ಸುಖ ಮುಂತಾದುವುಗಳು ಕ್ರಮವಾಗಿ ಏರುವ ಕಾಲ

**ಉಪಪಾದ** ೧೦೩-೮೮ವ ಗರ್ಭವಾಸವಿಲ್ಲದೆ ಇದ್ದಕ್ಕಿದ್ದಂತೆ ಹುಟ್ಟುವುದು

**ಏಕತ್ವ** ೯೮-೬೮ವ ದ್ವಾದಶ ಅನುಪ್ರೇಕ್ಷೆಗಳಲ್ಲಿ ನಾಲ್ಕನೆಯದು

**ಏಕರಜ್ಜು** ೧೩-೬೧ವ ಕಾಲದ ಒಂದು ಅಳತೆ, ಪ್ರಮಾಣ

**ಐದಾಚಾರ** ೩೩೯-೧೬೬ ದರ್ಶನ, ಜ್ಞಾನ, ಚಾರಿತ್ರ, ತಪ, ವೀರ್ಯ

**ಕರ್ಮಕ್ಷಯ** ೫೧೩-೩೦೦ ಇರುವ ಕರ್ಮವನ್ನು ನಾಶಮಾಡುವುದು ಮತ್ತು ಬರುವ ಕರ್ಮವನ್ನು ತಡೆಗಟ್ಟುವುದು

**ಕಲ್ಮೆಲೆ** ೧೦೨-೮೪ ಬೇಸಿಗೆಯಲ್ಲಿ ಕಲ್ಲಿನ ಮೇಲೆ ನಿಂತು ಮಾಡುವ ತಪಸ್ಸು

**ಕಲ್ಪವಾಸಿಗ** ೧೫೦-೩೮ ಸ್ವರ್ಗದಲ್ಲಿ ವಾಸಮಾಡುವವನು, ದೇವತೆ

**ಕಷಾಯ** ೬-೨೨ ಸುಖದುಃಖಗಳನ್ನುಂಟುಮಾಡುವ ನಾಲ್ಕು ಬಗೆಯ ದೋಷಗಳು

**ಘಾತಿಕರ್ಮ** ೧೪೦-೧೪೯ ಜೀವಕ್ಕೆ ಸಹಜವಾದ ಅನಂತಜ್ಞಾನ, ಅನಂತದರ್ಶನ, ಅನಂತವೀರ್ಯ, ಅನಂತಸುಖ ಎಂಬ ನಾಲ್ಕು ಅನಂತಗುಣಗಳಿಗೆ ಘಾತಿ ಉಂಟು ಮಾಡುವ ಕರ್ಮ

**ಚತುರ್ನಿಕಾಯ** ೧೪೧-೧೫೫ವ ಕಿನ್ನರ ಕಿಂಪುರುಷ ಗರುಡ ಗಂಧರ್ವರೆಂಬ ನಾಲ್ಕು ವಿಧ ದೇವತೆಗಳು

**ಚತುರ್ವಿಂಶತೀಂದ್ರ** ೧೫೨-೪೪ವ ಇಪ್ಪತ್ತನಾಲ್ಕು ಕಲ್ಪವಾಸಿ ದೇವತೆಗಳು

**ಚರಮದೇಹ** ೧೦೫-೧೦೦ವ ತದ್ಭವ ಮೋಕ್ಷಗಾಮಿಯಾದ ಶರೀರ

**ಚಾರಣಪರಮೇಷ್ಠಿ** ೭೪-೫೩ವ ತಪಸ್ಸಿನ ಪ್ರಭಾವದಿಂದ ಆಕಾಶದಲ್ಲಿ ಸಂಚಾರ ಮಾಡುವ ಸಾಮರ್ಥ್ಯವುಳ್ಳ ಮುನಿ

**ಚಾರಣಮುನಿ** ೫೦–೧೨ 'ಚಾರಣಪರಮೇಷ್ಠಿ' ನೋಡಿ

**ಜ್ಞಾನಾವರಣೀಯ** ೪೭೭–೧೩೪ವ ಕರ್ಮಪ್ರಕೃತಿಗಳಲ್ಲಿ ಒಂದು

**ಜ್ಯೋತಿಷ್ಕ** ೫೦೮–೨೭೪ವ ದೇವತೆಗಳಲ್ಲಿ ಒಂದು ಪ್ರಭೇದ

**ದಶಾವಸ್ಥೆ** ೪೩೪–೭೯ ದೃಕ್‌ಸಂಗ, ಮನಸ್ಸಂಗ, ಸಂಕಲ್ಪ, ಜಾಗರ, ಕೃಶತೆ, ಅರತಿ, ಹ್ರೀತ್ಯಾಗ, ಉನ್ಮಾದ, ಮೂರ್ಛೆ, ಅಂತ

**ದಶಾಶೆ** ೬೯–೨೭ ಪೂರ್ವ, ಆಗ್ನೇಯ, ದಕ್ಷಿಣ, ನೈರುತ, ಪಶ್ಚಿಮ, ವಾಯುವ್ಯ, ಉತ್ತರ, ಐಶಾನ್ಯ, ಊರ್ಧ್ವ, ಅಧೋ

**ದರ್ಶನ ಮೋಹನೀಯ** ೧೦೬–೧೧೧ವ ಮಿಥ್ಯಾತ್ವ, ಸಮ್ಯಕ್ ಮಿಥ್ಯಾತ್ವ, ಸಮ್ಯಕ್ತ್ವ ಪ್ರಕೃತಿ.

**ದರ್ಶನಾವರಣೀಯ** ೪೭೭–೧೩೪ವ ಘಾತಿಕರ್ಮಗಳಲ್ಲಿ ಒಂದು

**ದಶಧರ್ಮ** ೩೯–೧೬೬ ಉತ್ತಮಕ್ಷಮೆ, ಮಾರ್ದವ, ಆರ್ಜವ, ಶೌಚ, ಸತ್ಯ, ಸಂಯಮ, ತಪಸ್ಸು, ತ್ಯಾಗ, ಆಕಿಂಚನ್ಯ, ಬ್ರಹ್ಮಚರ್ಯ

**ದುಷ್ಷಮ ಸುಷಮ** ೫೦೭–೨೯೯ವ ಅವಸರ್ಪಿಣಿಯ ನಾಲ್ಕನೆಯ ಕಾಲ

**ದುಷ್ಷಮ** ೫೦೭–೨೯೯ವ ಅವಸರ್ಪಿಣಿಯ ಐದನೆಯ ಕಾಲ

**ದ್ವಾದಶವಿಧ ತಪ** ೧೧೧–೮೦ ಅನಶನ, ಅವಮೋದರ್ಯ, ವೃತ್ತಿಸಂಖ್ಯಾನ, ರಸ ತ್ಯಾಗ, ಕಾಯಕ್ಲೇಶ, ವಿವಿಕ್ತಶಯನಾಸನ, ಪ್ರಾಯಶ್ಚಿತ್ತ, ವಿನಯ, ವೈಯಾ ಪೃತ್ಯ, ಸ್ವಾಧ್ಯಾಯ, ವ್ಯುತ್ಸರ್ಗ, ಧ್ಯಾನ

**ನವರಸ** ೨೧೦–೧೬ವ ಶೃಂಗಾರ, ವೀರ, ಕರುಣ, ಅದ್ಭುತ, ಹಾಸ್ಯ, ಭಯಾನಕ, ಭೀಭತ್ಸ, ರೌದ್ರ, ಶಾಂತ

**ನಿರ್ವಾಣ ಕಲ್ಯಾಣ** ೫೨೫–೩೫೬ ಪಂಚಕಲ್ಯಾಣಗಳಲ್ಲಿ ಒಂದು

**ಪಂಚಾಚಾರ** ೩–೩ ಜ್ಞಾನಾಚಾರ, ದರ್ಶನಾಚಾರ, ಚಾರಿತ್ರಾಚಾರ, ತಪಾಚಾರ, ವೀರ್ಯಾಚಾರ

**ಪಂಚಾಶ್ಚರ್ಯ** ೧೪೧–೧೫೭ವ ದೇವದುಂದುಭಿ ಮೊಳಗುವುದು, ಹೂಮಳೆಗರೆಯು ವುದು, ಚಿನ್ನದ ಮಳೆ ಕರೆಯುವುದು, ದೇವತೆಗಳು ಪ್ರಶಂಸೆ ಮಾಡುವುದು, ತಂಗಾಳಿ ಬೀಸುವುದು

**ಪತ್ತುಧರ್ಮ** ೩–೩ 'ದಶಧರ್ಮ' ನೋಡಿ

**ಪನ್ನೆರಡಂಗ** ೪–೧೦ ಆಚಾರಾಂಗ, ಸೂತ್ರ, ಕೃತಾಂಗ, ಸ್ಥಾನಾಂಗ, ಸಮವಾ ಯಾಂಗ, ವ್ಯಾಖ್ಯಾಪ್ರಜ್ಞಪ್ತ್ಯಂಗ, ಜ್ಞಾತೃಕಥಾಂಗ, ಉಪಾಸಕಾಧ್ಯಾಯನಾಂಗ,

ಅಂತಕೃದ್ದಶಾಂಗ, ಅನುತ್ತರೋಪಪಾದೋಪದಶಾಂಗ, ಪ್ರಶ್ನ ವ್ಯಾಕರಣಾಂಗ, ವಿಪಾಕಸೂತ್ರಾಂಗ, ದೃಷ್ಟಿವಾದಾಂಗ

**ಹನ್ನೆರಡುತಪ** ೩-೨ 'ದ್ವಾದಶವಿಧ ತಪ' ನೋಡಿ

**ಪಲ್ಯಪ್ರಮಿತಕಾಲ** ೧೧೭-೩೭ನ ಕಾಲದಲ್ಲಿ ಒಂದು ಭೇದ

**ಪುದ್ಗಲ** ೫೦೯-೨೭೭ನ ಸ್ಪರ್ಶ ರಸ ಗಂಧ ವರ್ಣಗಳುಳ್ಳ ದ್ರವ್ಯ

**ಪ್ರಾಭಾಕರ** ೧೧೧-೧೨ ಒಂದು ಬಗೆಯ ತತ್ತ್ವಜ್ಞಾನ

**ಬಾಹ್ಯಾಭ್ಯಂತರ ಪರಿಗ್ರಹ** ೧೦೨-೮೪ನ ದ್ವಾದಶವಿಧ ತಪಗಳನ್ನು ಸ್ವೀಕರಿಸುವುದು

**ಜಿಳ್ಳವಾಸ** ೧೦೩-೮೪ ಮೊಳಕಾಲು ಮುಳುಗುವವರೆಗೆ ನೀರಿನಲ್ಲಿ ನಿಂತು ಮಾಡ ತಪಸ್ಸು

**ಭವನಾಮರ** ೧೫೨-೪೪ನ ಅಸುರ, ನಾಗ, ಸುಪರ್ಣಾದಿ ಹತ್ತು ಪ್ರಕಾರದ ದೇವರು ಭವನದೊಳಗೆ ಅಂದರೆ ಪಾತಾಳದೊಳಗೆ ವಾಸಿಸುವುದು

**ಮಡಂಬ** ೪೦-೧೦೨ ಐದುನೂರು ಗ್ರಾಮಗಳನ್ನೊಳಗೊಂಡ ಮುಖ್ಯಪಟ್ಟಣ

**ಮತಿಶ್ರುತಾವಧಿ** ೧೪೫-೧೪ ಮತಿ, ಶ್ರುತಿ, ಅವಧಿ ಎಂಬ ಮೂರು ಬಗೆಯ ಜ್ಞಾನಗಳು

**ಮಿಥ್ಯಾದೃಷ್ಟಿ** ೧೦೬-೧೦೧ನ ಜೈನಮತ ತತ್ತ್ವಗಳು ಸುಳ್ಳೆಂದು ಅವನ್ನು ನಂಬದಿರುವುದು

**ಮೂವತ್ತಾಱುಭಾಸ್ವದ್ಗುಣ** ೩೪೯-೧೬೬ ಅನಶನಾದಿ ಹನ್ನೆರಡು ತಪಗಳು, ಸಾಮಾಯಿಕಾದಿ ಪ್ರತಿಕ್ರಮಣಾದಿ ಆರು ಆವಶ್ಯಕಗಳು, ಉತ್ತಮ ಕ್ಷಮಾದಿ ಹತ್ತು ಧರ್ಮಗಳು ಜ್ಞಾನಾಚಾರಾದಿ ಐದು ಆಚಾರಗಳು ಮತ್ತು ಮನೋಗುಪ್ತ್ಯಾದಿ ಮೂರು ಗುಪ್ತಿಗಳು—ಇವೆಲ್ಲ ಕೂಡಿ ಆಚಾರ್ಯರ ಮೂವತ್ತಾರು ಗುಣಗಳಾಗುತ್ತವೆ

**ಮೂಱರಗುಪ್ತಿ** ೩೪೯-೧೬೬ ಮನೋಗುಪ್ತಿ, ವಚನಗುಪ್ತಿ, ಕಾಯಗುಪ್ತಿ

**ಮೋಹನೀಯ** ೪೭೬-೧೩೪ನ ಕರ್ಮಗಳಲ್ಲಿ ಒಂದು

**ರತ್ನತ್ರಯ** ೪-೯ ಸಮ್ಯಕ್ ದರ್ಶನ, ಸಮ್ಯಕ್ ಜ್ಞಾನ, ಸಮ್ಯಕ್ ಚಾರಿತ್ರ

**ಲೋಕಾಕಾಶ** ೫೦೯-೨೯ನ ಧರ್ಮ, ಅಧರ್ಮ, ಪುದ್ಗಲ, ಜೀವ, ಮತ್ತು ಕಾಲ—ಇವು ಎಲ್ಲಿಯವರೆಗೆ ಇರುವವೋ ಅಲ್ಲಿಯವರೆಗಿನ ಆಕಾಶ

**ವ್ಯವಹಾರಕಾಲ** ೫೧೦-೨೮೦ ಕಾಲದ್ರವ್ಯದ ಘಳಿಗೆ ದಿನಸ ತಿಂಗಳು ಮುಂತಾದ ಪರ್ಯಾಯಗಳು

**ಶುಕ್ಲಧ್ಯಾನ** ೫೨೩–೩೪೪ ಶುಚಿತ್ವಸಮೇತವಾದದ್ದು ಶುಕ್ಲಧ್ಯಾನ, ಧರ್ಮಧ್ಯಾನ ವನ್ನು ಮುಗಿಸಿ ಮುಕ್ತಿಹೊಂದುವುದನ್ನು ಚಿಂತಿಸುವುದು. ಶುಕ್ಲಧ್ಯಾನವು ಸಾಕ್ಷಾತ್ತಾಗಿ ಮುಕ್ತಿಗೆ ಸಾಧನವಾಗುತ್ತದೆ

**ಷಟ್ತರ್ಕ** ೧೦–೪೬ ಬೌದ್ಧ, ನೈಯಾಯಿಕ, ಸಾಂಖ್ಯ, ಜೈನ, ವೈಶೇಷಿಕ, ಜೈಮಿನೀಯ

**ಷಡಾವಶ್ಯಕ** ೩೯–೧೬೬ ಸಾಮಾಯಿಕ, ತೀರ್ಥಂಕರಸ್ತವನ, ಪಂಚಪರಮೇಷ್ಠಿ ವಂದನ, ಪ್ರತಿಕ್ರಮಣ, ಪ್ರತ್ಯಾಖ್ಯಾನ, ಕಾಯೋತ್ಸರ್ಗ

**ಷಡ್ದ್ರವ್ಯ** ೧೩–೬೦ ಜೀವ, ಪುದ್ಗಲ, ಧರ್ಮ, ಅಧರ್ಮ, ಆಕಾಶ, ಕಾಲ

**ಷೋಡಶಭಾವನೆ** ೫೪೦–೪೩೮ ದರ್ಶನವಿಶುದ್ಧಿ, ವಿನಯ ಸಂಪನ್ನತೆ, ಶೀಲವ್ರತೇಷ್ವನತಿಚಾರ, ಅಭೀಕ್ಷ್ಣ್ಣಜ್ಞಾನೋಪಯೋಗ, ಸಂವೇಗ, ಶಕ್ತಿತಸ್ತ್ಯಾಗ, ಶಕ್ತಿತಸ್ತಪ, ಸಾಧುಸಮಾಧಿ, ವೈಯಾವೃತ್ಯಕರಣ, ಅರ್ಹದ್ಭಕ್ತಿ, ಆಚಾರ್ಯ ಭಕ್ತಿ, ಬಹುಶ್ರುತ ಭಕ್ತಿ, ಪ್ರವಚನ ಭಕ್ತಿ, ಆವಶ್ಯಕಾಪರಿಹಾಣಿ, ಮಾರ್ಗಪ್ರಭಾವನೆ, ಪ್ರವಚನ ವತ್ಸಲತ್ವ

**ಷೋಡಶ ಶುಭಸ್ವಪ್ನ** ೧೩೮–೧೪೧೭ ಬಿಳಿಯಾನೆ, ಬಿಳಿ ಎತ್ತು, ಸಿಂಹ, ಲಕ್ಷ್ಮಿ, ಹೂವಿನಹಾರ, ಚಂದ್ರ, ಬಾಲಸೂರ್ಯ, ಎರಡು ಎಳೆಯ ಮೀನುಗಳು, ಜೋಡಿ ರತ್ನಕುಂಭಗಳು, ತಾವರೆಗೊಳ, ಸಮುದ್ರ, ಸಿಂಹಾಸನ, ದೇವನಿಲಯ, ನಾಗ ನಿಲಯ, ರತ್ನಸಮೂಹ, ಉರಿಯುವ ಅಗ್ನಿಜ್ವಾಲೆ

**ಸಕಾಮ ನಿರ್ಜರೆ** ೫೧೩–೨೫೭ ಕರ್ಮ ತಕ್ಕಕಾಲ ಬಂದಾಗ ಪರಿಪಕ್ವವಾಗಿ ಅನು ಭವಿಸಿದ ಬಳಿಕ ತಾನಾಗಿಯೇ ಸಹಜವಾಗಿ ಕಳಚಿಬೀಳುತ್ತದೆ. ಹೀಗೆ ಕರ್ಮ ಸಹಜವಾಗಿ ಕಳಚಿಬೀಳುವುದಕ್ಕೆ ಸಕಾಮನಿರ್ಜರೆ ಎಂದು ಹೆಸರು

**ಸದಸದ್ವಾದ** ೪೫–೬೦ ಸತ್ ಮತ್ತು ಅಸತ್ ಇವುಗಳ ಚರ್ಚೆ

**ಸಪ್ತತಾಳ** ೨೦೭–೧೭ ಧ್ರುವ, ಮಠ್ಯ, ರೂಪಕ, ಝಂಪೆ, ತ್ರಿಪುಟ, ಅಟ್ಟ, ಏಕ

**ಸಪ್ತಧಾತು** ೧೦೩–೯೦ ರಸ, ರಕ್ತ, ಮಾಂಸ, ಮಜ್ಜ, ಅಸ್ಥಿ, ಮೇದಸ್ಸು ಮತ್ತು ವೀರ್ಯ

**ಸಪ್ತವ್ಯಸನ** ೯೧–೪೧ ಜೂಜು, ಕಳವು, ಬೇಟೆ, ಕಳ್ಳು, ಮಾಂಸ, ಕುತ್ಸಿತವೇಶ್ಯೆ, ಪರದಾರ

**ಸಪ್ತಸ್ವರ** ೨೦೭–೧೭ ಸ, ರಿ, ಗ, ಮ, ಪ, ದ, ನಿ

**ಸಮವಸರಣ** ೬೫–೮ ತೀರ್ಥಂಕರನು ಧರ್ಮೋಪದೇಶ ಮಾಡುವುದಕ್ಕಾಗಿ ಕುಬೇರನು ನಿರ್ಮಿಸಿದ ಮಂಟಪ

**ಸಮ್ಯಗ್ದೃಷ್ಟಿ** ೧೦೭–೧೦೪ವ ಜೀವಾದಿ ಸಪ್ತತತ್ತ್ವಗಳಲ್ಲಿ ನಿರ್ದಿಷ್ಟ ರೀತಿಯಿ
ನಂಬಿಕೆಯಿಡುವುದು

**ಸಾಗಾರಧರ್ಮ** ೫೧೪–೩೦೨ವ ಗೃಹಸ್ಥಧರ್ಮ

**ಸುಷಮದುಷ್ಷಮ** ೫೦೭–೨೬೯ ಅವಸರ್ಪಿಣಿಯ ಮೂರನೆಯ ಕಾಲವು. ಇದರ
ಮಿತಿ ಎರಡು ಕೋಟಾಕೋಟಿ ಸಾಗರೋಪಮ

**ಸುಷಮಸುಷಮ** ೫೦೭–೨೬೯ವ ಇದು ಅವಸರ್ಪಿಣಿಯ ಮೊದಲನೆಯ ಕಾಲ
ಇದು ನಾಲ್ಕು ಕೋಟಾಕೋಟಿ ಸಾಗರ ಪರಿಮಿತಿ ವರ್ಷದಷ್ಟು ಇರುತ್ತದೆ

**ಸ್ವಸಂವೇದನ ಜ್ಞಾನ** ೯೭–೬೬ವ ಆತ್ಮಜ್ಞಾನ

**ಸ್ಯಾದ್ವಾದ** ೬–೧೯ ಅನೇಕಾಂತಮಯವಾದ ವಸ್ತುವನ್ನು ಕಥನಾತ್ಮಕ ರೀತಿಯ
ವರ್ಣಿಸುವ ಪದ್ಧತಿಗೆ ಸ್ಯಾದ್ವಾದವೆಂದು ಹೆಸರು

